# ಅಭಿವಂದನೆ

**ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳಿಗೆ**
ಅವರ ಮಿತ್ರರೂ ಶಿಷ್ಯರೂ ಒಪ್ಪಿಸಿದ
ಪ್ರಬಂಧಗಳ ಸಂಪುಟ

**ಶ್ರೀ ಎ. ಆರ್. ಕೃ. ಸಂಭಾವನಾಗ್ರಂಥ ಪ್ರಕಟನ ಸಮಿತಿ**
**ಕೃಷ್ಣರಾಜವನಂ, ಮೈಸೂರು**

# ಅರಿಕೆ

ಅರ್ಧಶತಮಾನದ ಹಿಂದೆ ಕನ್ನಡ ತಲೆಯೆತ್ತುವ ಬಗೆ ಹೇಗೆ ಎಂಬ ಚಿಂತೆ ಕನ್ನಡಿಗರನ್ನು ಬಾಧಿಸುತ್ತಿತ್ತು. ಆ ಪರಿಸ್ಥಿತಿ ಕಳೆದು ಇಂದು ಕನ್ನಡನುಡಿ ಸ್ವಲ್ಪ ಮಟ್ಟಿಗಾದರೂ ಪ್ರಬುದ್ಧವಾಗಿದ್ದರೆ, ಅದಕ್ಕಾಗಿ ಅವಿಶ್ರಾಂತವಾಗಿ ಶ್ರಮಿಸಿದ ಮಹನೀಯರಲ್ಲಿ ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳು ಮುಖ್ಯರಾದವರು. ಅಂಥವರನ್ನು ಅಭಿವಂದಿಸುವುದು ಕನ್ನಡಿಗರ ಕರ್ತವ್ಯ. ಈ ಕರ್ತವ್ಯ ಇಷ್ಟು ತಡವಾದದ್ದು ಆಶ್ಚರ್ಯದ ಸಂಗತಿ. ಈಗ ಎರಡು ವರ್ಷಗಳ ಹಿಂದೆ ಶ್ರೀಮಾನ್ ಕೃಷ್ಣಶಾಸ್ತ್ರಿಗಳ ಶಿಷ್ಯರು ಮತ್ತು ಮಿತ್ರರು ಕೆಲವರು ಒಂದು ಸಮಿತಿಯನ್ನು ಏರ್ಪಡಿಸಿಕೊಂಡು ಈ ಕರ್ತವ್ಯ ನೆರವೇರಿಸಲು ನಿಶ್ಚಯಿಸಿದರು ಈ ಸಮಿತಿಗೆ ಶ್ರೀ ಜಿ. ಹನುಮಂತರಾಯರು ಅಧ್ಯಕ್ಷರಾಗಿಯೂ, ಶ್ರೀ. ಕೆ. ವಿ. ರಾಘವಾಚಾರ್ಯರು ಕೋಶಾಧಿಕಾರಿಗಳಾಗಿಯೂ, ಶ್ರೀ. ಎಚ್. ಎಂ. ಶಂಕರನಾರಾಯಣರಾಯರು ಕಾರ್ಯದರ್ಶಿಗಳಾಗಿಯೂ, ಪ್ರೊ. ಡಿ. ಎಲ್. ನರಸಿಂಹಾಚಾರ್, ಶ್ರೀ. ಎಸ್. ಅನಂತರಂಗಾಚಾರ್, ಶ್ರೀ. ಎಸ್. ವಿ. ಪರಮೇಶ್ವರಭಟ್ಟ-ಇವರು ಸದಸ್ಯರಾಗಿಯೂ ಇದ್ದುಕೊಂಡು ಗ್ರಂಥ ಪ್ರಕಟನೆಯ ಕಾರ್ಯವನ್ನು ನಿರ್ವಹಿಸಿದರು.

ಸಮಿತಿಯವರು ಶ್ರೀ. ಕೃಷ್ಣಶಾಸ್ತ್ರಿಗಳ ಶಿಷ್ಯರು ಮತ್ತು ಸ್ನೇಹಿತರನ್ನು ಸಂಭಾವನಾ ಗ್ರಂಥಕ್ಕೆ ಲೇಖನಗಳನ್ನು ಬರೆದುಕೊಟ್ಟು ಸಹಕರಿಸಬೇಕೆಂದು ಕೇಳಿಕೊಂಡರು. ಕೆಲವರು ಬಹು ಬೇಗ ಲೇಖನಗಳನ್ನು ಬರೆದು ಕಳುಹಿಸಿದರು. ಆದರೆ ನಾವು ನಿರೀಕ್ಷಿಸಿದ ಜನರಿಂದ ಲೇಖನಗಳು ಬರಲು ಕೆಲವು ಕಾಲ ಕಾಯಬೇಕಾಯಿತು. ಈ ದಾರಿಯಲ್ಲಿ ಒಂದು ವರ್ಷಕ್ಕಿಂತ ಹೆಚ್ಚಾಗಿ ಕಾದು ಜಾಗ್ರತೆಯಾಗಿ ಲೇಖನ ಬರೆದು ಕಳುಹಿಸಿದವರ ತಾಳ್ಮೆ ಮೀರುವಂತೆ ಮಾಡಿದ್ದಾಯಿತೇ ಹೊರತು ಸಮಿತಿಯ ನಿರೀಕ್ಷೆ ಪೂರ್ಣವಾಗಿ ಫಲಿಸಲಿಲ್ಲ ಈ ಗ್ರಂಥದ ಪ್ರಕಟನೆ ನಿಧಾನವಾದುದಕ್ಕೆ ಸಮಿತಿಯು ಈ ಉದ್ಯಮದಲ್ಲಿ ವಿಶ್ವಾಸ ತೋರಿಸಿದವರೆಲ್ಲರ ಕ್ಷಮೆ ಬೇಡುತ್ತದೆ.

ಸಮಿತಿಯ ಕರೆಯನ್ನು ಮನ್ನಿಸಿ ಶ್ರೀಮಾನ್ ಕೃಷ್ಣಶಾಸ್ತ್ರಿಗಳಲ್ಲಿ ಪ್ರೀತಿ ಗೌರವಗಳಿದ್ದವರನೇಕರು 'ಅಭಿವಂದನೆ' ಯ ಮುದ್ರಣದ ವೆಚ್ಚಕ್ಕಾಗಿ ಹತ್ತು ರೂಪಾಯಿಗಳಿಂದ ಹಿಡಿದು ಐವತ್ತು ರೂಪಾಯಿಗಳ ವರೆಗೆ ಚಂದಾಹಣವನ್ನು ಕಳುಹಿಸಿಕೊಟ್ಟಿರುತ್ತಾರೆ. ಘನ ಹೊಂದಿದ ಮೈಸೂರಿನ ರಾಜಪ್ರಮುಖರೂ ಮೈಸೂರು ವಿಶ್ವವಿದ್ಯಾನಿಲಯದವರೂ ಈ ಉದ್ಯಮಕ್ಕೆ ಉದಾರವಾದ ದ್ರವ್ಯಸಹಾಯವನ್ನು ದಯಪಾಲಿಸಿರುತ್ತಾರೆ. ಇವರೆಲ್ಲರಿಗೂ ಸಮಿತಿಯ ಕೃತಜ್ಞತಾಪೂರ್ವಕವಾದ ವಂದನೆಗಳು.

ಈ ಗ್ರಂಥವನ್ನು ಶ್ರದ್ಧೆವಹಿಸಿ ಅತ್ಯಂತ ಸುಂದರವಾಗಿ ಮುದ್ರಿಸಿಕೊಟ್ಟ ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸಿನ ಒಡೆಯರಾದ ಶ್ರೀಮಾನ್ ಜಿ. ಎಚ್. ರಾಮರಾಯರಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

ಶಾರದಾಮಂದಿರ<br>
ಕೃಷ್ಣರಾಜವನಂ, ಮೈಸೂರು<br>
೧೬-೯-೧೯೫೬

**ಎಚ್. ಎಂ. ಶಂಕರನಾರಾಯಣರಾವ್**<br>
ಕಾರ್ಯದರ್ಶಿ

## ವಿಷಯ ಸೂಚಿಕೆ

# ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳು

ಪ್ರೊಫೆಸರ್ ಎ. ಆರ್. ಕೃಷ್ಣಶಾಸ್ತ್ರಿಗಳ ಸಂಭಾವನಾಗ್ರಂಥ ಪ್ರಕಟನಾಸಮಿತಿ ಯವರು ಶ್ರೀಯುತರವರಿಗೆ ಅರ್ಪಿಸಲಿರುವ ಗ್ರಂಥಕ್ಕೆ ಒಂದು ಲೇಖನವನ್ನು ಕಳುಹಿಸಿ ಕೊಡಬೇಕೆಂದು ಹೇಳಿ ನನಗೆ ದೊಡ್ಡ ಮರ್ಯ್ಯಾದೆಯನ್ನು ಮಾಡಿದ್ದಾರೆ. ಹೀಗೆ ಕರೆದುದು ಸಮಿತಿಯವರ ಸೌಹಾರ್ದವನ್ನು ವ್ಯಕ್ತಗೊಳಿಸುತ್ತದೆಯೇ ಹೊರತು ನನ್ನಲ್ಲಿಯ ಯಾವ ವಿಶೇಷ ಗುಣಗಳನ್ನೂ ಸೂಚಿಸುವುದಿಲ್ಲ. ನನಗೆ ಕನ್ನಡ ಏನೂ ಬರದು. ಕನ್ನಡ ಸಾಹಿತ್ಯದಲ್ಲಿ ನಾನು ಏನನ್ನೂ ಬರೆದವನಲ್ಲ. ಆ ಸಾಹಿತ್ಯವನ್ನು ಕುರಿತು ಓದಿದವನೂ ಅಲ್ಲ. ಹೀಗಿರುವಲ್ಲಿ ಕನ್ನಡದಲ್ಲಿ ಬರೆಯುವುದಕ್ಕೆ ಅರ್ಹತೆ ಏನಿದೆ ಎಂಬ ಶಂಕೆ ನನ್ನ ಮನಸ್ಸಿನಲ್ಲಿ ಬರುತ್ತದೆ. ಆದರೆ ನಿಧಾನವಾಗಿ ಆಲೋಚನೆ ಮಾಡಿದರೆ ನನ್ನಲ್ಲಿ ಯಾವ ಅರ್ಹತೆಯಿಲ್ಲದಿದ್ದರೂ ಈ ದಾರಿಯಲ್ಲಿ ಒಂದೆರಡು "ಹಕ್ಕು" ಗಳನ್ನು ಸ್ಥಾಪಿಸಬಹುದೆನ್ನಿಸುತ್ತದೆ. ಮೊದಲನೆಯದಾಗಿ ನಾನು ೧೯೧೨–೧೫ ರಲ್ಲಿ ಮೈಸೂರು ಮಹಾರಾಜಾಕಾಲೇಜಿನಲ್ಲಿ ಹೈಸ್ಕೂಲ್ ಮತ್ತು ಕಾಲೇಜು ಭಾಗಗಳೆರಡೂ ಒಂದುಗೂಡಿದ್ದಾಗ ದಿ. ಕಾನಕಾನಹಳ್ಳಿ ವರದಾ ಚಾರ್ಯ್ಯರ ಶಿಷ್ಯನಾಗಿ, ಅವರ ಪಾಂಡಿತ್ಯ, ಹಾಸ್ಯಪ್ರಿಯತೆ ಮತ್ತು ಉತ್ಸಾಹಗಳಲ್ಲಿ ಸ್ವಲ್ಪವಾದರೂ ಭಾಗಿಯಾಗಿದ್ದುದು ಒಂದು ಹಕ್ಕು. ಎರಡನೆಯದಾಗಿ ಇದರ ಅನಂತರ ಸೆಂಟ್ರಲ್ ಕಾಲೇಜಿನಲ್ಲಿ ೧೯೧೫–೧೭ ರಲ್ಲಿ ಮದ್ರಾಸ್ ಯೂನಿವರ್ಸಿಟಿಯ ಇಂಟರ್ ಮೀಡಿಯೇಟ್ ತರಗತಿಗಳಲ್ಲಿ ಓದುತ್ತಿದ್ದಾಗ ಶ್ರೀ. ಎ. ಆರ್. ಕೃಷ್ಣಶಾಸ್ತ್ರಿಗಳವರಿಂದ ಕನ್ನಡವನ್ನು ಕಲಿತದ್ದು ಇನ್ನೊಂದು ದೊಡ್ಡ ಹಕ್ಕು.

ಇದಾದ ಮೇಲೆ ನನಗೂ ಕನ್ನಡಕ್ಕೂ ಸ್ವಲ್ಪ ದೂರವೇ ಆಯಿತು. ಆಗಿನ ಕಾಲದಲ್ಲಿ ಪರೀಕ್ಷೆಗಳಲ್ಲಿ ಕನ್ನಡದಲ್ಲಿ ನಂಬರು ಬರುವುದೇ ಕಷ್ಟವಾಗಿತ್ತು ಮತ್ತು ಪಾಸು ಮಾಡುವವರ ಸಂಖ್ಯೆಯೂ ಕಡಿಮೆಯೇ. ಆದ್ದರಿಂದ ಈ ಹೆಚ್ಚು ನಂಬರಿನ ಹುಚ್ಚು ವ್ಯಾಮೋಹದಿಂದ ಬಿ. ಎಸ್ಸಿ. ತರಗತಿಯಲ್ಲಿ ಕನ್ನಡವನ್ನು ಬಿಟ್ಟು ಫ್ರೆಂಚನ್ನು ಎರಡನೆಯ ಭಾಷೆಯನ್ನಾಗಿ ತೆಗೆದುಕೊಂಡಿದ್ದಾಯ್ತು. ಎಂ. ಎಸ್ಸಿ. ಪರೀಕ್ಷೆಗೆ ಓದುವಾಗ ಗಣಿತ ಮತ್ತು ವಿಜ್ಞಾನದಲ್ಲಿ ಹೆಚ್ಚಿನ ಜ್ಞಾನವನ್ನು ಸಂಪಾದಿಸುವುದಕ್ಕೋಸ್ಕರ ಜರ್ಮನ್ ಭಾಷೆಯನ್ನು ಅಲ್ಪಸ್ವಲ್ಪ ಅಭ್ಯಾಸಮಾಡಿದೆ ಅನಂತರ ವಿಶ್ವವಿದ್ಯಾಲಯದಲ್ಲಿ ಗಣಿತದ ಅಧ್ಯಾಪಕ ವರ್ಗಕ್ಕೆ ಸೇರಿದ ಮೇಲಂತೂ ಲೆಕ್ಚರ್ ಮಾಡುವುದೆಲ್ಲಾ ಇಂಗ್ಲೀಷಿನಲ್ಲೇ; ಅಲ್ಲದೆ ಮನೆಯಲ್ಲಿ ಮಾತನಾಡುವುದು· ಮರಾಠಿ ಬೇರೆ. ಹೀಗಾಗಿ ಕನ್ನಡದ ಸಂಪರ್ಕವು ಕಡಮೆಯಾಗಿ, ಆಧುನಿಕ ಕನ್ನಡ ಭಾಷೆಯ ಸರ್ವತೋಮುಖವಾದ ಪ್ರಗತಿಯಲ್ಲಿ ಭಾಗವಹಿಸುವ ಪುಣ್ಯ ನನಗೆ ಲಭಿಸದೇ

ಹೋಯಿತು. ಇಷ್ಟಾದರೂ ಕನ್ನಡವೆಂದರೆ ನನಗೆ ಬಹಳ ಪ್ರೀತಿ. ಕನ್ನಡ ಸಾಹಿತ್ಯ, ಓದು ಬರವಣಿಗೆಗಳಿಗೆ ಸಾಕಾದಷ್ಟು ಗಮನ ಕೊಡಲು ಅವಕಾಶವಿಲ್ಲದೆ ಅನೇಕ ವರ್ಷಗಳಾದ ಮೇಲೆಯೂ ಕೂಡ ಕನ್ನಡದ ಮೇಲೆ ಈ ವಾತ್ಸಲ್ಯ ಮತ್ತು ಗೌರವ ಗಳಿನ್ನೂ ಇರುವುದಕ್ಕೆ ಶ್ರೀ. ಕೃಷ್ಣಶಾಸ್ತ್ರಿಗಳಂಥ ಸದ್ಗುರುಗಳ ಶಿಷ್ಯನಾಗಿದ್ದುದೇ ಮುಖ್ಯ ಕಾರಣವೆಂದರೆ ಅತಿಶಯೋಕ್ತಿಯಾಗಲಾರದು.

ಶ್ರೀ. ಶಾಸ್ತ್ರಿಗಳವರು ಬಹಳ ಸರಳ ಸ್ವಭಾವದವರು. ಅವರ ಮುಖವರ್ಚಸ್ಸಿನಲ್ಲಿಯೇ ನಯ, ವಿನಯ, ಸಹನೆ ಮತ್ತು ಶಿಷ್ಟಾಚಾರವರ್ತನೆ ಈ ಸದ್ಗುಣಗಳೆಲ್ಲಾ ಪ್ರತಿಬಿಂಬಿತವಾಗಿವೆ. ಅವರು ಪಾಠ ಹೇಳಿಕೊಡುವ ರೀತಿಯಲ್ಲಿ ಕೂಡ ಈ ಸರಳತೆ ಮತ್ತು ಗಾಂಭೀರ್ಯಗಳು ಕೂಡಿರುತ್ತವೆ. ನಾನು ಸೆಂಟ್ರಲ್ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗ ಸುಪ್ರಸಿದ್ಧರಾದ ದಿ. ಜೆ. ಜಿ. ಟೇಟ್‌ರವರು ಪ್ರಿನ್ಸಿಪಾಲರಾಗಿದ್ದರು. ಅವರಿಂದ ಇಂಗ್ಲಿಷ್ ಪಾಠವನ್ನು ಕಲಿಯುವ ಸುಯೋಗವು ನನಗೆ ಲಭಿಸಿತ್ತು. ಇಂಗ್ಲಿಷ್ ಭಾಷೆಯ ಬರೆವಣಿಗೆಯಲ್ಲಿ ಸರಳವಾದ ಮತ್ತು ಸುಲಭವಾಗಿ ಅರ್ಥವಾಗುವ ಶೈಲಿಯ ಪ್ರಾಮುಖ್ಯತೆಯನ್ನು ಒತ್ತಿ ಒತ್ತಿ ಹೇಳುವುದು ಅವರ ಘನತೆಯಾಗಿತ್ತು. ಇದೇ ರೀತಿಯಲ್ಲಿ ಕನ್ನಡಪಾಠ ಹೇಳುವುದರಲ್ಲಿ ಶ್ರೀ. ಕೃಷ್ಣಶಾಸ್ತ್ರಿಗಳವರು ಪ್ರಿ. ಟೇಟ್‌ರಂತೆಯೇ ಉದಾತ್ತ ಭಾವಗಳನ್ನು ಸರಳವಾದ ಭಾಷೆ ಮತ್ತು ಸರಳವಾದ ಶೈಲಿಯಲ್ಲಿ ತಿಳಿಸಬೇಕೆಂದು ವಿದ್ಯಾರ್ಥಿಗಳಿಗೆ ಬೋಧಿಸುತ್ತಿದ್ದರು. ಒಂದು ಸಲ, ನನಗೆ ಚೆನ್ನಾಗಿ ಜ್ಞಾಪಕವಿದೆ, ನಮ್ಮ ಗದ್ಯಭಾಗದ ಪಠ್ಯಪುಸ್ತಕವಾದ ವೆಂಕಟಾಚಾರ್ಯರ 'ವಿಷವೃಕ್ಷ'ದ ಯಾವುದೋ ವಿಷಯವಾಗಿ ಒಂದು ಉಪನ್ಯಾಸವನ್ನು ಬರೆಯುವುದಕ್ಕೆ ಶ್ರೀ. ಶಾಸ್ತ್ರಿಗಳವರು ಕ್ಲಾಸಿಗೆ ನೇಮಿಸಿದ್ದರು. ಹುಡುಗತನದ ಉತ್ಸಾಹದಿಂದ ಕೂಡಿ ಭಾರೀ ಉಪನ್ಯಾಸವನ್ನೇ ರಚಿಸಬೇಕೆಂದು ನನಗೆ ತಿಳಿದ ದೊಡ್ಡ ದೊಡ್ಡ ಕನ್ನಡ ಮತ್ತು ಸಂಸ್ಕೃತ ಶಬ್ದಗಳನ್ನು ಉಪಯೋಗಿಸಿ ಆರಂಭದಲ್ಲಿಯೇ "ಕೋಟ್ಯನುಕೋಟಿ ನಕ್ಷತ್ರಗಳಿಂದ ಖಚಿತವಾದ ಅನಂತವಾದ ಅಪಾರವಾದ ಮತ್ತು ಅಮಿತ ಸಂಖ್ಯೆಯ ಜ್ಯೋತಿರ್ವತ್ಸರಗಳಾಚೆ ಇರುವ ತಾರೆ ನೀಹಾರಿಕೆಗಳಿಂದ ಕೂಡಿದ ಈ ವಿಶ್ವಜಗತ್ತಿನಲ್ಲಿನ ಸ್ವಪ್ನಸುಂದರ ಧ್ಯೇಯಗಳ ಸಮ್ಮೋಹಿನೀ ಶಕ್ತಿಯನ್ನೂ ಮತ್ತು ಕಠೋರವಾಸ್ತವ ಜಗತ್ತಿನ ನಿಷ್ಕರುಣನಿಯಮಗಳನ್ನೂ ನೋಡಿದರೆ, ಈ ವಿಶ್ವವೇ ಒಂದು ಅಪ್ರತಿಮ ಸೌಂದರ್ಯದ ಮತ್ತು ವಿಚಿತ್ರತೆಯ ಒಂದು ಅಗಾಧವಾದ ನಾಟಕ ರಂಗವೆಂದು ಹೇಳಬಹುದು ..." ಎನ್ನುವ ರೀತಿಯಲ್ಲಿ ಬರೆದಿದ್ದೆ. ಶ್ರೀ. ಶಾಸ್ತ್ರಿಗಳವರು ಉಪನ್ಯಾಸವನ್ನು ಓದಿ "ಬಹಳ ಚೆನ್ನಾಗಿದೆ. ಶೈಲಿ ಸ್ಫೂರ್ತಿಯುತವಾಗಿದೆ. ಆದರೆ ಶಬ್ದಗಳೇ ಹೆಚ್ಚು, ಅರ್ಥಕಡಮೆ. ಇದೇ ಭಾವಗಳನ್ನು ಸುಲಭ ಶೈಲಿಯಲ್ಲಿ ಹೇಳಬಹುದಾಗಿತ್ತು ಮತ್ತು ಮುಖ್ಯವಾಗಿ, ಚೆನ್ನಾಗಿ ತಿಳಿಯದ ವಿಷಯವಾಗಿ ಏನನ್ನೂ ಬರೆಯಬಾರದು" ಅಂದರು. ನಂಬರೇನೋ ಹೆಚ್ಚಾಗಿಯೇ ಕೊಟ್ಟಿದ್ದರು; ಆದರೆ ಅವರು ಹೇಳಿದ "ತಿಳಿಯದೇ ಇದ್ದ ವಿಷಯದಲ್ಲಿ ಏನೂ ಬರೆಯ ಬಾರದು" ಎನ್ನುವ

ವಾಕ್ಯ ಇನ್ನೂ ಮನಸ್ಸಿನಲ್ಲಿ ಚೆನ್ನಾಗಿ ನಟ್ಟಿದೆ. ಅವರು ಪಾಠ ಹೇಳುವುದರಲ್ಲಿ ಈ ಸರಳತೆಯ ವಿಷಯವೊಂದೇ ಮುಖ್ಯವಾದುದಲ್ಲ. ಅವರ ಶ್ರದ್ಧೆ ಮತ್ತು ಉತ್ಸಾಹಗಳೂ ಚಿರಸ್ಮರಣೀಯವಾದವುಗಳು. ಆ ಕಾಲದಲ್ಲಿ ಕನ್ನಡಕ್ಕೆ ಒಬ್ಬ 'ಮುನಿಷಿ' ಹೊರತು ಇಂಗ್ಲಿಷ್ ತಿಳಿದ ಮಹೋಪಾಧ್ಯಾಯರನ್ನು ನಿಯಮಿಸುವುದೆಂದರೆ ಬಹಳ ಅಪರೂಪವಾಗಿತ್ತು. ಈ ತರಹದ ಇಂಗ್ಲಿಷ್, ಕನ್ನಡ ಮತ್ತು ಸಂಸ್ಕೃತ ಈ ಮೂರು ಭಾಷೆಗಳಲ್ಲೂ ಪಾಂಡಿತ್ಯವುಳ್ಳ ನಮ್ಮ ವಿಶ್ವವಿದ್ಯಾಲಯದ ಮೊದಮೊದಲನೆಯ ಅಧ್ಯಾಪಕರ ಶ್ರೇಣಿಯಲ್ಲಿ ಶ್ರೀ. ಶಾಸ್ತ್ರಿಗಳು ಅಗ್ರಗಣ್ಯಸ್ಥಾನವನ್ನು ಪಡೆದವರು. ಅವರು ಮತ್ತು ದಿ. ಶ್ರೀ. ಟಿ. ಎಸ್. ವೆಂಕಣ್ಣಯ್ಯನವರು ಹಾಕಿದ ಅಸ್ತಿಭಾರದಿಂದಲೂ, ಕನ್ನಡ ಪಾಠಪ್ರವಚನಗಳ ವಿಷಯದಲ್ಲಿ ಅವರು ತೋರಿಸಿಕೊಟ್ಟ ದಾರಿಯಿಂದಲೂ, ಮತ್ತು ಅವರು ತಮ್ಮ ಅನೇಕ ಶಿಷ್ಯರಿಗೆ ಕೊಟ್ಟ ಸಹಾಯ ಮತ್ತು ಉತ್ತೇಜನದಿಂದಲೂ, ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಉನ್ನತಸ್ಥಿತಿಗೆ ಬಂದಿದೆಯೆಂದರೆ ಅತಿಶಯೋಕ್ತಿಯಾಗಲಾರದು.

ಎಲ್ಲಕ್ಕಿಂತಲೂ ಹೆಚ್ಚಾಗಿ ಶ್ರೀ. ಕೃಷ್ಣಶಾಸ್ತ್ರಿಗಳು ಕನ್ನಡಕ್ಕೆ ಮಾಡಿರುವ ಸೇವೆಯೆಂದರೆ 'ಪ್ರಬುದ್ಧ ಕರ್ಣಾಟಕ'ವನ್ನು ಸ್ಥಾಪಿಸಿ ಅವನ್ನು ಬೆಳಸಿಕೊಂಡು ಬಂದುದು. ಕನ್ನಡದ ಪ್ರಗತಿಯಲ್ಲಿ ಪ್ರಬುದ್ಧ ಕರ್ಣಾಟಕದ ಪಾತ್ರವೇನು, ಅದರಿಂದ ಆದ ಉಪಕಾರವೇನು ಎನ್ನುವ ವಿಷಯಗಳನ್ನು ಚರ್ಚಿಸುವುದಕ್ಕೆ ಇದು ಸಂದರ್ಭವಲ್ಲ; ಮತ್ತು ತಕ್ಕ ಸಂದರ್ಭವಾದರೂ ಅದನ್ನು ವಿಮರ್ಶಿಸುವುದಕ್ಕೆ ನನಗೆ ಯೋಗ್ಯತೆಯೂ ಇಲ್ಲ. ಆದರೆ ನಮ್ಮ ಕಾಲದಲ್ಲಿ, ನಾವು ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಗಳಾಗಿದ್ದಾಗ ಈ ಪತ್ರಿಕೆ ಸ್ಥಾಪಿತವಾದುದು ನಮ್ಮೆಲ್ಲರಿಗೂ ಬಹಳ ಹೆಮ್ಮೆ. ಕರ್ಣಾಟಕ ಸಂಘವೂ, 'ಪ್ರಬುದ್ಧ ಕರ್ಣಾಟಕ'ವೂ ಹುಟ್ಟಿದ್ದು ಸೆಂಟ್ರಲ್ ಕಾಲೇಜಿನಲ್ಲಿ, ಬೆಳೆದದ್ದೂ ಅಲ್ಲಿಯೇ. ಸೆಂಟ್ರಲ್ ಕಾಲೇಜು ತನ್ನ ೮೦-೯೦ ವರ್ಷಗಳ ಇತಿಹಾಸದಲ್ಲಿ ಗಣಿತ ಮತ್ತು ಇತರ ವಿಜ್ಞಾನ ಶಾಸ್ತ್ರಗಳಲ್ಲಿ ಅನೇಕ ಸಂಶೋಧನೆಗಳನ್ನು ನಡಸಿದೆ; ಮತ್ತು ಭಾರತೀಯ ವಿಜ್ಞಾನ ಪ್ರಗತಿಯಲ್ಲಿ ತಕ್ಕ ಪಾತ್ರವನ್ನೂ ವಹಿಸಿದೆ. ಆದರೆ ಈ ಎಲ್ಲ ಸಂಶೋಧನೆಗಳಿಗಿಂತ ಹೆಚ್ಚು ಪ್ರಾಶಸ್ತ್ಯವನ್ನು 'ಪ್ರಬುದ್ಧ ಕರ್ಣಾಟಕ' ಪಡೆದಿದೆಯೆಂದು ಧಾರಾಳವಾಗಿ ಹೇಳಬಹುದು.

'ಪ್ರಬುದ್ಧ ಕರ್ಣಾಟಕ'ದ ಮೊಟ್ಟ ಮೊದಲನೆಯ ಸಂಚಿಕೆಯಲ್ಲಿ ಶ್ರೀ. ಕೃಷ್ಣಶಾಸ್ತ್ರಿಗಳು "ನಮ್ಮ ಹತ್ತಿರ ಬೆಳ್ಳಿಯಿಲ್ಲ, ಬಂಗಾರವಿಲ್ಲ .. ..ಆದರೆ ಮಾಡತಕ್ಕ ಕೆಲಸಗಳನ್ನು ನಾವು ದೃಢದಿಂದಲೂ, ನಿರ್ವಂಚನೆಯಿಂದಲೂ ಮಾಡಿದರೆ ಸರಸ್ವತಿಯೂ ಲಕ್ಷ್ಮಿಯೂ ತಾವಾಗಿ ಸಹಾಯಕ್ಕೆ ಬಂದು ನಿಲ್ಲುವರೆಂದು ನಮಗೆ ಧೈರ್ಯವಿದೆ" ಎಂದು ಬರೆದಿದ್ದರು. ಈ ವಾಕ್ಯವು ಶ್ರೀ. ಶಾಸ್ತ್ರಿಗಳವರ ವೈಯಕ್ತಿಕ ಗುಣಕ್ಕೆ ಬಹಳ ಚೆನ್ನಾಗಿ ಅನ್ವಯಿಸುತ್ತದೆ. ಅವರಲ್ಲಿ ಬೆಳ್ಳಿಯೂ ಇರಲಿಲ್ಲ, ಬಂಗಾರವೂ ಬರಲಿಲ್ಲ. ವಿಶ್ವವಿದ್ಯಾಲಯದ ಅಧ್ಯಾಪಕ ವೃತ್ತಿಯಲ್ಲಿದ್ದಾಗ ಅವರಿಗೆ ತಕ್ಕ

ಪುರಸ್ಕಾರಗಳು ದೊರೆಯಲಿಲ್ಲವೆಂದು ಈಗಲೂ ಅವರ ಅನೇಕ ಮಿತ್ರರು ಖಚಿತವಾಗಿ ನಂಬುತ್ತಾರೆ. ಆದರೂ ಶ್ರೀ. ಶಾಸ್ತ್ರಿಗಳವರ ಉತ್ಸಾಹವೂ, ಕಾರ್ಯನಿಷ್ಠೆಯೂ ಸ್ವಲ್ಪವೂ ಕುಂದಲಿಲ್ಲ. ದೃಢದಿಂದಲೂ ನಿರ್ವಂಚನೆಯಿಂದಲೂ ತಮ್ಮ ಕರ್ತವ್ಯ ವನ್ನು ಅವರು ನಿರ್ವಹಿಸಿದರು; ಮತ್ತು ಅವರ ಧೈರ್ಯಕ್ಕೆ ತಕ್ಕಂತೆ ಸರಸ್ವತಿಯೂ ಲಕ್ಷ್ಮಿಯೂ ಒಲಿದೇ ಇದ್ದಾರೆ. 'ಪ್ರಬುದ್ಧ ಕರ್ಣಾಟಕ' ಸಲ್ಲಿಸಿರುವ ಸೇವೆಯಿಂದುಂ ಟಾದ ಕನ್ನಡದ ಪ್ರಗತಿಯೇ ಅವರಿಗೊಲಿದ ಸರಸ್ವತಿ. ಆದರೆ ಒಲಿದ ಲಕ್ಷ್ಮಿ ಯಾರು ? ಬೆಳ್ಳಿಯಲ್ಲ; ಬಂಗಾರವಲ್ಲ. ನನ್ನ ಹಾಗೆ ಅನೇಕ ಶಿಷ್ಯರು ನೇರಿ ಪ್ರಕಟನಾಸಮಿತಿಯ ಮೂಲಕ ಶ್ರೀ. ಕೃಷ್ಣಶಾಸ್ತ್ರಿಗಳಿಗೆ ಪ್ರೀತಿಯಿಂದ ಅರ್ಪಿಸುವ ಈ ಸಂಭಾವನಾ ಗ್ರಂಥವೇ ಅವರಿಗೊಲಿದ ಲಕ್ಷ್ಮಿ.

ಬಿ. ಎಸ್. ಮಾಧವರಾವ್

# ಗುರುವರ್ಯ ಶ್ರೀ ಕೃಷ್ಣಶಾಸ್ತ್ರಿಗಳು

'ವಚನ ಭಾರತ'ದ ಶ್ರೀ. ಕೃಷ್ಣಶಾಸ್ತ್ರಿಗಳು ಮೈಸೂರು ಸಂಸ್ಕೃತ ಮಹಾಪಾಠ ಶಾಲೆಯಲ್ಲಿ ಪ್ರಾಧ್ಯಾಪಕರಾಗಿದ್ದ ವ್ಯಾಕರಣ ಮಹಾವಿದ್ವಾನ್ ರಾಮಕೃಷ್ಣಶಾಸ್ತ್ರಿಗಳ ಹಿರಿಯ ಮಕ್ಕಳು. ಅವರು ಚಿಕ್ಕಂದಿನಲ್ಲಿಯೇ ತಾಯಿಯನ್ನು ಕಳೆದುಕೊಂಡು ಸಂಸಾರದ ಕಷ್ಟನಿಷ್ಠುರಗಳಿಗೆ ಸಿಕ್ಕಿದರು. ಆದರೆ ತಂದೆಯವರ ಪಾದದಡಿಯಲ್ಲಿಯೂ, ಸಂಸ್ಕೃತ ಮಹಾಪಾಠಶಾಲೆಯಲ್ಲಿಯೂ ಸಂಸ್ಕೃತವನ್ನು ಅಭ್ಯಾಸಮಾಡಿ 'ರಾಜಾ ಸ್ಕೂಲು', 'ವೆಸ್ಲಿಯನ್ ಹೈಸ್ಕೂಲು'ಮತ್ತು 'ಮಹಾರಾಜಾಕಾಲೇಜು'ಗಳಲ್ಲಿ ಕನ್ನಡ ಇಂಗ್ಲಿಷ್ ಶಿಕ್ಷಣವನ್ನು ಪಡೆದು ಬಿ. ಎ. ಪರೀಕ್ಷೆಯಲ್ಲಿ ಪ್ರಥಮ ತರಗತಿಯಲ್ಲಿ ಉತ್ತೀರ್ಣರಾದರು. ಅವರ ಪಾಂಡಿತ್ಯವೂ ಬುದ್ಧಿಶಕ್ತಿಯೂ ಆಗಲೇ ಪ್ರಕಾಶಕ್ಕೆ ಬಂದಿದ್ದುವು. ಎಂ. ಸಿ. ಎಸ್. ಪರೀಕ್ಷೆಗೆ ಸ್ಪರ್ಧಿಸಿ ಆ ಹುದ್ದೆಗೆ ಆಯ್ಕೆ ತಪ್ಪಿ, ಕನ್ನಡ ಕೆಲಸಕ್ಕೆ ಅವರು ಉಳಿಯುವಂತಾಯಿತು.

ಒಳ್ಳೆಯ ವೈದಿಕ ಕುಲದಲ್ಲಿ ಹುಟ್ಟಿ, ವೈದಿಕ ವಿದ್ಯೆಯಲ್ಲಿ ಪೂರ್ಣ ವಿಶ್ವಾಸ ಅಭಿರುಚಿ ಇದ್ದರೂ, ಪಾಶ್ಚಾತ್ಯ ವಿದ್ಯೆ, ಶಾಸ್ತ್ರದೃಷ್ಟಿ ಮತ್ತು ಹೊಸ ಪರಿಶೋಧನೆಗಳಿಂದ ಆ ರಾಷ್ಟ್ರಗಳು ಪಡೆದಿದ್ದ ಮುನ್ನಡೆ ಇವು ಅವರ ಮನವನ್ನು ಆಕರ್ಷಿಸಿದ್ದುವು. ಹೈಸ್ಕೂಲಿನಲ್ಲಿದ್ದಾಗ ವಿಜ್ಞಾನ ಮತ್ತು ಗಣಿತ ಪಾಠಗಳಲ್ಲಿ ಉಚ್ಚಸ್ಥಾನವನ್ನು ಗಳಿಸಿದ್ದರೂ ಸೆಂಟ್ರಲ್ ಕಾಲೇಜಿಗೆ ಸೇರಲು ಅನುಕೂಲ ಸಾಲದೆ, ಮಹಾರಾಜಾ ಕಾಲೇಜಿನಲ್ಲಿ ಭಾಷೆ ಮತ್ತು ಚರಿತ್ರೆಯ ವ್ಯಾಸಂಗಕ್ಕೆ ಅವರು ಸೇರಬೇಕಾಯಿತು. ಆದರೂ ಆ ಶಾಸ್ತ್ರ ಪ್ರೇಮ ಅವರಲ್ಲಿ ಇದ್ದೇ ಇತ್ತು; ಅವುಗಳ ಸ್ಥೂಲ ಪರಿಚಯವನ್ನು ಮಾಡಿಕೊಳ್ಳುತ್ತಲೇ ಇದ್ದರು. ನಿತ್ಯವೂ ನಾಲ್ಕಾರು ಗಂಟೆಗಳ ಕಾಲ ವಿದ್ಯಾರ್ಜನೆಗೆ ಮೀಸಲಾಗಿದ್ದರೂ, ಇತರ ವಿಷಯಗಳಲ್ಲಿ ಅವರಿಗೆ ಅಸಡ್ಡೆ ಇರಲಿಲ್ಲ. ಚಾಮುಂಡಿ ಬೆಟ್ಟವನ್ನು ಅರ್ಧ ಘಂಟೆಯಲ್ಲಿ ಹತ್ತಿ ಇಳಿಯುವುದು ಕಾಲೇಜಿನಲ್ಲಿದ್ದಾಗ ಇವರ ಒಂದು ನಿಯತ ಕೆಲಸವಾಗಿತ್ತು. ನಾಲ್ಕಾರು ವರ್ಷಕಾಲ ಗರಡಿ ಸಾಮುಮಾಡಿ ಒಳ್ಳೆಯ ದೇಹಕಟ್ಟನ್ನೂ, ದೇಹದಾರ್ಢ್ಯವನ್ನೂ ಪಡೆದು ಕುಸ್ತಿಮಾಡುವುದರಲ್ಲಿ ನಿಷ್ಣಾತರಾಗಿದ್ದರು. ಭೀಮನ ಇನ್ನೊಂದು ಕೌಶಲವನ್ನೂ–ಅಡುಗೆ ಮಾಡುವುದು–ಇವರು ಬಲ್ಲರು. ಚಿಕ್ಕಂದಿನಲ್ಲಿ ಇವರು ಮಾಡಿದ್ದ ಷರಬತ್ತಿನ ರುಚಿಯನ್ನು ನಾನು ಇನ್ನೂ ಮರೆತಿಲ್ಲ. ಸಂಗೀತದಲ್ಲಿಯೂ, ಕಲೆಯಲ್ಲಿಯೂ ಇವರಿಗೆ ವಿಶೇಷ ಅಭಿರುಚಿ. ಶೇಷಣ್ಣನವರ ವೀಣೆಯೂ, ಕೃಷ್ಣಪ್ಪನವರ ದೇವರ ನಾಮಗಳೂ ಇವರ ರಾಗಭಾವ ಜ್ಞಾನವನ್ನು ಸುಸಂಸ್ಕರಿಸಿದ್ದುವು. ಅರಮನೆಯ ವಾತಾವರಣದಲ್ಲಿ ಬೆಳೆದಿದ್ದರಿಂದಲೋ ಏನೋ ನಾಟ್ಯಕಲೆ, ಚಿತ್ರಕಲೆಗಳ ಪರಿಚಯಕ್ಕೂ ಅವಕಾಶ ದೊರೆಯಿತು.

ಇವರ ಜ್ಞಾನ, ವಿಮರ್ಶನ ಶಕ್ತಿ ಸ್ನೇಹಿತರ ಮೆಚ್ಚುಗೆಯನ್ನು ಪಡೆದುವು. ಇದಕ್ಕೂ ಹೆಚ್ಚಾಗಿ ಇವರ ಚುರುಕು ಹಾಸ್ಯ, ಹರಿತವಾದ ಮಾತುಗಳು ಗೆಳೆಯರನ್ನು ಮುಗ್ಧರನ್ನಾಗಿ ಮಾಡಿದ್ದುವು. ಇವರಿದ್ದ ಕಡೆ ನಗೆಗಡಲು. ಶಾಸ್ತ್ರಿಗಳ ಇತ್ತೀಚಿನ ಪರಿಚಯ ಮಾತ್ರ ಇರುವವರಿಗೆ ಇದನ್ನು ನಂಬುವುದೂ ಕಷ್ಟ.

ವಿದ್ಯಾರ್ಥಿ ದೆಸೆಯಲ್ಲಿದ್ದಾಗ ಶಾಸ್ತ್ರಿಗಳಿಗೆ ಕನ್ನಡ ಕೆಲಸ ತಮ್ಮ ಜೀವನದ ಕೆಲಸವೆಂಬ ಅರಿವು ಇದ್ದಂತಿಲ್ಲ. ಅಧ್ಯಾಪಕ ವೃತ್ತಿಯನ್ನು ಅವಲಂಬಿಸುವ ಅರಿವಾಗಲಿ ಇದ್ದಂತಿಲ್ಲ. ಆದರೂ ಈ ವೃತ್ತಿಗೆ ಅನುಗುಣವಾದ ವ್ಯವಸಾಯವಾಗಿತ್ತು. ಅರ್ಹತೆ ವಿಶೇಷವಾಗಿತ್ತು. ಈ ಕೆಲಸ ದೊಡ್ಡ ಕೆಲಸ, ಜವಾಬ್ದಾರಿಯ ಕೆಲಸ, ಅಗತ್ಯ ಕೆಲಸ ಎಂದು ಇದಕ್ಕೆ ಕಾಲಿಟ್ಟೊಡನೆಯೇ ಇವರು ಮನಗಂಡರು. ವಿದ್ಯಾತುರತೆ, ಜ್ಞಾನದಾಹ ಇವರಿಗೆ ರಕ್ತಗತವಾಗಿ ಬಂದಿತ್ತು. ಓದಬೇಕಾದ್ದು ಬಹಳವಿದೆ, ತಿಳಿಯಬೇಕಾದ್ದು ಅಮಿತ, ತಕ್ಕ ವ್ಯವಸಾಯ ಮಾಡದಿರುವುದು ತಮ್ಮ ಹುದ್ದೆಗೆ ಅಗೌರವ, ತಮ್ಮ ಶಿಷ್ಯರಿಗೆ ವಂಚನೆಮಾಡಿದಂತೆ ಎಂದು ಕ್ಷಣಾರ್ಧವನ್ನೂ ವ್ಯರ್ಥ ಮಾಡವೆ ಸಂಸ್ಕೃತ ಕನ್ನಡ ವಾಙ್ಮಯಗಳ ಅಪಾರ ಗ್ರಂಥರಾಶಿಯನ್ನೆಲ್ಲಾ ತಮ್ಮದನ್ನಾಗಿ ಮಾಡಿಕೊಂಡು, ವಿಚಾರಮಾಡಿ, ವಿಮರ್ಶೆ ಮಾಡಿ ಸಾಹಿತ್ಯ ಕ್ಷೇತ್ರದಲ್ಲಿ ಒಂದು ವಿಶೇಷವಾದ ಗೌರವಯುತ ಸ್ಥಾನವನ್ನು ಇವರು ಗಳಿಸಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ಯಾವ ಸಮಸ್ಯೆ ತಲೆದೋರಿದರೂ ಶಾಸ್ತ್ರಿಗಳ ಅಭಿಪ್ರಾಯ ಪಡೆಯದೆ ತೀರ್ಮಾನಿಸುವುದು ಕಾರ್ಯಲೋಪವೆಂಬುದು ತಿಳಿದವರ ಅಭಿಪ್ರಾಯವಾಗಿದೆ. ಇವರ ಪಾಂಡಿತ್ಯಪ್ರಭೆ ಸಂಸ್ಥಾನಕ್ಕೇ ಕೀರ್ತಿಯನ್ನು ತಂದಿದೆ. ಇವರ ಜೀವನ ಕ್ರಮವೂ ಇಷ್ಟೇ ಮಾದರಿಯಾದುದು. ಇವರ ಆಚರಣೆಯಲ್ಲಾಗಲಿ, ಕೆಲಸದಲ್ಲಾಗಲಿ, ಮಾತಿನಲ್ಲಾಗಲಿ, ಕೀಳೆಂಬುದನ್ನು ಕಂಡವರಿಲ್ಲ. ಕೆಲವರು ಆಪ್ತರಾಗಿರಬಹುದು, ಕೆಲವರು ಇಲ್ಲದಿರಬಹುದು, ಇದು ಪರಸ್ಪರ ಮನೋಧರ್ಮದ ಪರಿಣಾಮ. ಆದರೆ ಯಾರೊಬ್ಬರನ್ನೂ ಇವರು ಅವಹೇಳನ ಮಾಡಿದವರಲ್ಲ. ದೂಷಿಸಿದವರಲ್ಲ, ನಿಂದಿಸಿದವರಲ್ಲ; ಯಾರಿಗೂ ಅನ್ಯಾಯ ಮಾಡಿದವರಲ್ಲ. ಸರಿಹೋದವರ ಹತ್ತಿರ ಹೆಚ್ಚು ಸಲಿಗೆಯಿರಬಹುದು, ಇತರರ ಹತ್ತಿರ ಮಾತು ಮಿತವಿರಬಹುದು; ಅಷ್ಟೇ. ಪ್ರತಿಕಾರ್ಯ ಕ್ಷೇತ್ರದಲ್ಲಿಯೂ ಪಂಗಡಗಳಿರುವಂತೆ ಕನ್ನಡ ಕ್ಷೇತ್ರದಲ್ಲಿಯೂ ಇದ್ದುದುಂಟು, ಇರುವುದುಂಟು. ಆದರೆ ಶಾಸ್ತ್ರಿಗಳು ಯಾವ ಪಂಗಡಕ್ಕೂ ಸೇರಿದವರಲ್ಲ. ತಮ್ಮ ಕೆಲಸದ ವ್ಯಾಪ್ತಿ, ಜವಾಬ್ದಾರಿಯನ್ನು ಅರಿತು ಯಾರಿಗೂ ಅಂಜದೆ, ತಮ್ಮ ಮೇಲ್ಮೆಯನ್ನೂ ಲೆಕ್ಕಿಸದೆ, ತಮ್ಮ ಅಭಿಪ್ರಾಯವನ್ನು ಘಂಟಾಘೋಷವಾಗಿ ನುಡಿದವರು. ಯುವಕ ಅಧ್ಯಾಪಕರಿಗೆ ಇವರ ಶ್ರದ್ಧೆ, ಪಾಂಡಿತ್ಯ, ಜೀವನಕ್ರಮ ಮಾದರಿಯಾಗಿ, ಇವನ್ನು ಅವರು ಅನುಕರಿಸುವುದಾದರೆ ವಿಶ್ವವಿದ್ಯಾಲಯದ ಗೌರವ ಖ್ಯಾತಿಗಳು ಹೆಚ್ಚುವುದರಲ್ಲಿ ಸಂಶಯವಿಲ್ಲ.

ಶಾಸ್ತ್ರಿಗಳು ಕರ್ಮಯೋಗಿಗಳು. ಜೀವನ ಸಾರ್ಥಕ್ಯಕ್ಕೆ ಕರ್ಮ–ಸತ್ಕರ್ಮ,

ನಿಷ್ಕಾಮಕರ್ಮ–ಅಗತ್ಯ, ಅನಿವಾರ್ಯ ಎಂದು ನಂಬಿರುವವರು. ಕನ್ನಡಿಗರಾಗಿ, ಕನ್ನಡ ಅಧ್ಯಾಪಕರಾಗಿ ಕನ್ನಡ ಸೇವೆಮಾಡದೆ ತಮ್ಮ ಋಣ ತೀರದು, ಈ ಕೆಲಸ ರಾಜಕೀಯದಷ್ಟೇ ಮುಖ್ಯವಾದುದು ಎಂದು ಇವರ ತೀರ್ಮಾನ. ಅವರ ಕನ್ನಡ ಪ್ರೇಮ ಎಷ್ಟು ಸಹಜವಾದುದು, ಸತ್ಯವಾದುದು, ದೃಢವಾದುದು, ಮಹತ್ತರವಾದುದು! ಹೆತ್ತತಾಯಿ ತನ್ನ ಏಕ ಮಾತ್ರ ಪುತ್ರನಲ್ಲಿ ತೋರುವ ನೈಜಪ್ರೇಮ, ಶಾಸ್ತ್ರಿಗಳಿಗೆ ಕನ್ನಡ ವಿಷಯದಲ್ಲಿ ಬೆಳೆದು ಬಂದಿದೆ. ಕುಗ್ರಾಮ ಶಿಶುವಾಗಿ, ತೇಜೋಹೀನವಾಗಿ, ಬುನಾದಿ ಕಾಲದ ಜಾಡ್ಯಗಳ ಹೊಡೆತದಿಂದ ಬಡಕಲಾಗಿ, ಮಾನಿತರ, ಸಭ್ಯರ, ರಸಿಕರ ದರ್ಶನಕ್ಕೇ ಅಂಜುತ್ತಿದ್ದ ಕನ್ನಡ ಶಿಶುವನ್ನು ಕೈ ಹಿಡಿದು ಜನರ ಬೆಂಬಲವನ್ನೂ, ಪ್ರೋತ್ಸಾಹವನ್ನೂ, ದುಡಿಮೆಯನ್ನೂ, ಶಕ್ತಿಯನ್ನೂ ಪಡೆದು ಅದನ್ನು ಪೋಷಿಸಿ, ಅದಕ್ಕೆ ತಕ್ಕ ಸೌಂದರ್ಯವನ್ನೂ ವೀರ್ಯವನ್ನೂ ವ್ಯಾಪ್ತತೆಯನ್ನೂ ಕೊಟ್ಟು, ಅದನ್ನು ರಾಜಮಾನ್ಯವಾಗಿ ಮಾಡಿದ ಕೀರ್ತಿ ಇತರ ಸಾಹಿತಿಗಳಿಗಿಂತಲೂ ಮಿಗಿಲಾಗಿ ಶಾಸ್ತ್ರಿಗಳಿಗೆ ಸೇರತಕ್ಕದ್ದು. ಕನ್ನಡಿಗರೆಲ್ಲರೂ ಇದನ್ನು ಬಲ್ಲರು–ವಿಶೇಷವಾಗಿ ವಿಶ್ವವಿದ್ಯಾನಿಲಯದ ವಿದ್ಯಾರ್ಥಿವೃಂದ, 'ಪ್ರಬುದ್ಧ ಕರ್ಣಾಟಕ'ದ ಪೋಷಕ ವಾಚಕವೃಂದ. ಅವರು ಸೆಂಟ್ರಲ್ ಕಾಲೇಜಿಗೆ ಕಾಲಿಟ್ಟಾಗ–೧೯೧೫–ಕನ್ನಡ ಮಾತಾಡುವುದು ಅಪಮಾನ, ಕನ್ನಡದಲ್ಲಿ ಅಜ್ಞಾನವನ್ನು ವ್ಯಕ್ತಪಡಿಸುವುದು ಗೌರವ ಎನ್ನುತ್ತಿದ್ದ ಕಾಲ; ಶ್ರೀ. ಬಿ. ಎಂ. ಶ್ರೀಕಂಠಯ್ಯನವರು ಸಭೆಗಳಲ್ಲೂ, ವಿದ್ಯಾರ್ಥಿಗಳೊಡನೆಯೂ ಇಂಗ್ಲೀಷಿನಲ್ಲಿ ಮಾತ್ರ ವ್ಯವಹರಿಸುತ್ತಿದ್ದ ಕಾಲ. ನಾಗರಿಕ ಜೀವನಕ್ಕೆ, ಶಾಸ್ತ್ರಪ್ರತಿಪಾದನೆಗೆ ಅದರಲ್ಲಿ ಶಕ್ತಿನಾಲದು, ಅದರ ಬಳಕೆ ಪ್ರಮಾದಕ್ಕೆ ಕಾರಣವಾದೀತು ಎಂದು ಎಲ್ಲರೂ—ಎಲ್ಲ ಕನ್ನಡಿಗರೂ—ಒಪ್ಪಿಕೊಂಡಿದ್ದ ಕಾಲ. ಇಂಥ ವಾತಾವರಣದಲ್ಲಿ ಕನ್ನಡ ಸೇವೆಯನ್ನು ತಮ್ಮ ಜೀವಮಂತ್ರವನ್ನಾಗಿ ಮಾಡಿಕೊಳ್ಳಬೇಕಾದರೆ ಈ ಕೆಲಸದಲ್ಲಿ ಎಷ್ಟು ಪ್ರೇಮವಿರಬೇಕು, ನಂಬಿಕೆಯಿರಬೇಕು, ಎದೆಗಾರಿಕೆ ಎಷ್ಟರಮಟ್ಟಿನದಿರಬೇಕು? ಸಂಸ್ಕೃತದ ಅನುಯಾಯಿಗಳೊಡನೆಯೂ, ಇಂಗ್ಲಿಷ್ ಅನುಯಾಯಿಗಳೊಡನೆಯೂ ಹೋರಾಟ ಅನಿವಾರ್ಯವಾಯಿತು. ಈ ಭಾಷೆಗಳ ತೇಜಸ್ಸು ಶಾಸ್ತ್ರಿಗಳಿಗೆ ದೂರವಾದದ್ದೇನೂ ಅಲ್ಲ—ಅವರ ದೃಷ್ಟಿ ವೈಶಾಲ್ಯಕ್ಕೆ ಅವು ಬಹಳ ಮಟ್ಟಿಗೆ ಕಾರಣವಾಗಿದ್ದುವು. ಈ ಭಾಷೆಗಳ ವೈಶಿಷ್ಟ್ಯ ಕನ್ನಡಕ್ಕೆ ಇಲ್ಲ; ನಿಜ. ಆದರೆ ಕನ್ನಡಿಗರಾದವರಿಗೆ ಅವುಗಳಲ್ಲಿ ಹೆಚ್ಚು ಕೆಲಸ ಸಾಧ್ಯವಿಲ್ಲ. ಅವುಗಳ ವ್ಯವಸಾಯದ ಫಲವಾದರೋ ಕನ್ನಡಕ್ಕೆ ಅಗತ್ಯ. ಸಂಸ್ಕೃತ 'ಮೃತ' ಭಾಷೆಯೆಂದು ಅರಿಯದವರು ಹೇಳಿದರೂ, ಅದರ ಸಾಹಿತ್ಯ, ಶಾಸ್ತ್ರ, ಕಲೆ, ವೇದಾಂತ, ಪುರಾಣ ಮುಂತಾದುವುಗಳಿಂದ ಅದು ಭಾರತೀಯರ ಮನ್ನಣೆಯನ್ನು ಯಾವತ್ತೂ ಪಡೆಯಲೇಬೇಕು. ಇಂಗ್ಲಿಷ್ ಶಿಕ್ಷಣದಿಂದ, ಇಂಗ್ಲಿಷರ ಸಂಪರ್ಕದಿಂದ ನಾಡ ಜೀವನ ವಿಸ್ತಾರವಾಯಿತು; ಹೊಸ ದೃಷ್ಟಿ, ಹೊಸ ಚೈತನ್ಯ ತಲೆದೋರಿ ನಾಡು ಸರ್ವತೋಮುಖವಾಗಿ ಬೆಳೆಯುವುದಕ್ಕೆ ದಾರಿಯಾಯಿತು. ಇವುಗಳ ಹಿರಿಮೆಯನ್ನು ಒಪ್ಪಿಕೊಳ್ಳೋಣ.

ಆದರೆ ಈ ವ್ಯಾಮೋಹದಲ್ಲಿ ಕನ್ನಡವನ್ನು ಅಸಡ್ಡೆ ಮಾಡಬಾರದು. ಈ ಭಾಷೆಗಳ ವ್ಯವಸಾಯ ಪೋಷಣೆಗಳಿಗೆ ಸಹಸ್ರಾರು ಜನರಿದ್ದಾರೆ. ಕನ್ನಡದ ಅಭಿವೃದ್ಧಿ ಕನ್ನಡಿಗರಿಂದ ಮಾತ್ರ ಸಾಧ್ಯ. ಈ ಜವಾಬ್ದಾರಿ ಅವರಿಗೆ ಸೇರಿದ್ದು. ಅದರಲ್ಲಿಯೂ ಇಂಗ್ಲೀಷಿನಲ್ಲಿ ತಜ್ಞರಾದ ಕನ್ನಡಿಗರು ಇದು ತಮ್ಮ ಮುಖ್ಯ ಕರ್ತವ್ಯವೆಂದು ಭಾವಿಸ ಬೇಕು, ಏಕೆಂದರೆ ಕೇವಲ ಕನ್ನಡ ವ್ಯಾಸಂಗ ಮಾತ್ರದಿಂದ ಅದರ ಪ್ರಗತಿ ಸಾಧ್ಯವಿಲ್ಲ. ಇಂಗ್ಲಿಷ್ ವಾಙ್ಮಯದ ಸಾರದಿಂದ ಅದು ಜೀವಂತವಾಗಬೇಕು. ಶಾಸ್ತ್ರಿಗಳದು ತೆರೆದ ಕಣ್ಣು. ಕನ್ನಡದಲ್ಲಿದ್ದ ಲೋಪಗಳನ್ನು ಒಪ್ಪಿಕೊಳ್ಳದ ಅಂಧತೆ ಅವರದಲ್ಲ. ಅದಕ್ಕಿಲ್ಲದ ಗುಣಗಳನ್ನು ಆರೋಪಿಸಲೂ ಅವರ ಮನಸ್ಸು ಒಡಂಬಡದು. ಕನ್ನಡ ಗಾಯಕರು ಕನ್ನಡ ಪದಗಳನ್ನೂ, ಕೀರ್ತನೆಗಳನ್ನೂ ಮಾತ್ರ ಹಾಡಬೇಕೆಂದು ಕೇಳಿ ಅವರು ನಕ್ಕಿದ್ದಾರೆ. ಕನ್ನಡ ವಚನಗಳಿಗೆ ತ್ಯಾಗರಾಜರ ಕೃತಿಗಳ ರಾಗ ಸ್ವರಗಳನ್ನು ಆರೋಪಿಸಬೇಕಾಗಿಲ್ಲ, ಈ ತೊಡಿಗೆ ಅವಕ್ಕೆ ಒಪ್ಪುವುದಿಲ್ಲ, ನಾಡ ಧಾಟಿಯೇ ಅವಕ್ಕೆ ಭೂಷಣ ಎಂದು ಅವರು ಸೂಚಿಸಿದ್ದಾರೆ. ಕನ್ನಡ ಸಾಹಿತ್ಯ, ಇಂಗ್ಲಿಷಿನ ನಾಟಕ, ಪದ್ಯ, ಗದ್ಯಗಳ, ಅದರ ವಿಚಾರ ವಾಙ್ಮಯದ ಸೊಂಪನ್ನೂ, ಹಿರಿಮೆಯನ್ನೂ, ಜನ ಪ್ರಿಯತೆಯನ್ನೂ ಇನ್ನೂ ಗಳಿಸಿಕೊಳ್ಳಬೇಕಾಗಿದೆ; ಈ ಕೆಲಸ ಆದಷ್ಟು ಜಾಗ್ರತೆ ಆಗ ಬೇಕು; ರಸಿಕರಿಗೆ ಬೇಕಾದ ಸಾಮಗ್ರಿ ಕನ್ನಡದಲ್ಲಿ ದೊರೆಯದಿದ್ದರೆ ಅವರು ಅನ್ಯ ಭಾಷೆಗಳಿಗೆ ಶರಣು ಹೋಗುವುದರಲ್ಲಿ ತಪ್ಪೇನು ? ಎಂದು ಇವರು ಎಚ್ಚರಿಸಿದ್ದಾರೆ.

ಶಾಸ್ತ್ರಿಗಳ ಕ್ರಿಯಾಶಕ್ತಿ, ಕಾರ್ಯತತ್ಪರತೆ, ಉತ್ಸಾಹ, ಆತ್ಮಸಮರ್ಪಣೆಗಳನ್ನು ನೋಡಿದರೆ, ನೂತನ ಮತಸ್ಥಾಪಕರ, ಮಹಾದಂಡನಾಯಕರ ಜ್ಞಾಪಕ—ಬರುತ್ತದೆ. ಈ ಶತಮಾನದ ಆದಿಯಲ್ಲಿ ನಮ್ಮ ದೇಶದಲ್ಲಿ ನಡೆದ ರಾಜಕೀಯ ಆಂದೋಳನಗಳ ಕಾವು ಶಾಸ್ತ್ರಿಗಳಂಥವರನ್ನು ಸೆಳೆದದ್ದು ಸ್ವಾಭಾವಿಕ. ಲೋಕಮಾನ್ಯ ತಿಲಕರು, ಮಹಾತ್ಮಗಾಂಧಿಜೀಯವರು ಹೂಡಿದ ಸ್ವದೇಶಿ ಪ್ರಚಾರ, ನಾಡಭಾಷೆ ಕಲೆ ಸಂಸ್ಕೃತಿಗಳ ಪುನರುತ್ಥಾನಕ್ಕೆ ಕಾರಣವಾಯಿತು. ಶಾಸ್ತ್ರಿಗಳು ಆಂಗ್ಲಸಾಹಿತ್ಯದಲ್ಲಿ ಆಳವಾಗಿ ಪ್ರವೇಶಮಾಡಿ ಅದರ ಶಕ್ತಿ, ರುಚಿ, ಸೌಂದರ್ಯ, ಮಾನವೀಯತೆ, ಆತ್ಮೀ ಯತೆ, ಪರಾಕಾಷ್ಠತೆ, ಶಬ್ದಪುಷ್ಟಿ, ಶೈಲಿಯ ವೈಖರಿ-ಎಲ್ಲವನ್ನೂ ಅನುಭವಿಸಿದವರು, ಅಳೆದು ನೋಡಿದವರು. ಇದೇ ರೀತಿ ಸಂಸ್ಕೃತ ಸಾಹಿತ್ಯ, ಶಾಸ್ತ್ರ, ವೇದಾಂತ, ಪುರಾಣ ಸರ್ವತೋಮುಖವಾದ ಅದರ ವಾಙ್ಮಯವನ್ನೆಲ್ಲಾ ಶಾಸ್ತ್ರೀಯವಾಗಿ ವ್ಯಾಸಂಗಮಾಡಿ, ಆಧುನಿಕ ದೃಷ್ಟಿಯಲ್ಲಿ ವಿಮರ್ಶೆಮಾಡಿ ಅದರ ಹಿರಿಮೆಯನ್ನು ತಿಳಿದುಕೊಂಡವರು. ಇಂಥ ಪಂಡಿತರಿಗೆ, ಪ್ರತಿಭಾವಂತರಿಗೆ ಕನ್ನಡದಲ್ಲಿ ಅಭಿಮಾನ ಹುಟ್ಟಿದ್ದು ಕನ್ನಡದ ಅದೃಷ್ಟ; ಏತಕ್ಕೆಂದರೆ ಆಸೆ, ಅಭಿಮಾನ ಸುಲಭ; ಯೋಗ್ಯತೆ, ಪಾಂಡಿತ್ಯ ಕಷ್ಟ, ಬಹಳ ವಿರಳ. ಆಧುನಿಕ ಕನ್ನಡಸಾಹಿತಿಗಳ ಗುಂಪಿನಲ್ಲಿ ಶಾಸ್ತ್ರಿಗಳ ಪಂಕ್ತಿಗೆ ಸೇರತಕ್ಕ ಮಹಾವ್ಯಕ್ತಿಗಳು ಹಲವರಿಲ್ಲ. ಆ ಗುಂಪಿನಲ್ಲಿಯೂ ಇವರ ವೈಶಿಷ್ಟ್ಯ ಎದ್ದು ಕಾಣುತ್ತದೆ. ಇವರ ಪಾಂಡಿತ್ಯ ಕನ್ನಡಭಾಷೆಯ ಬೆಳವಣಿಗೆಗೆ,

ನೂತನ ಸಾಹಿತ್ಯದ ರಚನೆಗೆ, ಅದರಲ್ಲಿಯೂ ವಿಚಾರಸಾಹಿತ್ಯದ ರಚನೆಗೆ ಬಹಳ ಸಹಾಯಕವಾಗಿದೆ. ಕನ್ನಡದ ಬೆಳವಣಿಗೆಗೆ ಸಹಾಯಕವಾದ ಶಿಕ್ಷಣಮಾಧ್ಯಮದ ಪ್ರಸಂಗಬಂದಾಗ ಇವರ ಬೆಂಬಲ ಬಹಳ ಸಹಾಯಕವಾಯಿತು. ಹಿಂದಿಯು ದೇಶ ಭಾಷೆಯ ವ್ಯಾಜದಿಂದ ಕನ್ನಡ ಕೆಲಸಕ್ಕೆ ಧಕ್ಕೆ ತರಬಹುದೆಂದು ಇವರು ಹೂಡಿದ ವಾದ, ಹೋರಾಟವನ್ನು ಯಾರೂ ಮರೆಯುವಂತಿಲ್ಲ. ಸಂಸ್ಕೃತವೂ ಸಹ ಕನ್ನಡದ ಪೋಷಣೆಗೆ ಎಷ್ಟು ಅಗತ್ಯವೋ ಅಷ್ಟುಮಟ್ಟಿಗೆ ಮಾತ್ರ ಆದರಣೀಯವೇ ಹೊರತು ಕನ್ನಡನಾಡಿನಲ್ಲಿ ಕನ್ನಡಕ್ಕೆ ಸರಿಸಮಾನವಾದ ಪೀಠ ಅದಕ್ಕಿಲ್ಲ. ಈ ರೀತಿ ವಾದಿಸಿ, ಉಲ್ಲೇಖಿಸಿ, ಜವಾಬ್ದಾರಿಯ ಸ್ಥಾನಗಳಿಂದ ಘೋಷಿಸಿ ಅನೇಕ ಮಿತ್ರರನ್ನು ಶತ್ರುಗಳನ್ನಾಗಿ ಮಾಡಿಕೊಂಡಿದ್ದುಂಟು. ಯಾರ ಹೊಗಳಿಕೆಯನ್ನೂ, ಹಗೆತನವನ್ನೂ ಲಕ್ಷಿಸದೆ ಕನ್ನಡದ ಪೋಷಣೆಯ ಜವಾಬ್ದಾರಿಯನ್ನೂ, ಮಹತ್ವವನ್ನೂ, ಜನರ ಮುಂದೆ ಇಟ್ಟು, ಅದರ ಬೆಳವಣಿಗೆಯ ಹೆದ್ದಾರಿಯನ್ನು ಇವರಂತೆ ನಿರೂಪಿಸಿದವರು ಬೇರಾರೂ ಇಲ್ಲವೆನ್ನಬಹುದು. 'ಪ್ರಬುದ್ಧ ಕರ್ಣಾಟಕ'ದ ಮೂಲಕ ಕನ್ನಡವು ಆಧುನಿಕ ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಉಪಯೋಗಿಸಬಹುದಾದ ಭಾಷೆ, ಅದಕ್ಕೆ ವ್ಯಾಪ್ತಿ, ಶಕ್ತಿ, ಸರಳತೆ, ಎಲ್ಲವೂ ಇವೆ, ಲೇಖನದ ಮಟ್ಟ ಲೇಖಕನನ್ನವಲಂಬಿಸಿದ್ದು, ಕನ್ನಡವನ್ನಲ್ಲ ಎಂದು ಸ್ಪಷ್ಟಪಡಿಸಿದ್ದಾರೆ.

ಶಾಸ್ತ್ರಿಗಳು ಉತ್ತಮ ಸಾಹಿತಿಗಳು; ಕತೆಗಾರರು, ವಿಮರ್ಶಕರು,ಪ್ರಬಂಧ ಲೇಖಕರು, ವಾಗ್ಮಿಗಳು. ವಿಷಯಕ್ಕೆ ತಕ್ಕ ಶೈಲಿಯನ್ನು ನಿರೂಪಿಸಿಕೊಂಡು, ವಸ್ತುವಿಗೆ ಕಳೆಯನ್ನೂ, ಓದುಗರಿಗೆ ಸಂತೋಷವನ್ನೂ ಉಂಟುಮಾಡಿದ್ದಾರೆ. ವಾದದ ಚುರುಕು ಶೈಲಿ, ಭಾಷಣದ ತಿಳಿ ಶೈಲಿ, ವಿಮರ್ಶೆಯ ಪಾಂಡಿತ್ಯ ಶೈಲಿ, ಹರಟೆ ಚಿತ್ರಗಳ ಹಾಸ್ಯ, ಲಘು ಶೈಲಿ, ಗಂಭೀರವಾದ ಪುರಾಣ ಶೈಲಿ ಎಲ್ಲವನ್ನೂ ಅವರ ಬರವಣಿಗೆಗಳಲ್ಲಿ ಕಾಣಬಹುದು. ಅವರ ಬರವಣಿಗೆಯಲ್ಲಿ ಎದ್ದುಕಾಣುವ ಮುಖ್ಯ ಗುಣವೆಂದರೆ ಅವರ ವಾಕ್ಸಂಯಮ. ಮಾತಿನ ಚಟ, ಬರವಣಿಗೆಯ ಚಟ ಅವರಿಗಿಲ್ಲ. ವಿಷಯವಿದ್ದರೆ ಮಾತು; ಎಷ್ಟು ಅಗತ್ಯವೋ ಅಷ್ಟುಮಾತ್ರ. ಇವರ 'ಸಂಸ್ಕೃತದ ನಾಟಕಗಳ' 'ವಚನ ಭಾರತ'ದ ಕೆಲವು ಪಂಕ್ತಿಗಳ ವಿಷಯನಿರೂಪಣೆಗೆ ಇತರರು ಅಷ್ಟೇ ಪುಟಗಳನ್ನು ಬರೆಯಬೇಕಾದೀತು. ಅವರ ಶೈಲಿಯ ಇನ್ನೊಂದು ಗುಣವೆಂದರೆ ಅದರ ಸರಳತೆ. ಸಂಸ್ಕೃತದ ಹೊರೆಯಿಲ್ಲದ,ಪಾಂಡಿತ್ಯದ ಭಾರವಿಲ್ಲದ, ಅಡಕವಾದ, ಶುದ್ಧವಾದ, ಸರಳವಾದ, ಗಂಭೀರವಾದ ಶುದ್ಧ ಕನ್ನಡ ಶೈಲಿ ಇವರಿಗೆ ಸ್ವಭಾವವಾದುದು. ಇವರ ಶೈಲಿಯಲ್ಲಿ ಕ್ಲಿಷ್ಟತೆಯಾಗಲೀ ಅತಿ ಪ್ರಯತ್ನವಾಗಲೀ ಕಾಣುವುದಿಲ್ಲ. ವಿಷಯಕ್ಕೆ ತಕ್ಕ ಓಟ, ವಾಕ್ಸಂಪತ್ತು, ವಾತಾವರಣ ನೈಜವಾಗಿ ಕಲ್ಪಿತವಾಗಿವೆ. ಆದ್ದರಿಂದ ಇವರ ಲೇಖನದಲ್ಲಿ ಇವರ ಬರಣಿಗೆಯಲ್ಲಿ ಕಾಣುವುದು ಇವರ ಮನಸ್ಸು, ಇವರ ಹೃದಯ. ಸಾಹಿತ್ಯದಲ್ಲಿ ಒಂದು ಹೊಸ ಸಮಸ್ಯೆಯಿರಬಹುದು, ವಿಷಯ ಹಳೆಯದಾದರೂ ಕೋನ, ದೃಷ್ಟಿ ಹೊಸದಾಗಬೇಕು. ಅಥವಾ ಜೀವನದ ಒಂದು ಸಮಸ್ಯೆ

ಯಿರಬಹುದು—ಇವನ್ನು ನಿರೂಪಿಸದಿದ್ದರೆ ಕರ್ತವ್ಯಲೋಪವಾದೀತು: ಈ ತೀವ್ರತೆ ತೋರಿದಲ್ಲದೆ ಶಾಸ್ತ್ರಿಗಳು ಲೇಖನಿಯನ್ನು ಹಿಡಿದವರಲ್ಲ. ಈ ಕರ್ತವ್ಯನಿಷ್ಠೆ ಅವರ ವಿಸ್ತಾರವಾದ ಲೇಖನ ಪ್ರಪಂಚದಲ್ಲಿ ಎಲ್ಲೆಲ್ಲಿಯೂ ಎದ್ದುಕಾಣುತ್ತದೆ.

ಆದರೂ ಶಾಸ್ತ್ರಿಗಳಿಗೆ ತಮ್ಮ ಬರವಣಿಗೆಯ ಕಡೆ, ತನ್ಮೂಲಕ ತಮ್ಮ ಕೀರ್ತಿಯ ಕಡೆ ಹೆಚ್ಚುಗಮನವಿದ್ದಂತಿಲ್ಲ. ಇದ್ದರೆ 'ಪ್ರಬುದ್ಧ ಕರ್ಣಾಟಕ'ದ ಲೇಖನಗಳನ್ನು ಪರಿಷ್ಕರಿಸುವುದರಲ್ಲಿ ಅವರು ತಮ್ಮ ಜೀವನದ ಮುಖ್ಯಭಾಗವನ್ನು ವ್ಯಯಮಾಡುತ್ತಿರಲಿಲ್ಲ. ಅವರ ಗುರಿ ಕನ್ನಡದ ಅಭಿವೃದ್ಧಿ, ಪರಿಷ್ಕರಣೆ, ಪ್ರಗತಿ. ಈ ಕೆಲಸ ಯಾರಿಂದಲಾದರೂ ಆದೀತೆಂದು ಕಂಡರೆ ಅವರನ್ನು ಅವರು ಬಿಡುತ್ತಿರಲಿಲ್ಲ. ಎರಡು ಮಾತಾಡಬಲ್ಲ, ಎರಡು ಪಂಕ್ತಿಗಳನ್ನು ಬರೆಯಬಲ್ಲ ವಿದ್ಯಾರ್ಥಿಗಳು ಕಣ್ಣಿಗೆ ಬಿದ್ದರೆ ಅವರ ಸ್ನೇಹವನ್ನೂ ಸಂಪರ್ಕವನ್ನೂ ಬೆಳಸಿಕೊಂಡು, ಅವರ ಶಕ್ತಿಗೆ, ವ್ಯಾಸಂಗ ಕ್ಷೇತ್ರಕ್ಕೆ ತಕ್ಕ ವಿಷಯಗಳನ್ನು ಸೂಚಿಸಿ, ಪ್ರಮಾಣಗಳನ್ನೊದಗಿಸಿ, ಲೇಖನದ ರೂಪರೇಖೆಯನ್ನು ಹಾಕಿಕೊಟ್ಟು, ವಾರಕ್ಕೊಮ್ಮೆ, ಕೆಲವುವೇಳೆ ದಿನಕ್ಕೊಮ್ಮೆ ಆ ಯುವಕರನ್ನು ಅವರ ಕೊಠಡಿಗಳಲ್ಲೋ, ಕುಟೀರಗಳಲ್ಲೋ, ಮಂದಿರಗಳಲ್ಲೋ ಅಥವಾ ನಡುಬೀದಿಗಳಲ್ಲಿ ದೊರೆತಾಗಲೋ ನೋಡಿ, ಅವರಿಗೆ ಬೇಕಿಲ್ಲದಿದ್ದರೂ ಅವರೊಡನೆ ವಿಷಯವನ್ನು ಚರ್ಚಿಸಿ, ಅವರನ್ನು ಹುರಿದುಂಬಿಸಿ, ಅವರ ಅರೆ ಶ್ರದ್ಧೆಯನ್ನು ನಿಜಶ್ರದ್ಧೆಯನ್ನಾಗಿ ಮಾಡಿ, ಅವರು ಬರೆದ ಅಲ್ಪಲೇಖನಗಳನ್ನು ತಿದ್ದಿ ಹಸನುಮಾಡಿ,'ಪ್ರಬುದ್ಧಕರ್ಣಾಟ' ಕದ ಲೇಖನಗೋಷ್ಠಿಗೆ ಅವನ್ನು ಏರಿಸಿ ತನ್ಮೂಲಕ ಅವರ ಲೇಖನ ಶ್ರದ್ಧೆಗೆ ಜೀವವನ್ನು ಕೊಟ್ಟು ವಿಚಾರಸಾಹಿತ್ಯ, ಸಮಾಜಸಾಹಿತ್ಯ, ಶಾಸ್ತ್ರಸಾಹಿತ್ಯ ಮತ್ತು ವಿಮರ್ಶೆಯ ಸಾಹಿತ್ಯದಲ್ಲಿ ಅಪಾರ ಲೇಖನಗಳನ್ನು ಬರಸಿದ್ದಾರೆ; ಹಿರಿಯಲೇಖಕರನ್ನು ನಿರ್ಮಾಣ ಮಾಡಿ, ಕನ್ನಡದಲ್ಲಿ ಒಂದು ಹೊಸ ಪೀಳಿಗೆಯನ್ನು ಸ್ಥಾಪಿಸಿದ್ದಾರೆ. ಇದು ಸ್ವಾನುಭವ ಮಾತ್ರವಲ್ಲ; ಅನೇಕ ತರುಣಲೇಖಕರ ಕೃತಜ್ಞತೆಯ ಮಾತೂ ಹೌದು. ಇದು ವಿಜ್ಞಾನಯುಗ; ವಿಜ್ಞಾನಸಾಹಿತ್ಯ ಕನ್ನಡದ ಹಿರಿಮೆಗೆ ಅಗತ್ಯ; ಹೊಸ ಸಂಶೋಧನೆಗಳ ಅರಿವು ಜನಸಾಮಾನ್ಯಕ್ಕೆ ಆಗಲೇ ಬೇಕು; ದೇಶದ ಮುನ್ನಡೆಗೆ ಇದು ತಳಹದಿ. ಈ ನಂಬಿಕೆಯಿಂದ ಅವರು ಸೆಂಟ್ರಲ್ ಕಾಲೇಜಿನಲ್ಲಿದ್ದಾಗ ಮೇಧಾವಿಗಳಾದ ವಿದ್ಯಾರ್ಥಿಗಳನ್ನೂ ಬೋಧಕರನ್ನೂ ಪರಿಚಯಮಾಡಿಕೊಂಡು, ಭೌತ, ರಸಾಯನ, ಖಗೋಳ ಸಸ್ಯ, ಖನಿಜ ಇತ್ಯಾದಿ ಶಾಸ್ತ್ರಗಳಲ್ಲಿ ಪ್ರಮಾಣ ಲೇಖನಗಳನ್ನು ಬರಸಿ ಪ್ರಕಟಿಸಿರುತ್ತಾರೆ! ಕನ್ನಡಕ್ಕೆ ಎಂಥ ಅಪಾರ ಸೇವೆ ಇದು! ಸಂಗೀತಗಾರರಂತೆ ಸಾಹಿತ್ಯಕಾರರಿಗೂ ಇನ್ನೊಬ್ಬರ ಶ್ಲಾಘನೆ ಪೋಷಣೆ ಅಷ್ಟಾಗಿ ಆಗಿ ಬಂದದ್ದಲ್ಲ. ತಮ್ಮ ಕೀರ್ತಿ ಇದರಿಂದ ಮಾಸಲಾಗಬಹುದೆಂಬ ಶಂಕೆ ಈ ಸಜಾತಿ ವೈರದ ಮೂಲ. ಆದರೆ ಶಾಸ್ತ್ರಿಗಳಲ್ಲಿ ಈ ಸಂಕುಚಿತ ಬುದ್ಧಿ, ಈ ಅಸಹನೆ ಎಂದೂ ತಲೆಹಾಕಿದ್ದಿಲ್ಲ. ಬಾಲಕ ಪುಟ್ಟಪ್ಪನನು. 'ವರಕವಿ" ಎಂದು ಹೊಗಳಿ ಆಗಿನ ಹಿರಿಯಸಾಹಿತಿಗಳ ಕೋಪಕ್ಕೆ ಪಾತ್ರರಾದರು; ಮೈಸೂರಿಗೆ ಹೋಗಿ ಪುಟ್ಟಪ್ಪನವರನ್ನು ನೋಡದಿದ್ದರೆ ದೇವಸ್ಥಾನಕ್ಕೆ ಹೋಗಿ

ದೇವರನ್ನು ನೋಡದಿದ್ದಂತೆ ಎಂದು ಹೇಳಿದ್ದೂ ಉಂಟು. ಶಾಸ್ತ್ರಿಗಳು ಹುಟ್ಟು ವಿಮರ್ಶಕರು. ಅವರ ಕಣ್ಣು ನಾಲಗೆ ಬಹು ತೀಕ್ಷ್ಣವಾದವು, ಚುರುಕಾದವು. ಹೊಸ ವಿಷಯ ಕಂಡೊಡನೆ ಹಿತವೊ, ಅಹಿತವೊ ಇದ್ದಂತೆ ಅದನ್ನು ಹೇಳಿ ಬಿಡುವುದು ಅವರ ಸ್ವಭಾವ. ಯಾರಿಗೂ ಅವರು ಅಂಜಿದವರಲ್ಲ. ಹಟ ವಾದಿಗಳು 'ಪ್ರಬುದ್ಧ ಕರ್ಣಾಟಕ'ಕ್ಕೆ ಬರೆದು ಬಂದ ಲೇಖನಗಳ ಪರಿಷ್ಕ ರಣದಿಂದ ಅವರು ಅನೇಕರ ಅಸಮಾಧಾನಕ್ಕೆ ಗುರಿಯಾಗಿದ್ದಾರೆ. ಏನೇ ಆಗಲಿ, ಭಾಷೆಯ ವಿಷಯದಲ್ಲಿ, ವಿಷಯ ನಿರೂಪಣೆಯಲ್ಲಿ ತಮಗೆ ಸರಿಯೆಂದು ತೋರಿದ ಲ್ಲದೆ ಅವರು ಅದನ್ನು ಒಪ್ಪಿದ್ದಿಲ್ಲ, ಪ್ರಕಟಿಸಿದ್ದಿಲ್ಲ. 'ಪ್ರಬುದ್ಧ ಕರ್ಣಾಟಕ' ಅತಿಮಡಿ ಎಂದು ಯಾರಾದರೂ ಹಾಸ್ಯಮಾಡಿದರೆ ಆ ಒಂದು ಪತ್ರಿಕೆ ಹಾಗಿರಲಿ, ಒಪ್ಪದಿದ್ದರೆ ಬೇರೆ ಪತ್ರಿಕೆಗಳಿಗೆ ಹೋಗಿ ಎಂದು ಬದಲು ಹೇಳಿದ್ದಾರೆ. ಬೇರೆ ಪತ್ರಿಕೆಗಳು ಲೇಖನ ಗಳಿಗೆ ಸಂಭಾವನೆಯನ್ನು ಕೊಡುತ್ತವೆ, 'ಪ್ರಬುದ್ಧ ಕರ್ಣಾಟಕ 'ವೂ ಇದನ್ನು ಮಾಡ ಬಹುದಲ್ಲಾ ಎಂದು ಕೆಲವರು ಪ್ರಶ್ನಿಸಿರುವುದುಂಟು. ಸಂಭಾವನೆಯ ಪ್ರಶ್ನೆ ಬಂದೊಡನೆ ಪತ್ರಿಕೆ ಬೀದಿಗೆ ಬರಬೇಕಾಗುತ್ತದೆ. ಆ ಆಸೆ, ಅಗತ್ಯ ಇರುವವರಿಗೆ ಈ ಪತ್ರಿಕೆಯ ಸಂಪರ್ಕ ಬೇಕಿಲ್ಲ. ಆದಷ್ಟು ಕಾಲ ಪತ್ರಿಕೆ ಹೀಗೆಯೇ ನಡೆದು ಕೊಂಡು ಹೋಗಲಿ ಎಂದು ಅವರು ಉತ್ತರ ಕೊಟ್ಟಿರುತ್ತಾರೆ.

ಕನ್ನಡ ಕೆಲಸದಲ್ಲಿ ಅವರಿಗೆ ಅನುದಿನವೂ ನೆರವಾದವರು ಅವರ ಆಪ್ತಮಿತ್ರರಾದ ಟಿ. ಎಸ್. ವೆಂಕಣ್ಣಯ್ಯನವರು. ಇವರ ಅಗಲುವಿಕೆಯಿಂದ ಶಾಸ್ತ್ರಿಗಳು ಬಹಳ ಕುಗ್ಗಿಹೋದರು. ೧೯೪೦ ರ ಸುಮಾರಿಗೆ ಇವರು ಕನ್ನಡದಲ್ಲಿ ಪ್ರಾಧ್ಯಾಪಕರಾಗುವ ರೆಂದು ಯಾರೋ ಹೇಳಿದ್ದರಂತೆ. ವೆಂಕಣ್ಣಯ್ಯನವರ ಜೊತೆಯಲ್ಲಿ ಈ ಕೆಲಸವನ್ನು ಮಾಡಬೇಕೆಂಬ ಆಸೆ ಇವರಿಗೆ ಬಹಳವಾಗಿತ್ತು. ಅವರು ಕಾಲವಾಗಿ ಅವರ ಸ್ಥಾನಕ್ಕೆ ಇವರು ಬಂದು ಆ ಗೌರವ ಇವರಿಗೆ ಸಂದದ್ದು ಇವರಿಗೆ ಬಹಳ ವ್ಯಸನವನ್ನುಂಟು ಮಾಡಿತು. ಈ ಮಾತನ್ನು ಹೇಳಿಕೊಂಡು ಅವರು ವ್ಯಸನಪಟ್ಟಾಗ ನನ್ನ ಹೃದಯವೂ ಇಳಿದು ಹೋಯಿತು. ಎಂಥ ಮಿತ್ರಪ್ರೇಮ! ಜೀವನದಲ್ಲಿ ದುಡ್ಡಿಗೆ ಎಷ್ಟೊ ಅಷ್ಟೇ ಬೆಲೆ ನಲ್ಲತಕ್ಕದ್ದು. ಪ್ರೇಮ, ಆತ್ಮಗೌರವಗಳ ಮುಂದೆ ದುಡ್ಡೇನು? ಪಠ್ಯ ಪುಸ್ತಕ ಗಳ ಹೊಡೆದಾಟದಲ್ಲಿ ನಡೆಯುವ ಕುಯುಕ್ತಿ, ಕುತಂತ್ರ ನೀಚಸಂಧಾನ ಅವರಿಗೆ ಸ್ವಲ್ಪವೂ ಒಪ್ಪದು. ಸಾಹಿತಿ ಈ ಗೋಜಿಗೆ ಎಂದೂ ಹೋಗಬಾರದೆಂದು ಅವರು ವಿವೇಕ ಹೇಳುವರು.

ಶಾಸ್ತ್ರಿಗಳು ಶುದ್ಧ ವೈದಿಕ ಸಂಪ್ರದಾಯದವರು; ಬಹಳ ಸರಳ ಜೀವಿಗಳು. ಕೆಲಸದಿಂದ ವಿಶ್ರಾಂತಿ ಪಡೆದ ಕೆಲವು ದಿನಗಳನಂತರ ಸೌಮ್ಯವಾದ ಒಂದು ಷರಟು, ಟವಲು ಹಾಕಿಕೊಂಡು ಸಂಜೆ ಕಾಲೇಜ್ ಸಮೀಪದಲ್ಲಿ ಹೋಗುತ್ತಿದ್ದರು. ಒಳ್ಳೆಯ ಟ್ವೀಡ್ ಕೋಟ್, ಅಗಲವಾದ ಜರೀ ರುಮಾಲು, ಲಕ್ಷಣವಾದ ಅಂಚಿನ ಪಂಚೆ, ಎಲ್ಲವನ್ನೂ ಶಿಸ್ತಿನಿಂದ ಧರಿಸಿ ಗಂಭೀರವಾಗಿರುತ್ತಿದ್ದ ಅವರ ನಿಲುವನ್ನು ನೋಡಿದ್ದ

ನನ್ನ ಕಣ್ಣಿಗೆ ಸ್ವಲ್ಪ ಆಶ್ಚರ್ಯವಾಯಿತು. "ಇದೇನು ಶಾಸ್ತ್ರಿಗಳೇ, ಅಂಗಿ ರುಮಾಲು ಏನೂ ಇಲ್ಲ?" ಎಂದೆ. 'ಇನ್ನೂ ಹಾಕ್ಕೊಬೇಕೆನಯ್ಯ ಅವನ್ನು. ಹದಿನೈದು ದಿನ ವಾಯಿತು, ಆ ಬಂಧನ ಬಿಟ್ಟುಹೋಗಿ?' ಎಂದರು. ಉಡುಪಿನಿಂದ ಮೆಚ್ಚುಗೆ ಪಡೆಯಬೇಕಾದ ಅಗತ್ಯ ಅವರಿಗೇನಿದೆ? ಈಗ ಅವರು ತಮ್ಮ ಸ್ನಾನ, ದೇವತಾರ್ಚನೆ ನಿತ್ಯಕಾರ್ಯಗಳು ತಪ್ಪದೆ ನಡೆದ ಮೇಲೆ, ಸದ್ಗ್ರಂಥಗಳ ವ್ಯಾಸಂಗವೊ, ಲೇಖನವೊ ಕ್ರಮವಾಗಿ ನಡೆದು ಹಿತವಾಗಿ ವಿಹಿತವಾಗಿ ಮಾತನಾಡಲು ಬರುವ ವಿದ್ಯಾರ್ಥಿಗಳು, ಸಾಹಿತಿಗಳು, ಸ್ನೇಹಿತರು—ಇವರೊಡನೆ ಎಷ್ಟೋ ಅಷ್ಟು ಸರಸ ಸಲ್ಲಾಪ ಮಾಡಿ, ಸಂಸಾರಕ್ಕೆ ತಮ್ಮ ಕೈಲಾದ ಪ್ರತಿಯೊಂದು ಸೇವೆಯನ್ನೂ ಸಲ್ಲಿಸುತ್ತ ಎಲೆ ಮರೆಯ ಕಾಯಿಯಂತೆ ವಿಶ್ರಾಂತಿ ಸುಖವನ್ನು ಅನುಭವಿಸುತ್ತಿದ್ದಾರೆ. 'ವಚನ ಭಾರತ'ವನ್ನು ಬರೆಯುತ್ತಿದ್ದಾಗ ಅವರ ದಿನಚರಿಯ ಪರಿಚಯ ನನಗಿತ್ತು. ನಾರಣಪ್ಪನು ವೀರ ನಾರಾಯಣನ ಮುಂದೆ ಕುಳಿತಂತೆ ಬೆಳಿಗ್ಗೆ ೧೧ ಗಂಟೆಯಿಂದ ಸಂಜೆ ಐದಾರು ಗಂಟೆಯವರೆಗೆ ಮಹಾಭಾರತದ ಗ್ರಂಥ ರಾಶಿಯ ಮುಂದೆ ಏಕಾಗ್ರತೆಯಿಂದ ಕುಳಿತು, ವಿವಿಧ ಪಾಠಗಳನ್ನು ಓದಿ, ವಿಮರ್ಶಿಸಿ, ಅವಶ್ಯಕ ವಸ್ತುವನ್ನು ಆರಿಸಿಕೊಂಡು, ಆ ದಿನದ ಬರವಣಿಗೆಯ ಕೆಲಸ ಮುಗಿದಲ್ಲದೆ ಅವರು ಏಳುತ್ತಿರಲಿಲ್ಲ. ಆ ನಿಷ್ಠೆ, ಆಸಕ್ತಿ, ಆತುರ, ಕಾರ್ಯತತ್ಪರತೆ, ದೈವಭಕ್ತಿ—ಜೊತೆಗೆ ಅಪಾರವಾದ ಪಾಂಡಿತ್ಯ, ವಿಮರ್ಶನ ಶಕ್ತಿ, ವಾಕ್ಸಂಪತ್ತು, ಕಥನ ಕೌಶಲ, ಮಿಗಿಲಾಗಿ ದೇವರು ಕರುಣಿಸಿರುವ ಆರೋಗ್ಯ,ಅನುಕೂಲ ಎಲ್ಲವೂ ಇದ್ದು ಕನ್ನಡಕ್ಕೆ'ವಚನ ಭಾರತ'ಬೇಗ ಲಭಿಸುವಂತಾ ಯಿತು. ಅದು ನಾಡಿಗೆಲ್ಲ ಪೂಜ್ಯವಾಗಿ, ನಾಡ ಜನಕ್ಕೆಲ್ಲಾ ಆನಂದವನ್ನೂ, ಸನ್ಮತಿ ಯನ್ನೂ ನೀಡುತ್ತ, ಎಲ್ಲರ ಮೆಚ್ಚುಗೆಯನ್ನೂ ಪಡೆದು ಎಲ್ಲರ ಮನೆಗಳ ಮಂಗಳಮಣಿ ಯಂತೆ ಶೋಭಿಸುತ್ತಿದೆ. ಕನ್ನಡ ಮಾತು ಇರುವತನಕ ಕನ್ನಡ ಜನರನ್ನು ಬದುಕಿಸಿ ಬಾಳಿಸುವ ಗ್ರಂಥವಿದು ಈ ಮಹಾ ಗ್ರಂಥ. ಶಾಸ್ತ್ರಿಗಳು ಕನ್ನಡಕ್ಕೆ ಅಖಂಡವಾದ ಸೇವೆಯನ್ನು ಸಲ್ಲಿಸಿ ತಮ್ಮ ಬದುಕನ್ನು ಸಾರ್ಥಕ ಪಡಿಸಿಕೊಂಡಿದ್ದಾರೆ. ಅವರ ಷಷ್ಟಿ ಪೂರ್ತಿ ಶಾಂತಿಯ ದಿನಕ್ಕೆ ಸರಿಯಾಗಿ ವಚನ ಭಾರತವನ್ನು ಪ್ರಕಟಿಸಿ, ಪೂಜ್ಯ ಸೋಮೇಶ್ವರನಿಗೂ, ಗುರುಹಿರಿಯಣ್ಣನವರಿಗೂ, ಹಿರಿಯ ಸಾಹಿತಿಗಳೆಲ್ಲರಿಗೂ ಆ ದಿನದ ಕಾಣಿಕೆಯಾಗಿ ಅದನ್ನು ಅರ್ಪಿಸಿದ್ದಾರೆ. ಷಷ್ಟಿಪೂರ್ತಿಯನ್ನು ಈ ರೀತಿ ಆಚರಿ ಸುವುದು ಎಷ್ಟು ಸಾಹಿತಿಗಳಿಗೆ ಸಾಧ್ಯ? ಈ ಸುಯೋಗ ಶಾಸ್ತ್ರಿಗಳಿಗೆ ಲಭ್ಯವಾಯಿತು. ಇದರಿಂದಲೇ ಶ್ರೀಕೃಷ್ಣನ ಸಂಪೂರ್ಣ ಅನುಗ್ರಹಕ್ಕೆ ಅವರು ಪಾತ್ರರೆಂದು ವ್ಯಕ್ತವಾಗು ತ್ತದೆ. ಅವರನ್ನು ಬಲ್ಲ ಪ್ರತಿಯೊಬ್ಬರ, ಶಿಷ್ಯರ, ಸಾಹಿತಿಗಳ, ಹಿರಿಯರ ಪ್ರಾರ್ಥನೆ ಇದೊಂದೇ. ದೇವರು ಅವರಿಗೆ ಸಂಪೂರ್ಣ ಆಯುರಾರೋಗ್ಯಗಳನ್ನು ಕರುಣಿಸಿ ಕನ್ನಡಕ್ಕೆ ಅವರಿಂದ ಆಗಬಹುದಾದ ಕೆಲಸ ಅವಿಚ್ಛಿನ್ನವಾಗಿ ನಡೆದು, ಕನ್ನಡಿಗರೆಲ್ಲರ ಗೌರವಕ್ಕೆ ಅವರು ಪಾತ್ರರಾಗಿ ಶಾಂತಿ ಸೌಖ್ಯಗಳನ್ನನುಭವಿಸುತ್ತ ಚಿರಕಾಲ ಬಾಳಲಿ!

'ಸತ್ಯಮೇವ ಜಯತೇ'

ಜಿ. ಆರ್. ರಂಗಸ್ವಾಮಿ

# ನನ್ನ ಪ್ರಿಯಗುರುಗಳು

೧

ಶ್ಲಿಷ್ಟಾ ಕ್ರಿಯಾ ಕಸ್ಯಚಿದಾತ್ಮಸಂಸ್ಥಾ
ಸಂಕ್ರಾಂತಿರನ್ಯಸ್ಯ ವಿಶೇಷಯುಕ್ತಾ
ಯಸ್ಯೋಭಯಂ ಸಾಧು ಸ ಶಿಕ್ಷಕಾಣಾಂ
ಧುರಿ ಪ್ರತಿಷ್ಠಾಪಯಿತವ್ಯ ಏವ ||

ಮಾಳವಿಕಾಗ್ನಿಮಿತ್ರ ೧–೧೬

ಪ್ರೊ. ಎ. ಆರ್ ಕೃಷ್ಣಶಾಸ್ತ್ರಿಗಳು ಶಿಷ್ಯವಾತ್ಸಲ್ಯ ಪ್ರಪೂರ್ಣರಾದ ಗುರುವರ್ಯರು; ಸಂಸ್ಕೃತ ಕನ್ನಡ ಭಾಷೆಗಳಲ್ಲಿ ಉದ್ದಾಮ ಪಂಡಿತರು; ಕನ್ನಡ ನಾಡುನುಡಿಗಳ ಭಕ್ತರಲ್ಲಿ ಅಗ್ರೇಸರರಾದವರು.

ಅತ್ಯುಕ್ತಿಯ ಅತಿರೇಕದ ಸೋಂಕಿನ ಲವಲೇಶವೂ ಇಲ್ಲದ ಮೇಲಿನ ಮೂರು ಮಾತುಗಳಲ್ಲಿ ಶ್ರೀಮಾನ್ ಕೃಷ್ಣಶಾಸ್ತ್ರಿಗಳ ವ್ಯಕ್ತಿತ್ವದ ಗುಟ್ಟು ಅಡಗಿದೆಯೆಂದು ನಾನು ಭಾವಿಸುತ್ತೇನೆ. ಸೂರ್ಯನ ಪ್ರಕಾಶ ಯಾರಿಗೆ ತಾನೆ ಸೇರದು? ಭಾಸ್ಕರನ ತೇಜಸ್ಸು ಸ್ವಯಂ ಪ್ರಕಾಶಮಾನವಾದರೂ, ಅದು ಇತರ ಬೆಳಕುಗಳನ್ನು ಸಂಪೂರ್ಣವಾಗಿ ಮರೆಮಾಡಿ ಬಿಡುತ್ತದೆ. ಮೇಲಾಗಿ ಆ ತೇಜಸ್ಸನ್ನು ದೃಷ್ಟಿಸಿ ನೋಡುವಂತೆಯೂ ಇಲ್ಲ; ನೋಡಿದವರ ಕಣ್ಣುಗಳನ್ನು ಆ ತೇಜಸ್ಸು ಕೋರೈಸಿಬಿಡುತ್ತದೆ. ಆದರೆ ಪೂರ್ಣಚಂದ್ರನಿಗೆ ಮಾತ್ರ ಈ ಮಾತುಗಳು ಸಲ್ಲವು. ಪೂರ್ಣಚಂದ್ರನ ಕಾಂತಿಯಾದರೋ ಸ್ನಿಗ್ಧವಾದದ್ದು; ತಂಪಾದದ್ದು. ಅದರ ಕಾಂತಿಯಿಂದ ಆಕರ್ಷಿತರಾದವರ-ಹಾಗೆ ಆಕರ್ಷಿತರಾಗದವರಾರು?-ಮನಸ್ಸು ಉಲ್ಲಾಸಗೊಳ್ಳುವುದಲ್ಲದೆ, ತಿಂಗಳ ಬೆಳಕಿನಲ್ಲಿ ಇತರ ನಕ್ಷತ್ರಗಳೂ ಸುಸ್ಪಷ್ಟವಾಗಿ ಕಂಗೊಳಿಸುತ್ತವೆ. ಪ್ರೊ. ಕೃಷ್ಣಶಾಸ್ತ್ರಿಗಳು ಮೇಲೆ ಹೇಳಿದ ಎರಡನೆಯ ಗುಂಪಿಗೆ ಸೇರಿದವರು. ಅವರು ಜ್ಞಾನದ ದೀಪವಲ್ಲ; ಪ್ರದೀಪ. ಈ ಪ್ರದೀಪದ ಬೆಳಕಿನಿಂದ, ಕಾಂತಿಯಿಂದ ಕುಗ್ಗದೆ ಮರೆಯಾಗದೆ ಬೆಳಗುತ್ತಿರುವ ದೀಪಗಳೆಷ್ಟೋ! 'ಹೆಜ್ಜೊಡರ್ ಮರೆಸುವುದು ಕಿರುಸೊಡರ'[1] ಎಂಬ ಉಕ್ತಿ ಇವರ ವಿಷಯಕ್ಕೆ ಸಲ್ಲದು. ತಮ್ಮ ತುಂಬು ಪಾಂಡಿತ್ಯದಿಂದ, ಅಪೂರ್ವವಾದ ಬೋಧನಾಕ್ರಮದಿಂದ, ಉತ್ತಮವಾದ ಚಾರಿತ್ರ್ಯದಿಂದ ಶಿಷ್ಯರನ್ನು ತಮ್ಮೆಡೆಗೆ ಸೆಳೆದುಕೊಂಡು, ಅವರ ಮೇಲೆ ತಮ್ಮ ವಾತ್ಸಲ್ಯಾಮೃತವನ್ನು ವರ್ಷಿಸಿ, ಅವರಲ್ಲಡಗಿರುವ ಶಕ್ತಿಸಾಮರ್ಥ್ಯಗಳನ್ನು ಕಂಡುಕೊಂಡು, ಅವುಗಳನ್ನು ಬಯಲಿಗೆಳೆದು, ಆದರೆ ತಮ್ಮ ವಿದ್ವತ್ತಿನ ಭಾರದಿಂದ ಶಿಷ್ಯರು ಮುಚ್ಚಿ ಹೋಗದಂತೆ ಮಾಡಿ, ತಮ್ಮನ್ನು ಹಿಂದಿಟ್ಟು

---

1. Merchant of Venice ೫, ೧-೯೧

ಕೊಂಡು ಶಿಷ್ಯರಿಗೆ ಪ್ರೋತ್ಸಾಹಕೊಡುವುದರಲ್ಲಿ ಶ್ರೀಮಾನ್ ಕೃಷ್ಣಶಾಸ್ತ್ರಿಗಳು ಎತ್ತಿದ ಕೈ. ಹಸುತಿಂದ ಹಿಂಡಿ ಹುಲ್ಲು ಇವೆಲ್ಲ ಹಾಲಾಗುವಂತೆ, ಹತ್ತು ಕೈಗಳ ದುಡಿತವೆಲ್ಲ ಒಂದು ಸಂಸಾರದ ಉದ್ಧಾರಕ್ಕೆ ಬಂದೊದಗುವಂತೆ, ಕನ್ನಡಿಗರು ಕಲಿತ ವಿದ್ಯೆಯೆಲ್ಲ-ಅದು ಯಾವ ಭಾಷೆಯ ಮೂಲಕವೇ ಆಗಲಿ-ಕನ್ನಡವಾಗಿ ಕನ್ನಡಿಗರ ಉದ್ಧಾರಕ್ಕೆ ಮೀಸಲಾಗಬೇಕೆಂದು ದೃಢವಾಗಿ ನಂಬಿರತಕ್ಕವರು ಇವರು. 'ಕನ್ನಡಿಗರೇ, ನಿಮ್ಮ ಕನ್ನಡವನ್ನು ಇಂಡಿಯ ದೇಶವ ದಕ್ಷಿಣ ಭಾಗದಲ್ಲಿ ಒಂದು ಅಂಗೈ ಅಗಲ ಬಿಟ್ಟರೆ ಮತ್ತೆಲ್ಲಿಯೂ ನೋಡಲಾರಿರಿ. ನೀವು ಅದನ್ನು ಅಲಕ್ಷ್ಯಮಾಡಿದರೆ ಮಿಕ್ಕ ಯಾವ ಜನರೂ ಅದನ್ನು ಎತ್ತಿಹಿಡಿಯಲಾರರು'[2] ಎಂದು ಮುಚ್ಚುಮರೆಯಿಲ್ಲದೆ ಉದ್ಘೋಷಿಸುವ ಕೆಚ್ಚೆದೆಯ ಕನ್ನಡಿಗರು. 'ಸಂಸ್ಕೃತದಲ್ಲಿ ಸಾರವತ್ತಾದದ್ದೆಲ್ಲ ಕನ್ನಡದಲ್ಲಿ ಒದಗಿದರೆ ಸಂಸ್ಕೃತ ಬದುಕುತ್ತದೆ, ಕನ್ನಡ ಬೆಳೆಯುತ್ತದೆ.'[3] ಎಂಬುದೇ ಇವರು ಯಾವಾಗಲೂ ಜಪಿಸುತ್ತಿರುವ ಮಂತ್ರ ಸಂಸ್ಕೃತ, ಕನ್ನಡ, ಇಂಗ್ಲಿಷ್ ಭಾಷೆಗಳಲ್ಲಿ ಇವರಿಗಿರುವ ಉದ್ದಾಮ ಪಾಂಡಿತ್ಯವೂ, ತೆಲುಗು ತಮಿಳು ಬಂಗಾಳಿ ಭಾಷೆಗಳಲ್ಲಿ ಇವರಿಗಿರುವ ಸಲುಗೆಯೂ ಕನ್ನಡಿಗರಿಗೆ ಉತ್ತಮೋತ್ತಮವಾದ ಫಲಗಳನ್ನೇ ಕೊಟ್ಟಿದೆ.[4] ಸುಲಭವಾಗಿ ಬೇರೆಯ ದಿಕ್ಕಿನಲ್ಲಿ ಹರಿಯಬಹುದಾಗಿದ್ದ ಇವರ ಶಕ್ತಿಸಾಮರ್ಥ್ಯಗಳು ತಾಯ್ನುಡಿಯ ಸೇವೆಗೆ ಮೀಸಲಾದದ್ದು ಕನ್ನಡಿಗರ ಪುಣ್ಯ.

೨

ಇಪ್ಪತ್ತೈದು ವರ್ಷಗಳ ಹಿಂದೆ ಮೊದಲಬಾರಿ ನಾನು ವಿಶ್ವವಿದ್ಯಾನಿಲಯದ ಮೆಟ್ಟಿಲನ್ನು ಮೆಟ್ಟಿ, ಬೆಂಗಳೂರಿನ ಅತ್ಯಂತ ದೊಡ್ಡ ವಿದ್ಯಾಸಂಸ್ಥೆಯಾದ ಇಂಟರ್ ಮೀಡಿಯೆಟ್ ಕಾಲೇಜನ್ನು ಸೇರಿದಾಗ ಶ್ರೀಮಾನ್ ಕೃಷ್ಣಶಾಸ್ತ್ರಿಗಳ ಅಡಿದಾವರೆಯಲ್ಲಿ ಕುಳಿತು 'ನಾಗಾನಂದ' 'ಮೃಚ್ಛಕಟಿಕ' ನಾಟಕಗಳನ್ನು ವ್ಯಾಸಂಗಮಾಡುವ ಭಾಗ್ಯ ನನಗೆ ದೊರೆಕಿತು. ನನ್ನ ಬಾಳಿನಲ್ಲಿ ಈ ಅವಕಾಶವನ್ನು ನಾನು ಒಂದು ಸುಯೋಗವೆಂದು ಭಾವಿಸುತ್ತೇನೆ.

ತುಂಬು ಪಾಂಡಿತ್ಯ, ಅಪೂರ್ವ ಬೋಧನಾಸಾಮರ್ಥ್ಯಗಳು ಉತ್ತಮ ಗುರುವಿನಲ್ಲಿರಬೇಕಾದ ಪ್ರಧಾನಗುಣಗಳಾದರೂ ಶಿಷ್ಯವಾತ್ಸಲ್ಯ ಈ ಎರಡು ಗುಣಗಳೊಂದಿಗೆ ಬೆರೆದಿರಬೇಕು. ಈ ಗುಣಗಳು ಶಾಸ್ತ್ರಿಗಳಲ್ಲಿ ಮುಪ್ಪುರಿಗೊಂಡು ಅಪೂರ್ವಕಾಂತಿಯಿಂದ ಶೋಭಿಸುತ್ತಿದ್ದವು. ಶಾಸ್ತ್ರಿಗಳ ತರಗತಿಯೆಂದರೆ ನಡುವೆ ವಿಚ್ಛಿತ್ತಿಯಿಲ್ಲದ

---

2. ಭಾಷಣಗಳು ಮತ್ತು ಲೇಖನಗಳು (ಎರಡನೆಯ ಸಂಸ್ಕರಣ) ಪುಟ ೩೪

3. ಅದೇ. ಪುಟ ೨೦೦

4. ಸಂಸ್ಕೃತ ಸಾಹಿತ್ಯದ ಮೇಲೆ ಇವರು ಬರೆದಿರುವ ಗ್ರಂಥಗಳಲ್ಲದೆ ಕುರಳ್ ಗ್ರಂಥದ ಹತ್ತು ಪದ್ಯಗಳ ಅನುವಾದ, ಬಂಗಾಳಿಯ ಇವರ ಅನುವಾದಗಳು ಇವನ್ನು ಇಲ್ಲಿ ನೆನೆಯಬಹುದು.

ಐವತ್ತೈದು ನಿಮಿಷಗಳು. ಒಮ್ಮೊಮ್ಮೆ ಅವರ ತರಗತಿಯಲ್ಲಿ ಕಾಲಕಳೆದದ್ದೇ ನಮಗೆ ಅರಿವಾಗುತ್ತಿರಲಿಲ್ಲ. ಶಾಸ್ತ್ರಿಗಳು ತರಗತಿಯಲ್ಲಿ ಕೋಪಿಸಿಕೊಂಡಿದ್ದನ್ನು ನಾನು ಎಂದೂ ಕಾಣೆ. ವಿದ್ಯಾರ್ಥಿಗಳ ಮೇಲೆ ಕೋಪಿಸಿಕೊಳ್ಳುವುದರಲ್ಲಿ ಇವರಿಗೆ ನಂಬಿಕೆ ಸಾಲದು. ಪ್ರಸನ್ನಗಂಭೀರ ಮುಖಮುದ್ರೆಯಿಂದ ವೇದಿಕೆಯ ಮೇಲೆ ಇವರು ಪಾಠ ಹೇಳಲು ನಿಂತರೆ ವಿದ್ಯಾರ್ಥಿಗಳ ದೃಷ್ಟಿಗಳೆಲ್ಲ ಇವರತ್ತಲೇ ಕೇಂದ್ರೀಕೃತವಾಗು ತ್ತಿದ್ದವು. ಪಾಠ ಹೇಳಲು ಎತ್ತಿಕೊಂಡ ವಿಷಯವನ್ನು ಹತ್ತಾರು ದೃಷ್ಟಿಗಳಿಂದ ಪರಿಶೀಲಿಸುತ್ತಿದ್ದುದು ಇವರ ಬೋಧನೆಯ ಒಂದು ವೈಶಿಷ್ಟ್ಯ. ಪಾಠದ ನಡುವೆ ಒಂದು ಕಥೆಯನ್ನೋ ಇಲ್ಲವೆ ವಿಲಕ್ಷಣವಾದ ಒಂದು ಹೋಲಿಕೆಯನ್ನೋ ಕೊಟ್ಟು ಇವರು ವಿದ್ಯಾರ್ಥಿಗಳನ್ನು ರಂಜಿಸುತ್ತಿದ್ದರು. ಸಂಸ್ಕೃತ ನಾಟಕಗಳ ಮೇಲೆ ಇವರ ಒಂದೊಂದು ಉಪನ್ಯಾಸವೂ ಒಂದೊಂದು ರಸದೂಟ. ಅವುಗಳ ಸವಿಯನ್ನು ಸವಿದು ಮುಗ್ಧನಾಗದವನಾರು? 'ನಾಗಾನಂದ ನಾಟಕ'ದಲ್ಲಿ ಹಾವುಗಳನ್ನು ಆಹಾರಕೊಳ್ಳಲು ಬರುವ ಗರುಡಗಮನವನ್ನು ವಿವರಿಸುವ ಪದ್ಯವನ್ನೂ, ಮೃಚ್ಛಕಟಿಕನಾಟಕದಲ್ಲಿ ಮೊದಲ ಅಂಕದಲ್ಲಿ ಬರುವ ಚಂದ್ರೋದಯದ ವರ್ಣನೆಯ ಪದ್ಯವನ್ನೂ ಇವರು ವಿವರಿಸಿದ ರೀತಿಯನ್ನು ನಾನು ಇಂದಿಗೂ ಮರೆತಿಲ್ಲ. ಆಗ ನಡುಹರಯದ ಮಲ್ಲತನದ ಮೈಕಟ್ಟಿನ ಈ ಶಾಸ್ತ್ರಿಗಳನ್ನು ಕಂಡರೆ ನಮಗೆಲ್ಲ ಭಯ, ಭಕ್ತಿ, ಗೌರವ.

ಶ್ರೀಯವರ ಸ್ಫೂರ್ತಿದಾಯಕವಾದ ವಾಗ್ವೈಖರಿ, ಶ್ರೀ ವಿ. ಸೀ ಅವರ ವಚೋ ವಿಲಾಸ ಮತ್ತು ಶ್ರೀ ಎ. ಆರ್. ಕೃ ಅವರ ತುಂಬುಪಾಂಡಿತ್ಯದ ಪ್ರವಚನ-ಈ ತ್ರಿವೇಣೀ ಸಂಗಮದ ಸೆಳೆತ ನನ್ನ ಮನಸ್ಸನ್ನು ಕನ್ನಡದ ಕಡೆಗೆ ತಿರುಗಿಸಿ ನನ್ನನ್ನು ಮೈಸೂರಿಗೆ ಕರತಂದಿತು. ಅಂದಿನಿಂದ ಇಂದಿನವರೆಗೂ ನನಗೆ ಶ್ರೀ ಶಾಸ್ತ್ರಿಗಳ ಸಂತ ತವೂ ಆಪ್ತವೂ ಆದ ಪರಿಚಯವುಂಟಾಗಿದೆ. ಇದು ನನ್ನ ಭಾಗ್ಯವಿಶೇಷ; ಪುಣ್ಯ.

ತುಂಬು ಪಾಂಡಿತ್ಯ, ಅಪೂರ್ವ ಬೋಧನಾಶಕ್ತಿಯೊಂದಿಗೆ ಶಿಷ್ಯವಾತ್ಸಲ್ಯವೂ ಹಿರಿಯಗುರುವಿನಲ್ಲಿರಬೇಕಾದ ದೊಡ್ಡ ಗುಣ. ಈ ಶಿಷ್ಯವಾತ್ಸಲ್ಯ ನಮ್ಮ ಪ್ರಿಯ ಗುರುಗಳಲ್ಲಿ ಅಪಾರವಾಗಿದೆಯೆಂಬುದನ್ನು ತೋರಿಸಲು ನನ್ನ ಅನುಭವಕ್ಕೆ ಬಂದ ಒಂದೆರಡು ಸಂಗತಿಗಳನ್ನು ನಿವೇದಿಸುತ್ತೇನೆ. ಶ್ರೀ ಶಾಸ್ತ್ರಿಗಳಿಗೆ ಸಂಸ್ಕೃತ ಅಲಂ ಕಾರ ಶಾಸ್ತ್ರದಲ್ಲಿ ಅಸಾಧಾರಣವಾದ ಪಾಂಡಿತ್ಯವುಂಟೆಂಬುದನ್ನು ಈಗ ಕನ್ನಡ ಲೋಕವೇ ಬಲ್ಲುದು. ಸಾವಿರ ವರ್ಷಕ್ಕೂ ಮಿಕ್ಕು ಬೆಳೆದು ಬಂದಿರುವ ಆ ಶಾಸ್ತ್ರದ ಗ್ರಂಥಗಳಲ್ಲಿ ಆನಂದವರ್ಧನನ 'ಧ್ವನ್ಯಾಲೋಕ' ಅಪೂರ್ವವೂ ಲೋಕೋತ್ತರವೂ ಆದ ಗ್ರಂಥವೆಂದು ವಿದ್ವಾಂಸರ ಅಭಿಪ್ರಾಯ. ಆ ಉದ್ಗ್ರಂಥವನ್ನು ಕನ್ನಡಕ್ಕೆ ತರಬೇಕೆಂಬುದು ಶಾಸ್ತ್ರಿಗಳ ಆಸೆ. ನನ್ನ ಪ್ರಿಯಮಿತ್ರರಾದ ಡಾ. ಕೃಷ್ಣಮೂರ್ತಿಗಳಿಗೆ ಬೊಂಬಾಯಿ ವಿಶ್ವವಿದ್ಯಾನಿಲಯದಿಂದ ಪಿ. ಎಚ್‌ಡಿ ಪ್ರಶಸ್ತಿ ಬಂದಾಗ ಅವರನ್ನು ಕರೆದು ಶಾಸ್ತ್ರಿಗಳು 'ಕೃಷ್ಣಮೂರ್ತಿ, ಧ್ವನ್ಯಾಲೋಕವನ್ನು ಕನ್ನಡಿಸಿ. ಆ ಕಾರ್ಯ ವೆಸಗಲು ನೀವೇ ಸಮರ್ಥರು. 'ಪ್ರಬುದ್ಧ ಕರ್ಣಾಟಕ'ದಲ್ಲಿ ಇದನ್ನು ಅಚ್ಚುಮಾಡಿ

ಸೋಣ. ಹಣಸಾಲದಾದರೆ ನಾನು ಕೊಡುತ್ತೇನೆ. ಇದನ್ನು ನಾನೇ ಕನ್ನಡಿಸ ಬೇಕೆಂದಿದ್ದೆ. ಆದರೆ ಆ ಬಯಕೆ ಇಂದಿನವರೆಗೂ ಸಫಲವಾಗಲಿಲ್ಲ. ಎಲ್ಲ ಕಟ್ಟು ಗಳನ್ನೂ ಕಳಚಿಕೊಂಡು ನಿರಾಳವಾಗಿ ಕುಳಿತಿರುವ ನಾನು ಅದನ್ನು ಕನ್ನಡಿಸಿ ಯಾವ ಪುರುಷಾರ್ಥವನ್ನು ಸಾಧಿಸಲಿ? ನೀವಾದರೆ ತರುಣರು; ಮುಂದೆ ಬರತಕ್ಕವರು.' ಎಂದು ಪ್ರೋತ್ಸಾಹಿಸಿದರು. ಆ ಪ್ರೋತ್ಸಾಹದ ಫಲ 'ಕನ್ನಡ ಧ್ವನ್ಯಾಲೋಕ' ಆದರೆ ಆ ಪ್ರೋತ್ಸಾಹ ಅಷ್ಟಕ್ಕೇ ನಿಲ್ಲಲಿಲ್ಲ. ಈ ವಿಷಯದಲ್ಲಿ ನನ್ನ ಮಿತ್ರರಿಗೆ ಅವರು ಸಲಹೆಗಳನ್ನು ನೀಡಿದರು. ಅನುವಾದಕಾರ್ಯ ವಿಳಂಬವಾಗದಂತೆ ಲೇಖಕರ ಬೆನ್ನು ತಟ್ಟಿದರು. ಅವನೊಡನೆ ಉದ್ದಕ್ಕೂ ಅಚ್ಚಿನ ಕರಡುಗಳನ್ನು ತಿದ್ದಿದರು. ಒಮ್ಮೆ ಕರಡುಪ್ರತಿಗಳನ್ನು ಸರಿನೋಡಿ ಮನೆಯಿಂದ ಬೇಸಿಗೆಯ ಉರಿಬಿಸಿಲಿನಲ್ಲಿ ನಮ್ಮ ಕಾಲೇಜಿಗೆ ನಡೆದು ಬಂದು ಅದನ್ನು ಕೊಟ್ಟುಹೋದುದನ್ನು ನಾನು ಮರೆಯ ಲಾರೆ. ಶಿಷ್ಯವಾತ್ಸಲ್ಯ ಆವರನ್ನು ಉರಿಬಿಸಿಲಲ್ಲಿ ನಡೆದುಬರುವಂತೆ ಮಾಡಿತು. ಆದರೆ ಅವರ ಶ್ರಮವನ್ನು ನೋಡಿ ನನಗೆ ಮನಮರುಗಿತು. 'ಇದೇಕೆ ಇಷ್ಟುಶ್ರಮ ನಿಮಗೆ? ನಾನೇ ಬರುತ್ತಿದ್ದೆನಲ್ಲ!' ಎಂದು ಕೇಳಿದ್ದಕ್ಕೆ ಅವರು 'ಅಂದಂದಿನ ಕೆಲಸ ಅಂದಂದೇ ನಡೆಯಬೇಕು. ನನ್ನಿಂದ ಅಚ್ಚು ನಿಲ್ಲಬಾರದು' ಎಂದು ಸಮಾಧಾನ ಹೇಳಿದರು. ಆ ಬಳಿಕ ಅವರು ತಮ್ಮ ಔದಾರ್ಯಕ್ಕೆ ಕಳಶವಿಟ್ಟಂತೆ ನನ್ನ ಮಿತ್ರರ ಗ್ರಂಥಕ್ಕೆ ಮುನ್ನುಡಿಯನ್ನು ಅನುಗ್ರಹಿಸಿ ಹರಸಿದರು. ನಮ್ಮ ಪ್ರಿಯಗುರುಗಳನ್ನು ಕಂಡಿದ್ದರೆ 'ಬೋದ್ಧಾರೋ ಮತ್ಸರಗ್ರಸ್ತಾಃ' ಎಂಬ ವಾಕ್ಯವನ್ನು ಭರ್ತೃಹರಿ ಬರೆಯುತ್ತಿರ ಲಿಲ್ಲವೆಂದು ತೋರುತ್ತದೆ!

ಹೀಗೆಯೇ ನಮ್ಮ ವಿಶ್ವವಿದ್ಯಾನಿಲಯದಲ್ಲಿ 'ವಿದ್ಯಾರ್ಥಿ ಕವಿ ಸಮ್ಮೇಳನ' ವನ್ನು ಮೊದಲಬಾರಿ ಏರ್ಪಡಿಸಿ ತರುಣ ಕವಿಗಳಿಗೆ ಪ್ರೋತ್ಸಾಹಕೊಟ್ಟ ಕೀರ್ತಿ ಶ್ರೀ ಶಾಸ್ತ್ರಿಗಳಿಗೇ ಸಲ್ಲುತ್ತದೆ. ನನ್ನಮಟ್ಟಿಗೆ ಹೇಳಬಹುದಾದರೆ ನಾನು ವಿದ್ಯಾರ್ಥಿ ಯಾಗಿದ್ದಾಗ ಬರೆದ ಲೇಖನವೊಂದನ್ನು ತಾವು ಸಂಪಾದಕರಾಗಿದ್ದ 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ'ಯಲ್ಲಿ ಪ್ರಕಟಿಸಿ ಕೊಟ್ಟ ಪ್ರೋತ್ಸಾಹವನ್ನು ನಾನೆಂದಿಗೂ ಮರೆಯಲಾರೆ. ಹೀಗೆ ದೊಡ್ಡವರಿಂದ ಹಿಡಿದು ಕಿರಿಯರವರೆಗೆ ಶ್ರೀ ಶಾಸ್ತ್ರಿಗಳಿಂದ ಒಂದಲ್ಲ ಒಂದು ರೀತಿ ಪ್ರೋತ್ಸಾಹಪಡೆದವರು ಎಷ್ಟುಮಂದಿಯೋ!

ಮೊದಲಬಾರಿ ಶ್ರೀ ಶಾಸ್ತ್ರಿಗಳನ್ನು ಕಂಡವರಿಗೆ ಅವರ ಸ್ವಭಾವದಲ್ಲಿ ಸ್ವಲ್ಪ ಒರಟುತನ ಬೆರೆತಿದೆಯೆಂದು ತೋರಬಹುದು. ಆದರೆ ಇದು ತಪ್ಪು ಅಭಿಪ್ರಾಯ. ಇವರ ಮಾತು ಅಂಬಿನಂತೆ ನೇರವಾಗಿ ಬಂದೆರಗುವುದರಿಂದ ಜನರಿಗೆ ಮೇಲೆ ಹೇಳಿ ದಂತೆ ಇವರ ಸ್ವಭಾವ ಭಾಸವಾಗಬಹುದು. ಆದರೆ ಇವರ ಮಾತು 'ಅಧರಕ್ಕೆ ಕಹಿ. ಉದರಕ್ಕೆ ಸಿಹಿ.' 'ಶ್ರೀಮಾನ್ ಶಾಸ್ತ್ರಿಗಳು ಖಂಡಿತವಾದಿಗಳು ...ಲೋಕವಿರೋಧಕ್ಕೆ ಹೆದರಿ ಸತ್ಯಕ್ಕೆ ಚ್ಯುತಿತರುವುದು ಅವರ ಚೇತನಕ್ಕೆ ಆಗದ ಮಾತು.' ಆದರೆ ಅವರ ಪರಿಚಯ ಬೆಳೆದಂತೆ, ವಿಶ್ವಾಸ ಹೆಚ್ಚಿದಂತೆ ಅವರ ಹೃದಯ ಎಷ್ಟು ಆರ್ದ್ರವಾದುದೆಂದು

ನಮಗೆ ಅರಿವಾಗುವುದು. ವಿದ್ಯಾರ್ಥಿಗಳಿಗಂತೂ ಅವರು ಮಾರ್ಗದರ್ಶಕ, ರಕ್ಷಕ ಮತ್ತು ತಂದೆ. ಒಮ್ಮೆ ಪರೀಕ್ಷೆ ಕಟ್ಟಲು ಬಡವಿದ್ಯಾರ್ಥಿಯೊಬ್ಬನಿಗೆ ಕೊಟ್ಟಿದ್ದ ತೂಕ ವಾದ ಮೊತ್ತವನ್ನು ಆತನು ಹಿಂದಿರುಗಿಕೊಡಲು ಬಂದಾಗ 'ಇದನ್ನು ನೀನು ನನಗೆ ಹಿಂದಿರುಗಿಸಬೇಕಾಗಿಲ್ಲ. ದೇವರು ಈ ವಿಷಯದಲ್ಲಿ ನನಗೆ ಯಾವ ಕೊರತೆಯನ್ನೂ ಉಂಟುಮಾಡಿಲ್ಲ. ಬಡವಿದ್ಯಾರ್ಥಿಯೊರ್ವನಿಗೆ ನೀನು ಇದನ್ನು ಕೊಟ್ಟರೆ ನನಗೆ ಈ ಹಣ ಸಂದಂತಾಗುತ್ತದೆ.' ಎಂದರಂತೆ! ಮಲ್ಲತನದ ಮೈಕಟ್ಟಿನ ಶ್ರೀ ಶಾಸ್ತ್ರಿಗಳು ಸಾಹಿತ್ಯಪಾಠ ಹೇಳುವಾಗ ಅನೇಕವೇಳೆ ಕಣ್ಣೀರು ಕರೆದಿರುವರೆಂದರೆ ಯಾರಿಗೆ ತಾನೆ ಆಶ್ಚರ್ಯವಾಗದು! ಮಹಾಭಾರತದಲ್ಲಿ ಬರುವ ಸಾವಿತ್ರಿಯ ಕಥೆಯನ್ನು ಸಂಗ್ರಹ ವಾಗಿ ಬರೆದು ಓದಿದಾಗ, ಶಾಕುಂತಳ ನಾಟಕದಲ್ಲಿ ಬರುವ 'ಅಮಿಾ ವೇದಿಂ ಪರಿತಃ....' ಎಂಬ ಪದ್ಯವನ್ನು ವಿವರಿಸಿದಾಗ ಇವರು ಗಳಗಳನೆ ಅತ್ತುದನ್ನು ಕಂಡು 'ಹೀಗೂ ಉಂಟೇ' ಎಂದು ನಾನು ಆಶ್ಚರ್ಯಪಟ್ಟಿದ್ದೇನೆ. ಒಟ್ಟಿನಲ್ಲಿ ಶ್ರೀ ಶಾಸ್ತ್ರಿಗಳ ಶಿಷ್ಯರೆನಿಸಿದವರು ತಾವು ಬಾಳಿನಲ್ಲಿ ಯಾವುದೋ ಒಂದು ಅಪೂರ್ವವಾದ ಭಾಗ್ಯ ವನ್ನು ಪಡೆದೆವೆಂದು ಹೆಮ್ಮೆಪಟ್ಟುಕೊಳ್ಳುವರೆಂದು ನನ್ನ ದೃಢವಾದ ನಂಬಿಕೆ.

೩

ಶ್ರೀಮಾನ್ ಕೃಷ್ಣಶಾಸ್ತ್ರಿಗಳಿಂದ ಕನ್ನಡ ಸಾಹಿತ್ಯಕ್ಕೆ ಸಂದಿರುವ ಸೇವೆಯನ್ನು ಕುರಿತು ಇಲ್ಲಿ ನಾಲ್ಕಾರು ಮಾತುಗಳನ್ನು ಉಲ್ಲೇಖಿಸಿದರೆ ಅದು ಅಪ್ರಕೃತವಾಗಲಾರ ದೆಂದು ತೋರುತ್ತದೆ. ಇವರ ತಾರುಣ್ಯದ ಸಾಹಸದ ಮೊದಲ ಫಲ 'ಪ್ರಬುದ್ಧ ಕರ್ಣಾಟಕ.' ಕವಿಗಳಿಗೆ ಕಾಮಧೇನುವಾಗಿ, ಲೇಖಕರಿಗೆ ಕಲ್ಪವೃಕ್ಷವಾಗಿ, ವಿದ್ವಾಂಸ ರಿಗೂ ಮತ್ತು ಸಹೃದಯರಿಗೂ ಪ್ರಿಯವಾಗಿ, ಸರ್ವಾಂಗ ಸುಂದರವಾಗಿ ಇಂದಿಗೂ ಪ್ರಕಟವಾಗುತ್ತಿರುವ ಕರ್ಣಾಟಕದ ಏಕೈಕ ಪತ್ರಿಕೆಯಾದ 'ಪ್ರಬುದ್ಧ ಕರ್ಣಾಟಕ' ವನ್ನು ಹುಟ್ಟಿಹಾಕಿ ಅದನ್ನು ಬಹುಮುಖವಾಗಿ ಬೆಳೆಸಿದ ಕೀರ್ತಿಯಲ್ಲಿ ಬಹುಭಾಗ ನಮ್ಮ ಗುರುಗಳಿಗೇ ಸಲ್ಲುತ್ತದೆ. ಈ ಪತ್ರಿಕೆ ನಮ್ಮ ಜನರ ಸಾಹಿತ್ಯಾಭಿರುಚಿಯನ್ನು ತಿದ್ದುವುದರಲ್ಲಿ ನಾಡಿಗೆ ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿತು. 'ಪ್ರಬುದ್ಧ ಕರ್ಣಾಟಕ' ವೆಂದರೆ ಇಂದಿಗೂ ಥಟ್ಟನೆ ನಮ್ಮ ಮನಸ್ಸಿನಲ್ಲಿ ಮೂಡುವುದು ಅದರಲ್ಲಿ ಪ್ರಕಟವಾಗುವ ಮೇಲ್ಮಟ್ಟದ ಸಣ್ಣ ಕಥೆ, ವಸ್ತುಕೋಶ ಹಾಗೂ ಸಂಪಾದಕೀಯ. ಲೇಖನಗಳ ಆಯ್ಕೆ ಯಲ್ಲಿ, ಚಿತ್ರಗಳ ಪ್ರಕಟನೆಯಲ್ಲಿ, ಸರಸವಾದ ವಸ್ತುಕೋಶ ಸಂಪಾದಕೀಯಗಳನ್ನು ಬರೆಯುವುದರಲ್ಲಿ ಪತ್ರಿಕೆ ಮೊದಲಾದಾಗ ಇವರು ರೂಪಿಸಿದ ಪತ್ರಿಕೆಯ ನೀತಿ ಇಂದಿಗೂ ಅದನ್ನು ನಡೆಸಿಕೊಂಡು ಬರುತ್ತಿದೆ. 'ಪ್ರಬುದ್ಧ ಕರ್ಣಾಟಕವೆಂದರೆ ಅವರು, ಅವರೆಂದರೆ ಪ್ರಬುದ್ಧ ಕರ್ಣಾಟಕ ಎಂಬಷ್ಟುಮಟ್ಟಿಗೆ ಆಪ್ತವಾದುದು, ಆತ್ಮೀಯವಾದುದು ಅವರ ಬಾಂಧವ್ಯ.' ಎನ್ನುವಷ್ಟರಮಟ್ಟಿಗೆ ಅವರು ಆ ಪತ್ರಿಕೆ ಯನ್ನು ನಡೆಸಿದರು.[5]

---

೫ಪ್ರಬುದ್ಧ ಕರ್ಣಾಟಕ, ಸಂಪುಟ ೨೮, ಸಂಚಿಕೆ ೧—ಸಂಪಾದಕೀಯ.

ಇನ್ನು ಅವರು ರಚಿಸಿರುವ ಗ್ರಂಥಗಳ ವಿಚಾರ. ಈ ಗ್ರಂಥಗಳ ವಿಷಯವನ್ನು ಹೇಳುವುದಕ್ಕೆ ಮುಂಚೆ ಪೀಠಿಕಾರೂಪವಾಗಿ ಒಂದು ಮಾತನ್ನು ಹೇಳಬೇಕು. ಇವರು ಬರೆದಿರುವ ಗ್ರಂಥಗಳ ವಿಷಯ ಸ್ವಲ್ಪ ಹೆಚ್ಚು ಕಡಮೆ ಸಂಸ್ಕೃತ ಸಾಹಿತ್ಯಕ್ಕೆ ಸಂಬಂಧ ಪಟ್ಟದ್ದು. ಕನ್ನಡ ಭಾಷೆಯ ಪರಿಜ್ಞಾನವಿಲ್ಲದೆ ಸಂಸ್ಕೃತವೊಂದನ್ನೇ ನಂಬಿ ಕನ್ನಡ ದಲ್ಲಿ ಗ್ರಂಥಗಳನ್ನು ಬರೆಯ ಹೊರಟರೆ ಅವು ವಿಕಾರವಾಗುತ್ತವೆ. ಸಂಸ್ಕೃತದ ಭದ್ರವಾದ ತಳಹದಿಯಿಲ್ಲದೆ ರಚಿಸಿದ ಕನ್ನಡ ಗ್ರಂಥಗಳು ಬರಡು ಬರಡಾಗಿ ನಿಲ್ಲುತ್ತವೆ. ಈ ಎರಡು ಭಾಷೆಗಳಮೇಲೂ ಅಸಾಧಾರಣವಾದ ಪ್ರಭುತ್ವವನ್ನು ಪಡೆದಿರುವ ಇವರ ಗದ್ಯಶೈಲಿ ಉತ್ತಮ ಕನ್ನಡ ಗದ್ಯಶೈಲಿಗೆ ಉದಾಹರಣೆಯಾಗಿದೆ. ಈ ಶೈಲಿಯಲ್ಲಿ ಸಂಸ್ಕೃತ ಕನ್ನಡ ನುಡಿಗಳ ಹದವಾದ ಪಾಕ ಇಳಿದು ಬಂದಿದೆ. ಈ ಗದ್ಯಶೈಲಿಯಲ್ಲಿ ಅವರು ರಚಿಸಿದ ಮೊದಲ ಗ್ರಂಥವೆಂದರೆ ಮೈಸೂರು ವಿಶ್ವವಿದ್ಯಾನಿಲಯದವರು ಪ್ರಕಟಿಸಿರುವ 'ಕನ್ನಡ ಕೈಪಿಡಿ'ಯ ಮೂರನೆಯ ಭಾಗವಾದ 'ಕಾವ್ಯ ಲಕ್ಷಣ ವಿಭಾಗ.' ಸಂಸ್ಕೃತ ಭಾಷೆಯಲ್ಲಿ ಸುಮಾರು ಒಂದೂವರೆ ಸಾವಿರ ವರ್ಷಗಳ ಕಾಲ ನಡೆದುಬಂದ ಈ ಶಾಸ್ತ್ರದ ಸಮಗ್ರವಾದ ಚಾರಿತ್ರಕವಾದ ನೋಟ ಕನ್ನಡಿಗರಿಗೆ ಮೊದಲು ಇಲ್ಲಿ ದೊರಕುತ್ತದೆ. ಪರಿಮಿತವಾದ ಅವಕಾಶದಲ್ಲಿ ಸಂಗ್ರಹವಾಗಿ ಸಾರ ವತ್ತಾಗಿ ರಚಿಸಿರುವ ಈ ಗ್ರಂಥರಚನೆಗೆ ಶಾಸ್ತ್ರಿಗಳು ಪಟ್ಟಿರುವ ಶ್ರಮವನ್ನು ಊಹಿಸು ವುದೂ ಅಸಾಧ್ಯ. ಮೂವತ್ತು ವರ್ಷಗಳಿಗಿಂತಲೂ ಹಿಂದಿನ ಮಾತು. ಆಗ ಇಂಗ್ಲಿಷಿ ನಲ್ಲಿಯೂ ಈ ಶಾಸ್ತ್ರದ ಮೇಲೆ ವಿಪುಲವಾದ ಲೇಖನಗಳಿರಲಿಲ್ಲ. ಎಷ್ಟೋ ಉದ್ಗ್ರಂಥ ಗಳು ಇನ್ನೂ ಅಚ್ಚಿನ ಮುಖವನ್ನೇ ಕಂಡಿರಲಿಲ್ಲ. ಶ್ರೀಯುತರಾದ ಕಾಣೆ, ಡೇಯವರ ಗ್ರಂಥಗಳೂ ಹೊರಬಿದ್ದಿರಲಿಲ್ಲ. ಇದೂ ಅಲ್ಲದೆ ಅಲಂಕಾರ ಶಾಸ್ತ್ರದಲ್ಲಿ ಒಂದೊಂದು ಪ್ರಸ್ಥಾನಕ್ಕೂ ಮೀಸಲಾಗಿರುವ ಗ್ರಂಥಗಳನ್ನು ಓದಿ ಜೀರ್ಣಿಸಿಕೊಳ್ಳುವುದೇ ಒಂದು ಶ್ರಮಸಾಧ್ಯವಾದ ವಿಷಯ. ಹಾಗೆ ತಿಳಿದುಕೊಂಡ ವಿಷಯವನ್ನು ತಿಳಿಯಾದ ಕನ್ನಡ ದಲ್ಲಿ ಹೇಳಬೇಕು. ಇದರ ಜೊತೆಗೆ ವಿಷಯ ಸಮರ್ಥನೆಗೆ ಅನೇಕ ಪುರಾತನ ಗ್ರಂಥ ಗಳಿಂದ ಉದಾಹರಣೆಗಳನ್ನು ಕಲ್ಪಿಸಬೇಕು. ಹಾಗೆ ಕಲ್ಪಿಸಿದ ಉದಾಹರಣೆಗಳು ಲೇಖಕನ ರಸಿಕತೆಗೆ ಒರೆಗಲ್ಲಿನಂತಿರಬೇಕು. ಒಂದು ಕಲ್ಲು ಹೊಡೆದು ನಾಲ್ಕು ಹಣ್ಣು ಗಳನ್ನು ಕೆಡಹುವಂತೆ ಇವೆಲ್ಲವನ್ನೂ ಶಾಸ್ತ್ರಿಗಳು ತಮಗಿದ್ದ ಅಲ್ಪಾವಕಾಶದಲ್ಲಿ ಸುಸಮರ್ಥವಾಗಿ ಸಾಧಿಸಿರುವರೆಂದ ಮೇಲೆ ಅವರ ಪಾಂಡಿತ್ಯವನ್ನೂ ರಸಿಕತೆಯನ್ನೂ ಕುರಿತು ಮತ್ತೆ ಪ್ರಸ್ತಾಪಿಸುವುದು ಅನವಶ್ಯಕ. ಅವರು ಸಂಕಲ್ಪಿಸಿದ್ದ 'ಸಂಸ್ಕೃತ ಅಲಂಕಾರ ಶಾಸ್ತ್ರದ ಚರಿತ್ರೆ' ಪೂರ್ಣವಾಗಿದ್ದಿದ್ದರೆ ಅದು ಎಂಥ ಜೇನುಣಿಸಾಗುತ್ತಿದ್ದಿ ತೆಂಬುದನ್ನು ಮತ್ತೆ ಹೇಳಬೇಕಾಗಿಲ್ಲ ಹಾಗಾಗದದು ಕನ್ನಡಿಗರ ದುರದೃಷ್ಟ.

'ಭಾಸಕವಿ' ಮತ್ತು 'ಸಂಸ್ಕೃತನಾಟಕ' ಗಳೆಂಬ ಎರಡು ಗ್ರಂಥಗಳು ವಿಮರ್ಶೆಯ ರಸಗಟ್ಟಿಗಳು. ಆ ಗ್ರಂಥಗಳ ಹಿರಿಮೆಯನ್ನು ನನ್ನ ಮಾತುಗಳ ಮೂಲಕ ಹೇಳುವುದಕ್ಕಿಂತ ಕೆಲವು ಸೂಕ್ತಿಗಳಿಂದ ಮಾಡಿಕೊಡುವುದೇ ಮೇಲು. ಭಾಸನ

'ಪಂಚರಾತ್ರ' ಒಮ್ಮೆ ನಮಗೆ ಪಠ್ಯಪುಸ್ತಕವಾಗಿತ್ತು. ಅದರ ಮೇಲೆ ವಿಮರ್ಶೆಯ ಗ್ರಂಥವೊಂದನ್ನು ಸೂಚಿಸಬೇಕೆಂದು ನನ್ನ ಪ್ರಿಯಗುರುಗಳಾದ ಶ್ರೀ ಟಿ. ಎಸ್. ವೆಂಕಣ್ಣಯ್ಯನವರನ್ನು ಕೇಳಿದಾಗ, ಆ ಸುದೀರ್ಘವ್ಯಕ್ತಿ ನಸುಬಾಗಿದ ತಲೆಯನ್ನು ಮೇಲಕ್ಕೆತ್ತಿ ನನ್ನ ಕೈಗೆ ಆಗ ತಾನೆ ಪ್ರಕಟವಾಗಿದ್ದ 'ಭಾಸಕವಿ' ಯನ್ನು ಕೊಟ್ಟು 'ಇದು ನಮ್ಮ ಕೃಷ್ಣ ಬರೆದ ಪುಸ್ತಕ. ಚೆನ್ನಾಗಿ ರಟ್ಟು ಕಟ್ಟಿ ಇದನ್ನು ಓದು. ಇಂಥ ಪುಸ್ತಕ ಇಂಗ್ಲಿಷಿನಲ್ಲಿಯೂ ಇಲ್ಲ. ಇದನ್ನು ಇಂಗ್ಲಿಷಿಗೆ ಭಾಷಾಂತರ ಮಾಡಿದರೆ ಮಿಕ್ಕ ಸಾಹಿತ್ಯ ಪ್ರೇಮಿಗಳಿಗೂ ಉಪಕಾರವಾಗುತ್ತದೆ.' ಎಂದು ಹೇಳಿದ್ದು ನನಗೆ ಇನ್ನೂ ನೆನಪಿನಲ್ಲಿದೆ. ಇದು 'ಭಾಸಕವಿ' ಯ ಮತ್ತೊಂದು ವಿಮರ್ಶೆ. 'ಕನ್ನಡದಲ್ಲಿ ಕವಿ ವಿಮರ್ಶೆಗಳ ಅತ್ಯಂತಾಭಾವವಿದ್ದ ಕಾಲದಲ್ಲಿ ಉತ್ತಮ ವಿಮರ್ಶೆಗಳನ್ನು ಬರೆದು ಮುಂದಿನವರಿಗೆಲ್ಲ ಮಾರ್ಗದರ್ಶಿಗಳಾದ ಕೀರ್ತಿಯು ಶ್ರೀ ಕೃಷ್ಣಶಾಸ್ತ್ರಿಗಳವರದು .ಅಸ್ಖಲಿತವಾದ ಪಾಂಡಿತ್ಯದೊಡನೆ ಅಪಾರವಾದ ಪ್ರತಿಭೆಯೂ, ಬಹುಶ್ರುತತ್ವದೊಂದಿಗೆ ರಸಿಕತೆಯೂ, ಸಹೃದಯತ್ವದೊಂದಿಗೆ ರಸಮಯವಾದ ಭಾಷಾರಚನ ಪಾಟವವೂ ಒಂದೇ ಎಡೆಯಲ್ಲಿ ಸಮರಸವಾಗಿ ಸಮ್ಮಿಳಿತವಾಗುವುದು ಉತ್ತಮ ವಿಮರ್ಶೆಯ ರಚನೆಗೆ ಎಷ್ಟು ಅಗತ್ಯವೋ ಅಷ್ಟೇ ಅಪೂರ್ವ. ಆದರೆ ಈ ಎಲ್ಲ ಗುಣಗಳೂ ಕೃಷ್ಣಶಾಸ್ತ್ರಿಗಳ ಬರೆವಣಿಗೆಯಲ್ಲಿ ಸುಂದರವಾದ ಪರಿಪಾಕವನ್ನು ಪಡೆದಿರುವುದರಿಂದ ಅವರ ವಿಮರ್ಶೆಯು ಕೇವಲ ವಿಮರ್ಶೆಯಾಗಿಯೇ ಉಳಿಯದೆ ಸಾಹಿತ್ಯದ ಸೂನ್ನತ.ಸೋಪಾನವನ್ನೇರುತ್ತದೆ....ಸ್ವಪ್ನವಾಸವದತ್ತ, ಪ್ರತಿಮಾನಾಟಕ ಪಂಚರಾತ್ರ ಈ ಮೂರು ನಾಟಕಗಳ ವಿಮರ್ಶೆಗಳೂ ಮೂರು ರತ್ನಗಳಿದ್ದಂತೆ.'[6]

'ಸಂಸ್ಕೃತನಾಟಕ' ಒಂದು ದಶಕದ ಅಖಂಡ ವ್ಯಾಸಂಗದ ಫಲ. ಈ ಗ್ರಂಥವನ್ನು ಕುರಿತು ಶ್ರೀಯವರು ಮಾಡಿರುವ ಪ್ರಶಂಸೆ ಇದು. 'ಈ ವಿಷಯಕ್ಕೆ ಸಂಬಂಧಪಟ್ಟ ಅನೇಕ ಗ್ರಂಥಗಳನ್ನೂ ವಿದ್ವತ್ ಪತ್ರಿಕೆಗಳಲ್ಲಿ ಚೆದರಿರತಕ್ಕ ಅಸಂಖ್ಯಾತ ಲೇಖನಗಳನ್ನೂ ಪರಿಶೀಲಿಸಿ, ಸಂಸ್ಕೃತ ನಾಟಕಗಳನ್ನೆಲ್ಲಾ ಪರಾಮರ್ಶಿಸಿದ ತಮ್ಮ ಸ್ವಂತ ಅನುಭವವನ್ನು ನೇರಿಸಿ, ಈ ಸಣ್ಣ ಪುಸ್ತಕದಿಂದ, ಕನ್ನಡದಲ್ಲಿ ಮೊದಲನೆಯ ಸಾರಿ, ಭಾರತೀಯ ಸಾಹಿತ್ಯನಾಯಕರತ್ನದಂತಿರುವ ಒಂದು ಭಾಗದ ವಿಚಾರವಾಗಿ ಜ್ಞಾನಪ್ರಸಾರಣೆಗೆ ಅನುಕೂಲಮಾಡಿದ್ದಾರೆ.'[7] ಈ ಗ್ರಂಥವನ್ನೋದಿ ತೃಪ್ತಿಗೊಂಡ ಗುರುವರ್ಯ ಪ್ರೊ. ಹಿರಿಯಣ್ಣನವರ ಸಂತೋಷ ಇದರ ವಿಷಯವಾಗಿ ಈ ರೀತಿ ವ್ಯಕ್ತಗೊಂಡಿದೆ. 'It is, in my opinion, a most valuable publication. I can hardly think of a work even in English-let alone Indian languages-which gives in such a brief compass so clear, comprehensive and reliable an account of the subject or

[6] ಪ್ರಬುದ್ಧ ಕರ್ಣಾಟಕ, ಸಂಪುಟ ೩೨, ಸಂಚಿಕೆ ೩, ಪುಟ ೧೦೮.
[7] ಸಂಸ್ಕೃತ ನಾಟಕದ ಮುನ್ನುಡಿ.

utilises so fully the results of modern research concerning it. I trust that these features of the book as well as the decerning estimates, which it contains, of the artistic value of the chief sanskrit plays will be widely appreciated.'

ಶ್ರೀಮಾನ್ ಕೃಷ್ಣಶಾಸ್ತ್ರಿಗಳು ಅಧ್ಯಾಪಕವೃತ್ತಿಯಿಂದ ನಿವೃತ್ತರಾದರೂ, ತಮ್ಮ ಬರವಣಿಗೆಯ ಕೆಲಸವನ್ನು ನಿಲ್ಲಿಸಲಿಲ್ಲ. ಅದು ಅವರ ವಿಶ್ರಾಂತಿ ಕಾಲದಲ್ಲಿಯೂ ಅವ್ಯಾಹತವಾಗಿ ಸಾಗಿ ಬಂದು, ಸಂಸ್ಕೃತ ಸಾಹಿತ್ಯದ ಎರಡು ಬೃಹದ್ಗ್ರಂಥಗಳು 'ವಚನಭಾರತ' 'ಕಥಾಮೃತ' ಗಳೆಂಬ ಹೆಸರನ್ನು ತಳೆದು ಬರಲು ಅನುಕೂಲವಾಯಿತು. ಭಾರತದ ಮಹತ್ತು ಬೃಹತ್ತುಗಳನ್ನು ಗಮನಿಸಿದರೆ ಅದನ್ನು ಕನ್ನಡದಲ್ಲಿ ಭಟ್ಟಿಯಿಳಿಸುವುದು ಎಂಥ ಶ್ರಮಸಾಧ್ಯವಾದ ಕೆಲಸವೆನ್ನುವುದು ಸುವ್ಯಕ್ತವಾಗುತ್ತದೆ. 'ಶ್ರೀಮಾನ್ ಕೃಷ್ಣಶಾಸ್ತ್ರಿಗಳು ಕೇವಲ ಲೋಕಕಾರುಣ್ಯ ದೃಷ್ಟಿಯಿಂದಲೇ ಪ್ರೇರಿತರಾಗಿ ವ್ಯಾಸಭಾರತದ ಹದಿನೆಂಟು ಪರ್ವಗಳ ಕಥೆಯನ್ನು ತಿಳಿಯಾದ ಆದರೆ ಬಿಗಿಯಾದ ಕನ್ನಡದಲ್ಲಿ ಗೆರೆ ಕೊಯ್ದಂತೆ ಆರು[8] ತಿಂಗಳಲ್ಲಿಯೇ ಅಪೂರ್ವವಾಗಿಯೇ ಸಂಗ್ರಹಿಸಿರುವರೆಂಬುದನ್ನು ನೆನೆದಾಗ ಆಶ್ಚರ್ಯವೆನಿಸುತ್ತದೆ. ಇದು ಆಶ್ಚರ್ಯದ ವಿಷಯವಲ್ಲದೆ ಮತ್ತೇನು? ಲಕ್ಷ ಶ್ಲೋಕಗಳನ್ನುಳ್ಳ ಸಂಸ್ಕೃತ ಮಹಾಭಾರತವನ್ನು ಉತ್ತರ ದಕ್ಷಿಣ ಪಾಠಗಳೊಡನೆ ಜೀರ್ಣಿಸಿಕೊಂಡು, ಕ್ಷೇಮೇಂದ್ರನ ಭಾರತಮಂಜರಿ ಕನ್ನಡ ಭಾರತಗಳು ಇವುಗಳನ್ನು ಮನನಮಾಡಿ, ಈ ಸಾಹಿತ್ಯಕ್ಕೆ ಸಂಬಂಧಿಸಿದ ನಾನಾಗ್ರಂಥಗಳನ್ನು ಓದಿ ಸಂಸ್ಕೃತಭಾರತದ ಸ್ವರೂಪ ಅದರ ಕಾವ್ಯಗುಣ ದರ್ಶನ ಬೋಧೆ ಇವೇ ಮೊದಲಾದ ಬಹು ವಿಷಯಗಳನ್ನೊಳಗೊಂಡ ವಿದ್ವತ್ ಪೂರ್ಣವಾದ ಮುನ್ನುಡಿಯಿಂದ ಕೂಡಿದ ಗ್ರಂಥವನ್ನು ಆರು ತಿಂಗಳಲ್ಲೇ ಬರೆದುದು ಆಶ್ಚರ್ಯಕರವಾದ ವಿಷಯವೂ ಹೌದು; ಪ್ರಶಂಸನೀಯವಾದ ವಿಷಯವೂ ಹೌದು. ಲೇಖಕರ ಅರವತ್ತು ವರ್ಷಗಳ ಸಾರಸ್ವತ ತಪಸ್ಸು ಆರು ತಿಂಗಳಲ್ಲಿ ವಚನ ಭಾರತದಲ್ಲಿ ಫಲಿಸಿ ಬಂದಿದೆ. ಹೊಸಗನ್ನಡ ಗದ್ಯಕ್ಕೆ ಮಕುಟಪ್ರಾಯವಾಗಿ, ಈಗಿನ ಮತ್ತು ಮುಂದಿನ ಲೇಖಕವರ್ಗಕ್ಕೆ ಆದರ್ಶಪ್ರಾಯವಾಗಿ ಈ ಗ್ರಂಥ ನಿಲ್ಲುತ್ತದೆ.'[9]

'ವಾಲ್ಮೀಕಿರಾಮಾಯಣ, ವ್ಯಾಸಭಾರತ ಮತ್ತು ಗುಣಾಢ್ಯನ ಬೃಹತ್ಕಥೆ ಈ ಮೂರು ಗ್ರಂಥಗಳೂ ಸಂಸ್ಕೃತ ಮತ್ತು ದೇಶಭಾಷೆಗಳಲ್ಲಿ ಕಾವ್ಯನಾಟಕಗಳನ್ನು ರಚಿಸಬೇಕೆಂದಿರುವ ಕವಿಗಳಿಗೆ ವಸ್ತುವನ್ನು ಒದಗಿಸಿಕೊಡುವ ವಿಷಯದಲ್ಲಿ ಕೊರೆಬೀಳದ ಗಣಿಗಳು; ಕವಿಗಳ ಕಾಮಧೇನುಗಳು ಇವು. ಹತ್ತಾರು ಶತಮಾನಗಳಿಂದ ಬೆಳೆದು

---

[8] ವಚನಭಾರತವನ್ನು ಬರೆಯಲು ಪ್ರಾರಂಭಿಸಿದ್ದು ೨೪–೧೨–೧೯೪೮; ಮುಗಿಸಿದ್ದು ೨೫–೬–೪೯.

[9] ಪ್ರಬುದ್ಧಕರ್ಣಾಟಕ, ಸಂ ೩೨, ಸಂಚಿಕೆ ೧, ಕನ್ನಡ ಮಹಾಭಾರತಗಳು.

ಬಂದು ನಾನಾ ವಿಷಯಗಳನ್ನು ಒಳಗೊಂಡು ಭಾರತೀಯ ಜೀವನ ಮತ್ತು ಸಂಸ್ಕೃತಿಗಳನ್ನು ಪ್ರತಿಬಿಂಬಿಸುವ ಗ್ರಂಥಗಳು ಇವು. ರಾಮಾಯಣ ಮಹಾಭಾರತಗಳು ಸಂಸ್ಕೃತಭಾಷೆಯಲ್ಲಿವೆ. ಬೃಹತ್ಕಥೆ ಪೈಶಾಚೀಭಾಷೆಯಲ್ಲಿದೆ. ಈ ಪೈಶಾಚೀಭಾಷೆ 'ಕಾಶ್ಮೀರದ ಸುತ್ತಿನ ಜನರಲ್ಲಿದ್ದ ಪ್ರಾಕೃತಭಾಷೆ.' 'ಬೃಹತ್ಕಥೆ' ಎಂದರೆ ದೊಡ್ಡಕಥೆಯೆಂದರ್ಥ. ಈ ದೊಡ್ಡಗ್ರಂಥವನ್ನು ಗುಣಾಢ್ಯನೆಂಬ ಕವಿ ರಚನೆಮಾಡಿದನು.

'ದೇಶಭಾಷೆಗಳಿಗೆ ಪ್ರಾಶಸ್ತ್ಯವಿದ್ದಕಾಲದಲ್ಲಿ ಗುಣಾಢ್ಯನು ಪ್ರಚುರದಲ್ಲಿದ್ದ ಕಥೆಗಳನ್ನೆಲ್ಲ ಸಂಗ್ರಹಿಸಿ ಅದ್ಭುತವೂ ರಮ್ಯವೂ ಆದ ಕಥಾಕೋಶವನ್ನು ರಚಿಸಿದನು. ಗುಣಾಢ್ಯನ ಬೃಹತ್ಕಥೆ ಈಗ ನಷ್ಟವಾಗಿದೆ. ಗುಣಾಢ್ಯನ ಗ್ರಂಥದಲ್ಲಿದ್ದ ವತ್ಸರಾಜನ ಕಥೆಗಳೇ ಮೊದಲಾದುವು ತುಂಬ ಜನಪ್ರಿಯವಾಗಿದ್ದುವು. ಅವಂತಿದೇಶದ ಗ್ರಾಮವೃದ್ಧರು ಉದಯನ ಕಥಾಕೋವಿದರಾಗಿದ್ದರಂತೆ! ಬುದ್ಧಮಹಾವೀರರ ಕಾಲಕಳೆದು ಹೋಗಿ ಸಂಸ್ಕೃತಭಾಷೆಗೆ ಮತ್ತೊಮ್ಮೆ ಪ್ರಾಶಸ್ತ್ಯಬಂದಾಗ ಬೃಹತ್ಕಥೆಗೆ ಮುಗ್ಧರಾದ ಕವಿಗಳು ಅದು ನಷ್ಟವಾಗಲು ಅವಕಾಶಕೊಡದೆ ಸಂಸ್ಕೃತಭಾಷೆಯಲ್ಲಿ ಅದನ್ನು ಬರೆದಿಟ್ಟರು. ಬುಧಸ್ವಾಮಿಯ ಬೃಹತ್ಕಥೆಯ ಶ್ಲೋಕಸಂಗ್ರಹ, ಕ್ಷೇಮೇಂದ್ರನ 'ಬೃಹತ್ಕಥಾಮಂಜರೀ' ಮತ್ತು ಸೋಮದೇವನ 'ಕಥಾಸರಿತ್ಸಾಗರ' ಇವು ಈ ತೆರನಾದ ಗ್ರಂಥಗಳು. 'ಕಥಾಮೃತ' ಸೋಮದೇವನ ಕಥಾಸರಿತ್ಸಾಗರದ ಕನ್ನಡದ ಅನುವಾದ.

'ಈ ಗ್ರಂಥದ ಪ್ರಕಟನೆ ಯಾರನ್ನಾದರೂ ಮೆಚ್ಚಿಸಿ ತಲೆತೂಗಿಸುವಂಥದು. ರಕ್ಷಾಕವಚದ ವಿಷಯದಲ್ಲಿ, ಮುದ್ರಣದ ವಿಷಯದಲ್ಲಿ, ಚಿತ್ರಗಳ ಆಯ್ಕೆಯಲ್ಲಿ, ಹೆಚ್ಚೇನು ಗ್ರಂಥಸಂಗ್ರಹದ ವಿಷಯದಲ್ಲಿ ಲೇಖಕರ ಒಂದು ದೀರ್ಘಜೀವನದ, ಸಾಹಿತ್ಯ ತಪಸ್ಸಿನ ಸಂಸ್ಕಾರ ಅಭಿರುಚಿಗಳು ವ್ಯಕ್ತವಾಗಿವೆ.'[10]

ಈಗಾಗಲೇ ದೀರ್ಘವಾಗಿರುವ ಈ ಭಾಗವನ್ನು ಇನ್ನೆರಡು ಮಾತುಗಳನ್ನು ಬರೆದು ಮುಕ್ತಾಯಗೊಳಿಸಬಹುದು. ಅದು ಅವರ ಗದ್ಯಶೈಲಿಯನ್ನು ಕುರಿತದ್ದು. ಈ ವಿಷಯದ ವಿಸ್ತಾರವಾದ ಪ್ರತಿಪಾದನೆಗೆ ಇದು ಸ್ಥಳವಲ್ಲ. ಶಾಸ್ತ್ರಿಗಳ 'ಮಾತು ಸರಳ; ಆದರೆ ಹರಿತ. ಭಾವದ ಭಾರವಿದ್ದರೂ ಬಳಕುವ ಅವರ ಶೈಲಿ ತನ್ನದೇ ಒಂದು ವೈಶಿಷ್ಟ್ಯದಿಂದ ಕಂಗೊಳಿಸುತ್ತದೆ.' ಅವರು 'ಹೇಳುವ ರೀತಿಯಲ್ಲಿ ಸುತ್ತಿಲ್ಲ, ಬಳಸಿಲ್ಲ. ಆಡುವ ಮಾತುಗಳಲ್ಲಿ ಮುಚ್ಚಿಲ್ಲ ಮರೆಯಿಲ್ಲ. ನೇರವಾದ ಮಾತುಗಳು, ನಿಷ್ಕಲ್ಮಷಹೃದಯ; ಭಾವಪೂರ್ಣವಾದ ಮಾತುಗಳು. ಆದರೂ ನಿರಾಭರಣ ಸುಂದರಿಯಂತಿರುವ ಶೈಲಿ.' ಶ್ರೀಯುತರ ಬರವಣಿಗೆ ಎಷ್ಟು ಸರಳವಾದುದೋ ಅದನ್ನು ಹೇಳುವ ರೀತಿ ಅಷ್ಟೇ ವಿಲಕ್ಷಣವಾದುದು. ಅವರು ಕೊಡುವ ಹೋಲಿಕೆಗಳು ಹೇಳುವ ವಿಷಯವನ್ನು ಕಣ್ಣಿಗೆ ಕಟ್ಟುವಂತೆ ಮಾಡುತ್ತವೆ. ಸೂತ್ರಪ್ರಾಯ

---

[10] ಪುಸ್ತಕ ಪ್ರಪಂಚ ಸಂಪುಟ ೬, ಸಂಚಿಕೆ ೯, ಪುಸ್ತಕ ವಿಮರ್ಶೆಯ ಭಾಗ,

ವಾದ ಅವರ ವಾಕ್ಯಗಳು ಸಮಗ್ರಗ್ರಂಥದ ಟೀಕೆಯಂತಿರುತ್ತವೆ. 'ಅಳುವ ಕಣ್ಣಿನಲ್ಲಿ ಬೆಳಗುವ ಹೃದಯವು ಪ್ರತಿಫಲಿಸಿದೆ.' ಎಂಬ ಟೀಕೆ ಪ್ರತಿಮಾನಾಟಕಕ್ಕೆ ಎಷ್ಟು ಉಚಿತವಾಗಿದೆ! ಪಂಚರಾತ್ರ 'ಸ್ತ್ರೀಪಾತ್ರವೇ ಇಲ್ಲದ ಗಂಡುನಾಟಕ!' 'ಮದುವೆಗಳು ಇಷ್ಟು ಚಿಟಕಿಚಪ್ಪರವಾಗಿಬಿಟ್ಟರೆ ಹೆಣ್ಣು ಹೆತ್ತವರು ಬದುಕಿಕೊಂಡಾರು! ಆದರೆ ಇದು ನಡೆಯುವುದು ನಾಟಕದಲ್ಲಿ ಮಾತ್ರ; ವಿಶೇಷವಾಗಿ ಭಾಸನ ಪೌರೋಹಿತ್ಯದಲ್ಲಿ ಮಾತ್ರ'—ಪದ್ಮಾವತಿಯ ಮದುವೆಯ ವರ್ಣನೆಯ ರೀತಿ ಇದು. 'ತಂದೆಯನ್ನು ನೋಡಿದರೆ ಜನಕ, ಗಂಡನನ್ನು ನೋಡಿದರೆ ರಾಮ; ಮಕ್ಕಳು ಆಣಿಮುತ್ತಿನಂಥ ಅವಳಿಜವಳಿಗಳು; ಆದರೆ ಸೀತೆಯ ಪಾಲಿಗೆ ಬಂದದ್ದೇನು?—ಕಾಡು, ದೂರು, ದುಃಖ.' ಈ ವಿಮರ್ಶೆ ಸೀತೆಯ ಸಮಗ್ರಜೀವನದ ಟೀಕೆ. ಇಂತಹ ಸೂತ್ರಪ್ರಾಯವಾದ ಮಾತುಗಳು ಅವರ ಗ್ರಂಥಗಳಲ್ಲಿ ತಾನೇ ತಾನು! ಕಿರಿದರಲ್ಲಿ ಹಿರಿಯ ಅರ್ಥವನ್ನು ತುಂಬುವ ಅವರ ಸತ್ವಯುತವಾದ ಬರೆಹವನ್ನು ನೆನೆದಾಗ 'ಶ್ರೀ ಶಾಸ್ತ್ರಿಗಳು ಸಾರಸ್ವತ ಸಾಮ್ರಾಜ್ಯದಲ್ಲಿ ಕೃತಕೃತ್ಯರು ಎನ್ನಿಸುತ್ತದೆ.'

ಮೇಲಿನ ವಿವರಣೆಯಿಂದ ಶ್ರೀ ಶಾಸ್ತ್ರಿಗಳ ಬರವಣಿಗೆಯೆಲ್ಲ ಸಂಸ್ಕೃತವಾಙ್ಮಯದ ಸಾರವತ್ತಾದ ಭಾಗವನ್ನು ಕನ್ನಡಕ್ಕೆ ತರುವುದಕ್ಕಾಗಿಯೇ ಮೀಸಲಾಗಿದೆಯೆಂದು ಯಾರೂ ಭಾವಿಸಲಾಗದು. ಶ್ರೀ ಶಾಸ್ತ್ರಿಗಳ ಬರವಣಿಗೆಯಲ್ಲಿ ಈ ಅಂಶ ಪ್ರಧಾನವಾಗಿ ಎದ್ದುಕಂಡರೂ ಅವರು ಕನ್ನಡ ಕವಿಗಳನ್ನು ಸಂಪೂರ್ಣವಾಗಿ ಮರೆತಿಲ್ಲ. ಜನಪ್ರಿಯನಾದ ಸರ್ವಜ್ಞನನ್ನು ಅವರು ಜನಸಾಮಾನ್ಯರಿಗೆ ಪರಿಚಯಮಾಡಿಕೊಟ್ಟಿದ್ದಾರೆ. ರಾಘವಾಂಕನ ಗ್ರಂಥಗಳಲ್ಲಿ ಅತ್ಯಂತ ಶ್ರೇಷ್ಠವಾದ 'ಹರಿಶ್ಚಂದ್ರ ಕಾವ್ಯ'ಕ್ಕೆ ಸಾರವತ್ತಾದ ಪೀಠಿಕೆಯನ್ನು ಬರೆದಿದ್ದಾರೆ. ರನ್ನಕವಿಪ್ರಶಸ್ತಿಯಲ್ಲಿ ಬಂದಿರುವ 'ರನ್ನನ ರಸಪ್ರತಿಪಾದನೆ' ಎಂಬ ಇವರ ಲೇಖನ ನಿರ್ದಾಕ್ಷಿಣ್ಯವೂ, ನಿಷ್ಪಕ್ಷಪಾತವೂ, ಆದುದೆಂದು ಬಲ್ಲವರ ಅಭಿಪ್ರಾಯ. ಸಾಹಿತ್ಯಪರಿಷತ್ತಿನ ಅಧ್ಯಕ್ಷಪೀಠದಿಂದ ಮಾಡಿದ ಭಾಷಣದಿಂದಲೂ, 'ಪ್ರಬುದ್ಧಕರ್ಣಾಟಕ' ದಲ್ಲಿ ಅವರು ಆಗಾಗ ಬರೆದಿರುವ ಸಂಪಾದಕೀಯಗಳಿಂದಲೂ ಅವರ ಕನ್ನಡದ ಅಭಿಮಾನ ಎಂಥದೆಂಬುದು ಸುಸ್ಪಷ್ಟವಾಗುತ್ತದೆ. ಕನ್ನಡದ ಹಿತರಕ್ಷಣೆಯಾಗಬೇಕು. ಅದಕ್ಕಾಗಿ ಸತ್ಯವನ್ನು ನುಡಿಯಲೇ ಬೇಕು ಎಂಬುದು ಅವರ ಮತ. ಈ ವಿಷಯಕ್ಕೆ ಸಂಬಂಧಿಸಿದ ಅವರ 'ಭಾಷಣಗಳು ಮತ್ತು ಲೇಖನಗಳು' ಈ ಅಂಶವನ್ನು ಎತ್ತಿ ಹಿಡಿಯುತ್ತವೆ.

೪

ಅರವತ್ತೈದು ವರ್ಷಗಳ ಹಿಂದೆ [11]ಮೈಸೂರು ನಗರದಲ್ಲಿ ಜನ್ಮವೆತ್ತಿದ ಶ್ರೀಮಾನ್ ಅಂಬಳೆ ಕೃಷ್ಣಶಾಸ್ತ್ರಿಗಳು ಕನ್ನಡಸಾಹಿತ್ಯದಲ್ಲಿ ಸಿದ್ಧಿಪಡೆದ ಪುಣ್ಯಪುರುಷರೆಂದು ನನಗೆನಿಸುತ್ತದೆ. ಸುಪ್ರಸಿದ್ಧ ವ್ಯಾಕರಣ ವಿದ್ವಾಂಸರಾದ ತಮ್ಮ ತಂದೆಯ ಬಳಿ ಇವರು ಬಾಲ್ಯದಲ್ಲಿಯೇ ಕನ್ನಡ ಸಂಸ್ಕೃತಭಾಷೆಗಳ ಅಭ್ಯಾಸವನ್ನು ಪ್ರಾರಂಭಿಸಿದರು. ಇವರ ತಂದೆಯವರು ಮಗನಿಗೆ ಅಮರಕೋಶವನ್ನು ಹೇಳಿಕೊಡುವುದಕ್ಕೆ ಬದಲು

ಪಾಣಿನಿಯ ವ್ಯಾಕರಣಸೂತ್ರಗಳನ್ನೇ ಹೇಳಿಕೊಟ್ಟರಂತೆ! ಅಷ್ಟೇ ಅಲ್ಲ; ಮಗನ ಭಾಷಾ ವ್ಯಾಸಂಗಕ್ಕೆ ಸುಭದ್ರವಾದ ತಳಹದಿ ಹಾಕಿದ ತಂದೆ, ಆ ವ್ಯಾಸಂಗಫಲಕೊಡಲು ಅನುಕೂಲವಾಗುವಂತೆ ತಾಯಿಯನ್ನು ಕಳೆದುಕೊಂಡಿದ್ದ ಮಗನ ಮೇಲೆ ತಮ್ಮ ವಾತ್ಸಲ್ಯಾಮೃತವನ್ನೇ ವರ್ಷಿಸಿದರು. ಶಾಸ್ತ್ರಿಗಳಿಗೆ ದೇವರಲ್ಲಿ ಗಾಢವಾದ ನಂಬಿಕೆ. ಆದರೆ ಅದು ಅಂಧಶ್ರದ್ಧೆಯಲ್ಲ; ಹೃದಯಾಂತರಾಳದಿಂದ ಬಂದ ಅಚಲವಾದ ನಂಬಿಕೆ. ಹೀಗೆ ಹೇಳಿದ ಮಾತ್ರದಿಂದ ಅವರು ಪುರುಷಪ್ರಯತ್ನವನ್ನು ಬದಿಗೊತ್ತಿ, ದೈವವನ್ನೇ ನಂಬಿ ಕೈಕಟ್ಟಿಕೊಂಡು ಕುಳಿತವರೆಂದು ಯಾರಾದರೂ ಭಾವಿಸಿದರೆ, ಅದಕ್ಕಿಂತ ಸತ್ಯಕ್ಕೆ ದೂರವಾದ ಅಂಶ ಅವರ ವಿಷಯದಲ್ಲಿ ಮತ್ತೊಂದಿಲ್ಲ. 'ನಮ್ಮ ಅದೃಷ್ಟ ನಮ್ಮ ಕೈಯ್ಯಲ್ಲಿಯೇ; ಮನುಷ್ಯನ ಅದೃಷ್ಟದ ಒಡೆಯ ಮನುಷ್ಯನೇ' ಎಂಬ ಘನವಾದ ತತ್ವವನ್ನು ನಂಬಿ ಅದರಂತೆ ನಡೆದು ಬಾಳಿನ ಹೋರಾಟದಲ್ಲಿ ಜಯಪಡೆದ ಅಸಾಧಾರಣ ವೀರವ್ಯಕ್ತಿ ಶ್ರೀ ಕೃಷ್ಣಶಾಸ್ತ್ರಿಗಳು ಬೇರೆಯ ಕಡೆ ಸುಲಭವಾಗಿಯೇ ಹರಿದು ಜೀವನದ ಯಾವ ಕ್ಷೇತ್ರದಲ್ಲಿಯೇ ಆಗಲಿ ಜಯಪಡೆಯಬಹುದಾಗಿದ್ದ ಇವರ ಸತ್ವ ಕನ್ನಡದ ಕಡೆಗೆ ಹರಿದದ್ದು ಕನ್ನಡಿಗರ ಪುಣ್ಯವೆಂದೇ ಹೇಳಬೇಕು

ವಿಶ್ವವಿದ್ಯಾನಿಲಯದಲ್ಲಿ ಇವರು ತಮ್ಮ ವ್ಯಾಸಂಗವನ್ನು ಮುಂದುವರಿಸಿದಾಗ ಪ್ರೊ. ಹಿರಿಯಣ್ಣ, ಪ್ರೊ ಬಿ ಎಂ. ಶ್ರೀಕಂಠಯ್ಯ-ಇವರೇ ಮೊದಲಾದ ಆಚಾರ್ಯರ ಪ್ರೋತ್ಸಾಹವೂ ಮಾರ್ಗದರ್ಶಿತ್ವವೂ ಇವರಿಗೆ ದೊರಕಿದುವು.[12] ತಂದೆಯ ಬಳಿ, ಮೈಸೂರಿನ ಸಂಸ್ಕೃತ ಮಹಾಪಾಠಶಾಲೆಯಲ್ಲಿ ವಿದ್ವಾಂಸರ ಬಳಿ ಇವರು ಗಳಿಸಿದ ವಿದ್ವತ್ತು ಹೊಸ ವಿಮರ್ಶೆಯ ಬೆಳಕಿನಿಂದ ಪುಷ್ಟಿಗೊಂಡಿತು. 'ಪ್ರಬುದ್ಧ ಕರ್ಣಾಟಕ'ವನ್ನು ಹುಟ್ಟಿಹಾಕಿ ಅದು ಬೆಳೆದು ಫಲಕೊಡುವುದಕ್ಕಾಗಿ ಅವರು ತಮ್ಮ ಸುತ್ತಲೂ ಕಟ್ಟಿಕೊಂಡ ಮಿತ್ರರ ಪಡೆಯಾದರೂ ಎಂಥದ್ದು! ಶ್ರೀ. ಟಿ. ಎಸ್. ವೆಂಕಣ್ಣಯ್ಯ, ಶ್ರೀ. ಎಂ. ಆರ್. ಶ್ರೀನಿವಾಸಮೂರ್ತಿ, ಶ್ರೀ. ಡಿ. ವಿ. ಗುಂಡಪ್ಪ, ಶ್ರೀ ಶ್ರೀನಿವಾಸ, ಶ್ರೀ ಎಸ್.ಜಿ. ಶಾಸ್ತ್ರಿ, ಇವೇ ಮೊದಲಾದ ಮಹನೀಯರ ಹೆಸರುಗಳು

---

[11] ಶ್ರೀಯುತರು ಜನ್ಮವೆತ್ತಿದ್ದು ವಿರೋಧಿ ಸಂವತ್ಸರದ ಮಾಘ ಬಹುಳ ಸಪ್ತಮೀ ಬುಧವಾರ (12-2-1890)

[12] ದಿ. ಶ್ರೀಯವರು ತಾವು ಸರ್ಕಾರೀ ಕೆಲಸದಿಂದ ನಿವೃತ್ತರಾಗುವವರೆಗೂ ವಿಶ್ವವಿದ್ಯಾನಿಲಯದಲ್ಲಿ ಕನ್ನಡದ ಪ್ರೌಢ ತರಗತಿಗಳಿಗೆ ಪಾಠ ಹೇಳುತ್ತಿದ್ದರು. ಹಾಗೆ ಅವರು ಮೈಸೂರಿಗೆ ಪಾಠ ಹೇಳಲು ಬರುವಾಗಲೆಲ್ಲ ಜೀರ್ಣವಾದ ಶಬ್ದಮಣಿದರ್ಪಣದ ಕೈಬರಹದ ಟಿಪ್ಪಣಿಗಳ ಪುಸ್ತಕವೊಂದನ್ನು ತರುತ್ತಿದ್ದರು. ಶ್ರೀ ಕೃಷ್ಣಶಾಸ್ತ್ರಿಗಳು ವಿದ್ಯಾರ್ಥಿಗಳಾಗಿದ್ದಾಗ ಶ್ರೀಯವರು ಹೇಳಿದ ಟಿಪ್ಪಣಿಗಳನ್ನು ಗುರುಗಳಿಗೆ ಮುದ್ದಾದ ಅಕ್ಷರಗಳಲ್ಲಿ ಬರೆದುಕೊಟ್ಟಿದ್ದರು ಆ ಜೀರ್ಣವಾದ ಪುಸ್ತಕವನ್ನು ನಮಗೆಲ್ಲ ತೋರಿಸಿ 'ಕೃಷ್ಣಶಾಸ್ತ್ರಿ ನನಗಾಗಿ ಬರೆದು ಕೊಟ್ಟ ಟಿಪ್ಪಣಿ ಇದು' ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದರು.

ಕನ್ನಡ ಸಾಹಿತ್ಯಚರಿತ್ರೆಯಲ್ಲಿ ರತ್ನದಂತಹ ಹೆಸರುಗಳು! ಮೇಲೆ ಹೇಳಿದ ಮಹನೀಯರು ಕನ್ನಡ ಸಾಹಿತ್ಯವನ್ನು ತಮ್ಮ ಉದ್ದಾಮಕೃತಿಗಳಿಂದ ಬೆಳಸಿ ಖ್ಯಾತಿಗಳಿಸಿದ್ದಾರೆ. ಈ ಗೆಳೆಯರಲ್ಲದೆ 'ಪ್ರಬುದ್ಧಕರ್ಣಾಟಕ' ಹೊರಟ ತರುಣದಲ್ಲಿ ತಮ್ಮ ಸುತ್ತಲೂ ಎಂತಹ ಸುಸಮರ್ಥರೂ ದಕ್ಷರೂ ಆದ ಶಿಷ್ಯವೃಂದದ ನೆರವಿದ್ದಿತೆಂಬುದನ್ನು ಶ್ರೀ ಶಾಸ್ತ್ರಿಗಳೇ ತಮ್ಮ ಲೇಖನವೊಂದರಲ್ಲಿ ಹೆಮ್ಮೆಯಿಂದ ಸ್ಮರಿಸಿಕೊಂಡಿದ್ದಾರೆ. ಈ ಶಿಷ್ಯರೆಲ್ಲ ಉದಯಪರಂಪರೆಯನ್ನು ಹೊಂದಿ, ಕನ್ನಡವನ್ನು ಮರೆಯದೆ ತಾಯ್ನುಡಿಯಲ್ಲಿ ಉತ್ತಮೋತ್ತಮವಾದ ಕೃತಿರಚನೆಮಾಡಿರುವುದು ನಮ್ಮ ಪ್ರಿಯಗುರುಗಳಿಗೆ ತುಂಬ ತೃಪ್ತಿಯನ್ನು ಉಂಟುಮಾಡಿದೆ.

ಇತರರಲ್ಲಿ ಕಂಡುಬರದ ಕೆಲವು ಅಸಾಧಾರಣಗುಣಗಳಿಂದಲೇ ಶ್ರೀಯುತರು ಜೀವನ ಮತ್ತು ಸಾಹಿತ್ಯ ಕ್ಷೇತ್ರಗಳಲ್ಲಿ ಸಿದ್ಧಿಯನ್ನು ಪಡೆದಿದ್ದಾರೆ. 'ನುಡಿದಂತೆ ನಡೆ' ಎಂಬ ಲೋಕೋಕ್ತಿ ಇವರಲ್ಲಿ 'ನಡೆದಂತೆ ನುಡಿ' ಯಾಗಿದೆ. ಮಾಡಬೇಕೆಂದಿರುವ ಕೆಲಸವನ್ನು ಮನಸ್ಸಿನಲ್ಲಿ ಆಲೋಚಿಸಿ, ಅದರ ಸಾಧಕ ಬಾಧಕಗಳನ್ನು ಚೆನ್ನಾಗಿ ವಿಮರ್ಶೆಮಾಡಿ, ಸದ್ದು ಗದ್ದಲವಿಲ್ಲದೆ ಪರಿಷ್ಕಾರವಾಗಿ ಕೆಲಸ ಮಾಡುವುದೇ ಇವರ ಪದ್ಧತಿ. ಇವರಲ್ಲಿ ಮಾತು ಕಡಮೆ; ಕೆಲಸ ಹೆಚ್ಚು. ತಾವು ಮಾಡಬೇಕಾಗಿದ್ದ ಕೆಲಸಕ್ಕೆ ಇವರು ಮತ್ತೊಬ್ಬರ ಸಹಾಯವನ್ನು ಎಂದೂ ಬಯಸಿದವರಲ್ಲ. ಸರ್ಕಾರದ ವಿಧಿ ನಿಯಮಗಳನ್ನು ಅನುಸರಿಸಿ ವಿಶ್ವವಿದ್ಯಾನಿಲಯದಲ್ಲಿ ಇವರು ನಡೆಸಿದ ಪಾಠಪ್ರವಚನಗಳನ್ನು ಬಿಟ್ಟರೆ ತಾವಾಗಿಯೇ ಮೇಲೆ ಬಿದ್ದು ಇವರು ಹೊರಗಡೆ ಉಪನ್ಯಾಸಗಳನ್ನು ಮಾಡಿದುದೇ ವಿರಳ. ಅದಕ್ಕೆ ಪ್ರತಿಯಾಗಿ ಹೆಸರಿಗೆ ಆಸೆ ಪಡದೆ ಎಲೆಯ ಮರೆಯ ಕಾಯಿಯಂತಿದ್ದ ದೊಡ್ಡ ಹೊರೆಗಳನ್ನು ಹೊತ್ತು ಸಂಘವನ್ನು ಕಟ್ಟಿದರು. ತಾವೂ ಗ್ರಂಥ ರಚನೆ ಮಾಡಿದರು. ವಿದ್ಯಾರ್ಥಿಗಳ ಶಕ್ತಿಸಾಮರ್ಥ್ಯಗಳನ್ನು ಕಂಡುಕೊಂಡು ಅವರನ್ನೂ ಪ್ರೋತ್ಸಾಹಿಸಿದರು. ಮಿತ್ರವರ್ಗದ ಮನ್ನಣೆ ಗೌರವಗಳಿಗೆ ಪಾತ್ರರಾದರು.

ಕನ್ನಡನಾಡಿನಲ್ಲಿ ಅದರಲ್ಲಿಯೂ ವಿಶೇಷವಾಗಿ ಮೈಸೂರಿನಲ್ಲಿ ಈ ಶತಮಾನದ ಆದಿಭಾಗದಲ್ಲಿ ಜನಜೀವನದಲ್ಲಿ ಕನ್ನಡಕ್ಕಿದ್ದ ಪರಿಸ್ಥಿತಿಯನ್ನು ಗಮನಿಸಿದರೆ ಈಗಿನ ಕನ್ನಡದ ಅಭಿವೃದ್ಧಿಯ ವಿಷಯದಲ್ಲಿ ಯಾರಾದರೂ ಹೆಮ್ಮೆ ಪಟ್ಟುಕೊಳ್ಳಬೇಕಾಗಿದೆ. ಈ ಪರಿಸ್ಥಿತಿಗೆ ವಿಶೇಷವಾಗಿ ಶ್ರೀಯವರ ಪ್ರಚಾರಕಾರ್ಯವೇ ಕಾರಣವಾದರೂ ಅವರಿಗೆ ಬೆಂಬಲವಾಗಿ ನಿಂತು ಹತ್ತಾರು ವಿಧಗಳಲ್ಲಿ ಕೆಲಸಮಾಡಿ ಆದರೆ ಹೊರಕ್ಕೆ ಬರದೆ ಕನ್ನಡವನ್ನು ಮೇಲಕ್ಕೆ ತಂದವರು ನಮ್ಮ ಪ್ರಿಯ ಗುರುಗಳು. ಕನ್ನಡ ನಾಡಿನ ಸಂಘಗಳಿಗೆಲ್ಲ ಮಾತೃಪ್ರಾಯವಾದ ಸೆಂಟ್ರಲ್ ಕಾಲೇಜಿನ 'ಕರ್ಣಾಟಕ ಸಂಘ' ವನ್ನು ಸ್ಥಾಪಿಸಿದರು. ಈಗ ಪ್ರೌಢಲೇಖನಗಳನ್ನು ಪ್ರಕಟಿಸುವ ಪತ್ರಿಕೆಯೆಂದರೆ 'ಪ್ರಬುದ್ಧ ಕರ್ಣಾಟಕ' ವೊಂದೇ ಎಂದರೆ ಅದು ಕೇವಲ ಅಭಿಮಾನದ ಮಾತಲ್ಲ. ಸಾಹಿತ್ಯ ಲೇಖನಗಳಲ್ಲದೆ ಶಾಸ್ತ್ರೀಯ ಲೇಖನಗಳನ್ನು ಇವರು ಬರೆಸಿದರು. ಒಂದು ಉಪನ್ಯಾಸ

ವನ್ನು ಕೇಳಲಿ, ಒಂದು ಪ್ರದರ್ಶನವನ್ನು ನೋಡಲಿ, ಬೇರೊಂದುಭಾಷೆಯ ಪತ್ರಿಕೆಯನ್ನು ಓದಲಿ, ಒಂದು ಚಿತ್ರವನ್ನು ಪರಾಮರ್ಶಿಸಲಿ-ಇದೆಲ್ಲದರ ಉಪಯೋಗ ತಮ್ಮ ಪತ್ರಿಕೆಗೆ ಹೇಗಾಗಬೇಕೆಂಬುದೇ ಇವರ ಚಿಂತೆ. ಪತ್ರಿಕೆ ಇವರ ಕಾಲದಲ್ಲಿ ತಡವಾಗಿ ಬರುವುದೆಂದರೇನು? ಲೇಖನಗಳಿಲ್ಲದಿದ್ದಾಗ ತಾವೇ ಒಂದು ಲೇಖನವನ್ನೋ, ಇಲ್ಲವೆ ಕಥೆಯನ್ನೋ ಬರೆದು ಕಾಲಕ್ಕೆ ಸರಿಯಾಗಿ ಅದನ್ನು ತರುತ್ತಿದ್ದುದು ಇವರು ತೊಟ್ಟ ವೀರವ್ರತ. ಇದೂ ಅಲ್ಲದೆ ಕನ್ನಡದಲ್ಲಿ ವಿಮರ್ಶೆಯ ಹೊಸಮಾರ್ಗವನ್ನು ಇವರು ರೂಪಿಸಿದರು. ಒಳ್ಳೆಯ ಮುದ್ರಣ, ಒಳ್ಳೆಯ ವಿಷಯಗಳಿಂದ ಕೂಡಿದ ಗ್ರಂಥಗಳನ್ನು ಸುಲಭಬೆಲೆಗೆ ದೊರಕಿಸಿಕೊಟ್ಟರು. ಶಿಷ್ಯರ ಅಭಿವೃದ್ಧಿಯನ್ನು ಕಣ್ತುಂಬ ನೋಡಿ ಸಂತೋಷಪಟ್ಟರು. ಇದಕ್ಕಿಂತ ಒಬ್ಬ ಮನುಷ್ಯ ಪಡೆಯಬಹುದಾದ ಭಾಗ್ಯವಾದರೂ ಏನು? ಮೂವತ್ತೈದು ವರ್ಷಗಳ ಹಿಂದೆ ಅವರು ಕಟ್ಟಿದ್ದ ಕನಸು ಇಂದು ನನಸಾಗಿದೆ. ಒಂದು ಜೀವನಮಾನದ ಉದ್ದಕ್ಕೂ ಸಾಹಿತ್ಯದ ತಪಸ್ಸನ್ನು ನಡೆಸಿದ ಇವರನ್ನು ಹಿರಿಯರೊಬ್ಬರು ಋಷಿಗಳೆಂದರು. ಹೌದು ; ಶ್ರೀ ಶಾಸ್ತ್ರಿಗಳ ಜೀವನ ಸಂಯಮಯುತವಾದ ಕನ್ನಡದ ವೀರವ್ರತವನ್ನು ತೊಟ್ಟ ಋಷಿಜೀವನ. ಸಂತತವೂ ಆಪ್ತವೂ ಆದ ಪರಿಚಯವನ್ನು ಪಡೆದ ನನಗೆ ಅವರು ಪಾಠ ಹೇಳಿದ ಶಿಷ್ಯವಾತ್ಸಲ್ಯ ಪ್ರಪೂರ್ಣರಾದ ಪ್ರಿಯಗುರುಗಳು. ಕಷ್ಟಕಾಲದಲ್ಲಿ ತಮ್ಮ ಅನುಭವವನ್ನೂ ಆಲೋಚನೆಯನ್ನೂ ಹೇಳಿ ನೆರವನ್ನು ನೀಡಿದ ತಂದೆ. ಈ ಹಿರಿಯಜೀವ ಬಹುಕಾಲ ಬಾಳಿ ತಮ್ಮ ಪರಿಣತ ಪ್ರಜ್ಞೆಯ ಫಲವನ್ನು ಕನ್ನಡಿಗರಿಗೆ ಕೊಡಲು ಅನುಕೂಲವಾಗುವಂತೆ ಇವರಿಗೆ ಆಯುರಾರೋಗ್ಯಗಳನ್ನು ಕೊಡಲೆಂದು ಪರಮಾತ್ಮನಲ್ಲಿ ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತೇನೆ.

ಸಿರಿಗನ್ನಡಂ ಗೆಲ್ಗೆ

**ಎಚ್. ಎಂ. ಶಂಕರನಾರಾಯಣರಾವ್**

# ಕನ್ನಡದ ಸೇನಾನಿ ಶ್ರೀ ಕೃಷ್ಣಶಾಸ್ತ್ರಿಗಳು

ಹಿಂದೆ ಅಮೃತಮಂಥನ ನಡೆದ ಕಾಲದಲ್ಲಿ ವಿಷವನ್ನುಣ್ಣಲು ಶಿವನಿದ್ದ. ಕನ್ನಡ ನವೋದಯದ ಈ ಕಾಲದಲ್ಲಿ ಅದರ ಸ್ಥಾನಮಾನಕ್ಕಾಗಿ ನಡೆಯುತ್ತಿರುವ ಘರ್ಷಣೆಯಲ್ಲಿ ಪ್ರೊ. ಕೃಷ್ಣಶಾಸ್ತ್ರಿಗಳು ಆ ಕೆಲಸವನ್ನು ನಿರ್ವಹಿಸುತ್ತಿದಾರೆ. ' ಜೇನು ನನ್ನನ್ನು ಕಡಿದರೆ ಚಿಂತೆಯಿಲ್ಲ; ನಮ್ಮ ಜನಕ್ಕೆ ಜೇನುತುಪ್ಪ ದೊರಕಿದರೆ ಸರಿ ' ಎಂದು ಪ್ರಾಮಾಣಿಕವಾಗಿ ಜೇನುಗೂಡಿಗೆ ಕೈಯಿಡುವ ವಿರಳ ವೀರರಲ್ಲಿ ಅವರು ಮುಖ್ಯರು.

ರಾಜಾಶ್ರಯದಲ್ಲಿಯೇ ಬೆಳೆದು ಬಂದ ಕನ್ನಡ, ಇಂಗ್ಲಿಷರ ಆಕ್ರಮಣದ ಅನಂತರ ತನ್ನ ಸ್ಥಾನವನ್ನು, ಪ್ರಾಮುಖ್ಯತೆಯನ್ನು ಕಳೆದುಕೊಳ್ಳಬೇಕಾಯಿತು. ಅವರು ವಿಭಜಿಸಿ ಆಳಿದ ನೀತಿಯಿಂದಾಗಿ, ಒಂದು ಭಾಷೆಯನ್ನಾಡುವ ಜನ, ಒಂದು ಸಂಸ್ಕೃತಿಯನ್ನು ಬೆಳೆಸಿಕೊಂಡ ಜನ ಹಲವು ಆಡಳಿತಗಳಲ್ಲಿ ಹರಿದು ಹಂಚಿ ಹೋಗ ಬೇಕಾಯಿತು. ಮುಂಬೈಪ್ರಾಂತದ ಕನ್ನಡಭಾಗ ಮರಾಠಿಗರ ಆಡಳಿತಕ್ಕೆ ಸಿಕ್ಕಿತು; ಮದ್ರಾಸಿನ ಕನ್ನಡ ಜನ ತಮಿಳು ತೆಲುಗರ ಕೈಯ್ಯಲ್ಲಿ ನರಳಬೇಕಾಯಿತು; ಹೈದರಾಬಾದಿನ ಕನ್ನಡ ಉರ್ದುವಿನೆದುರು ತಲೆಬಾಗಿಸಿ ' ಸಲಾಂ ' ಮಾಡ ಬೇಕಾಯಿತು. ' ಕನ್ನಡದ ಕಣ್ಣು ' ಎಂದು ಕವಿಗಳು ಹೊಗಳಿ ಹಾಡಿದ, ಕನ್ನಡ ರತ್ನಸಿಂಹಾಸನದ ನೆಲೆಯಾದ ಮೈಸೂರಿನಲ್ಲಿಯೇ ಕನ್ನಡದ ಸ್ಥಿತಿ ಉತ್ತಮಗೊಳ್ಳಲಿಲ್ಲ.

ಮೈಸೂರಿನಲ್ಲಿ ಕನ್ನಡಿಗರೇ ಆದ ಮಂತ್ರಿಗಳು ಬಂದರು; ಜನಪ್ರಿಯ ಮಂತ್ರಿ ಮಂಡಲಗಳು ಏರ್ಪಟ್ಟವು. ಆದರೆ ಯಾರೊಬ್ಬರೂ ಕನ್ನಡದ ಕುಂದುಕೊರತೆಗಳನ್ನು ವಿಚಾರಿಸಲು ಮುಂದಾಗಲಿಲ್ಲ; ಅದರ ಬಗ್ಗೆ ಅಧಿಕಾರಯುತವಾಗಿ ನಾಲ್ಕು ಒಳ್ಳೆಯ ಮಾತಾಡುವ ಸೌಜನ್ಯ ತೋರಲಿಲ್ಲ. ' ಸಾಹಿತ್ಯಪರಿಷತ್ತಿ ' ನಂತಹ ಸಂಸ್ಥೆಗೆ ಹೋಗಿ ಅಲ್ಲಿ ಹಿಂದಿಯ ಹಿರಿಮೆಯನ್ನು ಹೇಳುವುದು ಮಹಾಗೌರವದ ಕೆಲಸವೆಂದು ಅವರು ತಿಳಿದರು. ಉನ್ನತ ಅಧಿಕಾರದಲ್ಲಿದ್ದು ಅಲ್ಲೊಬ್ಬರು, ಇಲ್ಲೊಬ್ಬರು–ಈಗೊಬ್ಬರು ಆಗೊಬ್ಬರು, ಕನ್ನಡದ ವಿಚಾರವಾಗಿ ಬಾಯಿಬಿಟ್ಟ ದಾಖಲೆಗಳಿದ್ದರೆ—ಅದು ಕನ್ನಡದ ಬಗೆಗೆ ಅವರಿಗಿರುವ ಪ್ರೇಮ, ಗೌರವಗಳಿಂದಲ್ಲ ; ಹಾಗೆ ಮಾತಾಡಬೇಕಾಗಿ ಬಂದ ಸಂದರ್ಭಗಳಿಂದ ಹಾಗೂ ತಮ್ಮ ಸ್ಥಾನಭದ್ರತೆಯ ದೃಷ್ಟಿಯಿಂದ !

ತನ್ನ ತವರಿನಲ್ಲಿಯೇ ಇಂತಹ ಅವಮಾನವನ್ನು ಸಹಿಸಿಕೊಂಡು, ಅತಿ ಸಂದಿಗ್ಧ ವಾದ ಸನ್ನಿವೇಶಗಳನ್ನೂ ದಾಟಿಕೊಂಡು ಕನ್ನಡ ಇಂದು ತಲೆಯೆತ್ತಿನಿಂತಿದೆ; ಜನ ಶಕ್ತಿಯಾಗಿ ಬೆಳೆದಿದೆ. ಜನ ಬೇರೆ ಬೇರೆ ಕಡೆ ಹಂಚಿಹೋಗಿದ್ದರೂ, ನೆರೆಯವರ ಥಾಳಿಗೆ ತಲೆಕೊಡಬೇಕಾಗಿದ್ದರೂ ಕನ್ನಡ ಜನ ತಾವೆಲ್ಲ ಒಂದು ಎಂಬ ಭಾವನೆಯನ್ನು ಬೆಳೆಸಿಕೊಂಡು, ಪೋಷಿಸಿಕೊಂಡು ಬಂದಿದ್ದಾರೆ. ಸಾಹಿತ್ಯ, ಕಲೆಯ ಸೃಷ್ಟಿಯಲ್ಲಿಯೂ

ಕನ್ನಡ ಪಕ್ಕದ ಪ್ರಾಂತಗಳಿಗೆ ಹಿಂದಾಗಲಿಲ್ಲ. ತನ್ನ ಪ್ರಗತಿಗೆ ಎದುರಾದ ಆಡಳಿತ ಶಕ್ತಿಗಳನ್ನೇ ಮೆಟ್ಟನಿಂತ ಕನ್ನಡದ ಈ ಕೆಚ್ಚನ್ನು, ಈ ಪವಾಡವನ್ನು ನಾವು ಸೂಕ್ಷ್ಮ ವಾಗಿ ಅವಲೋಕಿಸಿದರೆ, ಅದು ಹಲವುಬಾಳಿನ ಅಪೂರ್ವ ಪರಿಶ್ರಮದ ಫಲ, ಹಲವರ ಸತತ ಸೇವೆ, ಶ್ರದ್ಧೆ, ತ್ಯಾಗಗಳ ಫಲ ಎಂದು ಗೊತ್ತಾಗುತ್ತದೆ.

ಸ್ವಾರ್ಥವನ್ನು ಮರೆತು, ಕೀರ್ತಿಯನ್ನು ಬಯಸದೆ ಕನ್ನಡದ ಕಾರಣವನ್ನು ಹೀಗೆ ತಪಸ್ಸಾಗಿ ತಿಳಿದು ಅದರ ಮೇಲ್ಮೆಗಾಗಿ ಅಹರ್ನಿಶಿ ದುಡಿದ ಪ್ರಾತಃಸ್ಮರಣೀಯರ ಸಾಲಿನಲ್ಲಿ ಪ್ರೊ. ಕೃಷ್ಣಶಾಸ್ತ್ರಿಗಳ ಸ್ಥಾನ ಅತಿ ಎತ್ತರದ್ದು. ಅವರ ದುಡಿಮೆ ಎಲ್ಲರಿಗೂ ಎದ್ದು ಕಾಣಿಸುವಂಥದಲ್ಲ; ಆದರೆ ಅದರ ಫಲ ಎಲ್ಲರಿಗೂ ವೇದ್ಯವಾದುದು. ಇದು ಶ್ರೀ ಕೃಷ್ಣಶಾಸ್ತ್ರಿಗಳ ವೈಶಿಷ್ಟ್ಯ !

ಇಂದು ಕನ್ನಡ ಸಾಹಿತ್ಯದಲ್ಲಿ ಖ್ಯಾತನಾಮರಾಗಿರುವ ಹಲವು ಕವಿಗಳು, ಲೇಖಕರು ಶ್ರೀ ಕೃಷ್ಣಶಾಸ್ತ್ರಿಗಳ ಬೆಂಬಲದಿಂದ ಮುಂದೆ ಬಂದಿರುವವರು; ಕನ್ನಡದ ಹಿತಕ್ಕೆ ಕೆಲಸ ಮಾಡುತ್ತಿರುವ ಹಲವು ಸಂಘ ಸಂಸ್ಥೆಗಳು ಅವರಿಂದಲೇ ಹುಟ್ಟಿದವು. ವಿಶ್ವವಿದ್ಯಾನಿಲಯದ ಕರ್ಣಾಟಕ ಸಂಘಗಳು, 'ಪ್ರಬುದ್ಧ ಕರ್ಣಾಟಕ' ಪತ್ರಿಕೆ ಅವರ ದುಡಿಮೆಯ ಚಿರಂತನ ಫಲಗಳು. ಹೈದರಾಬಾದ್ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಆರಿಸಿ ಕನ್ನಡ ಜನ ಅವರಿಗೆ ಸಲ್ಲಬೇಕಾದ ಗೌರವವನ್ನು ಸಲ್ಲಿಸುವುದರ ಜೊತೆಗೆ ತಮ್ಮನ್ನೂ ಗೌರವಿಸಿಕೊಂಡಿದಾರೆ. ತಮಗೆ ಅವಕಾಶ ದೊರೆತಾಗಲೆಲ್ಲ ಕನ್ನಡದ ಸ್ಥಾನಮಾನಗಳ ಬಗೆಗೆ ಶ್ರೀ ಕೃಷ್ಣಶಾಸ್ತ್ರಿಗಳು ತಮ್ಮ ವಿಚಾರವನ್ನು–ಕಟು ವಾದರೂ–ಸ್ಪಷ್ಟವಾಗಿ ಮಂಡಿಸುತ್ತಾ ಬಂದಿದಾರೆ. ಆದರೆ ಕನ್ನಡದ ಮನೆಯಲ್ಲಿ ಕನ್ನಡದ ಸ್ಥಾನವನ್ನು ನಿರ್ದೇಶಿಸುವ ಮತ್ತು ಇತರ ಭಾಷೆಗಳ ಸ್ಥಾನವನ್ನು ಔಚಿತ್ಯ ದಿಂದ ವಿವೇಚಿಸುವ ಹೈದರಾಬಾದ್ ಸಾಹಿತ್ಯ ಸಮ್ಮೇಳನದ ಅವರ ಅಧ್ಯಕ್ಷ ಭಾಷಣ ವನ್ನು ಪ್ರತಿಯೊಬ್ಬ ಕನ್ನಡಿಗನೂ ಮನನಮಾಡಬೇಕು. ಶ್ರೀ ಕೃಷ್ಣಶಾಸ್ತ್ರಿಗಳಷ್ಟು ಕಟು ವಾಗಿ, ಖಚಿತವಾಗಿ, ಖಂಡಿತವಾಗಿ ಇನ್ನೊಬ್ಬರು ಭಾಷಾಸಮಸ್ಯೆಯನ್ನು ಪ್ರಸ್ತಾಪಿಸ ಲಿಲ್ಲ. ಅದರ ಫಲವಾಗಿ ಅವರು ಭರ್ತ್ಸನೆಯನ್ನು ಸಹಿಸಿದರು; ಖಂಡನೆಯನ್ನು ತಾಳಿದರು. ಎಂಥ ಸಂದರ್ಭದಲ್ಲೂ ಅವರು ತಮ್ಮ ವಿಚಾರಧಾರೆಯನ್ನು ಮಾತ್ರ ಬಲಿಕೊಡಲಿಲ್ಲ; ಬದಲಿಸಲಿಲ್ಲ.

ಶ್ರೀ ಕೃಷ್ಣಶಾಸ್ತ್ರಿಗಳು ಕಂದಾಚಾರದ ಕನ್ನಡ ಪಂಡಿತರಲ್ಲ; ಅಂತರರಾಷ್ಟ್ರೀಯ ವಿಚಾರಪೂರ್ಣರಾದ ಕನ್ನಡ ಸಾಹಿತಿಗಳು. ಸಂಸ್ಕೃತ ಪಂಡಿತರನ್ನೂ ನಾಚಿಸು ವಂತೆ ಸಂಸ್ಕೃತದಲ್ಲಿ ಪಾಂಡಿತ್ಯವನ್ನು ಸಂಪಾದಿಸಿದವರು; ಇಂಗ್ಲಿಷನ್ನು ಚನ್ನಾಗಿ ಬಲ್ಲವರು; ಹಿಂದಿ ಸಾಹಿತ್ಯದ ಹಿರಿಮೆಯನ್ನು ಹಿಂದಿಯಲ್ಲೇ ತಿಳಿಯುವಷ್ಟು ಹಿಂದಿ ಯನ್ನು ತಿಳಿದವರು. ಇನ್ನೂ ಕೆಲವು ಭಾಷೆಗಳ ಪರಿಚಯವಿದ್ದು ಹಲವು ವರ್ಷ ಶಿಕ್ಷಣರಂಗದಲ್ಲಿ ದುಡಿದು ಅಲ್ಲಿನ ಆಗು ಹೋಗುಗಳನ್ನು ಕಂಡವರು. ಅಲ್ಲಿನ ಆಶೋ ತ್ತರಗಳನ್ನು ಅರಿತವರು. ಆದ್ದರಿಂದ ಅವರು ಭಾಷಾ ಸಮಸ್ಯೆಯ ಬಗ್ಗೆ ಮಾತಾಡಲು

ಯೋಗ್ಯ ಅಧಿಕಾರಿಗಳು; ಶಕ್ತರು. ಲಾಠಿಯಲ್ಲಿ ಎರಡು ಪೆಟ್ಟುತಿಂದು, ಆರು ತಿಂಗಳು ಸೆರೆಮನೆಯಲ್ಲಿದ್ದು ಬಂದವರ ಮಾತಿಗೆ ಮಾತ್ರ ಬೆಲೆಯಿರುವ ಈ ಕಾಲದಲ್ಲಿ ಇಂತಹ ಹಿರಿಯರ ಮಾತು 'ಪಥ್ಯ' ವಾಗುವುದು ಕಷ್ಟ. ಆದರೆ ವಿಚಾರವಂತ ರಾದವರು, ದೇಶದ ಭವಿಷ್ಯದ ಬಗೆಗೆ ಚಿಂತಿಸುವವರು, ತೂಕವುಳ್ಳ, ಬೆಲೆಬಾಳುವ, ಅಮೂಲ್ಯವಾದ ಹಿರಿಯರ ಮಾತಿಗೆ ಗಮನಕೊಡುವುದು ಅಗತ್ಯ ಮತ್ತು ಉಪಯುಕ್ತ. ವಿಚಾರವಾದಿಗಳೂ, ದೂರದರ್ಶಿಗಳೂ ಆದ ಶ್ರೀ ಕೃಷ್ಣಶಾಸ್ತ್ರಿಗಳು ಸುಮಾರು ಹತ್ತು-ಹದಿನೈದು ವರುಷಗಳ ಹಿಂದೆಯೇ ಈ ಭಾಷಾಸಮಸ್ಯೆಯನ್ನು ವಿವರವಾಗಿ ವಿವೇಚಿಸಿರುವುದು ಗಮನಾರ್ಹವಾಗಿದೆ.

ಕನ್ನಡದ ಮಾತು ಬಂದಾಗ ಶ್ರೀ ಕೃಷ್ಣಶಾಸ್ತ್ರಿಗಳು ಕನ್ನಡ ಸಾಹಿತ್ಯವನ್ನು ಪ್ರತಿನಿಧಿಸುವುದು ಮಾತ್ರವಲ್ಲ; ಕನ್ನಡದ ಶಕ್ತಿಯನ್ನೇ ಪ್ರದರ್ಶಿಸುತ್ತಾರೆ!

* * * *

'ಭಾರತೀಯರು, ಇಂಗ್ಲಿಷರು, ಅಮೆರಿಕನರು, ಆಫ್ರಿಕನರು ಎನ್ನುವುದಕ್ಕಿಂತ ನಾವೆಲ್ಲ ಈ ಭೂಮಿತಾಯಿಯ ಮಕ್ಕಳು ಎನ್ನುವುದು–ವಿಶ್ವಭಾವನೆಯು–ಸರ್ವೋತ್ತಮ' ಎಂದು ನಂಬಿದ ಶಾಸ್ತ್ರಿಗಳಿಗೆ 'ಪ್ರತಿಯೊಬ್ಬ ವ್ಯಕ್ತಿಯೂ ವಿಶ್ವಪ್ರಜೆಯಾಗಿ ಕೆಲಸಮಾಡು' ವುದರಲ್ಲಿ ಸಂಶಯವಿದೆ. 'ಪ್ರಪಂಚವನ್ನೇ ಉದ್ಧಾರಮಾಡುತ್ತೇನೆಂದು ಹೊರಡುವುದಕ್ಕಿಂತ ಹೆಚ್ಚಿನ ಅವಿವೇಕ ಇನ್ನೊಂದಿಲ್ಲ' ಎಂಬುದು ಅವರ ಸ್ಪಷ್ಟ ಅಭಿಪ್ರಾಯ. ಕನ್ನಡಿಗರ ಜೀವ ಜೀವಾಳದ ಪ್ರಶ್ನೆಯಾಗಿರುವ ಕನ್ನಡ ಪ್ರಾಂತದ ವಿಚಾರದಲ್ಲಿ ಅವರಿಗೆ ಪೂರ್ಣ ಸಹಾನುಭೂತಿಯಿದೆ. ಕನ್ನಡ ಜನದ ಬಾಳು ಹಸನಾಗುವುದಕ್ಕೆ, ಅವರ ಸಂಸ್ಕೃತಿ ಬಲಿಯುವುದಕ್ಕೆ ಇರುವುದು ಅದೊಂದೇ ಮಾರ್ಗವೆಂದು ಅವರು ತಿಳಿದಿದ್ದಾರೆ. ಕರ್ಣಾಟಕದಿಂದ ಮೈಸೂರು ಬೇರೆಯಾಗಿಯೇ ಉಳಿಯಬೇಕೆನ್ನುವ ಮೈಸೂರಿನ 'ವಿಶಿಷ್ಟತೆ' ಅವರಿಗೆ ಕಂಡು ಬಂದಿಲ್ಲ. ಭಾಷೆಯ ತಳಹದಿಯಮೇಲೆ ಪ್ರಾಂತಗಳ ಪುನರ್ರಚನೆಯಾದರೆ ಭಾರತದ ಬಲಗುಂದುತ್ತದೆಂದು ಅವರಿಗೆ ಭಯವಿಲ್ಲ. ಒಂದು ಕರ್ಣಾಟಕವಾದರೆ ಆಡಳಿತದ ಬಿಗಿ ತಪ್ಪುತ್ತದೆಂಬ ಭೀತಿಯಿಂದ ಅವರು ನಾಲ್ಕು ಕರ್ಣಾಟಕಗಳನ್ನು ಸೂಚಿಸುವುದಿಲ್ಲ. ಕನ್ನಡ ಜನ ಒಂದು; ಕನ್ನಡ ಭಾಷೆ ಒಂದು; ಕನ್ನಡ ಸಂಸ್ಕೃತಿ ಒಂದು—ಕನ್ನಡಕ್ಕೆ ಬೇಕಾಗಿರುವ ಪ್ರಾಂತವೂ ಒಂದೇ. ಅದಕ್ಕೆ ಶಾಸ್ತ್ರಿಗಳ ಬೆಂಬಲವಿದೆ.

'ತನ್ನನ್ನು ತಾನು ಉದ್ಧಾರ ಮಾಡಿಕೊಳ್ಳಬೇಕು; ಆಮೇಲೆ ತನ್ನವರು, ತನ್ನ ನಾಡು, ತನ್ನ ಲೋಕ. ಉದ್ಧಾರ ಕಾರ್ಯವು, ದಾನದಂತೆ ತನ್ನಿಂದ ಆರಂಭವಾಗಬೇಕು; ಆದರೆ ತನ್ನಲ್ಲಿಯೇ ನಿಲ್ಲಬಾರದು, ಮುಗಿಯಬಾರದು. ತಾನು ವಿದ್ಯಾವಂತನಾದರೆ, ಐಶ್ವರ್ಯವಂತನಾದರೆ, ಮತ್ತೊಬ್ಬನಿಗೆ ಹೇಳಿಕೊಡಬಹುದು, ಹಣ ಕೊಡಬಹುದು. ಅಂಥ ವ್ಯಕ್ತಿಗಳು ಒಂದು ಸಾವಿರ ಜನವಾದರೆ ದೇಶ ತಾನೇ ಮೇಲಕ್ಕೆ ಏಳುತ್ತದೆ, ಮುಂದಕ್ಕೆ ಬರುತ್ತದೆ. ಹಾಗಲ್ಲದೆ ದೇಶವನ್ನು ಉದ್ಧಾರ

ಮಾಡುತ್ತೇನೆಂದು ಯಾರಾದರೂ ತನ್ನನ್ನೂ ತನ್ನ ತಾಯಿ ತಂದೆ ಹೆಂಡತಿ ಮಕ್ಕಳನ್ನೂ ಅಲಕ್ಷ್ಯಮಾಡಿದರೆ ಅದು ದೇಶೋದ್ಧಾರವಲ್ಲ, ದೇಶದ್ರೋಹ. ಆದ್ದರಿಂದ ಒಂದು ಊರಿನವರು ತಮ್ಮ ಊರಿನ ಅಭಿಮಾನದಿಂದ ಆ ಊರನ್ನು ಬೆಳೆಸಿಕೊಂಡು ಬಂದರೆ ಅದರಿಂದ ಒಟ್ಟು ದೇಶಕ್ಕೆ ಹಾನಿಯಿಲ್ಲ, ಕ್ಷೇಮವೇ. ಹೀಗೆ ಕನ್ನಡಿಗರಾಗಲಿ, ಆಂಧ್ರರಾಗಲಿ, ತಮಿಳರಾಗಲಿ ತಮ್ಮ ನಾಡಿನ ಅಭಿಮಾನದಿಂದ ಅದನ್ನು ಪುಷ್ಟಿಗೊಳಿಸಬೇಕೆಂದು ಪ್ರಯತ್ನಪಟ್ಟರೆ ಅದು ಸ್ವಾಭಾವಿಕವೂ, ನ್ಯಾಯವೂ ಆಗಿರುವುದಲ್ಲದೆ, ಒಟ್ಟು ದೇಶಕ್ಕೂ ಕ್ಷೇಮವೆ' ಎಂಬುದು ಅವರ ವಾದ.

'ಇಂಗ್ಲಿಷನ್ನು ಅನ್ಯಭಾಷೆಯೆಂದು ಅನಾದರ ಮಾಡುವುದು ರೂಢಿಯಾಗಿದೆ. ಇಂಗ್ಲಿಷಿನಿಂದ ನಮಗೆ ಅಪಕಾರವಾಗಿಲ್ಲ. ಉಪಕಾರವೇ ಆಗಿದೆ; ಅದರಿಂದ ಆಗಬೇಕಾದ ಉಪಕಾರ ಇನ್ನೂ ಬಹಳವಿದೆ' ಎಂದು ಪ್ರಾಮಾಣಿಕವಾಗಿ ಒಪ್ಪುವ ಅವರು 'ಸಂಸ್ಕೃತ ಅನ್ಯಭಾಷೆಯಲ್ಲವೆ? ಇಂಗ್ಲಿಷಿಗೂ ಸಂಸ್ಕೃತಕ್ಕೂ ಇರುವ ನಿಕಟ ಸಂಬಂಧ, ರಕ್ತಸಂಬಂಧ ಕನ್ನಡಕ್ಕೂ ಸಂಸ್ಕೃತಕ್ಕೂ ಇದೆಯೆ?' ಎಂದು ಪ್ರಶ್ನಿಸುತ್ತಾರೆ. ಥೇಮ್ಸ್ ನದಿಯ ನೀರು ಕುಡಿದು ಬಂದು, ತಮ್ಮ ತಾಯಿನುಡಿಯನ್ನು ಮರೆತೋ, ಕಡೆಗಾಣಿಸಿಯೋ ಇಂಗ್ಲಿಷಿಗೆ ತಮ್ಮನ್ನು ಮಾರಿಕೊಂಡವರಿಗೆ ಅವರು ಕೇಳುತ್ತಾರೆ: 'ಇಂಗ್ಲಿಷಿನಲ್ಲಿ ದೊಡ್ಡ ಪ್ರಶಸ್ತಿಪಡೆದು ಕಾಲೇಜಿನಲ್ಲಿ ದೊಡ್ಡ ತರಗತಿಗಳಿಗೆ ಅದನ್ನು ಪಾಠಹೇಳುವ ಕನ್ನಡಿಗ ಉಪಾಧ್ಯಾಯನು ಇಂಗ್ಲಿಷು ಅನ್ಯಭಾಷೆಯಲ್ಲ ಎನ್ನುವುದಕ್ಕಾದೀತೆ?'

ನಮ್ಮ ಶಿಕ್ಷಣದಲ್ಲಿ ಇಂಗ್ಲಿಷಿಗೆ ಸ್ಥಾನವಿರಬೇಕೆಂಬುದು ಶ್ರೀ ಕೃಷ್ಣಶಾಸ್ತ್ರಿಗಳ ಆಶಯ. 'ನಮ್ಮನ್ನು ನಾವು ತಿಳಿದುಕೊಳ್ಳುವುದಕ್ಕೆ ಸಹಾಯಮಾಡಿದ್ದು ಇಂಗ್ಲಿಷು; ನಮ್ಮಲ್ಲಿ ನವ ಚೈತನ್ಯವನ್ನುಂಟುಮಾಡಿದ್ದು ಇಂಗ್ಲಿಷು; ಸ್ವಹಸ್ತ ಪರಹಸ್ತಗಳಿಂದ ನಮ್ಮ ಕಣಜವನ್ನು ತುಂಬುವ ಸಂಪತ್ತು ಉಳ್ಳದ್ದು ಇಂಗ್ಲಿಷು' ಎಂದು ಅವರು ಹೃತ್ಪೂರ್ವಕವಾಗಿ ಅದರ ಮಹತ್ವವನ್ನು ಹೇಳುತ್ತಾರೆ. ಈ ರೀತಿಯಾಗಿ ಅದರ ಹಿರಿಮೆಯಲ್ಲಿ ಅವರಿಗೆ ಗೌರವವಿದ್ದರೂ ಅದು ಶಿಕ್ಷಣ ಮಾಧ್ಯಮವಾಗಿರುವುದು ಅವರಿಗೆ ಸಮ್ಮತವಲ್ಲ. 'ಮಾತೃಭಾಷೆಯ ಮೂಲಕ ಕಲಿತದ್ದೇ ಮೈ ಹತ್ತುವುದು; ಮಾತೃಭಾಷೆಯಲ್ಲಿ ಬರೆದದ್ದೇ ನಿಲ್ಲುವುದು' ಎಂಬ ಶಾಶ್ವತ ಸತ್ಯವನ್ನು ಪ್ರತಿಪಾದಿಸುವ ಶಾಸ್ತ್ರಿಗಳು 'ಪರಭಾಷೆಯಲ್ಲಿ ಯಾರು ಎಷ್ಟು ಪಂಡಿತರಾಗಿ ಏನು ಬರೆಯಲಿ ಅದು ಆ ಸಾಹಿತ್ಯಕ್ಕೆ ಸೇರಿ ಗಣ್ಯವಾದ ಸ್ಥಾನ ಪಡೆಯುತ್ತದೆಯೇ' ಎಂದು ಸಂದೇಹಪಡುತ್ತಾರೆ.

ಇಂಗ್ಲಿಷಿನಲ್ಲಿ ಬರೆದು ಖ್ಯಾತರಾದ ಭಾರತೀಯರ ಪಟ್ಟಿಯನ್ನು ಕೊಟ್ಟು ಅದರ ಹಿರಿಮೆಯನ್ನು ಸ್ಥಾಪಿಸಲು ಪ್ರಯತ್ನಿಸುತ್ತಾ, ತಮ್ಮ ಸ್ಥಾನ ಭದ್ರತೆಗೆ ಹೆಣಗುತ್ತಿರುವ ಇಂಗ್ಲಿಷಿನ ಔರಸಪುತ್ರರು ಶ್ರೀ ಕೃಷ್ಣಶಾಸ್ತ್ರಿಗಳ ಈ ಮಾತನ್ನು ಗಮನಿಸಬೇಕು: 'ರೈಸ್ ಕಿಟೆಲ್, ಫ್ಲೀಟ್ ಮುಂತಾದವರು ಕನ್ನಡವನ್ನು ಚೆನ್ನಾಗಿ ಕಲಿತರು; ಅವರು ಕನ್ನಡದಲ್ಲಿ ಬರೆದದ್ದೇನು? ಬರೆದ ಅಲ್ಪ ಸ್ವಲ್ಪಗಳು ಪ್ರಾಕ್ತನ ವಸ್ತುಸಂಗ್ರಹಶಾಲೆಯಲ್ಲಿ

ಇಡುವುದಕ್ಕೆ ಯೋಗ್ಯವಾದವು. ರವೀಂದ್ರನಾಥ ಠಾಕೂರರು ಇಂಗ್ಲಿಷನ್ನು ಇಂಗ್ಲಿಷರಿಗಿಂತ ಚೆನ್ನಾಗಿ ಬರೆಯಬಲ್ಲ ಶಕ್ತಿಯನ್ನು ಗಳಿಸಿದರು; ನೋಬಲ್ ಬಹುಮಾನ ಬಂತು; ಆದರೆ ಅವರ ಕಾವ್ಯಗಳು ಇಂಗ್ಲಿಷ್ ಸಾಹಿತ್ಯಚರಿತ್ರೆಯಲ್ಲಿ ಸ್ಥಾಯಿಯಾಗಿ ಸ್ಥಾನ ಪಡೆಯುತ್ತವೆಯೇ? ಸರ್ ಎಸ್. ರಾಧಾಕೃಷ್ಣನ್, ಸರ್ ಸಿ. ವಿ. ರಾಮನ್, ಮುಲ್ಲಾ, ಗಂಗಾನಾಥ ಝಾ ಮುಂತಾದ ಮಹನೀಯರ ಶಾಸ್ತ್ರೀಯ ಗ್ರಂಥಗಳು ಅವುಗಳಲ್ಲಿನ ಪ್ರತಿಪಾದ್ಯ ವಿಷಯಕ್ಕಾಗಿ ನಿಲ್ಲಬಹುದು. ಆದರೂ ಅಂಥವರು ಎಷ್ಟು ಮಂದಿ ಇದ್ದಾರು?'

ಹೀಗೆ ಮಾತೃಭಾಷೆಯ ಅಗತ್ಯ, ಪ್ರಾಮುಖ್ಯತೆಗಳನ್ನು ಪ್ರಸ್ತಾಪಿಸಿದ ಮೇಲೆ ಶಾಸ್ತ್ರಿಗಳು ದೇಶಭಾಷೆಯ ವಿಚಾರವಾಗಿ ಹೇಳುತ್ತಾರೆ. 'ಬೇರೊಂದು ಮಾತೃಭಾಷೆಯಾಗಿರುವವನು ಇನ್ನೊಂದು ಪ್ರಾಂತದಲ್ಲಿ ಸನ್ನಿವೇಶಗಳಿಗನುಗುಣವಾಗಿ, ವ್ಯವಹಾರಗಳಿಗೊಳಗಾಗಿ ಇರಬೇಕಾಗಿ ಬಂದಾಗ, ತನಗೆ ನೆಲ-ಜಲದ ಆಶ್ರಯಕೊಟ್ಟ ಆ ಪ್ರಾಂತದ ಭಾಷೆಯನ್ನು ಕಲಿಯುವುದರ ಮೂಲಕ ತನ್ನ ಕೃತಜ್ಞತೆಯನ್ನು ತೋರಿಸಬೇಕಾಗುತ್ತದೆ; ಹಾಗೆ ಮಾಡುವುದು ವ್ಯಾವಹಾರಿಕವಾಗಿ ಅವಶ್ಯಕವೂ ಆಗುತ್ತದೆ. ಆದರೆ ಮಿಕ್ಕ ಭಾಷೆಗಳು ಮನೆಗೆ ಬರುವ ನೆಂಟರು ಇಷ್ಟರ ಹಾಗೆ; ಆದರೆ ಅವರೆಲ್ಲರನ್ನೂ ಮಗನಂತೆ, ಅಳಿಯನಂತೆ ಕಾಣುವುದಕ್ಕಾಗುವುದಿಲ್ಲ' ಎಂಬ ಸುಂದರವಾದ ಹೋಲಿಕೆಯಲ್ಲಿ ಭಾಷೆಗಳ ಸ್ಥಾನವನ್ನು ನಿರ್ಧರಿಸಿದ ಅವರು 'ಮಾತೃಭಾಷೆಗೆ ಮೊದಲನೆ ಸ್ಥಾನ; ದೇಶಭಾಷೆ ಎರಡನೆಯದು; ಇಂಗ್ಲಿಷು ಮೂರನೆಯದು' ಎಂದು ಖಚಿತವಾಗಿ ಹೇಳಿದಾರೆ.

ಸಂಸ್ಕೃತದ ವಿಚಾರ ಬಂದಾಗ 'ಸಂಸ್ಕೃತದ ಮೇಲಿನ ನಿರಭಿಮಾನದಿಂದಾಗಲಿ, ಅದರ ಪರಿಚಯವಿಲ್ಲದೆಯಾಗಲಿ' ಮಾತನಾಡದ ಶ್ರೀ ಕೃಷ್ಣಶಾಸ್ತ್ರಿಗಳು 'ನನಗೆ ಸಂಸ್ಕೃತದಲ್ಲಿಯೂ ಪ್ರವೇಶವಿದೆ; ಕನ್ನಡಕ್ಕಿಂತ ಅದರಲ್ಲಿ ಹೆಚ್ಚಾಗಿ ಪ್ರವೇಶವಿದೆ' ಎಂದು ಅಭಿಮಾನದಿಂದ ಹೇಳಿಕೊಳ್ಳುತ್ತಾರೆ. ಆದರೆ 'ಸಂಸ್ಕೃತದ ಸಹಾಯವಿಲ್ಲದಿದ್ದರೆ ನಮಗೆ ಸಂಸ್ಕೃತಿಯೇ ಇರುತ್ತಿರಲಿಲ್ಲ' ಎಂಬುದನ್ನು ಅವರು ನಂಬುವುದಿಲ್ಲ. 'ಬರಿಯ ಒಂದು ಸಾಂಪ್ರದಾಯಕವಾದ ಗೌರವಾಭಿಮಾನದಿಂದ ಅದನ್ನು ಎತ್ತಿಹಿಡಿಯು'ವುದೂ ಅವರಿಗೆ ಒಪ್ಪದ ಮಾತು.

'ಸಂಸ್ಕೃತ ಎಂದು ವ್ಯವಹಾರದಲ್ಲಿ ನಿಂತುಹೋಯಿತೋ ಅಂದೇ ಅದು ಪೂರ್ಣಪ್ರಮಾಣದಲ್ಲಿ ಜನಜೀವನಕ್ಕೆ ಅನ್ವಯಿಸುವುದು ತಪ್ಪಿಹೋಯಿತು.' 'ಸಂಸ್ಕೃತದ ದೇಹ ಸಂಸ್ಕೃತರೂಪವಾಗಿ ಉಳಿದರೂ ಅದರ ಜೀವ ದೇಶಭಾಷೆಗಳ ಮೂಲಕವೇ ಹರಿಯಬೇಕು; ದೇಹಕ್ಕಿಂತ ಜೀವ ದೊಡ್ಡದು' ಎನ್ನುವುದು ಶಾಸ್ತ್ರಿಗಳ ಅಮೂಲ್ಯ ಅಭಿಪ್ರಾಯ. ಹಾಗೆಂದು ಅವರು ನಮಗೆ ಸಂಸ್ಕೃತದ ಸಂಪರ್ಕವನ್ನು ಕಳೆದುಕೊಳ್ಳಲು ಹೇಳುತ್ತಿದಾರೆಂದು ಅರ್ಥಮಾಡುವುದು ಮೂರ್ಖತನವಾಗುತ್ತದೆ. ಅವರ ಸೂಚನೆಯ ಪ್ರಕಾರ 'ಬರಿಯ ಕನ್ನಡ ಓದುತ್ತಿರುವವರೆಲ್ಲರೂ ಜೊತೆಗೆ

ಸಂಸ್ಕೃತವನ್ನೂ ಓದಬೇಕು.' ಹಲವರು ವಾದಿಸುವಂತೆ ಸಂಸ್ಕೃತವೇ ರಾಷ್ಟ್ರ ಭಾಷೆಯಾದರೂ, ಅವರಿಗಿಂತ 'ಹೆಚ್ಚಾಗಿ ಯಾರೂ ಸಂತೋಷಿಸಲಾರರು.' ಆದರೆ 'ಅಭಿಮಾನಕ್ಕಾಗಿ, ಭಕ್ತಿಗಾಗಿ, ಬಂದಷ್ಟು ಸಂಸ್ಕೃತ ಬರಲಿ; ಆದಷ್ಟು ಹೆಚ್ಚುಜನ ಓದಲಿ, ಎಂದು ವಾದಿಸುವುದು ಇಂದಿನ ಸ್ಥಿತಿಯಲ್ಲಿ ಪ್ರಯೋಜನಕಾರಿಯಾವುದಿಲ್ಲ.' ವಿದ್ವತ್ತು ಬೇಕಾದವರು ಬಹು ಭಾಷೆಗಳನ್ನು ಕಲಿಯಲಿ. ಅಂಥವರು ಸಂಸ್ಕೃತ ವನ್ನೂ ಚೆನ್ನಾಗಿ ಅಭ್ಯಾಸಮಾಡಲಿ. ಆದರೆ ವಿದ್ವತ್ತು ಜನಸಾಮಾನ್ಯರಿಗೇಕೆ ? ಅದ ರಿಂದ ಸಾಮಾನ್ಯಜನರಿಗೆ ಸಂಸ್ಕೃತದ ಅಗತ್ಯ ಅಷ್ಟಾಗಿ ಇಲ್ಲ. 'ಬಂಗಾರ ಎಲ್ಲರಿಗೂ ಬೇಕು; ಹೀಗೆಂದು ಎಲ್ಲರೂ ಖನಿಜಶಾಸ್ತ್ರ ಲೋಹಶಾಸ್ತ್ರಗಳಲ್ಲಿ ಪ್ರವೀಣರಾಗುವುದ ಕ್ಕಾಗುತ್ತದೆಯೆ ?' ಎಂಬುದು ಶಾಸ್ತ್ರಿಗಳ ಪ್ರಶ್ನೆ.

ಸಂಸ್ಕೃತ ಉಳಿದಿದ್ದರೆ, ಬೆಳೆದಿದ್ದರೆ ಅದಕ್ಕೆ ಬಹುಪಾಲು ಕಾರಣ ನಾವಲ್ಲ ; ವಿದೇಶೀಯರು. ತನ್ನ ತಾಯಿಭೂಮಿಯಲ್ಲಿ ದೊರಕದ ಗೌರವ, ಸೌಲಭ್ಯಗಳನ್ನು ಸಂಸ್ಕೃತ ಹೊರದೇಶಗಳಲ್ಲಿ ಗಳಿಸಿಕೊಂಡಿದೆ. ಆ ದೃಷ್ಟಿಯಿಂದ ಅದರ ಪುಣ್ಯ ಮಹತ್ತರವಾದುದು. ಆದರೆ ಕನ್ನಡಕ್ಕೆ ಆ ಅದೃಷ್ಟ ಇದೆಯೆ ? ಇನ್ನಿತರ ದೇಶ ಭಾಷೆಗಳಿಗೆ ಆ ಸೌಕರ್ಯ ಇದೆಯೆ ? ತನ್ನ ನಾಡು, ತನ್ನ ಭಾಷೆ, ಎಂಬ ಅಭಿಮಾನದ ತುಣುಕಾದರೂ ಇರುವವನ ಹೃದಯಕ್ಕೆ ನಾಟುವಂತೆ, ಕರುಳು ಕೊಯ್ಯುವಂತೆ ಶಾಸ್ತ್ರಿ ಗಳು ಈ ಮಾತು ಹೇಳುತ್ತಾರೆ ; 'ಏನಾದರೂ ಒಂದು ದುರದೃಷ್ಟದಿಂದ ಅಂಥ ದುರದೃಷ್ಟ ಬರದಿರಲಿ—ನಮ್ಮ ದೇಶದಲ್ಲಿ ಬೌದ್ಧಧರ್ಮ ಖಿಲವಾಗಿ ನಷ್ಟವಾಗಿ ಹೋದಂತೆ ಸಂಸ್ಕೃತವೂ ಆಗಿ ಹೋಗುವುದಾದರೆ, ಅದು ಹೊರದೇಶದಲ್ಲಿ ಬದುಕಿರು ತ್ತದೆ, ಬಾಳುತ್ತಿರುತ್ತದೆ. ಆದರೆ ಕನ್ನಡ ? ಕನ್ನಡಿಗರೇ, ನಿಮ್ಮ ಕನ್ನಡವನ್ನು ಇಂಡಿಯಾದೇಶದ ದಕ್ಷಿಣಭಾಗದಲ್ಲಿ ಒಂದು ಅಂಗೈ ಅಗಲ ಬಿಟ್ಟರೆ ಮತ್ತೆಲ್ಲಿಯೂ ನೋಡಲಾರಿರಿ. ನೀವು ಅದನ್ನು ಅಲಕ್ಷ್ಯ ಮಾಡಿದರೆ ಮಿಕ್ಕ ಯಾವ ದೇಶದ ಯಾವ ಜನರೂ ಅದನ್ನು ಎತ್ತಿ ಹಿಡಿಯಲಾರರು. ಅದು ಹೋದರೆ ಹೋಗಲಿ ಎನ್ನುವ ಹಾಗಿದ್ದರೆ ಈ ಕಡೆ ಬಂಗಾಳಾ ಕೊಲ್ಲಿಯಿದೆ, ಆ ಕಡೆ ಅರಬ್ಬಿ ಸಮುದ್ರ ಇದೆ; ಗುಡಿಸಿ ಹಾಕಿಬಿಡಿ. ಇತರ ಭಾಷೆಗಳು ಒತ್ತಿಕೊಂಡು ಬರಲಿ. ಆಕ್ರಮಿಸಿಕೊಳ್ಳಲಿ !'

ಕನ್ನಡಕ್ಕಾಗಿ ಶ್ರೀ ಕೃಷ್ಣಶಾಸ್ತ್ರಿಗಳು ಪಡುತ್ತಿರುವ ಕಳವಳ, ಅವರ ನರ ನಾಡಿ ಗಳಲ್ಲಿ ಪ್ರವಹಿಸುತ್ತಿರುವ ಕನ್ನಡ ಪ್ರೇಮ ಈ ಮಾತುಗಳಲ್ಲಿ ವ್ಯಕ್ತವಾಗಿದೆ. ಇದಕ್ಕಿಂ ತಲೂ ಹೃದಯಸ್ಪರ್ಶಿಯಾಗಿ, ಆರ್ತನಾಗಿ ಇನ್ನೊಬ್ಬ ಕನ್ನಡಿಗ ತನ್ನ ಭಾಷೆಯ ಸಲುವಾಗಿ ಮಾತಾಡಲಾರನೇನೋ ಎಂದೆನಿಸುತ್ತದೆ.

'ಹುಟ್ಟಿದ ಮಕ್ಕಳಿಗೂ ಹಾಲಿನ ಜೊತೆಯಲ್ಲಿ ಸ್ವಲ್ಪ ಹಿಂದಿ ಬೆರೆಸಿ ಕುಡಿಸಿ' ಎಂಬ ಚಳುವಳಿ ನಡೆಯುತ್ತಿರುವ ಕಾಲದಲ್ಲಿ, ಅದರ ಬಗ್ಗೆ ಶಾಸ್ತ್ರಿಗಳ ಅಭಿಪ್ರಾಯ ಕಹಿಯಾಗಿ ಕಂಡರೂ ಆರೋಗ್ಯಕರವಾಗಿದೆ. 'ಆ ಅಯ್ಯನವರು ಕಾಂಗ್ರೆಸ್ಸಿನಲ್ಲಿ ದ್ದಾರೆ, ಅವರೇನು ತಿಳಿದು ಕೊಳ್ಳುತ್ತಾರೋ, ಈ ರಾಯರು ಹಿಂದಿ ಪಕ್ಷಪಾತಿಗಳಾಗಿ

ಡ್ಡಾರೆ, ಅವರೇನೆನ್ನುತ್ತಾರೋ' ಎಂದು ಕನ್ನಡದ ದೊಡ್ಡ ದೊಡ್ಡಜನ ಹಿಂದಿಯ ವಿರುದ್ಧವಾಗಿ ಉಸಿರಾಡಲು ಕೂಡ ಅಂಜಿದರು. ಶ್ರೀ ಕೃಷ್ಣಶಾಸ್ತ್ರಿಗಳಿಗೆ ಆ ಅಂಜಿಕೆ, ಆ ಭೀತಿ ಏನೂ ಇಲ್ಲ. ಆ ಅಯ್ಯನವರು, ಈ ರಾಯರುಗಳಿಗಿಂತ ಅವರು ಹಿಡಿದ ಮಾರ್ಗ ದೊಡ್ಡದು ; ಕಾಂಗ್ರೆಸ್ಸಿಗಿಂತ ಕನ್ನಡ ದೊಡ್ಡದು. ಇಂಥ ನೇರವಾದ ದಾರಿ ಹಿಡಿದುದರಿಂದ, ಶಾಸ್ತ್ರಿಗಳು, ಪರಿಷತ್ಪತ್ರಿಕೆ ಸಂಪಾದಕರಾಗಿದ್ದಾಗ ಸಹ ಸದಸ್ಯರೊಬ್ಬರ—ಅವರೂ ಕನ್ನಡಿಗರೇ !—ಖಂಡನೆಯ ನಿರ್ಣಯಕ್ಕೆ ಕೂಡ ಒಳಗಾಗಬೇಕಾಯಿತು. ಇರಲಿ. ಪ್ರತ್ಯೇಕ ರಾಷ್ಟ್ರಭಾಷೆಯೆಂಬುದೊಂದು ಅಗತ್ಯವೆ ಎಂಬುದು ಶಾಸ್ತ್ರಿಗಳ ಸಂದೇಹ. ಇಂಥ ವಿಶಾಲದೇಶದಲ್ಲಿ ಅದರ ಸಾಧ್ಯತೆಯ ಬಗೆಗೆ ಇನ್ನೂ ಹೆಚ್ಚಿನ ಸಂಶಯ.

ಕನ್ನಡದ ಗುಡಿಯಲ್ಲಿ ಹಿಂದಿ ವಿಗ್ರಹದ ಸ್ಥಾಪನೆಗೆ ಸಂಚು ನಡೆಯುತ್ತಿರುವ ಈ ದಿನಗಳಲ್ಲಿ ಶ್ರೀ ಕೃಷ್ಣಶಾಸ್ತ್ರಿಗಳ ಈ ವೀರಸಂದೇಶ ಪ್ರತಿಯೊಬ್ಬ ಕನ್ನಡಿಗನ ಎದೆಯನ್ನೂ ಸೇರಬೇಕು; ಕಣ್ಣು ತೆರಿಸಬೇಕು: 'ಕನ್ನಡಿಗರೇ ನೀವು ಮಾತ್ರ ನಿಮ್ಮ ಕನ್ನಡದ ಅಭಿಮಾನವನ್ನು ಕಾಪಾಡಿಕೊಳ್ಳಿ, ಮೋಹಕ್ಕೆ ಸಿಲುಕಬೇಡಿ, ವಿಚಾರಮಾಡಿ; ನಿಮ್ಮ ಕನ್ನಡದ ಅಭಿಮಾನವೆಂಬ ಕಾಮಧೇನು ಎಚ್ಚರವಾಗಿದ್ದರೆ, ಬ್ರಹ್ಮದಂಡ ಮುಂದೆ ಇದ್ದರೆ, ನಮ್ಮನ್ನು ಯಾವ ವಿಶ್ವಾಮಿತ್ರರ ಹಿಂದೀ ಪಡೆಯೂ ಏನೂ ಮಾಡಲಾರದು.' ಕನ್ನಡಿಗರ 'ಅಭ್ಯುದಯದ ದೃಷ್ಟಿಯಿಂದ ಕನ್ನಡಕ್ಕೆ ಪ್ರಥಮಸ್ಥಾನ ಬೇಕೆಂದು' ಹೇಳಿದರೆ ಪೋಷಣೆಬೇಕೆಂದು ಕೇಳಿದರೆ ಅದು ಹಿಂದಿಯ ದ್ವೇಷವೂ ಆಗದು; ಸಂಸ್ಕೃತದ ವೈರವೂ ಆಗದು; ಇಂಗ್ಲಿಷಿನ ಸೇಡೂ ಆಗದು !

ನಮಗೆ ಬೇಕಾದ ಭಾಷೆಗಳ ಸ್ಥಾನದ ಔಚಿತ್ಯವನ್ನು ಕುರಿತು ಶಾಸ್ತ್ರಿಗಳು ಬಹು ಸುಂದರವಾಗಿ, ಸಹಜವಾಗಿ ಹೀಗೆ ಹೇಳಿದಾರೆ: 'ನಾವು ಮನುಷ್ಯರು, ಮನುಷ್ಯತ್ವವನ್ನು ಉಳಿಸಿಕೊಳ್ಳೋಣ ಉತ್ತಮಪಡಿಸಿಕೊಳ್ಳೋಣ, ಎಂದರೆ ಮಿಕ್ಕ ಪ್ರಾಣಿಗಳ ಮೇಲೆ ದ್ವೇಷವೆಂದಲ್ಲ. ಹಸುಗಳನ್ನು ಸಾಕಿಕೊಳ್ಳೋಣ, ಹಾಲು ಕರೆದುಕೊಳ್ಳೋಣ; ಕುರಿಗಳನ್ನು ಸಾಕೋಣ, ಕಂಬಳಿಗಳನ್ನು ಮಾಡಿಕೊಳ್ಳೋಣ; ನಮ್ಮ ಕೆಲಸಕ್ಕೆ ಉಪಯೋಗವಾಗುವುದಾದರೆ ಬೆಕ್ಕು ಮುಂತಾದ ಮಿಕ್ಕಪ್ರಾಣಿಗಳನ್ನೂ ಸಾಕಿಕೊಳ್ಳೋಣ. ಆದರೆ ಅವು ಎಲ್ಲಿರಬೇಕೋ ಅಲ್ಲಿರಲಿ; ಅವನ್ನು ಊಟದ ಮನೆಗೆ ಬಿಟ್ಟರೆ ನಾವು ತಿನ್ನುವ ಅನ್ನವೂ, ನಮ್ಮ ಮಕ್ಕಳು ಕುಡಿಯುವ ಹಾಲೂ ಅವುಗಳ ಪಾಲಾಗುತ್ತವೆ.'

ಕನ್ನಡವನ್ನು ಬಳಸಿ ಬೆಳೆಸಿಕೊಳ್ಳಲು ಕನ್ನಡದ ಹೆಣ್ಣುಮಕ್ಕಳಲ್ಲಿ ಶ್ರೀ ಕೃಷ್ಣಶಾಸ್ತ್ರಿಗಳ ಪ್ರಾರ್ಥನೆ: 'ಕನ್ನಡವನ್ನು ಓದುವವರು ನೀವು, ಕನ್ನಡದ ಅಭಿಮಾನ ಬೆಳೆದಿರುವುದು ನಿಮ್ಮಿಂದ—ಹಿಂದಿ ಮುಂದಾಗಿರುವುದೂ ನಿಮ್ಮಿಂದಲೇ. ನಾನು ನೋಡಿರುವ ಮಟ್ಟಿಗೆ, ಈ ವಿಚಾರವಾಗಿ ಇರುವ ಅನುಕೂಲ ದಾಂಪತ್ಯ ಹೆಂಡತಿಯಿಂದಲೇ ಗಂಡನಿಗೆ ಬಂದಿರುತ್ತದೆ: ನೀವು ಕನ್ನಡವನ್ನು ಕಾಪಾಡಿಕೊಂಡು ಬಂದರೆ

ಅದು ತಾಯಿನುಡಿಯಾಗಿ ಉಳಿಯುತ್ತದೆ, ಬೆಳೆಯುತ್ತದೆ. ಇಲ್ಲದಿದ್ದರೆ ಬಾಯಿ ಮಾತಾಗಿ ಅಳಿಯುತ್ತದೆ.'

* * * * *

ಹೀಗೆ ಕನ್ನಡದ ವಿಚಾರದಲ್ಲಿ ತೀವ್ರವಾದ ಮಮತೆಯನ್ನು, ಅಭಿಮಾನವನ್ನು ಬೆಳೆಸಿಕೊಂಡು, ಕನ್ನಡಿಗರಿಗೆ ಕನ್ನಡದಿಂದಲೇ ಭುಕ್ತಿ, ಕನ್ನಡದಿಂದಲೇ ಮುಕ್ತಿ, ಎಂದು ಗ್ರಹಿಸಿ, ತಾಯ್ನುಡಿಯ ವೀರೋಪಾಸನೆಯಲ್ಲಿ ತೊಡಗಿ ಕೃಷ್ಣಶಾಸ್ತ್ರಿಗಳು ಕಳೆದ ಮೂರುನಾಲ್ಕು ದಶಕಗಳಿಂದಲೂ ಕನ್ನಡದ ಪ್ರತಿಷ್ಠೆಗಾಗಿ ದುಡಿದಿದ್ದಾರೆ. ಕನ್ನಡಕ್ಕೆ ಅಗತ್ಯವಾಗಿ ದೊರಕಬೇಕಾಗಿರುವ ಮೊದಲ ಮಣೆಗಾಗಿ ಕೆಲಸಮಾಡುತ್ತಾ, ಸಮಯ ಸಂದರ್ಭ ದೊರಕಿದಾಗಲೆಲ್ಲ ಆ ವಿಚಾರವಾಗಿ ಬರೆಯುತ್ತಾ, ಮಾತನಾಡುತ್ತಾ ಬಂದಿದ್ದಾರೆ. ಅಂದಿಗೂ—ಇಂದಿಗೂ ನಮ್ಮ ನಾಡಿನಲ್ಲಿ ಪ್ರಾಂತಭಾಷೆಗಳ ಸ್ಥಾನಮಾನ ಉತ್ತಮಗೊಂಡಿಲ್ಲ. ಭಾರತ ಸ್ವತಂತ್ರವಾಗುವ ಮೊದಲು ದೇಶಭಾಷೆಗಳ ಬಗೆಗೆ ಇದ್ದ ಒಂದು ಆಸೆ ಇಂದು ಇಲ್ಲವಾಗಿದೆ.

ದಕ್ಷಿಣದ ಹೆಗಲಮೇಲೆ ಹಿಂದಿಯ ನೊಗವನ್ನು ಹೇರುವ ಕೆಲಸ ಸತತವಾಗಿ ನಡೆದಿದೆ. ಸಾವಿರಾರು ವರ್ಷಗಳ ಸಂಸ್ಕೃತಿ ಪರಂಪರೆಯನ್ನು, ಸಾಹಿತ್ಯ ಇತಿಹಾಸವನ್ನು ಬೆಳೆಸಿಕೊಂಡು ಬಂದಿರುವ ಇಲ್ಲಿನ ಭಾಷೆಗಳು, ನೆನ್ನೆ ಮೊನ್ನಿನ ಹಿಂದಿಯ ಜನಬಲ, ಧನಬಲ, ಅಧಿಕಾರಬಲಗಳ ಮುಂದೆ ಮಣಿಯಬೇಕಾಗಿ ಬಂದಿದೆ. ಸ್ವಾತಂತ್ರ್ಯ ಪಡೆದ ದೇಶದ ಬಗ್ಗೆ ಒಳ್ಳೆಯ ಆಸೆ, ಭರವಸೆಗಳನ್ನಿಟ್ಟುಕೊಂಡಿದ್ದ ಶ್ರೀ ಕೃಷ್ಣಶಾಸ್ತ್ರಿಗಳಂತಹ ಹಿರಿಯರು, ನಮ್ಮ ಆಡಳಿತ ನಮ್ಮ ಜನ ತಪ್ಪುಹೆಜ್ಜೆಯನ್ನಿಡುತ್ತಿರುವುದನ್ನು ನೋಡಿ ನಿರಾಶರಾಗಬೇಕಾಗಿ ಬಂದಿದೆ; ಕನಿಕರಪಡಬೇಕಾಗಿ ಬಂದಿದೆ. ಇತ್ತೀಚೆಗೆ ೧೯೫೦ ರಲ್ಲಿ ಕೃಷ್ಣಶಾಸ್ತ್ರಿಗಳು ಪ್ರಕಟಿಸಿದ 'ಕಥಾಮೃತ'ದ ತಮ್ಮ ಪೀಠಿಕೆಯಲ್ಲಿ ಹೀಗೆ ಹೇಳಿದ್ದಾರೆ: 'ಇಂಗ್ಲಿಷ್ ಜನರಿಂದ ನಮ್ಮ ಸಂಪತ್ತಿನ ಶೋಷಣೆ ಎಷ್ಟೇ ಆಗಿರಲಿ, ಇಲ್ಲದಿರಲಿ, ಅವರ ಭಾಷಾಸಾಹಿತ್ಯಗಳಿಂದ ನಮ್ಮ ಭಾಷಾ ಸಾಹಿತ್ಯಗಳಿಗೆ ಪೋಷಣೆಯೇ ಆಗಿದೆ, ಆಗಬೇಕಾದದ್ದಿದೆ. ಇದನ್ನು ಆದಷ್ಟು ಬೇಗ ದೇಶದಿಂದ ತೊಲಗಿಸಿ ಹಿಂದಿಗೆ ಕವೆಗೋಲು ಕೊಟ್ಟುನಿಲ್ಲಿಸಿ ಬಲಪಡಿಸುವ ಪ್ರಯತ್ನ ಈಗ ನಮ್ಮ ದೇಶದಲ್ಲಿ ಕಂಡುಬರುತ್ತಿದೆ. ಈ ಹಿಂದಿಯ ಸಂದಿಯಲ್ಲಿ ಇಂಗ್ಲಿಷೂ ಸಂಸ್ಕೃತವೂ ಕನ್ನಡವೂ ಏನಾಗುತ್ತವೆಯೋ! ಇಂದಿಗಂತೂ ಕನ್ನಡವು ಹಿಂದಿಗೆ ಪ್ರಾಚೀನತೆ ಪುಷ್ಟಿ ವಿಸ್ತಾರ ಗುಣ ಯಾವ ಅಂಶದಲ್ಲಿಯೂ ಕಡಿಮೆಯಾಗಿಲ್ಲ. ಅವಕಾಶವಿತ್ತರೆ ಅದು ಹಿಂದಿಯ ಜೊತೆಗೂ ಬೆಳೆಯಬಲ್ಲದು; ಅದನ್ನು ಮೀರಿಸಬಲ್ಲುದು; ಆದರೆ ಅದನ್ನು ಕೇಳುವವರು ಯಾರು? ಹಿಂದಿಯು ಕಾನೂನಿನ ಬಲದಿಂದ ಸರ್ಕಾರಿಭಾಷೆಯಾಗಿದೆ, ಅದೇ ರಾಷ್ಟ್ರಭಾಷೆಯೆಂದು ದೇಶವೆಲ್ಲಾ ಕೂಗುತ್ತಿದೆ ...ನಮ್ಮ ದೇಶದಲ್ಲಿ ಹಲವುವೇಳೆ ಒಬ್ಬ ಸಣ್ಣ ಪುಸ್ತಕ ವ್ಯಾಪಾರಿಯಿಂದ ಆಗುವಷ್ಟು ಪ್ರಯೋಜನವೂ ಸರ್ಕಾರದಿಂದ ಲಭಿಸುವುದಿಲ್ಲ.'

ಒಂದು ದೇಶದ ಸಾಹಿತ್ಯ ಸಂಸ್ಕೃತಿಗಳ ಉತ್ಕರ್ಷಕ್ಕಾಗಿ ಹಲವು ವರ್ಷ ದುಡಿದ ಶ್ರೀ ಕೃಷ್ಣಶಾಸ್ತ್ರಿಗಳು ಮತ್ತು ಅವರಂತಹ ಹಿರಿಯರು, ತಾವು ಕಂಡ ಕನಸಿನ ಸಫಲತೆಗಾಗಿ, ತಾವು ನಡೆಸಿದ ಸಾಧನೆಯ ಸಿದ್ಧಿಗಾಗಿ, ತಮ್ಮ ಆಶೋತ್ತರಗಳ ಈಡೇರಿಕೆಗಾಗಿ ನಿಟ್ಟುಸಿರುಬಿಡಬೇಕಾದ ಪ್ರಮೇಯ ಒದಗಿರುವುದು ಸ್ವತಂತ್ರ ದೇಶಕ್ಕೆ ಕೀರ್ತಿತರುವ ವಿಚಾರವಲ್ಲ.

ಕನ್ನಡನಾಡಿಗೆ ನುಡಿಗೆ ಶ್ರೀ ಕೃಷ್ಣಶಾಸ್ತ್ರಿಗಳು ಸಲ್ಲಿಸಿರುವ ಸೇವೆ ಅನಂತಮುಖ ವಾದುದು; ಅನ್ಯಾದೃಶವಾದುದು. ಅಧ್ಯಾಪಕರಾಗಿ, ಸಾಹಿತಿಗಳಾಗಿ, ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ, ಹಲವಾರು ಸಂಘ ಸಂಸ್ಥೆಗಳ ಪೋಷಕರಾಗಿ, ಕನ್ನಡಿಗರಲ್ಲಿ ಕನ್ನಡತನವನ್ನು ಜಾಗ್ರತಗೊಳಿಸುವ ಕಾರ್ಯವನ್ನು ಅವರು ಅವ್ಯಾಹತವಾಗಿ ನಡೆಸಿದ್ದಾರೆ. ಇಂದು ಕನ್ನಡಜನ ಅಲ್ಪಸ್ವಲ್ಪವಾದರೂ ಜಾಗ್ರತರಾಗಿದ್ದರೆ, ಅದಕ್ಕೆ ಕಾರಣ ಶ್ರೀ ಕೃಷ್ಣಶಾಸ್ತ್ರಿಗಳಂತಹ ಹಿರಿಯರ ಸತತಪ್ರಯತ್ನ.

'ಕನ್ನಡಿಗರು ಒಕ್ಕಟ್ಟಾಗಲು ಇರುವ ಏಕಮಾತ್ರ ಸಾಧನ ಅವರ ನುಡಿ; ಸಾವಿರಾರು ವರ್ಷಗಳಿಂದ ಧೃಷ್ಟಪುಷ್ಟವಾಗಿ ಕಲ್ಪವೃಕ್ಷದಂತೆ ಬೆಳೆದು ಸಕಲ ಇಷ್ಟಾರ್ಥವನ್ನೂ ಕೊಡಬಲ್ಲ ಅವರ ನುಡಿ.' '.. ಕನ್ನಡಿಗರಿಗೆ ಕನ್ನಡದೇಶದಲ್ಲಿ ಹಿರಿಯ ಆಸ್ತಿಯಾಗಿ ಉಳಿದಿರುವುದು ಅವರ ಭಾಷೆ. ಅದನ್ನು ಉಳಿಸಿಕೊಳ್ಳಿ' ಎಂದು ಪ್ರಾರ್ಥಿಸುತ್ತಿರುವ ಶ್ರೀ ಕೃಷ್ಣಶಾಸ್ತ್ರಿಗಳ ಮಾತಿಗೆ ಗಮನಕೊಟ್ಟು ನಡೆಯುವುದರಲ್ಲಿಯೇ ಕನ್ನಡ ಜನರಿಗೆ ಸುಖವಿದೆ; ಕ್ಷೇಮವಿದೆ ; ಮೋಕ್ಷವಿದೆ.

ತಾವು ನೆಟ್ಟ ಕನ್ನಡ ಸಸಿ ಇನ್ನೂ ಸೊಂಪಾಗಿ ಹಸುರಾಗಿ ಬೆಳೆದು ಹೂ ಹಣ್ಣು ಬಿಡುವ ಕಾಲವನ್ನು ನೋಡುವ ಅವಕಾಶವನ್ನು ದೇವರು ಶ್ರೀ ಕೃಷ್ಣಶಾಸ್ತ್ರಿಗಳಿಗೆ ಕರುಣಿಸಲಿ. ಅದನ್ನು ಆಗಗೊಳಿಸುವ ಶಕ್ತಿಯನ್ನೂ, ಮನಸ್ಸನ್ನು ನಮಗೆ ಪರಮಾತ್ಮನು ಅನುಗ್ರಹಿಸಲಿ.

ಹಾ. ಮಾ. ನಾಯಕ

# ಶ್ರೀಪತಿಯ ಕಥೆಗಳು

೧

‘ವಚನಭಾರತ’ ‘ಕಥಾಮೃತ’ ಗಳ ಕರ್ತೃಗಳಾದ ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳವರು ‘ಶ್ರೀಪತಿಯ ಕಥೆಗಳು’ ಎಂಬ ಸುಂದರವಾದ ಕಥಾಸಂಕಲನ ವೊಂದರ ಕರ್ತೃಗಳಾಗಿ ಉತ್ತಮವಾದ ಕಥೆಗಾರರೂ ಆಗಿದಾರೆ ಎಂದರೆ ನಮಗೆ ಯಾರಿಗೂ ಆಶ್ಚರ್ಯವಾಗುವುದಿಲ್ಲ. ಅವರ ಶ್ರೀಮಂತಪ್ರತಿಭೆಗೆ ಮತ್ತೊಂದು ನಿದರ್ಶನ ದೊರೆಯಿತು ಎಂದು ಹಿಗ್ಗುತ್ತೇವೆ ಅಷ್ಟೇ, ರಸಿಕರಿಗೆ ಮತ್ತೊಂದು ರಸ ದೌತಣ ದೊರೆಯಿತು ಎಂದು ಹರ್ಷ ಪುಳಕಿತರಾಗುತ್ತೇವೆ; ಅಷ್ಟೇ. ಏಕೆಂದರೆ ಶಾಸ್ತ್ರಿಗಳಲ್ಲಿ ಕಥೆ ಹೇಳುವ ಕತೆಗಾರಿಕೆ ಹುಟ್ಟು ಗುಣವಾಗಿ ಬಂದಿದೆ ಎನ್ನುವುದು ಆ ಎರಡು ಉದ್ಗ್ರಂಥಗಳ ಪಠಣದಿಂದಲೇ ಕನ್ನಡ ಜನಕ್ಕೆ ಗೊತ್ತಾಗಿ ಹೋಗಿದೆ. ‘ಕಥೆಗೆ ಕಥೆ, ನೀತಿಗೆ ನೀತಿ’ ಎಂಬ ದೃಷ್ಟಿಯನ್ನಿಟ್ಟುಕೊಂಡು ಎಷ್ಟು ಸ್ವಾರಸ್ಯವಾಗಿ ಎಷ್ಟು ಸುಂದರವಾಗಿ ಶಾಸ್ತ್ರಿಗಳು ‘ವಚನಭಾರತ’ ‘ಕಥಾಮೃತ’ ಗಳನ್ನು ರಚಿಸಿ ದ್ದಾರೆ! ವ್ಯಾಪಕವಾದ ಗ್ರಂಥವ್ಯಾಸಂಗ, ಬಹುಮುಖವಾದ ಲೋಕಾನುಭವ, ಆಳವಾದ ಪಾಂಡಿತ್ಯ, ಸರಸವಾದ ಮನೋಧರ್ಮ, ದೇವದತ್ತವಾದ ಪ್ರತಿಭೆ ಇವೆಲ್ಲವುಗಳ ಸಮ ತೋಲನದ ಫಲವಾಗಿ ಸರ್ವಾಂಗ ಸುಂದರವಾದ ಕಲಾಕೃತಿಗಳೆಂಬಂತೆ ‘ವಚನ ಭಾರತ’ ‘ಕಥಾಮೃತ’ ಗಳೆರಡೂ ಲೋಕಕ್ಕೆ ಪ್ರಕಟವಾದುವು. ಈ ಉದ್ಧೃಕೃತಿಗಳು ಗ್ರಥಿತವಾಗುವುದಕ್ಕೆ ಬಹಳ ವರ್ಷಗಳ ಹಿಂದೆಯೇ ಯಾವುದೋ ತತ್ತ್ವ, ಯಾವುದೋ ಘಟನೆ, ಯಾವುದೋ ಮನೋಧರ್ಮ, ಯಾವುದೋ ಆವರಣ—ಇವುಗಳನ್ನು ಚಿತ್ರಿಸುವ ಸಲುವಾಗಿ ಸಣ್ಣ ಕಥೆಯೆಂಬ ಸಾಹಿತ್ಯಪ್ರಕಾರವನ್ನು ಶ್ರೀಯುತರು ಆಶ್ರಯಿಸಿದರು. ೧೯೨೩, ೧೯೨೪, ೧೯೨೬, ೧೯೨೮, ೧೯೨೯, ೧೯೩೦, ೧೯೪೧, ೧೯೪೩, ೧೯೪೪-ಈ ವರ್ಷಗಳಲ್ಲಿ ರಚಿತವಾದ ಕಥೆಗಳನ್ನು ನಾವು ಈ ಸಂಕಲನದಲ್ಲಿ ಕಾಣುತ್ತೇವೆ. ಆಗಿನ ದಿನಗಳಲ್ಲಿ ಕನ್ನಡದ ನವ್ಯೋದಯಕ್ಕಾಗಿ ದುಡಿದ ಹಿರಿಯ ಮಹನೀಯರಲ್ಲಿ ಒಬ್ಬರಾಗಿ ಶ್ರೀ ಶಾಸ್ತ್ರಿಗಳು ಸಣ್ಣ ಕಥೆಗಳನ್ನು ಬರೆಯುವುದರ ಮೂಲಕವಾಗಿಯೂ ನಾಡಿಗೆ ಮತ್ತು ನುಡಿಗೆ ಅಮೋಘವಾದ ಸೇವೆ ಸಲ್ಲಿಸಿದ್ದಾರೆ.

ಆಗ ತಾನೇ ಬೆಳೆದು ಜನಾದರಣೀಯವಾಗುತ್ತಿದ್ದ ಸಣ್ಣ ಕಥೆಗಳ ಮಾಲಿಕೆಗೆ ತಮ್ಮ ರಸಭರಿತವಾದ ಕಥೆಗಳನ್ನು ಸೇರಿಸುವುದರ ಮೂಲಕ ಸೇವೆಸಲ್ಲಿಸುವುದರ ಜೊತೆಗೆ ಬರಹಗಾರರಿಗೆ ಮಾದರಿಯಾಗುವಂತೆ ಕಥೆ ಬರೆದು ಇವರು ಲೇಖಕ ವರ್ಗಕ್ಕೆ ಮಹೋಪಕಾರಮಾಡಿದ್ದಾರೆ. ಬೇರೆ ಬೇರೆ ಕಾರ್ಯಕಲಾಪಗಳಲ್ಲಿ ತೊಡಗಿ ಸಾಹಿತ್ಯ ಸಂಬಂಧವಾದ ಇತರ ಹತ್ತಾರು ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದುದ

ರಿಂದ ಶಾಸ್ತ್ರಿಗಳವರು ಹೆಚ್ಚು ಸಂಖ್ಯೆಯ ಕಥೆಗಳನ್ನು ಬರೆಯಲಿಲ್ಲ ನಿಜ; ಬರೆಯಲಾಗಲಿಲ್ಲ, ನಿಜ. ಆದರೇನು ? ಗುಣದ ದೃಷ್ಟಿಯಿಂದ ಅಮೂಲ್ಯವಾದ ಅಪೂರ್ವವಾದ ಕಥೆಗಳನ್ನು ಬರೆದಿದಾರೆ, ಇವುಗಳ ಕರ್ತೃ ನಾವೇ ಆಗಬಾರದಾಗಿತ್ತೆ ಎಂದು ಇತರರು ಅಸೂಯೆ ಪಡುವಂತಹ ರೀತಿಯಲ್ಲಿ ಬರೆದಿದ್ದಾರೆ ಎನ್ನುವುದೂ ನಿಜ. ಮುಂದಿನ ಒಂದು ಸಣ್ಣ ಅವಲೋಕನದಲ್ಲಿ ' ಶ್ರೀಪತಿಯ ಕಥೆಗಳು 'ಎಂಬ ಹೆಸರಿನ ಪುಸ್ತಕದಲ್ಲಿ ಶ್ರೀ. ಕೃಷ್ಣಶಾಸ್ತ್ರಿಗಳವರು ಬರೆದು ಪ್ರಕಟಿಸಿದ ಹನ್ನೆರಡು ಕಥೆಗಳನ್ನು ಕುರಿತು ಸ್ಥೂಲವಾದ ಒಂದು ಪ್ರಶಂಸೆಯನ್ನು ಕೈಗೊಳ್ಳಲಾಗಿದೆ.

೨

ಶ್ರೀ. ಶಾಸ್ತ್ರಿಗಳವರು ತಮ್ಮ ಕೃತಿಗಳ ಮೂಲಕ ಲೋಕಕ್ಕೆ ಸಾರುವ ಸಂದೇಶವೇನು ? ಅಥವಾ ತಮ್ಮ ಅನುಭವ ಪೂರ್ಣವಾದ ಜೀವನದಲ್ಲಿ ತಾವು ಕಂಡಂತಹ ತತ್ತ್ವದ ಸಾರಾಂಶವೇನು ? ಎನ್ನುವ ಪ್ರಶ್ನೆಗೆ ಸಮಂಜಸವಾದ ಉತ್ತರವನ್ನು ಕನ್ನಡಿಗರು ' ಕಥಾಮೃತ ' ದ ಪೀಠಿಕೆಯಲ್ಲಿ ಕಾಣಬಹುದು. ಶಾಸ್ತ್ರಿಗಳವರ ಭಾವಶುದ್ಧಿಯನ್ನೂ ಚಿತ್ತಸಮುನ್ನತಿಯನ್ನೂ ಹೃದಯಸಂಸ್ಕಾರವನ್ನೂ ಅವರ ಇತರ ಬರಹಗಳಲ್ಲಿಯೂ ಕಾಣಬಹುದು. ಇಲ್ಲಿ ಈ ಪ್ರಶ್ನೆಯನ್ನು ಎತ್ತಿಕೊಳ್ಳುವುದು ಉಚಿತವಲ್ಲ; ಇಂತಹ ಗಹನ ವಿಷಯದ ಜಿಜ್ಞಾಸೆಗೆ ನಾನು ಅರ್ಹನೂ ಅಲ್ಲ. ಆದರೆ ' ಕಥಾಮೃತ'ದ ಪೀಠಿಕೆಯ ಮಾತುಗಳ ಮಥಿತಾರ್ಥವು ಯಾವುದೋ ಅದು ಈ ಕಥಾಸಂಕಲನಕ್ಕೆ ಬರೆದ ಪೀಠಿಕೆಯಲ್ಲಿಯೂ ಪ್ರಕಾರಾಂತರವಾಗಿ ಬಂದಿದೆ ಎನ್ನುವುದನ್ನು ಸೂಚಿಸುವುದು ಮಾತ್ರ ನನ್ನ ಉದ್ದೇಶ. ಆತ್ಮವು ಪರಿಪೂರ್ಣತೆಯ ಸಿದ್ಧಿಗಾಗಿ ಈ ಸೃಷ್ಟಿಯಲ್ಲಿ ದೇಹ ತಾಳಿಬಂದಿದೆ, ರೂಪುತಾಳಿ ನಿಂತಿದೆ. ಒಂದೊಂದು ಆತ್ಮದ ಸಿದ್ಧಿಗೂ ವಿಧಾನ ಬೇರೆ, ಸಾಧನ ಬೇರೆ. ಒಂದು ಸುಟ್ಟು, ಒಂದು ತೇದು, ಒಂದು ನಕ್ಕು, ಒಂದು ಅತ್ತು, ಒಂದು ನೆನೆದು, ಒಂದು ಒಣಗಿ, ಆತ್ಮ ಪರಿಪೂರ್ಣತೆಗೆ ಮುಟ್ಟಬೇಕು. ಮಲ್ಲಿಗೆ ಅರಳಿದಲ್ಲದೆ ಅದರ ಕಂಪು ಹೊರಹೊಮ್ಮುವುದುಂಟೇ ? ಆದರೆ ಅದೇ ಸಾಂಬ್ರಾಣಿ ಪರಿಮಳಿಸಬೇಕಾದರೆ ಸುಡಲೇಬೇಕು. ನಮ್ಮ ಕಣ್ಣಿಗೆ ಒಂದು ವಿಕಾಸವಾಗಿ ಕಾಣಿಸಬಹುದು, ಇನ್ನೊಂದು ವಿನಾಶವಾಗಿ ಕಾಣಿಸಬಹುದು. ಆದರೆ ಭಗವಂತನಿಗೆ ಎರಡೂ ಸಮ ಅಲ್ಲವೆ ? ಜಗತ್ಕರ್ತೃವಿನ ವ್ಯಾಪಾರಗಳನ್ನು ನಮ್ಮ ತೀರ್ಪುಗಳ ಅಳತೆ ಕೋಲಿನಲ್ಲಿ ಅಳೆಯುವುದಾಗಲಿ ನಮ್ಮ ಸರಿ ತಪ್ಪುಗಳ ತಕ್ಕಡಿಯಲ್ಲಿ ತೂಗುವುದಾಗಲಿ ಎಗ್ಗತನವಾಗುವುದಿಲ್ಲವೆ ? ಈ ದುಃಖ ಏತಕ್ಕೆ ? ಈ ಸಂಕಟ ಏತಕ್ಕೆ ? ಒಂದು ಕಣ್ಣಿಗೆ ಸುಣ್ಣ, ಒಂದು ಕಣ್ಣಿಗೆ ಬೆಣ್ಣೆ ಎರೆಯುವುದು ಯಾವ ನ್ಯಾಯ ? ಇದನ್ನು ಕೇಳುವುದಕ್ಕೆ ನಾವು ಯಾರು ? ಯಾವುದು ಸರಿ ? ಯಾವುದು ತಪ್ಪು ? ಯಾವುದು ನ್ಯಾಯ ? ' ತೇನ ವಿನಾ ತೃಣಮಪಿ ನ ಚಲತಿ.' ಎಲ್ಲಾ ಅವನ ಸಂಕಲ್ಪ, ಅವನ ಸಂಕಲ್ಪವನ್ನು ಅವನು ನೆರವೇರಿಸಿಕೊಳ್ಳಲಿ, ಲೀಲೆ ನಡಸಲಿ. ಲೀಲೆ ಅವನಿಗೆ ಸೇರುವಾಗ ನಮಗೆ ಏತಕ್ಕೆ ಬೇಸರ. ಬೇಸರಪಟ್ಟುಕೊಂಡರೆ ಈ ಅಸಹಾಯ

ನಾದ ನರಜಂತು ಬೇಸರ ಪಟ್ಟುಕೊಳ್ಳುವುದು ಎಷ್ಟೋ ಅಷ್ಟೇ. ಆದ್ದರಿಂದ ಬೇಸರ ಬೇಡ, ಮುಷ್ಕರ ಬೇಡ, ಭಗವದರ್ಪಣ ಬುದ್ಧಿಯಿಂದ ಕೆಲಸ ಮಾಡೋಣ. ಆತನ ಸಂಕಲ್ಪಕ್ಕೆ ನಿಮಿತ್ತ ಮಾತ್ರವಾಗೋಣ. ಅವನ ಕರುಣೆಯ ಹೊನಲಿಗೆ ಒದಗೆ ಮಾತ್ರ ವಾಗೋಣ. ಕಷ್ಟಗಳ ಹಗ್ಗಗಳಿಂದಲೇ ಮುಕ್ತಿಶಾಲೆಗೆ ನಮ್ಮನ್ನು ಮೂಗುದಾರ ಹಾಕಿ ಎಳೆಯುತ್ತಿದಾನೆ ಆತ ಎಂದುಕೊಳ್ಳೋಣ—ಇತ್ಯಾದಿಯಾದ ಒಂದು ತತ್ತ್ವ ದರ್ಶನ ವನ್ನು ಶಾಸ್ತ್ರಿಗಳವರು ಸಾರುತ್ತಿದ್ದಾರೆ. ಅವರ ಕಥೆಗಳಲ್ಲಿ ಈ ತತ್ತ್ವ ಮಿಂಚು ಗೆರೆ ಯಾಗಿ ಫಳ್ಳನೆ ಹೊಳೆಯುತ್ತದೆ ಎನ್ನುವುದನ್ನು ವಾಚಕರು ಸುಲಭವಾಗಿ ಗುರುತಿಸ ಬಹುದು. ಈ ಕಥೆಗಳನ್ನು ಓದಿದಾಗ ಮನಸ್ಸಿನಲ್ಲಿ ಮೂಡುವ ಭಾವ ಯಾವುದು ಎಂಬುದನ್ನೂ ಯಾವ ನೀತಿ ಅಥವಾ ತತ್ತ್ವ ಈ ಕಥೆಗಳಲ್ಲಿ ಅಡಗಿ ಕುಳಿತಿದೆ ಎಂಬು ದನ್ನೂ ಇಲ್ಲಿ ಮೊದಲು ತೋರಿಸಲಾಗಿದೆ.

'ಎರಡು ಜೀವಿಗಳು ಒಲಿದು ನಲಿಯುವುದೂ ಕೂಡಿ ಬಾಳುವುದೂ ಸಣ್ಣ ಮಾತೇನೂ ಅಲ್ಲ.', 'ಮನುಷ್ಯ ಪ್ರಯತ್ನ ನಿಮಿತ್ತ ಮಾತ್ರ, ಎಲ್ಲಾ ದೈವ ಸಂಕ ಲ್ಪವೇ', 'ನಮ್ಮ ನಡೆನುಡಿ ಚೆನ್ನಾಗಿಟ್ಟುಕೊಂಡಿದ್ದರೆ ಕಾಪಾಡುವ ದೇವರು ಹ್ಯಾಗೋ ಕಾಪಾಡುತ್ತಾನೆ', 'ದೇವರು ಇದ್ದಾನೆ.', 'ಅಣ್ಣ ತಂಗಿಯರು ಒಬ್ಬರನ್ನೊಬ್ಬರು ಪ್ರೀತಿಸುವುದಕ್ಕೂ ಪ್ರಾಪ್ತಿ ಬೇಕು.', 'ಮಾನಿಯಾದವನಿಗೆ ಬಡತನ ಉಸಿರಾಡುವ ಸಾವು.', 'ಅಗ್ಗದಲ್ಲಿ ಮದುವೆ ಮಾಡುತ್ತೇವೆಂದು ಹೊರಟರೆ ಕೊನೆಗೆ ಆಗುವುದು ಒಂದಕ್ಕೆ ಹತ್ತು ಖರ್ಚು, ಒಂದಕ್ಕೆ ಹತ್ತು ಶ್ರಮ; ಅನುಕೂಲ ವಿತರಣೆ ವಿಜೃಂಭಣೆ ಮಾತ್ರ ಹತ್ತಕ್ಕೆ ಒಂದು', 'ದುರಾಶಾಗ್ರಸ್ತರಾಗಿ ಕರ್ಮಸೂತ್ರವನ್ನು ತಾವೇ ಕತ್ತರಿಸಿ ಕೊಂಡು ಸುಖಪಡುತ್ತೇವೆಂದು ಹೊರಟವರಿಗೆ ದೊರಕುವುದು ಸ್ವರ್ಗಸುಖವಲ್ಲ, ನಾಯಕನರಕ,' 'ಮೂರುಹೊತ್ತೂ ತಾರಾತಂಟಲು, ತಗರುಬುಗರು, ಸುಳ್ಳು, ತಟವಟ, ಮೋಸ, ಮೈಗಳ್ಳತನ, ಘಾಟವಿದ್ಯೆ, ಪುಂಡುವಿದ್ಯೆಗಳಿಂದ ಜನರನ್ನು ಹೆದರಿಸಿ ಬೆದರಿಸಿ ತಮ್ಮನ್ನು ತಾವು ಬಚಾವು ಮಾಡಿಕೊಳ್ಳುತ್ತಿದ್ದವರು ಎಂದಾದ ರೊಂದು ದಿನ ಗೋಟಿನಲ್ಲಿ ಸಿಕ್ಕಿಕೊಂಡ ಕತ್ತರಿಯಂತೆ ಆಗುವುದು ಶತಸ್ಸಿದ್ಧ.' 'ಅತ್ತೆ ಎನ್ನುವ ಪದ ಮನುಷ್ಯ ವ್ಯಕ್ತಿಯನ್ನು ಮಾತ್ರ ನಿರ್ದೇಶಿಸುತ್ತದೆ ಎಂದಲ್ಲ, ಮನಸ್ಸಿನ ವೃತ್ತಿಯನ್ನೂ ಅದು ಸೂಚಿಸುತ್ತದೆ. ಈ ವೃತ್ತಿಯ ಮುಖ್ಯಲಕ್ಷಣ ದರ್ಪ; ಆಡ ಬೇಕು, ಅನ್ನಬೇಕು, ಅಂದು ಆಳಬೇಕು, ಆಳಿ ಅನ್ನಬೇಕು, ಅಂದು ಆಳಿ ದಂಡಿಸ ಬೇಕು.' 'ಸಂಸಾರಿಯಾದರೆ ಸುಖ, ಸಂನ್ಯಾಸಿಯಾದರೆ ಕಷ್ಟ ಎನ್ನುವುದು ಸುಳ್ಳು. ಕಷ್ಟಸುಖಗಳೆಲ್ಲಾ ಅವರವರ ಅದೃಷ್ಟ–'ಪ್ರಾರಬ್ಧ'.', 'ಭಗವತ್ಸಂಕಲ್ಪವಿಲ್ಲದೆ ಒಂದು ಹುಲ್ಲು ಎಸಳೂ ಅಲುಗಾಡುವುದಿಲ್ಲ.'–ಎಂಬ ಈ ವೇದಾಂತ, ಈ ಲೋಕನೀತಿ, ಈ ವ್ಯಾವಹಾರಿಕ ಸತ್ಯ, ಈ ಅನುಭವಾಮೃತ, ಈ ಜೀವನ ಸಿದ್ಧಾಂತ ಶ್ರೀಪತಿಯ ಕಥಾಸಂಕಲನದಲ್ಲಿ ಇರುವ 'ನನ್ನ ಸ್ನೇಹಿತ' 'ಜ್ಯೋತಿಷಕ್ಕೆ ಬಹುಮಾನ', ಶಾನು ಭೋಗನ ಪುಣ್ಯ', 'ದೇವರು ಇದ್ದಾನೆ', 'ನಾಗರಪಂಚಮಿ' 'ಹುಚ್ಚೋ

ಅಲ್ಲವೋ ' ' ಅಗ್ಗದ ಮದುವೆ ' ' ಬಂಗಲಿಯ ವಾಸ ' ' ಗೋಟಿನಲ್ಲಿ ಸಿಕ್ಕಿಕೊಂಡ ಕತ್ತರಿ ' ' ಅತ್ತೆ ' ' ಊಟದಲ್ಲಿ ಉಪಚಾರ ' ' ಗುರುಗಳ ಮಹಿಮೆ '—ಈ ಕಥೆ ಗಳಲ್ಲಿ ಕ್ರಮವಾಗಿ ಪ್ರತಿಪಾದಿತವಾಗಿರುವುದನ್ನು ನಾವು ಕಾಣುತ್ತೇವೆ.

ಒಂದು ಕಡೆ ಸಾಹಿತ್ಯವ್ಯಾಸಂಗ, ಇನ್ನೊಂದು ಕಡೆ ಲೋಕಾನುಭವ ಇವುಗಳ ಫಲವಾಗಿ ಭಾವಶುದ್ಧಿಯನ್ನೂ ಚಿತ್ತಸಮುನ್ನತಿಯನ್ನೂ ಪಡೆದಿರುವ ಶ್ರೀ ಶಾಸ್ತ್ರಿಗಳವ ರಿಂದ ರಚಿತವಾದ ಕಥೆಗಳಲ್ಲಿ ಅಮೃತೋಪಮವಾದ ಇಂತಹ ತಾರಕಸೂತ್ರಗಳು ಒಂದೊಂದು ಕಥೆಯಲ್ಲಿಯೂ ದೊರೆಯುತ್ತಿವೆ ಎಂದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ.

ಶಾಸ್ತ್ರಿಗಳ ಕಥೆಗಳು ಶುದ್ಧನೀತಿಯನ್ನು ನೇರವಾಗಿ ಸಾರುತ್ತವೆ ಎಂದು ಭಾವಿಸ ಬಾರದು. ಮೇಲೆ ಕಾಣಿಸಿದ ಅಂಶಗಳು ಸೂಚ್ಯವಾಗಿ, ಪರೋಕ್ಷವಾಗಿ, ಪರ್ಯಾಯವಾಗಿ, ಮಾರ್ಮಿಕವಾಗಿ ಕಥೆಗಳ ಮೂಲಕ ವಾಚಕರಿಗೆ ವೇದ್ಯವಾಗುತ್ತವೆ. ಒಂದೋ ಎರಡೋ ಕಡೆ ಆ ಮಾತು ಈ ಮಾತು ಪ್ರತ್ಯಕ್ಷವಾಗಿ ಹೇಳಿರಬಹುದಾದರೂ ಅದರ ರೀತಿ ಸಾಹಿತ್ಯದ ರೀತಿ ಎಂಬುದನ್ನು ಮರೆಯಬಾರದು. ಈ ಅಂಶ ಚೆನ್ನಾಗಿ ನೆನಪಿನಲ್ಲಿಡಬೇಕಾದದ್ದು.

೩

ಕಥೆ ಬರೆಯುವವರು ವಸ್ತುವನ್ನು ಹೇಗೆ ಆರಿಸಿಕೊಳ್ಳಬೇಕು, ಎಲ್ಲಿಂದ ಆರಿಸಿ ಕೊಳ್ಳಬೇಕು ಎಂಬ ವಿಚಾರವಾಗಿ ಕಥನ ಕಲೆಯನ್ನು ಅಭ್ಯಾಸ ಮಾಡುವವರಿಗೆ ಶಾಸ್ತ್ರಿಗಳವರ ಕಥೆಗಳಲ್ಲಿ ಉತ್ತಮವಾದ ಸೂಚನೆ ದೊರೆಯುತ್ತದೆ. ನಮ್ಮ ಜೀವ ನದ ಸುಖ ದುಃಖ ರೂಪವಾದ ಘಟನಾವಿಶೇಷಗಳನ್ನು ಮೂರನೆಯವರೆಂಬಂತೆ ನಿರು ಕಿಸಿದರೂ ಸಾಕು, ನಮ್ಮ ಸುತ್ತ ಮುತ್ತಣ ಜೀವನದ ಅನುಭವ ವಿಶೇಷಗಳನ್ನು ಕಣ್ಣು ಬಿಟ್ಟು ನೋಡಿದರೂ ಸಾಕು; ಕಥೆಗಾರನಿಗೆ ಅಪಾರವಾದ ಸಾಮಗ್ರಿ ದೊರಕಿಬಿಡು ತ್ತದೆ; ಶಾಸ್ತ್ರಿಗಳವರು ಎಲ್ಲ ಕಥೆಗಳ ವಸ್ತುವನ್ನೂ ಕಂಡು ಕೇಳಿದ ಸಂಗತಿಗಳ ಆಧಾರದ ಮೇಲೆಯೇ ಕಟ್ಟಿದ್ದಾರೆ. ಅನುಭವವೇದ್ಯವಾದ ಸಹಜ ಘಟನೆಯೊಂದರ ಮೇಲೆಯೇ ಕಥೆಯ ಸುಂದರ ಕಲಾ ಮಂದಿರವೊಂದನ್ನು ನಿರ್ಮಿಸಿದ್ದಾರೆ.

' ನನ್ನ ಸ್ನೇಹಿತ ' ಕಥೆಯ ಕಿಟ್ಟಣ್ಣ, ಅವನ ಹೆಂಡತಿ ಲಕ್ಷ್ಮಮ್ಮ, ಅವನ ಬಾಲ್ಯ ಸ್ನೇಹಿತೆ ಪುಟ್ಟು, ' ಜ್ಯೋತಿಷ್ಯಕ್ಕೆ ಬಹುಮಾನ ' ಕಥೆಯ ನರಹರಿ, ' ಶಾನುಭೋಗನ ಪುಣ್ಯ 'ದ ಲಕ್ಷ್ಮೀದೇವಮ್ಮ, ' ದೇವರು ಇದ್ದಾನೆ ' ಕಥೆಯ ವೆಂಕಟೇಶಯ್ಯ, ' ನಾಗರ ಪಂಚಮಿ ' ಯ ಅಣ್ಣ ತಂಗಿಯರು, ' ಹುಚ್ಚೋ ಅಲ್ಲವೋ ' ಕಥೆಯ ಆ ಬಡಪಾಯಿ ಉಪಾಧ್ಯಾಯ, ' ಅಗ್ಗದ ಮದುವೆ ' ಯ ವೆಂಕಟರಮಣಯ್ಯ ಮುಂತಾದವರೆಲ್ಲ ನಮ್ಮ ನೆರೆಹೊರೆಯವರೇ, ಸುತ್ತುಮುತ್ತಣವರೇ. ಇದೇ ಕಾರಣಕ್ಕಾಗಿಯೇ ನಮಗೆ ಇವರ ವೃತ್ತಾಂತದಲ್ಲಿ ಕುತೂಹಲ ಹೆಚ್ಚು. ಈ ವಾಸ್ತವಾಂಶಕ್ಕಾಗಿಯೇ ಇವರ ಕಥೆ ನಮಗೆ ಅಚ್ಚು ಮೆಚ್ಚು. ಶಾಸ್ತ್ರಿಗಳವರು ಕಥೆಯ ಆರಂಭದಲ್ಲಿ ಬರೆಯುವ ಕೆಲವು ಮಾತುಗಳನ್ನು ಗಮನಿಸಿದರೆ ಅವರು ಕಥೆಯನ್ನು ಕಂಡು ಕೇಳಿದ ಸಂಗತಿಗಳಿಂದಲೇ

ಹೇಗೆ ಲೀಲಾಜಾಲವಾಗಿ ನೇಯುತ್ತ ಹೋಗುತ್ತಾರೆ ಎನ್ನುವುದು ಗೊತ್ತಾಗುತ್ತದೆ. 'ನಮ್ಮ ನರಹರಿ ಬಹು ಪ್ರಚಂಡ–ಬಲದಲ್ಲಿಯೂ ಅಷ್ಟೇ ಬುದ್ಧಿಯಲ್ಲಿಯೂ ಅಷ್ಟೇ' ಎಂದು ಪ್ರಾರಂಭವಾಗುತ್ತದೆ 'ಜ್ಯೋತಿಷಕ್ಕೆ ಬಹುಮಾನ.' ಮೊದಲ ಎರಡು ವಾಕ್ಯ ಬೃಂದಗಳಲ್ಲಿ ನರಹರಿಯ ಜ್ಯೋತಿಷ್ಯದ ಪಾಂಡಿತ್ಯವನ್ನು ಕುರಿತು ಮಾತುಂಟು. ಕೊನೆಗೆ ಲೇಖಕರು ಹೀಗೆ ಹೇಳುತ್ತಾರೆ 'ಏನೇ ಆಗಲಿ, ಅವನು ಹೇಳಿದ ಜ್ಯೋತಿಷ್ಯಗಳಂತೂ, ಅದರಲ್ಲಿಯೂ ನನ್ನ ವಿಷಯದಲ್ಲಿ ಹೇಳಿದವುಗಳಂತೂ ಯಾವುದೂ ಸುಳ್ಳಾಗಿಲ್ಲ. ನಾನೊಬ್ಬನೇ ಅಲ್ಲ, ನಾನು ಕಂಡಹಾಗೆ ನಮ್ಮೂರಿನಲ್ಲಿ ಅನೇಕರಿಗೆ ಅವನು ಹೇಳಿದ ಸಂಗತಿಗಳು ನಿಜವಾಗಿ ನಡೆದಿವೆ. ಅವುಗಳಲ್ಲಿ ಒಂದನ್ನು ಮುಂದೆ ಬರೆದಿದ್ದೇನೆ.' ಇದು ಕಥೆಗೆ ಪೀಠಿಕೆ. ಈ ಪೀಠಿಕೆಯಲ್ಲಿ ಕಥೆ ಹೇಗೆ ಹುಟ್ಟಿತು, ಅದಕ್ಕೆ ವಸ್ತು ಎಲ್ಲಿಯದು ಎನ್ನುವುದು ಗೊತ್ತಾಗುತ್ತದೆ.

'ದೇವರು ಇದ್ದಾನೆ' ಕಥೆಯ ಪ್ರಾರಂಭ ನೋಡಿ : ಕಥೆಗಾರರು ಒಮ್ಮೆ ತಮ್ಮ ಹಳೆಯ ಸ್ನೇಹಿತನನ್ನು ಬೆಂಗಳೂರಿನ ಉಡುಪಿ ಹೋಟಲಿನ ಎದುರು ಸಂಧಿಸುತ್ತಾರೆ. ಕುಶಲಪ್ರಶ್ನೆಗಳಾಗುತ್ತವೆ. ಊಟ ಉಪಚಾರಗಳೂ ನಡೆಯುತ್ತವೆ. ಹೋಟಲಿಂದ ಹೊರಗೆ ಬಂದಾಗ ಒಬ್ಬ ಹುಡುಗ ಇವರ ಎದುರಿನಲ್ಲಿ ಅವಸರವಾಗಿ ಸ್ಕೂಲಿಗೆ ಹೋಗುತ್ತಾನೆ. 'ಆ ಹುಡುಗ ಯಾರಯ್ಯ' ಎಂದು ಕಥೆಗಾರರು ತಮ್ಮ ಸ್ನೇಹಿತ ವೆಂಕಟೇಶಯ್ಯನನ್ನು ಕೇಳುತ್ತಾರೆ. 'ವೆಂಕಟಸುಬ್ಬಯ್ಯನವರ ಮಗನೋ' ಎಂದು ಸ್ನೇಹಿತ ಉತ್ತರ ಹೇಳುತ್ತಾನೆ. ಕಥೆಗಾರರಿಗೆ ಸ್ವಲ್ಪ ವಿವರಣೆ ಬೇಕೆನಿಸುತ್ತದೆ. ಆಮೇಲೆ 'ನಿನಗೆ ವೆಂಕಟಸುಬ್ಬಯ್ಯನವರ ಪರಿಚಯವಾದದ್ದು ಹೇಗೆ' ಎಂದು ಕೇಳುತ್ತಾರೆ.

'ಅಯ್ಯೋ, ಅದು ಒಂದು ದೊಡ್ಡ ಕಥೆ. ಅವರು ಸತ್ತಮೇಲೆ ಅವರ ಪರಿಚಯವಾದದ್ದು' ಎನ್ನುತ್ತಾನೆ ಸ್ನೇಹಿತ. ಕಥೆಗಾರರ ಕುತೂಹಲ ಕೆರಳುತ್ತದೆ. ಮಧ್ಯಾಹ್ನ ಊಟವಾದಮೇಲೆ ಮತ್ತೆ ಸೇರೋಣ ಎಂದು ಸ್ನೇಹಿತ ಹೊರಡುತ್ತಾನೆ. ಊಟವಾದ ಮೇಲೆ ಕಥೆಗಾರರ ಮನೆಗೆ ಸ್ನೇಹಿತ ಬರುತ್ತಾನೆ. ಆ ಕಥೆ ಹೇಳು ಎಂದು ಕಥೆಗಾರರು ಜ್ಞಾಪಿಸುತ್ತಾರೆ.

'ಅದೇ ? ಕಥೆಯೂ ಅಲ್ಲ ಏನೂ ಅಲ್ಲ ; ನಡೆದ ಸಂಗತಿಯಯ್ಯ' ಎನ್ನುತ್ತಾನೆ ಸ್ನೇಹಿತ. ಮುಂದೆ ವೆಂಕಟೇಶಯ್ಯ ಕಥೆ ಹೇಳುತ್ತಾನೆ. ಇಂತಹ ಪ್ರಾರಂಭ ವಾಚಕರ ಕುತೂಹಲವನ್ನು ಹೆಜ್ಜೆ ಹೆಜ್ಜೆಗೆ ಹೇಗೆ ಹೆಚ್ಚಿಸುತ್ತದೆ ಎನ್ನುವುದನ್ನೂ ಗಮನಿಸಬೇಕು.

'ನಾಗರ ಪಂಚಮಿಯಾದ ಬೆಳಗ್ಗೆ ಅಗ್ರಹಾರದ ಕಡೆಗೆ ಹೋಗಬೇಕಾಗಿತ್ತು. ಅಗ್ರಹಾರದಲ್ಲಿಯೇ ನನ್ನ ತಂಗಿಯ ಮನೆ. ಆದ್ದರಿಂದ ಹಾಗೇ ಅವಳನ್ನೂ ನೋಡಿಕೊಂಡು ಬರೋಣವೆಂದು ಹೋದೆ. ನನ್ನನ್ನು ಕಂಡದ್ದೇ ತಡ ಅವಳು ಕಣ್ಣೀರು ತಂದುಕೊಂಡಳು' ಎಂದು ಆರಂಭವಾಗುತ್ತದೆ 'ನಾಗರಪಂಚಮಿ.' ಆ ಕಣ್ಣೀರು ಏಕೆ ತಂದುಕೊಂಡಳು ಎನ್ನುವ ವಿವರಣೆ ತಂಗಿಯ ಬಾಯಿಂದಲೇ ಬಂದು ಪೂರ್ಣವಾಗುವ

ಜೊತೆಜೊತೆಯಲ್ಲಿಯೇ ಕಥೆಯೂ ಮುಕ್ತಾಯಗೊಳ್ಳುತ್ತದೆ. ಕಥೆಗಾರರು ತಮಗೇ ಸಂಬಂಧಿಸಿದ ಘಟನೆಯೆಂಬಂತೆ ಕಥೆ ಹೇಳಿರುವುದು ಕರುಣ ರಸಕ್ಕೆ ಎಂತಹ ಪುಷ್ಟಿಯನ್ನು ನೀಡಿದೆ ಎಂಬುದನ್ನು ಗಮನಿಸಬೇಕು. ರಸಪೋಷಣೆಗೆ ಭಾವಪುಷ್ಟಿಗೆ ಈ ತೆರನಾದ ನಿರೂಪಣಕ್ರಮ ಸರ್ವೋತ್ತಮವಾದದ್ದು. ಕಥೆಯ ಮೂಲವಸ್ತುವಂತೂ ಎಲ್ಲ ಒಡಹುಟ್ಟುಗರ ಜೀವನದಲ್ಲಿ ಬೇರೆ ಬೇರೆ ಪ್ರಮಾಣದಲ್ಲಿ ಬೇರೆಬೇರೆ ಪ್ರಕಾರದಲ್ಲಿ ಒದಗಿರಬಹುದಾದದ್ದೇ.

'ಹುಚ್ಚೋ ಅಲ್ಲವೋ' ಕಥೆಯ ಮೊದಲ ವಾಕ್ಯ ಇದು: 'ರೈಲಿನ ಅನುಭವ ಪೂರ್ತಿಯಾಗಿ ಬರಬೇಕಾದರೆ ಮೂರನೆಯ ತರಗತಿಯಲ್ಲಿಯೇ ಪ್ರಯಾಣ ಮಾಡಬೇಕು.' ಮುಂದೆ ಆ ವಾಕ್ಯಬೃಂದ ಇದರ ವಿವರಣೆಗಾಗಿ ಬಂದಿದೆ. ಆಮೇಲೆ ಕಥೆ ಹೀಗೆ ಪ್ರಾರಂಭವಾಗುತ್ತದೆ. 'ನಾನು ಒಂದು ಸಾರಿ ಮೈಸೂರು ರೈಲಿನಲ್ಲಿ ಹೋಗುತ್ತಿದ್ದೆ. ಮದ್ದೂರು ಹತ್ತಿರವಾಯಿತು.' . ಇತ್ಯಾದಿ. ರೈಲಿನಲ್ಲಿ ಪ್ರಯಾಣ ಮಾಡುತ್ತಿದ್ದ ವ್ಯಕ್ತಿ—ಆ ಬಡಪಾಯಿ ಉಪಾಧ್ಯಾಯನ ಕರುಣಾಜನಕವಾದ ಕಥೆ ಆಮೇಲೆ ಅವನೇ ಹೇಳಿಕೊಳ್ಳುವಂತೆ ಕಥೆಗಾರರು ನಿರೂಪಿಸತೊಡಗುತ್ತಾರೆ.

ಬೆಂಗಳೂರಿನಲ್ಲಿರುವ ಕಥೆಗಾರರ ಮನೆಗೆ ವೆಂಕಟರಮಣಯ್ಯ ಬಂದಾಗ ಕುಶಲ ಪ್ರಶ್ನೆಗಳಾದ ಮೇಲೆ ಮಾತು ಮದುವೆಯ ಕಡೆಗೆ ಹೊರಳುತ್ತದೆ. 'ಅಗ್ಗದ ಮದುವೆ'ಯ ಕಥೆ ಹೀಗೆ ಆರಂಭವಾಗಿ ಆಮೇಲೆ ವೆಂಕಟರಮಣಯ್ಯ ಅಗ್ಗದಲ್ಲಿ ಮದುವೆ ಮಾಡಲು ಹೋಗಿ 'ಮದುವೆ ಮಾಡಿನೋಡು' ಗಾದೆಯ ಪಾಠವನ್ನು ಅನುಭವ ಪೂರ್ವಕವಾದ ಶುಲ್ಕವನ್ನು ತೆತ್ತು ಕಲಿತ ಸಂಗತಿ ನಿವೇದಿತವಾಗಿದೆ.

'ಬಂಗಲಿಯ ವಾಸ' ಕಥೆಗಾರರು ಬಾಡಿಗೆ ಮನೆ ಹುಡುಕಲು ಹೋಗಿ ಬಂಗಲಿಯೊಂದನ್ನು ನೋಡಿ ಬಾಡಿಗೆ ಸುಲಭವೆಂದು ವಾಸಕ್ಕೆ ಹೋದಾಗ ಆದ ಒಂದು ವಿಚಿತ್ರ ಅನುಭವವನ್ನು ವರ್ಣಿಸುತ್ತಾ ಆ ಬಂಗಲಿಯ ಮಾಲೀಕನ ಕಥೆಯನ್ನು ಮಾರ್ಮಿಕವಾಗಿ ಚಿತ್ರಿಸುತ್ತದೆ. 'ಗೋಟಿನಲ್ಲಿ ಸಿಕ್ಕಿಕೊಂಡ ಕತ್ತರಿ' ಯಲ್ಲಿ ಬರುವ ಹರಳೆಣ್ಣೆ ಅಮಲ್ದಾರರ ಕಥೆಯನ್ನು ಕಥೆಗಾರರು ತಮ್ಮ ಸ್ನೇಹಿತರಿಂದ ಕೇಳಿದುದಾಗಿ ತಿಳಿಸುತ್ತಾರೆ.

'ಇಂಥ ಒಂದು ಅತ್ತೆಯ ದಿನಚರಿಯಲ್ಲಿ ಬೆಳಗ್ಗೆ ಎಚ್ಚರವಾದಂದಿನಿಂದ ರಾತ್ರಿ ನಿದ್ರೆ ಹತ್ತುವವರೆಗೆ ಜರುಗಬಹುದಾದ ಸಂಗತಿಗಳಲ್ಲಿ ಕೆಲವನ್ನು ಮುಂದೆ ಮಾದರಿಗಾಗಿ ಸೂಚಿಸಿದೆ.' ಎಂದು 'ಅತ್ತೆ'ಯ ಎರಡನೆಯ ವಾಕ್ಯವೃಂದದ ಕೊನೆಯಲ್ಲಿ ಹೇಳಲಾಗಿದೆ.

'ನಾನು ನೋಡಿದವರಲ್ಲೆಲ್ಲಾ ಊಟದಲ್ಲಿ ಸುಖಪಡುತ್ತಿರುವ ವ್ಯಕ್ತಿ ಒಬ್ಬ ಸಂನ್ಯಾಸಿ.' ಎಂದು 'ಊಟದಲ್ಲಿ ಉಪಚಾರ'ದ ಕಥೆಯಲ್ಲಿ ಸಂನ್ಯಾಸಿಯ ವೃತ್ತಾಂತವನ್ನು ತಾವು ಕಂಡ ಸಂಗತಿಯನ್ನಾಗಿ ಚಿತ್ರಿಸಲಾಗಿದೆ.

ಇಷ್ಟು ಅಲ್ಲದೆ ಈ ಕಥೆಗಳೆಲ್ಲವನ್ನು ಹೇಳುವಾಗ ಕಥೆಗಾರರು ಒಂದು ಆತ್ಮೀ

ಯತೆಯ ಅರ್ಥವನ್ನು ಕಲ್ಪಿಸಿ ಓದುಗರ ಮನಸ್ಸಿಗೆ ವಿಷಯವು ಕ್ಷಿಪ್ರದಲ್ಲಿಯೇ ತೀವ್ರವಾದ ಪರಿಣಾಮವನ್ನು ಉಂಟುಮಾಡುವ ಒಂದು ವಿಧಾನವನ್ನು ಬಳಸಿ ಹೇಳುತ್ತಾ ಹೋಗುವುದರಿಂದ ಕಥೆಗಳು ವಾಚಕರಿಗೆ ಪ್ರಿಯವಾಗುತ್ತವೆ. ಉದ್ದೇಶಿಸಿದ ಪರಿಣಾಮ ಸುಲಭವಾಗಿ ಸಿದ್ಧಿಸುತ್ತದೆ.

೪

ಸಣ್ಣ ಕಥೆಯಲ್ಲಿ ಬರುವ ಸಂಗತಿಯೆಲ್ಲವೂ ಮುಖ್ಯ ವಸ್ತುವಿನ ನಿರೂಪಣೆಗೆ ಪೋಷಕವಾಗಿ ಬರಬೇಕು. ಅನವಶ್ಯಕವಾದ ಘಟನೆಯಾಗಲಿ ಸಂಗತಿಯಾಗಲಿ ಒಂದೂ ಇರಬಾರದು ಎನ್ನುವುದು ಒಂದು ತತ್ತ್ವ. ಬಿಗಿ, ಓರಣ, ಒಪ್ಪ, ಏಕ ಮುಖತೆ ಇವು ಸಣ್ಣ ಕಥೆಯ ಲಕ್ಷಣದ ತಿರುಳು. ಶಾಸ್ತ್ರಿಗಳವರು ಈ ನಿಯಮವನ್ನು ಚೆನ್ನಾಗಿ ಪಾಲಿಸಿದ್ದಾರೆ. ಹೇಳುವ ಒಂದೊಂದು ಸಂಗತಿಯೂ ಮುಖ್ಯ ವಸ್ತುವಿಗೆ ಪೋಷಕವಾಗುತ್ತದೆ; ಏರೇರಿಕೆಯ ಕ್ರಮದಲ್ಲಿ ಕುತೂಹಲವನ್ನು ಕೆರಳಿಸುತ್ತದೆ. 'ಶಾನುಭೋಗನ ಪುಣ್ಯ' ದಲ್ಲಿ ಬರುವ ಉಪಕಥೆಯನ್ನು ಇಲ್ಲಿ ನೆನೆಯಬಹುದು. ಬನಶಂಕರಿದೇವಿಯೇ ಸಾಕ್ಷಾತ್ತಾಗಿ ಶಾನುಭೋಗರ ಮನೆಯಲ್ಲಿ ಓಡಾಡುತ್ತಿದ್ದಳು ಎನ್ನುವುದನ್ನು ತಿಳಿಸುವುದಕ್ಕೆ ಕರ್ಣಾಕರ್ಣಿಕೆಯಾಗಿ ಬಂದ ಒಂದು ಕಥೆ ಹೇಳುತ್ತಾರೆ. ಈ ಕಥೆ ಶಾನುಭೋಗನ ಮನೆತನ ಎಂತಹ ಪುಣ್ಯವಂತ ಮನೆತನ ಎನ್ನುವುದನ್ನು ಹೇಗೆ ಪುಷ್ಟೀಕರಿಸುತ್ತದೆ! 'ಅದೊಂದು ಸಣ್ಣ ಉಪಕಥೆ' ಎಂದು ಪ್ರಾರಂಭ ಮಾಡಿ 'ಉಪಕಥೆ ಸ್ವಲ್ಪ ದೊಡ್ಡದಾಯಿತು. ಬನಶಂಕರಿ ಹಬ್ಬದ ಪ್ರಸ್ತಾಪ ಬಂದದ್ದರಿಂದಲೂ ಲಕ್ಷ್ಮೀದೇವಮ್ಮನಲ್ಲಿ ಬನಶಂಕರಿಯ ಅಂಶವಿತ್ತೆಂದು ಈಗಲೂ ಆಕೆಯ ಹೆಸರಿನಲ್ಲಿ ನಮ್ಮ ಬಂಧುಬಳಗದವರ ಮನೆಯಲ್ಲೆಲ್ಲಾ ಆಕೆಯ ಹುಟ್ಟಿದ ದಿವಸ ಹೂವೀಳ್ಯವನ್ನು ಮಾಡುವುದರಿಂದಲೂ ಈ ವಿಚಾರವನ್ನು ಸಂದರ್ಭ ಬಂದಾಗ ಸ್ವಲ್ಪ ವಿಸ್ತಾರವಾಗಿ ಹೇಳಬೇಕಾಯಿತು.' ಎಂದಿದಾರೆ. ನಿಜವಾಗಿ ನೋಡಿದರೆ ಈ ಉಪಕಥೆ ದೊಡ್ಡದೇನೂ ಆಗಲಿಲ್ಲ. ಶಾನುಭೋಗನ ಪುಣ್ಯ ಎನ್ನುವುದು ಅವನ ಪ್ರಾಣವನ್ನು ಹೆಂಡತಿ ಉಪಾಯಾಂತರದಿಂದ ಉಳುಹಿದ ಆ ಒಂದು ಘಟನೆಯಲ್ಲಿ ಮಾತ್ರ ಇಲ್ಲ; ಅವನ ಮತ್ತು ಅವನ ಹೆಂಡತಿಯ ನಡೆನುಡಿಗಳಲ್ಲಿ, ದೈವಭಕ್ತಿ ಅತಿಥಿ ಸೇವೆಗಳಲ್ಲಿ, ಪ್ರಸನ್ನವಾದ ಸಂಸಾರದ ಸಂತೋಷ ಸಂಭ್ರಮಗಳಲ್ಲಿ ಆ ಪುಣ್ಯದ ಪ್ರಭಾವವನ್ನು ನಾವು ಕಾಣುತ್ತೇವೆ. ಆ ಮನೆಯಲ್ಲಿ ನಡೆಯುತ್ತಿದ್ದ ಊಟ ಉಪಚಾರ, ತಿಂಡಿ ತಿನಿಸು, ಮಾತು ಕಥೆ, ಹಬ್ಬ ಹರಿದಿನ, ಪೂಜೆ ಪುರಸ್ಕಾರ ಈ ಎಲ್ಲವೂ ಆ ಮಹಾತಾಯಿ ಲಕ್ಷ್ಮೀದೇವಿಯ ಮಹಿಮೆಯಿಂದಲೇ. ಅಂತಹ ದೇವತೆ ಧರ್ಮಪತ್ನಿಯಾಗಿ ದೊರೆತದ್ದೇ ಶಾನುಭೋಗನ ಪುಣ್ಯ. ಈ ಅಭಿಪ್ರಾಯ ವಾಚಕರಲ್ಲಿ ಮೂಡಬೇಕೆಂದೇ ಲೇಖಕರ ಉದ್ದೇಶ. ಈ ಉದ್ದೇಶ ಸಿದ್ಧಿಗೆ ಉಪಕಥೆಯಿಂದ ತುಂಬ ಸಹಾಯವಾಗುತ್ತದೆ.

ಇದೇ ರೀತಿಯಲ್ಲಿ 'ದೇವರು ಇದ್ದಾನೆ' ಎನ್ನುವ ಕಥೆಯಲ್ಲಿಯೂ ಉದ್ದೇಶ

ಸಾಧನೆ ಮತ್ತು ಮುಖ್ಯ ಘಟನೆಯ ಪೋಷಣೆ ಇವು ಸೊಗಸಾಗಿ ಬಂದಿವೆ. ತಂದೆ ತೀರಿಕೊಳ್ಳುವಾಗ ಹಸುಗೂಸಾಗಿ ಕಣ್ಣೆದುರು ಏನು ನಡೆಯುತ್ತಿದೆ ಎನ್ನುವುದರ ಪರಿವೆ ಇಲ್ಲದೆ ಹಾಸಿಗೆಮೇಲೆ ಉರುಳಿಕೊಂಡಿದ್ದ ಮಗು ಕಾಲಕ್ರಮದಲ್ಲಿ, ವರ್ಷಗಳು ಉರುಳಿದಂತೆ, ಬೆಳೆದು ಸ್ಕೂಲಿಗೆ ಹೋಗುತ್ತಿದ್ದಾನೆ ಎನ್ನುವ ಸಂಗತಿ ಕೇಳಿದರೆ ಸೋಜಿಗವಾಗುತ್ತದೆ, ದೇವರು ಇದ್ದಾನೆ ಎನಿಸುತ್ತದೆ. ಕಥೆ ಹೇಳುವಾಗ ಮಧ್ಯೆಮಧ್ಯೆ ವೆಂಕಟೇಶಯ್ಯನವರ ಮಾತಾಗಿ ಕಥೆಗಾರರು ಈ ಮಾತುಗಳನ್ನು ಆಡಿದ್ದಾರೆ. 'ದೊಡ್ಡ ಪಟ್ಟಣಗಳಲ್ಲಿ ದೊಡ್ಡಮನಸ್ಸಿನವರು ದೊರಕುವುದು ಅಪರೂಪ, ದೊರಕಿದರೆ ದೇವರಂಥವರೇ ಸಿಕ್ಕುತ್ತಾರೆ.' 'ಕಷ್ಟಕಾಲಕ್ಕೆ ಮಾತ್ರ ಅಣ್ಣನೂ ಇಲ್ಲ, ತಮ್ಮನೂ ಇಲ್ಲ; ತಾಯಿಯೂ ಇಲ್ಲ, ತಂದೆಯೂ ಇಲ್ಲ; ಅದಕ್ಕೂ ಋಣಾನುಬಂಧ ಬೇಕು! ಅಂತು ಅವತ್ತು ಅದನ್ನೆಲ್ಲಾ ನೋಡಿ 'ದೇವರು ಇದ್ದಾನೆ' ಎನ್ನಿಸಿ ಬಿಟ್ಟಿತು.' 'ಪರೀಕ್ಷೆಗೆ ಹೋಗಬೇ, ಬೇಡವೇ ಎಂದು ಯೋಚನೆಮಾಡಿ ಕೊನೆಗೆ ಹೋಗಿ ಕುಳಿತೆ; ವ್ಯಾಸೇನೋ ಆಯಿತು ನನ್ನ ಪರೀಕ್ಷೆ ಮುಗಿಯುವುದರೊಳಗಾಗಿ ಅಲ್ಲಿ ಖಾಯಿಲೆ ಇಲ್ಲಿ ಖಾಯಿಲೆ ಎಂದು ಖಾಯಿಲೆಯು ಹರಡಿಕೊಂಡು ಸಾವುಗಳು ಹೆಚ್ಚಿಹೋಗಿದ್ದುವು. ನಾವು ಮಾತ್ರ ಒಂದು ತಲೆನೋವು ಮೂಗುನೋವೆನ್ನದೆ ಪಾರಾದೆವು. ದೇವರು ಅಂದಿಗೆ ಕೈಹಿಡಿದು ಕಾಪಾಡಿದ.' 'ಇಂಗ್ಲಿಷ್ ಓದಿದವರ ಬಾಯಲ್ಲಿ ಅಷ್ಟುಮಟ್ಟಿಗೆ ಹೊರಡುವುದೂ ಹೆಚ್ಚೇ, ಅಷ್ಟುಮಟ್ಟಿಗೆ ಹೃದಯದಲ್ಲಿ ಅನುಭವವಾದರೆ ಅದು ದೇವರನ್ನು ನೋಡಿದ್ದಕ್ಕಿಂತ ಹೆಚ್ಚೂನೂವೆ!' ಕಥೆಯನ್ನು ಓದಿದವರ ಬಾಯಲ್ಲಿ ಕೂಡ ಇಂತಹದೇ ಉದ್ಗಾರ ಹೊಮ್ಮಬೇಕೆಂಬುದೇ ಈ ಕಥೆಯ ಉದ್ದೇಶ. ಈ ಉದ್ದೇಶ ಸಿದ್ಧಿಯ ಕಡೆಗೆ ಕಥೆಯಲ್ಲಿ ಬರುವ ಒಂದೊಂದು ವಾಕ್ಯವೂ ಬೇಗಬೇಗನೆ ವಾಚಕರ ಮನಸ್ಸನ್ನು ಎಳೆದುಕೊಂಡು ಓಡುತ್ತದೆ.

'ಹುಚ್ಚೋ ಅಲ್ಲವೋ' ಕಥೆಯಲ್ಲಿ ಕೆಡ್ಡಾ ಶಾಮೈಂಗಾರ್ರು ಕಲಾಪತ್ತಿನ ಗದ್ದೆ ಮಡಿ ರುಮಾಲನ್ನು ತಾವು ತೆಗೆದುಕೊಂಡು ಹೋಗುತ್ತಿದ್ದ ತುಪ್ಪದ ಡಬ್ಬದಲ್ಲಿ ಅದ್ದಿ ಹೊತ್ತಿಸಿ ಕಕ್ಕಡ ಉರಿಸಿ ಕತ್ತಲಿನಲ್ಲಿ ಬೆಳಕುಮಾಡಿ ಸಹಾಯ ನೀಡಿದ ಕಥೆ ನಿಷ್ಕಾರಣವಾಗಿ ಬಂದಿದೆ ಎಂದು ಭಾವಿಸಬಾರದು. ಅಂತಹ ದಾತಾರ ಈಗಲೂ ಇದಾನೆ; ಅಂತಹದೇ ಸಹಾಯವನ್ನು ತೊಟ್ಟುಕೊಳ್ಳುತ್ತಿದ್ದ ಒಂದು ಒಳ್ಳೆಯ ಟ್ವೀಡು ಕೋಟನ್ನು ಬಡವಾಯಿ ಉಪಾಧ್ಯಾಯನೊಬ್ಬನಿಗೆ ಕೊಟ್ಟ ವಿದ್ಯಾಭ್ಯಾಸದ ಇಲಾಖೆಯ ಮುಖ್ಯಾಧಿಕಾರಿ ಈಗಲೂ ಇದಾನೆ ಎಂದು ಮುಂದೆ ಕಥೆಯಲ್ಲಿ ಮಾತು ಬರುತ್ತದೆ.

ಇಲ್ಲಿ ವಿವರಣೆಗೆ ಸಮಯವಿಲ್ಲ. 'ನನ್ನ ಸ್ನೇಹಿತ' ಕಥೆಯಲ್ಲಿ ಪುಟ್ಟುವಿನ ವೃತ್ತಾಂತ, 'ನಾಗರಪಂಚಮಿ' ಯಲ್ಲಿ ಎದುರುಮನೆ ಶೇಷಪ್ಪನವರ ಮನೆಗೆ ಅವರ ಭಾವ ಹಬ್ಬಕ್ಕೆ ಬಂದ ಸಂಗತಿ, 'ಅಗ್ಗದ ಮದುವೆ' ಯಲ್ಲಿ ಮಗ್ಗಲು ಮನೆಯಲ್ಲಿ ಕಾವೇರಮ್ಮ ದೊಡ್ಡವಳಾದ ಸಂದರ್ಭದಲ್ಲಿ ನಡೆದ ಆರತಕ್ಷತೆಯ ಸುದ್ದಿ, 'ಗುರುಗಳ

ಮಹಿಮೆ ' ಯಲ್ಲಿ ತಾಯಿ ಹೇಳುವ ಮೂಗನ ಮದುವೆ ಕಥೆ, ಮುಂತಾದುವುಗಳೆಲ್ಲ ಮುಖ್ಯ ವಿಷಯಕ್ಕೆ ಪುಷ್ಟಿಕೊಡುವ ಸಂಗತಿಗಳಾಗಿ ಬಂದಿವೆ.

೫

ಶಾಸ್ತ್ರಿಗಳವರ ಕಥೆಯಲ್ಲಿ ಕಲೆಯ ದೃಷ್ಟಿಯಿಂದ ತುಂಬ ಪರಿಣಾಮವನ್ನು ಉಂಟುಮಾಡುವ ಸಂಗತಿ ಇನ್ನೊಂದುಂಟು. ಇದು ಕಥೆಯಲ್ಲಿ ಬರುವ ಹಿನ್ನೆಲೆಗೆ ಸಂಬಂಧಪಟ್ಟದ್ದು ಎನ್ನಬಹುದು. 'ನಾಗರಪಂಚಮಿ' ಕಥೆಯಲ್ಲಿ ಒಡಹುಟ್ಟಿದವರ ಪ್ರೇಮವನ್ನು ಚಿತ್ರಿಸುವುದೂ ಈ ಪ್ರೇಮಕ್ಕೆ ತಾಟಕಿಯಂತಹ ಅತ್ತಿಗೆಯಿಂದ ಉಂಟಾದ ಉಪಟಳವನ್ನು ಚಿತ್ರಿಸುವುದೂ ಉದ್ದೇಶ. ಇದಕ್ಕೆ ನಾಗರ ಪಂಚಮಿ ಹಬ್ಬದ ಹಿನ್ನೆಲೆ ಎಷ್ಟು ಚೆನ್ನಾಗಿ ಒಪ್ಪುತ್ತದೆ! ನಾಗರ ಪಂಚಮಿ ತನಿಯೆರೆಯುವ ಹಬ್ಬ. ಒಡಹುಟ್ಟಿದವರು ಒಟ್ಟಿಗೆ ಕಲೆತು ಪ್ರೀತಿಯಿಂದ ಆಡಿ ಹಾಡಿ ಉಂಡು ಉಟ್ಟು ಮೆರೆಯುವ ಹಬ್ಬ ನಾಗರಪಂಚಮಿ. ಈ ಹಬ್ಬದ ದಿನವೇ ಅಣ್ಣಯ್ಯನನ್ನು ನೋಡಲು ಅವನ ಮನೆಗೆ ಬಂದ ತಂಗಿಗೆ ಅತ್ತಿಗೆಯ ಬಿರುನುಡಿ ಕೇಳಬರುತ್ತದೆ, ನೋಡಲಾಗದೆ ಬೀದಿಯ ಬಾಗಿಲಿನಿಂದ ಹಾಗೆಯೇ ಹಿಂದಿರುಗಬೇಕಾಗುತ್ತದೆ. ಮರುದಿನವೇ ಶ್ರೀಯಾಳ ಷಷ್ಠಿ. ಅಣ್ಣನೇ ಒಂದು ನೆವಮಾಡಿಕೊಂಡು ತಂಗಿಯ ಮನೆಗೆ ಬರುತ್ತಾನೆ. ಆಗ ಆ ತಂಗಿ ತನ್ನ ಸಂಕಟವನ್ನೆಲ್ಲಾ ತೋಡಿಕೊಳ್ಳುತ್ತಾಳೆ. ಅಳುತ್ತಾ ಅಳುತ್ತಾ ಆಡುವ ಅವಳ ಒಂದೊಂದು ಮಾತಿನಲ್ಲಿಯೂ ಸಹೋದರ ಪ್ರೇಮ ಹೇಗೆ ವ್ಯಕ್ತವಾಗುತ್ತದೆ ಎಂಬುದನ್ನು ಕಥೆ ಓದಿಯೇ ಅರಿಯಬೇಕು. ' ಆಗಲಿ, ಆಗಲಿ ; ನಾಗರ ಪಂಚಮಿ ಪೂಜೆಗೆ ಅನುಕೂಲವಾಯಿತು ; ಜೀವದ ಹಾವೇ ಸಿಕ್ಕಿದ ಹಾಗಾಯಿತು .. ....ನಾವು ಹುತ್ತ ಮಾಡಿಟ್ಟುಕೊಂಡು ಹಾವು ಬಂದು ನೇರಿಕೊಂಡಿತು ಎಂದರೆ, ಅದು ಹಾವಿನ ತಪ್ಪೇ.' ತನ್ನ ಹೆಂಡತಿಯನ್ನು ಕುರಿತು ಅಣ್ಣ, ತಂಗಿಗೆ ಹೇಳುವ ಈ ಮಾತು ಎಷ್ಟು ಮರ್ಮಸ್ಪರ್ಶಿಯಾಗಿದೆ! ಈ ಹಬ್ಬದ ಹಿನ್ನೆಲೆ ಇಲ್ಲದಿದ್ದರೆ ಹೆಂಡತಿಯ ಗುಣವನ್ನು ಹೇಳುವಾಗ ಹೀಗೆ ಹೇಳುತ್ತಿದ್ದನೋ ಇಲ್ಲವೋ ಈ ಕಥೆಯ ಅಣ್ಣ ತನ್ನ ತಂಗಿಗೆ! ಒಡಹುಟ್ಟುಗಳ ಹಬ್ಬವೆಂದೇ ಹೆಸರಾದ ನಾಗರ ಪಂಚಮಿ ದಿನವೂ ಅಣ್ಣ ತಂಗಿಯರು ಒಬ್ಬರನ್ನೊಬ್ಬರು ನೋಡಿ ಸಹೋದರ ಪ್ರೇಮದ ಸುಖವನ್ನು ಅನುಭವಿಸುವುದು ಸಾಧ್ಯವಾಗದೇ ಹೋಯಿತೇ ಎನ್ನುವುದರಿಂದಲೇ ತಾನೇ ಇಲ್ಲಿಯ ಕರುಣ ರಸಕ್ಕೆ ಪುಷ್ಟಿ!

ಇಂತಹದೇ ಇನ್ನೊಂದು ಹಬ್ಬ ಬನದ ಹುಣ್ಣಿಮೆ. ಬನಶಂಕರಿಯ ಪೂಜೆಯ ಹಬ್ಬ ಅದು. ಈ ಹಬ್ಬದ ಹಿನ್ನೆಲೆಯಲ್ಲಿ ಶಾನುಭೋಗನ ಪುಣ್ಯ ವರ್ಣಿತವಾಗಿದೆ. ಆ ಕಥೆಗೆ ಆ ಹಬ್ಬ ಎಷ್ಟು ಹೊಂದಿಕೆಯಾಗಿದೆಯೋ ಈ ಕಥೆಗೆ ಈ ಹಬ್ಬ ಅಷ್ಟೇ ಹೊಂದಿಕೆಯಾಗಿದೆ ಎನ್ನಬೇಕು.

' ಹುಚ್ಚೋ ಅಲ್ಲವೋ ' ಕಥೆಯಲ್ಲಿ ಬರುವ ರೈಲು ಪ್ರವಾಸದ ಹಿನ್ನೆಲೆ ತುಂಬ ಉಚಿತವಾಗಿದೆ ಆ ಕಥೆಯ ಜೀವನ ವೃತ್ತಾಂತಕ್ಕೆ. ದಾರಿದ್ರ್ಯ, ದಾಸ್ಯ, ದುಃಖ,

ಅವಮಾನ, ಮನಃಕ್ಲೇಶಗಳ ನಡುವೆ ಜೀವನಯಾತ್ರೆಯನ್ನು ಮುಂದುವರಿಸುತ್ತಿದ್ದ ಬಡಪಾಯಿ ಪ್ರವಾಸಿ ಆ ಉಪಾಧ್ಯಾಯ. ಅವನ ಮನಸ್ಸಿನೊಳಗಣ ಬಹುಮುಖವಾದ ವಿನೋದ ವಿಷಾದಗಳಿಗೆ ಕನ್ನಡಿ ಹಿಡಿದಂತೆ ರೈಲು ಪ್ರವಾಸದ ಬಾಹ್ಯ ವರ್ಣನೆ ಬಂದಿದೆ.

'ಬಂಗಲಿಯ ವಾಸ'ದ ಆ ಕಮನೀಯ ಭಯಂಕರವಾದ ವಸ್ತುವಿಗೆ ಎಂತಹ ಹಿನ್ನೆಲೆಯನ್ನು ಕಲ್ಪಿಸುತ್ತದೆ ಆ ಕಥೆಯಲ್ಲಿ ಬರುವ ಆ ಮನೆಯ ಮತ್ತು ಮಾಲೀಕನ ವರ್ಣನೆ, ಕಥೆಯ ನಡುವೆ ಬರುವ ಆ ಬೆಳುದಿಂಗಳ ವರ್ಣನೆ!

೬

ಶಾಸ್ತ್ರಿಗಳವರ ಕಥೆಗಾರಿಕೆಯ ಶೈಲಿಯನ್ನು ಕುರಿತು ಎರಡು ಮಾತು ಹೇಳಬಹುದು. ಮೈಸೂರಿನ ಮನೆಮಾತಿನ ಕನ್ನಡವನ್ನು ಶಾಸ್ತ್ರಿಗಳವರು ತಮ್ಮ ಕಥೆಗಳಲ್ಲಿ ಬಳಸಿದ್ದಾರೆ. ನಮ್ಮ ನಮ್ಮ ಮನೆಗಳಲ್ಲಿ ನಾವು ದಿನನಿತ್ಯವೂ ಮಾತು ಮಾತಿಗೆ ಗಾದೆಗಳನ್ನು ಉಪಯೋಗಿಸುವುದು ಸರ್ವರಿಗೂ ತಿಳಿದದ್ದೇ ಆಗಿದೆ. ಗಾದೆಯಿಂದ ಹೇಳುವ ವಿಷಯ ಸ್ಪಷ್ಟವಾಗುತ್ತದೆ, ಪ್ರಮಾಣವೆಂಬಂತೆ ಅಂಗೀಕಾರ ಯೋಗ್ಯವಾಗುತ್ತದೆ, ಹೇಳುವವನ ಬುದ್ಧಿವಂತಿಕೆ ರಸಿಕತೆ ವೇದ್ಯವಾಗುತ್ತದೆ, ಸಂಭಾಷಣೆ ಸ್ವಾರಸ್ಯಪೂರ್ಣವಾಗುತ್ತದೆ. ಶ್ರೀ. ಶಾಸ್ತ್ರಿಗಳವರ ಕಥೆಗಳಲ್ಲಿ ಬರುವ ಮನೆ ಮಾತಿನ ಭಾಷೆಯಲ್ಲಿ ಗಾದೆಗಳ ಸಮಯೋಚಿತವಾದ ಪ್ರಯೋಗವನ್ನು ಮೇಲಿಂದ ಮೇಲೆ ನಾವು ಕಾಣುತ್ತೇವೆ. ಉದಾಹರಣೆಗೆ ಈ ಗಾದೆಗಳನ್ನು ನೋಡಿ: 'ಹೊಟ್ಟೇ ನಿನ್ನಿಂದ ನಾ ಕೆಟ್ಟೆ,' 'ಸೇವಾಂ ಶ್ವವೃತ್ತಿಂ ವಿದುಃ', 'ಆಶೆ ಎಷ್ಟು ಪಟ್ಟರೆ ಅಷ್ಟೂ ನಿರಾಶೆಯೆ', 'ಗೋರ್ಕಲ್ಲ ಮೇಲೆ ಮಳೆಗರೆದರಾ ಕಲ್ಲು ನೀರ್ ಕುಡಿಯಲಹುದೇ ಸರ್ವಜ್ಞ?,' 'ಮನೋ ಜಯಂತು ಮಾಂಡವ್ಯಃ', 'ಹೆಣ್ಣು ಹುಡುಗಿಯ ಜಾತಕ ಮದುವೆಗೆ ತಾನೇ!', 'ಜಾತಸ್ಯ ಮರಣಂ ಧ್ರುವಂ', 'ಅಪರೂಪಂ ಚೋರ ದರ್ಶನಂ' 'ಯಾವುದಕ್ಕೂ ಪ್ರಾಪ್ತಿ ಬೇಕು' 'ಸರ್ವಾಪರಾಧಂ ಕ್ಷಮಸ್ವ', 'ಯೋಗಿ ಪಡೆದದ್ದು ಯೋಗಿಗೆ; ಜೋಗಿ ಪಡೆದದ್ದು ಜೋಗಿಗೆ', 'ಯಥಾ ರಾಜಾ ತಥಾ ಪ್ರಜಾಃ', 'ಒಂದು ಕಾಸು ಕೊಡ್ತೀನಿ ಹಾಡು ದಾಸಯ್ಯ, ಎರಡು ಕಾಸು ಕೊಡ್ತೀನಿ ಬಿಡು ದಾಸಯ್ಯ,' 'ಕಂತೆಗೆ ತಕ್ಕ ಬೊಂತೆ,' 'ಹೊಸ ಅಂಗಿ ಇಟ್ಟುಕೊಂಡು ಹರಕು ಅಂಗಿಯೇ' 'ಆರು ದೋಸೆ ಕೊಟ್ಟರೆ ಅತ್ತೆ ಕಡೆ ಮೂರು ದೋಸೆ ಕೊಟ್ಟರೆ ಸೊಸೆಕಡೆ,' 'ಕೆಟ್ಟು ಪಟ್ಟಣ ಸೇರು,' 'ಸಂದಿಯಲ್ಲಿ ಸಮಾರಾಧನೆ,' 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗು,' 'ಮಾತು ಕಮ್ಮಿಯಾದರೂ ಮಮತೆ ಹೆಚ್ಚು,' 'ಬೆಣ್ಣೆ ಇಟ್ಟುಕೊಂಡು ತುಪ್ಪಕ್ಕೆ ಅತ್ತರು,' 'ಕಟ್ಟಿಸಿದವನಿಗೆ ಒಂದೇ ಮನೆಯಾದರೆ ಕಟ್ಟಿಸದಿದ್ದವರಿಗೆ ಊರೆಲ್ಲಾ ಮನೆ,' 'ಮಾಡಿದವರ ಪಾಪ ಆಡಿದವರ ಬಾಯಲ್ಲಿ,' 'ಗೋಟಿನಲ್ಲಿ ಸಿಕ್ಕಿಕೊಂಡ ಕತ್ತರಿ,' 'ಪ್ರಾಪ್ತಿ ಇಲ್ಲದ್ದಕ್ಕೆ ಬಾಯಿ ಬಾಯಿ ಬಿಟ್ಟರೆ ಬರುತ್ತದೆಯೆ' 'ಕಷ್ಟ ಸುಖಗಳೆಲ್ಲಾ ಅವರವರ ಅದೃಷ್ಟ-ಪ್ರಾರಬ್ಧ' 'ಹೂವಿಲ್ಲದ ಮರ ಹೀಗೆ

ಹಣ್ಣು ಬಿಟ್ಟೀತೆ,' 'ಭಗವತ್ಸಂಕಲ್ಪವನ್ನು ಯಾರು ಮೀರುವುದಕ್ಕಾದೀತು?' 'ಕೊನೆಗೆ ಯಾರಿಗೆ ಯಾರು? ನಮಗೆ ಗೊತ್ತೇ!' ಹೀಗೆ ಗಾದೆಗಳನ್ನೋ ಲೋಕೋಕ್ತಿಗಳನ್ನೋ ಸಾಮತಿ ಸೂಕ್ತಿಗಳನ್ನೋ ಧಾರಾಳವಾಗಿ ಬಳಸಿರುವುದರಿಂದ ಶಾಸ್ತ್ರಿಗಳವರ ಕಥೆಯ ಶೈಲಿ ಪಂಡಿತ ಪಾಮರರಿಬ್ಬರಿಗೂ ಪ್ರಿಯವಾದದ್ದಾಗಿದೆ.

೭

ಈ ಶೈಲಿಯ ಇನ್ನೊಂದು ಲಕ್ಷಣ ಇಲ್ಲಿ ಬರುವ ವರ್ಣನೆಗಳಿಗೆ ಸಂಬಂಧಪಟ್ಟದ್ದು. ಕಣ್ಣಿಗೆ ಚಿತ್ರ ಕಟ್ಟುವಂತೆ ವರ್ಣಿಸುವ ಹಿರಿಮೆ ಶ್ರೀ. ಶಾಸ್ತ್ರಿಗಳವರಿಗಿದೆ. ಕೆಲವು ಮಾತುಗಳಿಂದ ಅಡಕವಾದ ಪುಟ್ಟ ಪುಟ್ಟ ವಾಕ್ಯ ಭಾಗಗಳಿಂದ ಚಿತ್ರವನ್ನು ಪೂರ್ಣವಾಗಿ ಬಿಡಿಸಿಬಿಡುವ ಬಲ್ಮೆ ಇಲ್ಲಿ ಕಾಣಬರುತ್ತದೆ. ಉದಾಹರಣೆಗೆ 'ಬಂಗಲೆಯ ವಾಸ' ದಲ್ಲಿ ಬರುವ ಮನೆಯ ಮಾಲೀಕನೆನ್ನಿಸಿಕೊಂಡವನ ವರ್ಣನೆಯನ್ನು ನೋಡಬಹುದು: '.ಆ ಪರದೆಯ ಹಿಂದೆ ಒಬ್ಬ ನಡುವಯಸ್ಸಿನಾತನು ಒಂದು ಚಾಪೆಯ ಮೇಲೆ ಒಂದು ಕೊಳಕು ದಿಂಬನ್ನು ಹಾಕಿಕೊಂಡು ಸುರುಟಿಕೊಂಡಿದ್ದಾನೆ. ಗಡ್ಡ ಬೆಳ್ಳಗೆ ಮುಳ್ಳು ಮುಳ್ಳಾಗಿ ಬೆಳೆದಿದೆ. ಒಂದು ತುಂಡು ಸುತ್ತಿಕೊಂಡು, ಮೇಲೆ ಒಂದು ಮಲೆಯಾಳದ ಚೌಕವನ್ನು ಹಾಕಿಕೊಂಡಿದ್ದಾನೆ. ಮುಖವು ಶೋಭೆ ಬಂದು ಸ್ವಲ್ಪ ಇಳಿದಿದ್ದ ಹಾಗೆ ದದ್ದರಿಸಿಕೊಂಡಿದೆ, ಅದರಲ್ಲಿ ಅಲ್ಲಲ್ಲೇ ಸಿಡುಬಿನ ಹಳ್ಳಗಳು; ಹಣೆಯಲ್ಲಿ ಒಂದು ಗಂಧದ ಬಟ್ಟು.' 'ಊಟದಲ್ಲಿ ಉಪಚಾರ' ಎಂಬ ಕಥೆಯಲ್ಲಿ ಬರುವ ಸ್ವಾಮಿಗಳ ಊಟದ ವರ್ಣನೆ ತುಂಬ ಮೋಹಕವಾಗಿದೆ. 'ಸ್ವಾಮಿಗಳು ಭವ್ಯವೂ ವಿಶಾಲವೂ ಆದ ಭೋಜನ ಮಂದಿರವೊಂದರೊಳಗೆ ಅಗ್ರಸ್ಥಾನದಲ್ಲಿ ಪರಿಷ್ಕಾರವಾಗಿ ಕುಳಿತುಕೊಳ್ಳುತ್ತಾರೆ' ಎಂಬ ವಾಕ್ಯದಿಂದ ಆರಂಭವಾಗಿ 'ದುಂಡು ದುಂಡಗೆ ಮಿರುಗುತ್ತ ತೃಪ್ತಿ ತುಳುಕಾಡುತ್ತ ಕುಳಿತಿರುವ ಸ್ವಾಮಿಗಳನ್ನು ನೋಡಿದರೇ ಸಾಕು ಸಂತೋಷವಾಗುತ್ತದೆ' ಎಂಬ ವಾಕ್ಯದೊಂದಿಗೆ ಕೊನೆಗೊಳ್ಳುವ ಈ ವರ್ಣನೆಯ ಸೊಗಸನ್ನು ಓದಿಯೇ ನಲಿಯಬೇಕು. ಶಾಸ್ತ್ರಿಗಳವರ ವರ್ಣನಾ ಸಾಮರ್ಥ್ಯಕ್ಕೆ ಇದು ಉತ್ತಮವಾದ ಒಂದು ಉದಾಹರಣೆ.

೮

ಮನೆಯಲ್ಲಿ ಬಳಸುವ ಜನ ಸಾಮಾನ್ಯರ ಮಾತನ್ನೇ ಕಥೆಗಳಲ್ಲಿ ಉಪಯೋಗಿಸಿದ್ದರೂ ಶಾಸ್ತ್ರಿಗಳವರು ಉತ್ತಮವಾದ ಒಂದು ಕಾವ್ಯ ಸಂಸ್ಕಾರದ ಮೆರಗನ್ನು ಆ ಮಾತುಗಳಿಗೆ ಕೊಟ್ಟಿದ್ದಾರೆ. ದೃಷ್ಟಾಂತ, ರೂಪಕ, ಉಪಮಾನ ಮುಂತಾದ ಅಲಂಕಾರಗಳನ್ನು ಉಪಯೋಗಿಸುವುದು, ಸೂಚ್ಯವಾಗಿ ಅಭಿಪ್ರಾಯ ವ್ಯಕ್ತವಾಗುವಂತೆ ಮಾತುಗಳನ್ನು ಹೆಣೆಯುವುದು, ಸ್ವಲ್ಪದರಲ್ಲಿ ಸ್ವಾರಸ್ಯವನ್ನು ತುಂಬುವಂತಹ ರೀತಿಯಲ್ಲಿ ಹೇಳುವುದು, ಸಣ್ಣ ಮಾತುಗಳಲ್ಲಿ ದೊಡ್ಡ ಅರ್ಥ ಹುದುಗುವಂತೆ ಮಾಡುವುದು—ಈ ತೆರನಾದ ಕೌಶಲದಿಂದ ಆಡುವ ಭಾಷೆಗೇ ಒಂದು ಬೆಡಗನ್ನೂ ಒಂದು ಸೊಗಸನ್ನೂ ತುಂಬಿ ಬಳಸಿದ್ದಾರೆ. ಮಾದರಿಗಾಗಿ ಕೆಲವನ್ನು ಈ ಕೆಳಗೆ ಕೊಟ್ಟಿದೆ.

‘ ನನ್ನ ಹೆಂಡತಿ ಅರ್ಧನಾರೀಶ್ವರನ ಅವತಾರ ; ಆದರೆ ಒಂದು ಕಡೆ ಗಂಡಸು ಒಂದು ಕಡೆ ಹೆಂಗಸಲ್ಲ ; ಒಳಗೆ ಗಂಡಸು ಮೇಲೆ ಹೆಂಗಸು, ಅದರಲ್ಲಿ ಪುರುಷ ಭಾಗವು ಹೊದ್ದುಕೊಂಡಿರುವುದು ಗಜ ಚರ್ಮವಲ್ಲ. ಗಾರ್ದಭ ಚರ್ಮ , ಕೈಯಲ್ಲಿ ಹಾವು, ಗಂಟಲಲ್ಲಿ ವಿಷ ಇವೆಲ್ಲಾ ಸಮ ’ ‘ ಬಂಗಾರವನ್ನು ಕಾಯಿಸಿದರೆ ಅದಕ್ಕೆ ಹೆಚ್ಚು ಬಣ್ಣ ಬರುತ್ತೆ; ತಟ್ಟಿದರೆ ಹೊಳೆಯುವ ತಗಡಾಗುತ್ತೆ, ಎಳೆದರೆ ತಂತಿಯಾಗುತ್ತೆ. ಅರೆ ಬಂಡೆಯನ್ನು ಕಾಯಿಸಿ ಹೊಡೆದರೆ.—ಪುಡಿ ಪುಡಿಯಾಗುತ್ತೆ. ಬೇಕಾದರೆ ಅರೆ ಬಂಡೆಯನ್ನಿಟ್ಟುಕೊಳ್ಳಬೇಕು ; ಇಲ್ಲದಿದ್ದರೆ ಸುಮ್ಮನಿರಬೇಕು. ಅದು ಪುಡಿ ಯಾಗಲಿ—ಯಾವ ಉಪಯೋಗವೂ ಇಲ್ಲದೇ ಹೋಗಲಿ ಎನ್ನುವ ಹಾಗಿದ್ದರೆ, ಕಾಯಿಸಿ ಕುಟ್ಟಿ ಏನು ಬೇಕಾದರೂ ಮಾಡಬಹುದು.’ ‘ ಅವರ ಮನೆತನವು ಈಗ ಸಿಡಿಲು ಬಡಿದ ಮರದಂತೆ ಎಲ್ಲಾ ಬೋಳಾಗಿ ಎಲ್ಲೋ ಒಂದು ಕುಡಿ ಅಂಟಿ ಕೊಂಡಿದೆ ’ ‘ ಶರತ್ಕಾಲದ ಬೆಳುದಿಂಗಳಲ್ಲಿ ತಳತಳನೆ ಹೊಳೆಯುತ್ತ ಶಾಂತವಾಗಿ ಪ್ರವಹಿಸುವ ನದಿಯಂತೆ ಆ ಸಂಸಾರವು ನಡೆಯುತ್ತಿತ್ತು.’ ‘ ಒಳಗೆ ಕೂಡಿ ಬೀಗ ಹಾಕಿದ್ದ ದುಃಖಕ್ಕೆ ಬಾಗಿಲು ತೆಗೆದುಕೊಟ್ಟಂತಾಯಿತು.’ ‘ ಹಾಲು ಕುಡಿದ ಬೆಕ್ಕುಗಳಂತೆ ನಾಲಗೆಯಿಂದ ತುಟಿಗಳನ್ನು ಸವರಿಕೊಳ್ಳುತ್ತ ಹೊಸ ಜೀವ ಬಂದವರಂತೆ ಹೊರಟಿವು ’ ‘ ನನ್ನ ತಂಗಿಯು ಅದೃಷ್ಟವಂತೆಯಲ್ಲ. ಅವಳ ಜೀವನದಲ್ಲಿ ಅರುಣೋದಯವಾಗಿ ಸೂರ್ಯನು ಹುಟ್ಟುವ ಸೂಚನೆಗಳು ಕಂಡು ಅಕಸ್ಮಾತ್ತಾಗಿ ಮಧ್ಯರಾತ್ರಿ ಬಂದು ಬಿಟ್ಟಿತು.’ ‘ ಅಳುವನ್ನಾದರೂ ಕೇಳಬಹುದು ಈ ಸೊರಗಾಟವನ್ನು ನೋಡುವುದು ಕಷ್ಟ. ಹೂವನ್ನು ಹರಿದಾದರೂ ಹಾಕಬಹುದು ಅದು ಕಂದಿ ಹೋಗುವುದನ್ನು ನೋಡುವುದು ಕಷ್ಟ ’ ‘ ಅಡಿಗೆ ಮನೆ ಉಗ್ರಾಣ ನಡು ಮನೆ ಮಲಗುವ ಮನೆ ಎಲ್ಲಾ ಅದು ಒಂದು ಕೋಣೆಯೆ.’ ‘ ಆಗಲಿ, ಆಗಲಿ ; ನಾಗರಪಂಚಮಿಯ ಪೂಜೆಗೆ ಅನುಕೂಲವಾಯಿತು ; ಜೀವದ ಹಾವೇ ಸಿಕ್ಕಿದ ಹಾಗಾ ಯಿತು.’ ‘ ಅವನ ಸ್ಥಿತಿಯನ್ನು ನೋಡಿದರೆ ನಾಲ್ಕನೇ ಐದನೇ ತರಗತಿಗಳ ಗಾಡಿಗಳು ಇಲ್ಲದ್ದರಿಂದ ಮೂರನೇ ತರಗತಿಯಲ್ಲಿ ಹೋಗುತ್ತಿರುವಂತಿತ್ತು : ಅಷ್ಟು ಬಡವನಾಗಿ ಕಾಣುತ್ತಿದ್ದನು. ಹಾಕಿಕೊಂಡಿದ್ದು ಒಂದು ಚೆಕ್ಕಿನ ಕೋಟು ; ಅದು ಹರಿದು ಹೋಗಿ ಅದರಿಂದ ಮುಚ್ಚುವ ಶರೀರ ಭಾಗಕ್ಕಿಂತಲೂ ಕಾಣುತ್ತಿದ್ದ ಭಾಗವೇ ಹೆಚ್ಚಾಗಿತ್ತು. ಪಂಚೆಯೂ ಅದರ ಅಣ್ಣ ತಮ್ಮನೆಯೇ ’ ‘ ಎಷ್ಟು ಅರ್ಜಿ ಬರೆಯಲಿ ದೇವರು ! ...ಇಷ್ಟು ಕಾಗದದಲ್ಲೆ ರಾಮನಾಮವನ್ನು ಬರೆದು ಹಾಕಿದ್ದರೆ, ರಾಮ ನಮ್ಮಪ್ಪ, ಈ ಕಷ್ಟ ಪಾರುಮಾಡಿ ತನ್ನ ಪಾದವನ್ನಾದರೂ ಸೇರಿಸಿಕೊಂಡು ಬಿಡುತ್ತಿದ್ದ.’ ‘ ಮದುವೆ ಕಾಲದಲ್ಲಿ ಬರುವ ಲಗ್ನಪತ್ರಿಕೆಗಳನ್ನು ಕೂಡಿಟ್ಟರೆ— ಒಂದೊಂದು ವರ್ಷವೂ ಒಂದೊಂದು ಸೋಮವಾರ ಅಮಾವಾಸ್ಯೆಯ ಅಶ್ವತ್ಥ ಪ್ರದ ಕ್ಷಿಣೆಗೆ ಹಾಕಬಹುದು ’ ‘ ಊರಲ್ಲಿ ಕೋತಿಗಳ ಕಾಟದಿಂದ ಮನೆಗಳೆಲ್ಲವೂ ಒಂದರಿ ಗಳಾಗಿದ್ದವು.’ ‘ ಕೊಂಡುಕೊಳ್ಳಬೇಕೆಂದರೂ ಊರಿನಲ್ಲಿ ಒಂದು ತಿಂಡಿಯ ಅಂಗಡಿ

ಯಿಲ್ಲ ; ಕೊಂಡುಕೊಂಡರೆ ಕಾಸಿಗೆ ಒಂದು ಪೆಪ್ಪರ್‌ಮೆಂಟು. ಅದೂ ಊರೆಲ್ಲಾ ಹುಡುಕಿದರೆ ಒಂದು ನೂರು ನೂರೈವತ್ತು ಪೆಪ್ಪರಮೆಂಟು ಸಿಕ್ಕೀತು.' 'ರಿಪೀಟರ್ ಅಲಾರಂ ಟೈಂಪೀಸಿನಂತೆ ಅರ್ಧರ್ಧ ನಿಮಿಷ ಬಿಟ್ಟು ಬಿಟ್ಟು ಅದೇ ವಿಕಾರವಾದ ಕಿರಿಚಲು "ಪುಕ್ಕಲು ಎಂದು ಇತರರನ್ನು ಅಲ್ಲಗಳೆದವಳು ತಾನೇ ನಿಂತ ಕಡೆಯಲ್ಲಿಯೇ ನೀರು ನೀರಾದಳು' 'ಆಕೆ ಮಾತಿನವಳಲ್ಲ, ಕೆಲಸದವಳು ; ಆದ್ದರಿಂದ ಮಾತು ಅಲ್ಲಿಗೇ ನಿಂತಿತು.' 'ಒಂದು ಕಡೆ ಕದೀಮ ಶಾನುಭೋಗ, ಇನ್ನೊಂದು ಕಡೆ ಘಾಟಿ ಅಮಲ್ದಾರ ಇವರ ಮಧ್ಯೆ ಡೆಪ್ಯುಟಿಕಮೀಷನರು ಕತ್ತರಿಯ ಮಧ್ಯೆ ಅಡಿಕೆ ಸಿಕ್ಕಿ ನರಳುವ ಹಾಗೆ ನರಳುತ್ತಿದ್ದರು ; ಮಾನದಿಂದ ತಪ್ಪಿಸಿಕೊಂಡರೆ ಸಾಕೆಂದು ಕಾಲ ತಳ್ಳುತ್ತಿದ್ದರು. ಆದರೆ ಹಲ್ಲಿಗೆ ಕಲ್ಲು ಸಿಕ್ಕಿದಹಾಗೆ, ಕತ್ತರಿಗೆ ಗೋಟು ಸಿಕ್ಕಿದರೆ, ಗೋಟಿನಲ್ಲಿ ಕತ್ತರಿ ಸಿಕ್ಕಿಕೊಂಡು ಕತ್ತರಿಯ ಬಾಯಿ ಹೋಗುತ್ತದೆ. ಹಾಗಾಯಿತು ಈಗ' 'ಮತ್ತೆ ಇನ್ನೂ ಒಬ್ಬೊಬ್ಬರ ಮನೆಯ ಅನ್ನ ನೋಡಬೇಕು :—ಕೆಳಗೆ ಅಂಗಾರ, ಮೇಲೆ ಮಂತ್ರಾಕ್ಷತೆ, ಮಧ್ಯ ಗೋಪೀಚಂದನ ಅನ್ನುವ ಹಾಗೆ ಇರುತ್ತೆ.'

೯

ಶ್ರೀಪತಿಯ ಕಥೆಗಳಲ್ಲಿ ಕಾಣಬರುವ ಇನ್ನೊಂದು ವಿಶೇಷವನ್ನು ಈ ಸಂದರ್ಭ ದಲ್ಲಿ ನೆನೆಯಬಹುದು. ಜೀವನದಲ್ಲಿ ಕಷ್ಟವಿದೆ, ಕ್ಲೇಶವಿದೆ, ಕಾರ್ಪಣ್ಯವಿದೆ ; ಒಂದು ದೃಷ್ಟಿಯಲ್ಲಿ ಸುಖ, ಸಂತೋಷಗಳಿಗಿಂತ ಹಿಗ್ಗು ನೆಮ್ಮದಿಗಳಿಗಿಂತ ದುಃಖ, ದಂದುಗ, ದುರಂತಗಳೇ ಜೀವನದಲ್ಲಿ ಹೆಚ್ಚು. ಶ್ರೀಪತಿಯ ಕಥೆಗಳಲ್ಲಿ ಕೂಡ ಜೀವನದ ಕಸ ಮುಸುರೆಗಳ ಕಷ್ಟ ಕಾರ್ಪಣ್ಯಗಳ ಚಿತ್ರಗಳೇ ಹೆಚ್ಚಾಗಿ ಬಂದಿವೆ. ಆದರೆ ಶ್ರೀಯುತರು ಸ್ವಭಾವತಃ ರಸಿಕರೂ ಭಾವುಕರೂ ಆಗಿರುವುದರಿಂದ ಈ ಸಂಕಟಪರಂಪರೆಗಳನ್ನು ಸೌಮ್ಯಗೊಳಿಸುವ ನಯವೂ ಸುಂದರವೂ ಶುಭ್ರವೂ ತಿಳಿಯೂ ಆದ ಒಂದು ಸಹಜ ಹಾಸ್ಯದ ಆವರಣವನ್ನು ಅಲ್ಲಲ್ಲಿ ಕಥೆಗಳಲ್ಲಿ ತಂದಿದ್ದಾರೆ. ಜೊತೆಗೆ ನವುರಾದ ವಿನೋದ ಶೀಲ ತಾನೆ ತಾನಾಗಿ ಬುಗ್ಗೆಯಾಡುವ ರೀತಿಯಲ್ಲಿ ಕೆಲವು ಕಥೆಗಳನ್ನು ಬರೆದಿದ್ದಾರೆ. 'ಅಗ್ಗದ ಮದುವೆ' 'ಗೋಟಿನಲ್ಲಿ ಸಿಕ್ಕಿಕೊಂಡ ಕತ್ತರಿ' ಈ ಎರಡು ಕಥೆಗಳೂ ಶುದ್ಧವಾದ ಹಾಸ್ಯಕ್ಕೆ ಉತ್ತಮವಾದ ಉದಾಹರಣೆಗಳಾಗಿವೆ. ಈ ಕಥೆಗಳಲ್ಲಿ ಉದ್ದಕ್ಕೂ ಅಂತರಗಂಗೆಯಾಗಿ ಹರಿಯುವ ಹಾಸ್ಯದ ಸವಿಯನ್ನು ಓದಿಯೇ ಅನು ಭವಿಸಬೇಕು.

೧೦

ಕೊನೆಯದಾಗಿ ಶಾಸ್ತ್ರಿಗಳವರ ಕಥೆಯಲ್ಲಿ ಕಾಣಬರುವ ಸಂವಾದ ಚಾತುರ್ಯ ವನ್ನು ಇಲ್ಲಿ ಪ್ರಶಂಸಿಸಬಹುದು. ಕಥೆಯಲ್ಲಿಯಾಗಲಿ ಕಾದಂಬರಿಯಲ್ಲಿಯಾಗಲಿ ಸಂವಾದ ಬಹುಮುಖ್ಯವಾದ ಮತ್ತು ಸ್ವಾರಸ್ಯವಾದ ಒಂದು ಅಂಗವಾಗಿರು ತ್ತದೆ. ಪಾತ್ರಗಳ ಗುಣಶೀಲಗಳ ಆವಿಷ್ಕಾರಕ್ಕೆ ಸಂವಾದ ಉತ್ತಮವಾದ ಒಂದು

ಸಾಧನ. ರಸದ ಪರಿಪೋಷಣೆಗೂ ನಡೆದ ಘಟನೆಯ ನಿರೂಪಣೆಗೂ ಸಂವಾದ ಸುಂದರವಾದ ವಿಧಾನವಾಗಿದೆ. ಇಂತಹ ಸಂವಾದವನ್ನು ಯಶಸ್ವಿಯಾಗಿ ನಿರ್ವಹಿಸು ವವರು ಮಾತ್ರ ವಿರಳ. ಶ್ರೀ ಶಾಸ್ತ್ರಿಗಳವರು ಇಂತಹ ವಿರಳ ವ್ಯಕ್ತಿಗಳಲ್ಲಿ ಒಬ್ಬರಾಗಿದ್ದಾರೆ. ಅವರ ಅನೇಕ ಕಥೆಗಳು ಸ್ವಾರಸ್ಯವಾಗಿರುವುದಕ್ಕೆ ಅವುಗಳಲ್ಲಿ ಬರುವ ಸಂವಾದವೂ ಮುಖ್ಯವಾದ ಕಾರಣವಾಗಿದೆ. ಸಂವಾದವೇ ಮುಖ್ಯವಾಗಿರುವ ಒಂದೆರಡು ಕಥೆಗಳನ್ನು ಮಾತ್ರ ನಿದರ್ಶನಾರ್ಥವಾಗಿ ಇಲ್ಲಿ ನೋಡಬಹುದು. ಸುಂದರ ವಾದ ಗದ್ಯ ಭಾವಗೀತೆಯಂತಿರುವ 'ನಾಗರ ಪಂಚಮಿ' ಯಲ್ಲಿ ಮೊದಲ ಎರಡು ಪುಟದ ಪೀಠಿಕೆ ಬಿಟ್ಟರೆ ಉಳಿದದ್ದೆಲ್ಲ ಅಣ್ಣ ತಂಗಿಯರ ಸಂವಾದವಾಗಿ ನಿರೂಪಣೆ ಗೊಂಡಿದೆ. 'ಹುಚ್ಚೋ ಅಲ್ಲವೋ' ಕಥೆಯಲ್ಲಿ ಕಥೆಯ ಮೊದಲ ಐದು ಪುಟಗಳ ಬಳಿಕ ಮುಂದಿನ ಕಥೆ ಹೆಡ್ ಗುಮಾಸ್ತರು ನರಸಿಂಗರಾಯರಿಗೂ ಉಪಾಧ್ಯಾಯರಿಗೂ ನಡೆದ ಮಾತನ್ನು ಅದೇ ಉಪಾಧ್ಯಾಯರು ರೈಲಿನಲ್ಲಿ ಕಥೆಗಾರರಿಗೆ ಮರಳಿ ನಿವೇದಿಸಿ ದಂತೆ ನಿರೂಪಣೆಗೊಂಡಿದೆ. 'ಅತ್ತೆ' ಯೆನ್ನುವ ವ್ಯಕ್ತಿಚಿತ್ರದ ಅಥವಾ ಮನೋ ಧರ್ಮಚಿತ್ರದ ಬಹುಭಾಗ ತಾಯಿ–ಮಗ, ಗಂಡ–ಹೆಂಡತಿ, ತಾಯಿ–ಮಗಳು, ಅತ್ತೆ- ಸೊಸೆ ಇವರುಗಳಿಗೆ ಪರಸ್ಪರ ನಡೆದ ಸಂವಾದವಾಗಿ ಪ್ರತಿಪಾದಿತವಾಗಿದೆ. 'ಊಟದಲ್ಲಿ ಉಪಚಾರ' ದ ಗಂಡ ಹೆಂಡಿರ ಸಂವಾದ, ಸಂವಾದಕ್ಕೆ ಉತ್ತಮವಾದ ಮಾದರಿ. ಎಂಟೂವರೆ ಪುಟದ ಈ ಗಂಡ ಹೆಂಡಿರ ಮಾತು ತುಂಬ ಸಹಜವಾಗಿದೆ, ಸ್ವಾರಸ್ಯ ವಾಗಿದೆ. ಇವರಲ್ಲಿ ಒಬ್ಬೊಬ್ಬರು ಆಡುವ ಮಾತೂ ಅವರವರ ಶೀಲಕ್ಕೆ ಚೆನ್ನಾಗಿ ಕನ್ನಡಿ ಹಿಡಿಯುತ್ತದೆ. ಊಟಕ್ಕೆ ಕುಳಿತ ಗಂಡ ಊಟ ಮುಗಿಸಿ ಏಳುತ್ತಾನೆ. ಹೆಂಡತಿ ಎಂಜಲು ಗೋಮ ಹಾಕುತ್ತಾಳೆ. ಈ ನಡುವೆ ನಡೆದ ಮಾತು ಎಂಟೂವರೆ ಪುಟಗಳಿಗೆ ಹರಡಿದೆ. ಆದರೂ ಮಾತು ನೀರು ನೀರಲ್ಲ; ತುಂಬ ಮಾರ್ಮಿಕವಾದದ್ದು.

'ಗುರುಗಳ ಮಹಿಮೆ' ಸಂಪೂರ್ಣವಾಗಿ ಈ ಕೊನೆಯಿಂದ ಆ ಕೊನೆಯವರೆಗೆ ಸಂವಾದದಲ್ಲಿಯೇ ಸಾಗುತ್ತದೆ. ಕಥೆ, ಪಾತ್ರ, ತತ್ತ್ವ—ಈ ಮೂರೂ ಬಹಳ ಸೊಗ ಸಾಗಿ ಪರಿಚಯವಾಗುವಂತೆ ಸಂಭಾಷಣೆಯನ್ನು ಅಳವಡಿಸಲಾಗಿದೆ. ತಾಯಿಯ ಸಂಕಟ, ಗುರುಗಳ ಸಂತಯಿಕೆ ಇವುಗಳ ಇರುಕಿನಲ್ಲಿ ಕಥೆ ಕಾಣುವುದು ಕಷ್ಟವಾದೀ ತೆಂದು ಅದರ ಸಂಗ್ರಹವನ್ನು ಸಣ್ಣ ಅಕ್ಷರಗಳಲ್ಲಿ ಒಂಬತ್ತು ಪಂಕ್ತಿಯಲ್ಲಿ ಕಥೆಯ ಮೊದಲಿಗೆ ಕೊಡಲಾಗಿದೆ. ಮುಂದಿನ ಸಂವಾದದಲ್ಲಿ ಆ ಕಥೆ ವಿವರ ವಿವರವಾಗಿ ಸುರುಳಿ ಬಿಚ್ಚಿಕೊಳ್ಳುತ್ತದೆ. ಈ ಸಂವಾದದಲ್ಲಿ ಅಜ್ಞಳೂ, ಆಶಾಪರಳೂ, ಅಹಂಕಾರ ಮಮಕಾರಗಳ ಸುಳಿಯಲ್ಲಿ ಸಿಕ್ಕಿದವಳೂ ಅಸಹನ ಶೀಲಳೂ ಸ್ವಾರ್ಥಳೂ ಆದ ಹೆಂಗಸಿನ ಚಿತ್ರದ ಎದುರಿನಲ್ಲಿ ಪರಮ ಸಾತ್ವಿಕರೂ ಪರಮ ಶಾಂತರೂ ಪರಮ ಸಂಯ ಮಿಗಳೂ ವೇದೋಪನಿಷತ್ತುಗಳ ಅಂತರಾರ್ಥವನ್ನು ಮನನಮಾಡಿ ಗ್ರಹಿಸಿದ ಮಹಾ ಮಹಿಮರೂ ಜೀವಕೋಟಿಯ ಭೂತ ಭವಿಷ್ಯದ್ವರ್ತಮಾನಗಳ ರಹಸ್ಯವನ್ನು ಬಲ್ಲ ವರೂ ಆದ ಗುರುಗಳ ಚಿತ್ರವನ್ನು ಕಥೆಗಾರರು ಬಿಡಿಸಿದ್ದಾರೆ. ಹದಿನೈದು ಪುಟಗಳ

ಈ ಕಥೆ ಸಂಪೂರ್ಣವಾಗಿ ಗುರು-ತಾಯಿ ಈ ಎರಡು ಪಾತ್ರಗಳ ಸಂಭಾಷಣೆಯಲ್ಲಿಯೇ ಸಾಗುತ್ತದೆ. ಪ್ರಶ್ನೆ, ದುಃಖನಿವೇದನ, ಸಂಕಟದ ಆವಿಷ್ಕರಣ, ಸಕಾಮ ಭಕ್ತಿ, ಇಷ್ಟಾರ್ಥಕ್ಕಾಗಿ ಪ್ರಾರ್ಥನೆ-ಇವು ಮೇಲಿಂದ ಮೇಲೆ ತಾಯಿಯ ಮಾತಿನಲ್ಲಿಯೂ ಪ್ರಶ್ನೆಗೆ ಮರುಪ್ರಶ್ನೆ, ಸಂಕಟಕ್ಕೆ ಸಮಾಧಾನ, ದೃಷ್ಟಾಂತದ ಮೂಲಕ ಉಪದೇಶ, ಕರ್ಮರಹಸ್ಯದ ವಿವರಣೆ ಇವು ಮೇಲಿಂದ ಮೇಲೆ ಗುರುವಿನ ಮಾತಿನಲ್ಲಿಯೂ ಕಾಣಬರುತ್ತವೆ. ನಿಗೂಢವಾದ ತತ್ತ್ವರಹಸ್ಯವೊಂದನ್ನು ಕಥೆಗಾರರು ಅತ್ಯಂತ ಮನೋಜ್ಞವಾಗಿ ಪರಿಣಾಮಕಾರಿಯಾಗಿ ಇಲ್ಲಿ ನಿರೂಪಿಸಿದ್ದಾರೆ. ಶಾಸ್ತ್ರಿಗಳವರ ಕಥನ ಕೌಶಲಕ್ಕೆ ಈ ಒಂದು ಕಥೆ ಸಾಕು.

೧೧

ಈ ಸಣ್ಣ ಅವಲೋಕನದಲ್ಲಿ ಎಲ್ಲವನ್ನೂ ವಿವರಿಸುವುದು ಸಾಧ್ಯವಿಲ್ಲವೆಂದು ಮೊದಲೇ ಹೇಳಿದೆ. ಇಷ್ಟು ಮಾತ್ರ ಹೇಳಿ ಲೇಖನಿಯನ್ನು ಕೆಳಗಿಡುತ್ತೇನೆ. ಶ್ರೀಪತಿಯ ಕಥೆಗಳನ್ನು ಓದಿದ ಪಾಠಕನು ವಿಚಾರಪರನಾಗುತ್ತಾನೆ. ಈ ವಿಚಾರಪರತೆ ತನಗೇ ಗೊತ್ತಿಲ್ಲದಂತೆ ತನ್ನಲ್ಲಿ ನಡೆಯಲು ಮೊದಲಾಗಿ ತನ್ನ ಮನಸ್ಸಿಗೆ ಉತ್ತಮವಾದ ಒಂದು ಸಂಸ್ಕಾರವನ್ನು ತಂದು ಕೊಡುತ್ತದೆ. ಮನುಷ್ಯನಿಗೆ ಇದಕಿಂತ ಹೆಚ್ಚಿನ ಲಾಭ ತಾನೆ ಯಾವುದಿದೆ! ಸಾಹಿತ್ಯ ತಾನೆ ಇದಕ್ಕಿಂತ ಹೆಚ್ಚಿನದೇನನ್ನು ಮಾಡೀತು!

ಎಸ್. ವಿ. ಪರಮೇಶ್ವರಭಟ್ಟ.

# ಸಂಸ್ಕೃತ ನಾಟಕ

ಒಂದು ಪ್ರದೇಶದ ಸಂಸ್ಕೃತಿಯನ್ನು ಅರಿತುಕೊಳ್ಳುವುದರಲ್ಲಿ ಅಲ್ಲಿಯ ಭಾಷೆ ಮತ್ತು ಆ ಭಾಷೆಯಲ್ಲಿ ಬರೆದ ಗ್ರಂಥಗಳು ಬಹಳ ಸಹಾಯಮಾಡುತ್ತವೆ. ಯಾವ ಭಾಷೆಯಾದರೂ ಸರ್ವಾಂಗಪರಿಪುಷ್ಟಿಯನ್ನು ಹೊಂದಬೇಕಾದರೆ ಕೇವಲ ಸಾಹಿತ್ಯ ಗ್ರಂಥಗಳಲ್ಲದೆ ಶಾಸ್ತ್ರಗ್ರಂಥಗಳೂ ಆ ಭಾಷೆಯಲ್ಲಿ ಹುಟ್ಟುವುದು ಆವಶ್ಯಕ. ಭಾರತದ ಪ್ರಾದೇಶಿಕ ಭಾಷೆಗಳಲ್ಲಿ ಸಾಹಿತ್ಯಗ್ರಂಥಗಳೇ ಹೆಚ್ಚಿಗೆ ಬೆಳೆದು ಬರಲು ಶಾಸ್ತ್ರಜ್ಞಾನ ಕ್ಕಾಗಿ ಸಂಸ್ಕೃತವನ್ನು ಶರಣುಹೋಗುವುದು ಪರಂಪರಾಗತವಾದದ್ದೇ ಕಾರಣ. ಆದರೂ ಆಗೀಗ ಸಾಹಿತ್ಯವಿಮರ್ಶೆ, ವ್ಯಾಕರಣ, ಛಂದಸ್ಸು, ಅಲಂಕಾರಗಳಿಗೆ ಸಂಬಂಧಿಸಿದ ಗ್ರಂಥಗಳು ಕನ್ನಡದಲ್ಲಿ ಉದಯಿಸುತ್ತ ಬಂದಿವೆ. ಕನ್ನಡದ ಹೊಸ ಯುಗದಲ್ಲಿ ಈ ಜಾತಿಗೆ ಸೇರುವ ಒಂದು ಅತ್ಯುತ್ತಮ ಗ್ರಂಥವೆಂದರೆ ಪೂಜ್ಯ ಎ. ಆರ್. ಕೃಷ್ಣಶಾಸ್ತ್ರಿಗಳ 'ಸಂಸ್ಕೃತ ನಾಟಕ.' ಭಾರತೀಯ ದೃಶ್ಯಕಾವ್ಯಗಳ ಬಗ್ಗೆ ತಿಳಿದುಕೊಳ್ಳುವಲ್ಲಿ ಮೊದಲು ಬರುವುದು ಭರತನ ನಾಟ್ಯಶಾಸ್ತ್ರ. ಅಲ್ಲಿಂದ ಹಿಡಿದು ಅನಂತರ ಬಂದ ದಶರೂಪಕ, ಭಾವಪ್ರಕಾಶನ, ಪ್ರತಾಪರುದ್ರೀಯ, ಏಕಾವಳಿ, ಸಾಹಿತ್ಯದರ್ಪಣ ಮುಂತಾದ ಹಲವಾರು ಗ್ರಂಥಗಳನ್ನು ಪರಿಶೀಲಿಸಿದ ಮಹಾಪಂಡಿತರಾದ ಶಾಸ್ತ್ರಿಗಳು ನಾಟ್ಯದ ಮೇಲಣ ತಮ್ಮ ಜ್ಞಾನಕೋಶದ ಸಾರವನ್ನು ಕನ್ನಡ ನಾಟ್ಯರಸಿಕರ ಅಭಿರುಚಿ ವಿಕಾಸದ ಸಲುವಾಗಿ 'ಸಂಸ್ಕೃತ ನಾಟಕ' ವೆಂಬ ಗ್ರಂಥದಲ್ಲಿ ಭಟ್ಟಿ ಇಳಿಸಿಕೊಟ್ಟಿದ್ದಾರೆ.

'ಸಲಕ್ಷಣಸರ್ವಗಾತ್ರ' ವಾದ ಪ್ರಸ್ತುತಗ್ರಂಥದ ಒಂದನೆಯ ಭಾಗದಲ್ಲಿ ಸಂಸ್ಕೃತ ನಾಟಕದ ಸ್ವರೂಪ ಮತ್ತು ಉತ್ಪತ್ತಿಗಳನ್ನೂ ಎರಡನೆಯದರಲ್ಲಿ ಉಚ್ಛ್ರಾಯಕಾಲವನ್ನೂ ಮೂರನೆಯದರಲ್ಲಿ ಮಧ್ಯಮ ಕಾಲವನ್ನೂ ನಾಲ್ಕನೆಯ ದರಲ್ಲಿ ಕ್ಷೀಣಕಾಲವನ್ನೂ ವಿಶದಪಡಿಸಲಾಗಿದೆ. ಈಗ ತಿಳಿದು ಬಂದಿರುವ ಸಂಸ್ಕೃತ ರೂಪಕಗಳ ಅಕಾರಾದಿಯನ್ನು ಐದನೆಯ ಭಾಗದಲ್ಲಿ ಅನುಬಂಧವಾಗಿ ಕೊಡಲಾಗಿದೆ.

ನಾಟ್ಯಸ್ವರೂಪವನ್ನು ವಿವರಿಸುತ್ತ ನೃತ್ತ, ನೃತ್ಯ, ನಾಟ್ಯಗಳ ಭೇದವನ್ನು ಹೇಳಲಾಗಿದೆ. ಈ ನಾಟ್ಯಕ್ಕೆ ರೂಪ ಅಥವಾ ರೂಪಕವೆಂಬುದು ಜಾತಿವಾಚಕ. ಈ ರೂಪಕಭೇದಗಳನ್ನೇ ನಾವಿಂದು ನಾಟಕವೆಂದು ರೂಢಿಯಲ್ಲಿ ಹೇಳುತ್ತೇವೆ. ಮೂಲತಃ 'ನಾಟಕ' ರೂಪಕ ಜಾತಿಯಲ್ಲಿ ಒಂದು ವಿಶಿಷ್ಟ ರೀತಿಯ ಕೃತಿ. ಪ್ರೇಕ್ಷಕರಿಗೆ ರಸಾನುಭವವುಂಟಾಗುವುದೇ ರೂಪಕಾಭಿನಯದ ಫಲ. ಈ ಸಿದ್ಧಿಗಾಗಿ ಆಂಗಿಕ, ವಾಚಿಕ, ಆಹಾರ್ಯ, ಸಾತ್ವಿಕಗಳೆಂಬ ನಾಲ್ಕು ಬಗೆಯ ಅಭಿನಯವನ್ನು ರೂಪಕ ಅಳವಡಿಸಿಕೊಂಡಿದೆ. ನಾಟಕದಲ್ಲಿಯ 'ಅವಸ್ಥಾನುಕರಣ' ವನ್ನು ಉಲ್ಲೇಖಿಸಿ, ವಿವಿಧ ಲಕ್ಷಣಕಾರರು ಹೇಗೆ ನಾಟ್ಯಸ್ವರೂಪವನ್ನು ಒಂದೇ ರೀತಿಯಾಗಿ,

ಹೇಳುತ್ತ ಬಂದಿದ್ದರೂ ವಸ್ತುಸ್ಥಿತಿಯಲ್ಲಿ ಅದು ಕ್ರಮವಾಗಿ ಮಾರ್ಪಡುತ್ತ ಬಂದಂತೆ ಊಹಿಸಲು ಅವಕಾಶವಿದೆ ಎಂದು ಅಭಿಪ್ರಾಯಪಟ್ಟಿರುವುದು ಗಮನಾರ್ಹವಾಗಿದೆ.

ಕೇವಲ ಲೋಕವೃತ್ತದ ಅನುಕರಣ (Imitation, Mimicry) ಅಕ್ಷರಶಃ ನಡೆದಲ್ಲಿ ಅದು ನಾಟಕಾಭಿನಯವೆನಿಸದೆಂಬುದು ಇಲ್ಲಿ ಅಧ್ಯಾಹೃತ. ನಾಟಕದಲ್ಲಿ 'ರಸೋತ್ಪತ್ತಿಗೆ ನೃತ್ಯಗೀತಗಳು ಪರಿಪೋಷಕಗಳಾಗಬಹುದು; ಆದರೆ ಆವಶ್ಯಕ ವಾಗಬೇಕಾಗಿಲ್ಲ' ಎಂದಿರುವುದರಿಂದ ನಾಟಕವು ಭಾವವ್ಯಂಜನೆಗೆ ವ್ಯಾವಹಾರಿಕ ಸಾಧನಗಳನ್ನಲ್ಲದೆ ಇತರ ಕಲೆಗಳ ಸಹಾಯವನ್ನೂ ತೆಗೆದುಕೊಳ್ಳುವುದು ಸುಸ್ಪಷ್ಟ. ಯಾವ ಕಲಾಕೃತಿಯೇ ಆಗಲಿ ರಸಿಕನ ಮನಸ್ಸನ್ನು ರಸಾವಸ್ಥೆಗೆ ಮುಟ್ಟಿಸಲು ಬಳಸಿ ಕೊಳ್ಳುವ ಕಾರಣ ಸಾಮಗ್ರಿಗಳಲ್ಲಿ ವ್ಯವಹಾರ ಸಾಧಾರಣ ಸಾಧನಗಳಲ್ಲದೆ ವಿಶಿಷ್ಟ ಸಾಧನಗಳನ್ನೂ ಒಳಗೊಳ್ಳಬಹುದು. ಆದುದರಿಂದ ಕಲಾಕೃತಿ ಕೇವಲ ಯಥಾ ನಕಲು ಮಾಡುವ ಪ್ರತಿಕೃತಿಯಲ್ಲ; ನಮ್ಮ ವ್ಯವಹಾರ ಜೀವನದಲ್ಲಿಯ ಸನ್ನಿವೇಶ, ಸಂಗತಿ, ವ್ಯಕ್ತಿ, ಭಾವಗಳ ಕಾರ್ಬನ್ ಕಾಪಿಯಲ್ಲ. ಅದರಿಂದಲೇ ರಸವು ಲೌಕಿಕವಾದ ಮಾನ ಸಿಕ ಸಂವೇದನೆಗಳಿಗಿಂತ ಭಿನ್ನ ಎನ್ನಲಾಗಿದೆ. ಲೌಕಿಕ ಸಾಧನಗಳೂ ಕವಿಪ್ರತಿಭೆಯ ಬಲದಿಂದ ರಸನಿಷ್ಪಾದಕ ಕಾರಣ ಸಾಮಗ್ರಿಗಳಾಗುತ್ತವೆ.

ಭರತನು ಶಾಂತರಸವನ್ನು ಹೇಳದಿರಲು ನಾಟಕದಲ್ಲಿ ಅದನ್ನು ವ್ಯಂಜಿಸುವುದು ಅಸಾಧ್ಯ ಎಂದು ಆತನು ತಿಳಿದುದು ಕಾರಣವಾಗಿರಬಹುದು. ಆದರೆ ಶಿಲ್ಪ, ಚಿತ್ರ ಗಳಲ್ಲಿ ಶಾಂತತೆಯನ್ನು ಮೂಡಿಸಲು ಸಾಧ್ಯವಾಗಿರುವಾಗ, ವರ್ಣಾತ್ಮಕ ಶಬ್ದಗಳಿಂದ ಅದನ್ನು ಸೂಚಿಸಲು ಬರುವಾಗ ಅವುಗಳಷ್ಟೇ ಸ್ಥೂಲ ಸಾಧನಗಳನ್ನು ಬಳಸುವ ನಾಟಕದಲ್ಲಿ ಅದೇಕೆ ಅಸಾಧ್ಯ ಎಂಬ ಪ್ರಶ್ನೆ ಉತ್ತರಕ್ಕಾಗಿ ದಾರಿಕಾಯುತ್ತದೆ. 'ಕನ್ನಡ ಕೈಪಿಡಿ' ಯಲ್ಲಿ ಹೇಳಿರುವಂತೆ ನಾಟ್ಯದಲ್ಲಿ ಅಭಿನಯವೇ ಪ್ರಧಾನವಾದ್ದರಿಂದ, ಅನು ಭಾವಗಳೇ ಇಲ್ಲದೆ, ಅಥವಾ ಇದ್ದರೂ ಸೂಕ್ಷ್ಮವಾಗಿಯೂ ಅಲ್ಪವಾಗಿಯೂ ಇರುವ, ಶಾಂತವನ್ನು ಅಭಿನಯಿಸಿ ತೋರಿಸುವುದು ಕಷ್ಟ. ಅಲ್ಲದೆ ಇದರಿಂದ ಭಾವಾಂತರ ಗಳು ಹುಟ್ಟುವುದಿಲ್ಲ ಎಂಬುದು ಪಾಕ್ಷಿಕಸತ್ಯವೆಂದು ಒಪ್ಪಬಹುದು. ಏಕೆಂದರೆ ಅಭಿನಯ ಚತುರ್ವಿಧ; ಅದರಲ್ಲಿ ನಟಶರೀರದ, ಸುತ್ತಲಿನ ಸನ್ನಿವೇಶದ ಮತ್ತು ಇತರ ಸಾಧನಗಳ ಮೂರ್ತತ್ವವೂ ಶ್ರವ್ಯಕಾವ್ಯದಲ್ಲಿಯ ವಾಚಿಕಸಾಧನವೂ ಅಡಕ ವಾಗುತ್ತವೆ. ಅಲ್ಲದೆ, ಅದು ಅಂಗಿರಸವಾದಾಗ ಅದರಿಂದ ಭಾವಾಂತರಗಳು ಹುಟ್ಟು ವುದು ಅನವಶ್ಯಕ ಮತ್ತು ಅನಪೇಕ್ಷಣೀಯ. ಆದುದರಿಂದ ಶ್ರವ್ಯಕಾವ್ಯಕ್ಕೂ ಮೂರ್ತಿ ಶಿಲ್ಪಕ್ಕೂ ಶಾಂತತೆಯನ್ನು ವ್ಯಂಜಿಸಲು ಸಾಧ್ಯವೆಂದಾದರೆ ದೃಶ್ಯದಲ್ಲಿ ಶಾಂತವನ್ನು ಪ್ರೇಕ್ಷಕನ ಮನಸ್ಸಿಗೆ ತರಲು ಅಸಾಧ್ಯವೆನ್ನಲಾಗದು ಎಂಬ ಮಾತು ನಮ್ಮೆದುರು ಬರುತ್ತದೆ. ಈ ಸಂದರ್ಭದಲ್ಲಿ ಪೂಜ್ಯ ತೀ. ನಂ. ಶ್ರೀಕಂಠಯ್ಯನವರು ತಮ್ಮ 'ಭಾರತೀಯ ಕಾವ್ಯಮೀಮಾಂಸೆ' ಯ ೪೧೭ ನೆಯ ಪುಟದಲ್ಲಿ 'ನಾಗಾನಂದ' ನಾಟಕದ ಉದಾಹರಣೆಯನ್ನೆತ್ತಿಕೊಂಡು ವಿವೇಚಿಸಿರುವುದನ್ನೂ ಅಡಿ ಟಿಪ್ಪಣಿಯಲ್ಲಿ

'ಶಾಂತೋ ವಾಸ್ತು ವೀರೋ ವಾ....ದಯೋತ್ಸಾಹಸ್ಯ ವಿಷಯೇಷ್ವನಾಸ್ಥಾ ಧರ್ಮಾದಿಷು ನಿರ್ಬಂಧಃ, ಅನ್ಯತ್ರ ವಿಷಯನಿವೃತ್ತಿಃ ಮೈತ್ರ್ಯಾದಿನಿರ್ಬಂಧ ಇತಿ ದಯೋತ್ಸಾಹಶಮಯೋಃ ನಾತೀವ ಭೇದಃ' ಎಂಬ ಶಿವರಾಮೋಕ್ತಿಯನ್ನು ಕೊಟ್ಟಿರುವುದನ್ನೂ ಗಮನಕ್ಕೆ ತಂದುಕೊಳ್ಳಬಹುದು.

ಪ್ರಸ್ತುತ ಗ್ರಂಥದ ೧೯ನೆಯ ಪುಟದಲ್ಲಿ 'ಆದರೆ ನಾಟಕವು ಗಾನನೃತ್ಯಮಯವಾಗಿರುವುದರಿಂದಲೂ, ಗದ್ಯಕ್ಕಿಂತ ಪದ್ಯವೇ,–ಓದುಪದ್ಯಕ್ಕಿಂತ ಹಾಡುಪದ್ಯವೇ–ಗಾನಕ್ಕೆ ಅನುರೂಪವಾದದ್ದರಿಂದಲೂ ನಾಟಕವು ಮೊದಲು, ಪೂರ್ತಿಯಾಗಲ್ಲದಿದ್ದರೆ ಬಹುಮಟ್ಟಿಗಾದರೂ, ಗಾನಯೋಗ್ಯವಾದ ಛಂದಸ್ಸಿನಿಂದಲೇ ರಚಿತವಾಗಿದ್ದಿರಬೇಕು–ಎಂದು ಊಹಿಸಬಹುದು...ಆದರೆ ಕಾಳಿದಾಸನ ಕಾಲದಲ್ಲಿಯಾಗಲಿ, ಭವಭೂತಿಯ ಕಾಲದಲ್ಲಿಯಾಗಲಿ ಪದ್ಯಗಳನ್ನೆಲ್ಲಾ ಹಾಡಿ, ಕುಣಿದು, ನಾಟಕವನ್ನು ಪ್ರಯೋಗಿಸುತ್ತಿದ್ದರೇ ಅಥವಾ ಯಾವ ವೃತ್ತವನ್ನು ಹಾಡುತ್ತಿದ್ದರು, ಯಾವುದನ್ನು ಹೇಳುತ್ತಿದ್ದರು, ಎಂಬುದು ಗೊತ್ತಾಗುವುದಿಲ್ಲ' ಎಂದಿದೆ. ಇಲ್ಲಿ ಛಂದೋಬದ್ಧ ವಾಕ್ಯಗಳನ್ನು ನಾವಿಂದು ಗದ್ಯವನ್ನು ಓದುವಂತೆ ಓದುವ ಪದ್ಧತಿ ಹಿಂದಿತ್ತೇ ಎಂಬುದನ್ನು ನಿರ್ಣಯಿಸಬೇಕಾಗುತ್ತದೆ. ಅಂದರೆ ಓದುಪದ್ಯ, ಹಾಡುಪದ್ಯ ಅಥವಾ ಅಕಾಲ ಪದ್ಯ, ಸಕಾಲ ಪದ್ಯ ಎಂಬ ಭೇದವನ್ನಿಟ್ಟುಕೊಂಡು ಕೇವಲ ಸಕಾಲ ಪದ್ಯವನ್ನಷ್ಟೇ ಹಿಂದೆ ಹಾಡುತ್ತಿದ್ದರೇ ಎಂದು ಕೇಳಬೇಕಾಗುತ್ತದೆ. ಭಾಸಾದಿಗಳ ಯಾವ ನಾಟಕದಲ್ಲೂ ಸಕಾಲ ಪದ್ಯವನ್ನು ಉದ್ದೇಶಪೂರ್ವಕವಾಗಿ ರಚಿಸಿದ್ದಕ್ಕೆ ನಿದರ್ಶನ ಕಂಡುಬರುವುದಿಲ್ಲ. ವೃತ್ತವು ಅನುಷ್ಟುಪ್ ಆಗಿರಲಿ ಸ್ರಗ್ಧರಾಶಾರ್ದೂಲ ರೂಪದಲ್ಲಿರಲಿ ಅದು ಕಾಲಾನುಗುಣವಾಗಿ ರಚಿತವಾಗಿಲ್ಲ. ಹೀಗಿರುವಾಗ ಮತ್ತು ಸಂಗೀತಗಾರರಿಂದು ಅಕ್ಷರ ವೃತ್ತಗಳೆಲ್ಲವನ್ನೂ ,ಹಾಡಿತೋರಿಸುತ್ತಿರುವುದರಿಂದ ವೃತ್ತಗಳ ಅಳತೆ ಗೇಯತ್ವನಿರ್ಣಾಯಕವೆನ್ನಲು ಸಾಧ್ಯವಾಗದು ; ಕೆಲ ವೃತ್ತಗಳು ಹಾಡಲು ಸುಲಭ, ಕೇಳಲು ಸರಳ, ಎಂಬಂಥ ಮಾತಷ್ಟನ್ನು ಆಡಬಹುದು ಎಂಬೀ ವಿಚಾರ ನಮಗೆದುರಾಗುತ್ತದೆ.

'ಗದ್ಯ ಮೊದಲಿನಿಂದಲೂ ಇತ್ತೇ ಆಮೇಲೆ ಬಂತೇ?' ಎಂಬ ಪ್ರಶ್ನೆಯೂ ವಿಚಾರಣೀಯ. ಭರತನು ಎಂದು ಅಭಿನಯದಲ್ಲಿ 'ವಾಚಿಕ'ವನ್ನು ಅಂಗವಾಗಿ ತೆಗೆದುಕೊಂಡನೋ ಅಂದೇ ಈ ಪ್ರಶ್ನೆ ನಿರ್ಣೀತವಾಗಿರಬೇಕು. ವಾಚಿಕವೆಂಬ ಪದಗ್ರಹಣದಿಂದ ಭರತ ಗದ್ಯ-ಪದ್ಯ ಅಥವಾ ಓದು–ಹಾಡುಗಳೆರಡನ್ನೂ ಅರ್ಥಯಿಸಿರಬಹುದೆಂದು ತರ್ಕಿಸಬಹುದು. ಕೇವಲ ಹಾಡಷ್ಟೇ ನಾಟಕದ ಸಾಹಿತ್ಯಾಂಶವಾಗಿದ್ದರೆ ವಾಚಿಕವೆಂಬ ವ್ಯಾಪಕ ಪದವನ್ನು ಬಳಸದೆ ಗೇಯವೆಂದೋ ಗೀತವೆಂದೋ ಛಂದೋಮಯವಾಣಿಯೆಂದೋ ಭರತನು ಉಲ್ಲೇಖಿಸುತ್ತಿದ್ದನು. ಅಥವಾ ವಾಚಿಕಕ್ಕೆ ಕೇವಲ ಗದ್ಯವೆಂಬ ಅರ್ಥವನ್ನೆಂದೂ ಮಾಡಲು ಸಾಧ್ಯವಿಲ್ಲ. ಆದುದರಿಂದ ಗದ್ಯ ಯಾವಾಗ ನಾಟಕವನ್ನು ಹೊಕ್ಕಿತೆಂಬುದಕ್ಕಿಂತ ಪದ್ಯ ಯಾವಾಗ ಹೊಕ್ಕಿತೆಂದು

ಕೇಳಿದರೆ ಒಮ್ಮೆ ನ್ಯಾಯವಾದೀತೆಂಬ ಸಂದೇಹ ಉಂಟಾಗುವುದು ಸಹಜ. 'ವಾಚಿಕ' ಎಂದರೆ Verbal—ಶಾಬ್ದಿಕ ಎಂದೂ Message—ಸಂದೇಶ ಎಂದೂ ಅರ್ಥ ವಾಗುತ್ತದೆ. ನಮಗೆ ಉಪಲಬ್ಧವಾದ ಎಲ್ಲ ಸಂಸ್ಕೃತರೂಪಕಗಳಲ್ಲೂ ಗದ್ಯ-ಪದ್ಯ ಗಳೆರಡೂ ಕಂಡು ಬಂದ ಪ್ರಸಂಗದಿಂದ 'ವಾಚಿಕ' ದಲ್ಲಿ ಅವೆರಡೂ ಅಡಕವಾಗಿವೆ ಎನ್ನಲಡ್ಡಿಯಿಲ್ಲ. ಭರತನ ಕಾಲವಲ್ಲಿ ಮಾತು (Sing-song) ಅರೆವಾಡಾಗಿ ತ್ತೆನ್ನಲು ಆಧಾರವಿಲ್ಲ. ಸಂಸ್ಕೃತ ಪ್ರಾಕೃತಗಳನ್ನು ಪಾತ್ರ ಯೋಗ್ಯತಾನುಸಾರವಾಗಿ ಬಳಸಬೇಕೆಂಬ ಭರತನ ವಾಸ್ತವಿಕತಾಪ್ರಿಯತೆ ಸ್ಪಷ್ಟವಾಗಿರುವಾಗ ಮಾತಿನ ಗದ್ಯ ಸ್ವರೂಪವನ್ನು ಯಥಾವತ್ತಾಗಿ ಬಳಸಬೇಕೆಂಬುದೇ 'ವಾಚಿಕ' ದ ಅರ್ಥವಾಗುವುದು ನ್ಯಾಯ. ನೃತ್ಯ ನಾಟಕವಲ್ಲ, ಆದರೆ ಅದಕ್ಕೆ 'ವಾಚಿಕ' ಸೇರಿ ನಾಟಕವಾದುದ ರಿಂದ, ಸಂಗೀತದ ಉಪಸ್ಥಿತಿಯ ಮೂಲಕ ಗೇಯವಾದ ಪದ್ಯವನ್ನು ಅದೇ ಕಾಲದಲ್ಲಿ 'ವಾಚಿಕ' ಒಳಗೊಂಡಿತು ಎನ್ನಬಹುದು.

ಅಶ್ವಘೋಷ, ಭಾಸ, ಕಾಳಿದಾಸ ಮುಂತಾದ ನಾಟಕಕಾರರ ನಾಟಕಗಳ ಬಗ್ಗೆ ಶಾಸ್ತ್ರಿಗಳು ಬರೆದ ವಿಮರ್ಶೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಅವರ ಹೃದಯ ಭಾಸಪಕ್ಷಪಾತಿಯಾಗಿವೆ ಎಂದು ತೋರುತ್ತದೆ. ಸ್ವವಿಷಯವನ್ನು ಸ್ವಲ್ಪವೂ ಹೇಳದಿರುವ ಅವನ ದಾಕ್ಷಿಣ್ಯ, ಅವನ ಪ್ರತಿಮಾನಾಟಕ ಮತ್ತು ಸ್ವಪ್ನವಾಸವ ದತ್ತಗಳಲ್ಲಿಯ ಪಾತ್ರಗಳ ನಯ, ನಾಗರಿಕತೆ, ಗಾಂಭೀರ್ಯ, ಮಾರ್ದವ ಮುಂತಾದ ಗುಣಗಳ ಆಕರ್ಷಕತೆ ವಿಮರ್ಶಕರ ಹೃದಯವನ್ನು ಸೂರೆಗೊಂಡಂತೆ ತೋರುತ್ತದೆ. ೭೦-೭೧ನೆಯ ಪುಟಗಳಲ್ಲಿ ಅವರು ಸ್ವಪ್ನ ಸನ್ನಿವೇಶವನ್ನು ವಿವರಿಸುವಾಗ ವಾಸವ ದತ್ತಾ ವತ್ಸರಾಜರ ಪ್ರಣಯದ ಪಕ್ವತೆಯನ್ನು ಮೆಚ್ಚಿ ಕೊಂಡಾಡಿರುವುದು ಹೃದ ಯಂಗಮವಾಗಿದೆ.

'ಇದರಲ್ಲಿ ವಾಸವದತ್ತಾ ವತ್ಸರಾಜರ ಪ್ರೇಮವು ಬಹು ಚೆನ್ನಾಗಿ ಚಿತ್ರಿತ ವಾಗಿದೆ; ಅವರು ಈಗ ತಾರುಣ್ಯಭರದಲ್ಲಿ ಗುರು ಹಿರಿಯರಿಗೆ ಹೇಳದೆ ಓಡಿಹೋದ ಅಂಧ ಪ್ರಣಯಿಗಳಲ್ಲ; ಅವರ ಪ್ರಣಯವು ತಿಳಿಯಾಗಿ ಮಧುರವಾಗಿ ಸ್ಥಿರವಾಗಿ ನಿಂತಿದೆ; ಅದನ್ನು ಯಾರೂ ಯಾವ ಕಾರಣದಿಂದಲೂ ಚಲಿಸುವಂತಿಲ್ಲ; ಅದು ಎಂಥ ಸ್ವಾರ್ಥತ್ಯಾಗ ಮಾಡಬಲ್ಲ ಪವಿತ್ರಪ್ರೇಮವೆಂಬುದನ್ನು ಇಲ್ಲಿ ಚೆನ್ನಾಗಿ ನೋಡ ಬಹುದು; ವತ್ಸರಾಜನು ಇಲ್ಲಿ ಅಂತಃಪುರದ ಪರಿಚಾರಿಕೆಯನ್ನು ಹುಡುಕಿಕೊಂಡು ಹೋಗುತ್ತಿರುವ ಧೀರಲಲಿತನಲ್ಲ; ಪದ್ಮಾವತಿಯಂಥ ಪರಮ ಸಾತ್ವಿಕಳೂ ಸುಂದರಿಯೂ ಯೌವನೆಯೂ ಆದ ಹೆಂಡತಿಯನ್ನು ಮದುವೆಯಾದರೆ ಅದು ಇತರರ ಬಲವಂತಕ್ಕೆ; ವಾಸವದತ್ತೆ ಸತ್ತು ಹೋಗಿದ್ದಳೆಂದು; ಅಂಥ ಒಳ್ಳೆಯ ಎರಡನೆಯ ಹೆಂಡತಿ ಬಂದಿದ್ದರೂ, ಅವಳನ್ನು ಅತಿಯಾಗಿ ಪ್ರೀತಿಸುವುದಿರಲಿ, ಮೊದಲನೆಯ ಹೆಂಡತಿಯನ್ನು ನೆನೆನೆನೆಸಿಕೊಂಡು ಶೋಕಿಸುತ್ತಿರುವನು. ನಿದ್ರೆಯಲ್ಲಿ ಆವಳು ಅವನ ತೋಳನ್ನು ಎತ್ತಿ ಇಡುತ್ತಿದ್ದ ಹಾಗೇ ಅದು ವಾಸವದತ್ತೆಯ ಸ್ಪರ್ಶವೆಂದು

ಗ್ರಹಿಸಿ ಅವನು ಧಿಗ್ಗನೆ ಏಳುವನು..." ಇತ್ಯಾದಿ. ಇಲ್ಲಿ ವತ್ಸರಾಜನ ಗಾಢ ಪ್ರೇಮವನ್ನೂ, ವಾಸವದತ್ತೆ ಅಂಥ ಪ್ರೇಮದಿಂದ ಮಾಡುವ ಅಮಾನುಷವೆನಿಸಬಹು ದಾದ ಸ್ವಾರ್ಥತ್ಯಾಗವನ್ನೂ ಕಂಡು ಮೆಚ್ಚುವ ರಸಿಕ ಹೃದಯ ವಿಮರ್ಶಕತೆಯ ಸಮೀಚೀನತೆಗೊಂದು ನಿಕಷವಾಗಿದೆ; ಕೌಟುಂಬಿಕ ಜೀವನದ ಪರಮಾದರ್ಶದ ಕಾಣ್ಕೆಗೆ ಸಾಕ್ಷಿಯಾಗಿದೆ.

ಪ್ರತಿಮಾನಾಟಕದ ಬಗ್ಗೆ ಹೇಳುವಾಗ ಭಾಸ ಮಾಡಿದ ಪಾತ್ರ ಸ್ವಭಾವ ಪರಿವರ್ತನ ಇಂತಿದೆ ಎನ್ನಲಾಗಿದೆ :

'ಇಲ್ಲಿ ಕೈಕೆ ರಾಮಾಯಣದಲ್ಲಿರುವಂತೆ ಪುತ್ರಮೋಹದಿಂದ ನಿಷ್ಠುರವಾಗಿ ನಡೆದುಕೊಳ್ಳುವವಳಲ್ಲ; ಭರತನು ಸೋದರನ ವನವಾಸವು ಮುಗಿಯುವತನಕ ನಿಶ್ಚಲ ನಾಗಿದ್ದು ಅವಧಿ ಪೂರಯಿಸಿದ ನಂತರ ನಿರಾಶೆಯಿಂದ ಆತ್ಮಹತ್ಯೆ ಮಾಡಿಕೊಳ್ಳಲು ಚಿಂತಿಸುವವನಲ್ಲ; ಕೈಕೆ ವನವಾಸಕ್ಕೆ ಕಾರಣಳಾದರೆ ಅದು ವಿಧಿವಿಲಾಸ; ರಾಮ ನಲ್ಲಿ ಅವಳಿಗೆ ಭರತನಿಗಿಂತ ಹೆಚ್ಚು ಪ್ರೀತಿ; ಸೀತೆ ಕೇವಲ ಪ್ರೇಮಮಯಿ; ಭರತ ಲಕ್ಷ್ಮಣರಲ್ಲಿ ಅವಳಿಗೆ ತನ್ನ ಮಕ್ಕಳಿಗಿಂತ ಹೆಚ್ಚು ವಿಶ್ವಾಸ; ಭರತನಿಗೆ ರಾಮನಲ್ಲಿ ಅಪಾರವಾದ ಗುರುಭಕ್ತಿ...ಈ ಪಾತ್ರಗಳ ರೂಪರೇಖೆಗಳನ್ನು ನಯವಾಗಿ ತಿದ್ದು ವುದರಲ್ಲಿಯೂ ಅದಕ್ಕೆ ಅನುಕೂಲವಾಗುವಂತೆ ವಸ್ತುವನ್ನು ವ್ಯತ್ಯಾಸಪಡಿಸಿಕೊಂಡು ಸಂವಿಧಾನವನ್ನು ರಚಿಸುವುದರಲ್ಲಿಯೂ ಭಾಸನು ಅಪಾರ ಕೌಶಲವನ್ನು ತೋರಿ ಸಿದ್ದಾನೆ' ಎಂದು ಮೆಚ್ಚಿಕೊಂಡ ಶಾಸ್ತ್ರಿಗಳಹೃದಯ ಸುಹೃದಯ-ಸಹೃದಯ. 'ಕಲೆ ಗಾರನ ಗುಟ್ಟು ಕಲೆಗಾರನೇ ಬಲ್ಲ' ಎಂಬಂತೆ ಭಾಸ ಹೃದಯವನ್ನು ತತ್ಸದೃಶ ಹೃದಯವೊಂದೇ ಅರಿಯಬಹುದಲ್ಲವೇ?

'ಪಂಚರಾತ್ರ'ದ ವಿಮರ್ಶೆಯಲ್ಲಿ 'ವಿರಾಟಪರ್ವದ ಕಥೆ ಕಾಡುಮರ ಉಕ್ಕಿನ ತಂತಿಗಳಂತಿದ್ದರೆ, ಪಂಚರಾತ್ರವು ಭಾಸನ ಕೈಯಲ್ಲಿ ಅಮೃತ ಸ್ವರದಿಂದ ನುಡಿಯು ತ್ತಿರುವ ವೀಣೆಯಾಗಿದೆ' ಎಂದು ಹೇಳಲಾಗಿದೆ. ಅದರಲ್ಲಿ ಬರುವ ಬೃಹನ್ನಳೆ ಅಭಿಮನ್ಯುಗಳ ಸಂವಾದದ ಸ್ವಾರಸ್ಯವನ್ನು ಮೂಲದಷ್ಟೇ ಸುರಸವಾಗಿ ಕೊಟ್ಟ ಕೌಶಲ ಅಪಾರವಾದುದು. ಇದರ ಜೊತೆಗೆ 'ಮಧ್ಯಮ ವ್ಯಾಯೋಗ'ವನ್ನು ವಿವರಿಸಿದ ಸರಸಪ್ರಿಯತೆ 'ಊರು ಭಂಗ'ದಲ್ಲಿಯ ದುರ್ಯೋಧನನ ಪಾತ್ರಪರಿಚಯಗಳನ್ನೂ ಸೇರಿಸಬೇಕು. ಈ ಅಂಶಗಳ ಅನುವಾದವನ್ನು ಓದಿದರೆ ಸಂಸ್ಕೃತ ಗೊತ್ತಿಲ್ಲದವ ನಾದರೂ ಸಂಸ್ಕೃತ ಕಲಿತು ಭಾಸನ ನಾಟಕಗಳನ್ನು ಓದಬೇಕೆಂದು ಲವಲವಿಕೆಯನ್ನು ತಾಳಿಯಾನು!

ಗುಣಗಳ ಜೊತೆಗೆ ದೋಷಗಳನ್ನೂ ಹೇಳುವ ವಿಮರ್ಶಕ ಸರಣಿಗೆ ಕೆಳಗಿನ ದೊಂದು ಮಾದರಿ :

'ಈ ನಾಟಕದಲ್ಲಿ ದೋಷವಿಲ್ಲದೆ ಇಲ್ಲ. ಶಕಾರನು ತುಂಬ ವಿಕಾರನಾಗಿದ್ದಾನೆ; ದುರ್ಗುಣಗಳೆಲ್ಲವೂ ಒಂದು ಬಿಡದಂತೆ ಅವನಲ್ಲಿ ಮನೆ ಮಾಡಿಕೊಂಡಿವೆ...ಅವನ

ಪುರಾಣಸಂಕರವು ಅತಿಯಾಗಿದೆ. ಚಾರುದತ್ತನು ತನ್ನ ಬಡತನಕ್ಕೆ ಸಂಕೋಚ ಪಟ್ಟುಕೊಳ್ಳುವುದೂ ನ್ಯಾಯಾಧೀಶನು ರಾಜನಿಗೆ ಹೆದರಿ ಶಕಾರನಿಗೆ ಪಕ್ಷಪಾತ ತೋರಿಸುವುದೂ ಅವರಲ್ಲಿ ಲೋಪವಾಗಿ ಎಣಿಸಲ್ಪಟ್ಟಿದೆ; ಇದು ಅವರಲ್ಲಿ ಲೋಪ ವಾಗಿರಬಹುದು: ಕವಿಯಲ್ಲಿ ಲೋಪವಲ್ಲ. ಈ ಲೋಪವನ್ನಿಟ್ಟು ಕವಿ ಅವರನ್ನು ನೈಸರ್ಗಿಕವಾಗಿ ಮನುಷ್ಯಮಾತ್ರರನ್ನಾಗಿ ಮಾಡಿದ್ದಾನೆ. ಹಾಗಲ್ಲದಿದ್ದರೆ ಅವರು ಅತಿಮಾನುಷರೂ ಅಸಹಜರೂ ಆಗುತ್ತಿದ್ದರು. ವಸಂತಸೇನೆಯ ಮನೆಯ ವರ್ಣನೆಯೂ, ಮಳೆಯ ವರ್ಣನೆಯೂ ಅತಿ ವಿಸ್ತಾರವಾಗಿದೆ. ಇವುಗಳಲ್ಲಿ ಒಂದಾ ಗಲಿ ಎರಡೂ ಆಗಲಿ ಈಚೆಗೆ ಪ್ರಕ್ಷಿಪ್ತವಾಗಿ ಸೇರಿವೆಯೇ ಏನೋ ತಿಳಿಯದು.'

ಕವಿಗೆ ಅನ್ಯಾಯವೆಳ್ಳಷ್ಟೂ ಆಗದಂತೆ, ಆದರೆ ಕೇವಲ ಗುಣೈಕಪಕ್ಷಪಾತಿ ಎಂಬ ಬಿರುದಿಗೆ ಭಾಜನನಾಗಬೇಕೆಂದು ಹೊಗಳುಭಟ್ಟತನವನ್ನೂ ಶರಣು ಹೋಗದೆ ಮಾಡುವ ಗುಣದೋಷ ವಿಮರ್ಶನ ಎಲ್ಲಿಯೂ ಬಹಳ ಅಪೂರ್ವ. ಅಂಥ ಅಸಿಧಾರಾವ್ರತದ ಪದ್ಧತಿಯನ್ನು ಹಿಡಿದು ಗೆದ್ದ ಶ್ರೀ ಶಾಸ್ತ್ರಿಗಳು ಇಂದಿನ ವಿಮರ್ಶಕ ವರ್ಗಕ್ಕೆ ಅತ್ಯುತ್ತಮ ಮಾದರಿಯಾಗಿದ್ದಾರೆ. ಈ ಮರ್ಮಜ್ಞತೆ, ರಸಾಭಿಜ್ಞತೆ ಮಹಾ ರಾಜಾರವರ ಕಾಲೇಜಿನ ಗರುಡಿಯಾಚಾರ್ಯರೂ ಆಗಿದ್ದ ಕನ್ನಡ ಮಹಾಪ್ರಾಧ್ಯಾಪಕ ಕೃಷ್ಣಶಾಸ್ತ್ರಿಗಳಲ್ಲಿದ್ದುದರಿಂದ ಅವರ ಜನಪ್ರಿಯತೆ ಇಷ್ಟು ಹೆಚ್ಚಾಗಿದೆ. ಸತ್ಕಾವ್ಯಾನು ಶೀಲನದಿಂದ ಸುಸಂಸ್ಕೃತವಾದ ಅವರ ಹೃದಯ ಕಾರ್ಯಪ್ರಪಂಚದಲ್ಲಿ ಶಿಷ್ಯ-ಬಂಧು-ಮಿತ್ರಾದಿಗಳಲ್ಲಿ ಪ್ರಕಾಶಿಸಿದಂತೆ ಕಾವ್ಯವಿಮರ್ಶಕ ಪ್ರಪಂಚದಲ್ಲೂ ಪಡಿಮೂಡಿರು ವುದು ಅನ್ಯಾದೃಶವಾಗಿದೆ.

ಶಾಸ್ತ್ರಿಗಳ ಗದ್ಯದ ಲಾಲಿತ್ಯ, ಮಾಧುರ್ಯ, ಅರ್ಥವ್ಯಕ್ತಿ, ಮಿತಪದ ಮುಂತಾದ ಹೃದ್ಯಾಂಶಗಳು ಇಲ್ಲಿ ಹೇಗೆ ಸ್ಪಷ್ಟವಾಗಿವೆ ಎಂಬುದನ್ನು ಗಮನಿಸೋಣ—

'ಇದರಲ್ಲಿ ರಾಜ್ಯವಿಪ್ಲವ ಬಂಧನ ವಿಮೋಚನ ಹೊಡೆದಾಟ ಬಡಿದಾಟ ಜೈತ್ರ ಯಾತ್ರೆಗಳ ವೀರವೃತ್ತಾಂತವು ಬಂದರೂ ಅದು ರಾಜನ ಕನ್ಯಾಸಂಪಾದನ ವೃತ್ತಾಂತಕ್ಕೆ ಪೋಷಕ, ಗೌಣ ಮತ್ತು ಶ್ರಾವ್ಯ. ಇವುಗಳಿಗಿಂತ ರಂಗದ ಮೇಲೆ ಕಾಮತಂತ್ರ ಸಚಿವನಾದ ವಿದೂಷಕನ ಕುಟಿಲ ಕಾರ್ಯಗಳಿಗೇ ಹೆಚ್ಚು ಪ್ರಾಧಾನ್ಯ. ಅವುಗಳಿಂದಲೇ ಮಾಳವಿಕಾಗ್ನಿಮಿತ್ರರಿಗೆ ಪರಸ್ಪರ ಪರಿಚಯವಾಗಿ ಬೆಳೆದು ಕೊನೆಗೆ ಧಾರಿಣೀದೇವಿಯ ಔದಾರ್ಯದಿಂದ ಫಲಬಿಡುವುದು. ಮಹಾರಾಣಿಯಲ್ಲದಿದ್ದರೂ ಮಾಳವಿಕೆಯೇ ನಾಯಿಕೆ. ನಾಟಕದ ತುಂಬ ಅವಳೇ; ಶಕುಂತಲೆಯ ಪ್ರಾಧಾನ್ಯ ದಿಂದ 'ಶಾಕುಂತಲ' ವೆಂದು ಉಚಿತವಾಗುವುದಾದರೆ, ಮಾಳವಿಕಾಗ್ನಿಮಿತ್ರಕ್ಕೆ 'ಮಾಳವಿಕಾ' ಎಂಬ ಹೆಸರು ಇನ್ನೂ ಉಚಿತವೆಂದು ಹೇಳಬಹುದು.'

ವಿಮರ್ಶೆಯ ಗಾಂಭೀರ್ಯ ಎಳ್ಳಷ್ಟೂ ಕೆಡದಂತೆ ಮನೆ ಮಾತಿನ ಸರಳತೆಯನ್ನು ಅಳವಡಿಸಿಕೊಂಡು ಕಥಾಸ್ವಾರಸ್ಯ, ಪಾತ್ರ ಪರಿಚಯಗಳನ್ನೂ ಕುತೂಹಲ ಕೆರಳು ವಂತೆ ವಿವರಿಸುತ್ತ ಹೋಗಿರುವ ಈ ಮಲ್ಲಿಕಾಬಂಧಕ್ಕೆ 'ಸಂಸ್ಕೃತ ನಾಟಕ' ದಿಂದ

ಇನ್ನೂ ಎಷ್ಟೋ ಉದಾಹರಣೆಗಳನ್ನು ಕೊಡಬಹುದು. ಪಾತ್ರಗಳ ಸ್ವಭಾವ ತಾರ ತಮ್ಯವನ್ನು ತೋರಿಸುವ ಜಾಣ್ಮೆಗೆ ಕೆಳಗಿನ ಮಾತೊಂದು ನಿದರ್ಶನ :

'ಇರಾವತಿ ಧಾರಿಣಿಯರಲ್ಲಿ ಪ್ರೌಢಸ್ತ್ರೀಯರ ಶೃಂಗಾರಾಭಿನಯವನ್ನು ನೋಡ ಬಹುದು ; ಆದರೆ ಇವರಿವರಲ್ಲಿ ಭೇದವಿದೆ. ಧಾರಿಣಿ ಮಹಾದೇವಿ, ಆಸ್ಥಾನಕ್ಕೆ ತಕ್ಕ ಗಾಂಭೀರ್ಯ, ಔದಾರ್ಯ ಉದಾತ್ತತೆಗಳನ್ನುಳ್ಳವಳು ; ಇರಾವತಿ ಪ್ರಾಯಶಃ ಅವಳಿಗಿಂತ ವಯಸ್ಸಿನಲ್ಲಿ ಇನ್ನೂ ಸ್ವಲ್ಪ ಚಿಕ್ಕವಳು ; ಗಾಂಭೀರ್ಯ ಔದಾರ್ಯ ಉದಾತ್ತತೆಗಳಲ್ಲಿಯೂ ಚಿಕ್ಕವಳು ; ಪ್ರಮದೆ, ಮತ್ಸರಿ, ಮುಂಗೋಪಿ. ಅವಳ ಸಂತೃಪ್ತಿಗೆಂದೇ ಧಾರಿಣೀ ದೇವಿ ಮಾಳವಿಕೆಯನ್ನು ಬಂಧನದಲ್ಲಿಟ್ಟಳೆಂದು ತೋರುತ್ತದೆ. ವಿದೂಷಕನು ಹಾವು ಕಚ್ಚಿತೆಂದು ಬಂದಾಗ ಹಿಂದು ಮುಂದು ನೋಡದೆ ಭೂತದಯೆ ಪಶ್ಚಾತ್ತಾಪದಿಂದಲೇ ತನ್ನ ಕೈಯಿಂದ ನಾಗಮುದ್ರಿಕೆಯನ್ನು ತೆಗೆದುಕೊಡುವಳು ; ಇರಾವತಿಯಾಗಿದ್ದರೆ ಹತ್ತುಸಲ ಯೋಚಿಸುತ್ತಿದ್ದಳೆಂದು ತೋರುತ್ತದೆ.'

ಈ ಪುಸ್ತಕದಲ್ಲಿ ಅಶ್ವಘೋಷನ ನಾಟಕದ ತುಣುಕುಗಳನ್ನೂ ಮಹಾ ನಾಟಕದ ತುಂಡುಗಳನ್ನೂ ಕೊಟ್ಟಿರುವುದು ಶಾಸ್ತ್ರಿಗಳ ಸಂಶೋಧನ ಬುದ್ಧಿಯ ಚೌಕ ಶುದ್ಧತೆಗೆ (Thoroughness) ಒಳ್ಳೆಯ ಉದಾಹರಣೆಯಾಗಿದೆ. ಪುಟಸಂಖ್ಯೆ ಕೇವಲ ೨೯೪ ಆಗಿದ್ದರೂ ಅಷ್ಟರೊಳಗೇ ತಾವು ಹೇಳಬೇಕೆಂದಿದ್ದ ಅಂಶವೊಂದನ್ನೂ ಬಿಡದೆ ಹೇಳಿರುವ ಮತ್ತು ಕೊಡಬೇಕೆಂದಿರುವ ಪ್ರಮಾಣಗಳೆಲ್ಲವನ್ನೂ ಕೊಟ್ಟಿರುವ ಸಾಹಸಿಕ ಚಾತುರ್ಯ ಅದ್ಭುತವಾಗಿದೆ. ಇನ್ನು ಅಡಿಟಿಪ್ಪಣಿ, ಗ್ರಂಥಋಣ ಮುಂತಾದವುಗಳನ್ನು ಅವಶ್ಯವಿದ್ದ ಕಡೆಗಳಲ್ಲಿ ಚಾಚೂ ತಪ್ಪದಂತೆ ಕೊಡಲಾಗಿದೆ. ವಿವರಗಳನ್ನು ಸಂಕ್ಷೇಪ ದಿಂದ ಕೊರತೆಗೆಡೆಗೊಡದಂತೆಯೂ ಸ್ಪಷ್ಟತೆಗೆ ಬಾಧೆ ಬರದಂತೆಯೂ ಕೊಡುವ ಸುಸಂಯಕ ಸರಣಿ ಸಂಶೋಧಕರಿಗೊಂದು ಉತ್ತಮ ಆದರ್ಶವೆನ್ನಬಹುದು.

ನಾಟಕದ ಉತ್ಪತ್ತಿಯನ್ನು ಹೇಳುವಲ್ಲಾಗಲಿ ಛಾಯಾನಾಟಕಗಳ ಬಗ್ಗೆ ಬರೆಯುವಲ್ಲಾಗಲಿ ಬೊಂಬೆಯಾಟ, ಕಥಕಳಿ, ಬಯಲಾಟ, ಯಕ್ಷಗಾನ ಮುಂತಾದ ವುಗಳನ್ನು ಹೆಸರಿಸಲಾಗಿದೆಯಲ್ಲದೆ, 'ಯಕ್ಷಗಾನ'ದ ಬಗ್ಗೆ ವಿಶೇಷ ಪ್ರಸ್ತಾಪಮಾಡಿಲ್ಲ. ಕಥಕಳಿ ಮೂಕ ನಾಟ್ಯ; ಯಕ್ಷಗಾನ ಕೆಲವಂಶಗಳಲ್ಲಿ ಇದಕ್ಕೆ ಸದೃಶವಾದರೂ ಬಯಲಾಟ, ನಾಟಕಗಳ ಸ್ವಾರಸ್ಯವನ್ನು ಒಳಗೊಂಡು ಅವುಗಳಲ್ಲಿಲ್ಲದ ಸಂವಾದದ ನಟಪ್ರತಿಭಾಯತ್ತತೆಯನ್ನು ಅದು ಕಾದುಕೊಂಡು ಬಂದಿದೆ. ಯಕ್ಷಗಾನವು ಗ್ರಾಮಸ್ಥ ವಾಗಿಯೇ ಉಳಿದುಕೊಂಡು ಬಂದುದರಿಂದ ಆ ಕಲೆಯ ಬಾಹ್ಯಾಂಗಗಳಲ್ಲಿ ಕೆಲ ಮಟ್ಟಿನ ಒರಟುತನ ಕಂಡು ಬರುತ್ತಿರಬಹುದು. ಆದರೆ ಕಲಾತಂತ್ರದ ದೃಷ್ಟಿಯಿಂದ ವಿಚಾರಮಾಡಿದರೆ ಅದು ನಾಟಕಕ್ಕಿಂತ ಹೆಚ್ಚಿನದಾಗಿ ತೋರುತ್ತದೆ; ಕಥಕಳಿ ಯಂತೂ ಯಕ್ಷಗಾನದ ಮುಂದೆ ಕೇವಲ ಶಿಶು ; ಅದು ನಾಟಕವಂತೂ ಅಲ್ಲವೇ ಅಲ್ಲ, ನೃತ್ಯವಾದರೂ ಉತ್ತಮ ಪರಂಪರೆಯ ಯಕ್ಷಗಾನದ ನೃತ್ಯ ವೈವಿಧ್ಯದೆದುರು ಪರಿ ಮಿತ ಪರಿಣಾಮಕಾರಿ ಎಂದೇ ಹೇಳಬೇಕು.

'ಬರಬರುತ್ತ ನಾಟಕದ ಉದ್ದೇಶವೇ ಮರೆತುಹೋದಂತೆ ತೋರುತ್ತದೆ; ಆದ್ದರಿಂದ ಕೆಲವು ನಾಟಕಗಳು ಯಾವ ವಿಧವಾದ ಕಥೆಯನ್ನು ಅಪೇಕ್ಷಿಸದೆ ವೈದ್ಯ ವ್ಯಾಕರಣಾದಿ ಶಾಸ್ತ್ರ ವಿಷಯವನ್ನು ಪ್ರತಿಪಾದಿಸಿವೆ' ಎಂದು ಹೇಳಿರುವುದು ಸದ್ಯದ ನಾಟಕಕಾರರಿಗೆ ಒಂದು ಎಚ್ಚರಿಕೆಯಾಗಬಹುದು. ಇಂದು ವ್ಯಾಕರಣ ವೈದ್ಯಾದಿ ಶಾಸ್ತ್ರಗಳನ್ನು ವಸ್ತುವನ್ನಾಗಿ ತೆಗೆದುಕೊಳ್ಳುವಷ್ಟು ದೂರ ಹೋಗದಿದ್ದರೂ ನಾಟಕಕ್ಕೆ ಮುಖ್ಯವಾದ ಕಾರ್ಯ (Action) ಕ್ಕಿಂತ ಮಾತೇ (Speech) ಹೆಚ್ಚಾಗುತ್ತ ಹೋಗಿ ರುವುದು ಕಂಡು ಬರುತ್ತಿದೆ. ಒಂದೇ ಇಂಥ ಕಾರ್ಯಗತಿಯ ತೀವ್ರತೆಯನ್ನು ಲಕ್ಷಿಸಿ ಮಾತನ್ನು ಮೆರೆಯಿಸುವ ಕೃತಿಗಳನ್ನು ನಾಟಕವೆನ್ನಲೇಬಾರದು ಅಥವಾ ಓದು ನಾಟಕವೆಂದು ಆಡುನಾಟಕದಿಂದ ಪ್ರತ್ಯೇಕಿಸಬೇಕು. ಹಳೆಯ ನಾಟಕಗಳ Once more, ಕುಣಿತ, ಸಂಗೀತಗಳನ್ನು ವಿಡಂಬಿಸಹೋದ ಇಂದಿನ ಕೆಲ ನಾಟಕಕಾರರು ಕೇವಲ ಒಣಹರಟೆಯ ಸಂವಾದಗಳ ಮಾಲೆಯನ್ನು ನಾಟಕವೆಂದು ಪ್ರಸಿದ್ಧಿಸಿರು ವುದು ಕಂಡು ಬರುತ್ತದೆ.

ಪರಂಪರಾಗತ ಯಕ್ಷಗಾನ, ಭರತನಾಟ್ಯ, ನಾಟಕ ಮುಂತಾದವುಗಳ ಪ್ರಯೋಗದಲ್ಲಿ ಪೂರ್ವರಂಗಕ್ಕಿರುವ ಪ್ರಾಧಾನ್ಯವನ್ನು ಅಲ್ಲಗಳೆದಿರುವುದೂ ಹಾನಿಕರ. ಏಕೆಂದರೆ ಒಂದು ಕಲಾಕೃತಿಯನ್ನು ಅವಲೋಕಿಸ ಹೊರಡುವ ರಸಿಕನು ವ್ಯವಹಾರ ಚಿಂತನವನ್ನು ಬಿಟ್ಟು ರಸಲೋಕಕ್ಕೆ ಹೋಗಲು ತಕ್ಕ ಮನಃಸ್ಥಿತಿಯನ್ನು ಪಡೆಯುವು ದವಶ್ಯಕ. ಅಂಥ ಮನಃಸ್ಥಿತಿಯನ್ನು ತರಲು ಹಿಂದೆ ಪೂಜೆ ಪುರಸ್ಕಾರ, ನಾಂದಿ, ಸೂತ್ರಧಾರ ವಿದೂಷಕ ನಟಿ ಮುಂತಾದವರ ಸಂಭಾಷಣೆ ಇತ್ಯಾದಿಗಳಿಂದ ಪ್ರೇಕ್ಷಕರ ಮನಸ್ಸನ್ನು ವ್ಯವಹಾರಬುದ್ಧಿಯಿಂದ ವಿಮುಖಗೊಳಿಸಿ ಶುದ್ಧಮಾಡಿ ಕಲಾರಾಧನೆಗೆ ಪ್ರವರ್ತಿಸುತ್ತಿದ್ದುದು ಉಪೇಕ್ಷಿಸಲ್ಪಟ್ಟು ಅವುಗಳಿಗೆ ಬದಲಾಗಿ ಏನನ್ನೂ ಸಿದ್ಧಪಡಿಸಿ ಕೊಳ್ಳದುದರಿಂದ ರಸಿಕರಿಂದ ಇಂದು ನಾಟಕದ ರಸಾನುಭವ ಚೆನ್ನಾಗಿ ಆಗದೆ ಅವರು ನಾಟಕಾದಿ ಪ್ರಯೋಗಗಳ ಬಗ್ಗೆ, ವಿಲಕ್ಷಣಾಭಿಪ್ರಾಯ ಹೇಳಿ ಥಿಯೇಟರಿನಿಂದ ಎದ್ದು ಹೋಗುವುದು ಸಹಜವಾಗಿ ಬಿಟ್ಟಿದೆ. ಒಮ್ಮೆ ನಾಟಕ ಸಿನಿಮಕಾರರು ಶೋಚನೀಯ ವನ್ನು ಹಾಸ್ಯಾಸ್ಪದವಾಗಿಯೂ ನಿಂದ್ಯವನ್ನು ವಂದ್ಯವನ್ನಾಗಿಯೂ ಚಿತ್ರಿಸಿದರೆ ಇನ್ನೊಂದೆಡೆ ಅಂಥ ತಪ್ಪುಗಳಿಲ್ಲದ ನಾಟಕ ನೋಡುವಾಗಲೂ ರಸಿಕರು ಅಳಬೇಕಾ ದಲ್ಲಿ ನಗುವುದೂ ನಗಬೇಕಾದಲ್ಲಿ ಅಳುವುದೂ ಎಷ್ಟೋ ಸಲ ಕಂಡು ಬರುತ್ತದೆ. ಇಂಥ ವಿಪರೀತ ಲಕ್ಷಣವುಂಟಾಗಲು ಕೃತಿಕಾರನ ವಿಲಕ್ಷಣ ಸಂಸ್ಕಾರವೂ ವ್ಯತಿರೇಕಾಭಿ ರುಚಿಯೂ ಕಾರಣಗಳಲ್ಲದೆ ರಸಿಕರ ತೆವಲು ತೀರಿಸಿಕೊಳ್ಳುವ ಪ್ರವೃತ್ತಿಯೂ ಕಾರಣ.

ಪದ್ಯ ಓದುವುದರ ಬಗ್ಗೆ ಹೇಳುತ್ತ ಐ. ಎ. ರಿಚರ್ಡ್ಸ್ 'Making up our minds about a poem' is the most delicate of all the possible undertakings—ಎಂದಿದ್ದಾರೆ. ಈ ಮಾತು ನಾಟಕ, ಆಟ, ಸಿನಿಮಾದಿಗಳಿಗೂ ಅನ್ವಯಿಸುತ್ತದೆ. ರಸಿಕಬುದ್ಧಿಪ್ರಸಾದನಕ್ಕೆ ತಕ್ಕ ಪೂರ್ವರಂಗವಿಲ್ಲದೆ ನಡೆಯುವ

ಇಂದಿನ ನಿರ್ಮಂಗಲ ಸಮಾರಂಭಗಳೆಲ್ಲವೂ ಸಂಪೂರ್ಣ ಉದ್ದೇಶವನ್ನು ಸಾಧಿಸದೆ ಅಪೂರ್ಣಸಾಫಲ್ಯ ಹೊಂದಲು ಸದಸ್ಯರಲ್ಲಿ ಆರಂಭದಲ್ಲಿ ಅಗತ್ಯವಾದ ಪ್ರಾಮಾಣಿಕತೆಯು (Sincerity) ಹುಟ್ಟುವಂತೆ ಮಾಡುವ ಔಪಚಾರಿಕ ಆಚಾರ, ಕಟ್ಟಳೆ ಸಂಪೂರ್ಣ ನಷ್ಟವಾಗಿರುವುದು ಕಾರಣ. ನಿಷ್ಕಲ್ಮಷ ಮನಸ್ಸನ್ನು ಪಡೆದರೇ ಭಾವಗತಿ (Intuition) ಮನಸ್ಸಿಗೆ ಹೊಳೆದು, ಸಹೃದಯತೆ ಬೆಳೆದು, ರಸತ್ವಕ್ಕೆ ರಸಿಕ ಮನಃಸ್ಥಿತಿ ಮುಟ್ಟಬಲ್ಲುದು. ಅಂಥ ಭಾವಶುದ್ಧಿಯನ್ನು ವಿವಿಧ ಕಾರಣಗಳಿಂದ ಥಕ್ಕನೆ ಪಡೆಯಲಾರದಾಗ ಬುದ್ಧಿವಂತನು ತಾತ್ಕಾಲಿಕವಾಗಿ ಮನಸ್ಸಿನಲ್ಲೇ ವಸ್ತುಸ್ಥಿತಿಗಿಂತ ಪೂರ್ಣತರವಾದ ಲೋಕಕ್ರಮವನ್ನು ಬಯಸುವ ಪ್ರವೃತ್ತಿಗಧೀನವಾಗಲೆಂದು—ಮಾನವನ ಒಂಟಿತನ, ಜನನ ಮರಣಗಳ ಅಭೇದ್ಯ ವೈಲಕ್ಷಣ್ಯ, ವಿಶ್ವದ ಕಲ್ಪನಾತೀತ ವೈಶಾಲ್ಯ ಕಾಲ ದೃಷ್ಟಿಯಿಂದ ಮಾನವನ ಸ್ಥಾನ ಮತ್ತು ಅವನ ಅಜ್ಞಾನದ ಅಪಾರತೆ—ಇವನ್ನು ಚಿಂತಿಸಿ ಒಂದು ವಿಧದ ಭಾವನೋದ್ದೀಪನ (Emotional glow) ಸಾಧಿಸಿಕೊಳ್ಳುತ್ತಾನೆ. ಅನಂತರ ಕಲಾಕೃತಿ ಅಂಥ ಸ್ಥಿತಿಯಲ್ಲಿಯ ಅವನ ಮನದ ಮೇಲೆ ಹಾಯ್ದು ಹೋದರೆ ಅದನ್ನು ಯೋಗ್ಯ ರೀತಿಯಿಂದ ಅವನ ಮನ ಅನುಭವಿಸಿ ಅದರ ಬಗ್ಗೆ ಸರಿಯಾದ 'ಅನಿಸಿಕೆ' ಯನ್ನು ತಾಳಬಲ್ಲುದು.

ಮೇಲಿನ ಮಾತುಗಳಿಂದ ಪೂರ್ವರಂಗದ ಪೂರ್ವಸಿದ್ಧತೆಯ ಕಲಾತ್ಮಕ ಆವಶ್ಯಕತೆ ಮನದಟ್ಟಾಗುತ್ತದೆ. ನಾಟ್ಯಶಾಸ್ತ್ರದಲ್ಲಿ ಭರತನು ಪ್ರೇಕ್ಷತ್ವದ ಬಗ್ಗೆ ಹೇಳಿದ್ದನ್ನು 'ಸಂಸ್ಕೃತ ನಾಟಕ'ದ—೨೭ನೆಯ ಪುಟದಲ್ಲಿ ಅಡಿ ಟಿಪ್ಪಣಿಯನ್ನಾಗಿ ಕೊಡಲಾಗಿದೆ. ಅದೇ ಪುಟದಲ್ಲಿ 'ಸ್ತ್ರೀ ಪಾತ್ರವನ್ನು ಸ್ತ್ರೀಯರಾಗಲಿ, ಪುರುಷರಾಗಲಿ ವಹಿಸುತ್ತಿದ್ದರು' ಎಂದು ಹೇಳಲಾಗಿದೆ. ಈ ವಿಷಯದ ಬಗ್ಗೆ ಕುಮಟದಲ್ಲಿ ಮೊನ್ನೆ ಪ್ರಕಟವಾದ ಕನಡಾವೃತ್ತದ ಸಾಹಿತ್ಯ ಸಮ್ಮೇಳನಾಂಕದಲ್ಲಿಯ ಪ್ರಬಂಧದಲ್ಲಿ ನಾನು ಹೇಳಬೇಕಾದ್ದನ್ನು ಹೇಳಿದ್ದೇನೆ. ರಂಗದ ಮೇಲೆ ಬಂದದ್ದು ನಿಜವಾಗಿಯೂ ಪುರುಷನೋ ಸ್ತ್ರೀಯೋ ಎಂಬುದನ್ನು ತಿಳಿಯುವ (Morbid curiosity) ದುಷ್ಕುತೂಹಲ ಮನಃಕಲ್ಮಷವುಂಟುಮಾಡಿ ಪ್ರೇಕ್ಷಕರ ಪ್ರೇಕ್ಷಣ ಯೋಗ್ಯತೆಯನ್ನು ಕಡಮೆ ಮಾಡುತ್ತದೆ; ಅವರಿಗೆ ರಸವಿಕಾರವುಂಟಾದೀತಲ್ಲದೆ ರಸ ಸಿದ್ಧಿಯಾಗದು. ಆದುದರಿಂದ ಆಧುನಿಕತೆಯ ಹೆಸರಿನಲ್ಲಿ ಸ್ತ್ರೀ ಪಾತ್ರವನ್ನು ಸ್ತ್ರೀಯೇ ವಹಿಸಬೇಕೆಂಬುದಾಗಲಿ, ಜಡ ನೈತಿಕ ಬುದ್ಧಿಯಿಂದ ಸರ್ವದಾ ಅದನ್ನು ಪುರುಷರೇ ವಹಿಸಬೇಕೆಂಬುದಾಗಲಿ ಹೇಳುವುದು ಸರಿಯಲ್ಲ. ರಂಗದಲ್ಲಿ 'ನಿಜವಾಗಿಯೂ ಇವಳು ಶಕುಂತಲೆ, ಸೀತೆ, ಶೂರ್ಪಣಖಿ 'ಎಂಬ ಇತ್ಯಾದಿ ಕಲ್ಪನೆ ರಸಿಕರಿಗುಂಟಾದರೆ ಸಾಕು—ಆ ಪಾತ್ರ ವಹಿಸಿದ್ದು ಹೆಂಗಸೋ ಗಂಡಸೋ ಎಂಬ ವ್ಯಾವಹಾರಿಕ ಸತ್ಯ ಶೋಧನ ಅವರಿಗನಗತ್ಯ.

ನಾಟಕವಿಮರ್ಶೆಯ ಕಾಲದಲ್ಲಿ ಗಣ್ಯವಾದ ಸಂಸ್ಕೃತ ನಾಟಕಗಳ ಕಥೆಯನ್ನು

ಶಾಸ್ತ್ರಿಗಳು ತಿಳಿಗನ್ನಡದಲ್ಲಿ ಕೊಟ್ಟಿರುವ ಬಗೆ ತುಂಬ ಮೆಚ್ಚುಗೆಗೆ ಪಾತ್ರವಾಗಿದೆ. 'ವಿಕ್ರಮೋರ್ವಶೀಯ'ದ ಕಥಾ ಸಾರಾಂಶದ ಮೊದಲನೆಯ ಪ್ಯಾರಾ ಇಂತಿದೆ :

'ಕುಬೇರಭವನದಿಂದ ಹಿಂತಿರುಗಿ ಬರುತ್ತಿದ್ದ ಅಪ್ಸರೆಯರಲ್ಲಿ ಉರ್ವಶಿಯನ್ನು ಅವಳ ಸಖಿ ಚಿತ್ರಲೇಖೆಯನ್ನು ಕೇಶಿಯೆಂಬ ದಾನವನು ಹಿಡಿದುಕೊಂಡು ಹೋದನೆಂದು ಕೇಳಿ ಸೂರ್ಯೋಪಾಸನೆ ಮಾಡಿಕೊಂಡು ಬರುತ್ತಿದ್ದ ಪುರೂರವನು ಅವರನ್ನು ಬಿಡಿಸಿಕೊಂಡು ಬರುವನು. ಹೇಮಕೂಟ ಪರ್ವತದಲ್ಲಿ ಅಪ್ಸರೆಯರೆಲ್ಲರೂ ಮತ್ತೆ ಸೇರಿ ದೇವೇಂದ್ರನು ಕಳುಹಿಸಿದ ಚಿತ್ರರಥನೆಂಬ ಗಂಧರ್ವರಾಜನೊಡನೆ ದೇವಲೋಕಕ್ಕೆ ಹೋಗುವನು. ಉರ್ವಶೀಪುರೂರವರಿಗೆ ಪ್ರೇಮವು ಉತ್ಪನ್ನವಾಗುವುದು.'

ಈ ಕಥನ ಶೈಲಿ ಅನಲಂಕೃತರೂಪ. ಕೇವಲ ನಡೆದ ಸಂಗತಿಯನ್ನು ಹೇಳುವ ಮಟ್ಟನಲ್ಲಿ ಹೊರಟ ಕತೆಗಾರರು ಪ್ಯಾರಾಂತ್ಯದಲ್ಲಿ ತಟಕ್ಕನೆ ಮುಗ್ಧಭಾವದಿಂದ 'ಉರ್ವಶೀ ಪುರೂರವರಿಗೆ ಪ್ರೇಮವು ಉತ್ಪನ್ನವಾಗುವುದು' ಎಂದಿರುವುದು ಹೊರಗೆ ಕೇವಲ ವಸ್ತುಸ್ಥಿತಿಕಥನ (Matter of fact) ಎಂದು ತೋರಿದರೂ ಓದುಗರಿಗೆ ಗೊತ್ತಿಲ್ಲದಂತೆಯೇ ಕುತೂಹಲ ಹುಟ್ಟಿಸಿ ಮನಸ್ಸನ್ನು ಸೆರೆಹಿಡಿಯಬಲ್ಲದಾಗಿದೆ.

ಕೆಳಗಿನದು ಪಾತ್ರಪರಿಚಯ ಕಥನದ ಒಂದು ಮಾದರಿ: (ಚಾಣಕ್ಯ) 'ಇಷ್ಟು ಬುದ್ಧಿ ಇದ್ದವನಾದ್ದರಿಂದಲೇ ಅವನು ಯಾವಾಗಲೂ ಎಚ್ಚರದಿಂದ ಇರುತ್ತಿದ್ದನು. ಅವನಿಗೆ ಮೈಯೆಲ್ಲಾ ಕಣ್ಣು ; ಆದ್ದರಿಂದಲೇ ಅವನು ದಾರುವರ್ಮನ ಉತ್ತರದಿಂದಲೂ ಸ್ತನಕಲಶನ ಪದ್ಯದಿಂದಲೂ ಶತ್ರುಗಳ ತಂತ್ರವನ್ನು ಕೂಡಲೇ ಊಹಿಸಿಬಿಟ್ಟನು; ಚಂದ್ರಗುಪ್ತನ ನಾಶಕ್ಕಾಗಿ ರಾಕ್ಷಸನು ಏರ್ಪಡಿಸಿದ್ದ ತಂತ್ರಗಳನ್ನೆಲ್ಲಾ ತಿಳಿದು ಅವಕ್ಕೆ ಪ್ರತೀಕಾರಮಾಡಿದನು; ಶತ್ರುಗಳ ಯುಕ್ತಿಗಳು ಅವರ ಗಂಟಲಿಗೇ ಗಾಣವಾದುವು.'

ಇಂಥ ಶೈಲಿಸೌಂದರ್ಯಕ್ಕೆ 'ಸಂಸ್ಕೃತ ನಾಟಕ' ದಿಂದ ನೂರಾರು ಉದಾಹರಣೆಗಳನ್ನು ಎತ್ತಿಕೊಡಬಹುದು. ಶಾಸ್ತ್ರಿಗಳಲ್ಲಿ ಪಂಡಿತ ಸಹಜ ಗಾಂಭೀರ್ಯದ ಜೊತೆಗೆ ಶಿಶು ಸಹಜ ತಿಳಿವಗೆಯೂ ಇರುವುದಕ್ಕೆ ಈ ಪುಸ್ತಕ ನಿದರ್ಶನಗಳನ್ನು ಕೊಡಬಲ್ಲದಾಗಿದೆ. ಪಾಂಡಿತ್ಯದ ನಿಜವಾದ ಬುದ್ಧಿ ಇದೇ ಎಂದು ಬೊಟ್ಟುಮಾಡಿ ತೋರಿಸಬಹುದಾದ ಒಂದು ವಿವೇಚನಾಂಶ ಹೀಗಿದೆ :

'ಗ್ರೀಕರಿಂದ ರೋಮನರೂ ಇತರರೂ ಯೂರೋಪಿನಲ್ಲಿ ಈ ಅಭಿನಯ ವಿದ್ಯೆಯನ್ನು ಕಲಿತಾಗ ಅವರಲ್ಲೆಲ್ಲಾ ಆ ಅನುಕರಣಕ್ಕೆ ನಿದರ್ಶಕವಾದ ಚಿಹ್ನೆಗಳನ್ನು ನೋಡಬಹುದಾಗಿತ್ತು ; ಇಂಥ ಅನುಕರಣ ಚಿಹ್ನೆ ಸಂಸ್ಕೃತ ನಾಟಕಗಳಲ್ಲಿ ಮಾತ್ರ ಎಲ್ಲಿಯೂ ಸ್ಪಷ್ಟವಾಗಿ ಕಂಡು ಬರುವುದಿಲ್ಲ; ಗ್ರೀಕ್ ಪ್ರಭಾವವಿತ್ತೆಂದು ಹೇಳುವುದಕ್ಕೆ ಇದೂ ಅಷ್ಟು ದೊಡ್ಡ ಆಕ್ಷೇಪಣೆಯೇನಾಗುವುದಿಲ್ಲ. ಏಕೆಂದರೆ ರೋಮನರೇ ಮೊದಲಾದವರು ಗ್ರೀಕ್ ಜನರ ಹತ್ತಿರವಿದ್ದವರು; ಆದರೆ ಇಂಡಿಯದವರು ಬೇರೇ

ಖಂಡದವರೇ ಆದರು; ಮತ್ತು ಭರತಖಂಡದ ಒಂದು ಜಾಯಮಾನವೇನೆಂದರೆ—ಅದು ಅನ್ಯರಿಂದ ಎಷ್ಟೋ ಸಂಗತಿಗಳನ್ನು ತೆಗೆದುಕೊಂಡರೂ ಅವುಗಳನ್ನು ತನ್ನಲ್ಲಿ ಜೀರ್ಣ ಮಾಡಿಕೊಂಡು ಅವಕ್ಕೆ ಬೇರೆ ರೂಪವನ್ನೇ ಕೊಟ್ಟು ಬಿಡುತ್ತದೆ; ಇದು ಇಂದಿಗೂ ಕಂಡು ಬರುತ್ತಿದೆ; ಆದ್ದರಿಂದ ಸಂಸ್ಕೃತ ನಾಟಕವು ಯಾವ ಯಾವ ಕಾಲದಲ್ಲಿ ಎಲ್ಲೆಲ್ಲಿಂದ ಯಾವ ಯಾವ ಸಂಗತಿಗಳನ್ನು ತೆಗೆದುಕೊಂಡು ಹೇಗೆ ಹೇಗೆ ಮಾರ್ಪಡಿಸಿಕೊಂಡು ಬಿಟ್ಟಿದೆಯೋ ಹೇಳುವುದು ಅಸಾಧ್ಯ. ಅಂತು ಈಗ ತಿಳಿದು ಬಂದಿರುವ ಸಂಗತಿಗಳನ್ನು ವಿಚಾರ ಮಾಡಿದರೆ ಅದು ಯಾವ ಅಂಶವನ್ನೂ ತೆಗೆದು ಕೊಂಡೇ ಇಲ್ಲ ಎಂದು ಖಂಡಿತವಾಗಿ ಹೇಳುವುದಕ್ಕಾಗದು.'

ಬಿ. ಎಚ್. ಶ್ರೀಧರ

# ಕಥಾಮೃತ

ಶ್ರೀ ರಾಮಾಯಣ ಭಾರತ
ಬೃಹತ್ಕಥಾನಾಂ ಕವೀನ್ ನಮಸ್ಕುರ್ಮಃ ।
ತ್ರಿಸ್ರೋತಾ ಇವ ಸರಸಾ
ಸರಸ್ವತೀ ಸ್ಫುರತಿ ಯೈರ್ಭಿನ್ನಾ ॥

## ಗುಣಾಢ್ಯನ ಬೃಹತ್ಕಥೆ

ರಾಮಾಯಣ, ಮಹಾಭಾರತ, ಇವೆರಡರ ಹೆಸರನ್ನು ಕೇಳದವರು, ಕಥೆಯನ್ನು ಅರಿಯದವರು, ನಮ್ಮ ನಾಡಿನಲ್ಲೇ ಇಲ್ಲವೆನ್ನಬಹುದು. ಕುಮಾರವ್ಯಾಸನ ಕಾಲಕ್ಕೇ-'ತಿಣಿಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ' ಎಂಬಂತಾಗಿತ್ತು. ಆದರೆ ರಾಮಾಯಣ ಮಹಾಭಾರತಗಳ ಜೋಡಿಗೆ ಹೆಗಲೆಣೆಯಾಗಿ ನಿಲ್ಲುವ ಪುರಾತನ ಕಥೆಗಳ ಮತ್ತೊಂದು ಗಣಿಯಿದೆ:—ಅದೇ 'ಬೃಹತ್ಕಥೆ.' ಜನಸಾಮಾನ್ಯರು ಓದಿ ಆನಂದಿಸಲೆಂಬ ಒಂದೇ ಉದ್ದೇಶದಿಂದ ರಚಿತವಾದ ಗ್ರಂಥ, ರಾಮಾಯಣ ಮಹಾಭಾರತಗಳಷ್ಟೇ ಪುರಾತನವಾದ ಗ್ರಂಥ, ಪುರಾತನವಾದರೂ ಕೇವಲ ದೇವತೆಗಳ ಇಲ್ಲವೆ ದೇವತಾಸಮಾನರಾದ ಮನುಷ್ಯರ ಪ್ರಭಾವಾತಿಶಯದ ವರ್ಣನೆಗಳಿಗೆ ಮೀಸಲಾಗಿರದೆ ಸಾಮಾನ್ಯ ಜನರ ನಿತ್ಯಜೀವನವನ್ನೇ ಅವರ ಕನಸುಮನಸುಗಳನ್ನೇ ಅಚ್ಚಳಿಯದೆ ಬಿತ್ತರಿಸುವ ಉತ್ತಮ ಗ್ರಂಥ, ಇತಿಹಾಸ ಪುರಾಣಗಳ ಸಂಪ್ರದಾಯಕ್ಕೆ ಸೆರೆಯಾಗದ ಸರ್ವರ ಮನಸೆಳೆಯುವಂತಹ ನೂರಾರು, ಏಕೆ, ಸಾವಿರಾರು ಸಣ್ಣ ದೊಡ್ಡ ಕಥೆಗಳ ಮಹಾಸಾಗರವಾದ ಗ್ರಂಥ, ಕಥೆಯೆಂಬ ಸಾಹಿತ್ಯಪ್ರಕಾರದಲ್ಲಿ ಎಷ್ಟು ಭೇದ ಪ್ರಭೇದಗಳು ಸಾಧ್ಯವೋ ಅಷ್ಟಕ್ಕೂ ಸುಂದರ ನಿದರ್ಶನಗಳನ್ನು ಅಗಣಿತವಾಗಿ ಒದಗಿಸುವ ಒಂದೇ ಗ್ರಂಥ, ಅರೇಬಿಯನ್ ನೈಟ್ಸ್, ಡೆಕಾಮೆರಾನ್, ಡಾನ್ ಕ್ವಿಕ್ಸೋಟ್, ಈಸೋಪ್ಸ್ ಫೇಬಲ್ಸ್, ಮುಂತಾದ ವಿಶ್ವವಿಖ್ಯಾತ ಕಥೆಗಳಿಗೂ ಪರಂಪರೆಯಿಂದ ಮೂಲಭೂತವಾದ ಮಹಾಗ್ರಂಥ, ಇದೇ ಭಾರತ ಭೂಮಿಯಲ್ಲೇ ಎರಡು ಸಾವಿರ ವರ್ಷಗಳ ಹಿಂದೆಯೇ ರಚಿತವಾಗಿದೆಯೆಂದರೆ ಇಂದು ಅನೇಕರು ಸೋಜಿಗದಿಂದ ಚಕಿತರಾಗುವಂತಹ ಸನ್ನಿವೇಶವುಳಿದಿರುವುದು ವಿಷಾದಕರವಾದ ಸಂಗತಿ.

ಧರ್ಮಾಚಾರಗಳ ಅಂಧಶ್ರದ್ಧೆಯೆಂಬ ಹುಚ್ಚು ಹೊಳೆಯಲ್ಲಿ ಸಾಹಿತ್ಯ ದೃಷ್ಟಿಯಿಂದ ಅನರ್ಘ್ಯರತ್ನಗಳೆನಿಸುವ ಎಷ್ಟೋ ಲೌಕಿಕ ಗ್ರಂಥಗಳು ಮುಳುಗಿಹೋದವು; ಬಹಳ ಹಗುರಾದ ಜಳ್ಳು ಪೊಳ್ಳುಗಳೂ ಕಸಕಡ್ಡಿಗಳೂ ತೇಲಿಬಂದವು. ಜನತೆಯ ಅತ್ಯಾದರಕ್ಕೆ ಮತಕಥೆಗಳೂ ಭಕ್ತವಿಜಯಗಳೂ ಪಾತ್ರವಾದಂತೆಲ್ಲ, ಕೇವಲ ಮನೋವಿನೋದಕ್ಕೆಂದಿದ್ದ ಎಷ್ಟೆಷ್ಟೋ ಮಹಾಕಥೆಗಳು ಅನಾದರಕ್ಕೆ ಪಕ್ಕಾದುವು. ಹೀಗೆ ಅನಾದರಕ್ಕೆ ಗುರಿಯಾದ ಮಹಾಗ್ರಂಥಗಳಲ್ಲಿ ಗುಣಾಢ್ಯನ ಬೃಹತ್ಕಥೆಯು ಅತ್ಯಂತ

ಮುಖ್ಯವಾದುದು. ಪ್ರಾಚೀನ ಭಾರತದ ಜನಜೀವನವನ್ನು ತಿಳಿಯಬಯಸುವವರಿಗೆ, ಪ್ರಾಚೀನ ಭಾರತೀಯರ ನೈಸರ್ಗಿಕ ಜಾಣ್ಮೆಯ ಪರಿಯನ್ನು ಅರಿಯಲೆಳಸುವವರಿಗೆ, ಪ್ರಾಚೀನ ಸಂಸ್ಕೃತಿಯ ಅಚ್ಚತನವನ್ನು ಮುಚ್ಚುಮರೆಯಿಲ್ಲದೆ ಸಂದರ್ಶಿಸಬೇಕೆನ್ನುವವರಿಗೆ, ಲೋಕಾನುಭವದ ಸಾರವನ್ನೇ ಹೀರಬೇಕೆಂದು ಹಂಬಲಿಸುವವರಿಗೆ, ಬಗೆಗೆ ಆನಂದವನ್ನೂ ಬುದ್ಧಿಗೆ ಬೆಳಕನ್ನೂ ಜೀವನಕ್ಕೊಂದು ಸಂಜೀವನವನ್ನೂ ಒಂದೆಡೆಯಲ್ಲಿ ತಂದುಕೊಡುವ ಕಥೆಗಳು ಬೇಕೆಂದು ಹುಡುಕುವವರಿಗೆ, ಬೃಹತ್ಕಥೆಯು ಅಕ್ಷಯಪಾತ್ರೆಯಿದ್ದಂತೆ. ಸಂಸ್ಕೃತ ಸಾಹಿತ್ಯದಲ್ಲಿ ಸ್ವತಂತ್ರ ಕೃತಿಗಳನ್ನು ರಚಿಸಿದ ಮಹಾಕವಿಗಳಾರೂ ಬೃಹತ್ಕಥೆಗೆ ಒಂದಿಲ್ಲೊಂದು ರೀತಿಯಿಂದ ಋಣಿಗಳಾಗದೆ ಹೋಗಿಲ್ಲ. ಭಾಸ, ಕಾಳಿದಾಸ, ದಂಡಿ, ಹರ್ಷ, ಬಾಣಭಟ್ಟ-ಎಲ್ಲರೂ ಬೃಹತ್ಕಥೆಯ ಭಂಡಾರದಿಂದ ಮುತ್ತುಗಳನಾಯ್ದುಕೊಂಡವರೇ ; ಎಲ್ಲರೂ ಗುಣಾಢ್ಯನನ್ನು ಮುಕ್ತಕಂಠದಿಂದ ಹೊಗಳಿರುವವರೇ. ನಿಜವಾಗಿಯೂ ಭಾರತದ ಸಾಹಿತ್ಯದಲ್ಲಿ ಬೃಹತ್ಕಥೆಯ ಪ್ರಾಮುಖ್ಯವನ್ನು ಪ್ರತಿಪಾದಿಸಲು ಒಂದು ದೊಡ್ಡ ಪುಸ್ತಕವಾದರೂ ಸಾಲದು.

## ಬೃಹತ್ಕಥೆಯ ಇತಿಹಾಸ

ಗುಣಾಢ್ಯನು ತನ್ನ ಲೌಕಿಕ ಕಥೆಗಳನ್ನು ಸಂಸ್ಕೃತದಲ್ಲಿ ಬರೆಯಲಿಲ್ಲ. ಬರೆದಿದ್ದರೆ ಅದಕ್ಕೆ ಹೀಗೆ ಅನಾದರವುಂಟಾಗುತ್ತಿರಲಿಲ್ಲ. ಅವನು ಎಲ್ಲರಿಗೂ ತಿಳಿಯಲೆಂದೋ ಏನೋ ಕೀಳ್ಮಟ್ಟದ ಜನರು ಆಡುತ್ತಿದ್ದ ಭಾಷೆಯಲ್ಲಿ ಬರೆದನು. ಇದನ್ನು ಪಂಡಿತರು 'ಪೈಶಾಚಿ'ಯೆಂದುಬಿಟ್ಟರು. 'ಪ್ರಾಕೃತ'ವೆಂಬ ಮನ್ನಣೆಯನ್ನೂ ಕೊಡಲಿಲ್ಲ. ಶತಮಾನಗಳು ಕಳೆಯುತ್ತ ಹೋದಹಾಗೆ ಈ ಭಾಷೆಯೂ ಅರ್ಥವಾಗುವುದು ತಪ್ಪಿ ಹೋಗಿರಬೇಕು. ಗುಣಾಢ್ಯನು ಕೂಡ ತನ್ನ ಪ್ರತಿಭೆಯಿಂದಲೇ ಇಷ್ಟೆಲ್ಲ ಕಥೆಗಳನ್ನೂ ಕಲ್ಪಿಸಿದನೆನ್ನುವ ಬದಲು ಜನರಲ್ಲಿ ಮುಂಚಿನಿಂದಲೂ ಬಳಕೆಯಲ್ಲಿದ್ದ ಕಥೆಗಳನ್ನೇ ಸಂಗ್ರಹಿಸಿದನೆಂದೂ ಹೇಳುವುದು ತಪ್ಪಾಗಲಾರದು. ಕಾಲಕ್ರಮದಲ್ಲಿ ಇತರ ಭಾಷೆಗಳಿಗೆ ಪೈಶಾಚಿಯ ಬೃಹತ್ಕಥಯು ಪರಿವರ್ತನೆಯಾಯಿತು. ಗಂಗರಾಜನಾದ ದುರ್ವಿನೀತನು ಸಂಸ್ಕೃತಕ್ಕೆ ಇದನ್ನು ತಿರುಗಿಸಿದ್ದನಂತೆ. ತಮಿಳಿನಲ್ಲಿ 'ಪೆರುಂಗತೈ' ಎಂಬುದು ದೊರೆತಿದೆ. ಆದರೆ ಇವು ಯಾವುವೂ ಸಮಗ್ರವಾಗಿದ್ದಂತೆ ತೋರುವುದಿಲ್ಲ. ಅಂತೂ ಮೂಲಗ್ರಂಥವು ಲುಪ್ತವಾಗುವ ಸ್ಥಿತಿಗೆ ಬಂದಿತ್ತು. ಸರಸ್ವತೀಪೀಠವೆಂದು ಪ್ರಸಿದ್ಧವಾಗಿದ್ದ ಕಾಶ್ಮೀರದಲ್ಲಿ ಕವಿಗಳಾದ ಕ್ಷೇಮೇಂದ್ರ, ಸೋಮದೇವ-ಇವರು ಹಾಳಾಗುತ್ತಿದ್ದ ಕಥಾಭಂಡಾರವನ್ನು ಕ್ರಿ. ಶ. ಹನ್ನೊಂದನೆಯ ಶತಮಾನದಲ್ಲಿ ಮತ್ತೆ ಸಂಸ್ಕೃತದಲ್ಲಿ ಬರೆದು ಪುನರುಜ್ಜೀವನಗೊಳಿಸಿದರು. ಹೀಗೆಯೇ ಬುಧಸ್ವಾಮಿಯೆಂಬೊಬ್ಬನು ಬರೆದಿರುವ ಮತ್ತೊಂದು ಸಂಗ್ರಹವೂ ನೇಪಾಳದಲ್ಲಿ ಸಿಕ್ಕಿದೆ. ಬೃಹತ್ಕಥೆಯ ಈ ಸಂಸ್ಕೃತ ರೂಪಾಂತರಗಳಾದರೂ ಕಳೆದ ಶತಮಾನದ ವರೆಗೆ ಹಸ್ತಪ್ರತಿಗಳಲ್ಲೇ ಅಡಗಿದ್ದುವು. ಈಚೆಗೆ ಮುದ್ರಣದ ಬೆಳಕನ್ನು ಕಂಡಿವೆ. ಗುಣಾಢ್ಯನು ಬರೆದುದು ಗದ್ಯದಲ್ಲಿ; ಈ ಮೂರು ಸಂಗ್ರಹಗಳೂ (ಕ್ಷೇಮೇಂದ್ರನ 'ಬೃಹತ್ಕಥಾ

ಮಂಜರಿ,' 'ಸೋಮದೇವನ ಕಥಾಸರಿತ್ಸಾಗರ,' ಬುಧಸ್ವಾಮಿಯ 'ಬೃಹತ್ಕಥಾ-ಶ್ಲೋಕ ಸಂಗ್ರಹ') ಇರುವುದು ಶ್ಲೋಕರೂಪವಾಗಿ. ಈ ಕಥೆಗಳ ಮಾಹಾತ್ಮ್ಯವನ್ನೂ ಸ್ವಾರಸ್ಯವನ್ನೂ ಮನಗಂಡ ಪಾಶ್ಚಾತ್ಯರು ಅಪಾರ ದ್ರವ್ಯವನ್ನು ವ್ಯಯಮಾಡಿ ಇವನ್ನು ಇಂಗ್ಲೀಷಿಗೆ ಸುದೀರ್ಘ ಟೀಕೆ ಟಿಪ್ಪಣಿಗಳೊಡನೆ ಪರಿವರ್ತಿಸಿಕೊಂಡಿದ್ದಾರೆ. (ಉದಾ- Ocean of Story, Ed. Penzler). ಆದರೆ ಇಂದಿನ ಭಾರತೀಯ ಭಾಷೆಗಳಿಗೆ ಇವನ್ನು ಆಮೂಲಾಗ್ರವಾಗಿ ಪರಿವರ್ತಿಸಿಕೊಳ್ಳುವ ಕೆಲಸವಿನ್ನೂ ಬಹುಮಟ್ಟಿಗೆ ಮುಗಿದಿಲ್ಲ.

## ಪ್ರೊ. ಕೃಷ್ಣಶಾಸ್ತ್ರಿಗಳ 'ಕಥಾಮೃತ'

ಕಥಾಸರಿತ್ಸಾಗರದ ಕಾರ್ಯವು ಎಷ್ಟು ಅಗತ್ಯವೋ ಅಷ್ಟೇ ದುಷ್ಕರವೂ ಆದುದು. ಮೂಲದಲ್ಲಿ ಕಥೆಯ ಅಂಶಕ್ಕೆ ಎಷ್ಟು ಮಹತ್ವವೋ ವರ್ಣನಾಭಾಗಕ್ಕೂ ಅಷ್ಟೇ ಮಹತ್ವವುಂಟು. ಕಾಶ್ಮೀರ ಕವಿಗಳ ಸಂಸ್ಕೃತ ಮರ್ಯಾದೆಗೂ ಇಂದಿನ ಹೊಸ ಗನ್ನಡ ಗದ್ಯದ ಮರ್ಯಾದೆಗೂ ಇರುವ ಅಂತರವು ಸಣ್ಣದಲ್ಲ. ಕಥೆಯ ಸ್ವಾರಸ್ಯವು ಕುಂದದಂತೆ, ವರ್ಣನಾಭಾಗವು ಅತಿಯಾಗದಂತೆ, ಕನ್ನಡ ನುಡಿಯ ಜೀವಾಳವು ಮಿಡಿಯುತ್ತಿರುವಂತೆ, ಭಾಷಾಂತರ ಮಾಡಬೇಕಾದರೆ ಭಾಷಾಂತರಕಾರನಿಗೆ ಉಭಯ ಭಾಷೆಗಳಲ್ಲೂ ಅಗಾಧವಾದ ಪಾಂಡಿತ್ಯವಿರಬೇಕು, ಅಪಾರವಾದ ಪ್ರತಿಭೆಯಿರಬೇಕು, ಅನಲ್ಪವಾದ ರಸಿಕತೆಯೂ ಇರಬೇಕು. ಈ ಗುಣಗಳು ಒಬ್ಬರಲ್ಲಿ ಇರಬೇಕೆಂದು ಹೇಳುವುದು ಎಷ್ಟು ಸುಲಭವೋ ನಾಡಿನಲ್ಲೆಲ್ಲ ಹುಡುಕಿದರೂ ಅವು ಪೂರ್ಣಪ್ರಮಾಣ ದಲ್ಲಿ ಸಿದ್ಧವಾಗಿರುವವರು ದೊರೆಯುವುದು ಅಷ್ಟೇ ದುಷ್ಕರ. ಒಬ್ಬಿಬ್ಬರು ಸಿಕ್ಕಿದರೂ ಅವರಲ್ಲಿ ನುಡಿಗಾಗಿಯೇ ಜೀವನವನ್ನು ಮುಡಿವಾಗಿಸುವಂತಹ ಮಹಾನುಭಾವರು ಮತ್ತೂ ವಿರಳ. ಷಷ್ಟಿಪೂರ್ತಿಯಾಗುವವರೆಗೂ ಸಂಸ್ಕೃತ ಕನ್ನಡ ಸಾಹಿತ್ಯಗಳ ಸಾರಗ್ರಾಹಿಯಾದ ವಿದ್ವತ್ತಿಗಾಗಿಯೇ ಆಯುಷ್ಯವನ್ನು ಸವೆಸಿ, ಆ ವಿದ್ವತ್ತು ಪರಿಪೂರ್ಣವಾಗಲೆಂದು ಇಂಗ್ಲಿಷ್, ಫ್ರೆಂಚ್, ಜರ್ಮನ್, ಬಂಗಾಲಿ ಮುಂತಾದ ನಾನಾ ಭಾಷೆಗಳಲ್ಲೂ ಪ್ರಾವೀಣ್ಯವನ್ನು ಗಳಿಸಿ, ಸಾವಿರಾರು ಶಿಷ್ಯರಿಗೆ ವಿದ್ಯಾದಾನ ಮಾಡಿ, ವಿಶ್ರಾಂತಿಪಡೆಯಬಹುದಾದ ವೇಳೆಯಲ್ಲೂ ಪರಿಪಕ್ವವಾದ ತಮ್ಮ ರಸಿಕತೆ ಯನ್ನೂ ವಿದ್ವತ್ತನ್ನೂ ನುಡಿಯ ಸೇವೆಗಾಗಿಯೇ ಅವಿಶ್ರಾಂತವಾಗಿ ಧಾರೆಯೆರೆಯುತ್ತಿ ರುವ ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳು ನಾಡಿಗೆಲ್ಲ ಒಬ್ಬರೇ. ಅವರ 'ಸಂಸ್ಕೃತ ನಾಟಕ', 'ಭಾಸ ಕವಿ', 'ವಚನಭಾರತ', 'ಹರಿಶ್ಚಂದ್ರ ಕಾವ್ಯ ಸಂಗ್ರಹ', (ಪೀಠಿಕೆ) 'ಕನ್ನಡ ಕೈಪಿಡಿಯ ಅಲಂಕಾರ ಶಾಸ್ತ್ರ ವಿಭಾಗ', 'ಭಾಷಣಗಳು ಮತ್ತು ಲೇಖನಗಳು'-ಒಂದೊಂದೂ ಆಯಾ ಸಾಹಿತ್ಯಜಾತಿಗಳಿಗೆ ಶಿರೋಭೂಷಣಗಳಾಗಿವೆ. ಅಂತಹವರು ಈ ಇಳಿವಯಸ್ಸಿನಲ್ಲಿಯೂ ಅನ್ಯಾದೃಶವಾದ ಉತ್ಸಾಹದಿಂದ ಕಥಾಸರಿ ತ್ಸಾಗರದ ಸಾರವನ್ನು 'ಕಥಾಮೃತ'ದ ರೂಪದಲ್ಲಿ ಕನ್ನಡಕ್ಕೆ ಕರುಣಿಸಿರುವುದು

ಕನ್ನಡಿಗರ ಪುಣ್ಯ. ಅಮೃತವನ್ನು ಅಂಗೈಯ್ಯಲ್ಲಿಟ್ಟ ಮೇಲೆ ಕುಡಿಯಿರೆಂದೂ ಹೇಳ ಬೇಕೇ? ಹಾಗೆ ಅಂಗೈಯಲ್ಲಿಟ್ಟ ಮೇಲೂ ಅದನ್ನು ಕುಡಿಯದವರು ಅದೃಷ್ಟಹೀನರು.

## ಕಥಾಮೃತದ ಪೀಠಿಕೆ

ಪ್ರೊ. ಕೃಷ್ಣಶಾಸ್ತ್ರಿಗಳ ವಿದ್ವತ್ತು ಎಷ್ಟು ಅದ್ವಿತೀಯವಾದುದೋ ಅವರ ಸಹೃದಯತೆಯೂ ಅಷ್ಟೇ ಮಿಗಿಲಾದುದು ಅವರ ಪುಸ್ತಕಗಳಲ್ಲೆಲ್ಲ ಈ ಎರಡು ಅಂಶಗಳ ಪಡಿಯಚ್ಚೂ ಬಿದ್ದೇ ಇರುತ್ತದೆ. ಇನ್ನೂ ಕೈಪಳಗದವರ ಬರವಣಿಗೆಯಲ್ಲಿ ಇವೆರಡೂ ಹದಗೆಟ್ಟು ಕಲೆಸಿಕೊಂಡು ಈ ಕಡೆ ಪಂಡಿತರಿಗೂ ಪ್ರಿಯವಾಗದೆ ಆ ಕಡೆ ಸಾಮಾನ್ಯ ಜನರಿಗೂ ರಂಜಕವಾಗಿದೆ ಇರುವಂತಹ ಸಂದರ್ಭವೇ ಹೆಚ್ಚು. ಆದರೆ ಶ್ರೀ ಶಾಸ್ತ್ರಿಗಳ ಬರವಣಿಗೆಯಲ್ಲಿ ಯಾವಾಗಲೂ ಈ ದೋಷವು ಸಂಘಟಿಸಿಲ್ಲ. ಪಾಶ್ಚಾತ್ಯ ಪಂಡಿತರ ಸಂಶೋಧನೆಗಳನ್ನು ಪ್ರತಿಪಾದಿಸುವ ದೀರ್ಘ ಪೀಠಿಕೆಯು ವಿದ್ವಾಂಸರಿಗೆ ಮಾತ್ರ ಉಪಯುಕ್ತವಾಗಿರದೆ, ಸನ್ಮತಿಗಳಾದ ವಾಚಕರೆಲ್ಲರಿಗೂ ಪ್ರಿಯವಾಗುವಂತಿದೆ. ಸಂಶೋಧನೆಗಳಲ್ಲಿ ಹೇರಳವಾಗಿ ಬರುವ ಅಲ್ಪ ವಿಷಯಗಳ ಶುಷ್ಕ ಚರ್ಚೆಯಾಗಲಿ, ಅನೇಕ ಲೇಖನಗಳ ಪರಿಚಯವನ್ನು ಅಗಣಿತ ಅಡಿಟಿಪ್ಪಣಿ ಗಳ ಬೆಂಬಲದಿಂದ ಪ್ರದರ್ಶಿಸಿ ಬೆರಗುಗೊಳಿಸಬೇಕೆಂಬ ಭ್ರಮೆಯಾಗಲಿ ಇಲ್ಲಿಲ್ಲ. ಪ್ರಕೃತಕ್ಕೆ ಎಷ್ಟು ಅತ್ಯುಪಯುಕ್ತವೋ, ಎಷ್ಟು ಸಾರಾಂಶವೋ ಅಷ್ಟನ್ನು ಮಾತ್ರ ಕೂಲಂಕಷವಾಗಿ, ಸರಳವಾಗಿ ವಿವರಿಸಿದ್ದಾರೆ. ಗುಣಾಢ್ಯನ ಬೃಹತ್ಕಥೆ, ಅದರ ರೂಪಾಂತರಗಳು, ಈ ಕಥೆಗಳ ವೈಶಿಷ್ಟ್ಯ, ಇಂದಿಗೂ ಅವುಗಳ ಸ್ವಾರಸ್ಯ ಮತ್ತು ಅವುಗಳ ಸಂದೇಶ- ಇತ್ಯಾದಿ ಅಂಶಗಳೆಲ್ಲ ವಿಸ್ತಾರವಾದ ಪೀಠಿಕೆಯಲ್ಲಿ ಅಡಕವಾಗಿ ಬಂದಿವೆ; ಅಡಕವಾಗಿದ್ದರೂ ಇದುವರೆಗೆ ಸಂಶೋಧನೆಯಿಂದ ಸಿದ್ಧವಾಗಿರುವ ಅಂಶ ಗಳು ಸಮಗ್ರವಾಗಿಯೂ ಸಮರ್ಪಕವಾಗಿಯೂ ಬಂದಿವೆ. ಪ್ರಾಚ್ಯಸಂಶೋಧನೆ ಯೆಂದರೇನು ಎಂಬುದನ್ನು ಮನಗಾಣಬೇಕಾದರೆ ಈ ಪೀಠಿಕೆಯನ್ನು ಓದಲೇಬೇಕು.

## ಕಥೆಗಳು

ಆದರೆ ಮುಖ್ಯವಾಗಿ 'ಕಥಾಮೃತ'ದ ಕಥೆಗಳಲ್ಲಿರುವ ಸ್ವಾರಸ್ಯವನ್ನು ಓದಿಯೇ ಸವಿಯಬೇಕು. ಅದನ್ನು ವಿವರಿಸುವುದು ಸಕ್ಕರೆಯ ಸವಿಯನ್ನು ಮಾತಿನಿಂದ ಆಡಿ ತೋರಿಸುವಂತೆಯೇ ಹಾಸ್ಯಾಸ್ಪದವಾಗುತ್ತದೆ. ಪ್ರೊ. ಕೃಷ್ಣಶಾಸ್ತ್ರಿಗಳ ಕಥಾ ನಿರೂಪಣೆಯ ಶೈಲಿಯು ತಿಳಿಯಾಗಿದೆ, ಸರಳವಾಗಿದೆ, ಮೋಹಕವಾಗಿದೆ. ಇದರಲ್ಲಿ ಪಾಂಡಿತ್ಯದ ಪೆಡಸೂ ಇಲ್ಲ, ಅಲಂಕಾರದ ಬಳಸೂ ಇಲ್ಲ. ಸೊಗಸೊಂದೇ ಬೆಳುದಿಂಗಳು ಚೆಲ್ಲಿದಂತೆ ಉದ್ದಕ್ಕೂ ಕಂಗೊಳಿಸುತ್ತದೆ. 'ಸುಲಿದ ಬಾಳೆಯ ಹಣ್ಣಿನಂದದಿ-' ಎಂಬ ಕನ್ನಡದ ನೈಜಗುಣವನ್ನಿಲ್ಲಿ ನೋಡಬಹುದು. ಅಲ್ಲಲ್ಲಿ ಬರುವ ಸಣ್ಣ ವರ್ಣನೆಗಳು 'ತಿಳಿಗೊಳನ ಬಳಸಿ ನಳನಳಿಸಿ ಬೆಳೆದೆಳೆಮಾವುಗಳು.' 'ಕಥಾಮೃತ'ದಲ್ಲಿ ಎಳೆಯ ಮಕ್ಕಳನ್ನು ಮರುಳು ಮಾಡುವ ಕಥೆಗಳಿವೆ; ಇಳಿವಯಸ್ಸಿನವರನ್ನು ತಲೆದೂಗಿಸುವ

ಕಥೆಗಳೂ ಇವೆ. ಸಂಸಾರಿಗಳು ಮೋಹಿಸುವ ಕಥೆಗಳಿವೆ ; ಸಂನ್ಯಾಸಿಗಳು ಮೆಚ್ಚುವ ಕಥೆಗಳೂ ಇವೆ. ಅರಿಯದ ಹುಡುಗಿಯರು ಬೆರಗಾಗುವ ಕಥೆಗಳಿವೆ; ನುರಿತ ಪ್ರೌಢೆಯರು ಸವಿಯುವಂತಹ ಕಥೆಗಳೂ ಇವೆ. ನಾಗಕನ್ನಿಕೆಯರು, ವಿದ್ಯಾಧರರು, ಬೇತಾಳಗಳು, ಯಕ್ಷರು, ರಾಕ್ಷಸರು, ಪಿಶಾಚರು-ಇವರಿಗೆ ಸಂಬಂಧಿಸಿದ ಅದ್ಭುತ ಕಥೆಗಳಿವೆ ; ವಿಟರು, ವಿದೂಷಕರು, ಕಳ್ಳರು, ಜೂಜುಗಾರರು, ತುಂಟರು, ಪುಂಡರು ದಡ್ಡರು-ಇವರನ್ನು ಕುರಿತು ವಾಸ್ತವಿಕ ಕಥಗಳೂ ಇವೆ ರಾಮ, ನಳ, ಮುಂತಾದ ವರ ಉಪಾಖ್ಯಾನಗಳಿವೆ; ವಿಕ್ರಮಾದಿತ್ಯ ಮೊದಲಾದ ರಾಜರ ಐತಿಹ್ಯಗಳೂ ಇವೆ. ಈ ಕಥೆಗಳ ವೈವಿಧ್ಯವು ಎಂತಹ ಭಿನ್ನರುಚಿಗಳಾದ ವಾಚಕರಿಗೂ ಸಮಾರಾಧಕ ವಾಗುವುದರಲ್ಲಡ್ಡಿಯಿಲ್ಲ. ಇಂದಿನ ಜೀವನದ ದಂದುಗವನ್ನು ಮರೆಯಲು ಅದ್ಭುತ ಕಥೆಗಳು ಸಹಾಯಮಾಡುವಂತೆಯೇ ಇಂದಿನ ಜೀವನಕ್ಕೊಂದು ಹೊಸ ಬೆಳಕನ್ನೂ ಕೊಡಬಲ್ಲ ಅನೇಕಾನೇಕ ಲೌಕಿಕ ಕಥಗಳೂ ಅಲ್ಲಿವೆ. ಮಕ್ಕಳಿಗೆ ಅತಿ ಮಾನುಷ ವ್ಯಾಪಾರಗಳನ್ನು ಚಿತ್ರಿಸುವ ಅದ್ಭುತ ಕಥೆಗಳು ಪ್ರಿಯವಾದರೆ ದೊಡ್ಡವರಿಗೆ ವ್ಯವಹಾರ ವನ್ನು ಪ್ರತಿಬಿಂಬಿಸುವ ವಾಸ್ತವಿಕ ಕಥೆಗಳು ಮೆಚ್ಚಾಗುತ್ತವೆ. ಎಲ್ಲರಿಗೂ ಒಂದು ಅಖಂಡವಾದ ರಸದೂಟವೇ ಇಲ್ಲಿ ಕಾದಿದೆ. ಕಥಾಮೃತವು ಮುಖ್ಯವಾಗಿ ಉದಯನ-ವಾಸವದತ್ತೆ, ಅವರ ಮಗ ನರವಾಹನದತ್ತ ಅವನ ಅಸಂಖ್ಯ ಪ್ರೇಯಸಿಯರು, ಇವರನ್ನು ಕುರಿತದ್ದು. ಆದರೆ ಪ್ರಾಸಂಗಿಕವಾಗಿ ಬರುವ ಕಥೆಗಳಿಗೂ ಉಪಕಥೆಗಳಿಗೂ ಲೆಕ್ಕವಿಲ್ಲ. ಇದರಲ್ಲಿರುವ ಕಥೆಗಳು ಯಾವುವೂ ಅನ್ಯತ್ರ ಪರಿಚಿತವಾದುವಲ್ಲ. ಎಲ್ಲದರಲ್ಲಿಯೂ ಹೊಸತನವಿದೆ; ಹೊಸ ಆನಂದವನ್ನುಕ್ಕಿಸುವ ಶಕ್ತಿಯಿದೆ. ಹೊಚ್ಚ ಹೊಸದಾಗಿಯೂ ರಮಣೀಯವಾಗಿಯೂ ಇರುವ ಈ 'ಕಥಾಮೃತ'ವು ನಾಡಿನ ಮನೆಮನೆಯಲ್ಲಿಯೂ ಕಂಗೊಳಿಸಲಿ ; ಅದರ ಪುನರ್ಮುದ್ರಣವು ಬೇಗನೆ ಬರುವಂತಾ ಗಲಿ ಎಂದು ಹಾರೈಸುತ್ತೇನೆ. ಪುಸ್ತಕದ ಅಂದವು-ಮಾಟ, ಅಚ್ಚು, ಕಾಗದ, ಚಿತ್ರ, ಎಲ್ಲದರಲ್ಲಿಯೂ-ಅದನ್ನು ಮನೆಗೊಂದು ಅಲಂಕಾರವಾಗಿಸುವುದರಲ್ಲಿ ಸಂದೇಹವಿಲ್ಲ.

ಕೆ. ಕೃಷ್ಣಮೂರ್ತಿ

## ಶ್ರೀಮಾನ್ ಎ. ಆರ್. ಕೃ. ಅವರ ದೃಷ್ಟಾಂತಗಳು

'ಕೆಲವು ವೇಳೆ, ಪರೀಕ್ಷೆಗೆ ಹೋಗಿದ್ದ ಯುವಕರಿಗೆ ಇತ್ತ ಕಡೆ ಮದುವೆಯೋ ಪುತ್ರೋತ್ಸವವೋ ಆಗುವುದು, ಅತ್ತ ಕಡೆ ಪರೀಕ್ಷೆಯಲ್ಲಿ ತೇರ್ಗಡೆಯಾಯಿತೆಂಬ ವರ್ತಮಾನವೂ ಬರುವುದು ಹಾಗೇ ..... ..' ಮೇಲಿನ ಅನುವಾದದಲ್ಲಿ ಎರಡನೆಯ ವಾಕ್ಯ ಏನಿರಬಹುದು, ಊಹಿಸುವುದು ಸಾಧ್ಯವೇ ? ಅಷ್ಟು ದೂರ ಹೋಗುವುದು ಬೇಡ, ಈ ವಾಕ್ಯ ಶ್ರೀಮಾನ್ ಎ. ಆರ್ ಕೃ. ಅವರ ಯಾವ ಗ್ರಂಥದಲ್ಲಿ ಬರುತ್ತದೆ ? ಅದು ಬರುವುದು ಅವರ ಉದ್ಗ್ರಂಥವಾದ 'ಭಾಸಕವಿ' ಯ 'ಸ್ವಪ್ನವಾಸವದತ್ತ' ಎಂಬ ರಸವತ್ತಾದ ಪ್ರಬಂಧದಲ್ಲಿ ಎಂದರೆ ಬಹಳ ಜನರಿಗೆ ಆಶ್ಚರ್ಯವಾಗಬಹುದು. 'ಹಾಗೇ ವತ್ಸರಾಜನಿಗೂ, ಆರನೆಯ ಅಂಕದಲ್ಲಿ, ಅತ್ತ ಕಡೆ ಕೈ ತಪ್ಪಿಹೋದ ರಾಜ್ಯವೂ ದೊರಕುವುದು, ಇತ್ತ ಕಡೆ ಕಳೆದುಕೊಂಡ ಹೆಂಡತಿಯೂ ಕೈ ಸೇರುವಳು. ಆದರೆ ಫಲಿತಾಂಶ ತಿಳಿಯುವುದಕ್ಕೆ ಮುಂಚೆ ಮನಸ್ಸಿಗೆ ಕಳವಳವಿರುವಂತೆ ಅವನಿಗೂ ಕಳವಳವಿರುತ್ತದೆ.' ವತ್ಸರಾಜನಿಗೂ ಈಗಿನ ಕಾಲದ ವಿದ್ಯಾರ್ಥಿಗೂ ಎಲ್ಲಿಯ ಸಂಬಂಧ ! ಎಂದು ಕೆಲವರು ಉದ್ಗಾರ ತೆಗೆಯಬಹುದು. ಆದರೆ ಹೀಗೆ ಒಂದಕ್ಕೊಂದು ಸಂಬಂಧವಿಲ್ಲದಿರುವ ವಿಷಯಗಳನ್ನು ಒಟ್ಟಿಗೆ ಸೇರಿಸುವುದರಲ್ಲೇ ಸ್ವಾರಸ್ಯ ಇರುವುದು ! ಇಂಥ ದೃಷ್ಟಾಂತಗಳು ಶ್ರೀಮಾನ್ ಎ. ಆರ್. ಕೃ. ಅವರ ಬರಹಗಳಲ್ಲಿ ಸಾಕಷ್ಟು ಸಿಕ್ಕುತ್ತವೆ. ಮತ್ತಾವುದಕ್ಕಲ್ಲದಿದ್ದರೂ ಅವುಗಳನ್ನು ಮುಂದಿಟ್ಟುಕೊಂಡು ಸವಿಯಬೇಕೆಂಬ ಚಾಪಲ್ಯದಿಂದ—ಮಕ್ಕಳು ತಮ್ಮ ನಾಲಗೆಯ ತುದಿಯ ಮೇಲಿರುವ ಕಲ್ಲುಸಕ್ಕರೆಯ ತುಂಡನ್ನು ನಾಸಾಗ್ರದೃಷ್ಟಿಯಿಂದ ನೋಡಿ ನೋಡಿ ಸವಿಯುವಂತೆ—ಮತ್ತೆರಡು ದೃಷ್ಟಾಂತಗಳನ್ನು ಅದೇ ಪ್ರಬಂಧದಿಂದ ಅನುವಾದ ಮಾಡುತ್ತೇನೆ.

'ಮನೆಯಲ್ಲಿ ಇರುವ ಒಂದೆರಡು ಸಾಮಗ್ರಿಗಳಿಂದಲೇ, ಮೂರು ನಾಲ್ಕು ಪಾತ್ರೆಗಳಲ್ಲಿಯೇ, ಹತ್ತಾರು ರುಚಿಯಾದ ಅಡಿಗೆ ಮಾಡಬಲ್ಲ ನಿಪುಣೆಯಾದ ಗೃಹಿಣಿಯಂತೆ, ಕವಿಯು ಮುಂದಿರುವ ಒಂದೆರಡು ಪಾತ್ರೆಗಳಲ್ಲಿಯೇ, ಹಳೆಯ ಕಥಾಸಾಮಗ್ರಿಗಳಿಂದಲೇ, ಸುಂದರವಾಗಿ ಕಂಗೊಳಿಸುವ ಮನೋಹರವಾದ ರಸ ಪದಾರ್ಥಗಳನ್ನು ಸೃಷ್ಟಿಸಿದ್ದಾನೆ.'

'ಗುಲಾಬಿಗಿಡವು ಕುಳ್ಳಾಗಿದ್ದರೂ ಅದನ್ನು ಕತ್ತರಿಸಿ ಕಸಿಮಾಡಿ ಮೈ ತುಂಬ ಹೂ ಬಿಡಿಸುವ ಸಮರ್ಥನಾದ ತೋಟಗಾರನಂತೆ ನಾಟಕವು ಚಿಕ್ಕದಾಗಿದ್ದರೂ ಕವಿಯು ಅದರಲ್ಲಿ ಅನೇಕ ರಸಸ್ಥಾನಗಳನ್ನು ಕಲ್ಪಿಸಿ ಆನಂದಗೊಳಿಸಿದ್ದಾನೆ.'

ಈ ಹೋಲಿಕೆಗಳು ಯಾವುದಾದರೂ ಜಟಿಲವಾದ ಅಥವಾ ಕ್ಲಿಷ್ಟವಾದ ವಿಷಯಗಳನ್ನು ವಿವರಿಸಬೇಕೆಂದಾಗಲಿ, ಯಾರ ಮನಸ್ಸನ್ನಾದರೂ ಒಲಿಸಿ ಯಾವುದಾದರೊಂದು ಅಭಿಪ್ರಾಯದ ಕಡೆಗೆ ತಿರುಗಿಸಬೇಕೆಂದಾಗಲಿ ಬಂದವುಗಳಲ್ಲ ಎಂದು

ನನಗೆ ತೋರುತ್ತದೆ. ನಾಟಕವೊಂದರ ಸಾರವನ್ನೆಲ್ಲಾ ಒಂದು ಹಿಡಿಮಾತಿನಲ್ಲಿ ಹೇಳುವ ಅದ್ಭುತವಾದ ಕಾರ್ಯವನ್ನು ಅವು ಮಾಡಿದರೂ ಅವುಗಳಿರುವುದು ಸವಿಯುವುದಕ್ಕೆ ಮಾತ್ರ.

ರೂಪಕ, ಉಪಮಾನ, ದೃಷ್ಟಾಂತ—ಇವುಗಳೆಲ್ಲಕ್ಕೂ ಸಾದೃಶ್ಯವೇ ಮೂಲ. ಈ ಲೇಖನದಲ್ಲಿ ಇವುಗಳೆಲ್ಲವನ್ನೂ 'ದೃಷ್ಟಾಂತ' ಎಂಬ ಒಂದೇ ಹೆಸರಿನಿಂದ ಕರೆದಿದ್ದೇನೆ. ದೃಷ್ಟಾಂತಗಳು ಕಾವ್ಯದಲ್ಲಿ ಬಗೆ ಬಗೆಯಾಗಿ ಕಾಣಿಸಿಕೊಳ್ಳುವ ವಿಚಾರ ಕಾವ್ಯಾಭ್ಯಾಸಿಗಳಿಗೆ ತಿಳಿದದ್ದೇ. ಆದರೆ ಬುದ್ಧಿಪ್ರಧಾನವಾದ ವಿಮರ್ಶೆ ಮುಂತಾದುವುಗಳಲ್ಲಿಯೂ ಇವು ಬರುವುದುಂಟು. ಶ್ರೀಮಾನ್ ಎ. ಆರ್. ಕೃ. ಅವರ ಕೃತಿಗಳ ಬಹುಭಾಗ ಈ ಜಾತಿಗೆ ಸೇರಿದ್ದು.

ಬುದ್ಧಿಪ್ರಧಾನವಾದ ಬರಹಗಳಲ್ಲಿ ದೃಷ್ಟಾಂತಗಳು ಎರಡು ವಿಧವಾಗಿ ಕಾಣಿಸಿಕೊಳ್ಳುತ್ತವೆ. ಯಾವುದಾದರೂ ಒಂದು ಕ್ಲಿಷ್ಟವಾದ ವಿಷಯವನ್ನು ಮನಸ್ಸಿಗೆ ಚೆನ್ನಾಗಿ ನಾಟುವಂತೆ ಹೇಳಲು ದೃಷ್ಟಾಂತಗಳ ಪ್ರಯೋಗವಾಗಬಹುದು. ಈ ರೀತಿಯಲ್ಲಿ ದೃಷ್ಟಾಂತವನ್ನು ಪ್ರಯೋಗಿಸುವವನು ತಾನು ಯಾವ ವಿಷಯವಾಗಿ ಬರೆಯುತ್ತಿದ್ದಾನೋ ಅದನ್ನು ಶಾಸ್ತ್ರೀಯವಾದ ರೀತಿಯಲ್ಲಿ ಕೂಲಂಕಷವಾಗಿ ಅಭ್ಯಾಸ ಮಾಡಿರಬೇಕು; ಅಲ್ಲದೆ ತಾನು ವಿವರಿಸಲಿರುವ ಅಪರಿಚಿತ ಪ್ರಕ್ರಿಯೆಗಳಿಗೆ ಪರಿಚಿತ ವಸ್ತು ಪ್ರಪಂಚದಿಂದ ದೃಷ್ಟಾಂತಗಳನ್ನು ಆರಿಸಿಕೊಡುವ ನಿಪುಣನೂ ಆಗಿರಬೇಕು. ಶಬ್ದಾರ್ಥಸ್ವರೂಪ, ಧ್ವನಿಪ್ರಾಧಾನ್ಯ ಮುಂತಾದ ಜಟಿಲವಾದ ವಿಚಾರಗಳನ್ನು ಅರ್ಥ ಮಾಡಿಕೊಳ್ಳಲು ಈ ಕೆಳಗಿನ ಎರಡು ದೃಷ್ಟಾಂತಗಳು ಎಷ್ಟು ಸಹಾಯಕವಾಗುತ್ತವೆ!

'ಕೆಲವು ಮಾತುಗಳಿಗೆ ಅರ್ಥವು ನಿರ್ದಿಷ್ಟವಾಗಿರುವುದರಿಂದ ಅವು, ಹಾಕಿದ ಕಡೆ ಬಿದ್ದಿರುವ ವಸ್ತುಗಳ ಹಾಗೆ, ನಿಶ್ಚೇತನವಾಗಿರುವಂತೆ ತೋರುತ್ತವೆ. ಇನ್ನು ಕೆಲವುಗಳಿಗೆ ಜೀವವಿರುವಂತೆ, ಪ್ರಭೆಯಿರುವಂತೆ, ತೋರುತ್ತದೆ. ಆ ಜೀವ ಆ ಪ್ರಭೆ ಮಾತಿನ ಚೈತನ್ಯದ ಮೇಲೆ ಹೋಗುತ್ತದೆ. ಒಂದು ಬೆಂಡು ಹೂವಿಗೂ ಮಲ್ಲಿಗೆ ಹೂವಿಗೂ ಹೇಗೆ ವ್ಯತ್ಯಾಸವೋ, ಮರದ ಆನೆಗೂ ಜೀವದ ಆನೆಗೂ ಹೇಗೆ ವ್ಯತ್ಯಾಸವೋ, ಬೆಳಗುವ ಗ್ರಹಕ್ಕೂ ಮಿನುಗುವ ನಕ್ಷತ್ರಕ್ಕೂ ಹೇಗೆ ವ್ಯತ್ಯಾಸವೋ, ಹಾಗೆ ಅವಕ್ಕೆ ವ್ಯತ್ಯಾಸವಿರುತ್ತದೆ. ಮಧ್ಯಾಹ್ನದ ಸೂರ್ಯನ ಸುತ್ತ ಕಣ್ಣು ಕೋರೈಸುವಷ್ಟು ಪ್ರಭೆಯಿರುತ್ತದೆ; ಸಂಜೆಯ ಸೂರ್ಯ ಒಂದು ಕೆಂಪಿನ ಗುಂಡು. ಶರತ್ಕಾಲದ ಹುಣ್ಣಿಮೆಯ ಚಂದ್ರ ಅಮೃತಕಿರಣಗಳನ್ನು ಸುತ್ತಲೂ ಸೂಸುತ್ತಾನೆ; ಮಳೆಗಾಲದಲ್ಲಿ ಮೋಡ ಮುಚ್ಚಿದ ಚಂದ್ರ ಮಂಕು; ಮಂಡಲದಿಂದ ಹೊರಗೆ ಅದರ ಬೆಳಕಿಲ್ಲ. ಈ ನಡುಹಗಲಿನ ಸೂರ್ಯನೂ ಹುಣ್ಣಿಮೆಯ ಚಂದ್ರನೂ ಸಂಜೆಯ ಸೂರ್ಯ ಮೋಡದ ಚಂದ್ರ ಇವರಿಗಿಂತ ಹೇಗೆ ಮೇಲೆನ್ನಬಹುದೋ ಹಾಗೇ ಧ್ವನಿಯಿಂದ ಕೂಡಿದ ಮಾತನ್ನೂ ವಾಚ್ಯಕ್ಕಿಂತ ಮೇಲೆನ್ನಬಹುದು.'

‘ ಒಂದು ಮರದ ದಿಮ್ಮಿಯನ್ನು ಸಲಾಕಿಯಿಂದ ಹೊಡೆದರೆ ‘ ಥಡ್ ’ ಎಂದು ಸದ್ದಾಗುತ್ತದೆ ; ಉತ್ತರ ಕ್ಷಣದಲ್ಲಿಯೇ ಅಡಗಿ ಹೋಗುತ್ತದೆ. ಅದೇ ಒಂದು ಲೋಹದ, ಅದರಲ್ಲಿಯೂ ಬೆಳ್ಳಿಯ ಅಥವಾ ಕಂಚಿನ, ಪಾತ್ರೆಯನ್ನು ಹೊಡೆದರೆ, ‘ಠಣ್’ ಎಂದು ಸದ್ದಾಗುತ್ತದೆ. ಆ ಸದ್ದು ಅಲ್ಲಿಯೇ ಅಡಗಿ ಹೋಗುವುದಿಲ್ಲ; ಹರಡುತ್ತದೆ, ಅಲೆಯಲೆಯಾಗಿ ಮುಂದುವರಿಯುತ್ತದೆ, ‘ ಅನುರಣನ ’ ವಾಗುತ್ತದೆ. ಹಾಗೇ ಪರ್ವತ ಪ್ರಾಂತದಲ್ಲಿ ಸಿಡಿಯುವ ಸಿಡಿಲು ಮಾರ್ದನಿ ಪಡಿಮಾರ್ದನಿಗೊಟ್ಟು ಕುಡಿವರಿದು ಆ ಪ್ರಾಂತವನ್ನೆಲ್ಲಾ ಗುಡು ಗುಡು ಶಬ್ದದಿಂದ ತುಂಬುತ್ತದೆ. ವಸ್ತುತಃ ಅದು ‘ಢಂ’ ಎಂಬ ಒಂದೇ ಏಟು, ಒಂದೇ ಸದ್ದು. ಹೀಗೆ ಸತ್ತ್ವವುಳ್ಳ, ಜೀವವುಳ್ಳ, ಒಂದು ಮಾತೂ ಹತ್ತು ಮಾತಿನ ಕೆಲಸ ಮಾಡುತ್ತದೆ, ಮಾತನಾಡಿ ಆಗದ ಕೆಲಸವನ್ನೂ ಮಾಡುತ್ತದೆ; ಇದು ‘ಧ್ವನಿ’ಯ ಮಹತ್ವ.’

ವಾದಮಾಡುವಾಗ ಯಾವುದಾದರೂ ಒಂದು ನಿರ್ಣಯಕ್ಕೆ ಬರುವಂತೆ ದೃಷ್ಟಾಂತಗಳನ್ನು ಪ್ರಯೋಗಿಸುವುದು ಎರಡನೆಯ ವಿಧಾನ. ಈ ರೀತಿಯ ದೃಷ್ಟಾಂತಗಳು ಶ್ರೀಮಾನ್ ಎ. ಆರ್. ಕೃ. ಅವರ ಬರಹಗಳಲ್ಲಿ ಹೇರಳವಾಗಿ ಕಾಣಿಸಿಕೊಳ್ಳುತ್ತವೆ. ಈ ತರ್ಕವಿಧಾನವು ಇತರರ ಮನಸ್ಸನ್ನು ಒಲಿಸಿ ಯಾವುದಾದರೊಂದು ಅಭಿಪ್ರಾಯದ ಕಡೆಗೆ ತಿರುಗಿಸುವ ಕೆಲಸವೊಂದನ್ನೇ ಅಲ್ಲದೆ, ವಿಷಯದ ಮೇಲೆ ಹೊಸದಾಗಿ ಬೆಳಕನ್ನೂ ಚೆಲ್ಲಬಹುದು. ಈ ಬಗೆಯಾದ ವಾದವನ್ನು ಈ ರೀತಿ ಸರಳಗೊಳಿಸಿ ಬರೆಯಬಹುದು:

‘ಕ’ ಎಂಬುದಕ್ಕೆ ಅ$_1$, ಅ$_2$, ಅ$_3$, .. ....... ...ಪ ಎಂಬ ಗುಣಗಳಿವೆ.

‘ಚ’ ಎಂಬುದಕ್ಕೆ ಅ$_1$, ಅ$_2$, ಅ$_3$, .. ..ಎಂಬ ಗುಣಗಳಿವೆ.

ಆದುದರಿಂದ ‘ಚ’ ಎಂಬುದಕ್ಕೂ ‘ಪ’ ಎಂಬ ಗುಣವಿದೆ.

ಈ ರೀತಿಯ ವಾದದ ಬಲವೇನಿದ್ದರೂ, ‘ಕ’ ‘ಚ’ ಗಳಿಗಿರುವ ಸಾಮಾನ್ಯಗುಣಗಳಾದ ಅ$_1$, ಅ$_2$, ಅ$_3$, ... ... . ...ಎಂಬವುಗಳೇ. ಅವೆರಡಕ್ಕೂ ಸಾಮಾನ್ಯವಲ್ಲದ ಬೇರೆ ಗುಣಗಳಿದ್ದರೂ, ಅವುಗಳು ಇಲ್ಲಿ ವಿವಕ್ಷಿತವಾಗಿಲ್ಲ ಎಂಬುದನ್ನು ಸೂಚಿಸಲು ಚುಕ್ಕಿಗಳನ್ನು ಉಪಯೋಗಿಸಲಾಯಿತು. ‘ಚ’ ಎಂಬುದಕ್ಕೆ ‘ಪ’ ಎಂಬ ಗುಣದ ಜತೆಯಲ್ಲಿ ಹೊಂದಿಕೊಳ್ಳದ ಬೇರೊಂದು ಗುಣವಿದ್ದರೆ ಈ ಬಗೆಯ ವಾದ ದುರ್ಬಲವಾಗುತ್ತದೆ. ಅದೂ ಅಲ್ಲದೆ, ದೃಷ್ಟಾಂತಗಳೇ ಸ್ವತಂತ್ರವಾಗಿ ಯಾವುದನ್ನೂ ಸಾಧಿಸಲಾರವು. ಈ ಬಗೆಯಾದ ತರ್ಕ ಪ್ರಯೋಜನಕಾರಿಯಾದರೂ, ಅಪಾಯಕಾರಿಯೂ ಹೌದು ಎಂಬುದನ್ನು ತಿಳಿಸಲು ಹಿಂದಿನ ಮಾತು ಬರೆಯಲಾಯಿತೇ ಹೊರತು, ದೃಷ್ಟಾಂತಗಳಿಂದ ಉಪಯೋಗವೇ ಇಲ್ಲ ಎಂಬ ಭಾವನೆಯಿಂದಲ್ಲ. ಎಂಥ ಒಳ್ಳೆಯ ದೃಷ್ಟಾಂತವಿದ್ದರೂ ಅದು ಒಂದಲ್ಲ ಒಂದು ವಿಚಾರದಲ್ಲಿ ಹೊಂದಿಕೆಯಾಗದೆ ಉಳಿದು ಬಿಡುತ್ತದೆ. ಆದುದರಿಂದ ವಾದಿಸುವಾಗ ದೃಷ್ಟಾಂತಗಳನ್ನು ಪ್ರಯೋಗಿಸುವವನು, ಮೊದಲು, ಈ ದೃಷ್ಟಾಂತಮಾರ್ಗದಿಂದ ಭಿನ್ನವಾದ ಮತ್ತೊಂದು ವಿಧಾನದಲ್ಲಿ

ತಾನು ಸಾಧಿಸಬೇಕೆಂದಿರುವುದನ್ನು ಸಾಧಿಸಿ, ಬಳಿಕ ಅವುಗಳನ್ನು ಪ್ರಯೋಗಿಸಿದರೆ ಕ್ಷೇಮ. ಶ್ರೀಮಾನ್ ಎ. ಆರ್. ಕೃ. ಅವರು ಈ ಕ್ಷೇಮವಾದ ಮಾರ್ಗವನ್ನೆ ಅನುಸರಿಸಿದ್ದಾರೆ ಎಂಬುದಕ್ಕೆ ಬೇಕಾದಷ್ಟು ಉದಾಹರಣೆಗಳನ್ನು ಕೊಡಬಹುದು.

ಕಾವ್ಯವು ಉಪದೇಶದಾಯಕವಾಗಿರಬೇಕೇ ಬೇಡವೇ ಎಂಬ ಸಮಸ್ಯೆಯನ್ನು ಚರ್ಚಿಸುತ್ತ ಅವರು ಈ ದೃಷ್ಟಾಂತವನ್ನು ಕೊಟ್ಟಿದ್ದಾರೆ :

'ಕಾವ್ಯವು ಒಂದು ಹೂವಿನ ಹಾಗೆ; ಅದರ ಕೆಲಸವು ಮನೋಹರವಾದ ರೂಪಿನಿಂದಾಗಲಿ ಸುವಾಸನೆಯಿಂದಾಗಲಿ ಇವೆರಡರಿಂದಾಗಲಿ ಪ್ರೀತಿಯನ್ನುಂಟು ಮಾಡತಕ್ಕದ್ದು. ಆದಗೆ ಅದು ಔಷಧಕ್ಕೂ ಉಪಯೋಗವಾಗಬೇಕೆಂದು ಹೇಳುವುದು ನ್ಯಾಯವಲ್ಲ; ಗುಲಾಬಿಯ ಹೂವು ಸುಂದರವೂ ಸುಕುಮಾರವೂ, ಸುಗಂಧಿಯೂ, ಔಷಧಕ್ಕೆ ಉಪಯುಕ್ತವೂ ಆಗಿರಬಹುದು; ಆದರೆ ಇದರಂತೆಯೇ ಎಲ್ಲಾ ಹೂವು ಔಷಧಕ್ಕೆ ಉಪಯುಕ್ತವಾಗಿರುವುದಿಲ್ಲ. ಔಷಧಕ್ಕೆ ಉಪಯೋಗವೇ ಹೂವಿನ ಅಸಾಧಾರಣ ಲಕ್ಷಣವಲ್ಲ; ಅದು ಮೂಲಿಕೆಯ ಲಕ್ಷಣ. ಆದ್ದರಿಂದ ಕಾವ್ಯದಲ್ಲಿ-ಅಷ್ಟೇಕೆ, ಎಲ್ಲಾ ಕುಶಲಕಲೆಯಲ್ಲಿಯೂ ಆನಂದವೇ ಮುಖ್ಯ ಫಲವೆಂದು ಹೇಳಬಹುದಾಗಿದೆ.'

ಬಹುಶಃ ಇದಕ್ಕಿಂತಲೂ ಹೆಚ್ಚು ವಾಕ್ಯಗಳಿಂದ ಮಾತ್ರ ಸಾಧ್ಯವಾಗುವ ಪರಿಣಾಮ ವನ್ನು ಈ ಒಂದು ಸಣ್ಣ ದೃಷ್ಟಾಂತದಿಂದ ಸಾಧಿಸಿರುವ ಕೌಶಲ ಹಾಗಿರಲಿ; ಅವರು ಈ ದೃಷ್ಟಾಂತವನ್ನು ಪ್ರಯೋಗ ಮಾಡುವ ಮುನ್ನ ತಮ್ಮ ನಿರ್ಣಯವನ್ನು ಬೇರೆ ರೀತಿ ಯಿಂದ ಸಮರ್ಥಿಸಿದ್ದಾರೆ ಎನ್ನುವುದನ್ನು ನಾವು ಮುಖ್ಯವಾಗಿ ಇಲ್ಲಿ ಗಮನಿಸಬೇಕು.

"ಕಾವ್ಯವು 'ಉಪದೇಶ' ದಾಯಕವಾಗಿರಬೇಕೇ ಎಂಬುದೊಂದು ವಿಚಾರ. 'ಉಪದೇಶ'ವು ಕೆಲವು ವೇಳೆ ಫಲವಾಗಬಹುದು. ಆದರೆ ಅದು ಕಾವ್ಯದ ಉದ್ದೇಶಗಳಲ್ಲಿ ಒಂದಾಗಿರಬೇಕೆಂದು ಹೇಳುವುದು ಯುಕ್ತವಾಗಿ ತೋರುವುದಿಲ್ಲ. ಏಕೆಂದರೆ ಉಪದೇಶ ಮಾಡುವುದಕ್ಕೆ ಹೊರಟು ಕಾವ್ಯದ ಅಪೂರ್ವ ಲಕ್ಷಣವಾದ ಆನಂದವು ಹುಟ್ಟದೇ ಹೋಗಬಹುದು ಆಧ್ಯಾತ್ಮಿಕ ವಿಚಾರವು ಬರುವ ಕೆಲವು ಕಾವ್ಯಗಳಲ್ಲಿ ಈ ಉಪದೇಶಾಂಶವು ಮುಖ್ಯವಾಗಿ ತೋರುತ್ತಿರಬಹುದು. ಆದರೆ ಕಾವ್ಯಸಾಮಾನ್ಯದ ಲಕ್ಷಣವನ್ನೂ ಫಲವನ್ನೂ ವಿಚಾರ ಮಾಡುವಲ್ಲಿ ಉಪದೇಶವಿರಲೇ ಬೇಕೆಂದರೆ ಅಸಂಗತವಾಗಬಹುದು."

ಇಷ್ಟೇ ಅಲ್ಲದೆ, ಮೇಲಿನ ದೃಷ್ಟಾಂತದಲ್ಲಿ ಮತ್ತೊಂದು ಸೊಗಸಿದೆ. ಮುಂದೆ ಬರಬಹುದಾದ ಟೀಕೆಯೊಂದನ್ನು ಮೊದಲೇ ನಿರೀಕ್ಷಿಸಿ ಅದನ್ನೂ ಗರ್ಭೀಕರಿಸಿ ಕೊಂಡಿದೆ–ಈ ದೃಷ್ಟಾಂತ. ಉಪದೇಶದಾಯಕವಾಗಿದ್ದರೂ ಆನಂದವೀಯುವ ಕಾವ್ಯಗಳಿಲ್ಲವೇ ಎಂಬ ಪ್ರಶ್ನೆಯೇಳಬಹುದು ಎನ್ನುವ ನಿರೀಕ್ಷೆಯಿಂದಲೇ ಅವರು ಗುಲಾಬಿ ಹೂವಿನ ಮಾತನ್ನು ತಂದಿದ್ದಾರೆ. ಆದುದರಿಂದ ಈ ದೃಷ್ಟಾಂತವು ಸುಷ್ಠು ವಾಗಿರುವುದೊಂದೇ ಅಲ್ಲದೆ ಸುಂದರವಾಗಿಯೂ ಇದೆ.

ಈ ರೀತಿಯಾದ ತರ್ಕದಲ್ಲಿ ಮತ್ತೊಂದು ಬಗೆಯ ಅಪಾಯವುಂಟು. ಎದುರಾಳು ಚತುರನಾದರೆ, ನಾವು ಉಪಯೋಗಿಸಬಹುದಾದ ದೃಷ್ಟಾಂತವನ್ನೇ ಉಪಯೋಗಿಸಿಕೊಂಡು ನಮ್ಮ ಮೇಲೆಯೇ ಪ್ರತಿಯಾಗಿ ತಿರುಗಿಸಿಬಿಡಬಹುದು ಆದುದರಿಂದ ಈ ವಿಧವಾದ ತರ್ಕಮಾಡುವವನು ಅಂತಹುದಕ್ಕೆ ಆಸ್ಪದವನ್ನು ಕೊಡಬಾರದೆಂಬುದೊಂದೇ ಅಲ್ಲದೆ, ಎದುರಾಳು ಉಪಯೋಗಿಸಬಹುದಾದ ದೃಷ್ಟಾಂತವನ್ನು ತನ್ನ ಅನುಕೂಲಕ್ಕೆ ತಿರುಗಿಸಿಕೊಳ್ಳಬಲ್ಲ ಚಾತುರ್ಯವನ್ನೂ ಪಡೆದಿರಬೇಕು. ಈ ತೆರದ ಚಾತುರ್ಯ ಶ್ರೀಮಾನ್ ಎ. ಆರ್. ಕೃ. ಅವರಲ್ಲಿ ಕಂಡು ಬರುತ್ತದೆ. ಎರಡು ಉದಾಹರಣೆಗಳನ್ನು ನೋಡೋಣ.

'ಕಥೆ ಬರೆಯುವವರು ತಮ್ಮ ಕಥೆಗಳನ್ನು ಎಲ್ಲಾ ಉತ್ತರ ದೇಶದಲ್ಲಿಯೇ ನಡೆಸಬೇಕೇ' ಎಂದು ಅವರು ಕಾದಂಬರಿಯೊಂದರ ವಿಮರ್ಶೆಯಲ್ಲಿ ಸೂಚಿಸಿದಾಗ, ಅದಕ್ಕೆ ದೃಷ್ಟಾಂತರೂಪದ ಈ ಟೀಕೆ ಸಿಡಿದು ಬಂತು :

'ಯಾವ ದೇಶವಾದರೇನು ? ವಿಗ್ರಹದ ಕಲ್ಲು 'ಚಾಮುಂಡಿ ಬೆಟ್ಟದಲ್ಲಿದ್ದುದೇ ಅಥವಾ ಕಬ್ಬಾಳದುರ್ಗದ್ದೇ ? ಎರಡೂ ಅಲ್ಲದಿದ್ದರೆ ಚಿಂತಾಮಣಿಯ ಮಗ್ಗುಲಲ್ಲಿರುವ ಸಿಡಲಘಟ್ಟದ್ದೇ ?' ಎಂಬ ಪ್ರಶ್ನೆ ಅಪ್ರಕೃತ."

ಈ ದೃಷ್ಟಾಂತವನ್ನು ಶ್ರೀಮಾನ್ ಎ. ಆರ್. ಕೃ. ಅವರು ಈ ರೀತಿ ತಿರುಗಿಸಿದರು :

'ಉತ್ತರ ದೇಶದ ಶಿಲ್ಪಿಯೊಬ್ಬನು ತನ್ನ ದೇಶದಲ್ಲಿ ತನ್ನ ಮನೆಯ ಹತ್ತಿರ ಇರುವ ಕಲ್ಲಿನಲ್ಲಿ ವಿಗ್ರಹ ಮಾಡಿಟ್ಟ ಮಾತ್ರದಿಂದ, ನಮ್ಮ ದೇಶದ ವಿಗ್ರಹಕಾರನೂ ಉತ್ತರದೇಶಕ್ಕೆ ಪೂರ್ವಶಿಲ್ಪಿಯ ಮನೆಯ ಬಾಗಿಲಿಗೇ ಹೋಗಿ ಅವನು ಒಡೆದಿಟ್ಟು ಮಿಕ್ಕಿರುವ ಕಲ್ಲನ್ನೇ ಏಕೆ ತರಬೇಕು ? ಕಲ್ಲು ಯಾವದಾಗಿದ್ದರೂ ಶಿಲ್ಪಸಾಮರ್ಥ್ಯವೇ ಮುಖ್ಯವಾದುದರಿಂದ ಚಾಮುಂಡಿಬೆಟ್ಟದ ಕಲ್ಲನ್ನೇ ಏಕೆ ಉಪಯೋಗಿಸಬಾರದು? ಅದೂ ಉತ್ತರದೇಶದ ಕಲ್ಲಿನಷ್ಟೇ ಶ್ಲಾಘ್ಯವಾಗಿದ್ದರೆ ಅಥವಾ ಅದಕ್ಕಿಂತ ಉತ್ತಮವಾಗಿದ್ದರೆ, ಅದನ್ನೇ ಉಪಯೋಗಿಸಿಕೊಂಡು ವ್ಯರ್ಥಶ್ರಮವನ್ನು ತಪ್ಪಿಸಿಕೊಳ್ಳುವುದು ವಿವೇಕವಲ್ಲವೇ ? ಇದರಿಂದ ನಮ್ಮ ದೇಶದ ಮಿಕ್ಕ ಶಿಲ್ಪಿಗಳಿಗೂ ವಿಗ್ರಹನಿರ್ಮಾಣ ಸಾಮಗ್ರಿಗೆ ಹತ್ತಿರವೇ ಒಂದು ಖನಿಯನ್ನು ತೋರಿಸಿಕೊಟ್ಟು ಉಪಕಾರಮಾಡಿದಂತಾಗುವುದಿಲ್ಲವೇ ?'

'ಸಾಹಿತ್ಯದಲ್ಲಿ ಅನೇಕವೇಳೆ ಪರಸ್ಪರ ಸಾದೃಶ್ಯವಿರುವುದುಂಟು—ಇದು ಸ್ವತಂತ್ರವಾಗಿರಬಹುದು ; ಅಥವಾ ಒಂದರಿಂದ ಮತ್ತೊಂದು ಉಪಕೃತವಾಗಿ ಬಂದದ್ದಿರಬಹುದು. ಈ ಎರಡನೆಯ ಸಂದರ್ಭದಲ್ಲಿ ಕವಿಗೆ ಅಪಕರ್ಷವೇ ?-ಎಂಬುದು ಒಂದು ವಿಚಾರ.' ಈ ವಿಚಾರವಾಗಿ ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು ತಮ್ಮ 'ಸಾಹಿತ್ಯ'ದಲ್ಲಿ ಹೀಗೆ ಬರೆದರು :

'ಹೀಗೆ ಬಂದಿರುವ ಭಾವದ ಮೂಲವನ್ನು ಹುಡುಕಿ ನಿರ್ಧರಿಸುವೆನೆನ್ನುವವನು

ಒಂದು ಹೂವಿನ ಇಷ್ಟು ಭಾಗವು ತನ್ನ ಗಾಡಿಯಲ್ಲಿ ತಂದ ಗೊಬ್ಬರದಿಂದ ಬಂದಿತೆಂದು ಹೇಳುವವನಂತಾಗುವನು....'

ಆ ಪುಸ್ತಕವನ್ನು ವಿಮರ್ಶೆ ಮಾಡುವಾಗ ಶ್ರೀಮಾನ್ ಎ. ಆರ್. ಕೃ. ಅವರು ಮೇಲಿನ ಮಾತಿಗೆ ಈ ರೀತಿ ಉತ್ತರ ಕೊಟ್ಟರು :

'ಕವಿಯ ಶಕ್ತಿ ಸಾಮರ್ಥ್ಯಗಳನ್ನು ತೂಗುವುದಕ್ಕೆ ಹೊರಡುವವನು ಇಂಥ ಕೆಲಸ ಮಾಡಬೇಕಾಗುವುದು. ಇದು ಬೂದಿಯ ಗೊಬ್ಬರ ಹಾಕಿ ಬೆಳಸಿದ್ದು, ಇದು ಕುದುರೆಯ ಗೊಬ್ಬರ ಹಾಕಿ ಬೆಳಸಿದ್ದು, ಆದ್ದರಿಂದ ಈ ಹೂಗಳಲ್ಲಿ ಒಂದು ಸುಮಾರಾಗಿಯೂ ಮತ್ತೊಂದು ಹೊರವಾಗಿಯೂ ಇದೆ, ಗೊಬ್ಬರವೇ ಹಾಕದಿದ್ದರೆ ಈ ಭೂಮಿಯಲ್ಲಿ ಬಿಡುತ್ತಿದ್ದ ಹೂವು ಪೀಚಾಗುತ್ತಿತ್ತು ಎಂದು ತೋಟಗಾರನು ಹೇಳುವ ಹಾಗೆ. '

ಇನ್ನು, ಕೆಲವು ಸ್ವತಃಸಿದ್ಧವಾದ, ಲೋಕಾನುಭವದಿಂದ ಬಂದ, ವಾದದ ನೆರವನ್ನು ಬೇಡದ ಅನೇಕ ಸಂಗತಿಗಳಿಗೆ ಅವರು ಕೊಡುವ ದೃಷ್ಟಾಂತಗಳೂ ಬಹು ರಮಣೀಯವಾದುವು. ಉದಾಹರಣೆಗೆ ಕೆಲವನ್ನು ನೋಡಬಹುದು.

ಯಾರ ಭಾಷಣವೇ ಆಗಲಿ, ಅದರ ವಾಕ್ಯಗಳನ್ನು ಪ್ರಕರಣದಿಂದ ಕಿತ್ತು ತೆಗೆದು ಅನುವಾದ ಮಾಡಿ ಆದರಿಂದ ತಪ್ಪುಕಲ್ಪನೆ ಮಾಡಿಕೊಡುವುದು ಉಚಿತವಲ್ಲ ಎಂಬುದನ್ನು ವಾದಿಸಿ ಸಾಧಿಸಬೇಕಾಗಿಲ್ಲ. ಅಂಥ ವರ್ತನೆಗೆ ಈ ದೃಷ್ಟಾಂತ ಎಷ್ಟು ಉಚಿತ !

' ...ನನ್ನ ಭಾಷಣದಿಂದ ಅಲ್ಲೊಂದು ಇಲ್ಲೊಂದು ವಾಕ್ಯಗಳನ್ನು ಅವುಗಳ ಪ್ರಕರಣದಿಂದ ತೆಗೆದು ಬೇರೆ ಮಾಡಿಟ್ಟು ಖಂಡಿಸಿರುವುದು, ಹಸುವಿನ ಕೊಂಬು ಗೊರಸುಗಳನ್ನು ತೆಗೆದು ಮುಂದಿಟ್ಟು ' ಇಗೋ ನೋಡಿ, ಹಸು ಹಾಯುತ್ತದೆ, ತುಳಿಯುತ್ತದೆ; ಇದೇ ಅದರ ಉಪಯೋಗ ' ಎಂದು ಹೇಳುವಂತಿದೆ.

ಹಾಗೆಯೇ, ನಮಗೆ ಕನ್ನಡ ಭಾಷೆಯ ಮೇಲೆ ಅಭಿಮಾನವಿದೆ ಎಂದ ಮಾತ್ರಕ್ಕೇ ಬೇರೆಯ ಭಾಷೆಗಳ ಮೇಲೆ ದ್ವೇಷವಿದೆಯೆಂದಲ್ಲ; ಅವುಗಳಿಂದಲೂ ಪಡೆಯುವ ಪ್ರಯೋಜನವನ್ನು ಪಡೆಯೋಣ; ಆದರೆ ಅವುಗಳನ್ನು ಎಲ್ಲಿಡಬೇಕೋ ಅಲ್ಲಿಡೋಣ; ಈ ಅಭಿಪ್ರಾಯಕ್ಕೂ ಬಹುಶಃ ವಾದ ಬೇಕಿಲ್ಲ. ಶ್ರೀಮಾನ್ ಎ. ಆರ್. ಕೃ. ಅವರ ದೃಷ್ಟಾಂತವಿದು:

' ನಾವು ಮನುಷ್ಯರು, ಮನುಷ್ಯತ್ವವನ್ನು ಉಳಿಸಿಕೊಳ್ಳೋಣ ಉತ್ತಮಪಡಿಸಿಕೊಳ್ಳೋಣ, ಎಂದರೆ ಮಿಕ್ಕ ಪ್ರಾಣಿಗಳ ಮೇಲೆ ದ್ವೇಷವೆಂದಲ್ಲ. ಹಸುಗಳನ್ನು ಸಾಕಿಕೊಳ್ಳೋಣ, ಹಾಲು ಕರೆದುಕೊಳ್ಳೋಣ; ಕುರಿಗಳನ್ನು ಸಾಕೋಣ, ಕಂಬಳಿಗಳನ್ನು ಮಾಡಿಕೊಳ್ಳೋಣ; ನಮ್ಮ ಕೆಲಸಕ್ಕೆ ಉಪಯೋಗವಾಗುವುದಾದರೆ ಬೆಕ್ಕು ಮುಂತಾದ ಪ್ರಾಣಿಗಳನ್ನೂ ಸಾಕಿಕೊಳ್ಳೋಣ. ಆದರೆ ಅವು ಎಲ್ಲಿರಬೇಕೋ ಅಲ್ಲಿರಲಿ; ಅವನ್ನು ಊಟದ ಮನೆಗೆ ಬಿಟ್ಟರೆ ನಾವು ತಿನ್ನುವ ಅನ್ನವೂ ನಮ್ಮ ಮಕ್ಕಳು ಕುಡಿಯುವ ಹಾಲೂ ಅವುಗಳ ಪಾಲಾಗುತ್ತವೆ. '

ಮತ್ತೆರಡು :

' ಕೆಟ್ಟದ್ದು ಎಂದಿದ್ದರೂ ಕೆಟ್ಟದ್ದೇ; ಒಳ್ಳೆಯದೂ ಅತಿಯಾದರೆ ಕೆಟ್ಟದ್ದೇ ; ಮನೆಯಲ್ಲಿ ಬೆಣ್ಣೆ ಕಾಯಿಸಿ ಮಾಡಿದ ಸುವಾಸನೆಯ ತುಪ್ಪವೂ ಹೆಚ್ಚಾದರೆ, ಅದರಿಂದ ಕೆಡುಕೇ ; ಅಂಥವರಲ್ಲಿ ನಾರುವ ಕಳ್ಳು ಒಳ್ಳೆಯದಾದೀತೇ ? '

' ನಮ್ಮ ವಾತಾವರಣವನ್ನು ನಾವು ಬದಲಾಯಿಸಿಕೊಳ್ಳಬಲ್ಲೆವೇ ? ಕಲ್ಲು ಮುಳ್ಳುಗಳು ಮೆತ್ತಗಾಗುವವೇ ? ನಮ್ಮ ಸ್ವಭಾವವನ್ನೇ ಆಗಲಿ ಇತರರ ಸ್ವಭಾವ ವನ್ನೇ ಆಗಲಿ ಬದಲಾಯಿಸಬಲ್ಲೆವೇ ? ಚಿರತೆಯ ಮೈಮೇಲಿನ ಚುಕ್ಕೆಗಳು ತೊಳೆದರೆ ಹೋಗುತ್ತವೆಯೇ ? ' ಹೀನ ಸುಳಿ ಬೋಳಿಸಿದರೆ ಹೋದೀತೇ ? ' ಹುಲಿ ಕರಡಿಗಳು ಹಸು ಎಮ್ಮೆಗಳಾದಾವೇ ? ಎಲ್ಲೋ ಮಾವು ದಾಳಿಂಬೆಗಳಂಥ ಕೆಲವು ಜಾತಿಗಳು, ಮಾಗಿದರೆ ತಮ್ಮ ಹುಳಿ ಒಗರುಗಳನ್ನು ಬಿಟ್ಟು ಸಿಹಿಯಾಗುತ್ತವೆ. ಮಿಕ್ಕವು, ನಿಂಬೆ ಹೇರಳೆಯಂಥವು, ಹಣ್ಣಾದರೆ ಬಣ್ಣ ಬದಲಾಯಿಸಬಹುದೇ ಹೊರತು ಹುಳಿ ಬೇರೇ ಸಿಹಿಯಾಗುವುದಿಲ್ಲ. ಹಾವು ಚೇಳುಗಳು ಮರಿಯಾದಾಗಲೂ ಅವುಗಳ ಹಲ್ಲು ಕೊಂಡಿಗಳಲ್ಲಿ ವಿಷವೇ, ಬೆಳೆದಾಗಲೂ ವಿಷವೇ ! '

ಇವಿಷ್ಟೇ ಅಲ್ಲದೆ, ಮಿಂಚಿನ ಸುರುಳಿಗಳಂತಿರುವ, ಅಡಕವಾದ, ರೂಪಕಗಳ ನ್ನೊಳಗೊಂಡ ಅನೇಕ ಚಾಟೂಕ್ತಿಗಳನ್ನು ಶ್ರೀಮಾನ್ ಎ. ಆರ್. ಕೃ. ಅವರ ಬರಹ ಗಳಲ್ಲಿ ಕಾಣಬಹುದು :

' ನಿಮ್ಮ ಕನ್ನಡದ ಅಭಿಮಾನವೆಂಬ ಕಾಮಧೇನು ಎಚ್ಚರವಾಗಿದ್ದರೆ, ಬ್ರಹ್ಮ ದಂಡ ಮುಂದೆ ಇದ್ದರೆ, ನಮ್ಮನ್ನು ಯಾವ ವಿಶ್ವಾಮಿತ್ರರ ಹಿಂದೀ ಪಡೆಯೂ ಏನೂ ಮಾಡಲಾರದು.'

' ಒಬ್ಬೊಬ್ಬರದು ಒಂದೊಂದು ಶಕ್ತಿ; ಗುಬ್ಬಚ್ಚಿ ಗರ್ಜಿಸಲಾರದು; ಸಿಂಹ ಚಿಲಿಪಿಲಿಗುಟ್ಟಲಾರದು. '

' ಸಾಹಿತ್ಯಮಂದಿರದಲ್ಲಿ, ಸಾಹಿತ್ಯವೇ ಹಸು, ಸಂಗೀತಾದಿಗಳು ಅದರ ಬಾಲ; ಹಸು ಬಾಲವನ್ನು ಅಲ್ಲಾಡಿಸಬೇಕೇ ಹೊರತು, ಬಾಲ ಹಸುವನ್ನು ಅಲ್ಲಾಡಿಸಬಾ ರದು. '

' ಮದುವೆಯಲ್ಲಿ ಸುಖವಿಲ್ಲದಿಲ್ಲ .......ಆದರೆ ಅದು ಲಾಟರಿ. ಅದೃಷ್ಟ ಪರೀಕ್ಷೆ. ಬಲೆ ಬೀಸಿದರೆ ಮೀನು ಸಿಕ್ಕಿದರೂ ಸಿಕ್ಕಿತು. ಅರೇಬಿಯನ್ ನೈಟ್ಸ್ ಕಥೆಯಂತೆ ಭೂತ ಸೆರೆಯಾದ ಚೊಂಬು ಸಿಕ್ಕಿದರೂ ಸಿಕ್ಕಿತು ! '

ಈ ಬಗೆಯ ಅನುವಾದಗಳನ್ನೇ ಬೆಳಸಿಕೊಂಡು ಹೋಗುವುದು ನನ್ನ ಉದ್ದೇಶ ವಲ್ಲ. ಮೇಲೆ ಅನುವಾದ ಮಾಡಿರುವಂಥ, ಅವುಗಳಿಗಿಂತಲೂ ಸುಂದರವಾದ ಇನ್ನೂ ಎಷ್ಟೋ ದೃಷ್ಟಾಂತಗಳು ನಮಗೆ ಶ್ರೀಮಾನ್ ಎ. ಆರ್. ಕೃ. ಅವರ ಬರಹಗಳಲ್ಲಿ ಸಿಕ್ಕುತ್ತವೆ. ಆ ದೃಷ್ಟಾಂತಗಳಿಂದ ನಮಗೆ, ಅವರ ಲೋಕಾನುಭವ, ಪಾಂಡಿತ್ಯ, ಪ್ರತಿಭೆಗಳು ಎದ್ದು ಕಾಣುತ್ತವೆ. ಪಾಕಶಾಲೆ, ಭೋಜನಶಾಲೆ, ವ್ಯಾಯಾಮಶಾಲೆ,

ಪಾಠಶಾಲೆ; ಪುರಾಣಪ್ರಪಂಚ, ಪ್ರಾಣಿಪ್ರಪಂಚ, ಸಸ್ಯ ಪ್ರಪಂಚ—ಹೀಗೆ ಜೀವನದ ಎಷ್ಟು ವಿವಿಧ ಮುಖಗಳಿಂದ ಅವರು ತಮ್ಮ ದೃಷ್ಟಾಂತಗಳನ್ನು ಆರಿಸಿಕೊಂಡಿದ್ದಾರೆ! ಇವೆಲ್ಲವುಗಳಿಂದಲೂ ಅವರ ಜೀವನ ತತ್ತ್ವವನ್ನೇ ರೂಪಿಸಿಬಿಡಬಹುದು ಎಂದರೆ ಅತಿಶಯೋಕ್ತಿಯಾಗಲಾರದು.

ಹೈದರಾಬಾದಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಪೀಠದಿಂದ ಅವರು ಅಪ್ಪಣೆ ಕೊಡಿಸಿದ ಭಾಷಣದಿಂದ ಎದ್ದ ವಾದವಿವಾದಗಳ ಬಿರುಗಾಳಿ, ಜನರ ಮನಸ್ಸಿನಲ್ಲಿ ಕವಿದುಕೊಂಡ ಶಂಕೆಗಳ ಕಾರ್ಮೋಡ, ಅವರ ಮೇಲೆ ಬಂದ ಖಂಡನೆಗಳ ಸುರಿಮಳೆ—ಇವೆಲ್ಲವನ್ನೂ ನೆನೆದರೆ ಈಗಲೂ ಮೈ 'ಜುಂ' ಎನ್ನುತ್ತದೆ. ಆ ಸಂದರ್ಭದಲ್ಲಿ ಅವರು ಒಂದು ದೃಷ್ಟಾಂತವನ್ನು ಕೊಟ್ಟರು:

'ನಾನು ಜೇನುಗೂಡಿಗೆ ಕೈ ಇಟ್ಟಿದ್ದೇನೆ; ಜೇನು ಎದ್ದಿದೆ; ಅದು ನನ್ನನ್ನು ಕಡಿದರೆ ಚಿಂತೆಯಿಲ್ಲ; ನಮ್ಮ ಜನಕ್ಕೆ ಜೇನುತುಪ್ಪ ದೊರಕಿದರೆ ಸರಿ.'

ಈ ಮುತ್ತಿನಂಥ ಮಾತು ಮನೆ ಮಾತು, ಮೊನೆ ಮಾತು! ದೇಶಸೇವೆ, ಭಾಷಾ ಸೇವೆ, ಸಮಾಜಸೇವೆ, ಜನಸೇವೆ ಎಂದು ಅಬ್ಬರಿಸುತ್ತಾ ಹೊರಡುವ 'ಸಮಾಜ ಸುಧಾರಕ'ರೆಷ್ಟು ಜನ ಈ ಮಾತನ್ನು ಧೈರ್ಯವಾಗಿ, ತಾವು ಏನು ಮಾತಾಡುತ್ತಿದ್ದೇವೆ ಅದರ ಅರ್ಥವ್ಯಾಪ್ತಿಯೇನು ಎಂದರಿತು, ಆತ್ಮವಂಚನೆಯಿಲ್ಲದೆ ಆಡಬಲ್ಲರು?

ಶ್ರೀಮಾನ್ ಎ. ಆರ್ ಕೃ. ಅವರಿಂದ ಕನ್ನಡಕ್ಕೆ ಆಗಿರುವ ಉಪಕಾರ ಅಷ್ಟಿಷ್ಟಲ್ಲ. ಇಂದು ನಮ್ಮ ಜನಕ್ಕೆ ಜೇನುತುಪ್ಪವೇನಾದರೂ ದೊರಕುತ್ತಿದ್ದರೆ, ಅದು ಅವರೂ ಅವರಂಥವರೂ ಜೇನುಗೂಡಿಗೆ ಕೈ ಇಟ್ಟುದರಿಂದ ತಾನೇ? ಎದ್ದ ಜೇನುಗಳ ಕೈಯಲ್ಲಿ ಕಡಿಸಿಕೊಂಡುದರಿಂದ ತಾನೇ? *

**ಎಚ್. ಎಸ್. ಬಿಳಿಗಿರಿ**

---

* ಈ ಲೇಖನದ ಕೆಲವು ಭಾಗಗಳನ್ನು ಬರೆಯುವಾಗ Susan Stebbing ಎಂಬಾಕೆಯು 'Thinking to Some Purpose' ಎಂಬ ಪುಸ್ತಕದಲ್ಲಿ ಬರುವ 'Illustration and Analogy' ಎಂಬ ಅಧ್ಯಾಯಕ್ಕೆ ಋಣಿಯಾಗಿದ್ದೇನೆ.

# ಶ್ರೀ ಎ. ಆರ್. ಕೃ. ಅವರ ಗದ್ಯ ಶೈಲಿ

೧

ಪ್ರಾಚೀನ ಕಾವ್ಯಮೀಮಾಂಸಕರು ಪದ್ಯದಂತೆ ಗದ್ಯವನ್ನೂ ಕಾವ್ಯಜಾತಿಯಲ್ಲಿ ಸೇರಿಸುತ್ತಿದ್ದರು. ಛಂದಸ್ಸು ಕಾವ್ಯದ ಪ್ರಧಾನಾಂಗವಲ್ಲವೆಂದೂ, ರೀತಿ ಔಚಿತ್ಯ ಅಲಂಕಾರಗಳು ಆವಶ್ಯಕಾಂಗಗಳೆಂದೂ, ರಸಧ್ವನಿಗಳು ಅನಿವಾರ್ಯಾಂಗಗಳೆಂದೂ ಇದರಿಂದ ಸ್ಪಷ್ಟವಾಗುತ್ತದೆ. ಛಂದೋಬದ್ಧವಲ್ಲದಿದ್ದರೂ ರಸಾಲಂಕಾರ ಧ್ವನಿಗಳು ಸಮಾವೇಶಗೊಂಡಿರುವ ಕೃತಿ ಕಾವ್ಯವೆನ್ನಿಸಿಕೊಳ್ಳುತ್ತದೆನ್ನುವುದು ಅವರ ಅಭಿಪ್ರಾಯ. ಹಿಂದಿನ ಕಾಲದಲ್ಲಿ ವೈದ್ಯ ನಿಘಂಟು ಶಾಸ್ತ್ರವಿಚಾರಗಳಿಗೆ ಸಂಬಂಧಿಸಿದ ಗ್ರಂಥಗಳೆಲ್ಲ ಸಾಮಾನ್ಯವಾಗಿ ಪದ್ಯರೂಪದಲ್ಲಿರುತ್ತಿದ್ದುವು. ಆದರೆ ಅವುಗಳನ್ನು ಕಾವ್ಯಗಳ ಗುಂಪಿಗೆ ಸೇರಿಸಲಾಗದು. ಬಾಣನ 'ಕಾದಂಬರಿ' 'ಹರ್ಷಚರಿತ' ಕೃತಿಗಳು ಗದ್ಯಾತ್ಮಕವಾಗಿದ್ದರೂ ಮಹಾಕಾವ್ಯಗಳೆನಿಸಿಕೊಂಡಿವೆ. ಆದುದರಿಂದ ಕೇವಲ ಬಾಹ್ಯರೂಪ ಅಥವಾ ಮೇಲ್ಮೈಯ್ಯ ಲಕ್ಷಣದಿಂದ ಕಾವ್ಯದ ಸ್ವರೂಪವನ್ನು ನಿರ್ಣಯಿಸುವುದು ಸಾಧುವಲ್ಲವೆಂಬುದು ಹಿಂದಿನವರ ಅಭಿಪ್ರಾಯವಾಗಿತ್ತು. ಪದ್ಯಕಾವ್ಯದ ಶ್ರೇಯಸ್ಸಿಗೆ ಸಾಧಕವಾದ ಗುಣವಿಶೇಷಗಳೆಲ್ಲ ಗದ್ಯ ಕಾವ್ಯದಲ್ಲಿಯೂ ಇರಬೇಕೆಂಬ ಅಭಿಪ್ರಾಯ ಇದ್ದುದರಿಂದಲೇ 'ಗದ್ಯಂ ಕವೀನಾಂ ನಿಕಷಂ ವದಂತಿ' ಎಂಬ ಹೇಳಿಕೆಗೆ ಪ್ರಾಶಸ್ತ್ಯ ದೊರತಿರಬಹುದೆಂದು ಊಹಿಸಲವಕಾಶವಿದೆ.

೨

ಇಂದಿನ ಕಾವ್ಯಮೀಮಾಂಸಕರು ಗದ್ಯದ ವಿಷಯದಲ್ಲಿ ಮೇಲಣ ಅಭಿಪ್ರಾಯವನ್ನು ಸಂಪೂರ್ಣವಾಗಿ ಒಪ್ಪದಿದ್ದರೂ, ಪದ್ಯದಂತೆ ಗದ್ಯವೂ ಒಂದು ಕಲೆ ಎಂಬ ತತ್ವವನ್ನು ಒಪ್ಪಿಕೊಳ್ಳುತ್ತಾರೆ. ಎರಡಕ್ಕೂ ಶಬ್ದಾರ್ಥಗಳೂ ಮಾನವನ ಅನುಭವಾಲೋಚನೆಗಳೂ ಮೂಲದ್ರವ್ಯ. ಆದರೆ ಪದ್ಯಕಾವ್ಯದ ಪ್ರಮುಖ ಲಕ್ಷಣಗಳಾದ ರಸ ಅಲಂಕಾರ ರೀತಿ ಶೈಲಿ ಧ್ವನಿ ಮೊದಲಾದ ಕಲಾಪರಿಕರಗಳು ಬಹು ಪ್ರಮಾಣದಲ್ಲಲ್ಲದಿದ್ದರೂ ಅಲ್ಪ ಪ್ರಮಾಣದಲ್ಲಿ, ಪ್ರತ್ಯಕ್ಷವಾಗಲ್ಲದಿದ್ದರೂ ಪರೋಕ್ಷವಾಗಿ, ಒಂದಲ್ಲ ಒಂದು ರೀತಿಯಲ್ಲಿ ಗದ್ಯದಲ್ಲಿಯೂ ಹರಡಿಕೊಂಡಿರುತ್ತವೆ. ಕಲೆಯೆಂದ ಕೂಡಲೆ ರಮಣೀಯತೆ ಸೌಂದರ್ಯಾನುಭೂತಿ ಮೊದಲಾದ ಪದಗಳು ನೆನಪಿಗೆ ಬರುತ್ತವಷ್ಟೆ. ಈ ರಮಣೀಯತೆ ಎಷ್ಟರಮಟ್ಟಿಗೆ ಮೂಲದ್ರವ್ಯನಿಷ್ಠವೊ ಅಷ್ಟರಮಟ್ಟಿಗೆ—ಒಂದು ಪಾಲು ಅಧಿಕವಾಗಿಯೇ ರೀತಿನಿಷ್ಠವೆಂದು ಹೇಳಬಹುದೇನೊ ಅನ್ನಿಸುತ್ತದೆ. ಹತ್ತಿ ಅಥವಾ ರೇಷ್ಮೆ ಮೂಲತಃ ಒಂದೇ ಆದರೂ ಅವುಗಳಿಂದ ತಯಾರಾಗುವ ವಸ್ತ್ರ ವಿಶೇಷಗಳಲ್ಲಿ ಎಷ್ಟೊಂದು ವೈವಿಧ್ಯವನ್ನು ಕಾಣುತ್ತೇವೆ! ಒಂದು ಮತ್ತೊಂದರಂತಿರುವುದಿಲ್ಲ. ಒಂದು ಕಣ್ಮನಗಳನ್ನೆಳೆಯುವಷ್ಟು ಮತ್ತೊಂದು ಎಳೆಯದಿರಬಹುದು.

ಆದುದರಿಂದ ಗದ್ಯ ಕಲೆಯ ಪಟ್ಟಕ್ಕೇರಬೇಕಾದರೆ ಅದರಲ್ಲಿ ಒಂದು ವಿಧವಾದ ರಮಣೀಯತೆಇದ್ದೇ ಇರಬೇಕು. ಆ ರಮಣೀಯತೆ ಪದ್ಯದಲ್ಲಿ ಕಾಣುವ ರಮಣೀಯತೆಯಿಂದ ಭಿನ್ನವಾಗಿರಬಹುದು.

ಗದ್ಯ ಪದ್ಯಗಳ ಮುಖ್ಯ ವ್ಯತ್ಯಾಸ ಬಾಹ್ಯಾತ್ಮಕವಾದುದು. ಮೇಲ್ಮೈಯ್ಯ ಲಕ್ಷಣಗಳಲ್ಲಿಯೆ ತುಂಬ ಅಂತರವಿದೆ. ಮತ್ತೆ ಈ ವ್ಯತ್ಯಾಸದ ಮೂಲ ಆಂತರಿಕವಾದುದು. ಮಾನಸಿಕ ಕ್ರಿಯೆಯ ಒಂದು ಭಾಗ ಕಾವ್ಯ, ಮತ್ತೊಂದು ಭಾಗ ಗದ್ಯ. ಚಿತ್ತವೃತ್ತಿಗಳು ಅನಂತವಾದರೂ ಅವುಗಳನ್ನು ಸ್ಥೂಲವಾಗಿ ಜ್ಞಾನಾತ್ಮಕ ಮತ್ತು ಭಾವಾತ್ಮಕ ಎಂದು ಎರಡು ವಿಭಾಗ ಮಾಡಬಹುದಷ್ಟೆ. ಆದರೆ ಒಂದರ ಎಲ್ಲೆಗಟ್ಟು ಮುಗಿದಾಗ ಮತ್ತೊಂದರದು ಮೊದಲಾಗುತ್ತದೆಂದು ಹೇಳಲಾಗುವುದಿಲ್ಲ. ಒಂದರ ಎಲ್ಲೆಗಟ್ಟನೊಳಗೆ ಮತ್ತೊಂದರ ಎಲ್ಲೆಗಟ್ಟು ಚಾಚಿಕೊಂಡೇ ಇರುತ್ತದೆ. ಆದುದರಿಂದ ಭಾವಾಂಶ ಅಧಿಕವಾಗಿದ್ದಾಗ ಜ್ಞಾನಾಂಶ ಸಂಪೂರ್ಣವಾಗಿ ಮಾಯವಾಗುವುದಿಲ್ಲ. ಹಾಗೆಯೆ ಜ್ಞಾನಾಂಶ ಅಧಿಕವಾಗಿದ್ದಾಗ ಭಾವಾಂಶ ಇರುವುದೇ ಇಲ್ಲವೆಂದು ಹೇಳಲಾಗದು. ರಸನೇಂದ್ರಿಯ ಕ್ರಿಯೆ ಚಟುವಟಿಕೆಯಿಂದ ನಡೆಯುತ್ತಿರುವಾಗ ಘ್ರಾಣೇಂದ್ರಿಯ ಕ್ರಿಯೆ ಸಂಪೂರ್ಣವಾಗಿ ನಿಂತುಹೋಗುವುದಿಲ್ಲ. ಉತ್ತಮವಾದ ಸಂಗೀತ ಸ್ರೋತದಲ್ಲಿ ಮುಳುಗಿರುವಾಗ, ಜೊತೆ ಜೊತೆಯಲ್ಲಿಯೇ ರಸಭಕ್ಷ್ಯಗಳನ್ನು ಕಬಳಿಸುತ್ತಿದ್ದರೂ ಅವುಗಳ ರುಚಿ ಅರಿವಾಗದಿರಬಹುದು. ಆಗ ರಸನೇಂದ್ರಿಯ ಕ್ರಿಯೆ ತಟಸ್ಥವಾಗಿರುವುದಿಲ್ಲ. ಒಂದರ ಕ್ರಿಯೆ ತೀವ್ರವಾಗಿ ವ್ಯಕ್ತರೂಪವನ್ನು ತಾಳಿದಾಗ ಮತ್ತೊಂದರ ಕ್ರಿಯೆ ಮಂದವಾಗಿ ಅವ್ಯಕ್ತರೂಪದಲ್ಲಿರುತ್ತದೆ. ಗದ್ಯ ಪದ್ಯಗಳ ಬಾಹ್ಯ ವ್ಯತ್ಯಾಸಕ್ಕೆ ಅಂತರಂಗ ವ್ಯಾಪಾರವೇ ಮುಖ್ಯ ಕಾರಣ.

ಈ ಬಾಹ್ಯ ವ್ಯತ್ಯಾಸ ಪ್ರಧಾನವಾಗಿ ಛಂದಸ್ಸಿಗೆ ಸಂಬಂಧಿಸಿದುದು. ಭಾವಾಂಶ ಪ್ರಧಾನವಾದಾಗ ಭಾಷೆಯ ಗತಿ ತೀವ್ರವಾಗುತ್ತದೆ: ಗಿರಿ ನಿರ್ಝರಿಣಿಯಂತೆ ಧುಮುಕುತ್ತದೆ, ಮೊಲದಂತೆ ಕುಪ್ಪಳಿಸುತ್ತದೆ, ಬುಗುರಿಯಂತೆ ಚಿಗಿಯುತ್ತದೆ, ವಿಹಂಗಮದಂತೆ ವಿಹದ್ವಿಹಾರಿಯಾಗುತ್ತದೆ ಜ್ಞಾನಾಂಶ ಪ್ರಧಾನವಾಗಿದ್ದಾಗ ಭಾಷೆಯ ಗತಿ ಮಂದವಾಗುತ್ತದೆ, ವಿರಾಮವಾಗಿ ಸಾಗುತ್ತದೆ, ಬಯಲು ಭೂಮಿಯ ದಡಮೀರದ ತುಂಬು ಹೊನಲಿನಂತೆ ನಿರ್ಬಾಧವಾಗಿ ಪ್ರಶಾಂತವಾಗಿ ಹರಿಯುತ್ತದೆ, ಮದಗಜದಂತೆ ಗಂಭೀರವಾಗಿ ಶಂಕಾರಹಿತವಾಗಿ ಸಾಗುತ್ತದೆ. ಈ ಎರಡು ನಡಗೆಯಲ್ಲಿಯೂ ಲಯವಿದ್ದೇ ಇರುತ್ತದೆ. ಛಂದಸ್ಸಿನ ಜೀವಾಳವೇ ಲಯ. ಆದರೆ ಆ ಲಯ ತುಂಬ ಕ್ರಮಬದ್ಧವಾದುದು. ಗದ್ಯದ ಲಯ ವೈವಿಧ್ಯಮಯವಾದುದು. ಪದ್ಯದಲ್ಲಾಗಲಿ ಗದ್ಯದಲ್ಲಾಗಲಿ ಈ ಲಯ ಕೇವಲ ಶಬ್ದಾನುಸಾರಿ ಅಲ್ಲ ಅಥವಾ ಶಬ್ದನಿಷ್ಠವಲ್ಲ; ಅದು ಮುಖ್ಯವಾಗಿ ಭಾವಾನುಸಾರಿ ಅಥವಾ ಆಲೋಚನಾನಿಷ್ಠ.

ಮೇಲೆ ಹೇಳಿದ ಮಾನಸಿಕ ವ್ಯಾಪಾರ ಭಾಷೆಯ ಮೇಲೂ ತುಂಬ ಪ್ರಭಾವವನ್ನು ಬೀರುತ್ತದೆ. ಅಂತಃಸ್ಫೂರ್ತಿಯ ಪ್ರೇರಣೆಯಿಂದ ಭಾವೋನ್ಮತ್ತತೆಯ ಒತ್ತಡ

ದಿಂದ ಕವಿಮನಸ್ಸು ಯಾವುದೊ ಒಂದು ವಸ್ತುವಿನಲ್ಲಿ ತನ್ಮಯವಾದಾಗ ಅನೈಚ್ಛಿಕವೊ ಎಂಬಂತೆ ಮಾತು ಸುರುಳಿ ಸುರುಳಿಯಾಗಿ ಬಿಚ್ಚಿ, ಪುಂಖಾನುಪುಂಖವಾಗಿ ಹೊರಹೊಮ್ಮುತ್ತವೆ. ಅನುಭವಾಲೋಚನೆಗಳೇ ಮಾತಾಗಿ ಹೊರಹೊಮ್ಮುತ್ತವೆ. ಇಲ್ಲಿ ಆಲೋಚನೆಗಳು ರೂಪತಾಳುವುದಕ್ಕೂ ಶಾಬ್ದರೂಪವನ್ನು ಪಡೆಯುವುದಕ್ಕೂ ಸಮಯದ ಅಂತರವೇ ಇರುವುದಿಲ್ಲ. ಅಂದರೆ ಅನುಭವ ಮತ್ತು ಭಾಷೆ ಒಂದಾಗಿ ಏಕಕಾಲದಲ್ಲಿ ಮೂಡುತ್ತವೆ. ಗದ್ಯ ಲೇಖಕ ಅಂತಃಸ್ಫೂರ್ತಿಯ ಪ್ರೇರಣೆಗೆ ವಿಧೇಯನಾಗಿರಬಹುದಾದರೂ ಅವನಲ್ಲಿ ಭಾವೋನ್ಮತ್ತತೆಯ ಒತ್ತಡವಿಲ್ಲ; ಅವನ ಮಾತು ಅನೈಚ್ಛಿಕವಲ್ಲ; ಭಾಷೆ ಆಲೋಚನೆಗಳಿಗೆ ನಿಕಟವಾದ ಸಂಬಂಧವಿದ್ದರೂ ಕಾಲದ ಅಂತರವಿರುತ್ತದೆ. ಅಂದರೆ ಆಲೋಚನೆ ರೂಪತಾಳುವುದಕ್ಕೂ ಅವು ಶಾಬ್ದರೂಪವನ್ನು ಪಡೆಯುವುದಕ್ಕೂ ಸ್ವಲ್ಪಕಾಲ ಹಿಡಿಯಬಹುದು. ಆದ್ದರಿಂದಲೆ ಪದ್ಯದ ಭಾಷೆ ಮೂಡಿದ್ದು, ಗದ್ಯದ ಭಾಷೆ ಮಾಡಿದ್ದು ಅಥವಾ ಕಟ್ಟಿದ್ದು ಎಂದು ಹೇಳಬಹುದು.

ಗದ್ಯ ಪದ್ಯಗಳ ಭಾಷೆ ರೂಪುಗೊಳ್ಳುವ ರೀತಿ ವಿಧಾನಗಳು ಬೇರೆ ಬೇರೆಯಾದರೂ ಗದ್ಯ ಭಾಷೆಯಲ್ಲಿಯೂ ಪದಗಳ ನಾದಶಕ್ತಿ ಅರ್ಥಶಕ್ತಿ ಧ್ವನಿಶಕ್ತಿಗಳನ್ನು ಗಮನಿಸಲೇಬೇಕಾಗುತ್ತದೆ. ಅವುಗಳನ್ನು ಗ್ರಹಿಸುವ ಸಾಮರ್ಥ್ಯ ಸಂಸ್ಕಾರದಿಂದ ಅಭ್ಯಾಸದಿಂದ ಲಭಿಸುತ್ತದೆ. ಸ್ವರ ವ್ಯಂಜನಗಳ ಹ್ರಸ್ವದೀರ್ಘಗಳ ಸಂಯೋಜನಾ ಕೌಶಲದಿಂದ, ಪರುಷ ಸರಳಾದ್ಯಕ್ಷರಗಳ ಮಧುರ ಮೈತ್ರಿಯ ಸಂಮೇಲನದಿಂದ ಭಾಷೆಯ ಸೊಬಗು ಹೆಚ್ಚಿ ಶ್ರವಣೇಂದ್ರಿಯ ಸುಖ ಲಭಿಸುವುದಲ್ಲದೆ ಅರ್ಥಾಭಿವ್ಯಕ್ತಿಗೂ ಪೋಷಕವಾಗುತ್ತದೆ. ಹಾಗೆಯೆ ಪದಗಳ ಸಂಪೂರ್ಣ ಪ್ರಯೋಜನ ಲಭಿಸಬೇಕಾದರೆ ಪ್ರತಿಯೊಂದು ಪದದ ಅರ್ಥಕ್ಕಿಂತ ಅರ್ಥಕೋಶವನ್ನೂ ಭಾವಕ್ಕಿಂತ ಭಾವಕೋಶವನ್ನೂ ದೃಷ್ಟಿಯಲ್ಲಿಟ್ಟುಕೊಂಡು ಅವುಗಳನ್ನು ಬಳಸಬೇಕು.

ವಿಶೇಷಣಗಳ ಪ್ರಯೋಗ ಪ್ರೌಢಸಾಹಿತ್ಯದ ಮತ್ತು ಪ್ರೌಢಶೈಲಿಯ ವಿಶೇಷ ಲಕ್ಷಣ. ಜನಾಂಗ ನಾಗರಿಕವಾದಂತೆಲ್ಲ ವಿಚಾರಶಕ್ತಿ ವಿಕಾಸಗೊಂಡಂತೆಲ್ಲ, ಪೃಥಕ್ಕರಣಮನೋಭಾವ ಗರಿಗಟ್ಟಿಕೊಂಡಂತೆಲ್ಲ ಇವುಗಳ ಬಳಕೆ ಹೆಚ್ಚುತ್ತದೆ. ವಿಷಯ ಸ್ಪಷ್ಟತೆ ಮತ್ತು ವಿಶದತೆ ಅವುಗಳ ಬಳಕೆಯಿಂದ ಸಾಧ್ಯವಾಗುತ್ತದೆ. ಆದರೆ ಔಷಧಿಯೂ ಅತಿಯಾದರೆ ಅಪಾಯಕಾರಿಯಾಗುವಂತೆ ವಿಶೇಷಣಗಳ ವಿಪರೀತ ಪ್ರಯೋಗದಿಂದ ವಿಶೇಷ್ಯಗಳ ಪ್ರಾಮುಖ್ಯತೆ ಕಡಮೆಯಾಗಬಹುದು. ಮಾತ್ರವಲ್ಲ, ಅಸ್ಪಷ್ಟತೆ ಅಧಿಕವಾಗಬಹುದು, ಮೂಲಾರ್ಥ ಮುಚ್ಚಿಹೋಗಬಹುದು, ಕಥೆಯ ಪ್ರವಾಹಕ್ಕೆ ಅಡ್ಡಿಯಾಗಬಹುದು.

ಸ್ಪಷ್ಟತೆ ಮತ್ತು ವಿಶದತೆ ಗದ್ಯದ ಪ್ರಮುಖಲಕ್ಷಣವಾದುದರಿಂದ ಉಪಮೆ ರೂಪಕ ಮೊದಲಾದ ಅಲಂಕಾರಗಳನ್ನು ಕೇವಲ ಅಲಂಕಾರಕ್ಕಾಗಿಯೇ ಬಳಸಬಾರದು. ಇದರಿಂದ ಭಾಷೆಯ ಪ್ರವಾಹಕ್ಕೆ ಅಡಚಣೆ ಒದಗುತ್ತದೆ. ಅವು ಪದ್ಯ

ದಲ್ಲಿ ಹೆಚ್ಚು ಸೊಗಸು. ಆಲಂಕಾರಿಕವಾಗಲ್ಲದೆ ಅರ್ಥದೀಪ್ತಿಗಾಗಿ ಅವುಗಳನ್ನು ಬಳಸುವುದಾದರೆ ಗದ್ಯದಲ್ಲಿ ಅವು ಅಂಗೀಕಾರಾರ್ಹ.

ಪದ ಪದಪುಂಜಗಳ ಆಯ್ಕೆ ಮತ್ತು ಜೋಡಣೆ ಗದ್ಯದಲ್ಲಿ ಎಷ್ಟು ಮುಖ್ಯವೋ ವಾಕ್ಯ ಮತ್ತು ವಾಕ್ಯವೃಂದಗಳ ರಚನೆ ಅಷ್ಟೇ ಮುಖ್ಯ. ಐಕ್ಯವೇ ವಾಕ್ಯದ ಜೀವಾಳ. ಭಾವಾನುಭವಗಳಿಗೆ ತಕ್ಕಂತೆ ವಾಕ್ಯದ ಉದ್ದ ನಿರ್ಣಯವಾಗುತ್ತದೆ, ಏರಿಳಿತ ಸಿದ್ಧವಾಗುತ್ತದೆ, ವಿನ್ಯಾಸ ಏರ್ಪಡುತ್ತದೆ. ಒಂದು ಪದದಲ್ಲಿ ವರ್ಣಮೈತ್ರಿ, ಒಂದು ವಾಕ್ಯದಲ್ಲಿ ಪದಮೈತ್ರಿ ಎಷ್ಟು ಆವಶ್ಯಕವೊ ಅಷ್ಟೇಮಟ್ಟಿಗೆ ಒಂದು ವಾಕ್ಯಕ್ಕೂ ಮತ್ತೊಂದು ವಾಕ್ಯಕ್ಕೂ ಸಾವಯವ ಸಂಬಂಧ ಏರ್ಪಡಬೇಕು, ಕಾರ್ಯ ಕಾರಣ ಸಂಬಂಧ ಸ್ಫುಟಗೊಳ್ಳಬೇಕು. ಮೊಗ್ಗಿನಿಂದ ಹೂವರಳುವಂತೆ ಒಂದರಿಂದ ಮತ್ತೊಂದು ವಾಕ್ಯ ಸ್ವಾಭಾವಿಕವಾಗಿ ಅನಿವಾರ್ಯ ಪರಿಣಾಮವಾಗಿ ಅರಳಬೇಕು.

ಒಟ್ಟಿನಲ್ಲಿ ತನ್ನ ಮನಸ್ಸಿನ ಅಭಿಪ್ರಾಯ ಆಲೋಚನೆಗಳನ್ನು ಭಾವಾನುಭವಗಳನ್ನು ಸ್ಪಷ್ಟವಾಗಿ ಸ್ಫುಟವಾಗಿ ನೇರವಾಗಿ, ಅಪಾರ್ಥ ಅಲ್ಪಾರ್ಥ ಹೀನಾರ್ಥ ಪರ್‍ಕ್ನಾರ್ಥಗಳಿಗೆ ಅವಕಾಶವಾಗದಂತೆ, ಶ್ರವಣೇಂದ್ರಿಯಕ್ಕೆ ಹಿತವಾಗುವಂತೆ, ಹೃದಯಕ್ಕೆ ಮುಟ್ಟುವಂತೆ ಹೇಳಬೇಕಾದುದು ಗದ್ಯಲೇಖಕನ ಕರ್ತವ್ಯ. ಆಲೋಚನೆ ಅಸ್ತವ್ಯಸ್ತವಾಗಿದ್ದು ಅಸ್ಪಷ್ಟವಾಗಿದ್ದು ಬಳಸುಬಳಸಾಗಿದ್ದರೆ ಮಾತಿನಲ್ಲಿಯೂ ಅಸ್ತವ್ಯಸ್ತತೆ ಅಸ್ಪಷ್ಟತೆ ಸುತ್ತಾಟ ವ್ಯಕ್ತವಾಗುತ್ತವೆ. ಆಲೋಚನೆ ಸ್ಪಷ್ಟವಾಗಿದ್ದರೆ ಕಾರ್ಯಕಾರಣ ಸಂಬಂಧವುಳ್ಳುದಾಗಿದ್ದರೆ ಭಾಷೆಯಲ್ಲಿ ಪ್ರಸನ್ನತೆ ಸಾಮರಸ್ಯ ಗಾಂಭೀರ್ಯ ಎದ್ದು ಕಾಣುತ್ತವೆ. ಬರಹಗಾರನಿಗೆ ಔಚಿತ್ಯಾನೌಚಿತ್ಯ ಜ್ಞಾನವಿದ್ದರೆ ಮಾತುಗಳನ್ನು ಮಿತವಾಗಿ ಬಳಸುತ್ತಾನೆ. ಮಾತು ಪವಿತ್ರವಾದ ವಸ್ತು–ವಸ್ತುವಲ್ಲ ಶಕ್ತಿಬೀಜ; 'ಸರಸ್ವತಿಯ ಚರಣ ಚಿಹ್ನೆ.' ಅವುಗಳನ್ನು ನಿರ್ಮಲ ಮನಸ್ಸಿನಿಂದ ಶ್ರದ್ಧೆಯಿಂದ ಬಳಸಬೇಕು. ಉತ್ತಮ ಬರಹಗಾರನ ಕೈಯಲ್ಲಿ ಅವು ಕಲ್ಪವೃಕ್ಷದ ಬೀಜವಾಗುತ್ತವೆ; ಸಾಮಾನ್ಯನ ಕೈಯಲ್ಲಿ ಅವು ಏತಕ್ಕೂ ಬಾರದ ಬೆಂಡು ಮರವಾಗುತ್ತವೆ. ಒಲಿದವನಿಗೆ ಅವು ವಜ್ರ ಸಮಾನ; ಒಲ್ಲದವನಿಗೆ ಬರಿಯ ಇದ್ದಿಲು. ಒಂದೊಂದು ಮಾತಿನ ಗರ್ಭಾಂತರಾಳದಲ್ಲಿ ಹುದುಗಿರುವ ಮಂತ್ರಶಕ್ತಿ ಇಷ್ಟೆಂದು ನಿರ್ಣಯಿಸುವುದೇ ಕಷ್ಟ. ಅವುಗಳ ವರ್ಣರಹಸ್ಯ ಸ್ವರೂಪಗಹನತೆಯನ್ನು ಗ್ರಹಿಸುವುದೇ ಕಷ್ಟ. ಅದಕ್ಕೆ ಅಭ್ಯಾಸ ಸಂಸ್ಕಾರಗಳು ಅವಶ್ಯ. ಅವನ್ನು ಬಲ್ಲ ಶಬ್ದಶಿಲ್ಪಿಯ ಮಾತು ಹಿತಮಿತವಾಗಿ ಅಡಕವಾಗಿ ಬಿಗುಪಾಗಿ ಸಾರವತ್ತಾಗಿ ನಯವಾಗಿ ಲಾವಣ್ಯಯುತವಾಗಿರುತ್ತದೆ; ಅದು ಆಲೋಚನೆಗೆ ತಕ್ಕಂತೆ ಅನುಭವಕ್ಕೆ ತಕ್ಕಂತೆ ರೂಪುಗೊಳ್ಳುತ್ತದೆ; ಲಯಮಾಧುರ್ಯದಿಂದ ಆಕರ್ಷಣೀಯವಾಗಿರುತ್ತದೆ. ಪದ್ಯ ಸಾಲಂಕೃತೆಯಾದ ಬೆಡಗಿನ ಬಿನ್ನಾಣದ ವೈಯಾರಿ, ಗದ್ಯ ಅನಲಂಕೃತೆಯಾದ ಸರಳ ಮುಗ್ಧ ಲಾವಣ್ಯವತಿ.

ಲಲಿತ ಸಾಹಿತ್ಯವನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಂಡು ಗದ್ಯದ ವಿಷಯವಾಗಿ

ಮೇಲಣ ಒಂದೆರಡು ಮಾತುಗಳನ್ನು ಹೇಳಿದೆ. ಲಲಿತಸಾಹಿತ್ಯದಲ್ಲಿಯೂ ಪ್ರಬಂಧ ವಿಮರ್ಶೆ ಸಣ್ಣಕತೆ ಕಾದಂಬರಿ ಹರಟೆ ನಾಟಕ ಪತ್ರ ಜೀವನ ಚರಿತ್ರೆ ಪ್ರವಾಸ ಕಥೆ ಮೊದಲಾದ ವಿಶೇಷ ಪ್ರಕಾರಗಳ ವೈಶಿಷ್ಟ್ಯವನ್ನು ಗಮನಿಸಿ ಹೇಳಲು ಪ್ರಯತ್ನಿಸಿಲ್ಲ. ಎಲ್ಲ ಪ್ರಕಾರಗಳಿಗೂ ಸಾಧಾರಣವಾದ ಕೆಲವು ವಿಷಯಗಳನ್ನು ಇಲ್ಲಿ ಪ್ರಸ್ತಾಪಿಸಿದೆ, ಶ್ರೀ ಎ. ಆರ್. ಕೃ. ಅವರ ಗದ್ಯಶೈಲಿಯ ಪರಿಶೀಲನೆಗೆ ಸಹಾಯವಾಗಲೆಂದು.

೩

ಕನ್ನಡ ಗದ್ಯಸಾಹಿತ್ಯ ಸುಮಾರು ಸಾವಿರ ವರ್ಷಗಳ ಹಿಂದಿನಿಂದ ವಿಮಲೋದಯ ನಾಗಾರ್ಜುನ ದುರ್ವಿನೀತರಿಂದ, ಪಂಪ ಶಿವಕೋಟ್ಯಾಚಾರ್ಯ ಚಾವುಂಡರಾಯರಿಂದ ಮೊದಲುಗೊಂಡು, ಬಸವೇಶ್ವರ ಹರಿಹರ ಅಕ್ಕಮಹಾದೇವಿ ಮೊದಲಾದ ಶಿವಶರಣ ಶರಣೆಯರೂ ಸೇರಿಕೊಂಡು, ಕೆಂಪುನಾರಾಯಣ ಮುದ್ದಣರೂ ಕೂಡಿಕೊಂಡು ಇಂದಿನವರೆಗೆ ಅವಿಚ್ಛಿನ್ನವಾಗಿ, ತನ್ನದೇ ಆದ ಪರಂಪರೆಯನ್ನು ನಿರ್ಮಿಸಿಕೊಂಡು ಬೆಳೆದು ಬಂದಿದೆ. ಆದರೆ ೨೦ ನೆಯ ಶತಮಾನಕ್ಕೆ ಮುಂಚೆ ಅದು ಏಕ ಮುಖವಾಗಿ ಪರಿಮಿತ ವ್ಯಾಪ್ತಿಯುಳ್ಳುದಾಗಿ ಲಜ್ಜೆಯಿಂದ ತೆವಳುತಿತ್ತು. ಬಹುಶಃ ಇದಕ್ಕೆ ಭಾರತೀಯರ ಅಂತರ್ಮುಖ ಜೀವನದ ಪ್ರಾಮುಖ್ಯತೆ ಮತ್ತು ಬಾಹ್ಯ ಜೀವನವನ್ನು ಕುರಿತ ಔದಾಸೀನ್ಯಗಳು ತಕ್ಕಮಟ್ಟಿಗೆ ಕಾರಣವಾಗಿರಬಹುದೇನೊ? ಪಾಶ್ಚಾತ್ಯ ಸಾಹಿತ್ಯ ಸಂಸ್ಕೃತಿಗಳ ಸಂಪರ್ಕದ ಪರಿಣಾಮವಾಗಿ ಭಾರತೀಯ ಜೀವನದ ಲೌಕಿಕ ರೀತಿನೀತಿಗಳು ಮಾರ್ಪಾಡಾದುವು; ರುಚಿ ಅಭಿರುಚಿಗಳು ಬದಲಾವಣೆ ಹೊಂದಿದುವು. ಹೊಸ ಹೊಸ ಸನ್ನಿವೇಶಗಳಿಗೆ ತಕ್ಕಂತೆ ಹೊಸಭಾಷೆಯ ಸೃಷ್ಟಿಯೂ ಅವಶ್ಯಕವಾಯಿತು. ಆ ಅವಶ್ಯಕತೆ ಅನೇಕ ವಿಧಾನಗಳಲ್ಲಿ ಪೂರೈಕೆಗೊಳ್ಳುತ್ತಿದೆ. ಆ ಪೂರೈಕೆಯ ಫಲವಾಗಿ ಗದ್ಯಸಾಹಿತ್ಯ ಬಹುಮುಖವಾಗಿ ಬಹುರೂಪಿಯಾಗಿ ವಿಕಾಸಗೊಳ್ಳುತ್ತಿದೆ.

ಆಧುನಿಕ ಕನ್ನಡ ಗದ್ಯದ ಆಚಾರ್ಯ ಶಿಲ್ಪಿಗಳಲ್ಲಿ ಶ್ರೀ ಎ. ಆರ್. ಕೃ. ಅವರೂ ಒಬ್ಬರು. ಕನ್ನಡ ಗದ್ಯ ಚರಿತ್ರೆಯಲ್ಲಿ ನೂತನಪಥಗಳಲೊಂದನ್ನು ನಿರ್ಮಿಸಿದ ಕೀರ್ತಿ ಅವರಿಗೆ ಶಾಶ್ವತವಾಗಿ ಸಲ್ಲುತ್ತದೆ. ಆ ನೂತನ ಪಥವಾದರೂ ಸಂಪ್ರದಾಯದ ವಲಯದಿಂದ ತುಂಬ ಪ್ರತ್ಯೇಕವಾಗಿಲ್ಲವೆಂದರೂ ಸರಿಯೆ. ಸಂಸ್ಕೃತ ಕನ್ನಡಭಾಷೆಗಳ ಗಹನವಾದ ಪಾಂಡಿತ್ಯ, ಬಂಗಾಳಿ ಭಾಷೆಯ ಪರಿಚಯ, ಆಂಗ್ಲ ಭಾಷೆಯ ಆಳವಾದ ಅಭ್ಯಾಸ, ಜೊತೆಗೆ ವಿಶಾಲವೂ ಪರಿಪಕ್ವವೂ ಆದ ಲೋಕಾನುಭವ, ಸ್ವತಂತ್ರವಾದ ಆಲೋಚನಾ ಸಾಮರ್ಥ್ಯ—ಈ ವಿಶೇಷಾಂಶಗಳು ಅವರ ಗದ್ಯಶೈಲಿಯನ್ನು ರೂಪಿಸಿವೆ. ಅವರ ನಡೆಯಲ್ಲಿ ಅತಿರೇಕವಿಲ್ಲ, ಹಾಗೆಯೆ ನುಡಿಯಲ್ಲಿಯೂ ಅತಿರೇಕವಿಲ್ಲ. ಸಮತಟ್ಟಾದ ಪ್ರದೇಶದಲ್ಲಿ ಕೂಲ ಮೀರದೆ ತುಂಬಿ ಹರಿಯುವ ನದಿಯಂತೆ ಅವರ ಶೈಲಿ ಗಂಭೀರವಾಗಿ ಸಾಗುತ್ತದೆ. ಎಲ್ಲಿಯೂ ಆವೇಶವಿಲ್ಲ, ಬೊಬ್ಬೆಯಿಲ್ಲ, ಅಲ್ಲೋಲಕಲ್ಲೋಲವಿಲ್ಲ. ಬೊಜ್ಜು ಹೆಂಗಸಿನ ಮೈತೂಕವಾಗಲಿ, ಲಂಬಾಣಿ ಹೆಂಗಸಿನ ಅಲಂಕಾರ

ಭಾರವಾಗಲಿ, ಸೀಕಲು ಹೆಂಗಸಿನ ವಿಕಾರವಾದ ಬಡಕಲುತನವಾಗಲಿ ಇಲ್ಲ. ಹದ ವರಿತು ಸುಪುಷ್ಟವಾಗಿ ಗಟ್ಟಿಯಾಗಿ ಬೆಳೆದ ಹೆಂಗಸಿನ ಮೈತುಂಬು ಅಲ್ಲಿದೆ. ಅರ್ಥ ವ್ಯಕ್ತಿ ಪ್ರಸಾದ ಸಮತೆ ಅವರ ಶೈಲಿಯ ವಿಶಿಷ್ಟಗುಣಗಳು.

ಎ. ಆರ್. ಕೃ. ಅವರ ಬರವಣಿಗೆಯೆಲ್ಲ ಸಾಮಾನ್ಯವಾಗಿ ಗದ್ಯದಲ್ಲಿದೆ. ಕಥೆ ಜೀವನಚರಿತ್ರೆ ಉಪನ್ಯಾಸ ವಿಮರ್ಶೆ ಪೌರಾಣಿಕ ಕಥೆ–ಇವು ಅವರು ಕೈಯಾಡಿಸಿ ರುವ ಸಾಹಿತ್ಯ ಪ್ರಕಾರಗಳು. ಸಂಸ್ಕೃತ ಸಾಹಿತ್ಯದ ಪ್ರಮುಖಭಾಗವನ್ನು ಕನ್ನಡಕ್ಕೆ ಭಟ್ಟಿಯಿಳಿಸಿ, ಅದರ ಮಹತ್ತನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಟ್ಟು, ಅದರಲ್ಲಿ ಕನ್ನಡಿಗರಿಗೆ ಗೌರವ ಮೂಡುವಂತೆ ಮಾಡಲು ಪ್ರಯತ್ನಿಸಿ ಕೃತಕೃತ್ಯರಾಗಿದ್ದಾರೆ. ಮೂಲದ ಸ್ವರೂಪ ಕೆಡದಂತೆ, ಅದರ ಸಾರವತ್ತಾದ ಭಾಗವನ್ನು ಮಾತ್ರ ಎತ್ತಿ ತೋರಿಸುವುದು ಸುಲಭವಾದ ಕೆಲಸವಲ್ಲ. ಅದಕ್ಕೆ ಬೇಕಾದ ಸ್ವೋಪಜ್ಞತೆ, ಔಚಿತ್ಯಾ ನೌಚಿತ್ಯ ವಿವೇಕ, ರಸಜ್ಞತೆ–ಇವು ಅವರಲ್ಲಿ ಸಾಕಾದಷ್ಟಿವೆ. ಇವುಗಳ ಜೊತೆಗೆ ಹಿರಿಯದನ್ನು ಕಿರಿದರಲ್ಲಿ ಹೇಳುವ ಭಾಷೆ ಅವರಿಗೆ ವಶವಾಗಿದೆ.

ಕಥೆ ಮತ್ತು ವಿಮರ್ಶೆಗೆ ಎ. ಆರ್. ಕೃ. ಅವರ ಭಾಷೆ ಹಾಳತವಾಗಿ ಹೊಂದಿ ಕೊಂಡಿದೆ. ನಿರರ್ಗಳವಾದ ಓಟ ಕಥೆಯ ಪ್ರಮುಖ ಲಕ್ಷಣ. ಆ ಓಟಕ್ಕೆ ಭಾಷೆ ಸಹಕಾರಿಯಾಗಬೇಕು. ಎಲ್ಲಿಯೂ ಅಡಚಣೆಯಾಗಬಾರದು. ಆವೇಶಗೊಂಡ ಕೋಣನ ಓಟದಂತಲ್ಲದೆ, ಇಳಿಜಾರಿನಲ್ಲಿ ಅಬ್ಬರಿಸಿ ಧುಮುಕುವ ನದಿಯ ವೇಗದಂತ ಲ್ಲದೆ, ಬಯಲು ಪ್ರದೇಶದಲ್ಲಿ ಕಲಕಲರವಗೈಯುತ್ತ ಪ್ರಶಾಂತವಾಗಿ ಹರಿಯುವ ಪ್ರವಾಹದಂತೆ ಸಾಗಬೇಕು. ಭಾವಾಲೋಚನೆಗಳಿಗನುಗುಣವಾಗಿ ಗುರುಲಘುಗಳ ವಿನ್ಯಾಸ, ಸ್ವರವ್ಯಂಜನಗಳ ಪರುಷಸರಳಾಕ್ಷರಗಳ ಮಧುರ ಸಮ್ಮಿಶ್ರಣಗಳ ಕಡೆಗೆ ಗಮನಕೊಡಬೇಕು ಉದ್ದುದ್ದನೆಯ ಸಮಾಸಪದಗಳನ್ನು ಆದಷ್ಟು ಕಡಮೆ ಮಾಡ ಬೇಕು ಹಾಗೆಯೇ ಅತಿ ಉದ್ದವಾದ ವಾಕ್ಯಗಳು ಕತೆಯ ಓಟಕ್ಕೆ ತೊಡಕಾಗುವು ದಲ್ಲದೆ ಅರ್ಥಾಭಿವ್ಯಕ್ತಿಗೂ ರಸಾಭಿವ್ಯಕ್ತಿಗೂ ಅಡಚಣೆಯಾಗಬಹುದು. ಅನಾವಶ್ಯಕ ವಾದ ನಿರರ್ಥಕವಾದ ಪದ ಪ್ರಯೋಗ ಮತ್ತು ಮುಖ್ಯಾರ್ಥವನ್ನು ಮುಚ್ಚಿಡುವ ವಿಶೇಷಣಗಳ ಬಳಕೆ ಕಥನ ಕಲೆಯಲ್ಲೊಂದು ದೋಷ. ವಚನಭಾರತ, ಕಥಾಮೃತ ಗಳ ಯಾವ ಪುಟವನ್ನು ನೋಡಿದರೂ ಉತ್ತಮ ಕಥನ ಕಲೆಯ ಲಕ್ಷಣಗಳನ್ನು ಗುರುತಿಸಬಹುದು.

'ಹೀಗಿರಲು ಒಂದು ಸಾರಿ ವಸಂತಋತು ಬಂತು ಮುತ್ತುಗ ತಿಲಕ ಮಾವು ಸಂಪಗೆ ಪಗಡೆ ಮುಂತಾದ ಬಗೆಬಗೆಯ ಮರಗಳು ಫಲಪುಷ್ಪಗಳಿಂದ ಶೋಭಿಸುತ್ತಿದ್ದುವು. ಕೆರೆಕಟ್ಟೆಗಳು ತಾವರೆಗಳಿಂದ ಕೂಡಿ ಬೆಳಗುತ್ತಿದ್ದುವು. ಆಗ ಒಂದು ದಿನ ಪಾಂಡುವು ಹರ್ಷಚಿತ್ತನಾಗಿ ಮಾದ್ರಿಯೊಡನೆ ಆ ಸೌಂದರ್ಯ ವನ್ನು ನೋಡುತ್ತ ತಿರುಗಾಡುತ್ತಿರಲು ಅವನಲ್ಲಿ ಕಾಮ ಹುಟ್ಟಿ ಕಿಚ್ಚಿನಂತೆ ಹಬ್ಬಿ ಕೊಂಡಿತು. ಅದನ್ನು ತಡೆದುಕೊಳ್ಳಲಾರದೆ, ರಾಜನು ಒಂದು ಏಕಾಂತ ಸ್ಥಳ

ಸಿಕ್ಕಿದ ಕೂಡಲೇ ಮಾದ್ರಿಯನ್ನು ಹಿಡಿದುಕೊಂಡನು. ಅವಳು ತನ್ನ ಕೈಲಾದಷ್ಟೆಲ್ಲಾ ಒದ್ದಾಡಿ ಅವನನ್ನು ತಡೆದಳು. ಆದರೆ ಅವನು ಕಾಮಪರವಶನಾಗಿದ್ದರಿಂದ ಶಾಪವನ್ನು ಲಕ್ಷ್ಯಮಾಡದೆ ಬಲತ್ಕಾರವಾಗಿ ಅವಳನ್ನು ಕೂಡಿಬಿಟ್ಟನು. ಅಂತ್ಯಕಾಲ ಒದಗಿಬಂದು ಬುದ್ಧಿ ಮೋಸ ಹೋಯಿತು. ಪಾಂಡುವು ಪ್ರಾಣವನ್ನು ನೀಗಿದನು.' (ವಚನಭಾರತ. ಪುಟ ೧೪)

ಇಲ್ಲಿಯ ಪುಟ್ಟ ವರ್ಣನೆ ಕೇವಲ ಆಲಂಕಾರಿಕವಾಗಿರದೆ ಮುಂದಿನ ಭಯಂಕರ ಘಟನೆಗೆ ಪೋಷಕವಾಗಿದೆ. ಆ ವರ್ಣನೆಯ ಹೃತ್ಕೇಂದ್ರದಲ್ಲಿಯೆ ಆ ಘಟನೆಯ ಬೀಜ ಅಡಗಿದೆ.

ಸರಸತೆ ಮಾಧುರ್ಯ ಪ್ರಸಾದಗಳು ಕಥನಶೈಲಿಯ ಪ್ರಧಾನ ಲಕ್ಷಣಗಳಾದರೆ ವಿಚಾರಸ್ಪಷ್ಟತೆ, ಅರ್ಥನಿರ್ದುಷ್ಟತೆ ಮತ್ತು ಅರ್ಥನಿರ್ದಿಷ್ಟತೆ ವಿಮರ್ಶೆಯ ವಿಶಿಷ್ಟ ಲಕ್ಷಣಗಳು. ವಿಮರ್ಶೆಯಲ್ಲಿ ಶೈಲಿಗಿಂತ ವಿಚಾರ ಮುಖ್ಯ ಎಂದು ಹೇಳುವುದುಂಟು. ಈ ಮಾತಿನಲ್ಲಿ ತುಸು ತಿರುಳಿದ್ದರೂ ಶೈಲಿಯ ಪ್ರಾಮುಖ್ಯತೆಯನ್ನು ಅಲ್ಲಗಳೆಯುವಂತಿಲ್ಲ. ವಿಮರ್ಶೆಯ ಕಾರ್ಯ ಕಾವ್ಯರಸಾಸ್ವಾದನೆ ಮತ್ತು ಮೂಲಕಾವ್ಯದ ಪುನಸ್ಸೃಷ್ಟಿ ಎಂದು ಒಪ್ಪಿಕೊಳ್ಳುವುದಾದರೆ ಶೈಲಿಯ ಪ್ರಯೋಜನವನ್ನು ಮರೆಯುವಂತಿಲ್ಲ. ಆದರೆ ಕಾವ್ಯಶೈಲಿಗೂ ವಿಮರ್ಶೆಯ ಶೈಲಿಗೂ ಅಂತರವಿದ್ದೇ ಇರುತ್ತದೆ. ಇಲ್ಲಿ ಪದಕ್ಕಿಂತ ಪದಾರ್ಥ, ನಾದಕ್ಕಿಂತ ಅರ್ಥ, ಗಹನತೆಗಿಂತ ಸ್ಪಷ್ಟತೆ, ಕ್ಲಿಷ್ಟತೆಗಿಂತ ಸರಳತೆ, ಅಲಂಕೃತಿಗಿಂತ ನಿರಲಂಕೃತಿಯ ಕಡೆಗೆ ಒಲವು ಹೆಚ್ಚು. ಶ್ರೀ ಎ. ಆರ್. ಕೃ. ಅವರ 'ಸಂಸ್ಕೃತ ನಾಟಕ'ದ ವಿಮರ್ಶೆಗಳಲ್ಲಿ ಈ ಲಕ್ಷಣಗಳನ್ನು ಕಾಣಬಹುದು. ಈ ಕೃತಿ ಆ ತೆರದ ಕೃತಿಗಳಲ್ಲಿ ಆದರ್ಶಪ್ರಾಯವಾಗಿದೆ. ಸಂಶೋಧನಾತ್ಮಕ ಮತ್ತು ವರ್ಣನಾತ್ಮಕ ವಿಮರ್ಶೆಗಳೆರಡೂ ಇಲ್ಲಿ ಮೇಳವಿಸಿವೆ. ಪ್ರತಿಯೊಬ್ಬ ಕವಿಯನ್ನು ಕುರಿತು ಹೇಳುವಾಗಲೂ ಕವಿಯ ಕಾಲದೇಶಾದಿ ವಿಚಾರ, ಕೃತಿಯ ಮೂಲ ಹುಟ್ಟು ಬೆಳವಣಿಗೆ ಅದರ ಸಂಗ್ರಹಾನುವಾದ, ಕೊನೆಯಲ್ಲಿ ವಿಮರ್ಶೆ—ಈ ಕ್ರಮವನ್ನು ಉದ್ದಕ್ಕೂ ಅನುಸರಿಸಿದೆ. ಸಂಶೋಧನಾತ್ಮಕ ವಿಮರ್ಶೆಯೂ ಇಲ್ಲಿ ಕಾವ್ಯರಸಾಸ್ವಾದನೆಗೆ ಸಹಾಯಕವಾಗಿದೆ. ಸಂಗ್ರಹಾನುವಾದವಂತೂ ಸಂಗ್ರಹಾನುವಾದವೇ! ಅದಕ್ಕಿಂತಲೂ ಸಂಗ್ರಹ ಸಾಧ್ಯವಿಲ್ಲ! ವಿಮರ್ಶೆಯ ಭಾಗದಲ್ಲಿ ವಿಮರ್ಶಕರ ಆಳವಾದ ಪಾಂಡಿತ್ಯ, ಪ್ರತಿಭೆ, ಆಲೋಚನಾಸಾಮರ್ಥ್ಯ, ನಿಷ್ಪಕ್ಷಪಾತದೃಷ್ಟಿ ಎದ್ದು ಕಾಣುತ್ತವೆ. ಇಲ್ಲಿಯೂ ವಿಸ್ತಾರಕ್ಕಿಂತ ಸಂಗ್ರಹದ ಕಡೆಗೆ ಒಲವು ಹೆಚ್ಚು. ಆದರೆ ಅಸ್ತವ್ಯಸ್ತತೆ ಅಸ್ಫುಟತ್ವ ಅಸಂದಿಗ್ಧತೆ ಅಕ್ರಮಗಳು ತಲೆದೋರದಂತೆ ಎಚ್ಚರಿಕೆ ವಹಿಸಿದೆ. ಒಂದೊಂದು ಮಾತೂ ಆಣಿಮುತ್ತು. ಒಂದು ಹೆಚ್ಚಿಲ್ಲ, ಒಂದು ಕಡಮೆಯಿಲ್ಲ, ಒಂದನ್ನು ತೆಗೆಯುವಂತಿಲ್ಲ, ಮತ್ತೊಂದನ್ನು ಸೇರಿಸುವಂತಿಲ್ಲ. ಅಂಥ ಕುಶಲ ಕಲೆಗಾರಿಕೆ ಇಲ್ಲಿದೆ. ವಿಮರ್ಶೆಯನ್ನು ಓದುತ್ತಿರುವಾಗಲೆ ಕಥೆಯೂ ಕಣ್ಮುಂದೆ ಕಟ್ಟಿದಂತಿರುತ್ತದೆ.

'ಈ ನಾಟಕದಲ್ಲಿ ದೋಷವಿಲ್ಲದೆ ಇಲ್ಲ. ಶಕಾರನು ತುಂಬ ವಿಕಾರನಾಗಿದ್ದಾನೆ; ದುರ್ಗುಣಗಳೆಲ್ಲವೂ ಒಂದೂ ಬಿಡದಂತೆ ಅವನಲ್ಲಿ ಮನೆ ಮಾಡಿಕೊಂಡಿವೆ; ಅವನು ವಕ್ರ, ದುರ್ಮಾರ್ಗ, ಕ್ರೂರಿ, ಹೇಡಿ, ನೀಚ, ಗ್ರಾಮ್ಯ, ವಂಚಕ ಯಾವುದಕ್ಕೂ ಹೇಸದವನು. ಅವನ ಪುರಾಣ ಸಂಕರವು ಅತಿಯಾಗಿದೆ. ಚಾರುದತ್ತನು ತನ್ನ ಬಡತನಕ್ಕೆ ಸಂಕೋಚ ಪಟ್ಟುಕೊಳ್ಳುವುದೂ ನ್ಯಾಯಾಧೀಶನು ರಾಜನಿಗೆ ಹೆದರಿ ಶಕಾರನಿಗೆ ಪಕ್ಷಪಾತ ತೋರಿಸುವುದೂ ಅವರಲ್ಲಿ ಒಂದು ಲೋಪವಾಗಿ ಎಣಿಸಲ್ಪಟ್ಟಿದೆ; ಇದು ಅವರಲ್ಲಿ ಲೋಪವಾಗಿರಬಹುದು; ಕವಿಯಲ್ಲಿ ಲೋಪವಲ್ಲ. ಈ ಲೋಪವನ್ನಿಟ್ಟು ಕವಿ ಅವರನ್ನು ನೈಸರ್ಗಿಕವಾಗಿ ಮನುಷ್ಯ ಮಾತ್ರರನ್ನಾಗಿ ಮಾಡಿದ್ದಾನೆ. ಹಾಗಲ್ಲದಿದ್ದರೆ ಅವರು ಅತಿಮಾನುಷರೂ ಅಸಹಜರೂ ಆಗುತ್ತಿದ್ದರು. ವಸಂತಸೇನೆಯ ಮನೆಯ ವರ್ಣನೆಯೂ ಅತಿ ವಿಸ್ತಾರವಾಗಿದೆ. ಇವುಗಳಲ್ಲಿ ಒಂದಾಗಲಿ ಎರಡೂ ಆಗಲಿ ಈಚೆಗೆ ಪ್ರಕ್ಷಿಪ್ತವಾಗಿ ಸೇರಿವೆಯೋ ಏನೋ ತಿಳಿಯದು' (ಸಂಸ್ಕೃತ ನಾಟಕ; ೧೦೭)

ಅಕೃತಕತೆ ಮತ್ತು ನಿಖರತೆ ಎ. ಆರ್. ಕೃ. ಅವರ ಶೈಲಿಯ ಜೀವಾಳ. ಲೇಖಕರ ಆಲೋಚನೆ ಭಾವಗಳು ಸಂದೇಹಕ್ಕೆ ಆಸ್ಪದವಿಲ್ಲದಂತೆ ವಾಚಕನಿಗೆ ಅರ್ಥವಾಗುತ್ತವೆ. ಅವರ ಆಶಯ ಇವನ ಹೃದಯದಲ್ಲಿ ಸ್ಪಷ್ಟವಾಗಿ ಮೂಡುತ್ತದೆ. ಎಲ್ಲಿಯೂ ವಾಚಕ ತಿಣುಕಬೇಕಾಗಿಲ್ಲ. ಅವರ ವಾಕ್ಸಂಪತ್ತಿಯ ಫಲವಾಗಿ ಲಭಿಸಿದ ಸುಲಭ ಸ್ಪಷ್ಟ ಶೈಲಿಯೇ ಇದಕ್ಕೆ ಕಾರಣ. ಎಂಥ ತಾತ್ತ್ವಿಕ ವಿಷಯಗಳನ್ನಾದರೂ ಸುಲಭವಾಗಿ, ಆದರೆ ಗ್ರಾಮೀಣತೆಗೆ ಕುಸಿಯದಂತೆ ಗಂಭೀರವಾಗಿ ಹೇಳುವ ಸಾಮರ್ಥ್ಯ ಅವರಿಗೆ ಸ್ವಾಭಾವಿಕವಾಗಿ ಲಭ್ಯವಾಗಿದೆ.

'ಸತ್ತ್ವಗುಣವೆಂದರೆ ಅಕರ್ಮವಲ್ಲ, ನಿರ್ವೀರ್ಯತೆಯೂ ಅಲ್ಲ. ಅಹಿಂಸೆಯೂ ಅಷ್ಟೇ........ಅಹಿಂಸೆಯೆಂಬುದು ಅಪರಂಜಿಯಹಾಗೆ; ಶುದ್ಧ ಅಪರಂಜಿ ನಾಣ್ಯವಾಗುವುದಿಲ್ಲ; ವ್ಯವಹಾರಕ್ಕೆ ಸಲ್ಲುವುದಿಲ್ಲ; ಅದಕ್ಕೆ ಸ್ವಲ್ಪವಾದರೂ ಪೆಡಸಾದ, ಕೆಚ್ಚನೆಯ, ತಾಮ್ರ ಬೆರೆಯಬೇಕು. ಹಾಗೆಯೇ, ರಾಜನಲ್ಲಿ ಸ್ವಲ್ಪ ಕಾಠಿನ್ಯ ಬೇಕು....ದುಷ್ಟನಿಗ್ರಹಕ್ಕೆ ಕ್ರೌರ್ಯವೂ ಬೇಕು ಹಿಂಸೆಯೂ ಬೇಕು. ಆ ಹಿಂಸೆ ಹಿಂಸೆಯಲ್ಲ, ಧರ್ಮ. ರಾಮರಾಜ್ಯದಲ್ಲಿಯೂ ರಾಕ್ಷಸ ಸಂಹಾರವಾಗಿಯೇ ಆಯಿತು. ಸ್ವಾರ್ಥಸಾಧನೆಗೆ ದೇಶದ ಯುವಕರನ್ನು ಬಲಿಕೊಡುವುದು ಹಿಂಸೆಯೇ ಹೊರತು, ಶಿಷ್ಟ ಪರಿಪಾಲನಕ್ಕೆ ಹಿಂಸಾ ಕ್ರೌರ್ಯಗಳನ್ನು ಆಚರಿಸುವುದು ಪಾಪವಲ್ಲ. ಆದ್ದರಿಂದ ಹಿಂಸಾಕಾರ್ಯಕ್ಕಿಂತಲೂ ಅದರ ಹಿಂದೆ ಇರುವ ಉದ್ದೇಶವೇ ಪ್ರಧಾನ....ಹಸುವಿನಿಂದ ಹಾಲು ಕರೆದುಕೊಳ್ಳಬೇಕಾದರೂ ಅಲ್ಪ ಸ್ವಲ್ಪ ಹಿಂಸೆ ಮಾಡಲೇ ಬೇಕಾಗುತ್ತದೆ.' (ವಚನ ಭಾರತ; ಪೀಠಿಕೆ ೫೧)

ಅಹಿಂಸೆಯನ್ನು ಕುರಿತ ಈ ವ್ಯಾಖ್ಯಾನ ಸುಲಿದ ಬಾಳೆಯ ಹಣ್ಣು, ಅಳಿದ ಉಷ್ಣದ ಹಾಲು. ಸೌಲಭ್ಯಾಪೇಕ್ಷೆ ಶೈಥಿಲ್ಯಕ್ಕೆ ಎಡೆಗೊಡುವುದುಂಟು. ಆದರೆ ಇವರ ಶೈಲಿ ಅಂಥ ದೋಷಗಳಿಂದ ವಿಮುಕ್ತವಾಗಿದೆ.

ಶೈಲಿಯ ಪ್ರಸ್ತಾಪ ಬಂದಾಗಲೆಲ್ಲ ಸಂಸ್ಕೃತ-ಕನ್ನಡ ಮಾತುಗಳ ಸಮಸ್ಯೆ ಏಳುತ್ತದೆ. ಈ ಸಮಸ್ಯೆ ಇಂದಿನದಲ್ಲ, ಹಿಂದಿನಿಂದ ಬಂದಿದೆ. ಈ ಎರಡು ಭಾಷೆಗಳೂ ಸಾವಿರಾರು ವರ್ಷಗಳಿಂದ ಜೊತೆಜೊತೆಯಾಗಿ ಸ್ನೇಹವರ್ತಿಗಳಾಗಿ ಬೆಳೆದು ಬಂದಿವೆ. ಕನ್ನಡ ಪದಗಳು ಸಂಸ್ಕೃತ ಕೋಶದಲ್ಲಿ ಸೇರ್ಪಡೆಯಾಗಿ ಅವುಗಳ ಮೂಲಸ್ವರೂಪವೇ ತಿಳಿಯದಿರುವಂತೆ ನಾವು ನಿತ್ಯ ಬಳಸುತ್ತಿರುವ ಸಂಸ್ಕೃತ ಪದಗಳು ನಿಜವಾಗಿಯೂ ಕೆಲವು ಸಂಸ್ಕೃತವೇ ಎಂಬ ಭ್ರಾಂತಿಯನ್ನು ಹುಟ್ಟಿಸುವುದುಂಟು. ಇದರಿಂದ ಎರಡೂ ಭಾಷೆಗಳ ಪದಗಳು ಜೊತೆಜೊತೆಯಾಗಿ ವಾಕ್ಯಗಳಲ್ಲಿ ಪ್ರಯೋಗವಾದರೂ ಪದಮೈತ್ರಿಗೆ ಭಂಗಬರುವುದಿಲ್ಲ. ಆದರೆ ಅನಾವಶ್ಯಕವಾಗಿ ಸಂಸ್ಕೃತಪದಗಳನ್ನು ತಂದು ತುರುಕುವುದರಿಂದ ಶೈಲಿ ಪೆಡಸಾಗುವುದರಲ್ಲಿ ಸಂದೇಹವಿಲ್ಲ. ಅವುಗಳನ್ನು ಮಿತವಾಗಿ ಬಳಸಬೇಕು. ಅವುಗಳನ್ನು ಬಳಸುವಾಗಲೂ ಶ್ರುತಿಮಾಧುರ್ಯವೇ ಪರಮ ಪ್ರಮಾಣವೆನ್ನುವುದನ್ನು ಮರೆಯಬಾರದು. ಎ. ಆರ್. ಕೃ. ಅವರು ಉದ್ದಕ್ಕೂ ಈ ಅಂಶವನ್ನು ಮರೆತಿಲ್ಲ. ‘ ಆದರೆ ಯುಧಿಷ್ಠಿರ! ಸೌಜನ್ಯ ಸೌಂದರ್ಯ ಸದ್ಬೋಧನೆಗಳು ಉರಿಯುವ ಎಣ್ಣೆಗೆ ನೀರು ಸುರಿದ ಹಾಗಾಯಿತು.’ ‘ ನೀನು ವಿದ್ಯಾವಂತ ನಡತೆವಂತ ಗುಣವಂತ; ಇಂಥವನು ಅಸತ್ಕುಲ ಪ್ರಸೂತರೂ ದುರಾತ್ಮರೂ ಘಾತುಕರೂ ನಾಚಿಕೆ ಕೆಟ್ಟವರೂ ನಡೆಯುವಂತೆ ನಡೆಯಬಾರದು.’ ಉದ್ದಕ್ಕೂ ಇಂಥ ವಾಕ್ಯಗಳೇ ! ಇದರಿಂದ ಶೈಲಿ ಎಲ್ಲಿಯೂ ಮುಗ್ಗರಿಸುವುದಿಲ್ಲ. ಒಟ್ಟಿನಲ್ಲಿ ಸಂಸ್ಕೃತ ಪದಗಳ ಪ್ರಯೋಗ, ಕೊರಳಿಗೆ ಬಡಿಗೆ ಕಟ್ಟಿಸಿಕೊಂಡ ಹಸುವಿನಂತಾಗಬಾರದು.

ಮಾತು ಮಾನವನಿಗೆ ಲಭಿಸಿರುವ ದೊಡ್ಡ ವರ. ಚೆನ್ನಾಗಿ ಮಾತಾಡುವವರೂ ಬರೆಯುವವರೂ ನಿಜವಾಗಿಯೂ ಪುಣ್ಯವಂತರು. ಆದರೆ ತಾನು ಭಾಷೆಯ ಮರ್ಜಿಯನ್ನರಿತು, ಅದನ್ನು ಹಿಸುಕಿ ಹಿಂಡಿ ಹಿಪ್ಪೆಮಾಡದೆ, ಸರಾಗವಾಗಿ ಸರಸವಾಗಿ ಬಳಸುವವನು ಇನ್ನೂ ಪುಣ್ಯವಂತ. ಆ ಪುಣ್ಯ ಕೇವಲ ಕೆಲವರಿಗೆ ಮಾತ್ರ ಮೀಸಲು. ಅಂಥವರ ಕೈಯಲ್ಲಿ ಮಾತು ಮೇಣವಾಗುತ್ತದೆ, ಹೇಗೆಂದರೆ ಹಾಗೆ ಒಲಿಯುತ್ತದೆ.

“ ಮದುವೆಯೇನೊ ಆಯಿತು; ಅಗ್ಗವಾಗಿಯೂ ಆಯಿತು. ಯಾರಿಗೆ ಅಗ್ಗವಾಯಿತು ? ಯಾರಿಗೆ ಆಯಿತೋ ಅವರಿಗೆ ಆಯಿತು ! ಅಗ್ಗವಾಗಿ ಮಾಡಬೇಕೆಂದಿದ್ದವರಿಗೆ ಮಾತ್ರ ಆಗಲಿಲ್ಲ. ಅವರಿಗೆ ಒಂದಕ್ಕೆ ಹತ್ತು ಶ್ರಮವಾಯಿತು. ಅನುಕೂಲ ವಿತರಣೆ ವಿಜೃಂಭಣೆ ಮಾತ್ರ ಹತ್ತಕ್ಕೆ ಒಂದಾಯಿತು. ಅಗ್ಗವಾಗಿ ನಡೆಯಿತೆಂಬ ಸಮಾಧಾನವಿಲ್ಲ; ಖರ್ಚಾದರೂ ಚಿಂತೆಯಿಲ್ಲ, ಚೆನ್ನಾಗಿ ನಡೆಯಿತೆಂಬ ಸಂತೋಷ ಮೊದಲೇ ಇಲ್ಲ. ಅಂತು ನಡೆಯಿತು. ” (ಶ್ರೀಪತಿಯ ಕಥೆಗಳು-೧೧೧)

ಇದು ಕನ್ನಡದ ಜಾಯಮಾನಕ್ಕೆ ಒಗ್ಗಿದ ಶೈಲಿ. ಇದು ಒಂದು ಕಥೆಯ ಕೊನೆ. ಆ ಕಥೆಯ ಸಾರ ಈ ಒಂದೆರಡು ವಾಕ್ಯಗಳಲ್ಲಿ ಅಡಕವಾಗಿದೆ.

'ಗರಿಗಟ್ಟು' 'ಚಿಟಕಿ ಚಪ್ಪರ' ಮೊದಲಾದ ಮನೆ ಬಳಕೆಯ ಮಾತುಗಳೂ, 'ಕೈಯಲ್ಲಿ ಹಾವು ಗಂಟಲಲ್ಲಿ ವಿಷ' 'ಬಾಯಲ್ಲಿ ಅಕ್ಕಿಕಾಳು ಹಾಕಿಕೊಂಡು ಕಾಲ ಕಳೆದರು' ಎಂಬ ಗಾದೆಗಳೂ, 'ಸಂಸಾರ-ವೊಸರಿನ' ಸಾಮ್ಯದಂಥ ಸಾಮ್ಯಗಳೂ, 'ಅಹಿಂಸೆ-ಅಪರಂಜಿ' ಯೇ ಮೊದಲಾದ ಉಚಿತವೂ ಮೋಹಕವೂ ಆದ ಉಪಮಾ ರೂಪಕಾದಿಗಳೂ ಅವರ ಶೈಲಿಯ ಸೊಗಸನ್ನು ಹೆಚ್ಚಿಸಿವೆ. ಕಥಾಸಾಹಿತ್ಯದಲ್ಲಂತು ಅವು ಇನ್ನೂ ಚೆನ್ನು!

ಒಟ್ಟಿನಲ್ಲಿ ಶ್ರೀ ಎ. ಆರ್. ಕೃ. ಅವರ ಶೈಲಿಯಲ್ಲಿ ತೂಕವಿದೆ, ನಯವಿದೆ, ಬನಿಯಿದೆ, ಸೊಗಸಿದೆ, ಲಾವಣ್ಯವಿದೆ; ಅದು ಸುಲಭಗ್ರಾಹ್ಯವಾದುದು, ಹೃದಯ ಸಂಸ್ಪರ್ಶಿಯಾದುದು. ಅದರ ನಾಣ್ಯತೆಯಲ್ಲಿ ಸರ್ವರಿಗೂ ವಿಶ್ವಾಸವಿದೆ!

ದೇ. ಜ. ಗೌ

# ಚರಿತ್ರೆಯ ಅಂತರಾರ್ಥ

ಚರಿತ್ರೆ ಆಯಾ ದೇಶಗಳಲ್ಲಿ ನಡೆದ ಮಹತ್ವದ ಸಂಗತಿಗಳನ್ನು ಕುರಿತ ನಿರೂಪಣೆ. ಸಂಕುಚಿತಾರ್ಥದಲ್ಲಿ ರಾಜಕೀಯ ಚರಿತ್ರೆಯನ್ನೇ ಚರಿತ್ರೆಯೆನ್ನುವುದು ಸಂಪ್ರದಾಯವಾಗಿದ್ದರೂ ಒಂದು ಕಾಲದ ಆರ್ಥಿಕ, ಸಾಮಾಜಿಕ, ಧಾರ್ಮಿಕ ಸ್ಥಿತಿ ಗತಿ, ಸಾಹಿತ್ಯ, ಕಲೆ ಇವೇ ಮೊದಲಾದ ಈ ಸಂಗತಿಗಳನ್ನು ಚರಿತ್ರೆ ಒಳಗೊಂಡಿರ ಬೇಕೆಂಬ ತತ್ತ್ವ ಇತ್ತೀಚಿಗೆ ಅಂಗೀಕೃತವಾಗಿದೆ. ವಿಶಾಲಾರ್ಥದಲ್ಲಿ ಹೇಳುವುದಾದರೆ ವಿದ್ವಾಂಸರಿಂದ ಮಾನವನ ಬದುಕಿನ ಶಾಸ್ತ್ರೀಯ ವಿಮರ್ಶೆಯೇ ಇತಿಹಾಸವೆನ್ನ ಬಹುದು. ಮಾನವನ ವರ್ತನೆಯೇ ಚರಿತ್ರಕಾರನ ಕ್ಷೇತ್ರ ಮತ್ತು ಮಾನವನಿಗೆ ಸಂಬಂಧಪಟ್ಟ ಸರ್ವಸಂಗತಿಗಳೂ ಇತಿಹಾಸದ ಪರಿವಿಡಿಯಲ್ಲಿ ಸೇರುತ್ತವೆ.

ಏನಿರುತ್ತದೆ ಚರಿತ್ರೆಯಲ್ಲಿ ? ಇವನು ಅವನನ್ನು ಕೊಂದ, ಅವನು ಇವನ ಮೇಲೆ ದಂಗೆ ಎದ್ದ, ಇವನು ಹುಟ್ಟಿದ್ದು ಇಷ್ಟನೆಯ ಇಸವಿ, ಅವನು ಸತ್ತದ್ದು ಅಷ್ಟನೆಯ ಇಸವಿ, ಈ ದೊರೆ ಇಷ್ಟು ರಾಜ್ಯಗಳನ್ನು ಗೆದ್ದ, ಆ ದೊರೆಯ ರಾಜ್ಯ ಅಷ್ಟು ದೂರ ವ್ಯಾಪಿಸಿತ್ತು, ಈ ಕದನದಲ್ಲಿ ಇಷ್ಟು ಮಂದಿ ಮಡಿದರು, ಆ ಕದನದಲ್ಲಿ ಅಷ್ಟು ಮಂದಿ ಕೈಸೆರೆಯಾದರು, ಇಷ್ಟೆ ಅಲ್ಲವೆ ಚರಿತ್ರೆ! ಎಲ್ಲ ಕಲ್ಪನೆ, ಇದರಿಂದ ಯಾವ ಪುರುಷಾರ್ಥ ಎಂದು ತಾವು ಬುದ್ಧಿವಂತರೆಂದು ಅಂದುಕೊಳ್ಳುವವರು ಮಾತನಾಡು ವುದು ಸಹಜ. ಆದರೆ ಈ ಬಗೆಯ ಮನೋಭಾವ ಹೊಸದೇನೂ ಅಲ್ಲ. ಹದಿನೆಂಟ ನೆಯ ಶತಮಾನದಲ್ಲಿ ಬ್ರಿಟನ್ನನ್ನು ಆಳಿದ ರಾಜಕಾರಿಣಿ ಸರ್ ರಾಬರ್ಟ್ ವಾಲ್ಪೋಲ್ 'ಎಲ್ಲ ಇತಿಹಾಸವು ಸುಳ್ಳಿನ ಕಂತೆ' ಎಂದಿದ್ದಾನೆ. ಚರಿತ್ರೆಯ ಅಧ್ಯಾಪಕನ ಅವಶ್ಯಕತೆ ಬಿದ್ದಾಗ ' ಸುಳ್ಳುಗಾರನನ್ನು ಕರೆ ' ಎಂದನಂತೆ ಪ್ರಷ್ಯಾದೇಶವನ್ನು ಆಳಿದ ಪ್ರಖ್ಯಾತ ದೊರೆ ಫ್ರೆಡರಿಕ್ ದಿ ಗ್ರೇಟ್. ' ಚರಿತ್ರೆ ಕಟ್ಟುಕತೆಯಲ್ಲದೆ ಮತ್ತೇನು ' ಎಂದು ನೆಪೋಲಿಯನ್ ಬೋನೋಪಾರ್ಟೆ ಹೇಳಿದಾಗ ಈ ಬಗೆಯ ಮನೋಭಾವವನ್ನೇ ವ್ಯಕ್ತಪಡಿಸಿದನು. ಚರಿತ್ರೆಯ ಮೇಲಿನ ಈ ಜುಗುಪ್ಸೆಗೆ, ಕಹಿಮನೋಭಾವಕ್ಕೆ ಕಾರಣವೇನೆಂದು ಆಲೋಚಿಸಿದರೆ ಅದು ನಿಜವಾದ ಚರಿತ್ರೆಯ ಅಪೂರ್ಣಜ್ಞಾನ ವಷ್ಟೇ ಅಲ್ಲದೆ ಚರಿತ್ರೆಗಳಲ್ಲಿನ ಉಲ್ಲೇಖನದೋಷವೂ ಕಾರಣವೆಂದು ಅರಿವಾಗದೆ ಇರದು.

ಹಾಗಾದರೆ ನೈಜ ಚರಿತ್ರೆಯ ಸ್ವರೂಪವೇನು ?

History ಎಂಬ ಇಂಗ್ಲಿಷ್ ಪದ ಗ್ರೀಕ್‌ಭಾಷೆಯ Histor ಅಥವ Historia ಶಬ್ದದಿಂದ ಬಂದುದು. ಈ ಗ್ರೀಕ್‌ಪದಗಳ ಮೂಲಾರ್ಥ ವಿಚಾರ, ಪರಾ ಮರ್ಶೆ ಎಂದು. ಇತಿಹಾಸ ಎಂಬ ಸಂಸ್ಕೃತ ಶಬ್ದದ ಉತ್ಪತ್ತಿಯೂ ಇದೇ ಅರ್ಥ ವನ್ನು ಸೂಚಿಸುತ್ತದೆ. ಇತಿ, ಹ, ಆಸ, ಎಂದರೆ ಹೀಗೆ ನಡೆಯಿತು ಎಂದು ಅರ್ಥ.

ಒಟ್ಟಿನಲ್ಲಿ ಚರಿತ್ರೆ ಯಾವುದೇ ಸಂಗತಿಯ ಯಥಾರ್ಥಜ್ಞಾನವೆನ್ನಬಹುದು. ಸತ್ಯಾನ್ವೇಷಣೆಯೇ ಅದರ ಗುರಿ.

ಚರಿತ್ರೆ ಶಾಸ್ತ್ರವೇ, ಇಲ್ಲವೆ ಕಲೆಯೇ ಎನ್ನುವ ವಿಷಯದಲ್ಲಿ ವಾದ ವಿವಾದಗಳಿನ್ನೂ ಮುಗಿದಿಲ್ಲವಾದರೂ ಚರಿತ್ರೆ ಶಾಸ್ತ್ರವೂ ಹೌದು, ಕಲೆಯೂ ಹೌದು ಎನ್ನಬಹುದು. ಜೆ. ಬಿ. ಬ್ಯೂರಿ (J. B. Bury) ಎಂಬ ಪ್ರಸಿದ್ಧ ಆಂಗ್ಲ ಇತಿಹಾಸಕಾರ 'History is a science no less and no more' ಎಂದಿದ್ದಾನೆ. ಚರಿತ್ರೆಯ ಒಂದೊಂದು ಅಂಶವೂ ಪ್ರಮಾಣ ಬಲದಿಂದ ಪೋಷಿತವಾಗಿರಬೇಕಾದುದರಿಂದ ಅಂತಹ ಪ್ರಾಮಾಣಿಕವಾದ ಚಾರಿತ್ರಿಕ ಸಾಧನಗಳನ್ನು ಸಂಗ್ರಹಿಸಿ ಪರಿಷ್ಕರಿಸಿ ಒಂದು ನಾಡಿನ ಚಿತ್ರವನ್ನು ಚಿತ್ರಿಸುವುದು ಚರಿತ್ರಕಾರನ ಕೆಲಸ. ವೈಜ್ಞಾನಿಕನಿಗೆ ಇರಬೇಕಾದ ಸತ್ಯಾನ್ವೇಷಣೆಯ ಆಕಾಂಕ್ಷೆ, ನಿರ್ದಾಕ್ಷಿಣ್ಯ ಬುದ್ಧಿ, ನಿಷ್ಪಕ್ಷಪಾತ ಮತ್ತು ಸ್ವತಂತ್ರ ದೃಷ್ಟಿ ಇತಿಹಾಸಕಾರನಲ್ಲಿಯೂ ಇರಬೇಕಾದುದು ಅತ್ಯಗತ್ಯ. ಅವನು ಉಪದೇಶಕನೂ ಅಲ್ಲ, ಪ್ರಚಾರಕನೂ ಅಲ್ಲ. ಅಸತ್ಯವನ್ನು ಸತ್ಯವೆಂದು ಭ್ರಮಿಸಲಾರ. ನೈಜ ಇತಿಹಾಸಕಾರ ಸತ್ಯಸೌಂದರ್ಯಗಳ ಆರಾಧಕ. ಅಲ್ಲದೆ ಚರಿತ್ರೆಯಲ್ಲಿ ಸ್ವಕಲ್ಪನೆಗೆ ಅವಕಾಶವಿಲ್ಲ. ನಡೆದ ಸಂಗತಿಗಳನ್ನು ನಡೆದಂತೆಯೇ ಹೇಳಬೇಕು. ವಿಷಯಗಳನ್ನು ಮರೆಮಾಡುವುದು, ಅತಿರೇಕ ದೃಷ್ಟಿಯಿಂದ ಕುಗ್ಗಿಸಿ ಹೇಳುವುದು ಅಥವಾ ಹಿಗ್ಗಿಸಿ ಹೇಳುವುದು ಅಥವಾ ವಿಷಯ ಪ್ರತಿಪಾದನೆಯಲ್ಲಿ ರಾಗದ್ವೇಷಗಳಿಗೆ ಎಡೆಗೊಡುವುದು ಇತಿಹಾಸಕಾರನಿಗೆ ಧರ್ಮವಲ್ಲ. ರಸವತ್ತಾದ ನಿರೂಪಣೆಯಲ್ಲಿ ಸಾಹಿತ್ಯ ಶ್ರೇಷ್ಠ ಕಲೆಗಳಲ್ಲೊಂದೆಂದು ಹೇಳುವುದು ಅನಾವಶ್ಯಕ. ಇತಿಹಾಸವನ್ನು ಸಾಹಿತ್ಯರೂಪದಲ್ಲಿ ಬರೆದರೆ ಓದುಗರಿಗೆ ಅದು ಪ್ರಿಯವಾಗಿ ರಸಾಸ್ವಾದನೆಗೆ ಅನುಕೂಲವಾಗುತ್ತದೆ. ಹೀಗೆ ಶಾಸ್ತ್ರ ಮತ್ತು ಕಲೆಗಳ ಉತ್ತಮ ಲಕ್ಷಣಗಳನ್ನೊಳಗೊಂಡ ಚರಿತ್ರೆ ಉತ್ತಮ ಕೃತಿಯಾಗುವುದು.

ಚರಿತ್ರೆಯಿಂದ ಸಾಧಿತವಾಗುವ ಪುರುಷಾರ್ಥವೇನು ?

ಚರಿತ್ರೆಯಲ್ಲಿ ಮನೋರಂಜನೆಗೆ ಮನೋವಿಕಾಸಕ್ಕೆ ಮತ್ತು ರಸಾನುಭವಕ್ಕೆ ಅವಕಾಶವುಂಟು. ಮೇಲೆ ಹೇಳಿದಂತೆ ಚರಿತ್ರೆಯನ್ನು ಉತ್ತಮ ಸಾಹಿತ್ಯರೂಪದಲ್ಲಿ ಬರೆದರೆ ಚಿತ್ತಾಕರ್ಷಕವಾಗುವುದು. ರಾಷ್ಟ್ರೀಯ ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತಗಳು ಕಾವ್ಯರೂಪದಲ್ಲಿರುವ ಇತಿಹಾಸ. ಇವುಗಳಿಂದ ಲೋಕಾನುಭವ ಮಾತ್ರವಲ್ಲದೆ ರಸಾನುಭವವೂ ಎಷ್ಟೋ ಆಗುತ್ತದೆ. ರೋಮ್ ಚಕ್ರಾಧಿಪತ್ಯದ ಅವನತಿಯನ್ನು ಚಿತ್ರಿಸಿದ ಗಿಬ್ಬನ್ನನ ಗ್ರಂಥವನ್ನೋ, ಕಾರ್ಲೈಲನ ಫ್ರಾನ್ಸಿನ ಮಹಾಕ್ರಾಂತಿಯನ್ನೋ, ಮೆಕಾಲೆಯ ಪ್ರಬಂಧಗಳನ್ನೋ, ಪಂಡಿತ್ ಜವಹಿರಲಾಲರ ಆತ್ಮಕಥೆಯನ್ನೋ, ಭಾರತದರ್ಶನವನ್ನೋ ಓದಿದಾಗ ಮನೋರಂಜನೆಯಾಗುವುದಲ್ಲದೆ ಹೊಸ ಜಗತ್ತೇ ನಮಗೆ ಗೋಚರವಾಗುವುದು; ಅಪೂರ್ವವಾದ ಅನುಭವವುಂಟಾಗುವುದು.

ಯಾವ ಶಾಸ್ತ್ರಾಭ್ಯಾಸವೂ ಕೇವಲ ಹೊಟ್ಟೆ ಬಟ್ಟೆಗಾಗಿಯೇ ಅಲ್ಲ. ಜ್ಞಾನಾರ್ಜನೆಯೆ ಅದರ ಅಂತಿಮ ಗುರಿ. ಈ ದೃಷ್ಟಿಯಿಂದ ಚರಿತ್ರೆಯ ಅಭ್ಯಾಸ ಸ್ತುತ್ಯ. ಪೃಥ್ವಿಯ ಮೇಲೆ ಮಾನವನೆಂಬ ಜೀವಿ ಕಾಣಿಸಿಕೊಂಡಮೇಲೇನಾಯಿತು ? ಸಮಾಜ ಮತ್ತು ಸರ್ಕಾರಗಳೇಕೆ ತಲೆದೋರಿದುವು ? ಅವುಗಳ ಕಟ್ಟು ಕಟ್ಟಳೆಗಳೇನು ? ಅವುಗಳು ಬದಲಾದುವೇ ಅಥವಾ ಹಾಗೆಯೆ ಉಳಿದವೇ ? ಮನುಷ್ಯನಲ್ಲಿ ಹುಟ್ಟಿದ ಆಸೆಗಳೇನು ? ಉದ್ದೇಶ ಆಶಯುಗಳೆಂತು? ಒಂದು ಕಾಲದಲ್ಲಿ ಸುಗುಣವೆಂದು ಸಾಧಿಸಿದ್ದು ಮತ್ತೊಂದು ಕಾಲದಲ್ಲಿ ದುರ್ಗುಣವೆನಿಸಿತೆ ? ಅಸತ್ಯ ಅನ್ಯಾಯಗಳನ್ನು ಸತ್ಯ, ನ್ಯಾಯವೆಂದು ಪೋಷಿಸಿದರೆ? ದುರಾಸೆಯಿಂದ ಮತಾಂಧತೆಯಿಂದ ಮೇಲು ಕೀಳೆಂಬ ಭಾವನೆಗಳಿಂದ ಹೀಗಾಗುವುದೆ ? ಹೀಗೆ ನಮ್ಮಲ್ಲಿ ಮೇಲಿಂದ ಮೇಲೆ ಏಳುವ ಪ್ರಶ್ನೆಗಳಿಗೆ ಚರಿತ್ರೆ ಉತ್ತರ ಕೊಟ್ಟು ಜ್ಞಾನದೀವಿಗೆಯಾಗಿವೆ. ಅವುಗಳ ಅರಿವು ನಮ್ಮ ಜ್ಞಾನದ ಮಟ್ಟವನ್ನು ಹೆಚ್ಚಿಸುವುದಲ್ಲದೆ ಲೋಕಾನುಭವವನ್ನೂ, ವಿವೇಕವನ್ನೂ ಮತ್ತು ತಾರತಮ್ಯ ಜ್ಞಾನವನ್ನೂ ತರುವುದು.

ಎಂದೋ ನಡೆದ ವಿಷಯಗಳನ್ನು ಇಂದು ಕಟ್ಟಿಕೊಂಡು ಫಲವೇನು ? ಕಣ್ಮರೆಯಾದ ದೂರದ ವ್ಯಕ್ತಿಗಳ ಮತ್ತು ವೈಭವದ ಸ್ಮರಣೆಯಲ್ಲಿ ಮಗ್ನರಾಗುವುದರಿಂದ ಪ್ರಗತಿ ಸಾಧಿಸಿದಂತಾಯಿತೇ ? ಇದರಿಂದ ಗತಕಾಲದ ಗೋರಿಗಳಲ್ಲಿ ನಾವು ಸತ್ತ ಶವಗಳಂತಾಗುವುದಿಲ್ಲವೇ? ಈ ಪ್ರಶ್ನೆಗಳು ಚರಿತ್ರೆಯ ಪ್ರಯೋಜನವೇನೆಂದು ಕೇಳುವಾಗ ಹುಟ್ಟುವುದು ಸಹಜ. ಕಾಲ ಗತಪ್ರಾಯವಾದರೂ ಕಾಲಘಟನೆಗಳ ಮಹತ್ವ ಅಳಿಯುವುದಿಲ್ಲ. ಪ್ರಸ್ತುತಕಾಲಕ್ಕೆ ಸಂಬಂಧಿಸಿದಂತೆ ಗತಕಾಲದ ಇತಿಹಾಸದ ಪುನರ್ದರ್ಶನ ಮಾಡಬೇಕು. ಸಹಸ್ರಾರು ವರ್ಷಗಳ ಪ್ರಬಲ ಅಸ್ತಿತ್ವ ಮತ್ತು ವೈಶಿಷ್ಟ್ಯದ ಪ್ರಚಂಡ ಪ್ರಜ್ಞೆ, ಎಲ್ಲ ದೇಶಕ್ಕೂ ಅಗತ್ಯ. ಇದರಿಂದ ನಿಜವಾದ ದೇಶಾಭಿಮಾನ ಹುಟ್ಟುವುಲ್ಲದೆ ರಾಷ್ಟ್ರೀಯ ಬೆಳವಣಿಗೆಗೆ ಇದು ಪ್ರಧಾನ ಪ್ರೇರಕವಾಗುವುದು. ನಮ್ಮ ಸಂಸ್ಕೃತಿ ಮತ್ತು ನಾಗರಿಕತೆ ಹಿಂದೆ ಅಷ್ಟು ಉನ್ನತ ಸ್ಥಿತಿಯಲ್ಲಿತ್ತು, ನಮ್ಮ ಪೂರ್ವಿಕರು ಇಂಥ ಮಹಾಕಾರ್ಯಗಳನ್ನು ಮಾಡಿದರು, ನಮ್ಮ ನಾಡಿನಾಡಿಗಳಲ್ಲಿ ಇಂತಿಂಥ ಮಹಾವೀರರ ರಕ್ತ ಹರಿಯುತ್ತಿದೆ. ನಮ್ಮ ನಾಡು ಪುಣ್ಯಪುರುಷರಿಂದ ಪಾವನವಾಗಿದೆ ಎಂದು ನಮ್ಮ ಚರಿತ್ರೆ ನಮ್ಮ ಗತವೈಭವನ್ನು ನೆನಪಿಗೆ ತಂದುಕೊಟ್ಟಾಗ ನಮ್ಮಲ್ಲಿರುವ ರಾಷ್ಟ್ರೀಯ ಭಾವನೆಯು ಚೇತನಗೊಳ್ಳುವುದಲ್ಲದೆ ರಾಷ್ಟ್ರೋನ್ನತಿಯ ಕಾರ್ಯಕ್ಕೆ ನಮ್ಮನ್ನು ಹುರುಪುಗೊಳಿಸುತ್ತದೆ. ದಾಸ್ಯದಲ್ಲಿ ತೊಳಲುತ್ತಿದ್ದ ಭಾರತ ಎಚ್ಚರಗೊಂಡು ರಾಷ್ಟ್ರ ಸ್ವಾತಂತ್ರ್ಯದ ಹೋರಾಟಕ್ಕೆ ಪುಟವಿಕ್ಕಿದ ಆ ಶಕ್ತಿ ಭಾರತದ ಗತ ವೈಭವದ ಸ್ಮರಣೆಯಲ್ಲವೆ ? ಹತ್ತೊಂಬತ್ತನೆಯ ಶತಮಾನದಲ್ಲಿ ಹರಿದು ಹಂಚಿ ಹೋಗಿದ್ದ ಇಟಲಿ ತನ್ನ ರಾಷ್ಟ್ರದ ಸ್ವಾತಂತ್ರ್ಯ ಮತ್ತು ಐಕ್ಯಕ್ಕಾಗಿ ನಡೆಸಿದ ಹೋರಾಟಕ್ಕೂ ಇಂದಿನ ಏಷ್ಯಾದ ಜನಾಂಗಗಳ ರಾಷ್ಟ್ರೀಯ ಆಂದೋಲನಗಳಿಗೂ ನವ ಚೇತನ ಒದಗಿಸಿದ ಶಕ್ತಿ ಅವುಗಳ ಪೂರ್ವ ಚರಿತ್ರೆಯ ಸ್ಮೃತಿಯೇ.

ಒಂದು ದೃಷ್ಟಿಯಿಂದ ಚರಿತ್ರೆ ಎಲ್ಲರಿಗೂ ಬೇಕು. ಜಗತ್ತಿನಲ್ಲಿ ಇಂದು ನಾನಾ ಹೋರಾಟಗಳು ಜರುಗುತ್ತಿವೆ. ಸಮಾಜ, ರಾಷ್ಟ್ರ ಮತ್ತು ಅಂತರರಾಷ್ಟ್ರೀಯ ಜೀವನ ದಲ್ಲಿ ನಾವು ಇಂದು ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ಅವುಗಳ ಮೂಲ ಕಾರಣಗಳನ್ನು ತಿಳಿಯಬೇಕಾದರೆ ನಾವು ಚರಿತ್ರೆಯನ್ನು ಅಧ್ಯಯನ ಮಾಡಬೇಕು. ವರ್ತಮಾನ ಘಟನೆಗಳ ಬೇರುಗಳು ಭೂತಕಾಲದಲ್ಲಿ ಹುದುಗಿವೆ. ಅದನ್ನು ಅರ್ಥ ಮಾಡಿಕೊಳ್ಳದೆ ಹೋದಲ್ಲಿ ವರ್ತಮಾನ ಕಾಲದ ಅರಿವು, ಭವಿಷ್ಯತ್ತಿನ ಬೆಳಸು ಸಾಧ್ಯ ವಾಗಲಾರದು. ಮೆಕಾಲೆ ಹೀಗೆ ಬರೆದಿದ್ದಾನೆ ‘ Facts are the dress of history. No past event has any intrinsic importance. The knowledge of it is valuable only as it leads us to form just conclusions to the future.’ (Edinburgh Review 1882) ಚರಿತ್ರೆ ಹಿಂದಿನ ಸಂಗತಿಗಳ ಯಥಾರ್ಥಜ್ಞಾನವನ್ನೂ ಮಾಡಿಕೊಡುವುದಲ್ಲದೆ ಇಂದಿನ ಸಮಸ್ಯೆಗಳನ್ನು ಬಗೆಹರಿ ಸಲು ದಾರಿತೋರಿಸಬಲ್ಲದು ಮತ್ತು ಮುಂದಿನ ಆಗುಹೋಗುಗಳನ್ನು ಸೂಚಿಸಬಲ್ಲದು.

ಚರಿತ್ರೆಯಲ್ಲಿ ನೀತಿಬೋಧೆಗೆ ಅವಕಾಶವಿದೆ. ಜನದ ನಡತೆಯನ್ನು ಚಿತ್ರಿಸಿ ಅದು ನೀತಿಯ ಆದರ್ಶಗಳನ್ನು ಮುಂದಿಡುವುದು. ‘ ನೀತಿ ತತ್ವಗಳನ್ನು ಹುಡುಕು ವವನು ಚರಿತ್ರೆಯಲ್ಲಿ ಈಸಾಡಬೇಕು ’ ಎಂದು ಒಬ್ಬ ಇತಿಹಾಸಕಾರ ಹೇಳಿದ್ದಾನೆ. ಬೊಲಿಂಗ್ ಬ್ರೋಕ್ ಎಂಬ ರಾಜಕಾರಿಣಿ ಚರಿತ್ರೆಯನ್ನು ತತ್ತ್ವಜ್ಞಾನಕ್ಕೆ ಹೋಲಿಸಿ ದ್ದಾನೆ. ಜರ್ಮನ್ ಚರಿತ್ರಕಾರ ಷಿಗೆಲ್ ಚರಿತ್ರಕಾರನನ್ನು ದಾರ್ಶನಿಕನೆಂದು ಕರೆದಿದ್ದಾನೆ. ಮತಸ್ಥಾಪಕರ, ದರ್ಶನವಾದಿಗಳ ರಾಜಮಹಾರಾಜರುಗಳ ಮತ್ತು ವೀರರ ಚರಿತ್ರೆಯಲ್ಲಿ ಅಡಗಿರುವ ನೀತಿಯ ಆದರ್ಶವನ್ನು ನಾವು ಮನಗಂಡರೆ ನಮ್ಮ ಜೀವನ ವಿಕಾಸಗೊಳ್ಳುವುದು. ಶ್ರೀರಾಮನ ಸತ್ಯಸಂಧತೆ, ಬುದ್ಧನ ದಯಾ ಪೂರಿತ ಕರುಣೆ, ಕ್ರಿಸ್ತನ ಕ್ಷಮಾಶೀಲತೆ ಅಶೋಕನ ಧರ್ಮ ಮತ್ತು ಅಹಿಂಸಾ ನಿಷ್ಠೆ, ಕಬೀರ್, ನಾನಕ್ ಮತ್ತು ರಮಾನಂದರ ಸರ್ವಧರ್ಮಸಮನ್ವಯದೃಷ್ಟಿ, ಶಿವಾಜಿಯ ರಾಷ್ಟ್ರಪ್ರೇಮ, ರಜಪೂತವೀರರ ಸ್ವದೇಶಪ್ರೇಮ ಮತ್ತು ಧೀರತ್ವ, ಅಲೆ ಕ್ಸಾಂಡರ್ ಮತ್ತು ನೆಪೋಲಿಯನ್ನರ ಶೌರ್ಯ ಮತ್ತು ಮುಂದಾಳುತನ, ಕೊಲಂಬಸಿನ ಸಾಹಸ ಪ್ರೇಮ, ಇವು ನಮ್ಮ ಯುವಕರಲ್ಲಿ ಮೂಡಿದರೆ ಅವರ ಜೀವನ ಭವ್ಯವಾಗು ವುದು.

ಚರಿತ್ರೆ ವ್ಯಕ್ತಿಯ ಆತ್ಮೋನ್ನತಿಗೆ ಹೇಗೆ ಸಾಧನವಾಗಬಲ್ಲುದೊ ಹಾಗೆಯೇ ಸಮಾಜ ಮತ್ತು ಜನಾಂಗಗಳ ಉದ್ಧಾರಕ್ಕೆ ನೆರವಾಗಬಲ್ಲದು. ಚರಿತ್ರೆ ಮಾನವನ ಅನಂತ ಅನುಭವಗಳ ಅಮೂಲ್ಯ ಜ್ಞಾನ ಭಂಡಾರ. ನಮ್ಮ ಸಾಮಾಜಿಕ ಮತ್ತು ರಾಜಕೀಯ ಜೀವನದಲ್ಲಿ ಮಾರ್ಗದರ್ಶನವನ್ನು ಕೊಡುವ ಅನೇಕ ಸನ್ನಿವೇಶಗಳು, ಘಟನೆಗಳು ಚರಿತ್ರೆಯಲ್ಲಿ ಕೈಗಂಬಗಳಂತಿವೆ. ತನ್ನ ಅನುಭವಗಳ ಖನಿಯಿಂದ ಚರಿತ್ರೆ ಮಾನವನಿಗೆ ಎಚ್ಚರಿಕೆಯನ್ನು ಕೊಡುತ್ತಿದೆ. ಆದರೆ ‘ ಜನಾಂಗಗಳೂ,

ಸರಕಾರಗಳೂ ಚರಿತ್ರೆಯಿಂದ ಏನನ್ನೂ ಪಾಠ ಕಲಿತಿಲ್ಲ' ಎಂದು ಹೆಗಲ್ ತತ್ತ್ವಜ್ಞಾನಿ ಅತಿನಿರಾಶೆಯಿಂದ ಮರುಗಿದ್ದರೆ ಅದು ಮಾನವನ ಇಂದಿನ ಚಿಂತಾಜನಕಸ್ಥಿತಿಯನ್ನು ಪ್ರತಿಬಿಂಬಿಸುತ್ತದೆ. ನಾಯಕತ್ವ ಹಾಗೂ ಪ್ರಭಾವಯುತ ಸ್ಥಾನಗಳನ್ನಲಂಕರಿಸಿರುವವರು ಚರಿತ್ರೆಯ ಎಚ್ಚರಿಕೆಗಳನ್ನು ನಿರ್ಲಕ್ಷಿಸದೆ ಅದರ ಪಾಠವನ್ನು ವಿವೇಚನೆಯಿಂದ ಅಭ್ಯಾಸಮಾಡಿ ಅನುಷ್ಠಾನಕ್ಕೆ ತಂದಲ್ಲಿ ಲೋಕದಲ್ಲಿ ಶಾಂತಿ ಸೌಹಾರ್ದಗಳು ನೆಲೆಗೊಳ್ಳುವವು. ಆಗ 'ಚರಿತ್ರೆಯಿಂದ ಮನುಷ್ಯನು ವಿವೇಕಿಯಾಗುತ್ತಾನೆ' ಎಂಬ ಬೇಕನ್ನನ ನುಡಿ ಸಾರ್ಥಕವಾಗುತ್ತದೆ.

ಒಂದು ದೇಶದ ಚರಿತ್ರೆ ಅದರ ಹೃದಯವನ್ನರಿಯಲು ಸಾಧನ. ಗತಕಾಲದ ಸೂಕ್ಷ್ಮ ದರ್ಶನ ಅದರಿಂದ ದೊರೆಯುತ್ತದೆ. ಪ್ರಪಂಚದ ಇಂದಿನ ದುಃಸ್ಥಿತಿಗೆ ಜನಾಂಗ ಜನಾಂಗಗಳಲ್ಲಿ ಪರಸ್ಪರವಾಗಿ ಇರುವ ಅಜ್ಞಾನವೇ ಕಾರಣ. ಆದ್ದರಿಂದ ಪ್ರತಿಯೊಬ್ಬ ಪ್ರಜೆಯೂ ತನ್ನ ದೇಶದ ಚರಿತ್ರೆಯನ್ನೇ ಅಲ್ಲದೆ ಇತರ ದೇಶಗಳ ಚರಿತ್ರೆಯನ್ನು ಓದಿ ಅವುಗಳ ನೈಜ ಸ್ವರೂಪವನ್ನು ತಿಳಿಯಬೇಕು. ಸ್ಥೂಲದೃಷ್ಟಿಯಿಂದ ವಿಶ್ವದ ಸಂಸ್ಕೃತಿ ಇತಿಹಾಸಗಳನ್ನರಿತು ಅದರ ಮಧ್ಯೆ ತನ್ನ ಸ್ಥಾನವನ್ನು ನಿರ್ಧರಿಸಿಕೊಳ್ಳಬೇಕು. ಇದರಿಂದ ಪ್ರಪಂಚದ ಜನಾಂಗಳು ತಮ್ಮನ್ನು ತಾವು ಅರಿಯಲು ಸಹಾಯಕವಾಗುವುದಲ್ಲದೆ ಇಂದು ನೆಲೆಗೊಂಡಿರುವ ಪರಸ್ಪರ ಭೀತಿ, ದ್ವೇಷಾಸೂಯೆಗಳು ಮೇಲು ಕೀಳೆಂಬ ಭಾವನೆಗಳು ತೊಲಗಿ ವಿಶಾಲಮನೋಭಾವ, ಸಮರಸಭಾವನೆ ಹುಟ್ಟಿ ಪ್ರಪಂಚವನ್ನು ಸುಖಶಾಂತಿಗಳ ತಳಹದಿಯ ಮೇಲೆ ವ್ಯವಸ್ಥೆಗೊಳಿಸಲು ಸಾಧ್ಯವಾಗುವುದು. ಪ್ರಸಿದ್ಧ ಚರಿತ್ರಕಾರ ಜಿ. ಎಮ್. ಟ್ರೆವಿಲಿಯನ್ನಿನ ಈ ಮುಂದಿನ ವಾಕ್ಯ ಅರ್ಥಪೂರ್ಣವಾಗಿದೆ. 'The proper study of mankind is man and History is the key to the understanding of the peoples of the world'

ಸಾಮರಸ್ಯ, ಪ್ರಮಾಣದ ಔಚಿತ್ಯ, ಸಮಗ್ರವೂ ನಿಷ್ಪಕ್ಷಪಾತವೂ ಆದ ನಿರ್ಣಯ ಶಕ್ತಿ, ಸಮನ್ವಯದೃಷ್ಟಿ ಇವನ್ನು ಉಂಟುಮಾಡುವುದರಲ್ಲಿ ಇತರ ಯಾವ ಪರಿಶ್ರಮವೂ ಚರಿತ್ರೆಯ ಅಭ್ಯಾಸಕ್ಕೆ ಸಮತೂಗಲಾರದೆಂದರೆ ಅತಿಶಯೋಕ್ತಿಯಾಗಲಾರದು.

ಇಂದು ನಾವು ವಿಜ್ಞಾನಯುಗದಲ್ಲಿದ್ದೇವೆ. ನಮ್ಮ ನಾಗರಿಕತೆಯ ಬೆಳವಣಿಗೆ ವಿಜ್ಞಾನದ ಫಲ. ವಿಜ್ಞಾನ ಇಂದಿನ ಜೀವನಕ್ಕೆ ಹೆಚ್ಚು ಉಪಯೋಗವಾಗಿರಬಹುದು. ಆದರೆ ಇದರಿಂದ ಕಲಾಭ್ಯಾಸಗಳನ್ನು ಕಡೆಗಾಣುವಂತಿಲ್ಲ. ಬೌದ್ಧಿಕ ಪ್ರಗತಿಯಷ್ಟೇ ಮಾನಸಿಕ ಮತ್ತು ನೈತಿಕ ಪ್ರಗತಿಯೂ ನಾಗರಿಕತೆಯ ಮುನ್ನಡೆಗೆ, ಸ್ಥಿರತೆಗೆ, ಸಾರ್ಥಕತೆಗೆ ಮುಖ್ಯವಾದದ್ದು. ನಮ್ಮ ಜ್ಞಾನ ಮಾತ್ರ ಬೆಳೆದು ನಮ್ಮ ವರ್ತನೆಯಲ್ಲಿ ಕ್ರೂರದೃಷ್ಟಿ, ಸಮತೂಕಗಳ ಅಭಾವ ತೋರಿದಲ್ಲಿ ಏನೂ ಪ್ರಯೋಜನವಿಲ್ಲ. ಇಂದು ವಿಜ್ಞಾನದ ಪ್ರಗತಿಯ ಪ್ರಮಾಣಕ್ಕನುಗುಣವಾಗಿ ನೈತಿಕ ಮತ್ತು ಆಧ್ಯಾತ್ಮಿಕ ಬೆಳವಣಿಗೆಗೆ ಸಾಧನವಾದ ಚರಿತ್ರೆ, ಸಾಹಿತ್ಯ ಮತ್ತು ಲಲಿತಕಲೆಗಳಲ್ಲಿ

ಹೆಚ್ಚಿನ ಆಸಕ್ತಿ ವಹಿಸಬೇಕಾದುದು ಅತ್ಯಗತ್ಯ. ಕಲಾವ್ಯಾಸಂಗಗಳನ್ನು ಅಲ್ಲಗಳೆದು ವಿಜ್ಞಾನಶಾಸ್ತ್ರಗಳಿಗೆ ಹೆಚ್ಚು ಮಾನ್ಯತೆ ಕೊಟ್ಟಲ್ಲಿ ಅದರಿಂದಾಗುವ ನೈತಿಕ ಮತ್ತು ಮಾನಸಿಕ ಅವನತಿ ವಿಪತ್ಕಾರಿಯಾದುದು. ಈ ದೃಷ್ಟಿಯಿಂದ ಇಂದಿನ ವ್ಯಾಸಂಗ ವ್ಯವಸ್ಥೆಯಲ್ಲಿ ಜ್ಞಾನದ ಎರಡು ಕಣ್ಣುಗಳಂತಿರುವ ವಿಜ್ಞಾನ ಮತ್ತು ಕಲೆಗಳ ಹೊಂದಿಕೆ ಮತ್ತು ಸಮತೂಕವಿರಬೇಕಾದುದು ಅಗತ್ಯ. ಎರಡರ ಸುಮಧುರ ಸಮ್ಮಿಳನವೇ ಸಾರ್ಥಕವೂ ಮತ್ತು ಆನಂದಮಯವೂ ಆದ ತುಂಬು ಜೀವನದೆಡೆಗೆ ಒಯ್ಯಬಲ್ಲದು.

ಆದರೆ ಇಂದು ನಾವು ಶಾಲಾಕಾಲೇಜುಗಳಲ್ಲಿ ಓದುತ್ತಿರುವ ಚರಿತ್ರೆಯ ಪಠ್ಯ ಪುಸ್ತಕಗಳಿಂದ ಮೇಲಿನ ಪ್ರಯೋಜನ ಲಭಿಸುತ್ತದೆಯೇ ಎಂಬ ಪ್ರಶ್ನೆ ಏಳುತ್ತದೆ. ಅವು ಕೇವಲ ರಾಜಕೀಯ ಘಟನೆಗಳಿಂದ ತುಂಬಿದ, ದೃಷ್ಟಿ ದೋಷದಿಂದ ಕೂಡಿದ ಪರಕೀಯ ವಿದ್ವಾಂಸರ ಮೂಲಗ್ರಂಥಗಳ ಅನುವಾದವೋ ಇಲ್ಲವೆ ಭಾಷಾಂತರಗಳಾಗಿಯೋ ಬೇಸರ ಹುಟ್ಟಿಸುವುದರಲ್ಲಿ ಆಶ್ಚರ್ಯವೇನಿಲ್ಲ. ಇಷ್ಟೇ ಅಲ್ಲದೆ ಅವು ನಡೆದ ಸಂಗತಿಗಳ ಯಥಾರ್ಥ ವಿವರಣೆಗಳಲ್ಲ. ರಾಜಕೀಯ ದುರುದ್ದೇಶದಿಂದಲೋ ಸ್ವಾಭಿಮಾನದಿಂದಲೋ ಬರೆದುವಾದುದರಿಂದ ಅವುಗಳಿಂದ ಪ್ರಯೋಜನಕ್ಕಿಂತ ಕೆಡುಕೇ ಹೆಚ್ಚು. ಈ ದೃಷ್ಟಿಯಿಂದ ಲಿಯೋನಾರ್ಡ್ ಹಕ್ಸ್ಲಿ (Leonerd Huxley) 'Hisory is the curse of modern Eductaion' ಎಂದಿದ್ದಾರೆ. ಇದರಲ್ಲಿ ಉತ್ಪ್ರೇಕ್ಷೆಯಿಲ್ಲ. ಆದರೆ ಸತ್ಯಾನ್ವೇಷಣೆಯನ್ನೇ ಆಧಾರವಾಗುಳ್ಳ ನಿಷ್ಪಕ್ಷಪಾತ ದೃಷ್ಟಿಯಿಂದ ಬರೆದ ಚರಿತ್ರೆ ಆತ್ಮೋನ್ನತಿಗಲ್ಲದೆ ರಾಷ್ಟ್ರಪ್ರಗತಿಗೂ ವಿಶ್ವಶಾಂತಿಗೂ ಸಾಧನವಾಗಬಲ್ಲದೆಂಬುದರಲ್ಲಿ ಯಾವ ಸಂದೇಹವೂ ಇರದು.

ಡಿ. ಎಸ್. ಅಚ್ಚುತರಾವ್

# ಸಾನೆಟ್ ಅಥವಾ ಅಷ್ಟಷಟ್ಪದಿ

೧

" ಅಷ್ಟಷಟ್ಪದಿಯಲ್ಲಿ ಉಯ್ಯಾಲೆಯಾಡುತಿದೆ, ಕೌತುಕದ ಬಗೆ" ಎಂದು ಬೇಂದ್ರೆಯವರು ' ಉಯ್ಯಾಲೆ ' ಯ ಮೊದಲ ಕವಿತೆಯಾದ ' ಅಷ್ಟಷಟ್ಪದಿ ' ಯನ್ನಾರಂಭಿಸಿದಾರೆ. ಈ ಅಷ್ಟಷಟ್ಪದಿಯೆನ್ನುವುದು ಕನ್ನಡಕ್ಕೆ ಹೊಸದು. ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ಕನ್ನಡ ಸಾಹಿತ್ಯದ ಸರ್ವೋದಯವಾದ ಕಾಲದಲ್ಲಿ, ಆಚಾರ್ಯ ಬಿ. ಎಂ. ಶ್ರೀಯವರ ಆಸಕ್ತಿ, ಪ್ರಭಾವ, ಪ್ರೇರೇಪಣೆಗಳ ಫಲವಾಗಿ, ಕನ್ನಡಕವಿತೆ ಹೊಸಹಾದಿ ತುಳಿಯಿತು. ಕನ್ನಡದ ವಾಹಿನಿಗೆ ನೂರೆಂಟು ಬಗೆಯಿನ್ನೂ ಇದೆ, ಇನ್ನೂ ಎಲ್ಲೆಂದರೆ ಅಲ್ಲಿ, ಹೇಗೆಂದರೆ ಹಾಗೆ, ಉಳಿದ ಸಾಹಿತ್ಯಗಳಂತೆಯೇ ಹಾರಬಲ್ಲ ಚೈತನ್ಯವಿದೆಯೆಂದು ಎಲ್ಲರಿಗೂ ಮನವರಿಕೆಯಾಗಿ ಹೊಸಬಗೆಯ ಸಾಹಿತ್ಯ ಸೃಷ್ಟಿಯಾರಂಭವಾಯಿತು ಭಾವಗೀತೆಯ ಪರಂಪರೆ ಹೊಸದಾಗಿ ಹುಟ್ಟಿಕೊಂಡಿತು. ಹಿಂದೆ ಭಾವಗೀತೆ ಆ ಹೆಸರಿನಿಂದ, ಆ ವಿಶಿಷ್ಟರೂಪದಿಂದ ಇರಲಿಲ್ಲ. ಪಂಪನ ಮಹಾಕಾವ್ಯದಲ್ಲಿಯೇ ಆಗಲಿ, ಹಿಂದಿನ ಕವಿಗಳ ಚಂಪೂಕಾವ್ಯಗಳಲ್ಲಿಯೇ ಆಗಲಿ, ಅಲ್ಲಲ್ಲಿ ಭಾವಗೀತೆಗಳ ಗುಣವುಳ್ಳ ಭಾಗಗಳು ಬರುತ್ತವೆ. ಆದರೆ ಅವು ಹಿರಿಯದೊಂದರ ಭಾಗವಾಗಿ ಬರುತ್ತವೆಯೇ ಹೊರತು ಭಾವಗೀತೆಯ ರೂಪದಲ್ಲಿ ಬರುವುದಿಲ್ಲ. ಈ ಭಾವಗೀತೆಯ ಪರಂಪರೆಯಲ್ಲಿ ಹಲವಾರು ರೂಪಗಳು ಬಂದುವು. ಅಂತಹುದರಲ್ಲಿ ಅಷ್ಟಷಟ್ಪದಿಯೂ ಒಂದು.

ಈ ಅಷ್ಟಷಟ್ಪದಿಯೆನ್ನುವುದು ಇಂಗ್ಲಿಷ್‌ಕಾವ್ಯದ ಸಾನೆಟ್ (Sonnet) ಎಂಬುದರ ಕನ್ನಡರೂಪ. ಹದಿನಾಲ್ಕು ಸಾಲಿನ ಈ ಕವಿತೆಯಲ್ಲಿ ಮೊದಲಿನ ಎಂಟು ಸಾಲು (ಅಷ್ಟ) ಒಂದು ಭಾಗ, ಕೊನೆಯ ಆರುಸಾಲು (ಷಟ್ಪದಿ) ಒಂದು ಭಾಗವೆಂದು ಮೊದಲು ಅದರ ರೂಪರೇಖೆಗಳಲ್ಲಿ ನಿರ್ಣಯವಾಗಿತ್ತು. ಅಂತೆಯೇ ಕನ್ನಡಕ್ಕೆ ಅದನ್ನು ಕರಸಿಕೊಂಡವರು ಅದಕ್ಕೆ ಅಷ್ಟಷಟ್ಪದಿಯೆಂಬ ಹೆಸರನ್ನು ಕೊಟ್ಟುದು. ಆದರೆ ಈ ಎಂಟು, ಆ ಆರು ಸಾಲುಗಳ ವಿಭಜನೆ ಕೂಡ ಎಲ್ಲಾ ಸಾನೆಟ್ಟುಗಳಿಗೆ ಅನ್ವಯಿಸುವುದಿಲ್ಲವಾದುದರಿಂದ ಅಷ್ಟಷಟ್ಪದಿಯೆನ್ನುವ ಹೆಸರು ಅಷ್ಟಾಗಿ ಒಪ್ಪುವ ಹೆಸರಲ್ಲ, ಸರಿಯಾದುದಲ್ಲವೆಂದು ನನಗೆ ತೋರುತ್ತದೆ. ಪೂರ್ಣವಾಗಿ ಸಾನೆಟ್ ರೂಪವನ್ನು ವಿವರಿಸುವ, ಪ್ರತಿಬಿಂಬಿಸುವ ಹೆಸರಲ್ಲ, ಅದು.

ಸಾನೆಟ್ಟು ಎಂಬುದನ್ನು ಕೆಲವರು ಸುನೀತವೆಂದು ಕರೆದುದೂ ಉಂಟು. ಆದರೆ ಸಾನೆಟ್ ಎಂಬ ಹೆಸರನ್ನು ಸುನೀತವೆಂದು ಮಾರ್ಪಡಿಸಿ ತದ್ಭವಿಸುವ ಅವಶ್ಯಕತೆಯೇನೂ ಕಾಣಬರುವುದಿಲ್ಲ. ವಿಜ್ಞಾನದ ಎಷ್ಟೋ ಪದಗಳನ್ನು ಹಾಗೆಯೇ ಉಳಿಸಿಕೊಂಡಂತೆ ಇದನ್ನೂ ಉಳಿಸಿಕೊಳ್ಳಬಹುದು. ಅದರಿಂದೇನೂ ಅಪಾಯವಿಲ್ಲ. ಅಲ್ಲದೆ

ಈ ಸಾನೆಟ್‌ಪದ ಇಂಗ್ಲಿಷ್ ಪದವಲ್ಲ. ಈ ಸಾನೆಟ್ ರೂಪ ಇಂಗ್ಲಿಷಿಗೆ ಬಂದಾಗ ಇಟಾಲಿಯನ್ನಿನಿಂದ ಈ ಹೆಸರಿನೊಂದಿಗೇ ಬಂದಿತು. ಆದ್ದರಿಂದ ಸಾನೆಟ್ ಎಂಬ ಹೆಸರನ್ನೇ ನಾವು ಬಳಸಲು ಯಾವ ಅಡ್ಡಿಯೂ ಇಲ್ಲ.

ಈ ಸಾನೆಟ್ ಎಂಬುದು ಇಟಲಿಯಲ್ಲಿ ಹುಟ್ಟಿಬೆಳೆದ ಗೀತರೂಪ. ಇಂಗ್ಲಿಷ್ ಸಾಹಿತ್ಯಕ್ಕೆ ಈ ಸಾನೆಟ್ ರೂಪ ಬಂದುದು ೧೬ ನೆಯ ಶತಮಾನದ ಮೂರು ನಾಲ್ಕ ನೆಯ ಶತಕದಲ್ಲಿ. ಆದರೆ ಇಟಲಿಯಲ್ಲಿ ಇದಕ್ಕೆ ಮುನ್ನೂರು ವರ್ಷಗಳ ಹಿಂದೆಯೇ ಈ ಸಾನೆಟ್ಟಿಗೆ ಒಂದು ನಿಯತರೂಪ ಬಂದಿತ್ತು. ನಮಗೀಗ ತಿಳಿದಿರುವ ಹದಿನಾಲ್ಕು ಸಾಲುಗಳ ರೂಪವನ್ನು ಈ ಕವನ ಪ್ರಕಾರಕ್ಕೆ ಕೊಟ್ಟು, ಅದನ್ನು ನೆಲೆ ನಿಲ್ಲಿಸಿದ ಕವಿ, ಗಿತಾನ್ ದಿ ಆರೆಸ್ಸೊ (Guittone di Arezzo) ಸುಮಾರು ೧೨೩೫ ರಲ್ಲಿ ಜನಿಸಿದವನು. ಈತ ಚತುರ್ದಶಪದಿಯನ್ನಾಗಿ ಇದನ್ನು ನಿರ್ದೇಶಿಸಿ, ಅದಕ್ಕೆ ತನ್ನದೇ ಬಂಧವಿದೆ, ರೂಪವಿದೆಯೆಂದು ತೋರಿಸಿಕೊಟ್ಟ. ಅಂದರೆ ಈ ವೇಳೆಗೆ ಈ ಸಾನೆಟ್ ಪರಂಪರೆ ಹಲವಾರು ಪ್ರಯೋಗಗಳಲ್ಲಿ ಬಂದಿತ್ತು. ಒಂದೆರಡು ಶತಮಾನಗಳ ಕಾಲವಾದರೂ ಅದು ಪ್ರಯೋಗದಲ್ಲಿದ್ದು ಕೊನೆಗೆ ಖಚಿತವಾದ ಈ ಕಲಾತ್ಮಕ ರೂಪ ತಾಳಿರಬೇಕು. ದಕ್ಷಿಣ ಫ್ರಾನ್ಸ್ ಮತ್ತು ಉತ್ತರ ಇಟಲಿಯ ಜಾನಪದ ಪ್ರೇಮಗೀತಗಳೇ ಈ ರೂಪಕ್ಕೆ ಮೂಲ. ಈ ಪ್ರೇಮಗೀತಗಳು ಹಾಡಿಕೆಗಾಗಿ ಕ್ಷಣಾವೇಶದಲ್ಲಿ ಕೂಡಿಸಲ್ಪಡುತ್ತಿದ್ದುವು. ಸಹಜವಾಗಿಯೇ ಇವುಗಳಲ್ಲಿ ಸಂಗೀತಕ್ಕೆ ಹೆಚ್ಚು ಪ್ರಾಮುಖ್ಯತೆ ಇರುತ್ತಿತ್ತು. ಅಲ್ಲದೆ ಯಾವುದೋ ಸಮಯ ಸ್ಫೂರ್ತಿಯಲ್ಲಿ ಬರೆದುದರಿಂದ ಕಾವ್ಯಲಕ್ಷಣ ಅಲ್ಪವಾಗಿರುತ್ತಿತ್ತು. ಪ್ರೇಯಸಿಯನ್ನು ಹೊಗಳುವಲ್ಲಿ ಅತಿರೇಕ, ಉಪಯೋಗಿಸುವ ಉಪಮೆಗಳು ಅತಿಹಿಂಜಿದವುಗಳೂ, ಅಸಾಮಾನ್ಯ, ಅಸಹಜವಾಗಿಯೂ ಇರುತ್ತಿದ್ದವು. ಈ ಪ್ರೇಮಗೀತೆಗಳು ಹರಡಿದಂತೆ ಇಟಲಿಯ ನಗರರಾಜ್ಯಗಳ ಕವಿಗಳ ಕಣ್ಣು ಇದರ ಮೇಲೆ ಬಿತ್ತು. ಹನ್ನೆರಡು ಹದಿಮೂರನೆಯ ಶತಮಾನದ ಸಾಮಾಜಿಕ, ರಾಜಕೀಯ ವಾತಾವರಣದಿಂದ ಗಂಭೀರವಾಗಿ, ವಿಚಾರಪರರಾಗಿದ್ದ ಇಟಲಿಯ ಕವಿಗಳು ತಮ್ಮ ವಿಚಾರಗಳ ಪ್ರಕಾಶನಕ್ಕೆ ಈ ಹದಿನಾಲ್ಕು ಸಾಲು ಒಳ್ಳೆಯ ಸಾಧನವೆಂದು ಅರಿತರು. ಅವರ ಪ್ರೇಮಗೀತಗಳು ಗಾಂಭೀರ್ಯದಲ್ಲಿ, ಆಳದಲ್ಲಿ ಹಿಂದಿನವುಗಳಿಗಿಂತ ಹೆಚ್ಚು ತುಂಬಿಕೊಂಡಿದ್ದವು. ಅತಿರೇಕವೂ ಅಸಹಜತೆಯೂ ಇವರ ಈ ಕಾವ್ಯದಿಂದ ಹೊರತಾಯಿತು. ಸಹಜತೆ, ಗಹನ ವಿಚಾರಗಳು ಕೂಡಿಕೊಂಡು ಬಂದು ಈ ಕಾವ್ಯ ಮೈದುಂಬಿಕೊಂಡಿತು. ಇದು ದಿನಗಳೆದಂತೆ ಬೆಳೆದು ಅರೆಸ್ಸೊವಿನ ಕೈಯಲ್ಲಿ ಒಂದು ತೀಕ್ಷ್ಣವಾದ, ಮೊನೆಯಾದ ಸಾಧನವಾಯಿತು. ಸ್ಪಷ್ಟ ರೂಪರೇಖೆಗಳನ್ನು ಪಡೆಯಿತು.

ಆದರೆ ಈ ಸಾನೆಟ್ ರೂಪವನ್ನು ಸಾಹಿತ್ಯದಲ್ಲಿ ನಿಲ್ಲಿಸಿದ ಶ್ರೇಯಸ್ಸು ಫ್ಲಾರೆನ್ಸ್ ನಗರದ ಅಲಿಘೀರಿ ದಾಂತೆಯದು. (Dante Alighieri) ೧೨೬೫ ರಲ್ಲಿ ಜನಿಸಿದ ಈ ಕವಿಯ ಶ್ರೇಷ್ಠಕೃತಿ 'ಡಿವೈನ್ ಕಾಮಿಡಿ' (Divine Comedy) ಎಂಬ ಮಹಾ

ಕಾವ್ಯ. ಆದರೆ ಆತನ ಹೊಸಬಾಳು, (Vita Nuova) ಅಷ್ಟೇ ಪ್ರಮುಖ ಕೃತಿ. ಈ ಎರಡು ಕೃತಿಗಳಿಗೂ ಸ್ಫೂರ್ತಿಯಾದವಳು ಬಿಯಾಟ್ರೀಸ್ (Beatrice). ಇದೊಂದು ವಿಚಿತ್ರ ಪ್ರೇಮ. ೧೨೭೪ ರಲ್ಲಿ ಎಂದರೆ ದಾಂತೆ ಒಂಭತ್ತು ವರ್ಷದವನಾಗಿದ್ದಾಗ, ಎಂಟು ವರ್ಷದ ಬಿಯಾಟ್ರೀಸಳನ್ನು ಆವಳ ತಂದೆಯ ಮನೆಯಲ್ಲಿ ಕಂಡ. ಆ ಚೆಲುವೆಯ ಸೌಂದರ್ಯದಲ್ಲಿ ಆತನ ಮನಸ್ಸು ಪಟ್ಟ ತೀವ್ರಾನಂದದಿಂದ, ಅವನಲ್ಲಿ ಹುದುಗಿದ್ದ ಪ್ರತಿಭೆ ಅರಳಿತು; ಆಕೆಯನ್ನು ದಾಂತೆ ಬಹಳಸಾರಿ ಕಾಣದಿದ್ದರೂ ಆಕೆ ಅವನ ಹೃದಯದಲ್ಲಿ ಮನಸ್ಸಿನಲ್ಲಿ ನೆಲೆಯೂರಿ ನಿಂತಳು. ಆಕೆ ಕೊನೆಗೆ ಬೇರೊಬ್ಬನನ್ನು ಮದುವೆಯಾದಳು-೧೨೯೦ ರಲ್ಲಿ ತೀರಿಕೊಂಡಳು. ೧೨೯೨ ರಲ್ಲಿ ಎಂದಗೆ ಆಕೆ ತೀರಿಕೊಂಡ ಎರಡು ವರ್ಷದಲ್ಲಿ ದಾಂತೆ ತನ್ನ ಪ್ರೇಮದ ಪ್ರತೀಕವಾಗಿ ಗದ್ಯ ಪದ್ಯ ಮಿಶ್ರಿತವಾದ ಕೃತಿ ' ಹೊಸಬಾಳು ' ವನ್ನು ಬರೆದು ಮುಗಿಸಿದ್ದ. ಬಿಯಾಟ್ರೀಸಳಲ್ಲಿ ಅವನಿಗಿದ್ದ ಪ್ರೇಮ, ಆಕೆ ಸಾವಿನ ನಂತರ ಅವನಿಗೆ ಸ್ಫೂರ್ತಿಯಾಗಿ ದರ್ಶನ ಕೊಡುತ್ತಿದ್ದುದೇ ಈ ಕೃತಿಯ ವಸ್ತು. ಈ ಕೃತಿಯ ಬಹುಭಾಗ ಸಾನೆಟ್ ರೂಪದ ಕವನ. ದಾಂತೆಯ ಕೃತಿಯಿಂದ ಸಾನೆಟ್ ರೂಪ ಸಾಹಿತ್ಯದಲ್ಲಿ ನಿಂತಿತು. ಮುಂದಿನ ಪೀಳಿಗೆಗಳಿಗೆ ದತ್ತವಾಗಿ ಬಂತು. ದಾಂತೆಯ ಈ ಕೃತಿಯ ಬಹಳ ಸುಂದರವಾದ ಅನುವಾದವನ್ನು ೧೯ ನೆಯ ಶತಮಾನದ ಅಂತ್ಯದಲ್ಲಿ ಇಂಗ್ಲಿಷ್ ಕವಿ ದಾಂತೆಗ್ರೇಬಿಯಲ್ ರೊಸೆಟ್ಟಿ ' The New Life ' (ಹೊಸಬಾಳು) ಎಂಬ ಹೆಸರಿನಲ್ಲಿ ಪ್ರಕಾಶ ಪಡಿಸಿದ. ಈ ಸಾನೆಟ್ ಪರಂಪರೆಯಿಂದ ನಮಗೆ ದಾಂತೆಯ ಮನಸ್ಸಿನ ಚಿತ್ರಣ ಸ್ಪಷ್ಟವಾಗಿ ಸಿಗುತ್ತದೆ. ದಾಂತೆಗಿಂತ ಮೊದಲು ಸಾನೆಟ್‌ಗಳನ್ನು ಬರೆದ ವೆರ್ನಾಕ್ಸಿಯಾ (Lodovico Della Vernaccia) ಗಿದೊ ಗ್ವಿನಿಸೆಲ್ಲಿ (Guido Guinicelli) ಜಕೊಪ್ರೊ ಡ ಲೆಂಟೀನೊ (Jacopo Da Lentino) ಮುಂತಾದ ಕವಿಗಳ ಕೃತಿಗಳಲ್ಲಿಲ್ಲದ ಸೂಕ್ಷ್ಮತೆ, ನವಿರು, ನಯ, ಭಾವಗಳನ್ನು ಪೂರ್ಣವಾಗಿ, ಸ್ಪಷ್ಟವಾಗಿ ಹೇಳುವ ಕೌಶಲ್ಯ ಇವು ದಾಂತೆಯ ಸಾನೆಟ್ಟುಗಳಲ್ಲಿವೆ. ಸಾಣೆ ಹಿಡಿದು ಸಿದ್ಧಗೊಳಿಸಿದಂತಿವೆ ದಾಂತೆಯ ಸಾನೆಟ್ಟುಗಳು.

ದಾಂತೆಯ ಅನಂತರದ ದೊಡ್ಡ ಹೆಸರು ಫ್ರಾನ್ಸೆಸ್ಕೊ ಪೆಟ್ರಾರ್ಕ್. (Francesco Petrarch.) ಈತ ೧೩೦೪ ರಲ್ಲಿ ಫ್ಲಾರೆನ್ಸ್‌ನಲ್ಲಿ ಜನಿಸಿದ. ರಾಜಕಾರಣದಿಂದ ದೇಶಭ್ರಷ್ಟನಾಗಿದ್ದ ಈತನ ತಂದೆಯೊಂದಿಗೆ ದಕ್ಷಿಣ ಫ್ರಾನ್ಸ್‌ನಲ್ಲಿ ಉಳಿದುಕೊಂಡ. ಅಲ್ಲಿಯೇ ಆತ ತನ್ನ ಪ್ರೇಯಸಿಯನ್ನು ಕಂಡುದು. ಆಕೆ ಯಾರೆಂಬುದು ತಿಳಿಯದು. ಆದರೆ ಪೆಟ್ರಾರ್ಕ್ ಆಕೆಗೆ ಕೊಟ್ಟ ಹೆಸರು ಲಾರ (Laura) ಚಿರಸ್ಥಾಯಿಯಾಗಿ ಉಳಿದಿದೆ. ಆಕೆ ೧೩೪೮ ರಲ್ಲಿ ತೀರಿಕೊಂಡಳು. ಪೆಟ್ರಾರ್ಕ್ ಆಕೆಯ ಬಗ್ಗೆ ಬರೆದ ಕೃತಿಗಳು " ಬದುಕಿದಾಗಿನ ಸಾನೆಟ್ಟುಗಳು, " " ಲಾರಳ ಸಾವಿನ ನಂತರದ ಸಾನೆಟ್ಟುಗಳು." ಆಕೆಯಲ್ಲಿ ಪೆಟ್ರಾರ್ಕನಿಗೆ ಪ್ರೇಮವಿತ್ತು. ಆದರೆ ಆಕೆ ಅವನಿಗೆ ದಕ್ಕಲಿಲ್ಲ. ದಾಂತೆಯ ಪ್ರೇಮದಂತೆ ಪೆಟ್ರಾರ್ಕನದು ದೈವಿಕ ಪ್ರೇಮವಲ್ಲ. ದಾಂತೆಗೆ ಬಿಯಾಟ್ರೀಸ್ ದೈವಿಕ

ಪ್ರೇಮಕ್ಕೊಂದು ಸ್ಫೂರ್ತಿಯಾಗಿದ್ದಳು, ಬಾಳಿಗೊಂದು ನಂಬಿಕೆಯಾಗಿದ್ದಳು. ಆದರೆ ಪೆಟ್ರಾರ್ಕನಿಗೆ ಲಾರ ಹಾಗೆ ಸ್ಫೂರ್ತಿಯಾಗಲಿಲ್ಲ. ಅವನದು ಲೌಕಿಕ ಪ್ರೇಮ. ಬಯಕೆ, ಆಸೆ, ವಿರಹ, ಹಿಗ್ಗು, ಕಾಮದ ವಾಸನೆ, ಚಂಚಲತೆಗಳೆಲ್ಲ ಪೆಟ್ರಾರ್ಕನ ಕವಿತೆಯಲ್ಲಿ ಒಡಮೂಡಿವೆ. ಪೆಟ್ರಾರ್ಕ್ ಮಠದಲ್ಲಿ ಪಾದ್ರಿ, ಲಾರ ಮದುವೆಯಾದ ಗೃಹಿಣಿ. ಇದರಿಂದ ಅವರ ಸಂಬಂಧ ಎಂದಿಗೂ ಕುದುರುವಂತಿರಲಿಲ್ಲ. ಹೀಗಾಗಿ ಮನುಷ್ಯನಿಗೆ ಸಹಜವಾದ ಪ್ರೀತಿ, ಹೆಣ್ಣಿನ ಹಂಬಲ, ಪಡೆಯಲಾರದುದರ ದುಃಖ, ತನ್ನ ದೌರ್ಬಲ್ಯಕ್ಕಾಗಿ ತನ್ನನ್ನೇ ಹೀಯಾಳಿಸಿಕೊಳ್ಳುವ ರೊಚ್ಚು, ಮುಂತಾದ ಭಾವನೆಗಳೆಲ್ಲ ಪೆಟ್ರಾರ್ಕನ ಸಾನೆಟ್ಟುಗಳಲ್ಲಿ ಪ್ರತೀಕಗೊಂಡಿವೆ. ಈ ಭಾವಗಳು ಎಲ್ಲರ ಹೃದಯದಲ್ಲಿಯೂ ಪ್ರತಿಧ್ವನಿಗೊಳ್ಳುವಂತಹ ಸಹಜಭಾವಗಳು. ಆಕೆಯ ಸಾವಿನ ನಂತರ ಕೂಡ ಈ ರೀತಿಯ ಭಾವ ಅಲ್ಲಲ್ಲಿ ಇಣುಕುತ್ತದೆ. ಆದರೆ ಸಾವಿನ ನಂತರ ಬರೆದ ಸಾನೆಟ್ಟುಗಳಲ್ಲಿ ಒಂದು ದೈವಿಕ ಭಾವನೆ ಕಾಣಿಸಿಕೊಳ್ಳುತ್ತದೆ. ಆಕೆ ಒಬ್ಬ ದೇವತೆಯೆನ್ನುವ ಭಾವನೆ ತಲೆದೋರುತ್ತದೆ. ಪೆಟ್ರಾರ್ಕನ ಸಾನೆಟ್ಟುಗಳಲ್ಲಿ ಕಾಣಿಸಿಕೊಂಡ ಭಾವನೆಗಳು, ವಿಚಾರಗಳು ಸಾಮಾನ್ಯವಾಗಿ ಎಲ್ಲ ಜನರಿಗೂ ಸಹಜವಾಗಿಯೇ ಬರುವ ಭಾವನೆಗಳು. ಅಲ್ಲದೆ ದಾಂತೆಯಾದ ಮೇಲೆ ಇಟಾಲಿಯನ್ ಭಾಷೆ ಬಹುಬೇಗನೆ ಬೆಳೆದಿತ್ತು. ತನ್ನ ಗೀತ ಪ್ರತಿಭೆಯನ್ನು ಪೆಟ್ರಾರ್ಕ್ ಬಹಳ ಕಲಾತ್ಮಕವಾಗಿ ಸಾನೆಟ್ಟುಗಳಲ್ಲಿ ಹರಿಯಿಸಿದ್ದಾನೆ. ಇದರಿಂದ ದಾಂತೆಗಿಂತಲೂ ಪೆಟ್ರಾರ್ಕನ ಪ್ರಭಾವ ಮುಂದಿನ ಕವಿಗಳ ಮೇಲೆ ಹೆಚ್ಚಾಯಿತೆಂದು ಹೇಳಬಹುದು. ೧೩೭೪ ರಲ್ಲಿ ತೀರಿಕೊಂಡ ಪೆಟ್ರಾರ್ಕನ ಪ್ರಭಾವ ಎಷ್ಟು ತೀವ್ರವಾಗಿ, ಆಳವಾಗಿತ್ತೆಂದರೆ, ಈತ ಸತ್ತ ಹತ್ತುವರ್ಷದೊಳಗಾಗಿಯೇ ೧೩೮೪ ರಲ್ಲಿ ಛಾಸರ್ ಎಂಬ ಇಂಗ್ಲಿಷ್ ಕವಿ ತನ್ನ ಟ್ರಾಯಿಲಸ್ ಮತ್ತು ಕ್ರೈಸಿಡೆ (Troilus and Criseyde. Book I 400-420) ಯಲ್ಲಿ ಈತನ ಒಂದು ಸಾನೆಟ್ಟನ್ನು ೨೧ ಸಾಲಿನ ಗೀತವನ್ನಾಗಿ ಅನುವಾದಿಸಿ ಸೇರಿಸಿದ್ದ. ಯೂರೋಪಿನ ಎಲ್ಲ ಸಾನೆಟ್ ಸಾಹಿತ್ಯವೂ ಪೆಟ್ರಾರ್ಕನ ಪ್ರಭಾವದಿಂದಲೇ ಬೆಳೆದುದೆಂದು ಧಾರಾಳವಾಗಿ ಹೇಳಬಹುದು. ಇಂಗ್ಲೆಂಡಿನ ವಿದ್ವಾಂಸರು, ಕವಿಗಳು ಪೆಟ್ರಾರ್ಕನ ಸಾನೆಟ್ಟುಗಳನ್ನು ಮೂಲದಲ್ಲಿಯೇ ಓದಿರಬೇಕು. ಅದರ ಮೊದಲ ಅನುವಾದ ಇಂಗ್ಲಿಷಿನಲ್ಲಿ ಬಂದುದು ೧೬ ನೆಯ ಶತಮಾನದ ಆದಿಭಾಗದಲ್ಲಿ.

೧೫೫೭ ರಲ್ಲಿ ಇಂಗ್ಲೆಂಡಿನಲ್ಲಿ ರಿಚರ್ಡ್ ಟೋಟೆಲ್ (Richard Tottel) ಎಂಬಾತ ಹಲವಾರು ಕವಿಗಳ ಪದ್ಯಗಳನ್ನು ಸಂಪಾದಿಸಿ ಹಾಡುಗಳು ಮತ್ತು ಸಾನೆಟ್ಟುಗಳು (Songes and Sonnettes) ಎಂಬ ಹೆಸರಿನಲ್ಲಿ ಪ್ರಕಟಿಸಿದ. ಈ ಪುಸ್ತಕದಲ್ಲಿ ಹಲವಾರು ಅಜ್ಞಾತ ಕವಿಗಳ ಹಾಡುಗಳ ಜತೆಗೆ ಇಂಗ್ಲೆಂಡಿನಲ್ಲಿ ಸಾನೆಟ್ ಸಾಹಿತ್ಯವನ್ನು ಸೃಷ್ಟಿಸಿದ, ಇಟಲಿಯ ಸಾಹಿತ್ಯದಿಂದ ಇಂಗ್ಲೆಂಡಿಗೆ ಸಾನೆಟ್ ರೂಪವನ್ನು ಮನೆಯೊಪ್ಪಿಸಿ ತಂದ ಇಬ್ಬರು ಹಿರಿಯ ಬರಹಗಾರರು–ವೈಯಟ್ ಮತ್ತು ಸರ್ರೆ ಇವರ ಸಾನೆಟ್ಟುಗಳೂ ಮೊದಲಬಾರಿಗೆ ಪ್ರಕಟವಾದುವು. ಟೋಟೆಲನ

ಪುಸ್ತಕ ಬರುವ ವೇಳೆಗೆ ವೈಯಟ್ ಸತ್ತು ೧೫ ವರ್ಷವಾಗಿತ್ತು. ಸರ್ರೆ ತೀರಿಕೊಂಡಾಗಲೇ ೧೦ ವರ್ಷವಾಗಿತ್ತು. ಇವರಿಬ್ಬರೂ ರಾಜಕೀಯದಲ್ಲಿ ಸೇರಿದ್ದವರು. ಸರ್ ಥಾಮಸ್ ವೈಯಟ್ (Sir Thomas Wyatt) ತನ್ನ ೨೩ ನೆಯ ವರ್ಷದಲ್ಲಿ (೧೫೨೬ ರಲ್ಲಿ) ಫ್ರಾನ್ಸಿಗೂ, ೧೫೨೭ ರಲ್ಲಿ, ಎಂದರೆ ಮಾರನೆಯ ವರ್ಷವೇ ರೋಮಿನಲ್ಲಿ ಪೋಪಿನ ಸಭೆಗೂ ರಾಜಪ್ರತಿನಿಧಿಯಾಗಿ ಹೋಗಿದ್ದ. ಅನಂತರ ಇಟಲಿಯನ್ನೆಲ್ಲಾ ಸುತ್ತಾಡಿದ. ೧೫೩೯ ರತನಕ ಮತ್ತೆ ಫ್ರಾನ್ಸಿನಲ್ಲಿ ರಾಯಭಾರಿಯ ಕೆಲಸದಲ್ಲಿ ನಿರತನಾಗಿದ್ದ. ಈತನ ಮೇಲೆ ಇಟಲಿ ಮತ್ತು ಫ್ರಾನ್ಸಿನ ಕವಿಗಳ ಪ್ರಭಾವ ಪ್ರಬಲವಾಗಿಯೇ ಇತ್ತು. ಫ್ರೆಂಚ್‌ಕವಿ ಮೆಲ್ಲಿನ್ ದ ಸೇಂತ್-ಗೆಲಾಯ್ (Mellin de Saint-Gelais) ಈತನಿಗೆ ಕಾವ್ಯ ಪ್ರಚೋದಕನಾದವನು. ಎಂಟನೆಯ ಹೆನ್ರಿಯ ಆಸ್ಥಾನದಲ್ಲಿ ವೈಯಟ್ ಒಬ್ಬ ಪ್ರಮುಖ ವ್ಯಕ್ತಿಯಾಗಿದ್ದ. ಹೆನ್ರಿಯ ಒಲವು ದ್ವೇಷಗಳಿಗನುಗುಣವಾಗಿ ವೈಯಟ್ಟನಿಗೂ ಏರು ಬೀಳುಗಳಾಯಿತು. ಸೆರೆಮನೆಯಲ್ಲಿ ಕೊಂಚಕಾಲ, ಅನಂತರ ಸ್ಪೇನಿನಲ್ಲಿ ರಾಯಭಾರಿ ಪದವಿ, ಮತ್ತೆ ಸೆರೆಮನೆ, ಹೀಗಿತ್ತು ಈತನ ಜೀವನ. ಈತ ತನ್ನ ೩೯ ನೆಯ ವರ್ಷದಲ್ಲಿಯೇ ತೀರಿಕೊಂಡ, ೧೫೪೨ ರಲ್ಲಿ—ಇಂಗ್ಲಿಷ್ ಸಾಹಿತ್ಯಕ್ಕೆ ಪೆಟ್ರಾರ್ಕನ ಸಾನೆಟ್ಟುಗಳನ್ನು ತಂದ ಕೀರ್ತಿ ವೈಯಟ್ಟನದು.

ವೈಯಟ್ಟನ ಸಮಕಾಲೀನನೇ ಸರ್ರೆ. ಹೋವರ್ಡ್, ಅರ್ಲ್ ಆಫ್ ಸರ್ರೆ (Howard, Earl of Surrey) ೧೫೧೭ ರಿಂದ ೧೫೪೭ ರವರೆಗೆ ಬದುಕಿದ್ದ ಕವಿ. ಈತನೂ ವೈಯಟ್ಟನಂತೆಯೇ ಸಾನೆಟ್ಟುಗಳನ್ನು ಬರೆದ. ಹೆನ್ರಿಯ ಆಸ್ಥಾನದಲ್ಲಿದ್ದ ಸರ್ರೆಗೂ ಏರು ಬೀಳುಗಳಿದ್ದುವು. ವೈಯಟ್ಟನಂತೆಯೇ ಸೆರೆಮನೆಯಲ್ಲಿ ಕೆಲವು ದಿನ, ಅನಂತರ ಅರಮನೆಯ ಊಳಿಗ ಕೆಲವು ದಿನ ಈತನಿಗೂ ಲಭಿಸಿತು. ಸಾನೆಟ್ ಬರೆಯುವ ವಿಷಯದಲ್ಲಿ ಈತ ವೈಯಟ್ಟನ ಶಿಷ್ಯ. ಆದರೆ ಕಲೆಯಲ್ಲಿ ಈತ ತನ್ನ ಗುರುವನ್ನು ಮೀರಿಸಿದ. ವೈಯಟ್ಟನ ಸಾನೆಟ್ಟುಗಳಿಗಿಂತ ಸರ್ರೆಯ ಸಾನೆಟ್ಟುಗಳಲ್ಲಿ ನಯವಿದೆ. ಸಂಸ್ಕಾರವೂ ಕಾಣುತ್ತದೆ. ಈತನ ಕಾವ್ಯದಲ್ಲಿ ದುಃಖ, ಕರುಣೆಗಳೇ ಪ್ರಧಾನ. ಇವನ ಸಾನೆಟ್ಟುಗಳಲ್ಲಿ ವ್ಯಕ್ತಿಯ ಪ್ರೇಮದ ಜತೆಗೆ ನಿಸರ್ಗದ ಚೆಲುವು ಹಾಸುಹೊಕ್ಕಾಗಿ ಬಂದು ಮೆರುಗುಕೊಡುತ್ತದೆ. ವೈಯಟ್ ಪೆಟ್ರಾರ್ಕನ ಸಾನೆಟ್ ರೂಪವನ್ನು ಇಂಗ್ಲಿಷಿಗೆ ತಂದುಕೊಟ್ಟ. ಸರ್ರೆ ಅದನ್ನು ಇಂಗ್ಲಿಷ್ ಕಾವ್ಯ ಪ್ರತಿಭೆಗೆ ಅಳವಡಿಸಿ ರೂಪಾಂತರಿಸಿದ. ಇವರಿಬ್ಬರೂ ಒಂದೊಂದು ಪದ್ಧತಿಯ ಸಾನೆಟ್ಟುಗಳಿಗೆ ಮೂಲಪುರುಷರಾದರು.

## ೨

ವೈಯಟ್ ಮತ್ತು ಸರ್ರೆ ಇವರಿಬ್ಬರೂ ಬೇರೆ ಬೇರೆ ಪದ್ಧತಿಯಲ್ಲಿ ಸಾನೆಟ್ಟುಗಳನ್ನು ಬರೆದರು. ವೈಯಟ್ ಮೊದಲಿಂದ ಕೊನೆಯತನಕ ಪೆಟ್ರಾರ್ಕನನ್ನೇ ಅನುಸರಿಸಿದುದರಿಂದ ಆತನ ಪದ್ಧತಿ ಪೆಟ್ರಾರ್ಕನ್ ಸಾನೆಟ್ ಎಂದು ಹೆಸರಾಗಿದೆ. ಸರ್ರೆ ಮಾತ್ರ ಅದನ್ನು ಮಾರ್ಪಡಿಸಿಕೊಂಡ. ಪೆಟ್ರಾರ್ಕನ್ ರೂಪದ ಗಡಸುತನ,

ಅತಿಬಿಗಿಯನ್ನು ಬಿಟ್ಟು ಇಂಗ್ಲಿಷ್ ಭಾಷೆಗೆ ಅನುಗುಣವಾದ ಹೊಸದೊಂದು ಪದ್ಧತಿಯನ್ನು ನಿರ್ಮಿಸಿದ. ಈ ಸರ್‍ರೆಯ ಪದ್ಧತಿಯನ್ನನುಸರಿಸಿ ತನ್ನ ಅಮೋಘ ಸಾನೆಟ್ಟುಗಳನ್ನು ಬರೆದವನು ಮಹಾಕವಿ ಷೇಕ್ಸ್‌ಪಿಯರ್. ಅಂತೆಯೇ ಸರ್‍ರೆ ಸೃಜಿಸಿದ ಈ ರೂಪಕ್ಕೆ ಷೇಕ್ಸ್‌ಪೀರಿಯನ್ ಸಾನೆಟ್(Shakespearian Sonnet)ರೂಪವೆಂದು ಹೆಸರಾಗಿದೆ. ವೈಯಟ್ಟನದು ಆತನನುಸರಿಸಿದ ಗುರುವಿನ ಹೆಸರಿನಲ್ಲಿ ಪ್ರಸಿದ್ಧಿಯಾಯಿತು(Petrarchan). ಸರ್‍ರೆಯದು ಆತನನ್ನು ಅನುಸರಿಸಿದ ಶಿಷ್ಯ ಷೇಕ್ಸ್‌ಪಿಯರನ ಹೆಸರಿನಿಂದ ಪ್ರಸಿದ್ಧಿಯಾಯಿತು. ಈ ಎರಡು ಪದ್ಧತಿಗಳನ್ನು ವಿವೇಚಿಸಬೇಕಾದರೆ, ಅವುಗಳಿಗೆ ಇರುವ ಮುಖ್ಯ ವ್ಯತ್ಯಾಸಗಳನ್ನು ತಿಳಿಯಬೇಕಾದರೆ ನಾವು ಇವುಗಳ ಛಂದಸ್ಸು, ಲಯ, ಗಣಗಳು ಮತ್ತು ಪ್ರಾಸ ಇವನ್ನು ತಿಳಿಯುವುದು ಅವಶ್ಯಕ.

ಕಾವ್ಯದಲ್ಲಿನ ವಸ್ತು ಯಾವುದೋ ಒಂದು ಅನುಭವ, ಕತೆ ಅಥವಾ ವಿಚಾರ–ಇದು ಭಾವನಾಪೂರ್ಣವಾಗಿ, ಭಾವಾಂಶದಿಂದ ಪರಿವೃತವಾಗಿರುತ್ತದೆ. ಈ ಭಾವಾಂಶ, ಕಾವ್ಯದೊಳಗಿನ ಉದ್ವೇಗ ನಮಗೆ ಅದರ ಛಂದಸ್ಸಿನಿಂದಲೂ ಕಾಣಿಸಿಕೊಳ್ಳುತ್ತದೆ. ಅದರ ವಿಚಾರಶೀಲತೆ ಅದರಲ್ಲಿ ಬರುವ ಪದಗಳಿಂದ ಕಾಣಿಸಿಕೊಳ್ಳುತ್ತದೆ. ಆದರೆ ಈ ಪದಗಳಿಗೂ ಛಂದಸ್ಸಿಗೂ ಒಂದು ನಿಕಟವಾದ, ನೇರವಾದ ಸಂಬಂಧವಿದೆ. ಪದಗಳಲ್ಲಿ ಬರುವ ನಾದ (Sound)ಗಳಿಂದಲೂ ಛಂದಸ್ಸಿನ ಕೆಲಸವಾದ ಭಾವಪ್ರಕಾಶನಕ್ಕೆ ಸಹಾಯವೊದಗುತ್ತದೆ. ಕಾವ್ಯಕ್ಕೂ ಛಂದಸ್ಸಿಗೂ ಮೊದಲಿನಿಂದಲೂ ಗಂಟಿರುವುದು ಇದರಿಂದಲೇ. ಭಾವಾವೇಶ ಬಂದಾಗ ಆಡುವ ಮಾತಿಗೆ ಒಂದು ರೀತಿಯ ಲಯಬದ್ಧತೆ(Rhythm) ಇದ್ದೇ ಇರುತ್ತದೆ. ಅತಿದುಃಖ, ಉದ್ವಿಗ್ನತೆ ಅಥವಾ ಸಂತೋಷವಾದಾಗ ಮೈ ಕುಲುಕು, ನಡೆ, ಅಂಗಾಂಗ ವಿನ್ಯಾಸಗಳಲ್ಲಿ ಒಂದು ಕ್ರಮಬದ್ಧತೆ ಬಂದು ಬಿಡುತ್ತದೆ. ಇದನ್ನು ನಾವು ಲಯ (Rhythm) ವೆಂದು ಕರೆಯಬಹುದು. ಶ್ರೀ ತೀ. ನಂ. ಶ್ರೀಕಂಠಯ್ಯನವರು ಹೇಳಿರುವಂತೆ "ನಿಯತವಾದ ಕಾಲದ ಅಂತರದಲ್ಲಿ ತಾಳಗಳು ಆವರ್ತನೆಯಾಗುವುದಕ್ಕೆ 'ಲಯ' ಎಂದು ಹೆಸರು. 'ಲಯ'ದ ಅರ್ಥವನ್ನು ಇನ್ನಷ್ಟು ಹಿಗ್ಗಲಿಸಿ, ಸದೃಶಕ್ರಿಯೆಗಳ ಪರಂಪರೆಯಲ್ಲಿ ನಿಯಮಬದ್ಧತೆ ಗೋಚರವಾದಾಗಲೆಲ್ಲ ಅದು ನಿಷ್ಪನ್ನವಾಗುವುದೆಂದು ಹೇಳಬಹುದು. ಈ ದೃಷ್ಟಿಯಿಂದ ನೋಡಿದರೆ, ಮಾನವನ ಒಟ್ಟು ಜೀವನಕ್ಕೇ ಲಯವು ಮೂಲಸೂತ್ರ" ('ಸಂಭಾವನೆ'ಯಲ್ಲಿ ಹೊಸ ಛಂದಸ್ಸಿನ ಲಯಗಳು–ಲೇಖನ; ಪುಟ. ೫೯) ಈ ಕ್ರಮಬದ್ಧತಾಳ ಕಾವ್ಯಕ್ಕೆ ಇದ್ದೇ ತೀರುತ್ತದೆ. ಆದ್ದರಿಂದ ಕಾವ್ಯಕ್ಕೆ ಲಯವೇ ಆಧಾರವೆಂದು ಬೇಕಾದರೂ ಹೇಳಬಹುದು. ಎಷ್ಟೋ ಬಾರಿ ಈ ಲಯದಿಂದ—ಸೈನ್ಯದಲ್ಲಿ ತುತೂರಿ ತಮಟೆ, ಕೊಂಬು ಕಹಳೆ–ನಗಾರಿಗಳಿಂದ ಉತ್ತೇಜಿಸುವ ರೋಷ, ಕೆಚ್ಚಿನಂತೆ—ಭಾವಾವೇಶ ಕೂಡ ಪ್ರಚೋದಿಸಬಹುದೆಂದಮೇಲೆ ಲಯದ ಪ್ರಾಮುಖ್ಯತೆ ಎಷ್ಟೆಂದು ನಾವು ತಿಳಿಯಬಹುದು.

ವೈಯಟ್ ಮತ್ತು ಸರ್ರೆ ಸಾನೆಟ್ಟಿನಲ್ಲಿ ಉಪಯೋಗಿಸಿಕೊಂಡುದು ಹತ್ತು ಉಚ್ಚಾರಾಂಶಗಳನ್ನುಳ್ಳ (Syllable) ಅಯಾಂಬಿಕ್ ಛಂದಸ್ಸನ್ನು. ಪೆಟ್ರಾರ್ಕ್ ಮತ್ತು ದಾಂತೆ ಇವರು ಬರೆದ ಸಾನೆಟ್ಟುಗಳಲ್ಲಿ ಹನ್ನೊಂದು ಉಚ್ಚಾರಾಂಶಗಳಿರುತ್ತಿದ್ದುವು. ಆದರೆ ಇದು ಇಂಗ್ಲಿಷ್ ಕಾವ್ಯ ಪ್ರತಿಭೆಗೆ ಸರಿಹೋಗದೆಂದು ಮನಗಂಡ ವೈಯಟ್ ಹತ್ತು ಉಚ್ಚಾರಾಂಶದ ಪಾದಗಳನ್ನು ಉಪಯೋಗಿಸಿದ. ವೈಯಟ್ ಪೆಟ್ರಾರ್ಕನಿಂದ ಬರಿಯ ಸಾನೆಟ್‌ರೂಪವನ್ನಷ್ಟೇ ಅಲ್ಲದೆ, ಸಾನೆಟ್ಟುಗಳ ವಸ್ತುಗಳನ್ನು ಎರವಲು ತಂದು ಬರೆದುದರಿಂದ ಅವನ ಸಾನೆಟ್ಟುಗಳು ಜೀವ ತುಂಬಿಕೊಂಡಂತೆ ಕಾಣುವುದಿಲ್ಲ. ಅವುಗಳಲ್ಲಿ ಅಷ್ಟೇನೂ ಸಾರವಿಲ್ಲದೆ ಹೋಗಲು ಕಾರಣ ಈ ಎರವಲು ಭಾವಗಳು. ಆದರೂ ವೈಯಟ್ ಒಂದೆರಡು ಸುಮಾರಾದ ಸಾನೆಟ್ಟುಗಳನ್ನು ಬರೆದಿದಾನೆ. ಅಲ್ಲದೆ ಈತ ಹೊಸ ರೂಪವನ್ನು ಇಂಗ್ಲಿಷಿಗೆ ತಂದ ಕೀರ್ತಿ ಪಡೆದಿದಾನೆ.

ಈ ಹತ್ತು ಉಚ್ಚಾರಾಂಶಗಳ ಹದಿನಾಲ್ಕು ಸಾಲಿನ ಕವಿತೆಯೇ ಸಾನೆಟ್. ಪೆಟ್ರಾರ್ಕನಲ್ಲಿ ಇದರಲ್ಲಿ ಎರಡು ಭಾಗಗಳಿರುತ್ತಿದ್ದುವು. ಮೊದಲನೆಯ ಎಂಟು ಒಂದು ಚರಣ (Stanza), ಎರಡನೆಯ ಆರು ಇನ್ನೊಂದು ಚರಣವಾಗುತ್ತಿತ್ತು. ದೊಡ್ಡದೊಂದು ಪದ್ಯದಲ್ಲಿ ಈ ಚರಣಗಳು ಬರುವುದು, ಒಂದು ಭಾವಾಂಶ ಆ ಭಾಗದಲ್ಲಿ ಅಡಕವಾಗಿದೆ; ಅದಕ್ಕೆ ಸಂಬಂಧಪಟ್ಟು ಕೂಡಿಕೊಂಡರೂ ಕೊಂಚ ಭಿನ್ನವಾದ, ರೂಪ ಬೇರೆಯಾದ ಭಾವಾಂಶ ಹಿಂದಿನ ಅಥವಾ ಮುಂದಿನ ಚರಣದಲ್ಲಿದೆ ಎಂದು ಸೂಚಿಸಲು. ಅಂದರೆ ಪ್ರತಿ ಚರಣವೂ [Stanza] ಕಾವ್ಯದ ಒಂದು ಭಾಗ, ಅದರಲ್ಲಿ ಒಂದು ಭಾವವೋ, ವಿಚಾರಾಂಶವೋ ಅಡಕವಾಗಿದೆ. ಪೆಟ್ರಾರ್ಕನ ಸಾನೆಟ್ಟಿನಲ್ಲಿ, ದಾಂತೆಯ ಸಾನೆಟ್ಟಿನಲ್ಲಿ ಈ ರೀತಿಯಲ್ಲಿ ಎರಡು ಚರಣಗಳಿವೆಯೆಂದು ಹೇಳಬಹುದು. ಮೊದಲ ಎಂಟು ಸಾಲು ಅಷ್ಟಪದಿ [octave], ಅನಂತರ ಬರುವ ಆರು ಸಾಲು [Sestet] ಷಟ್ಪದಿ. [ನಮ್ಮ ಷಟ್ಪದಿಗೂ ಇದಕ್ಕೂ ಯಾವ ಸಂಬಂಧವೂ ಇಲ್ಲ]. ಆದರೆ ಈ ಹದಿನಾಲ್ಕು ಸಾಲುಗಳೆಲ್ಲವೂ ಸೇರಿ ಒಂದೇ ಕವಿತೆಯಾಗಿ, ಒಂದೇ ವಿಚಾರವನ್ನು, ಒಂದೇ ಚಿಂತನವನ್ನು, ಒಂದೇ ಭಾವವನ್ನು ಒಳಗೊಂಡಿರಬೇಕು. ಅವುಗಳ ಮೂಡಿಕೆ ಒಂದೇ ಆಗಿರಬೇಕೆಂಬ ನಿಯಮವೂ ಇತ್ತು.

ಈ ಮೊದಲನೆಯ ಎಂಟು ಸಾಲಿಗೂ ಕೊನೆಯ ಆರು ಸಾಲಿಗೂ ನಡುವೆ ಕೊಂಚ ಬಿಡುವು [Pause] ಇದೆ. ಆದರೆ ವಿಚಾರ ಧಾರೆಯಲ್ಲಿ ನಿಕಟವಾದ ಸಂಬಂಧವಿದೆ. ಒಂದು ಉದಾಹರಣೆಯನ್ನು ತೆಗೆದುಕೊಂಡರೆ ಈ ಮಾತು ವಿಶದವಾಗುತ್ತದೆ. ಇಂಗ್ಲಿಷ್ ಕಾವ್ಯದಲ್ಲೆಲ್ಲಾ ಅತ್ಯಂತ ಅಮೋಘವಾದ ರತ್ನ ಈ ಸಾನೆಟ್. ಜಾನ್ ಕೀಟ್ಸ್ ಬರೆದುದು. ಅದನ್ನು ಪೂರ್ತಿಯಾಗಿ ಓದಿದರೆ ಆಗ ನಮಗೆ ಈ ವಿಭಜನೆ ಸ್ಪಷ್ಟವಾಗುತ್ತದೆ.

> Bright Star! would I were steadfast as thou art—
> Not in lone splendour hung aloft the night,

And watching, with eternal lids apart,
Like Nature's patient sleepless Eremite,
The moving waters at their priestlike task
Of pure ablution round Earth's human shores,
Or gazing on the new soft-fallen mask
Of snow, upon the mountains and the moors :—

No, yet still steadfast, still unchangeable,
Pillowed upon my fair Love's ripening breast,
To feel forever its soft fall and swell,
Awake forever in a sweet unrest;
Still, still to hear her tender-taken breath,
And so live ever,—or else swoon to death.

—*John Keats.*
(1795–1821)

ಇಲ್ಲಿನ ಮೊದಲೆಂಟು ಸಾಲಿನಲ್ಲಿ ಮಿನುಗುವ ನಕ್ಷತ್ರವನ್ನು ಬಣ್ಣಿಸಿ, ನಿನ್ನಂತೆ ನಾನೂ ದೃಢನಾಗಿದ್ದಿದ್ದರೆ ಎಂಬ ಭಾವನೆ ಬರುತ್ತದೆ. ಕೊನೆಯ ಸಾಲುಗಳಲ್ಲಿ ಉಹುಂ, ನಿನ್ನಂತಲ್ಲ, ಆದರೆ ದೃಢವಾಗಿ, ನನ್ನ ಪ್ರೇಯಸಿಯ ಎದೆಗೊರಗಿಕೊಂಡು, ಆಕೆ ಉಸಿರಾಡುವುದರ ನಸುಧ್ವನಿಯ ಏರಿಳಿತದಲ್ಲಿ ಹಾಯಾಗಿ ಎಂದೆಂದಿಗೂ ಅಚಲವಾಗಿರುವೆ—ಇಲ್ಲವೇ ಸಾವಿಗೆ ಸಾಗುವೆ ಎನ್ನುತ್ತಾನೆ ಕವಿ. ಮೊದಲೆಂಟು ಸಾಲಿನಲ್ಲಿ ನಕ್ಷತ್ರದ ಬಣ್ಣನೆ ಎರಡರಿಯದಂತಹುದು. ಅನಂತರ ಬರುವ ಆರು ಸಾಲಿಗೂ ಇದಕ್ಕೂ ಭಾವಕ್ಕೆ ಕೊಂಚ ಬಿಡುವು ದೊರೆತಿದೆ. ತಕ್ಷಣವೇ ತನ್ನ ಪ್ರಿಯೆಯ ಬಗ್ಗೆ ಮಾತು—ನಕ್ಷತ್ರದ ಅಚಲತೆಗೂ ತನ್ನ ಪ್ರೇಮೋಚ್ಛ್ರಯ ಅಚಲತೆಗೂ ಕೂಡಿಕೆ, ಇವು ಕಾಣಬರುತ್ತವೆ. ಹೀಗೆ ಮೊದಲೆಂಟು ಸಾಲಿಗೂ, ಕೊನೆಯ ಆರು ಸಾಲಿಗೂ ವಿಭಜನೆಯಾಗುವುದು ಪೆಟ್ರಾರ್ಕನ್ ಸಾನೆಟ್ಟಿನ ಪದ್ಧತಿ. ಈ ಒಂದು ಮಾತಿಗೆ ಮಾತ್ರ ಮೇಲಿನ ಕವಿತೆ ಉದಾಹರಣೆ. ಎಲ್ಲ ವಿಷಯಗಳಲ್ಲೂ ಇದು ಆ ಪದ್ಧತಿಗೆ ಸೇರಿದುದಲ್ಲ.

ಇದಲ್ಲದೆ ಈ ಪೆಟ್ರಾರ್ಕನ್ ಸಾನೆಟ್ಟಿನ ಮತ್ತೊಂದು ವೈಶಿಷ್ಟ್ಯ ಅದರ ಪ್ರಾಸ ರಚನೆ. ಸಾಲುಗಳ ಕೊನೆಯ ಉಚ್ಚಾರಾಂಶಗಳು ಒಂದೇ ಆದರೆ, ಅಥವಾ ಒಂದೇ ಬಗೆಯ ಉಚ್ಚಾರವುಳ್ಳವುಗಳಾದರೆ ಅದಕ್ಕೆ ಅಂತ್ಯಪ್ರಾಸವೆಂದು ಹೆಸರು. ಇಂಗ್ಲಿಷ್ ಮತ್ತು ಪಾಶ್ಚಾತ್ಯ ಕಾವ್ಯಗಳಲ್ಲಿ ಆದಿಪ್ರಾಸವಿಲ್ಲ. ಸಾನೆಟ್ಟಿನಲ್ಲಿ ಈ ಪ್ರಾಸರಚನೆ ಯಾವ ರೀತಿಯಿರುವುದೆಂದು ನೋಡೋಣ. ಪೆಟ್ರಾರ್ಕ್ ಮತ್ತು ದಾಂತೆ ಇವರ ಸಾನೆಟ್ಟುಗಳ ಪ್ರಾಸರಚನೆ ಕೇವಲ ಐದು ಪ್ರಾಸಗಳಿಂದ ಕೂಡಿತ್ತು. ಮೊದಲನೆಯ ಎಂಟು ಸಾಲಿನಲ್ಲಿ ಒಂದು, ನಾಲ್ಕು, ಐದು, ಎಂಟು ಈ ನಾಲ್ಕು ಸಾಲುಗಳಿಗೆ ಒಂದು

ಪ್ರಾಸ. ಎರಡು, ಮೂರು, ಐದು, ಆರು—ಈ ನಾಲ್ಕು ಸಾಲಿನಲ್ಲಿ ಮತ್ತೊಂದು ಪ್ರಾಸವಿರುತ್ತಿತ್ತು. ಕೊನೆಯ ಆರು ಸಾಲಿನಲ್ಲಿ ಒಂಭತ್ತು, ಹನ್ನೆರಡು ಒಂದು ಪ್ರಾಸ, ಹತ್ತು, ಹದಿಮೂರಕ್ಕೆ ಮತ್ತೊಂದು ಪ್ರಾಸ, ಮತ್ತು ಹನ್ನೊಂದು, ಹದಿನಾಲ್ಕಕ್ಕೆ ಇನ್ನೊಂದು ಪ್ರಾಸವಿರುತ್ತಿತ್ತು. ಇದಕ್ಕೆ ದಾಂತೆಯದೇ ಒಂದು ಸಾನೆಟ್ಟನ್ನು ನಾವು ಉದಾಹರಣೆಯಾಗಿ ತೆಗೆದುಕೊಂಡು ನೋಡಬಹುದು ದಾಂತೆ ತನ್ನ ಸ್ನೇಹಿತ ಚಿನೋ ದ ಪಿಸ್ತೋಯ [Cino da Pistoia] ನಿಗೆ ತಾನು ದೇಶಭ್ರಷ್ಟನಾಗಿದ್ದಾಗ ಬರೆದ ಸಾನೆಟ್ಟು ಇದು. ಇದನ್ನು ಇಂಗ್ಲಿಷ್ ಕವಿ ರೊಸೆಟ್ಟಿ [D. G. Rossetti 1828-82] ಅನುವಾದಿಸಿದಾನೆ.

## WRITTEN IN EXILE

| | | |
|---|---|---|
| 1 | Because I find not whom to speak withal | —ಸ |
| 2 | Anent that lord whose I am as thou art, | —ರಿ |
| 3 | Behoves that in thine ear I tell some part, | —ರಿ |
| 4 | Of this whereof I gladly would say all | —ಸ |
| 5 | And deem thou nothing else occasional | —ಸ |
| 6 | Of my long silence while I kept apart, | —ರಿ |
| 7 | Except this place, so guilty at the heart | —ರಿ |
| 8 | That the right has not who will give it stall | --ಸ |
| 9 | Love comes not here to any woman's face, | —ಗ |
| 10 | Nor any man here for his sake will sigh | —ಮ |
| 11 | For unto such, 'thou fool!' were straighway said | —ಪ |
| 12 | Ah! Master Cino, how the time turns base | —ಗ |
| 13 | And mocks at us, and on our rhymes say 'Fie!' | —ಮ |
| 14 | Since truth has been thus thinly harvested. | —ಪ |

ಇಲ್ಲಿ ಎಲ್ಲ ಸಾಲಿನ ಪಕ್ಕದಲ್ಲಿ ಪ್ರಾಸಗಳಿಗೆ 'ಸರಿಗಮ' ಸಂಕೇತಗಳನ್ನುಪಯೋಗಿಸಿದರೆ ಆಗ ನಮಗೆ ಪ್ರಾಸವಿನ್ಯಾಸ ಅರಿವಾಗುತ್ತದೆ.

| | |
|---|---|
| ೧ ನೆಯ ಪಾದದ ಕೊನೆಯ ಉಚ್ಚಾರಾಂಶ | ವಿತ್ ಅಲ್ |
| ೪ ನೆಯ ಪಾದದ ಕೊನೆಯ ಉಚ್ಚಾರಾಂಶ | ಅಲ್ |
| ೫ ನೆಯ ಪಾದದ ಕೊನೆಯ ಉಚ್ಚಾರಾಂಶ | ಅಕೇಶನ್ ಅಲ್ |
| ೮ ನೆಯ ಪಾದದ ಕೊನೆಯ ಉಚ್ಚಾರಾಂಶ | ಸ್ಟಾಲ್ |

ಈ ನಾಲ್ಕು ಪಾದಗಳಿಗೂ ಕೊನೆಯ ಉಚ್ಚಾರಾಂಶ ಒಂದೇ ಆದ್ದರಿಂದ ಈ ನಾಲ್ಕೂ ಏಕ ಪ್ರಾಸವನ್ನು ಪಡೆದಿವೆ. ಹಾಗೆಯೇ ೨ ನೆಯ ಸಾಲು **ಆರ್ಟ್**, ೩ ನೆಯ ಸಾಲು **ಪಾರ್ಟ್**, ೬ ನೆಯ ಸಾಲು **ಅಪಾರ್ಟ್**, ೭ ನೆಯ ಸಾಲು **ಹಾರ್ಟ್**—ಕೊನೆಯ ಉಚ್ಚಾರಾಂಶದಲ್ಲಿ ಏಕಪ್ರಾಸ ಹೊಂದಿವೆ. ಈ ಎಂಟು ಸಾಲುಗಳ ಪ್ರಾಸ

ವಿನ್ಯಾಸಗಳನ್ನು 'ಸ,ರಿ' ಸಂಕೇತದಲ್ಲಿ ಬರೆದರೆ ಈ ರೀತಿಯಾಗುತ್ತದೆ........... 'ಸ ರಿ ರಿ ಸ ಸ ರಿ ರಿ ಸ.' ಇಲ್ಲಿನ ಪ್ರಾಸ ರೀತಿಯಲ್ಲಿ ಎರಡು 'ಸ' ಗಳ ಮಧ್ಯೆ ಎರಡು 'ರಿ' ಗಳು ಬರುವುದು ಕಾಣುತ್ತದೆ. ಎಂದರೆ ಎರಡು 'ರಿ' ಗಳು ಎರಡು 'ಸ' ಗಳ ನಡುವೆ ಬಂಧಿತವಾಗಿವೆ. ಇದನ್ನು ಬದ್ಧಪ್ರಾಸವೆಂದು ಕರೆಯಬಹುದು. (Enclosed Rhyme) ಸಾಧಾರಣವಾಗಿ ಪೆಟ್ರಾರ್ಕ್ ಪದ್ಧತಿಯ ಸಾನೆಟ್‌ರೂಪದ ಮೊದಲ ಎಂಟು ಪಾದಗಳಲ್ಲಿ ಈ ಬದ್ಧಪ್ರಾಸ—ಸ ರಿ ರಿ ಸ ಸ ರಿ ರಿ ಸ--ವೇ ಕಾಣಬರುತ್ತದೆ.

ಆದರೆ ಕೊನೆಯ ಆರು ಸಾಲುಗಳ ಪ್ರಾಸಗಳಲ್ಲಿ ಅಲ್ಲಲ್ಲಿ ಸ್ವಲ್ಪ ಬದಲಾವಣೆಗಳು ಕಾಣಬಹುದು. ಇಲ್ಲಿ ನಾವು ತೆಗೆದುಕೊಂಡಿರುವ ಉದಾಹರಣೆಯಲ್ಲಿ ಕೊನೆಯ ಆರು ಸಾಲಿನ ಪ್ರಾಸವಿನ್ಯಾಸ ಈ ರೀತಿಯಿದೆ. ೯ನೆಯ ಸಾಲು **ಫೇಸ್,** ೧೨ನೆಯ ಸಾಲು **ಬೇಸ್,** ೧೦ ನೆಯ ಸಾಲು **ಸ್ಕೈ,** ೧೩ನೆಯ ಸಾಲು **ಫ್ಲೈ,** ಮತ್ತು ೧೧ ನೆಯ ಸಾಲು **ಸೆಡ್,** ೧೪ ನೆಯ ಸಾಲು ಹಾರ್‌ವೆಸ್ **ಟೆಡ್.** ಹೀಗೆ ಇಲ್ಲಿ 'ಗ ಮ ಪ ಗ ಮ ಪ' ಈ ರೀತಿ ಕಾಣುತ್ತದೆ. ಇದು ಪೆಟ್ರಾರ್ಕನ ಸಾನೆಟ್ಟುಗಳಲ್ಲಿ ಸಾಧಾರಣವಾಗಿ ಬರುವ ರೂಪ. ಕೆಲವು ವೇಳೆ ಅಲ್ಪಸ್ವಲ್ಪ ಬದಲಾವಣೆಯಾದರೂ ಆಗಬಹುದು. 'ಗ ಮ ಪ ಪ ಮ ಗ' ಅಥವಾ 'ಗ ಮ ಪ ಮ ಪ ಗ' ಇಲ್ಲವೇ 'ಗ ಮ ಗ ಮ ಗ ಮ' ರೀತಿ ಯಲ್ಲಾಗಲಿ ತೋರಬಹುದು. ಆದರೆ ಕೊನೆಯ ಎರಡು ಸಾಲುಗಳಿಗೆ ಪ್ರಾಸ ಬರು ವಂತೆ ಮಾತ್ರ ಆಗುವುದೇ ಇಲ್ಲ—ಆಗುವುದು ಬಹಳ ಅಪರೂಪ.

ವೈಯಟ್ ಈ ರೂಪವನ್ನು ತೆಗೆದುಕೊಂಡು ಮೊದಲೆಂಟು ಸಾಲನ್ನು ಬದ್ಧ ಪ್ರಾಸದಲ್ಲಿಯೇ ಬರೆದ. ಆದರೆ ಕೊನೆಯ ಆರು ಸಾಲುಗಳನ್ನು ಮಾತ್ರ ಬದಲಾಯಿಸಿ ಕೊಂಡು ಕೊನೆ ಎರಡು ಪಾದಗಳಲ್ಲಿಯೂ ಪ್ರಾಸ ಬರುವಂತೆ ರೂಪಿಸಿಕೊಂಡ. ಇದು ವೈಯಟ್‌ನ ಸೃಷ್ಟಿ. 'ಗ ಮ ಮ ಗ ಪ ಪ' ಎಂದೋ, 'ಗ ಮ ಗ ಮ ಪ ಪ' ಎಂಬ ರೂಪದಲ್ಲಿಯೋ, 'ಗ ಮ ಮ ಮ ಗ ಗ' ಎಂಬ ರೂಪಾಂತರದಲ್ಲಿಯೋ ಕೊನೆಯ ಆರು ಪಾದಗಳ ಪ್ರಾಸ ತೋರಿಕೊಳ್ಳುತ್ತಿತ್ತು.

ಸರ್ರೆ ವೈಯಟ್ಟನಿಂದ ತೆಗೆದುಕೊಂಡುದು ಈ ಸಾನೆಟ್ ರೂಪದ ಜತೆಗೆ ಕೊನೆಯ ಎರಡು ಸಾಲುಗಳ ಪ್ರಾಸಪದ್ಧತಿಯನ್ನು ಕೂಡ. ಆದರೆ ವೈಯಟ್ಟನಲ್ಲಿ ಕಾಣುವ ಎಂಟು, ಆರುಗಳ ಭೇದ ಸರ್ರೆಯಲ್ಲಿ ಮಾಯವಾಗುತ್ತದೆ. ಅವನಲ್ಲಿ ಬರುವ ರೀತಿ ಮೂರು ಚೌಪದಿಗಳು ಜತೆಗೆ ಕೊನೆಯಲ್ಲೊಂದು ಪ್ರಾಸಬದ್ಧ ದ್ವಿಪದಿ. ಈ ಮೂರು ಚೌಪದಿಗಳಿಗೂ ತಮ್ಮದೇ ಪ್ರಾಸವಿನ್ಯಾಸವುಂಟು. ಈ ಬಗೆಯ ಪ್ರಾಸವಿನ್ಯಾಸ ವನ್ನಿಟ್ಟುಕೊಂಡೇ ಷೇಕ್ಸ್‌ಪಿಯರ್ ತನ್ನ ಶ್ರೇಷ್ಠ ಸಾನೆಟ್ಟುಗಳನ್ನು ಬರೆದುದು. ಇಲ್ಲಿ ಎಂಟನೆಯ ಸಾಲಿನೊಂದಿಗೆ ಬಿಡುವು ಬರುವುದೇ ಇಲ್ಲ. ಭಾವ, ಅರ್ಥ ಒಂದೇ ಉಸಿರಿಗೆ ಮುಂದೆ ಹರಿದುಕೊಂಡು ಹೋಗುತ್ತದೆ. ಕೊನೆ ಎರಡು ಪಾದದಲ್ಲಿ ಪ್ರಾಸ ದೊಂದಿಗೆ ಬಿಗಿಯಾಗಿ, ಬೀಗಿ ಹೇಳಬೇಕಾದುದನ್ನು ಒತ್ತಿ ಹೇಳಿ ಮುಗಿಸುತ್ತದೆ. ಸರ್ರೆಯ ಈ ರೂಪಕ್ಕೆ ಮೊದಲೇ ಹೇಳಿರುವಂತೆ ಷೇಕ್ಸ್‌ಪೀರಿಯನ್ ಸಾನೆಟ್ ಎಂಬ

ಹೆಸರಾಗಿದೆ. ಅಂತೆಯೇ ಅದಕ್ಕೊಂದು ಉದಾಹರಣೆಯಾಗಿ ಷೇಕ್ಸ್‌ಪಿಯರನದೇ ಒಂದು ಸಾನೆಟ್ಟನ್ನು ತೆಗೆದುಕೊಂಡು ಪ್ರಾಸವಿನ್ಯಾಸವನ್ನು ಗುರುತಿಸುವುದೊಳ್ಳೆಯದು. ಇಲ್ಲಿನ ಪ್ರಾಸಗಳ ಸಂಖ್ಯೆಯೂ ಹೆಚ್ಚು. ಪ್ರತಿ ಎರಡು ಪಾದಗಳಿಗೂ ಬೇರೆ ಬೇರೆ ಪ್ರಾಸ ಕಾಣಬರುತ್ತದೆ. ಹನ್ನೆರಡು ಪಾದಗಳಿಗೆ ಆರು ಪ್ರಾಸ, ಕೊನೆಯೆರಡು ಸಾಲಿಗೆ ಒಂದು—ಹೀಗೆ ಏಳು ಪ್ರಾಸಗಳು ಕಾಣಿಸಿಕೊಳ್ಳುತ್ತವೆ. ಇವುಗಳನ್ನು ನಾವು 'ಸ ರಿ ಗ ಮ ಪ ದ ನಿ' ಎಂಬ ಏಳು ಸಂಕೇತಗಳಿಂದ ಸೂಚಿಸಿದರೆ, ಪ್ರಾಸ ರಚನೆಯನ್ನು ಸುಲಭವಾಗಿ ತಿಳಿಯಬಹುದು. ಮೇಲೆ ಉದ್ಧರಿಸಿ ನಾವು ನೋಡಿದ ಕೀಟ್ಸನ ಸಾನೆಟ್ಟಿನ ಪ್ರಾಸದ ಮಾದರಿಯೂ ಇಂತಹುದೇ. ಈಗ ಷೇಕ್ಸ್‌ಪಿಯರನ ಸಾನೆಟ್ಟನ ಪ್ರಾಸ ಮತ್ತು ರೀತಿಗಳನ್ನು ನೋಡೋಣ.

| | | |
|---|---|---|
| 1 | The expense of spirit in a waste of shame | —ಸ |
| 2 | Is lust in action ; and, till action, lust | —ರಿ |
| 3 | Is perjured, murderous, bloody, full of blame | —ಸ |
| 4 | Savage, extreme, rude, cruel, not to trust ; | —ರಿ |
| 5 | Enjoyed no sooner but despised straight ; | —ಗ |
| 6 | Past reason hunted ; and no sooner had, | —ಮ |
| 7 | Past reason hated, as a swallowed bait, | —ಗ |
| 8 | On purpose laid to make the taker mad ; | —ಮ |
| 9 | Mad in pursuit, and in possession so ; | —ಪ |
| 10 | Had, having, and in quest to have, extreme ; | —ದ |
| 11 | A bliss in proof, and proved, a very woe ; | —ಪ |
| 12 | Before, a joy proposed, behind, a dream, | —ದ |
| 13 | All this the world well knows ; yet none knows well | —ನಿ |
| 14 | To shun the heaven that leads men to this hell | —ನಿ |

ಇಲ್ಲಿಯ ಹದಿನಾಲ್ಕು ಸಾಲನ್ನು, ಅದರ ಪಕ್ಕದಲ್ಲಿರುವ ಪ್ರಾಸ ಸಂಕೇತಗಳನ್ನು ನೋಡಿದೊಡನೆಯೇ ನಮಗೆ ಪ್ರಾಸವಿನ್ಯಾಸದಲ್ಲಿ ಇದಕ್ಕೂ ಮೊದಲಿನ ಸಾನೆಟ್ಟಿಗೂ ಇರುವ ವ್ಯತ್ಯಾಸ ಗೊತ್ತಾಗುತ್ತದೆ. ಸರಿಸರಿ, ಗಮಗಮ, ಪದಪದ, ನಿನಿ ಇಲ್ಲಿಯ ರೀತಿ. ಇದರಲ್ಲಿ ಪ್ರಾಸ ಬಂಧಿತವಾಗಿಲ್ಲ. ಆದ್ದರಿಂದ ಇದನ್ನು ಮುಕ್ತಪ್ರಾಸವೆಂದು (open rhyme) ಕರೆಯಬಹುದು. ಈ ಪ್ರಾಸದ ವಿನ್ಯಾಸದ ವ್ಯತ್ಯಾಸವೂ ಅಲ್ಲದೆ ಇದರಲ್ಲಿ ಅರ್ಥ, ಭಾವಗಳು ಕೂಡ ಎಂಟನೆಯ ಸಾಲಾದೊಡನೆಯೇ ನಿಲ್ಲದೆ ಮುಂದೆ ನಿರರ್ಗಳವಾಗಿ ಹರಿದು ಹನ್ನೆರಡನೆಯ ಸಾಲಿನ ಮುಗಿವಿಗೆ ಒಂದು ಘಟ್ಟ ಮುಟ್ಟುತ್ತವೆ. ಅನಂತರ ಹದಿಮೂರು ಹದಿನಾಲ್ಕನೆಯ ಸಾಲಿನಲ್ಲಿ ಅಚ್ಚುಕಟ್ಟಾಗಿ, ಬಿಗಿಯಾಗಿ, ಬಹು ಕಿರಿದಾಗಿ, ಬಲವತ್ತರವಾಗಿ, ಪ್ರಾಸಬದ್ಧವಾಗಿ ವಿಚಾರಕ್ಕೊಂದು ಮೊನೆ ಸಿಗುತ್ತದೆ, ಮುಕ್ತಾಯವಾಗುತ್ತದೆ.

೩

ಇಂಗ್ಲಿಷ್ ಸಾನೆಟ್ಟುಗಳೆಲ್ಲ ಸಾಧಾರಣವಾಗಿ ಈ ಮೇಲೆ ಹೇಳಿದ ಎರಡು ಸಂಪ್ರದಾಯಕ್ಕೆ ಸೇರಿದುವು. ಪೆಟ್ರಾರ್ಕನ ಸಾನೆಟ್ಟಿನ ಪದ್ಧತಿಯ ಬಿಗಿ ಕೊಂಚ ಹೆಚ್ಚು. ಷೇಕ್ಸ್‌ಪಿಯರನ ಸಾನೆಟ್ಟಿನ ರೀತಿಯಲ್ಲಿ ಸಡಿಲವಿದ್ದರೂ ಸಪುರ [Elasticity] ಇದೆ. ಮುಂದೆ ಬಂದ ಕವಿಗಳೆಲ್ಲ — ಒಂದಿಬ್ಬರು ಹೊರತು — ಈ ಎರಡು ರೀತಿಗಳ ನೆರಳಿನಲ್ಲಿಯೇ ತಮ್ಮ ಸಾನೆಟ್ಟುಗಳನ್ನು ಸೃಷ್ಟಿಸಿದರು. ಸಾನೆಟ್ಟಿನ ಮುಂದಿನ ಚರಿತ್ರೆಯನ್ನು ವಿಶದವಾಗಿ ತಿಳಿಸುವುದು ನನ್ನ ಉದ್ದೇಶವೂ ಅಲ್ಲ. ಇಲ್ಲಿ ಅವಶ್ಯಕವೂ ಅಲ್ಲ. ಆದರೆ ಈ ಸಾನೆಟ್ಟು ಹೇಗೆ ಕವಿಯ ಎಲ್ಲ ರೀತಿಯ ಭಾವನೆಗಳಿಗೆ ಎಡೆಕೊಟ್ಟಿತೆಂಬುದನ್ನು ಸೂಚಿಸುವುದು ಅತ್ಯಂತ ಆಗತ್ಯ. ಬರಿಯ ಪ್ರೇಮ, ವಿರಹಗಳೇ ಇದರ ವಸ್ತುವಾಗಿದ್ದ ಕಾಲವೂ ಇತ್ತು. ಆದರೆ ಬರಿಯ ಪ್ರಣಯ ಪ್ರಸಂಗದಲ್ಲಿಯೇ ಸಾನೆಟ್ಟು ಉಳಿದುಕೊಳ್ಳಲಿಲ್ಲ. ದಾಂತೆಯಲ್ಲಿ ಕೂಡ ಗೆಳೆಯರಿಗೆ ಪತ್ರ ಬರೆಯುವಲ್ಲಿ ಸಾನೆಟ್ಟುಗಳೂ, ತನ್ನ ದೇಶಭ್ರಷ್ಟತೆಯ ಬಗ್ಗೆ ಸಾನೆಟ್ಟುಗಳು ಇವೆ. ಪೆಟ್ರಾರ್ಕನ ಅತ್ಯುತ್ತಮ ಸಾನೆಟ್ ತನ್ನ ಸ್ವಂತ ಪ್ರೇಮ, ವಿರಹದ ಚಿತ್ರವಲ್ಲ. ಸಾರ್ಡನಾಪಲಸ್ ನಗರದ ಚೆಲುವಿನ ಬಗ್ಗೆ ಬರೆದ ಪ್ರಕೃತಿ ಚಿತ್ರವೇ ಅವನ ಅತ್ಯುತ್ತಮ ಸಾನೆಟ್. ಷೇಕ್ಸ್‌ಪಿಯರ್ ಪ್ರಣಯ, ಭಗ್ನಹೃದಯ, ಗೆಳೆತನದ ಮೋಹ, ಕಾವು, ನಿರಾಸೆ, ತಿರಸ್ಕಾರ, ರೊಚ್ಚು, ಗಿಂಜಾಟ, ಗೀಳು—ಮುಂತಾದ ಎಲ್ಲ ರೀತಿಯ ಭಾವಗಳಿಗೂ ತನ್ನ ಸಾನೆಟ್ಟುಗಳಲ್ಲಿ ಎಡೆಕೊಟ್ಟ. ಆದರೆ ಆ ಭಾವನೆಗಳನ್ನು ಚಿತ್ರಿಸುವಲ್ಲಿ ಪ್ರಕೃತಿಯ ಚಿತ್ರಗಳನ್ನು ಕಣ್ಣಿಗೆ ಕಟ್ಟಿದಂತೆ ಚಿತ್ರಿಸಿದಾನೆ. ಷೇಕ್ಸ್‌ಪಿಯರನ ಸಮಕಾಲೀನರಿಗೆ ಸುಮಾರು ೧೫೮೦ರಲ್ಲಿ ಈ ಸಾನೆಟ್ಟುಗಳನ್ನು ಬರೆಯುವ ಗೀಳು ಹತ್ತಿದಂತೆ ಕಾಣುತ್ತದೆ. ಆಗಿನ ಕಾಲದಲ್ಲಿ ಆಸ್ಥಾನದಲ್ಲಿದ್ದವರೆಲ್ಲರೂ ಕವಿಯೆನ್ನಿಸಿಕೊಳ್ಳಬೇಕಾಗಿತ್ತು. ಕವಿಯೆನ್ನಿಸಿಕೊಳ್ಳಬೇಕಾದರೆ ಸಾನೆಟ್ಟುಗಳನ್ನು ಬರೆಯಲೇಬೇಕಾಗಿತ್ತು. ಸಾನೆಟ್ಟುಗಳನ್ನು ಬರೆಯದ ಕವಿ ಕವಿಯೇ ಅಲ್ಲವೆನ್ನುವ ಭಾವನೆಯಾಗಿತ್ತು. ಆದ್ದರಿಂದ ಆಗಿನ ಲೋಕಮತದಂತೆ ಮೋಹದಂತೆ ಎಲ್ಲರೂ ಸಾನೆಟ್ಟುಗಳನ್ನು ಬರೆದರು. ಕೆಲವರಂತೂ ಸಾನೆಟ್ಟುಗಳಲ್ಲಿ ಕತೆಗಳನ್ನೇ ಹೆಣೆದರು. ಇಂತಹ ಸಾನೆಟ್‌ಕೂಟ [Sonnet Sequences] ಗಳು ಷೇಕ್ಸ್‌ಪಿಯರನ ಕಾಲದಲ್ಲಿ ಬಹಳ ಹೆಚ್ಚು. ಇಂತಹ ಸಾನೆಟ್ಟುಗಳಿಗೆ ಸುಲಭವಸ್ತು—ಪ್ರೇಮ, ಗೆಳೆತನ. ಈ ವಿಚಾರಗಳ ಬಗ್ಗೆ ಷೇಕ್ಸ್‌ಪಿಯರ್ ಕೂಡ ಒಂದು ಸಾನೆಟ್‌ಕೂಟವನ್ನು ಬರೆದನೆಂದಮೇಲೆ ಆಗಿನ ಕಾಲದ ಸಾನೆಟ್ಟಿನ ಒಲವರ ಎಷ್ಟಿತ್ತೆಂದು ಊಹಿಸಬಹುದು. ಮತ್ತೆ ಮಿಲ್ಟನ್‌ಕವಿ, ಜಾನ್ ಡನ್ [Donne] ಇದಕ್ಕೊಂದು ಗಹನ ವಿಚಾರಶೀಲತೆಯನ್ನು ತಂದುಕೊಟ್ಟರು. ಅಧ್ಯಾತ್ಮವಿಚಾರಗಳನ್ನು ಲೇವಡಿಯ ಧ್ವನಿಯಲ್ಲಿ ಡನ್ ತನ್ನ ಸಾನೆಟ್ಟುಗಳಲ್ಲಿ ಮೂಡಿಸಿದ. ಅದನ್ನೇ ಚಿಂತನ ರೂಪದಲ್ಲಿ ಮಿಲ್ಟನ್ ತನ್ನ ಸಾನೆಟ್ಟುಗಳಲ್ಲಿ ನಿರೂಪಿಸಿದ. ಅನಂತರ ಸುಮಾರು ಒಂದು ನೂರು

ವರ್ಷಕ್ಕಿಂತಲೂ ಹೆಚ್ಚು ಕಾಲ ಈ ಸಾನೆಟ್ ಅಜ್ಞಾತವಾಸಮಾಡಿ, ರೊಮ್ಯಾಂಟಿಕ್ ಕವಿಗಳು—ವರ್ಡ್ಸ್‌ವರ್ತ್, ಕೀಟ್ಸ್, ಷೆಲ್ಲಿ ಮುಂತಾದವರು ಬರೆಯುವ ಕಾಲಕ್ಕೆ ಮತ್ತೆ ಪುನರ್ಜನ್ಮ ಪಡೆಯಿತು. ಅಲ್ಲಿಂದೀಚೆಗೆ ಸಾನೆಟ್ ಒಂದೇ ಸಮನಾಗಿ ಬೆಳೆಯುತ್ತಿದೆ.

ಸಾನೆಟ್ ಬೆಳೆದಂತೆ ಅದರ ವಸ್ತುವಿನ ಆಯ್ಕೆಗೆ ಕೂಡ ಈಗ ವಿಶಾಲಹಸರವಿದೆ. ಬರಿಯ ಪ್ರೇಮಗೀತೆಯೇ ಆಗಿದ್ದುದು, ಈಗ ಯಾವುದೊಂದು ವಸ್ತುವಿನ ಮೇಲೆ ಬೇಕಾದರೂ ಸಾನೆಟ್ ಬರೆಯಬಹುದಾಗಿದೆ. ಅಷ್ಟೊಂದು ಬೆಳೆದಿದೆ ಈ ಸಾನೆಟ್ ಸಾಹಿತ್ಯ. ಹದಿನಾಲ್ಕು ಸಾಲುಗಳ ಕಟ್ಟು, ಇದರಲ್ಲಿ ಒಂದೇ ಒಂದು ಚಿಂತನದ, ಭಾವದ ಮೂಡಿಕೆ [Impression] ಇರಬೇಕೆನ್ನುವ ನಿಯಮಗಳಿಗೆ ಒಗ್ಗಿದರೆ ಸಾಕು. ವಸ್ತು ಯಾವುದು ಬೇಕಾದರೂ ಆಗಬಹುದು. ಒಂದು ರಾಜ್ಯದ ನಿರ್ನಾಮ, ಒಬ್ಬ ನಾಯಕನ ದುರ್ಮರಣ, ಒಂದು ನಕ್ಷತ್ರದ ಚೆಲುವು, ಪ್ರೇಯಸಿಯ ಕಿವಿಯ ಓಲೆಯ ವಜ್ರದ ಹೊಳಪು, ಮಗುವಿನ ಆಟ, ರಸ್ತೆಯೊಂದರ ಅವ್ಯವಸ್ಥೆ, ಪರಮಾತ್ಮನ ಸ್ವರೂಪ,—ಯಾವುದು ಬೇಕಾದರೂ ಇಲ್ಲಿ ವಸ್ತುವಾಗಬಹುದು. ಆದರೆ ಅದನ್ನು ಹೇಳುವ ರೀತಿ ಮಾತ್ರ ಚೆನ್ನಿರಬೇಕು. ರಾಸೆಟ್ಟಿ ತನ್ನದೊಂದು ಸಾನೆಟ್ಟಿನಲ್ಲಿ "The sonnet is a moment's monument" [House of Life ಮೊದಲ ಸಾನೆಟ್] ಎಂದರೆ ಕ್ಷಣವೊಂದರ ಸ್ಮಾರಕವೆಂದು ಕರೆದಿದಾನೆ. ಎಂದರೆ ಒಂದು ಘಳಿಗೆಯಲ್ಲಿ ಮಿಂಚಿ ಮಾಯವಾಗುವ ಒಂದು ಭಾವನೆಯನ್ನು ಸಾನೆಟ್ ಸೆರೆ ಹಿಡಿಯುತ್ತದೆ. ಕಲಾತ್ಮಕವಾಗಿ ಪ್ರತಿಬಿಂಬಿಸುತ್ತದೆ ಎಂದು ಹೇಳಬಹುದು.

ಕವಿಯ ಅನುಭವ ತೀವ್ರವಾಗಿರುತ್ತದೆ, ಕೂರಾಗಿರುತ್ತದೆ. ಹೊರ ಜಗತ್ತಿನ ಸೌಂದರ್ಯ, ತನಗೆ ಅಥವಾ ಮತ್ತಾರಿಗೋ ಉಂಟಾದ ನೋವು ನಲವುಗಳು, ಒಂದು ಜನಾಂಗ ಅನುಭವಿಸುತ್ತಿರುವ ಕೋಟಲೆಗಳು ಇವುಗಳನ್ನೆಲ್ಲ ಕಂಡ ಕವಿಯ ಮನಸ್ಸಿನಲ್ಲಿ ತೀವ್ರವಾದ ಪ್ರತಿಕ್ರಿಯೆಯಾಗುತ್ತದೆ. ಈ ಪ್ರತಿಕ್ರಿಯೆಯ ಕಾವೇ ಆವೇಶ, ಇಲ್ಲವೇ ಭಾವೋದ್ವೇಗ. "ಪ್ರಪಂಚದ ಜೀವನದ ವಿಷಯಲೇಶದ ತೀಕ್ಷ್ಣವಾದ ಅನುಭವದ ದೆಸೆಯಿಂದ ಅವನ ಆತ್ಮ ತುಂಬಿದಾಗ ಕವಿ ತನ್ನ ಕಾವ್ಯವನ್ನು ನುಡಿಸಬೇಕಾಗುವುದು" ಎಂದು ಮಾಸ್ತಿಯವರು (ಸಾಹಿತ್ಯ, ಪುಟ ೧೦೦) ಹೇಳಿದಾರೆ. ಈ ಮಾತಿನಂತೆ ಕವಿಯ ಹೃದಯದಲ್ಲಿ ಭಾವ ಅಧಿಕವಾಗಿ ತುಂಬಿ ತಾನಾಗಿಯೇ ತುಳುಕುತ್ತದೆ. ಈ ತುಳುಕೇ ಕಾವ್ಯ. ಈ ಮಾತನ್ನೇ ವರ್ಡ್ಸ್‌ವರ್ತ್ ಕವಿ ಕೂಡ "a spontaneous overflow of powerful emotions" ಎಂದು ಕರೆದಿರುವುದು. ಆದರೆ ಈ ಭಾವನೆಯ ಉದ್ವೇಗಕ್ಕೊಂದು ತಡೆ, ಸಂಯಮ, ನಿಯಮ ಬೇಕು. ಅನುಭವದ ಅತಿ ಕಾವಿನಲ್ಲಿ ಮಾತು ಬರುವುದಿಲ್ಲ. ಸಂಜ್ಞೆ ಸಂಕೇತಗಳು ಕೂಡ ಮರೆಯಾಗಿಬಿಡಬಹುದು. ಭಾವದ ಕಾವು ಕೊಂಚ ತಗ್ಗಿದಾಗಲೇ, ಅನುಭವವು ಸ್ತಿಮಿತಕ್ಕೆ ಬಂದಾಗಲೇ ಕಾವ್ಯ ನಿರ್ಮಾಣ ಸಾಧ್ಯ. 'Poetry takes its origin

from emotion recollected in tranquillity' ಎಂದು ವರ್ಡ್ಸ್‌ವರ್ತ್ ಹೇಳಿರುವುದು ಈ ಅರ್ಥದಲ್ಲಿಯೇ. (English Critical Essays 19 th Century, Poetry and Poetic Diction. p. 26). ಅನುಭವ ತುಂಬಿದ ಸ್ಥಿತಿಯಲ್ಲಿ, ಭಾವೋದ್ವೇಗ ಅಳತೆ ಮೀರಿದಾಗ ಕಾವ್ಯಕೃತಿ ಸಾಧ್ಯವಿಲ್ಲ. ಅದು ಸಮಾಧಾನಕ್ಕೆ ಬಂದಾಗ ಮಾತ್ರ ಸಾಧ್ಯ. ಮಾಸ್ತಿಯವರ ಮಾತಿನಲ್ಲಿ ಹೇಳುವುದಾದರೆ, " ಆವೇಶದ ಕೇಂದ್ರದಲ್ಲಿ ಮಾತಿಗೆ ಅವಕಾಶವಿಲ್ಲ.... ...ಅತಿ ಸಂತೋಷವಾದಾಗ ಯಾರೂ ಸಂತೋಷವನ್ನು ವರ್ಣಿಸತೊಡಗುವುದಿಲ್ಲ, ಅದನ್ನು ಅನುಭವಿಸುವರು .. ..ಸುಖ ಅಥವಾ ದುಃಖದ ವೇಗ ಕಡಿಮೆಯಾದ ಮೇಲೆ ಅದರ ಮಾತನ್ನು ಆಡುವರು. ಇದರಂತೆಯೇ ಕವಿಯ ಅನುಭವವೂ. **ಕಾವ್ಯ ಬರಬೇಕಾದರೆ ಅನುಭವದ ವೇಗ ತಗ್ಗಬೇಕು....ಹೀಗೆ ಕವಿಯ ಅನುಭವದ ಕೇಂದ್ರ ಕಾವ್ಯದಲ್ಲಿ ನೆನವಿನಿಂದ ಅಲ್ಲದೆ ಪ್ರತ್ಯಕ್ಷವಾಗಿ ರೂಪವನ್ನು ಹೊಂದುವುದಿಲ್ಲ.** (ಸಾಹಿತ್ಯ. ಪುಟ, ೧೧೧–೧೧೨. ಒತ್ತು ನನ್ನದು.)

ಸಮಾಧಾನ ಚಿತ್ತದಲ್ಲಿ ನೆನೆದುಕೊಂಡ ಭಾವಗಳನ್ನು ಚಿತ್ರಿಸಲು ಸಾನೆಟ್ ಅತ್ಯುತ್ತಮ ಸಾಧನ. ವಿಚಾರಪರತೆ, ದೀರ್ಘ ಅನುಭವ, ತತ್ತ್ವವಿವೇಚನೆ, ಆಳವಾಗಿ ಅನುಭವಿಸಿದುದನ್ನು ಅರಗಿಸಿಕೊಂಡ ಮೇಲೆ ನೆನವಿನಲ್ಲಿ ಅದನ್ನು ತಂದುಕೊಂಡರೆ, ಮತ್ತೆ ಆ ಅನುಭವದ ಗಳಿಗೆ ಆವೇಶ ಆವರ್ತನಗೊಳ್ಳುತ್ತದೆ. ಅಂದಿನ ಬೆಂಕಿಯಿಲ್ಲದಿದ್ದರೂ, ಕಾವಿರುತ್ತದೆ. ಆದರೆ ಕಾವಿಗೆ ಬುದ್ಧಿಯ ಹೊದಿಕೆಯಿರುವುದರಿಂದ ಸುಡುಕಾವು ಅಲ್ಲದೆ, ಮೈ ಬೆಚ್ಚಗೆ ಮಾಡುವ ಕಾವಾಗುತ್ತದೆ. ಭಾವನೆಗೊಂದು ಬಿಗಿ, ಹಿಡಿತ, ಸಂಯಮವಿದ್ದು ಅರಿತು ಅರಿತು ಚಿತ್ರಿಸುವ ಕಲೆಗಾರಿಕೆ ಈ ಸಾನೆಟ್ಟುಗಳಲ್ಲಿ ಸಿದ್ಧಿಯಾಗುತ್ತದೆ. ಇಲ್ಲಿ ಅತ್ಯಂತ ಹೆಚ್ಚಿನ ಆವೇಗ ಸಲ್ಲದು. ಅಂತೆಯೇ ಷೆಲ್ಲಿಯ ಹಾರುರಾಗಗಳಿಗೆ, ಓಡುಭಾವಗಳಿಗೆ ಸಾನೆಟ್ ಉತ್ತಮ ಸಾಧನವಾಗಲಿಲ್ಲ. ಅತಿ ಹೆಚ್ಚಿನ ಉದ್ವೇಗ ಕಂಡರೆ ಸಾನೆಟ್ಟಿನ ಬಿಗಿ ತಪ್ಪಿ ಹೋಗುತ್ತದೆ. ಒಕ್ಕೂಟ, ಮೂಡಿಕೆ ಒಡೆದುಹೋಗುತ್ತದೆ. ಭಾವ ಬೆಂಕಿಯಾಗಬೇಕಾಗಿಲ್ಲ. ಕಾವು ತಗ್ಗಿ, ವಿಚಾರ, ಜಿಜ್ಞಾಸೆಯೊಡನೆ ಬೆರೆತಿರುವಾಗ, ಒಂದು ಪುಟ್ಟ ಘಟನೆ, ಸಣ್ಣದಾದ ಸುಂದರವಾದ ಹಿತಮಿತ ವಚನ, ಚೆಲುವಾದ ಹೊಗಳಿಕೆಯ ಮಾತು, ನಯವಾದ ತಾತ್ಸಾರ, ಸುಂದರವಾದ ಪ್ರಕೃತಿಯ ಚಿತ್ರಣ, ಒಂದು ಸಣ್ಣ ಮಿತಿಯ ವರ್ಣನೆ, ಒಂದು ಅತಿ ತೀವ್ರವಲ್ಲದ ಭಾವವೊಂದರ ಮೂಡಿಕೆ ಇವುಗಳಿಗೆ ಸಾನೆಟ್ಟಿನ ಪರಿಮಿತಿ ಬಹಳ ಸಮರ್ಪಕ. ಹಪ್ಪಳ ಸುಡಲು ಬೆಂಕಿ ಉರಿಯಬೇಕಾಗಿಲ್ಲ, ಕೆಂಡವಿದ್ದರೆ ಸಾಕು. ಅಂತೆಯೇ ಅದರ ರುಚಿಯೂ ಅದಕ್ಕೆ. ಬೇರೆಯದರ ರುಚಿ ಅದಕ್ಕೆ ಬರಲಾರದು, ಆದರೆ ಅದರ ರುಚಿ ಕೂಡ ಬೇರೆಯದಕ್ಕಿಲ್ಲ. ಅತಿ ತೀವ್ರವಾದ ಉದ್ವೇಗದಲ್ಲಿ ಬರೆದ, ತೀವ್ರಭಾವಾವೇಶಗಳ ಕವಿತೆಗಳು ನಮಗೆ ಕೊಡುವ ರಸಾನುಭವ ಒಂದು ಬಗೆಯದು. ಸಮಾಧಾನಚಿತ್ತದಲ್ಲಿ ಕಾವಿಳಿದಾಗ ಬರೆದ ಸಾನೆಟ್ಟುಗಳು ಕೊಡುವ

ರಸಾನುಭವ ಮತ್ತೊಂದು ಬಗೆಯದು. ಆದರೆ ಎರಡೂ ಕಾವ್ಯ. ಎರಡರ ಕ್ರಿಯೆಯೂ ರಸಾನುಭವ. ಇಲ್ಲಿಯೂ ಭಾವಾವೇಶ ಇದೆ. ಆದರೆ ಇಲ್ಲಿ ಸಂಯಮ, ಬಿಗಿಯೂ ಇದೆ. ಕವಿಗೆ ತಾನೇನು ಹೇಳಲು ಹೊರಟಿದೇನೆಂಬುದರ ಅರಿವು, ಇಷ್ಟೇ ಪರಿಮಿತಿಯಲ್ಲಿ ಅದನ್ನು ಹೇಳಬೇಕೆಂಬ ನಿಯಮವೂ ತಿಳಿದು, ಕೊಂಚ ಕಾವಿನ ಆವೇಗ ಬಂದಾಗ ಈ ಸಾನೆಟ್ಟು ಬಹುಸುಂದರ ಕೃತಿಯಾಗುತ್ತದೆ. ದೊಡ್ಡ ದೊಡ್ಡ ಕಾವ್ಯದಲ್ಲಿ ಆವೇಶ ಮುಂದೆ ದೂಕಿಕೊಂಡು, ಹಾರಿಸಿಕೊಂಡು ಹೋಗುತ್ತದೆ ಆದರೆ ಇಲ್ಲಿ ಅದು ಸೆರೆಹಿಡಿಯಲ್ಪಡುತ್ತದೆ. ಇದು ಕುಸುರಿಯ ಕೆಲಸ, ಅದು ದೊಡ್ಡ ಕೆಲಸ. ಇಲ್ಲಿ ನಯಗಾರಿಕೆ, ನುಣುಪು ಹೆಚ್ಚಾಗಿ ಬೇಕು. ಮುಗ್ಗುರಿಸಿಯೇನೆಂಬ ಎಚ್ಚರಿಕೆಯೂ ಬೇಕು. ದೊಡ್ಡ ಕಾವ್ಯದಲ್ಲಾದರೆ ಮತ್ತೆ ಸವರಿಸಿಕೊಂಡು ಹೋಗಬಹುದು. ಆದ್ದರಿಂದ ಸಾನೆಟ್ ಸಣ್ಣದಾದರೂ ಕಲೆಗಾರಿಕೆ ಕಷ್ಟವಾದುದು. ಅಕ್ಕಿಯ ಕಾಳಿನ ಮೇಲೆಯೋ, ಸಣ್ಣ ದಂತದ ಮೇಲೆಯೋ ಕೊರೆಯುವ ಕೆಲಸದಂತೆ ನಾಜೂಕು, ಮೊನೆಗಣ್ಣು ಇದಕ್ಕೆ ಅವಶ್ಯಕ. ಕೊಂಚ ಸವಣು ತಪ್ಪಿದರೆ ಎಲ್ಲವೂ ಕೆಡಬಹುದು. ಭಾವನೆ ಕೊಂಚ ಏರಿದರೂ ಕಷ್ಟ, ಕಡಿಮೆಯಾದರೂ ಕಷ್ಟ. ಕಾವೇರಿ ಉರಿದರೆ ಸುಡುತ್ತದೆ. ಬೆಂಕಿ ಆರಿದರೆ ಬೂದಿಯಾಗಿ ಹಾಯಿ ಬೆಚ್ಚನೆಯ ಸುಖ ಕೂಡ ತಪ್ಪುತ್ತದೆ. ಈ ಎರಡೂ ತುದಿಗಳಿಗೆ ಬೀಳದಂತೆ ಸಮರಸವನ್ನು ಸಾಧಿಸಬೇಕು ಸಾನೆಟ್ ಸಾಹಿತ್ಯ.

೪

ಕನ್ನಡದಲ್ಲಿಯೂ ಅಷ್ಟಷಟ್ಪದಿಯೆಂಬ ಹೆಸರಿನಲ್ಲಿ ಈ ಸಾನೆಟ್ ಬಳಕೆಗೆ ಬಂತು. ಆಚಾರ್ಯ ಶ್ರೀಯವರ ಆಸ್ಥೆಯಿಂದ, ಶ್ರದ್ಧೆಯಿಂದ, ನೇರವಾದ ಮತ್ತು ಪರೋಕ್ಷವಾದ ಪ್ರಭಾವದಿಂದ ಕನ್ನಡಕ್ಕೆ ಇಂಗ್ಲಿಷ್ ಸಾಹಿತ್ಯದ ಪ್ರಭಾವ ಬಂತು. ಇಂಗ್ಲಿಷ್ ಸಾಹಿತ್ಯದಲ್ಲಿರುವ ಬಗೆ ಬಗೆಯ ಸಾಹಿತ್ಯ ಕನ್ನಡಕ್ಕೆ ಬರುತ್ತಿದ್ದ ನವೋದಯದ ಕಾಲ ಅದು. ಕಾದಂಬರಿ, ಸಣ್ಣಕತೆಗಳು ಬಂದುವು. ಅಂತೆಯೇ ಕಾವ್ಯರೂಪಗಳೂ ಬರಲು ನೆಲ ಹಸನಾಗಬೇಕಾಗಿತ್ತು. ಆಚಾರ್ಯ ಶ್ರೀಯವರು ತಮ್ಮ ಶಿಷ್ಯ ವರ್ಗಕ್ಕೆ ಹೇಳುತ್ತಿದ್ದ ವಾಠ ಪ್ರವಚನಗಳಿಂದ, ಅವರೇ ಕನ್ನಡಕ್ಕೆ ತಂದ ಇಂಗ್ಲಿಷ್ ಗೀತೆಗಳಿಂದ ಈ ಕೆಲಸ ಆಯಿತು. ಅವರು ಅಂದು ಹಾಕಿದ ಮೊಳಕೆ ಇಂದು ವಿಶಾಲವಾಗಿ ಬೆಳಸಾಗಿದೆ. ಕನ್ನಡಕ್ಕೆ ಬಂದ ಇಂಗ್ಲಿಷ್ ಕಾವ್ಯರೂಪಗಳಲ್ಲಿ ಸಾನೆಟ್ ಸಾಹಿತ್ಯವೂ ಒಂದು. ಇಲ್ಲಿ ಒಂದು ಅಚ್ಚರಿಯ ಸಂಗತಿಯೆಂದರೆ ಹಲವಾರು ಬಗೆಯ ಗೀತಗಳನ್ನು ಕನ್ನಡಕ್ಕೆ ತಂದ ಶ್ರೀಯವರು ಒಂದು ಸಾನೆಟ್ಟನ್ನಾದರೂ ಕನ್ನಡಕ್ಕೆ ತರದುದು. ೧೯೨೬ ರಲ್ಲಿ ಪ್ರಕಟವಾದ ಈ 'ಇಂಗ್ಲಿಷ್ ಗೀತಗಳು' ಬಿಡಿ ಬಿಡಿಯಾಗಿ ಆಗಲೇ ಅಲ್ಲಲ್ಲಿ ಬಂದಿದ್ದುವು. ಅದರಲ್ಲಿ ಸರಳರಗಳೆ (Blak Verse) ಯಾಗಲಿ, ಸಾನೆಟ್ ರೂಪವಾಗಲಿ ಇಲ್ಲದಿರುವುದು ಬಹಳ ಆಶ್ಚರ್ಯ. ಅದೇ ರೀತಿಯಲ್ಲಿ ಇಂಗ್ಲಿಷಿನಿಂದ ಕನ್ನಡಕ್ಕೆ ಅನುವಾದಿಸಿದ ಹಟ್ಟಿಯಂಗಡಿ ನಾರಾಯಣರಾಯರ ಕೃತಿಯಲ್ಲಿಯೂ ಈ ಸಾನೆಟ್ ಕಾಣದುದು ವಿಸ್ಮಯದ ಸಂಗತಿ. ಗೀತ ಸಾಹಿತ್ಯದಲ್ಲಿ ಸಾನೆಟ್ಟಿಗೆ ಒಂದು

ಉತ್ತಮ ಸ್ಥಾನವಿದ್ದೂ, ಅದು ಶ್ರೀಯವರ ಕಣ್ಣಿಗಾಗಲಿ, ನಾರಾಯಣರಾಯರ ಕಣ್ಣಿಗಾಗಲಿ ಬೀಳದುದು ಆಶ್ಚರ್ಯವೇ ಸರಿ. ಆದರೂ ಇವರ ಪ್ರಭಾವದಿಂದ ಉಂಟಾದ ಇಂಗ್ಲಿಷ್ ಸಾಹಿತ್ಯದಲ್ಲಿನ ಆಸಕ್ತಿ ಕಾವ್ಯಪ್ರಕಾರದಲ್ಲಿಯೂ ನವೋದಯ ವಾಗಲು ನೆರವಾಯಿತು. ಈ ಕಾಲದ ಕವಿಗಳೂ ಮುಂದಿನ ಪೀಳಿಗೆಗಳವರೂ ಕನ್ನಡಕ್ಕೆ ಹೊಸ ತೊಡವು ತೊಡಿಸಿ ನಲಿಯಲು ಸಿದ್ಧರಾದರು. ಪ್ರತ್ಯಕ್ಷವಾಗಿ ಅಲ್ಲದಿದ್ದರೂ ಪರೋಕ್ಷವಾಗಿಯಾದರೂ ಸಾನೆಟ್ ರೂಪ ಕನ್ನಡ ಸಾಹಿತ್ಯಕ್ಕೆ ಬಂದುದಕ್ಕೆ ಕಾರಣ ಶ್ರೀಯವರ 'ಇಂಗ್ಲಿಷ್ ಗೀತಗಳು' ಎಂದು ಹೇಳಬಹುದು.

ಈ ಸಾನೆಟ್ ರೂಪವನ್ನು ಕನ್ನಡದಲ್ಲಿ ಬಹಳ ಜನ ಕವಿಗಳು ಉಪಯೋಗಿಸಿದ್ದಾರೆ. ಹಲವರು ಇದಕ್ಕೆ ಸುನೀತವೆಂದೂ ಸೊನೆಟ್ಟವೆಂದೂ, ಅಷ್ಟಷಟ್ಪದಿಯೆಂದೂ ಹೆಸರು ಕೊಟ್ಟಿದಾರೆ. ಆದರೆ ಈ ಹೆಸರು ಸೂಕ್ತವಲ್ಲವೆಂದು ಈಗಾಗಲೆ ಹೇಳಿದೇನೆ. ಮುಖ್ಯ ಕವಿಗಳಾದ ಬೇಂದ್ರೆ, ಕುವೆಂಪು, ಪು. ತಿ. ನ, ಮಾಸ್ತಿ ಮುಂತಾದವರೆಲ್ಲರೂ ಸಾನೆಟ್ಟುಗಳನ್ನು ಬರೆದಿದಾರೆ. ಅವರು ಬರೆದಿರುವುದರಲ್ಲಿ ಪೆಟ್ರಾರ್ಕನ ಪದ್ಧತಿಯವೂ ಇವೆ, ಷೇಕ್ಸ್‌ಪಿಯರನ ಸೂತ್ರವನ್ನನುಸರಿಸಿದುವೂ ಇವೆ. ಕೆಲವರು ಇದರ ಹದಿನಾಲ್ಕು ಸಾಲುಗಳನ್ನು ಎಂಟು ಪಾದ ಮತ್ತು ಆರು ಪಾದದ ಬೇರೆ ಚರಣ (Stanza) ಗಳನ್ನಾಗಿ ವಿಂಗಡಿಸಿಕೊಂಡುದೂ ಉಂಟು, ಆ ರೀತಿಯಲ್ಲಿ ಬರೆದಿರುವುದೂ ಉಂಟು. ಆದರೆ ಅದೇ ಕವಿಗಳೇ ಷೇಕ್ಸ್‌ಪಿಯರನ ಸೂತ್ರದಂತೆ ಮಧ್ಯದಲ್ಲಿ ವಿಭಜನೆಯೇ ಇಲ್ಲದೆ ಹದಿನಾಲ್ಕು ಸಾಲುಗಳಿಗೂ ಒಂದೇ ಓಟವಿರುವಂತಹ ಸಾನೆಟ್ಟುಗಳನ್ನು ರಚಿಸಿದಾರೆ. ಹೀಗಾಗಿ ಒಂದೇ ರೀತಿಯನ್ನು ಒಂದೇ ಬಗೆಯನ್ನು, ಒಂದೇ ಸೂತ್ರವನ್ನನುಸರಿಸುವ ಹೆಸರಾದ 'ಅಷ್ಟಷಟ್ಪದಿ'ಯೆಂಬ ಹೆಸರನ್ನು, ಈ ಎರಡು ಬಗೆಯದಕ್ಕೆ ಅಂಟಿಸುವುದು ಸರಿಯಲ್ಲ. ಎಷ್ಟೋ ಇಂಗ್ಲಿಷ್ ಪದಗಳನ್ನು ಆರಿಸಿಕೊಂಡು ಕನ್ನಡಕ್ಕೆ ಮನೆ ತುಂಬಿಸಿಕೊಂಡಂತೆ ಸಾನೆಟ್ ಪದವನ್ನೂ ಕರೆಸಿಕೊಳ್ಳೋಣ. ದಕ್ಷಿಣ ಫ್ರಾನ್ಸಿನಲ್ಲಿ ಹುಟ್ಟಿ, ಇಟಲಿಯಲ್ಲಿ ಬಾಲ್ಯ ಕಳೆದು, ಇಂಗ್ಲೆಂಡಿಗೆ ವಲಸೆ ಬಂದು, ಅಲ್ಲಿ ಯೌವನಕ್ಕೆ ಬಂದು ಪ್ರಗಲ್ಭೆಯಾದ 'ಸಾನೆಟ್' ಹೆಣ್ಣನ್ನೇ ಕನ್ನಡಕ್ಕೆ ಮನೆ ತುಂಬಿಸಿಕೊಂಡಾಗ, ಬರಿಯ ಒಂದು ಹೆಸರಿಗಾಗಿ ಒದ್ದಾಡುವುದು, ಹಿಂದೇಟು ಹಾಕುವುದು ಸರಿಯಲ್ಲ. ಆದ್ದರಿಂದ ಸಾನೆಟ್ ಎಂಬ ಹೆಸರೇ ಸೂಕ್ತವೆಂದು ತೋರುತ್ತದೆ.

ಕನ್ನಡದ ಕವಿಗಳಲ್ಲಿ ಎಲ್ಲರೂ ಸಾನೆಟ್ಟುಗಳನ್ನು ಬರೆದಿರುವರೆಂದೇ ಹೇಳಬಹುದು. ಹದಿನಾಲ್ಕುಸಾಲಿನ ಈ ಕವಿತೆಯಲ್ಲಿ ಇಂಗ್ಲಿಷಿನಲ್ಲಿ ಹತ್ತು ಉಚ್ಚಾರಾಂಶಗಳು, ಐದು ಗಣಗಳಲ್ಲಿರುವ ಪಾದಗಳೇ ಬಳಕೆಯಲ್ಲಿದ್ದುವು. ಎಷ್ಟೋ ಬಾರಿ ಒತ್ತು ಹಗುರಗಳನ್ನು ಬಿಡುವುದು, ಬದಲಾಯಿಸುವುದರ ಮೂಲಕ ಹಲವಾರು ಬಗೆಯ ಲಯ ವಿನ್ಯಾಸಗಳನ್ನು ನಾವು ಇಂಗ್ಲಿಷ್ ಸಾನೆಟ್ಟುಗಳಲ್ಲಿ, ಸರಳರಗಳೆ(Blank Verse) ಯಲ್ಲಿ ಕಾಣಬಹುದು. ಷೇಕ್ಸ್‌ಪಿಯರನ ಕೆಲವು ನಾಟಕದ ಸರಳರಗಳೆ, ವರ್ಡ್ಸ್‌ವರ್ತನ ಪ್ರೆಲ್ಯೂಡ್ (Prelude), ಅಥವಾ ರೂಪರ್ಟ್ ಬ್ರೂಕ್ (Rupert

Brooke), ಆಡೆನ್ (Auden) ಮುಂತಾದ ಕವಿಗಳ ಕವಿತೆಗಳಲ್ಲಿ ಇಂತಲ್ಲಿಯೇ ತಾಳ ಬೀಳುತ್ತದೆ, ಇಲ್ಲಿಯೇ ಗಣ ವಿಭಜನೆಯಾಗುತ್ತದೆಂದು ಹೇಳುವುದು ಸಾಧ್ಯವಿಲ್ಲ. ಆಡುಮಾತಿಗೆ ಹತ್ತಿರ ಹತ್ತಿರ ಬಂದು, ಆಡುಮಾತಿನ ಲಯದ ವಿನ್ಯಾಸ, ಪಲುಕು (Modulation) ಕವಿತೆಗೂ ಬಂದುಬಿಟ್ಟಿದೆ. ಆದರೆ ಇದಕ್ಕೆ ಹತ್ತು ಉಚ್ಚಾರಾಂಶ, ಒತ್ತು ಹಗುರಗಳ ಲಯದ ಹಂದರ ಇದ್ದೇ ಇದೆ. ಕನ್ನಡದಲ್ಲಿ ಅದಕ್ಕೆ ಸಮನಾದ ಒಂದು ಛಂದಸ್ಸು ಬೇಕಾಗಿತ್ತು. ಅದನ್ನು ಕನ್ನಡಕ್ಕೆ ಮೊತ್ತಮೊದಲು ತಂದ ಶ್ರೇಯಸ್ಸು ಕೀರ್ತಿ ಮಾಸ್ತಿಯವರದು. ಸರಳರಗಳೆಯನ್ನು ರೂಪಿಸಿ ಉಪಯೋಗಿಸಿದ ಮೊದಲಿಗರು ಅವರು. ಇದರ ಲಕ್ಷಣ ಬಹಳ ಸುಲಭ. ಪ್ರತಿಪಾದದಲ್ಲಿಯೂ ಇಪ್ಪತ್ತು ಮಾತ್ರೆಗಳಿರುತ್ತವೆ. ಇವುಗಳು ಯಾವ ಗಣಗಳಿಂದ ಬೇಕಾದರೂ ಕೂಡಿರಬಹುದು. ಉದಾಹರಣೆಗೆ ಈ ಕೆಲವು ಸಾಲುಗಳನ್ನು ನೋಡೋಣ.

> ನಮ್ಮ ಸೀಮೆಯ ಕೆಲವು ಊರ ಹೆಸರಿನ ಅರ್ಥ
> ಬಹು ರಮ್ಯವಾಗಿ ಬಹು ಭಾವಗರ್ಭಿತವಾಗಿ
> ರಸಪುಷ್ಟವಾಗಿಹವು.
>
> (ಮಾಸ್ತಿ. ಅರುಣ: ೩೦ ನೆಯ ಪುಟ)

ಇದು ಸರಳರಗಳೆಯಲ್ಲಿದೆ. ಇದರ ಛಂದಸ್ಸನ್ನು ವಿಂಗಡಿಸಿದರೆ ಈ ರೀತಿ ಯಾಗುತ್ತದೆ.

> —v —vv vvv —v vvvv —v
> ನಮ್ಮ ಸೀಮೆಯ ಕೆಲವು ಊರ ಹೆಸರಿನ ಅರ್ಥ
> vv —v —v vv —v - vv —v
> ಬಹು ರಮ್ಯವಾಗಿ ಬಹು ಭಾವಗರ್ಭಿತವಾಗಿ
> vv —v—vv v
> ರಸ ಪುಷ್ಟವಾಗಿಹವು.

ಇಲ್ಲಿ ೫ ಮಾತ್ರೆಯ ಗಣಗಳಿರುವುದು ಓದುವಾಗ ತೋರುತ್ತದೆ. ಆಗ ಇದನ್ನು ಒಡೆಯುವುದು ವಿಚಿತ್ರವಾಗಿ, ಪದಗಳನ್ನು ಕೊಯ್ಯಬೇಕಾಗುತ್ತದೆ. ಆದರೆ ಮೊದಲಿನ ಸಾಲಿನಲ್ಲಿ ಈ ಕಷ್ಟ ಬರುವುದಿಲ್ಲ. ೩+೪+೩+೩+೪+೩ ಈ ರೀತಿಯಲ್ಲಿ ಅದನ್ನು ವಿಂಗಡಿಸಬಹುದು.

> ೩ ೪ ೩ ೩ ೪ ೩
> ನಮ್ಮ | ಸೀಮೆಯ | ಕೆಲವು | ಊರ | ಹೆಸರಿನ | ಅರ್ಥ |

ಇಲ್ಲಿ ಪದಗಳನ್ನು, ಅಕ್ಷರಗಳನ್ನು ಒಡೆಯುವ ಅವಶ್ಯಕತೆಯೊದಗುವುದಿಲ್ಲ. ಆದರೆ ಎರಡನೆಯ ಸಾಲಿನಲ್ಲಿ ಈ ರೀತಿ ವಿಂಗಡಿಸುವುದೂ ಸಾಧ್ಯವಿಲ್ಲ. ಪದಗಳಿರುವಂತೆ ನೋಡಿದರೆ ೨+೬+೨+೧೦ ಇರುವಂತೆ ಕಾಣುತ್ತದೆ. ಆದರೆ ಈ ಪಾದದ ಉತ್ತರಾರ್ಧ 'ಭಾವಗರ್ಭಿತವಾಗಿ' ಸುಲಭವಾಗಿ ವಿಂಗಡಿತವಾಗುತ್ತದೆ—

ಭಾವ | ಗರ್ಭಿತ | ವಾಗಿ ಎಂದು ೩+೪+೩ ಮಾತ್ರೆಗಳನ್ನಾಗಿ ವಿಂಗಡಿಸಿದರೂ ತಪ್ಪಾಗದು. ಆದರೆ ಇದೇ ಪಾದದ ಪೂರ್ವಾರ್ಧ 'ಬಹು ರಮ್ಯವಾಗಿ ಬಹು' ವನ್ನು ಹೀಗೆ ವಿಂಗಡಿಸುವುದು ಸಾಧ್ಯವಿಲ್ಲ. ಓದುವಾಗ ಅದು ೫+೫ ಆಗಿ ತೋರುತ್ತದೆ. ಆಗ ಅದು "ಬಹುರಮ್ಯ | ವಾಗಿ ಬಹು" ವಾಗುತ್ತದೆ. ಆದರೂ ಇಲ್ಲಿ ೨+೬+೨ ರಂತೆ ಓದಿಕೊಂಡರೆ ಲಯದ ವೈವಿಧ್ಯ ಕಾಣ ಬರುತ್ತದೆ ಇದು ಕನ್ನಡಕ್ಕೆ ಹೊಸದಾಗಿ ಬಂದ ಛಂದಸ್ಸು. ಕಾಲಕ್ಕೆ ತಕ್ಕಂತೆ, ಅವಶ್ಯಕತೆಗೆ ಸರಿಯಾಗಿ ರಸಾನುಭವಕ್ಕೆ ಕುಂದು ಬರದಂತೆ ಲಯ ವಿನ್ಯಾಸವನ್ನು ಏರ್ಪಡಿಸುವುದು ಕವಿಯ ಕರ್ತವ್ಯ. ಭಾಷೆಯ, ಕಾವ್ಯದ ಬೆಳಸಿಗೆ ಇದು ಅತ್ಯವಶ್ಯಕ. ಹೊಸ ಕಾವ್ಯದಲ್ಲಿ, ಹೊಸ ಛಂದಸ್ಸು ಬಂದಿದೆ. ಹೊಸ ಲಯಗಳನ್ನು ಬಳಕೆಗೆ ತಂದುಕೊಂಡಿದಾರೆ. ಇದರಿಂದ ಭಾಷೆಗೆ ಲಾಭವೇ ಹೊರತು ಕೊರಗುವಂತಹುದೇನೂ ಇಲ್ಲ. [ಆಸಕ್ತಿಯುಳ್ಳವರು ತೀ. ನಂ. ಶ್ರೀ. ಯವರ 'ಹೊಸ ಛಂದಸ್ಸಿನ ಲಯಗಳು' ಎಂಬ ಲೇಖನವನ್ನು 'ಸಂಭಾವನೆ'ಯಲ್ಲಿ ಓದಬಹುದು. ಪುಟಗಳು ೩೯೮ರಿಂದ೪೧೫] ಲಯ ವೈವಿಧ್ಯ, ಪಲುಕು (modulation) ಈ ಸರಳರಗಳೆಯಲ್ಲಿ ಬೇಕು ಬೇಕಾದಂತೆ ತೋರಿಕೊಳ್ಳುತ್ತದೆ.

ಸರಳ ರಗಳೆಯ ಪಾದವೇ ಸಾನೆಟ್ಟಿನ ಪಾದ ಕೂಡ. ಇಲ್ಲಿಯೂ ಇಪ್ಪತ್ತು ಮಾತ್ರೆಗಳಾಗುವಷ್ಟು ಮಾತ್ರ ಉಚ್ಚಾರಾಂಶಗಳು ಪ್ರತಿ ಪಾದದಲ್ಲಿಯೂ ಇರುತ್ತವೆ. ಗಣಗಳು ಭಿನ್ನವಾಗಬಹುದು. ಬೇರೆ ಬೇರೆ ಲಯಗಳಿರಬಹುದು. ಆದರೆ ಪ್ರತಿ ಪಾದದಲ್ಲಿಯೂ ಇಪ್ಪತ್ತು ಮಾತ್ರೆಗಳಿರುತ್ತವೆ. ಒಂದು ಸಮಯದ ಒಂದೇ ಒಂದು ಭಾವವು ಈ ಪದ್ಯದಲ್ಲಿ ಚೆನ್ನಾಗಿ ರೂಪುಗೊಳ್ಳುತ್ತದೆ. ಎಂಟು ಪಾದದ ಗುಂಪಿರುವ, ಮತ್ತು ಆರು ಪಾದದ ಗುಂಪಿರುವ ಒಂದೆರಡು ಸಾನೆಟ್ಟುಗಳನ್ನು ತೆಗೆದುಕೊಂಡು ನೋಡೋಣ. ಇಲ್ಲಿ ಎಂಟು ಪಾದಗಳ ಪ್ರಾಸದ ಕಟ್ಟು, ಆರು ಪಾದಗಳ ಪ್ರಾಸದ ಕಟ್ಟು ಬೇರೆ ಬೇರೆ. ಮೊದಲ ಎಂಟು ಪಾದದಲ್ಲಿ ಒಂದು ವಿಷಯ ವಿವರವಾಗುತ್ತದೆ. ಅನಂತರ ಬರುವ ಆರು ಸಾಲಿನಲ್ಲಿ ಈ ಮೊದಲು ಬಂದ ವಿಷಯದಿಂದ ಉದಿಸುವ ಮತ್ತೊಂದು ವಿಷಯವೋ ಭಾವವೋ ಚಿತ್ರಿತವಾಗುತ್ತದೆ. ಉದಾಹರಣೆಗಾಗಿ ಒಂದೆರಡು ಸಾನೆಟ್ಟುಗಳನ್ನು ನೋಡಬಹುದು. ಇಲ್ಲಿನ ಛಂದಸ್ಸಿನಲ್ಲಿ ಇಪ್ಪತ್ತು ಮಾತ್ರೆಗಳ ಗಣ ಚೆನ್ನಾಗಿ ಕಾಣುವುದು. ಲಯ ಅಲ್ಲಲ್ಲಿ ಬದಲಾಯಿಸಿದರೂ ಹಂದರವನ್ನು ತೀರಾ ಬಿಟ್ಟು ಹೋಗುವುದಿಲ್ಲ. ಪ್ರಾಸದ ಕಟ್ಟು ಕೂಡ ಚೆನ್ನಾಗಿ ಕಾಣಿಸಿಕೊಳ್ಳುತ್ತದೆ.

**ಪಂಪನಿಗೆ**

1 ಶ್ರೀಲಲಿತ–ಮಾಧುರ್ಯ–ಸೌಂದರ್ಯ–ಗಾಂಭೀರ್ಯ — ಅ
2 ದೆಸಕದಿಂದೆಸಗಿ ಕಾವ್ಯ ಪ್ರೌಢಿಯಲಿ ಮೆರೆದು — ಬ
3 ನಿನ್ನ ಸಾಸಿರಕರದ ಕರ ಚೆಲುವಿನಲಿ ಬರೆದು — ಬ

4 ಕನ್ನಡದ ಸವಿನುಡಿಯ ಬಾನ ಬೆಳಗುವ ಸೂರ್ಯ —ಸ
5 ಈಗಳೂ ನಡೆದಿಹುದು ಕವಿಯೆ ನಡೆಸಿದ ಕಾರ್ಯ —ಸ
6 ನಿನ್ನ ನವರಸದ ತವನಿಧಿ ಜಲಧಿಯೊಲು ಮೊರೆದು —ರಿ
7 ಸುಮನಸರ ಸೌಮನಸ್ಯದ ಸುಮನಗಳ ಕರೆದು —ರಿ
8 ಇಂದಿಗೂ ಮೊಳಗುತಿದೆ ದಿವ್ಯದುಂದುಭಿ ತೂರ್ಯ —ಸ
9 ಪಸರಿಸಿದ ಮಸಳಿಸಿದ ಮತ್ತೆ ಪಸರಿಸಲಿರುವ —ಗ
10 ನಿನ್ನ ಪುಟವಹಸಾಜಮಾದ ಪುಲಗಿರಿಯ ತಿರುಳು- —ಮ
11 ಗನ್ನಡಕೆ ದೆಸೆದೆಸೆಯ ದೇಸಿಗನ್ನಡ ಬರುವ —ಗ
12 ಒಸಗೆ ಬೀರಲಿ ಅಚ್ಚಕೆಚ್ಚು ಕನ್ನಡ ಹುರುಳು —ಮ
13 ಇಹ-ಪರ-ಮಹಾನುಭಾವ ವ್ಯಂಜನೆಗೆ ಸಾಕು —ಪ
14 ಕನ್ನಡವು ಕನ್ನಡವ ಕನ್ನಡಿಸುತಿರಬೇಕು. —ಪ

—ಬೇಂದ್ರೆ. ಗಂಗಾವತರಣ, ಪುಟ ೬೯

ಈ ಸಾನೆಟ್ಟಿನಲ್ಲಿ ನಾವು ಪೆಟ್ರಾರ್ಕನ ಪದ್ಧತಿಯ ಅನುಸರಣೆಯನ್ನು ಚೆನ್ನಾಗಿ ಕಾಣಬಹುದು. ಕೊನೆಯ ಅಕ್ಷರಗಳ ಪ್ರಾಸವೇ ಇಲ್ಲಿ ಪ್ರಾಸ. ಅಲ್ಲಲ್ಲಿ ಎರಡಕ್ಷರಗಳು ಬರುವುದೂ ಉಂಟು. ಈ ಪ್ರಾಸದ ಕಟ್ಟನ್ನು ನೋಡಿದರೆ ಮೊದಲೆಂಟು ಪಾದಗಳದು ಸರಿರಿಸ, ಸರಿರಿಸ ಎಂದಾಗುತ್ತದೆ. ಇದು ಪೆಟ್ರಾರ್ಕನ್ ರೂಪದ ಬದ್ಧ ಪ್ರಾಸ (Enclosed Rhyme). ಇನ್ನುಳಿದ ಆರು ಪಾದಗಳ ಪ್ರಾಸ ಗಮಗಮಪಪ ಎಂದಾಗುತ್ತದೆ. ಇಂತಹ ಪ್ರಾಸದ ಕಟ್ಟು ಪೆಟ್ರಾರ್ಕನ್ ಸಾನೆಟ್ ರೂಪದಲ್ಲಿ ಉಂಟೆಂದು ನಾವು ನೋಡಿದೇವೆ. ಇಲ್ಲಿ ಪಂಪನ ಹಿರಿಮೆಯನ್ನು ಸಾರುವುದು, ಪಂಪನಿಗೆ ಕವಿಯೊಡ್ಡುವ ಭಕ್ತಿಯ ಕಾಣಿಕೆ ಮುಖ್ಯ. ಮೊದಲೆಂಟು ಪಾದದಲ್ಲಿ ಒಂದು ವಿಷಯ ನಿರೂಪಣೆಯಾಗಿ ಭಾವಕ್ಕೊಂದು ಬಿಡುವು ಸಿಗುತ್ತದೆ. ಅನಂತರದ ಆರು ಪಾದದಲ್ಲಿ ಅದಕ್ಕೆ ಸೇರಿದಂತಹ ವಿಚಾರಲಹರಿ ಮೂಡಿ ಬರುತ್ತದೆ. ಈ ರೀತಿಯ ಸಾನೆಟ್ಟುಗಳು ಮಾಸ್ತಿ, ಬೇಂದ್ರೆ, ಪುಟ್ಟಪ್ಪ ಮತ್ತಿತರ ಕವಿಗಳಲ್ಲಿ ಬೇಕೆನಿಸುವಷ್ಟು ಸಿಗುತ್ತವೆ. ಅಲ್ಲದೆ ಇಲ್ಲಿ ಪ್ರಾಸದ ಕಟ್ಟಿನಲ್ಲಿ ಅಲ್ಲಲ್ಲಿ ಸಣ್ಣ ಪುಟ್ಟ ವ್ಯತ್ಯಾಸಗಳೂ ಕಾಣಿಸಿಕೊಂಡು, ಸಾನೆಟ್ಟಿನ ವೈವಿಧ್ಯ ಹೆಚ್ಚುತ್ತದೆ. ಬೇಂದ್ರೆಯವರ ‘ ಸಂಭಾವನೆ ’ ಸಾನೆಟ್ಟಿನಲ್ಲಿ ಆಚಾರ್ಯ ಬಿ.ಎಂ.ಶ್ರೀ. ಯವರಿಗೊಪ್ಪಿಸಿದ ಸಂಭಾವನೆಯ ಬಗ್ಗೆ ಸೊಗಸಾದ ಭಾವನಾ ಚಿತ್ರವಿದೆ. ಇಲ್ಲಿನದು ಅಷ್ಟ–ಷಟ್ಪದಿಯ ರೂಪ–ಪೆಟ್ರಾರ್ಕನ್ ರೀತಿಯದು. ಇಲ್ಲಿಯ ಪ್ರಾಸದ ಕಟ್ಟು ಸ್ವಲ್ಪ ಬದಲಾಯಿಸಿದಂತೆ ಈ ರೀತಿ ಕಾಣುತ್ತದೆ.

ಮೊದಲೆಂಟು ಪಾದ : ಸರಿರಿಸ ಗಮಮಗ.

ಕೊನೆಯ ಆರು ಪಾದ : ಪದನಿನಿಪದ.

ಬೇಂದ್ರೆಯವರ ‘ ತಾಜಮಹಾಲ ’ ಸಾನೆಟ್ಟಿನಲ್ಲಿ (ಗಂಗಾವತರಣ. ಪುಟ ೨೩)

ಪ್ರಾಸದ ಕಟ್ಟಿನ ಇನ್ನೊಂದು ರೂಪ ಕಾಣಬಹುದು.

ಮೊದಲೆಂಟು ಪಾದ: ಸರಿರಿಸ ಸರಿರಿಸ.

ಕೊನೆಯ ಆರು ಪಾದ: ಗಮಪಪಗಮ

ಹೀಗೆಯೇ ಪುಟ್ಟಪ್ಪನವರ ಒಂದು ಸಾನೆಟ್ಟಿನಲ್ಲಿ ಬರುವ ಪ್ರಾಸದ ಕಟ್ಟನ್ನು ನೋಡಬಹುದು. ಬೇಂದ್ರೆಯವರ 'ಪಂಪನಿಗೆ' ಸಾನೆಟ್ಟಿನ ಪ್ರಾಸದ ಕಟ್ಟನ್ನೇ 'ವರ್ಣಶಿಲ್ಪಿ'ಯಲ್ಲಿ ಕಾಣುತ್ತೇವೆ. (ನವಿಲು. ಪುಟ ೭೨) ಇಲ್ಲಿಯೂ ಬದ್ಧ ಪ್ರಾಸವೇ ಇದೆ. ಸ್ವಾತಂತ್ರ್ಯವೆಂಬ ಸಾನೆಟ್ಟಿನಲ್ಲಿ (ನವಿಲು. ಪುಟ ೭೩) ಪುಟ್ಟಪ್ಪ ನವರು ಪೂರ್ತಾ ಪೆಟ್ರಾರ್ಕನ ರೂಪವನ್ನೇ ಬಳಸಿಕೊಂಡಿದಾರೆ. ಆದರೆ ಪ್ರಾಸಗಳನ್ನು ಬದಲಾಯಿಸಿಕೊಂಡು ಬೇರೆ ಬೇರೆ ಬಗೆಯ ಕಟ್ಟನ್ನುಪಯೋಗಿಸಿರುವುದಕ್ಕೆ 'ಪಾಂಚ ಜನ್ಯ'ದಿಂದ ಒಂದು ಉದಾಹರಣೆಯನ್ನು ತೆಗೆದುಕೊಳ್ಳಬಹುದು.

**ಭರತ ಮಾತೆಗೆ**

| | | |
|---|---|---|
| 1 | ನಿನ್ನ ಸುಲಿಗೆಯ ಕತೆಯನೋದುತಿರೆಯಿರೆ ಕಣ್ಣು | —ಸ |
| 2 | ಹನಿ ತುಂಬಿ ಮಂಜಾಗುವುದು ; ದೈನ್ಯದಲಿ ನೊಂದು | —ರಿ |
| 3 | ನರಳುವುದು ಬಗೆ ; ಕುದಿಯುವುದು ನೆತ್ತರೆದೆ ಬೆಂದು | —ರಿ |
| 4 | ಬಿಸುಸುಯ್ಯುವುದು ; ಕೋಪದುದ್ರೇಕದಲಿ ಮಣ್ಣು- | —ಸ |
| 5 | ಗೂಡುತೆ ಮನಶ್ಶಾಂತಿ, ಸೈರಣೆ ಸಮತೆಗೆಟ್ಟು | —ಗ |
| 6 | ನೂರಾರು ವಿಷಸರ್ಪಗಳು ಎದೆಯ ಹುತ್ತದಲಿ | —ಮ |
| 7 | ಹೆಡೆಯೆತ್ತಿ ನಿಲ್ಲುವುವು ಬುಸುಗುಡುತೆ! ಚಿತ್ತದಲಿ | —ಮ |
| 8 | ವಿಪ್ಲವದ ನಿಲಯಕ್ಕೆ ಹಗೆತನದ ನೆಲಗಟ್ಟು | —ಗ |
| 9 | ಮೂಡುವುದು! ಹಸಿದ ಹೆಬ್ಬುಲಿಯಂತೆ ನಾಳದಲಿ | —ಮ (ಪ) |
| 10 | ನೆತ್ತರೌಡನು ಕಚ್ಚುವುದು! ವಿಲಯ ಕಾಲದಲಿ | —ಮ (ಪ) |
| 11 | ದಳ್ಳುರಿ ನೆಗೆಯುವಂತೆ ಹೊಟ್ಟೆಯ ಸಿಡಿಲಸಿಟ್ಟು | —ಗ (ದ) |
| 12 | ಬೆಂಕಿವೆಟ್ಟಾಗುತ್ತೆ ಹಗೆಯ ನುಣ್ಣನೆ ಸುಟ್ಟು | —ಗ (ದ) |
| 13 | ನೊಣೆಯಲುರಿ ಕಾರುವುದು!—ಮನ್ನಿಸಮ್ಮಾ; ಸಿಲ್ಕಿ | —ನಿ |
| 14 | ಮಮತೆಯಲಿ ಒಮ್ಮೊಮ್ಮೆ ಕವಿಯಾಗುವನು ಕಲ್ಕಿ | —ನಿ |

—(ಪಾಂಚ ಜನ್ಯ. ಪುಟ ೪೨)

ಈ ಸಾನೆಟ್ಟಿನಲ್ಲಿ ಪುಟ್ಟಪ್ಪನವರು ಬಳಸಿರುವ ಪ್ರಾಸದ ಕಟ್ಟು ಬಹಳ ವಿಚಿತ್ರ ವಾಗಿದೆ. ಇದು ಪೆಟ್ರಾರ್ಕನ ಪದ್ಧತಿಯಂತೆ ಎಂಟು ಪಾದ, ಆರು ಪಾದಗಳಾಗಿ ವಿಂಗಡಣೆಗೆ ಸಿಕ್ಕುವುದಿಲ್ಲ. ಭಾವನೆ, ವಿಚಾರ ಒಂದೇ ಸಮನಾಗಿ ಒಂದೇ ಓಟದಲ್ಲಿ ಮುನ್ನಡೆಯುತ್ತದೆ. ಆದ್ದರಿಂದ ಕೊನೆತನಕ ಬಿಡುವಿಲ್ಲದೆ ಹರಿಯುವ ಇದು ಷೇಕ್ಸ್ ಪೀರಿಯನ್ ರೀತಿಯದೆನ್ನಬಹುದು. ಆದರೆ ಪ್ರಾಸದ ಕಟ್ಟು ಮಾತ್ರ ಹಿಂದೆ ಯಾವುದ ರಲ್ಲೂ ಕಾಣದ ವಿಚಿತ್ರವಾಗಿದೆ. ಒಟ್ಟು ಪ್ರಾಸದ ಕಟ್ಟು ಹೀಗೆ ಬರುತ್ತದೆ.

'ಸರಿರಿಸಗಮಮಗ ಮಮಗಗನಿನಿ.' ಇದು ಸ್ಪೆನ್ಸರನ (Spenser) ಸಾನೆಟ್ಟುಗಳ ಪ್ರಾಸಕ್ಕೆ ಹತ್ತಿರ ಬರುತ್ತದೆ. ಆದರೆ ಒಂಭತ್ತನೆಯ ಪಾದದಿಂದ ಬೇರೆಯಾಗಿ ಪ್ರಾಸವನ್ನು ತೆಗೆದುಕೊಂಡರೆ ಆಗ ಪ್ರಾಸದ ಕಟ್ಟು 'ಸರಿರಿಸ ಗಮಮಗ ಪಪದದನಿನಿ'ಎಂಬ ರೂಪವಡೆಯುತ್ತದೆ. ಇದು ಷೇಕ್ಸ್‌ಪಿಯರನಲ್ಲಿ ಸಾಮಾನ್ಯ. ಸಾಧಾರಣವಾಗಿ ಈ ಎರಡು ರೀತಿಗಳಲ್ಲೂ ಕನ್ನಡದಲ್ಲಿ ಸಾನೆಟ್ಟುಗಳಿವೆ. ಆದರೆ ಇನ್ನೆರಡು ಹೊಸ ರೀತಿಗಳೂ ಇದೆ. ಪು. ತಿ. ನರಸಿಂಹಾಚಾರ್ಯರು ಮೂರು ಚೌಪದಿಗಳು ಮತ್ತು ಒಂದು ದ್ವಿಪದಿಯನ್ನಿಟ್ಟುಕೊಂಡು ಸಾನೆಟ್ ರಚಿಸಿದಾರೆ. ಆದರೆ ಇಲ್ಲಿನ ವೈಶಿಷ್ಟ್ಯವೆಂದರೆ ಈ ಮೂರು ಚೌಪದಿಗಳಲ್ಲಿ ಪ್ರಾಸವಿಲ್ಲ. ದ್ವಿಪದಿಯಲ್ಲಿ ಮಾತ್ರ ಪ್ರಾಸವಿದೆ. 'ರಸಸರಸ್ವತಿ'ಯಲ್ಲಿ ಬರುವ "ಪುಣ್ಯಕ್ಷೇತ್ರಗಳಲ್ಲಿ ಕಂಡು ಬರುವ ಜೀವಕಾಮವನ್ನು ಕುರಿತು" (ಪುಟ ೩೫), 'ಹಣತೆ'ಯಲ್ಲಿ ಬರುವ 'ಗಾನ' (ಪುಟ ೮೧) ಇವುಗಳಲ್ಲಿ ಅಪ್ಪಿತಪ್ಪಿ ಅಲ್ಲೊಂದು ಇಲ್ಲೊಂದು ಪ್ರಾಸ ಇಣುಕಿದಂತೆ ಕಾಣುತ್ತದೆ. ಆದರೆ ಸಾಧಾರಣವಾಗಿ ಮೂರು ಪ್ರಾಸರಹಿತ ಚೌಪದಿಗಳ ಜತೆಗೆ ಕೊನೆಯಲ್ಲೊಂದು ಪ್ರಾಸಬದ್ಧ ದ್ವಿಪದಿಯಿರುವುದು ಹೊಸರೂಪ. ಇದಕ್ಕೊಂದು ಉದಾಹರಣೆಯನ್ನು ಕೊಡಬಹುದು. 'ರಸಸರಸ್ವತಿ'ಯಲ್ಲಿ ಬರುವ 'ಮಳೆ' ಇಂತಹ ಒಂದು ಸಾನೆಟ್ಟು.

ಅದಿಗೊ ದೆಸೆಕೂಡುವೆಡೆ ತಿರೆಗೂಡುತಿದೆ ಮುಗಿಲು
ಹೆಬ್ಬಿದಿರ ಮೆಳೆಯ ಚೆಲುವನು ತೋರಿ, ಬಿಳಲೂರಿ
ಹಬ್ಬಿರುವ ಮಹಾವಟವೃಕ್ಷದೊಲು ಹಸರಿಸುತ
ಇದೆಕೊ ಎನುತಿದೆ ನನಗೆ ಮೈಬಿಡದ ಮಿಂಚಿನೊಳು.

ಕಾರೊಡಲ ಬಣ್ಣದೊಳು ತನ್ನ ಪನ್ನತಿಕೆಯನು
ಮೆರೆದ ಗುಡುಗಿನೊಳು ಗಿರಿಮೈತ್ರಿಯೊಳು ಸರ್ವಾರ್ತಿ—
ಹರಕ್ಷೀರ ಧಾರೆಯೊಳು ಹಿಂದೆ ತಾ ಹಿಡಿದಿಟ್ಟ
ನೂರಾರು ಕವಿ ಮುದಗಳೈಸಿರಿಯ ತೆರುವಂತೆ!

ಸನಿಯಕ್ಕೈದಿತು ಮಳೆ, ನೆನೆನೆನೆದುದೆನ್ನ ಮೈ.
ಕುಳಿತೆಡೆಯೆ ಕುಳಿತಿಹೆನು ಚಿರಕಾಲದಭಿಲಷಿತ
ಸಲುವ ತೆರ. ಅರಿತರಾರೀಮೇಘವಾವ ಪಾ—
ವನನದೀತೀರ್ಥವನು ತಂದಿಹುದೊ, ವೇಂಗಡದ

ಮಲೆಮುಟ್ಟಿ ಬಂದಿಹುದೊ ಸೇಚನದೊಳೆನ್ನ ಹರಸೆ
ಕರುಣೆಯೊಳು ನಿಂತೆಡೆಯೆ ಅವಭೃತಸ್ನಾತನೆನಿಸೆ?

—(ರಸಸರಸ್ವತಿ. ಪುಟ ೪೬)

ಇದೇ ರೀತಿಯಲ್ಲಿರುವ ಇತರ ಸಾನೆಟ್ಟುಗಳೂ ಪು.ತಿ.ನ. ರವರಲ್ಲಿ ಕಂಡು ಬರುತ್ತವೆ. ಇಲ್ಲಿ ಮೊದಲು ಮೂರು ಚೌಪದಿಗಳಲ್ಲಿಯೂ ಪ್ರಾಸವಿಲ್ಲವೆನ್ನುವುದು

ಸ್ಪಷ್ಟವಾಗಿದೆ. ಕೊನೆಯಲ್ಲಿ ದ್ವಿಪದಿಗೆ ಮಾತ್ರ ಪ್ರಾಸದ ರಕ್ಷೆಯಿದೆ. ಇಲ್ಲಿಯ ಪ್ರಕೃತಿ ಚಿತ್ರಣ ಸೊಗಸಾಗಿದೆ, ಸುಂದರವಾಗಿದೆ. ಹದಿನಾಲ್ಕು ಸಾಲಿನಲ್ಲಿ ಆ ಭಾವ ಅಡಕ ವಾಗಿದೆಯೆಂಬುದೊಂದೇ ಕಾರಣದಿಂದ ಇದನ್ನು ನಾವು ಸಾನೆಟ್ಟಿನ ಜಾತಿಗೆ ಸೇರಿಸಿ ಕೊಳ್ಳಬಹುದು. ಡಿ. ವಿ. ಗುಂಡಪ್ಪನವರು ಹದಿನಾರು ಸಾಲುಗಳ ಸೀಸ ಪದ್ಯಗಳಲ್ಲಿ (ವಸಂತ ಕುಸುಮಾಂಜಲಿಯಲ್ಲಿ) ಇದೇ ಕಾರ್ಯವನ್ನು ನಡೆಸಿದರೆ, ಅಲ್ಲಿಗೂ ಇಲ್ಲಿಗೂ ಎರಡು ಸಾಲು ಮಾತ್ರ ವ್ಯತ್ಯಾಸವೆನ್ನುವಂತೆ ತೋರುತ್ತದೆ. ಪ್ರಾಸ ಬಿಟ್ಟುದುದರಿಂದ ಪು. ತಿ. ನ ರವರ ಈ ಸಾನೆಟ್ಟಿಗೆ ಏನೋ ಕೊರೆಯಿದ್ದಂತೆ ಕಾಣುತ್ತದೆ. ಬೇಂದ್ರೆ ಯವರು ತಮ್ಮ 'ಉಯ್ಯಾಲೆ' ಯಲ್ಲಿರುವ ಬಹಳ ಸಾನೆಟ್ಟುಗಳಲ್ಲಿ ಪ್ರಾಸವನ್ನು ಪೂರ್ಣವಾಗಿ ತೊರೆದೇ ಬಿಟ್ಟಿದಾರೆ. 'ಗುಮ್ಮ' ಅಂತಹುದೊಂದು ಸಾನೆಟ್ಟು. ಆದರೆ ಇಲ್ಲಿ ಅಷ್ಟ-ಷಟ್ಪದಿಯ ವಿಭಜನೆಯನ್ನನುಸರಿಸಿದಾರೆ. ಇದರಿಂದ ಭಾವದ ಬಿಗಿಬರು ತ್ತದೆ. ಒಂದೇ ಮೂಡಿಕೆ ಬರುತ್ತದೆ. ಮಾಸ್ತಿಯವರಲ್ಲಿ ಷೇಕ್ಸ್‌ಪಿಯರ್, ಪೆಟ್ರಾರ್ಕ್ ಎರಡು ಬಗೆಯ ಸಾನೆಟ್ಟುಗಳೂ ಉಂಟು ವಿಷಯ ವೈವಿಧ್ಯವಂತೂ ಇಂಗ್ಲಿಷ್ ಸಾನೆಟ್ಟುಗಳಿಗಿಂತ ಮಿಗಿಲಾಗಿದೆ.

ಈ ಹಿರಿಯ ಕವಿಗಳೇ ಅಲ್ಲದೆ ಉಳಿದ ಎಷ್ಟೋ ಕವಿಗಳು ಸಾನೆಟ್ಟುಗಳನ್ನು ಯಶಸ್ವಿಯಾಗಿ ಬರೆದಿದಾರೆ. ಆ ಕವಿಗಳನ್ನು ಹೆಸರಿಸುವ ಅಗತ್ಯವಿಲ್ಲ. ಕೆಲವರು ಬರಿಯ ಸಾನೆಟ್ಟುಗಳನ್ನು ಮಾತ್ರವೇ ಸುಂದರವಾಗಿ ಹೆಣೆದ ಕವಿಗಳೂ ಇದ್ದಾರೆ. ಆದರೆ ಇಷ್ಟನ್ನು ಮಾತ್ರ ಧಾರಾಳವಾಗಿ ಹೇಳಬಹುದು. ಸಾನೆಟ್ ರೂಪ ನಮಗೆ ಹೊಸದು. ಅದರ ರೀತಿ ಹೊಸದು. ಛಂದಸ್ಸು ಹೊಸದು. ಹದಿನಾಲ್ಕು ವಾದದ ಈ ಸಾನೆಟ್ಟುಗಳಲ್ಲಿ ಹಲವಾರು ಬಗೆಯ ಪ್ರಾಸಗಳುಂಟು. ಹಲವಾರು ಬಗೆಯ ಲಯ ವಿನ್ಯಾಸಗಳೂ ಉಂಟು. ಕೆಲವಾರು ಬಾರಿ ಪ್ರಾಸಗಳನ್ನು ತೊರೆದು, ಕೆಲಸಾರಿ ಪ್ರಾಸ ಗಳನ್ನು ರೂಪಿಸಿಕೊಂಡು ಮಾರ್ಪಡಿಸಿಕೊಂಡು ಕನ್ನಡದ ಪ್ರತಿಭೆಗೆ ಅದನ್ನು ಒಗ್ಗಿಸಿ ಕೊಂಡಿದಾರೆ ನಮ್ಮ ಕವಿಗಳು. ಯಾವುದನ್ನಾದರೂ ಅರಗಿಸಿಕೊಂಡು ತನ್ನದಾಗಿಸಿ ಕೊಳ್ಳುವ ಪ್ರತಿಭೆ ಕನ್ನಡಕ್ಕೆ ಉಂಟು. ಹೊಸವಸ್ತು ಹೊಸ ರೂಪಗಳನ್ನು, ಹೊಸ ಲಯಗಳನ್ನು ಹೊಂದಿಸಿಕೊಂಡು ತನ್ನದಾಗಿಸಿಕೊಳ್ಳುವ ಪ್ರತಿಭೆ ಕನ್ನಡಕ್ಕೆ ಉಂಟು. ಹೊಸ ರೂಪಗಳನ್ನು, ಹೊಸಲಯಗಳನ್ನು ಹೊಂದಿಸಿಕೊಳ್ಳುವುದು, ಅಳವಡಿಸಿ ಕೊಳ್ಳುವುದು ತನ್ನ ಮಿತಿಗೆ ಮೀರಿದುದಲ್ಲವೆಂದು ಕನ್ನಡ ತೋರಿಕೊಟ್ಟಿದೆ. ಸಾನೆಟ್ ರೂಪ ಇಂಗ್ಲಿಷಿನಿಂದ ಬಂದುದೆಂದ ಮಾತ್ರಕ್ಕೆ ಅದು ನಿಕೃಷ್ಟವೂ ಅಲ್ಲ, ಅಥವಾ ನಾವು ಮುಟ್ಟಲಾರದ ಅಸಾಧ್ಯ ಸಿದ್ಧಿಯೂ ಅಲ್ಲ. ನಮ್ಮ ನುಡಿಗಟ್ಟಿನ ಹಿಡಿತಕ್ಕೆ, ಸವಿಗೆ ಅದು ಸಿಕ್ಕಿ ನವಿರುಗೊಂಡಿದೆ, ರೂಪಾಂತರಿಸುತ್ತಿದೆಯೆಂಬುದು ನಿರ್ವಿವಾದ ವಾದ ಮಾತು. ಇಂಗ್ಲೀಷಿನಿಂದ ಇದು ಬಂತು. ಇನ್ನೂ ಬೇರೆ ಬೇರೆ ರೂಪಗಳೂ ಬರಲಿ. ಕನ್ನಡದ ತೊಡವು ಶೃಂಗಾರ ಹೆಚ್ಚಲಿ. 'ಇಂಗ್ಲಿಷಿನ ಮೂಲಕ ಸಾಕ್ಷಾತ್ತಾ ಗಿಯೋ ಪರಂಪರೆಯಿಂದಲೋ ಗಳಿಸುವುದು ಸಾಧ್ಯವಾಗಿರುವಾಗ, ಅದಕ್ಕೆ ಅವಕಾಶ

ವಿರುವಾಗ ಗಳಿಸೋಣ, ಎಂದು ಪೂಜ್ಯ ಎ. ಆರ್. ಕೃಷ್ಣಶಾಸ್ತ್ರಿಗಳು ಹೈದರಾಬಾದಿನಲ್ಲಿ ನಡೆದ ೨೬ ನೆಯ ಸಾಹಿತ್ಯ ಸಮ್ಮೇಲನದ ಅಧ್ಯಕ್ಷ ಸ್ಥಾನದಿಂದ ನುಡಿದುದನ್ನು ಇಲ್ಲಿ ನೆನೆದುಕೊಳ್ಳಬಹುದು. (ಭಾಷಣಗಳು ಮತ್ತು ಲೇಖನಗಳು. ಸಂಪುಟ ೧. ಪುಟ. ೨೫) ಹೀಗೆ ಇಂಗ್ಲಿಷಿನಿಂದ ಬಂದ ಸಾನೆಟ್ ರೂಪ ನಮ್ಮಲ್ಲಿ ನೆಲೆಯೂರಿದೆ. ನಮ್ಮ ಮನೆಯಲ್ಲಿ ಓಡಿಯಾಡುವ, ನಮ್ಮ ತೊಡುಗೆ ತೊಡುವ ಮನೆಯ ಸೊಸೆಯಾಗಿದೆ ಅದು ಮನೆಗೊಂದು ಲಕ್ಷಣ. ಮನಸ್ಸಿಗೊಂದು ತಂಪು.

ಎಸ್. ಅನಂತನಾರಾಯಣ.

# ಕರ್ಣಾಟಕದ ಶಾಸನಗಳು

' ಚಕ್ರಾರಪಂಕ್ತಿರಿವ ಗಚ್ಛತಿ ಭಾಗ್ಯಪಂಕ್ತಿಃ ' ಎಂಬ ವಾಕ್ಯದ ಅರ್ಥ, ವ್ಯಕ್ತಿಗೆ ಹೇಗೋ ಹಾಗೆಯೇ ದೇಶಕ್ಕೂ ಬಹುಮಟ್ಟಿಗೆ ಅನ್ವಯಿಸುತ್ತದೆ. ಈ ವಾಕ್ಯದ ಬೇರೊಂದು ಮುಖವನ್ನೇ ' History repeats itself ' ಎಂಬ ಇಂಗ್ಲೀಷ್ ವಾಕ್ಯ ವಿಶದೀಕರಿಸುತ್ತದೆ. ಆದುದರಿಂದಲೇ ಪ್ರತಿಯೊಂದು ಪ್ರಗತಿಪರವಾದ ದೇಶವೂ ತನ್ನ ಪ್ರಾಚೀನ ಇತಿಹಾಸವನ್ನು ಶಾಸ್ತ್ರೀಯ ದೃಷ್ಟಿಯಿಂದ ಅಭ್ಯಾಸಮಾಡಿ ಅದರ ಬುನಾದಿಯಮೇಲೆ ತನ್ನ ಭವಿಷ್ಯವನ್ನು ನಿಷ್ಕರ್ಷಿಸಬೇಕಾಗಿದೆ. ಪ್ರಾಚೀನ ಇತಿಹಾಸ ರಚನೆಗೆ ಎಲ್ಲಾ ದೇಶದಲ್ಲಿಯೂ ಅಸಂಖ್ಯಾತವಾದ ಸಾಧನಗಳಿರುತ್ತವೆ. ಪ್ರಾಚೀನ ವಸ್ತುಗಳು, ವಾಸ್ತುಶಿಲ್ಪ, ತಕ್ಷವಿದ್ಯೆ, ಸಾಹಿತ್ಯ, ನಾಣ್ಯ, ಪುರಾಣ, ದಂತಕತೆಗಳು, ಸಮಕಾಲದ ನೆರೆಹೊರೆನಾಡಿನ ಚರಿತ್ರೆ, ಪರದೇಶದ ಪ್ರವಾಸಿಗಳ ಅನುಭವ ಲೇಖನಗಳು, ಅರಮನೆ ಗುರುಮನೆಗಳ ಪಟ್ಟಾವಳಿ, ನಿರೂಪಗಳು, ಭೂಶೋಧನೆಯಿಂದ ದೊರೆತ ಅವಶೇಷಗಳು ಮೊದಲಾದುವು ಅಂತಹ ಸಾಧನಗಳು. ಇವುಗಳೆಲ್ಲಕ್ಕಿಂತಲೂ ಪ್ರತ್ಯಕ್ಷವೂ ಸತ್ಯಾಂಶಗಳನ್ನೊಳಗೊಂಡದೂ ಆದ ಸಾಧನವೆಂದರೆ ಶಾಸನಗಳು (Epigraphs). ಇವುಗಳಲ್ಲಿ ಉಕ್ತವಾದ ವಿಷಯಗಳು ಬಹು ಅಮೂಲ್ಯವಾದುವು. ಆಯಾಕಾಲಕ್ಕೆ ಸಂಬಂಧ ಪಟ್ಟ ವಿಷಯಗಳು ಆಗ ಜೀವಂತರಾಗಿರುವ ವ್ಯಕ್ತಿಗಳಿಂದಲೇ ಸಾಕ್ಷಾತ್ತಾಗಿ ಉಲ್ಲೇಖಿಸಲ್ಪಟ್ಟಿರುವುವು. ಶಾಸನಗಳು ಶಿಲಾಪಟ್ಟಿಕೆಗಳಲ್ಲಿ, ತಾಮ್ರಫಲಕಗಳಲ್ಲಿ, ಹುಟ್ಟು ಬಂಡೆಗಳಮೇಲೆ, ನೆಟ್ಟ ಕಲ್ಲುಗಳಮೇಲೆ, ವಸ್ತು ವಾಹನಗಳಮೇಲೆ, ಆಯುಧಗಳ ಮೇಲೆ, ವಿಗ್ರಹಗಳ ಪಾದಪೀಠಗಳಲ್ಲಿ, ಶರೀರದ ಹಿಂಭಾಗದಲ್ಲಿ, ದೇವಸೇವೋಪಕರಣದ್ರವ್ಯಗಳಲ್ಲಿ ಕೆತ್ತಲ್ಪಟ್ಟಿರುತ್ತವೆ. ಇವುಗಳೆಲ್ಲವನ್ನೂ ಸಂಗ್ರಹಿಸಿ ವಿಭಜನೆಮಾಡಿ ಕ್ರಮವಾಗಿ ಅಭ್ಯಾಸಮಾಡಿದರೆ ದೇಶದ ಆರ್ಥಿಕ ಧಾರ್ಮಿಕ ಚಲನವಲನಗಳು, ಭಾಷೆಯ ಬೆಳವಣಿಗೆ, ಪ್ರಾಂತ ಭೇದ, ಸಾಹಿತ್ಯ ಸ್ವರೂಪ, ಲಿಪಿಯ ಮಾರ್ಪಾಟು, ಕಲಾಭಿವೃದ್ಧಿ, ಭೌಗೋಳಿಕ ವ್ಯತ್ಯಾಸಗಳು, ರಾಜಕೀಯ ವ್ಯವಸ್ಥೆ ಮೊದಲಾದುವುಗಳನ್ನೊಳಗೊಂಡ ಅವಿಚ್ಛಿನ್ನವಾದ ಸಮಗ್ರ ಚರಿತ್ರೆಯನ್ನು ರಚಿಸಲು ಸಾಧ್ಯವಾಗುವುದು. ಆದುದರಿಂದ ಪ್ರತಿಯೊಂದು ದೇಶದ ಶಾಸನಸಾಹಿತ್ಯದ ಕೂಲಂಕಷವಾದ ಅಭ್ಯಾಸವು ಅದರ ಶ್ರೇಯಸ್ಸಿನ ದೃಷ್ಟಿಯಿಂದ ಬಹು ಆವಶ್ಯಕವಾದುವು.

ಕರ್ಣಾಟಕದಲ್ಲಿ ಇಂತಹ ಕೆಲಸವು ಪ್ರಾರಂಭವಾದುದು ಕಳೆದ ಶತಮಾನದ ಅಂತ್ಯ ಭಾಗದಲ್ಲಿ; ಅದರಲ್ಲೂ ವಿದೇಶೀಯರಿಂದ. ಮೊತ್ತ ಮೊದಲು ಈ ಕೆಲಸಕ್ಕೆ ಕೈ ಹಾಕಿದವನೆಂದರೆ ಸರ್ ವಾಲ್ಟರ್ ಎಲಿಯಟ್. ಈತನು ಸುಮಾರು ೫೫೫ ಶಿಲಾ ಶಾಸನಗಳನ್ನೂ ಕೆಲವು ತಾಮ್ರ ಫಲಕಗಳನ್ನೂ ಶೇಖರಿಸಿ, ಅಭ್ಯಾಸ ಮಾಡಿ ಅದರ

ಫಲಿತಾಂಶವನ್ನು ರಾಯಲ್ ಏಷ್ಯಾಟಿಕ್ ಸೊಸೈಟಿಯ ಪತ್ರಿಕೆಯಲ್ಲಿ ' ಹಿಂದೂ ಶಾಸನಗಳು ' ಎಂಬ ಶೀರೋನಾಮೆಯಿಂದ ಪ್ರಕಟಿಸಿದನು. ಈ ಶಾಸನಗಳೇ ಮುಂದೆ ' ಕರ್ಣಾಟಕದ ಶಾಸನಗಳು ' ಎಂಬ ಹೆಸರಿನಿಂದ ಎರಡು ಸಂಪುಟಗಳಾಗಿ ಹೊರ ಬಿದ್ದವು. ಚಿತ್ರದುರ್ಗ, ಬೆಳಗಾಂ, ಹರಿಹರ ಮೊದಲಾದೆಡೆಗಳಲ್ಲಿ ಮೇಜರ್ ಡಿಕ್ಸನ್ನಿ ನಿಂದ ಶೇಖರವಾದ ಸುಮಾರು ೧೫೦ ಶಿಲಾಶಾಸನಗಳ ಭಾವಚಿತ್ರ ಸಂಗ್ರಹವನ್ನು ಮೈಸೂರು ಸರ್ಕಾರವು ೧೮೬೫ರಲ್ಲಿ ಪ್ರಕಾಶಪಡಿಸಿತು. ಧಾರವಾಡ, ಬೆಳಗಾಂ, ಕಾಲಾದ್ಗಿ ಉತ್ತರ ಕನ್ನಡ ಪ್ರದೇಶಗಳಲ್ಲಿ ಶೇಖರವಾದ ಸುಮಾರು ೬೪ ಶಾಸನಗಳ ಪ್ರತಿಯನ್ನು ಮಿ. ಹೋಪ್ ಎಂಬುವನು 'ಧಾರಾವಾಡ ಮತ್ತು ಮೈಸೂರು ಶಾಸನಗಳು' ಎಂಬ ಹೆಸರಿನಲ್ಲಿ ಪ್ರಸಿದ್ಧಿ ಪಡಿಸಿದನು. ಡಾ. ಪೆಗು, ಕರ್ನಲ್ ಪಿಗ್ಸ್, ಮೊದಲಾದ ವರು ಶೇಖರಿಸಿದ್ದ ಅನೇಕ ಶಾಸನಗಳನ್ನು ಡಾ. ಫ್ಲೀಟ್ ೧೮೭೮ ರಲ್ಲಿ ' ಬೊಂಬಾಯಿ ಮದ್ರಾಸ್ ಮೈಸೂರು ಪ್ರಾಂತಗಳ ಪಾಳಿ ಸಂಸ್ಕೃತ ಮತ್ತು ಹಳಗನ್ನಡ ಶಾಸನಗಳು ' ಎಂಬ ಹೆಸರಿನಿಂದ ಇಂಡಿಯಾ ಆಫೀಸ್ ಮೂಲಕ ಒಂದು ಸಂಪುಟವಾಗಿ ಪ್ರಕಟಿ ಸಿದನು. ಈ ಮಧ್ಯೆ ಸರ್ ವಾಲ್ಟರ್ ಎಲಿಯಟ್, ಪ್ರೊ. ಡಾರ್ಸ, ಮಿ. ಬಾಲ ಗಂಗಾಧರಶಾಸ್ತ್ರಿ, ಸರ್. ಜೆ. ಎಲ್. ಜೇಕಬ್ ಮೊದಲಾದವರು ಅಲ್ಲಲ್ಲೆ ಕೆಲವು ಶಾಸನಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದರು. ಆದರೆ ಈ ಶಾಖೆಯಲ್ಲಿ ಶಾಸ್ತ್ರೀಯವಾದ ಕೆಲಸವು ಪ್ರಾರಂಭವಾದುದು ೧೮೭೦ರಲ್ಲಿ ಬರ್ಗೆಸ್ ' ಇಂಡಿಯನ್ ಆಂಟಿಕ್ವೆರಿ ' ಪತ್ರಿಕೆ ಯನ್ನು ಪ್ರಾರಂಭಿಸಿದ ಮೇಲೆಯೇ. ಆ ಪತ್ರಿಕೆಯಲ್ಲಿಯೂ ಬರ್ಗೆಸ್ಸಿನ ಶಾಸನಗಳ ವರದಿಯಲ್ಲಿಯೂ ಬೊಂಬಾಯಿ ಶಾಖೆಯ ' ರಾಯಲ್ ಏಷ್ಯಾಟಿಕ್ ಸೊಸೈಟಿ, ಪತ್ರಿಕೆ ಯಲ್ಲಿಯೂ ಡಾ. ಬ್ಯೂಲರ್, ಪ್ರೊ. ಎಗ್ಲಿಂಗ್, ರೆ. ಕಿಟಲ್, ಮಿ. ಫಾಕ್ಸ್, ಆರ್. ಜಿ. ಭಂಡಾರಕರ್, ಪಂಡಿತ್ ಭಗವಾನ್‌ಲಾಲ್ ಇಂದ್ರಜಿ, ಎಸ್. ವಿ. ಪಂಡಿತ್, ಕೆ. ಟಿ. ಟಿಲೆಂಗ್, ಡಾ. ಪ್ಲೀಟ್ ಮೊದಲಾದವರು ಅನೇಕ ಶಾಸನಗಳನ್ನು ಸಂಗ್ರಹಿಸಿ ಶೋಧಿಸಿ ಭಾಷಾಂತರಿಸಿ ಪಡಿಯಚ್ಚುಗಳ ಜೊತೆಯಲ್ಲಿ ಪ್ರಕಾಶಿಸಿದರು. ೧೮೭೯ರಲ್ಲಿ ಮಿ. ರೈಸ್ ಮೇಲೆ ಹೇಳಿದವುಗಳಲ್ಲಿ ಮೈಸೂರಿಗೆ ಸಂಬಂಧಪಟ್ಟ ಶಾಸನಗಳ ಭಾಷಾಂತರವನ್ನು ' ಮೈಸೂರು ಶಾಸನಗಳು ' ಎಂಬ ಹೆಸರಿನಲ್ಲಿ ಪ್ರಕಾಶಪಡಿಸಿದ್ದಾರೆ. ಈ ಶತಮಾನದ ಆದಿಭಾಗದಲ್ಲಿ ಮಿ. ರೈಸರೇ ' ಎಪಿಗ್ರಾಫಿಯಾ ಕರ್ಣಾಟಿಕ ' ಎಂಬ ಶಾಸನ ಸಂಗ್ರಹಗಳ ಸಂಪುಟವನ್ನು ಪ್ರಾರಂಭಿಸಿದರು. ರಾವ್ ಬಹದ್ದೂರ್ ಆರ್. ನರಸಿಂಹಾಚಾರ್, ಡಾ. ಶಾಮಶಾಸ್ತ್ರಿ, ಡಾ. ಎಂ. ಎಚ್. ಕೃಷ್ಣ ಮೊದಲಾದವರು ಆ ಕಾರ್ಯವನ್ನು ಮುಂದುವರಿಸಿ ಈ ಸಂಪುಟಗಳಲ್ಲಿಯೂ ಮತ್ತು ಮೈಸೂರು ಶಾಸನದ ಇಲಾಖೆಯ ವರದಿಗಳಲ್ಲಿಯೂ ಇದುವರೆಗೆ ಸುಮಾರು ೨೦೦೦೦ ಶಾಸನ ಗಳನ್ನು ಶೇಖರಿಸಿ, ಶೋಧಿಸಿ, ಭಾಷಾಂತರಿಸಿ, ವಿಮರ್ಶಿಸಿ, ಕೆಲವು ಪಡಿಯಚ್ಚು ಗಳೊಡನೆ ಪ್ರಕಟಿಸಿದ್ದಾರೆ. ಮದ್ರಾಸ್ ಪ್ರಾಂತದ ಕನ್ನಡ ಶಾಸನಗಳನ್ನು ಕ. ಮೆಕೆನ್ಸಿ, ರಾವ್ ಬಹದ್ದೂರ್ ಎಚ್. ಕೃಷ್ಣಶಾಸ್ತ್ರಿ, ಸಿ. ಆರ್. ಕೃಷ್ಣಮಾಚಾರಿ

ಎಂ. ಲಕ್ಷ್ಮೀನಾರಾಯಣರಾವ್ ಮೊದಲಾದವರು ಇಂಡಿಯಾ ಸರ್ಕಾರದ ನೇತೃತ್ವದಲ್ಲಿ ಶೇಖರ ಮಾಡಿದ್ದಾರೆ. ಈಚೆಗೆ ಬೊಂಬಾಯಿ ಪ್ರಾಂತದ ಶಾಸನಗಳ ಎರಡು ಸಂಪುಟಗಳು ಡಾ. ಶಾಮಶಾಸ್ತ್ರಿಗಳಿಂದ ಸಂಶೋಧಿತವಾಗಿ ಪ್ರಕಟವಾಗಿವೆ. ಮದ್ರಾಸ್ ಪ್ರಾಂತದ ಶಾಸನಗಳ ಎರಡು ಸಂಪುಟಗಳೂ ಹೊರಬಿದ್ದಿವೆ. ನಾ. ಭಾ. ಶಾಸ್ತ್ರಿಯವರೂ ರಾಘವೇಂದ್ರರಾವ್ ಚಾಕಲಬ್ಬಿಯವರೂ ಕೊಪ್ಪಳದ ಅನೇಕ ಶಾಸನಗಳನ್ನು ಪ್ರಕಾಶ ಪಡಿಸಿದ್ದಾರೆ. ನೈಸಾಂ ಸರ್ಕಾರದ ಶಾಸನದ ಇಲಾಖೆಯ ಮೂಲಕವೂ ಆಗಾಗ ಆ ಪ್ರಾಂತದ ಹತ್ತಾರು ಕನ್ನಡ ಶಾಸನಗಳು ಪ್ರಕಾಶವಾಗಿರುವುದುಂಟು. ಕೆ. ಜಿ. ಕುಂದಣಗಾರ್ ಅವರು ಕೊಲ್ಲಾಪುರದ ಶಾಸನಗಳನ್ನು ಸಂಗ್ರಹಿಸಿ ಪ್ರಕಾಶಪಡಿಸಿದ್ದಾರೆ. ಇತ್ತೀಚೆಗೆ ಧಾರವಾಡದ ಸಂಶೋಧನ ಶಾಖೆಯ ಆರ್. ಎಸ್. ಪಂಚಮುಖಿಯವರಿಂದ ವಿಶೇಷ ಕೆಲಸ ನಡೆದು ಈಗ ಸುಮಾರು ೬೫ ಶಾಸನಗಳನ್ನೊಳಗೊಂಡ ಒಂದು ಸಂಪುಟವು ಬೆಳಕಿಗೆ ಬಂದಿದೆ. ಇಷ್ಟು ಹುಲಸಾಗಿ ಬೆಳೆದ ಈ ಶಾಸನಸಾಹಿತ್ಯದ ವಿಸ್ತಾರ, ವೈವಿಧ್ಯ, ಸ್ವರೂಪ, ಪ್ರಯೋಜನ, ಪ್ರಾಮುಖ್ಯತೆ, ಭವಿಷ್ಯ ಮೊದಲಾದುವುಗಳ ಸ್ಥೂಲ ಪರಿಚಯ ಮಾಡಿ ಕೊಡುವುದೇ ಈ ಲೇಖನದ ಮುಖ್ಯ ಉದ್ದೇಶ.

ಕರ್ಣಾಟಕದ ಶಾಸನಗಳು ದಕ್ಷಿಣದಲ್ಲಿ ತಂಜಾವೂರಿನಿಂದ ಉತ್ತರದ ಸೋಲಾಪುರದವರೆಗೂ ಪೂರ್ವದಲ್ಲಿ ದಕ್ಷಿಣ ಆರ್ಕಾಟಿನಿಂದ ಪಶ್ಚಿಮದ ಕೊಡಗಿನವರೆಗೂ ಹರಡಿವೆ. ಅಷ್ಟೇ ಅಲ್ಲದೆ ವಿಂಧ್ಯಪರ್ವತದವರೆಗಿರುವ ಇತರ ಶಾಸನಗಳಲ್ಲಿಯೂ ಅಲ್ಲಲ್ಲಿ ಕರ್ಣಾಟಕದ ವಿಷಯ ಪ್ರಾಸಂಗಿಕವಾಗಿ ಉಕ್ತವಾಗಿರುವುದುಂಟು.

ಹಿಂದೆಯೇ ತಿಳಿಸಿರುವಂತೆ ಶಾಸನಗಳು ಹುಟ್ಟು ಬಂಡೆ, ನೆಟ್ಟ ಕಲ್ಲುಗಳು, ನುಣುಪಾಗಿ ಕೆಲಸಮಾಡಿದ ಸ್ತಂಭಗಳು, ದೇವಾಲಯದ ಗೋಡೆ, ನೆಲ, ಅಸ್ತಿಭಾರ ಮತ್ತು ತೊಲೆ, ಬೋದಿಗೆಗಳು, ಪರ್ವತದ ತಪ್ಪಲು ಮತ್ತು ಮೆಟ್ಟಿಲುಗಳು, ಕೋಟೆಯ ಗೋಡೆ ಮತ್ತು ಬಾಗಿಲುವಾಡ ಮೊದಲಾದುವುಗಳ ಮೇಲೆ ಕೆತ್ತಲ್ಪಟ್ಟಿರುತ್ತವೆ. ಕಾಲದೃಷ್ಟಿಯಿಂದ ಪರಮ ಪ್ರಾಚೀನವಾದುವು ಮೊಳಕಾಲ್ಮುರು ತಾಲ್ಲೋಕಿನಲ್ಲಿರುವ ಮೂರು ಅಶೋಕನ ಶಾಸನಗಳು. ಇವು ಹುಟ್ಟುಗಲ್ಲಿನಮೇಲೆ ಅಡ್ಡಲಾಗಿ ಕೆತ್ತಲ್ಪಟ್ಟಿರುತ್ತವೆ. ಇವುಗಳಲ್ಲಿ ಬ್ರಹ್ಮಗಿರಿಯ ಶಾಸನವೇ ಎಲ್ಲ ವಿಧದಲ್ಲಿಯೂ ಸಂಪೂರ್ಣವಾಗಿರುವುದು. ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೋಕಿಗೆ ಸೇರಿದ ಮಳವಳ್ಳಿಯಲ್ಲಿರುವ ಶಾತಕರ್ಣಿಯ ಶಾಸನವೂ ಸ್ತಂಭದ ಮೇಲಿದೆ. ಅತಿ ಸುಂದರವಾದ ಕದಂಬರ ತಾಳಗುಂದದ ಶಾಸನವೂ ಸ್ತಂಭದ ಮೇಲೆಯೇ ಇದೆ. ಗಂಗರ ಶಾಸನಗಳೆಲ್ಲಾ ಸಾಮಾನ್ಯವಾಗಿ ತಾಮ್ರ ಫಲಕಗಳಲ್ಲಿ ಕೊರೆಯಲ್ಪಟ್ಟಿರುತ್ತವೆ.—ಆವಣಿ, ಸಿರಿಗುಂದ ತಲಕಾಡು ಮೊದಲಾದೆಡೆಗಳಲ್ಲಿ ಅವರ ಶಿಲಾ ಶಾಸನಗಳೂ ಇವೆ. ರಾಷ್ಟ್ರಕೂಟರ ಶಾಸನಗಳು ಬಹು ಸುಂದರವಾಗಿ ಕೆಲಸಮಾಡಿರುವ ಕಲ್ಲುಗಳಮೇಲೆ ತಮ್ಮದೇ ಆದ ವೈಖರಿಯಿಂದ ಕೆತ್ತಲ್ಪಟ್ಟವೆ. ಸಾಮಾನ್ಯವಾಗಿ ಅವರ ಚಿಹ್ನವಾದ ನೇಗಿಲನ ಗುರುತು

ಅವುಗಳಲ್ಲಿ ಕಂಡು ಬರುತ್ತವೆ. ಚೋಳರ ಶಾಸನಗಳು ಇತರ ಶಾಸನಗಳಂತೆ ಪ್ರತ್ಯೇಕವಾದ ಕಲ್ಲುಬಂಡೆಗಳ ಮೇಲೆ ಸಿಕ್ಕುವುದು ಅಪೂರ್ವ. ದೇವಾಲಯದ ಗೋಡೆ, ನೆಲ, ಅಡಿಪಾಯ, ಕೊಲೆಗಲ್ಲು, ಬೋದಿಗೆಗಳಲ್ಲಿ ದೊರೆಯುತ್ತವೆ. ಅನೇಕ ಸಲ ಒಂದೇ ಸಾಲಿನಲ್ಲಿ ದೇವಾಲಯದ ಸುತ್ತಲೂ ಹೋಗುವುದೂ ಉಂಟು. ಹೊಯ್ಸಳರ ಶಾಸನಗಳು ವಿಶೇಷ ಆಕರ್ಷವಾಗಿರುತ್ತವೆ. ಇವುಗಳ ಮೇಲುಭಾಗವು ಬಹು ನುಣವಾಗಿರುತ್ತವೆ. ಸಾಮಾನ್ಯವಾಗಿ ತಲೆಯ ಕಡೆ ಕೆತ್ತನೆಯ ಕೆಲಸಗಳಿರುತ್ತವೆ. ಅಕ್ಷರಗಳು ಗುಂಡಾಗಿಯೂ ಸಣ್ಣಗೂ ಮಧ್ಯೆ ಬೇರೆ ಯಾವ ಅಕ್ಷರವನ್ನು ಸೇರಿಸುವುದಕ್ಕಾಗದಷ್ಟು ಒತ್ತಾಗಿಯೂ ಇರುತ್ತವೆ. ಇವು ಪ್ರತ್ಯೇಕವಾಗಿ ಸಂಬಂಧಪಟ್ಟ ಸ್ಥಳಗಳಲ್ಲಿಯೇ ಸ್ಥಾಪಿಸಲ್ಪಟ್ಟಿರುತ್ತವೆ. ಬೇಲೂರು, ಸೋಮನಾಥಪುರದ ದೇವಾಲಯದ ಶಾಸನಗಳೂ ಶ್ರವಣಬೆಳಗೊಳದ ಕೆಲವು ಶಿಲಾ ಶಾಸನಗಳೂ ಇವಕ್ಕೆ ಉತ್ತಮ ಉದಾಹರಣೆಗಳು. ವಿಜಯನಗರಕ್ಕೆ ಸಂಬಂಧಪಟ್ಟ ಶಿಲಾ ಶಾಸನಗಳೂ ತಾಮ್ರ ಶಾಸನಗಳೂ ಹೇರಳವಾಗಿವೆ. ಇವಲ್ಲದೆ ಸಣ್ಣ ಸಣ್ಣ ಪಾಳೆಯಗಾರರ, ಒಡೆಯರ, ನಾಯಕರ, ಅನೇಕ ಶಾಸನಗಳು ನೇರವಾಗಿ ನೆಟ್ಟಿರುವ ಬಿಡಿಕಲ್ಲುಗಳ ಮೇಲೆ ಸಿಕ್ಕುತ್ತವೆ. ಬೆಟ್ಟಗಳ ಮೆಟ್ಟಲುಗಳಲ್ಲಿಯೂ ವಿಗ್ರಹಗಳ ಪೀಠದಲ್ಲಿಯೂ ನಾಮ ನಿರ್ದೇಶಕವಾದ ಅನೇಕ ಒಂದು ಸಾಲಿನ ಶಾಸನಗಳು ಅಸಂಖ್ಯಾತವಾಗಿರುತ್ತವೆ.

ಅಶೋಕನ ಶಾಸನಗಳು ಬ್ರಾಹ್ಮೀಲಿಪಿಯಲ್ಲಿವೆ. ಅಲ್ಲಿಂದ ಮುಂದೆ ಆ ಲಿಪಿಯೇ ಕಾಲಾನುಗುಣವಾಗಿ ಸೌಲಭ್ಯ ಮತ್ತು ಸೌಂದರ್ಯದ ದೃಷ್ಟಿಯಿಂದ ಹೊಸ ರೇಖೆಗಳನ್ನೂ ಹೊಸ ಆಕಾರಗಳನ್ನೂ ಪಡೆದು ದಕ್ಷಿಣ ಭಾರತದ ನಾನಾ ಲಿಪಿಗಳಾಗಿ ರೂಪುಗೊಂಡಿವೆ. ಮಳವಳ್ಳಿಯ ಶಾತಕರ್ಣಿಯ ಶಾಸನದಲ್ಲಿಯೇ ಕನ್ನಡ ಲಿಪಿಯ ಮೂಲ ರೂಪವನ್ನು ಕಂಡರೂ ಕನ್ನಡದ ವೊತ್ತ ಮೊದಲನೆಯ ಸಂಪೂರ್ಣ ರೂಪವನ್ನು ನಾವು ಕಾಣುವುದು ಹಲ್ಮಿಡಿಯ ಶಾಸನದಲ್ಲಿ. ಇದರ ಕಾಲ ಸು. ಕ್ರಿ. ಶ. ೪೫೦. ಅಂದಿನಿಂದ ಕನ್ನಡ ಲಿಪಿಯು ವಿವಿಧ ಮಾರ್ಪಾಟನ್ನು ಹೊಂದಿ ೧೫೦೦ವರ್ಷದ ಕಾಲದಲ್ಲಿ ಈಗಿನ ಹೊಸಗನ್ನಡ ಲಿಪಿಯ ರೂಪವನ್ನು ತಾಳಿದೆ. ಕರ್ಣಾಟಕದ ಶಾಸನಗಳೆಲ್ಲ ಯಾವ ಭಾಷೆಯಲ್ಲಿಯೇ ಇರಲಿ ವಿಶೇಷವಾಗಿ ಕನ್ನಡ ಲಿಪಿಯಲ್ಲಿಯೇ ಇರುತ್ತವೆ. ಅಪೂರ್ವವಾಗಿ ತಮಿಳು ತೆಲುಗು ಭಾಷೆಯ ಶಾಸನಗಳು ಆಯಾ ಲಿಪಿಗಳಲ್ಲಿಯೂ ಸಂಸ್ಕೃತಶಾಸನಗಳು ನಂದಿನಾಗರಿ ಮತ್ತು ದೇವನಾಗರಿ ಲಿಪಿಗಳಲ್ಲಿ ಕನ್ನಡ ಶಾಸನಗಳು ನಾಗರೀ ಲಿಪಿಯಲ್ಲಿಯೂ ಇರುವುದುಂಟು. ಮಹಮ್ಮದೀಯರ ಶಾಸನಗಳು ಮಾತ್ರ ಉರ್ದುಲಿಪಿಯಲ್ಲಿ ಅರಬ್ಬಿ ಮತ್ತು ಪರ್ಷಿಯನ್ ಭಾಷೆಗಳಲ್ಲಿರುತ್ತವೆ.

ಭಾಷೆಯ ದೃಷ್ಟಿಯಿಂದ ಕರ್ಣಾಟಕದ ಶಾಸನಗಳನ್ನು ಪ್ರಾಕೃತ, ಸಂಸ್ಕೃತ, ಕನ್ನಡ, ಮಿಶ್ರ ಭಾಷೆಯವುಗಳೆಂದು ವಿಭಾಗಿಸಬಹುದು. ಅಶೋಕನ ಶಾಸನಗಳೂ ಶಾತವಾಹನರ ಶಾಸನಗಳೂ ಕದಂಬರ ಹಲವು ಶಾಸನಗಳೂ ಪ್ರಾಕೃತದಲ್ಲಿವೆ. ಕದಂಬ,

ರಾಷ್ಟ್ರಕೂಟ, ಗಂಗ, ಬಾದಾಮಿ ಮತ್ತು ಕಲ್ಯಾಣಿ ಚಾಲುಕ್ಯ, ಆಳುವ, ನೊಳಂಬ, ಯಾದವ, ಹೊಯ್ಸಳ, ವಿಜಯನಗರ, ಮೈಸೂರು ಮತ್ತು ಇತರ ಪಾಳೆಯಗಾರರ ಶಾಸನಗಳು ಸಾಮಾನ್ಯವಾಗಿ ಶುದ್ಧ ಸಂಸ್ಕೃತದಲ್ಲಿಯೂ, ಶುದ್ಧ ಕನ್ನಡದಲ್ಲಿಯೂ, ಮಿಶ್ರ ಭಾಷೆಗಳಲ್ಲಿಯೂ ಇವೆ. ಅಪೂರ್ವವಾಗಿ ಅಲ್ಲೊಂದು ಇಲ್ಲೊಂದು ಮರಾಠಿ, ಗುಜರಾತಿ, ಬರ್ಮಾ ಭಾಷೆಯ ಶಾಸನಗಳೂ ಇರುವುದುಂಟು. ಒಟ್ಟಿನಲ್ಲಿ ಕರ್ಣಾಟಕದ ಎಲ್ಲಾ ಕಡೆಗಳಲ್ಲಿಯೂ ಎಲ್ಲಾ ಭಾಷೆಯ ಶಾಸನಗಳೂ ಸಿಕ್ಕಿದರೂ ಕೋಲಾರ, ಬೆಂಗಳೂರು, ಬಳ್ಳಾರಿ, ರಾಯಚೂರು ಜಿಲ್ಲೆಗಳಲ್ಲಿ ತೆಲುಗು ಭಾಷೆಯ ಶಾಸನಗಳೂ ಕೋಲಾರ, ಬೆಂಗಳೂರು, ಮೈಸೂರು ಜಿಲ್ಲೆಗಳಲ್ಲಿ ತಮಿಳು ಭಾಷೆಯ ಶಾಸನಗಳೂ ಹೇರಳವಾಗಿವೆ.

ಐತಿಹಾಸಿಕ ದೃಷ್ಟಿಯಿಂದ ಶಾಸನಗಳಿಗೆ ವಿಶೇಷವಾಗಿ ಮಾನ್ಯತೆಯುಂಟಾಗುವುದು ಅದರಲ್ಲಿ ಉಕ್ತವಾಗಿರುವ ಕಾಲ ನಿರೂಪಣೆಯಿಂದ. ಕೆಲವಲ್ಲಿ ಕಾಲವು ನಿರೂಪಿತವಾಗಿಲ್ಲದಿದ್ದರೂ ಹಲವಲ್ಲಿ ಸ್ಪಷ್ಟವಾದ ಕಾಲದ ಉಲ್ಲೇಖವಿದೆ. ಹೀಗೆ ಮಾಡುವುದರಲ್ಲಿ ಬೇರೆ ಬೇರೆ ಶಾಸನಗಳು ಬೇರೆ ಬೇರೆ ಮಾನಗಳನ್ನು ಉಪಯೋಗಿಸುತ್ತವೆ. ಅಶೋಕನ ಶಾಸನಗಳಲ್ಲಿ ಬೌದ್ಧ ಶಕೆ ಉಕ್ತವಾಗಿದೆ. ಇದು ಬುದ್ಧ ನಿರ್ವಾಣದಿಂದ ಪ್ರಾರಂಭವಾಗುತ್ತದೆ. ಈ ಕಾಲವು ಖಚಿತವಾಗಿ ನಿಸ್ಸೃಷ್ಟವಾಗಿಲ್ಲ. ಕೆಲವರು ಕ್ರಿ. ಪೂ. ೪೮೭ ಎಂದೂ ಮತ್ತೆ ಕೆಲವರು ಕ್ರಿ. ಪೂ. ೫೪೪ ಎಂದೂ ಅಭಿಪ್ರಾಯಪಡುತ್ತಾರೆ. ಅನೇಕ ಶಾಸನಗಳಲ್ಲಿ ಕಲಿಯುಗಾದಿ ವರ್ಷಗಳು ಹೇಳಲ್ಪಟ್ಟಿವೆ. ಕಲಿಯುಗದ ಆದಿ ಕ್ರಿ.ಪೂ. ೩೧೦೨ ಎಂದು ಸಾಮಾನ್ಯವಾಗಿ ಪಂಡಿತರಿಂದ ಅಂಗೀಕೃತವಾಗಿದೆ. ಅನೇಕ ಇತರ ಶಾಸನಗಳಲ್ಲಿ ಶಾಲಿವಾಹನ ಶಕೆ ಉಪಯುಕ್ತವಾಗಿದೆ. ಇದರ ಆದಿ ಕ್ರಿ. ಶ. ೭೮. ಇದಕ್ಕೆ ಸಾಮಾನ್ಯವಾಗಿ ಶಕ ವರ್ಷ ಎಂದೇ ರೂಢಿಯ ಪ್ರಯೋಗ. ಚಾಲುಕ್ಯರ ಶಾಸನಗಳಲ್ಲೆಲ್ಲಾ ಚಾಳುಕ್ಯ ವಿಕ್ರಮ ಶಕೆಯ ಪ್ರಯೋಗವಿದೆ. (ಎ. ಕ. vii. ೭೦, ೭೭, ೮೭, ೯೦, ೯೮ ಇತ್ಯಾದಿ). ಇದು ಆರನೆಯ ಚಾಳುಕ್ಯ ವಿಕ್ರಮನಿಂದ ಕ್ರಿ. ಶ. ೯೯೮ ನೆಯ ರಾಕ್ಷಸ ಸಂವತ್ಸರದಲ್ಲಿ ಅಂದರೆ ಅವನ ರಾಜ್ಯಭಾರದ ಪ್ರಥಮ ವರ್ಷದಲ್ಲಿ ಪ್ರಾರಂಭವಾಯಿತು. ಕೆಲವು ಜೈನ ಶಾಸನಗಳಲ್ಲಿ ಮಹಾವೀರ ಶಕೆಯ ಪ್ರಸ್ತಾಪವಿದೆ. ಇದೂ ಬೌದ್ಧ ಶಕೆಯಷ್ಟೇ ಅನಿರ್ದಿಷ್ಟ. ಕ್ರಿ.ಪೂ. ಐದನೆಯ ಶತಮಾನದ ಆದಿಯಿರಬಹುದು. ಮಹಮ್ಮದಿಯರ ಶಾಸನವೆಲ್ಲ ಹಿಜರೀ ಶಕೆಯನ್ನು ಉಪಯೋಗಿಸುತ್ತವೆ. ಹಲವು ಶಾಸನಗಳಲ್ಲಿ ಮೇಲ್ಕಂಡ ಶಕ ವರ್ಷಗಳ ಜೊತೆಯಲ್ಲಿ ಮಾಸ, ತಿಥಿ, ವಾರ, ನಕ್ಷತ್ರ ಮೊದಲಾದುವೂ ಸ್ಪಷ್ಟವಾಗಿ ನಿರ್ದೇಶಿತವಾಗಿರುವುದರಿಂದ ಅವುಗಳ ಸರಿಯಾದ ಕಾಲವನ್ನೂ ಅದರಲ್ಲಿ ಹೇಳಿರುವ ವಿಷಯಗಳ ಸತ್ಯಾಂಶವನ್ನೂ ಕಂಡು ಹಿಡಿಯಲು ಸಾಧ್ಯವಾಗುತ್ತದೆ. ಈ ಕಾರ್ಯಕ್ಕೆ ದಿ. ಸ್ವಾಮಿ ಕಣ್ಣುಪಿಳ್ಳೆಯವರ ೨೦೦೦ ವರ್ಷಗಳ ಪಂಚಾಂಗವು ಬಹು ಪ್ರಯೋಜನಕಾರಿಯಾಗಿದೆ.

ಶಾಸನಗಳಲ್ಲಿ ಉಕ್ತವಾದ ವಿಷಯಗಳು ಶಾಶ್ವತವಾಗಿ ಉಳಿಯಬೇಕೆಂಬುದು ಶಾಸನಕಾರರ ಉದ್ದೇಶ. ಆದುದರಿಂದ ಅವುಗಳ ಪ್ರಕಟನಕ್ಕೆ ದೀರ್ಘ ಕಾಲ ಉಳಿಯ ಬಹುದಾದ ಪದಾರ್ಥಗಳನ್ನೇ ಉಪಯೋಗಿಸುತ್ತಾರೆ. ಇವುಗಳಲ್ಲಿ ಪ್ರಧಾನವಾದುದು ಶಿಲೆ. ಇದು ಶೀಘ್ರವಾಗಿ ನಶಿಸಿಹೋಗುವುದಿಲ್ಲ. ಅಲ್ಲದೆ ಸುಲಭವಾಗಿ ಬೇರೊಂದೆಡೆಗೆ ಕೊಂಡೊಯ್ಯಲಾಗುವುದಿಲ್ಲ. ಹತ್ತಾರು ಜನಗಳಿಗೆ ತಿಳಿಯುವಂತೆ ಸಾರ್ವಜನಿಕ ಪ್ರದೇಶಗಳಲ್ಲಿರಬಹುದು. ರಹಸ್ಯವಾಗಿ ನಿರ್ಮಿಸುವುದೂ ಕಷ್ಟ. ಈ ಕಾರಣಗಳಿಂದ ಶಿಲಾಶಾಸನಗಳಲ್ಲಿ ಉಕ್ತವಾದ ವಿಷಯಗಳು ಹೆಚ್ಚು ಪರಿಗ್ರಾಹ್ಯ. ಕರ್ಣಾಟಕದಲ್ಲಿ ಶಿಲಾಶಾಸನಗಳೇ ವಿಶೇಷ; ಇವುಗಳಿಗೆ ಶಿಲಾಲಿಪ್ತ, ಶಿಲಾಲೇಖನ ಎಂಬ ಇತರ ಹೆಸರುಗಳೂ ಉಂಟು. ಇವುಗಳು ಎರಡು ಅಂಗುಲದಿಂದ ಒಂಭತ್ತು ಅಡಿವರಗಿನ ಪ್ರಮಾಣದಲ್ಲಿವೆ. ಸಿದ್ಧಾಪುರದಲ್ಲಿರುವ ಅಶೋಕನ ಶಾಸನವೇ ಎಲ್ಲದಕ್ಕಿಂತ ದೊಡ್ಡ ದೆಂದು ಹೇಳಬಹುದು. ಶಿಲಾಶಾಸನಗಳು ಎಲ್ಲೆಲ್ಲಿಯೂ ಸಿಕ್ಕುತ್ತವೆ. ದೇವಾ ಲಯದ ಒಳಗೆ, ಹೊರಗೆ, ಅಡಿಪಾಯದಲ್ಲಿ, ಸ್ತಂಭದಮೇಲೆ, ಚಾವಡಿಯ ಮುಂದೆ, ಬಸದಿಯ ಹಿಂದೆ, ಕೆರೆಯ ಕೋಡಿಯಲ್ಲಿ, ಬೆಟ್ಟದ ಕಿಬ್ಬಿಯಲ್ಲಿ, ಗುಹೆಯ ಒಳಭಾಗ ದಲ್ಲಿ, ಹೊಲದ ಮಧ್ಯದಲ್ಲಿ, ವಿಗ್ರಹಗಳ ಪೀಠ ಮತ್ತು ಶಿಖರಗಳಲ್ಲಿ—ಎಲ್ಲೆಲ್ಲಿಯೂ ಸಿಕ್ಕುತ್ತವೆ.ಅನೇಕ ಸನ್ನಿವೇಶಗಳಲ್ಲಿ ಶಾಸನಗಳಿಗೆ ಆಧಾರವಾಗಿದ್ದ ಭಾಗವು ನಾಶವಾ ದುದರ ಫಲವಾಗಿ ಭೂಮಿಯ ಒಳಗಡೆ ಹೂತುಹೋಗಿರುವುದೂ ಉಂಟು. ಆದುದ ರಿಂದಲೆ ಇತ್ತೀಚೆಗೆ ನಡೆದ ಅನೇಕ ಭೂಶೋಧನೆಯಲ್ಲಿ ಶಿಲಾಶಾಸನಗಳೂ ಉಪಲಬ್ಧ ವಾಗಿರುವುದು.

ಶಾಸನಗಳ ಪ್ರಕಟನಕ್ಕೆ ಉಪಯೋಗಿಸುವ ಇತರ ಸಾಧನವೆಂದರೆ ಲೋಹಗಳು. ಇವುಗಳಲ್ಲಿ ಚಿನ್ನ ಬೆಳ್ಳಿಯ ಪದಾರ್ಥಗಳ ಮೇಲಿರುವ ಶಾಸನಗಳು ಅಲ್ಪ ಸಂಖ್ಯಾಕ ವಾದುವು. ಇವೆಲ್ಲಾ ಸಾಮಾನ್ಯವಾಗಿ ಜ್ಞಾಪಕಾರ್ಥವಾದುವು ಮಾತ್ರ. ತಿರುಪತಿ, ಮೇಲುಕೋಟೆ, ನಂಜನಗೂಡು, ಶಿವಗಂಗೆ, ಮೊದಲಾದ ಕಡೆಯಲ್ಲಿರುವ ದೇವಾಲಯ ಗಳಿಗೆ ಅನೇಕ ಭಕ್ತಾದಿಗಳು ಸಮರ್ಪಿಸಿರುವ ದೇವಸೇವೋಪಕರಣ ದ್ರವ್ಯಗಳು ಅಂದರೆ ಛತ್ರಿ, ಚಾಮರ, ದೀವಟಿಗೆ, ಗಂಟೆ, ವಾಹನ ಮೊದಲಾದುವುಗಳ ಮೇಲೆ ಇಂತಹ ಶಾಸನಗಳಿರುತ್ತವೆ. ಕೆಲವು ಸಲ ಇವುಗಳಿಂದಲೂ ಅಮೂಲ್ಯವಾದ ಐತಿ ಹಾಸಿಕ ಪ್ರಯೋಜನವಾಗುವುದುಂಟು. ಲೋಹ ಶಾಸನಗಳಲ್ಲಿ ಪ್ರಧಾನವಾದುವು ತಾಮ್ರ ಶಾಸನಗಳು. ತಾಮ್ರಫಲಕಗಳಲ್ಲಿ ಶಾಸನಗಳು ಶಿಲೆಯ ಮೇಲೆ ಹೇಗೊ ಹಾಗೆಯೆ ಕೆತ್ತಲ್ಪಟ್ಟಿರುತ್ತವೆ. ಆವಶ್ಯಕತೆಗನುಗುಣವಾಗಿ ತಾಮ್ರ ಫಲಕಗಳು ಒಂದ ರಿಂದ ಹದಿನಾರು ಫಲಕದವರೆಗಿರುತ್ತವೆ. ಶಾಸನವು ಹಲಗೆಯ ಒಂದು ಅಥವಾ ಎರಡು ಪಕ್ಕಗಳಲ್ಲಿಯೂ ಇರುವುದುಂಟು. ಒಂದಕ್ಕಿಂತ ಹೆಚ್ಚು ಹಲಗೆಯಿದ್ದರೆ ಸಾಮಾನ್ಯವಾಗಿ ಅವು ಒಂದು ಬಳೆಯಿಂದ ಸೇರಿಸಲ್ಪಟ್ಟಿರುತ್ತವೆ. ಆ ಬಳೆಯ ಮುಖ ಭಾಗದಲ್ಲಿ ಶಾಸನಕಾರರ ಲಾಂಛನದಿಂದ ಕೂಡಿದ ಮುದ್ರೆಯಿರುತ್ತದೆ. ತಾಮ್ರ

ಶಾಸನಗಳ ಆಕಾರವು ಭಿನ್ನ ಭಿನ್ನವಾಗಿರುತ್ತವೆ. ೨”×೫” ದಿಂದ ೮”×೯”ದ ವರೆಗೂ ಉಂಟು. ಇವುಗಳಲ್ಲಿ ಉಕ್ತವಾಗಿರುವ ವಿಷಯವು ಸಾಮಾನ್ಯವಾಗಿ ಸಾರ್ವತ್ರಿಕವಾದುದಲ್ಲ. ವೈಯಕ್ತಿಕವಾದುದೇ ಹೆಚ್ಚು. ಆದುದರಿಂದ ಇವುಗಳೆಲ್ಲ ವ್ಯಕ್ತಿಗತವಾಗಿರುತ್ತವೆ. ಇವುಗಳನ್ನು ಸುಲಭವಾಗಿ ಕಲ್ಪನೆ ಮಾಡಬಹುದು. ಆದುದರಿಂದ ಇವುಗಳನ್ನು ಶಿಲಾಶಾಸನಗಳಷ್ಟು ಪೂರ್ಣವಾಗಿ ನಂಬಲಾಗುವುದಿಲ್ಲ. ಇವುಗಳನ್ನು ಬಹುಮಟ್ಟಿಗೆ ಪರೀಕ್ಷಿಸಿ ಗ್ರಹಿಸಬೇಕು. (ಈ ಸಂದರ್ಭದಲ್ಲಿ ಗಂಗ ರಾಜರಿಂದ ದತ್ತವೆಂಬುದಾಗಿ ಉಕ್ತವಾಗಿರುವ, ಡಾ॥ ಫ್ಲೀಟರಿಂದ ಕೃತಕವೆಂಬುದಾಗಿ ನಿಷ್ಕೃಷ್ಟವಾಗಿರುವ ತಾಮ್ರ ಶಾಸನಗಳ ರಾಶಿಯನ್ನು ಜ್ಞಾಪಕಕ್ಕೆ ತಂದುಕೊಳ್ಳ ಬಹುದು.) ವ್ಯಕ್ತಿಗಳ ವಶದಲ್ಲಿ ಇರತಕ್ಕವೇ ಅಲ್ಲದೆ ತಾಮ್ರ ಶಾಸನಗಳಲ್ಲಿ ಹಲವು ಭೂಮಿಯಲ್ಲಿಯೂ, ಹಾಳು ಬಾವಿಯಲ್ಲಿಯೂ, ಗೋಡೆಗಳ ಮಧ್ಯದಲ್ಲಿಯೂ, ತಳ ಪಾಯದ ಕೆಳಗೂ, ನೆಲ ಮಾಳಿಗೆಗಳಲ್ಲೂ ದೊರೆತಿವೆ. ಸ್ವಭಾವವಾಗಿ ಇವು ಕೈಯಿಂದ ಕೈಗೆ ಬದಲಾವಣೆಯಾಗತಕ್ಕವಾದುದರಿಂದ ಕಾಲಾನುಕಾಲದಲ್ಲಿ ಅವುಗಳಲ್ಲಿ ಸೂಚಿತ ವಾಗಿರುವ ಸ್ಥಳಗಳಿಗೂ ಅವು ಸಿಕ್ಕತಕ್ಕ ಸ್ಥಳಗಳಿಗೂ ಅರ್ಥಾರ್ಥ ಸಂಬಂಧವಿರು ವುದಿಲ್ಲ. ಉದಾಹರಣೆಗೆ ಚಾಲುಕ್ಯ ಇಮ್ಮಡಿ ಕೀರ್ತಿವರ್ಮನ ಒಕ್ಕಲೇರಿ ತಾಮ್ರ ಶಾಸನವನ್ನು ತೆಗೆದುಕೊಳ್ಳಬಹುದು. ಇದು ಸೋಲಾಪುರದ ಜಿಲ್ಲೆಗೆ ಸೇರಿದ ಭೀಮಾ ನದಿಯ ದಡದಲ್ಲಿರುವ ಒಂದು ಹಳ್ಳಿಗೆ ಸಂಬಂಧಪಟ್ಟುದು. ಆದರೆ ವಾಸ್ತವವಾಗಿ ಅದು ಸಿಕ್ಕಿದುದು ಕೋಲಾರ ಜಿಲ್ಲೆಯ ಒಕ್ಕಲೇರಿ ಗ್ರಾಮದಲ್ಲಿ. ಶಿಲಾಶಾಸನಗಳಂತೆ ಇವು ಸಿಕ್ಕಿದ ಸ್ಥಳದ ಆಧಾರದ ಮೇಲೆ ಅದರಲ್ಲಿ ನಮೂದಿಸಿರುವ ವ್ಯಕ್ತಿಗಳ ಕಾರ್ಯ ಕ್ಷೇತ್ರಗಳನ್ನಾಗಲಿ, ಅದರಲ್ಲಿ ಹೇಳಿರುವ ಸನ್ನಿವೇಶ ನಿರ್ದೇಶಗಳನ್ನಾಗಲಿ ಸುಲಭವಾಗಿ ಮಾಡಲಾಗುವುದಿಲ್ಲ.[೮]

ತಾಮ್ರಶಾಸನಗಳ ವಿಷಯವನ್ನು ಮುಗಿಸುವ ಮೊದಲು ಅವುಗಳ ಬಳೆಯ ತಲೆಯಲ್ಲಿರುವ ಮುದ್ರೆಗಳ ವಿಷಯದಲ್ಲಿ ಒಂದೆರಡು ಸೂಚನೆ ಕೊಡುವುದು ಅನವಶ್ಯಕ ವಾಗಲಾರದು. ಮುದ್ರೆಗಳು ಅಧಿಕೃತ ಪ್ರಕಟಣೆಗಳೆಂಬ ಭಾವವನ್ನುಂಟುಮಾಡುತ್ತವೆ. ರಾಜಾಜ್ಞೆಗಳನ್ನು ದೃಢೀಕರಿಸುತ್ತವೆ. ಕದಂಬ ಮತ್ತು ಸಂತಾನರದು ಸಿಂಹ ಮುದ್ರೆ. ಗಂಗರದು ಗಜಮುದ್ರೆ. ಚಾಲುಕ್ಯರದು ವರಾಹ ಮುದ್ರೆ. ಹೊಯಸಳರದು ಶಾರ್ದೂಲ ಮುದ್ರೆ. ವಿಜಯನಗರದ್ದು ಭೂವರಾಹ ಮುದ್ರೆ. ಇಮ್ಮಡಿ ಹರಿಹರನ ಶಾಸನವೊಂದರಲ್ಲಿ ಚಂದ್ರ ಸೂರ್ಯರ ಮಧ್ಯೆ ಕತ್ತಿಯೊಂದು ಇಡಲ್ಪಟ್ಟು ಕೆಳಗೆ ಆತನ ಹಸ್ತಾಕ್ಷರವೂ ಇದೆ. ಅನೇಕ ಮುದ್ರೆಗಳಲ್ಲಿ ಲಾಂಛನದ ಜೊತೆಯಲ್ಲಿ ದಾತೃವಿನ ಹಸ್ತಾಕ್ಷರಗಳಾದ ಶ್ರೀ ಮೃಗೇಶವರ್ಮ, ಶ್ರೀ ಮಾರಸಿಂಹ, ಶ್ರೀ ವೀರ ಹರಿಹರರಾಯ, ಶ್ರೀ ವಿರೂಪಾಕ್ಷ, ಶ್ರೀ ಸದಾಶಿವ, ಶ್ರೀ ವೆಂಕಟೇಶ, ಶ್ರೀ ತ್ರಿಯಂಬಕ, ಶ್ರೀ ಚಿಕ್ಕ ದೇವರಾಜ ಎಂಬ ನಾಮಾಂಕಿತಗಳೂ ಇರುತ್ತವೆ.

ಆಯುಧಗಳ ಮೇಲಿರುವ ಲೇಖಗಳೂ ತಾಮ್ರ ಶಾಸನಗಳಂತೆಯೇ ಬಹು ಉಪ

ಯುಕ್ತವಾಗಿವೆ. ಮೈಸೂರು ಅರಮನೆಯ ಆಯುಧಶಾಲೆಯಲ್ಲಿರುವ ಆಯುಧಗಳ ಮೇಲೆ ಅವುಗಳ ಹೆಸರು, ಯಾರಿಗೆ ಕೊಟ್ಟದ್ದು, ಯಾರು ಕೊಟ್ಟವರು, ಕೊಟ್ಟ ತಾರೀಖು, ಮೊದಲಾದ ವಿವರಗಳೆಲ್ಲ ಸಿಕ್ಕುತ್ತವೆ. ಆಲಿ ಆದಿಲ್‌ಷಹ, ಹೈದರ್, ಟಿಪ್ಪು, ರಣಧೀರ ಕಂಠೀರವ ನರಸರಾಜ ಒಡೆಯರ್ ಮೊದಲಾದವರ ಸ್ವಂತ ಆಯುಧ ಗಳೂ, ವೆಲ್ಲೆಸ್ಲಿ, ವಿಕ್ಟೋರಿಯಾ ಮೊದಲಾದವರಿಂದ ಮೈಸೂರರಸರಿಗೆ ಬಹುಮಾನ ವಾಗಿ ಬಂದ ಆಯುಧಸಾಮಾಗ್ರಿಗಳೂ ಪೂರ್ಣ ವಿವರಗಳಿಂದ ಅಲ್ಲಿ ಸಿಕ್ಕುತ್ತವೆ. ಅಲ್ಲಿಯೇ ಒಂದು ಜೊತೆ ಆನೆಯ ಕೊಂಬಿನ ಮೇಲೆ ಅದು ನಂಜುಂಡನೆಂಬ ಆನೆಯ ದೆಂದೂ, ಅದರ ತೂಕ ಮೂರು ಮಣ ಅಯ್ದು ಸೇರೆಂದೂ, ಅದು ೧೮೭೭ನೆಯ ಫೆಬ್ರುವರಿ ೧೯ರ ದಿನ ಅಲ್ಲಿಗೆ ಸೇರಿತೆಂದೂ ಕೆತ್ತಲ್ಪಟ್ಟಿದೆ.

ಇತ್ತೀಚಿಗೆ ಮೈಸೂರೊಡೆಯರ ಕಾಲದಲ್ಲಿ ಕಡತಗಳೂ ಕೈಬರೆಹದ ನಿರೂಪ ಗಳೂ ಶಾಸನಗಳ ಕಾರ್ಯವನ್ನು ಮಾಡಿವೆ. ಇವು ಸಾಮಾನ್ಯವಾಗಿ ಅವಸರದ ಚಾವಡಿಯಿಂದ ಸಾದರಾಗುತ್ತಿದ್ದವು. ಮುಮ್ಮಡಿ ಕೃಷ್ಣರಾಜ ಒಡೆಯರ ಇಂತಹ ಅನೇಕ ಕಡತಗಳೂ ಶೃಂಗೇರಿ ಮಠದ ಕೆಲವು ಕಡತಗಳೂ ಐತಿಹಾಸಿಕ ದೃಷ್ಟಿಯಿಂದ ಬಹು ಮುಖ್ಯವಾದುವು.

ಶಾಸನಗಳ ರಚನಾಕ್ರಮ ಅವಶ್ಯ ತಿಳಿಯತಕ್ಕದ್ದು. ಶಾಸನಗಳನ್ನು ಹಾಕಿಸು ವವನು ಒಬ್ಬ ಅಧಿಕಾರಿ. ರಾಜನಾಗಬಹುದು, ಮಂತ್ರಿಯಾಗಬಹುದು, ಸೇನಾಪತಿ ಯಾಗಬಹುದು,—ಒಂದು ಸಂಸ್ಥೆಯಾಗಬಹುದು, ಒಂದು ವ್ಯಕ್ತಿಯಾಗಬಹುದು. ಅದನ್ನು ಸರಿಯಾದ ವಾಚಕದಲ್ಲಿ—ಪದ್ಯವಾಗಬಹುದು, ಗದ್ಯವಾಗಬಹುದು— ರಚಿಸಬೇಕು. ರಚಿಸುವವನು ಕವಿ. ಅದನ್ನು ಅವನೇ ಆಗಲಿ ಬೇರೆಯವನಾಗಲಿ ಕಲ್ಲಿನ ಮೇಲಾಗಲಿ ಲೋಹದ ಮೇಲಾಗಲಿ ಬರೆಯಬೇಕು. ಅವನು ಲಿಪಿಕಾರ. ಅದನ್ನು ಕಲ್ಲುಕುಟಿಗನೋ ಕಂಚುಗಾರನೋ ಕೊರೆಯಬೇಕು. ಅವನು ಕಂಡರಿಸು ವವನು. ಆದುದರಿಂದ ಒಂದೊಂದು ಶಾಸನದ ರಚನೆಯಲ್ಲಿಯೂ ಹಲವಾರು ಜನರ ಕೈವಾಡವಿರುತ್ತದೆ. ವೈಯಕ್ತಿಕವಾದ ದಾನವಾದರೆ ಪ್ರತಿಗ್ರಹಿಯ ಹೆಸರೂ ವಿವರಗಳೊಡನೆ ಇರುತ್ತದೆ. ಅನೇಕ ಶಾಸನಗಳಲ್ಲಿ ಸಾಕ್ಷಿಗಳ ಹೆಸರೂ ಉಕ್ತ ವಾಗಿರುತ್ತದೆ. (ಎ.ಕ.ಶಿ. ೧೧೯. ಎ.ಕ. ಕಡೂರು, ತರೀ. ೪೫., ಕ.ಶಾ.ನಂ.೨). ೧೫೪೯ ನೆಯ ವರ್ಷದ ವೆಂಕಟಪತಿಯ ತಾಮ್ರ ಶಾಸನವನ್ನು ರಚಿಸಿದವನು ಕೃಷ್ಣ ಕವಿಕಾಮ ಕೋಟಿಯ ಮೊಮ್ಮಗನಾದ ಸಭಾಪತಿ. ಅದನ್ನು ಕಂಡರಿಸಿದವನು ಗಂಗಪ್ಪ ಯ್ಯನ ಪಾತ್ರನಾದ ವೀರಣ್ಣ ಮಹಾಚಾರ್ಯ. ಇಮ್ಮಡಿ ಬಲ್ಲಾಳನ ಹಂಚಿಯ ಶಾಸನವನ್ನು ರಚಿಸಿದವನು ಸುಕವಿವಸಂತ ಮರಳರಸ. ಕಂಡರಿಸಿದವನು ಸೇವಣೋಜ. ಅನೇಕ ರಾಜರ ಆಸ್ಥಾನಗಳಲ್ಲಿ ಶಾಸನ ಕವಿಗಳೂ ಕಂಡರಿಸುವ ವಿಶ್ವಕರ್ಮಾ ಚಾರ್ಯರೂ ವಂಶಪಾರಂಪರ್ಯವಾಗಿದ್ದು ರಾಜರುಗಳಿಂದ ದತ್ತಿಯನ್ನೂ ಪಡೆಯು ತ್ತಿದ್ದಂತೆ ಕಂಡು ಬರುತ್ತದೆ. ವಿಜಯನಗರದ ರಾಜರ ಆಸ್ಥಾನದಲ್ಲಿ ಸಭಾಪತಿ

ವಂಶದವರು ಉದ್ದಕ್ಕೂ ಶಾಸನ ಕವಿಗಳಾಗಿದ್ದು ಅನೇಕ ದಾನಗಳನ್ನು ಪಡೆದಿದ್ದಾರೆ. ಒಂದನೆಯ ರಾಚಮಲ್ಲನ ಮನ್ನೆಯ ತಾಮ್ರ ಶಾಸನವನ್ನು ಕಂಡರಿಸಿದ ವಿಶ್ವಕರ್ಮ ಗೋತ್ರದ ಮಧುರೊವಜನು ಒಂದು ಖಂಡುಗದ ಉತ್ತಮ ಜಮೀನನ್ನು ಪಡೆದಿದ್ದಾನೆ. ಕರ್ಣಾಟಕದ ಶಾಸನಗಳ ಪರಾಮರ್ಶದಿಂದ ಸುಮಾರು ಸಾವಿರಾರು ಒವಜರ ಪರಿಚಯ ವಾಗುತ್ತದೆ. ಅವರ ಅದ್ಭುತವಾದ ಬಿರುದುಗಳು ಅವರ ಆಶ್ಚರ್ಯಕರವಾದ ಶಿಲ್ಪ ವಿದ್ಯಾಪ್ರೌಢಿಮೆಯನ್ನು ಪ್ರಕಟಿಸುತ್ತವೆ.

ಶಾಸನಗಳು ನಾನಾ ಜಾತಿಗೆ ಸೇರಿದುವು. ಅವುಗಳಲ್ಲಿ ಪ್ರಧಾನವಾದುವು ರಾಜ ನಿರೂಪಗಳು. ರಾಜಕೀಯ, ಧಾರ್ಮಿಕ ಮತ್ತು ಆರ್ಥಿಕ ದೃಷ್ಟಿಯಿಂದ ಜನ ಸಾಮಾನ್ಯರು ತಿಳಿದುಕೊಳ್ಳಬೇಕಾದ ವಿಷಯಗಳು. ಅಶೋಕನ ಶಾಸನಗಳೇ ಇವಕ್ಕೆ ಶ್ರೇಷ್ಠ ನಿರ್ದರ್ಶನಗಳು.

ದೇವಾಲಯಗಳಿಗೆ—ದೇವರ ಅಂಗಭೋಗ ರಂಗಭೋಗ ಪಡಿತರ ದೀಪಾ ರಾಧನೆಗೆ, ನಿತ್ಯ ನೈಮಿತ್ತಿಕ ಉತ್ಸವಾದಿಗಳಿಗೆ,—ದೇವ ಸೇವೆಯಲ್ಲಿ ನಿರತರಾದ ಕೈಂಕರ್ಯ ಪರರಿಗೆ, ದೇವಾಲಯಗಳ ಜೀರ್ಣೋದ್ಧಾರಕ್ಕೆ ದತ್ತಿಗಳನ್ನು ಬಿಟ್ಟಿರುವು ದನ್ನು ಸಾರ್ವಜನಿಕರ ತಿಳುವಳಿಕೆಗಾಗಿ ಪ್ರಕಟಿಸುವುವು ಮತ್ತೆ ಕೆಲವು. ಬೇಲೂರು, ಸೋಮನಾಥಪುರದ (ಎ.ಕ.ತಿ.ನ.ಪು ೯೨) ಶಾಸನಗಳು ಈ ಜಾತಿಯವು. ಇವು ಬಹು ಸಂಖ್ಯಾಕವಾದುವು.

ವಿದ್ವಾಂಸರಿಗೆ, ವಿದ್ಯಾರ್ಥಿಗಳಿಗೆ ಅಶನ ವಸನಗಳನ್ನು ಕಲ್ಪಿಸುವ ದಾನಶಾಸನ ಗಳು ಇನ್ನು ಕೆಲವು. (ಮಾರಸಿಂಹನ ಕೂಡ್ಲೂರು ಶಾಸನ. ಮೈ ಶಾ. ವ ೧೯೨೧ ಪು. ೪೧) ಬೆಳುಗೊಳದ ಜನಾರ್ದನಸ್ವಾಮಿ ದೇವಸ್ಥಾನದಲ್ಲಿರುವ ಒಂದನೆಯ ವೆಂಕಟಪತಿರಾಯನ ಶಾಸನಗಳು (ಮೈ. ಶಾ. ವ. ೧೯೧೨—೧೧೨) ತಿರುಮಕೂಡ್ಲು ನರಶಿಪುರದ ದಳವಾಯಿ ಅಗ್ರಹಾರದ ಶಾಸನ (ಎ. ಕ. ೩. ತಿ. ನ. ಪು. ೬೫) ಈ ಜಾತಿಯವು.

ರಾಜ ರಾಜರುಗಳಿಗೆ, ರಾಜ ಪ್ರಜೆಗಳಿಗೆ, ಪ್ರಜೆ ಪ್ರಜೆಗಳಿಗೆ, ಭಿನ್ನ ಧಾರ್ಮಿಕ ಪಕ್ಷದವರಿಗೆ ಉಂಟಾದ ವೈಮನಸ್ಯ, ಕಲಹ, ಘರ್ಷಣೆ, ಅವುಗಳ ಪರಿಹಾರ ಮೊದ ಲಾದುವನ್ನೊಳಗೊಂಡವು ಬೇರೆ ಕೆಲವು. ಶ್ರವಣಬೆಳುಗೊಳದಲ್ಲಿ ಶ್ರಮಣರಿಗೂ ಬ್ರಾಹ್ಮಣರಿಗೂ ಆದ ಜಗಳವನ್ನು ಹರಿಹರನು ಪರಿಹಾರ ಮಾಡಿದ ವಿಷಯವನ್ನು ಶ್ರ.ಬೆ. ೩೪೪ (೧೩೬)ನೆಯ ಶಾಸನವು ತಿಳಿಸುವುದು. ೧೯೩೬ನೆಯ ವರ್ಷದ ಮ.ಶಾ. ವರದಿಯ ೧೮ ಮತ್ತು ೩೬ನೆಯ ಶಾಸನಗಳೂ ಇಂತಹವೇ.

ವೀರಗಲ್ಲುಗಳು :—ಕರ್ಣಾಟಕದ ಶಾಸನ ಪ್ರಪಂಚದಲ್ಲಿ ಇವುಗಳೇ ಬಹು ಭಾಗವನ್ನು ಆಕ್ರಮಿಸಿವೆ. ಕನ್ನಡನಾಡಿನ ವೀರ ಯುಗದಲ್ಲಿ ಪರಾಕ್ರಮಶಾಲಿಗಳಾದ ಯೋಧರನೇಕರು ಸ್ವಾಮಿ ಭಕ್ತಿಗಾಗಿ, ಸಮಾಜ ಸೇವೆಗಾಗಿ, ಶಿಷ್ಟರಕ್ಷಣಕ್ಕಾಗಿ, ದುಷ್ಟ ಶಿಕ್ಷಣಕ್ಕಾಗಿ ಕಾದಿ ಮಡಿದಿದ್ದಾರೆ. ಅವರ ಜ್ಞಾಪಕಾರ್ಥವಾಗಿ ರಾಜರುಗಳು,

ಊರಿನವರು ಅಥವಾ ಕಾದಿ ಮಡಿದವರ ಬಂಧುಗಳು ಶಾಸನಗಳನ್ನು ಹಾಕಿಸಿರುತ್ತಾರೆ. ಇವೇ ವೀರಗಲ್ಲುಗಳು 'ಬಾಸೆ ಬೋವನ ಮಗ ಹಲೆಯ ತುಂಬಳಲು ತುಱುವ ಹಟ್ಟಿಯ ಕಾದಿ ತಾಂ ತುಱುವಂ ಮಗುಳ್ಚಿ ತಾಂ ಬಿಟ್ದಲ್ಲಿ ದೇವ ಕನ್ನಿಕೆಯರು ದೇವ ಲೋಕಕ್ಕುಯ್ದರು.' 'ಶ್ರೀ ನೀರ್ಗುಂದ ಗಾವುಂಡ ತಪಸಿಯ ಪೋರಿಲ್ ಇಭದೆ ಕಾದಿ ಸತ್ತೊಡೆ ಆತಂಗೆ ಕಲ್ಲ ನಿರಿಸಿದ' 'ಮಾರೆಯ ಗಂಗವೆಗ್ಗಡೆ ವೀರ ಇರಿದು ಹೆಂಡಿರುಡೆ ವುರ್ಚುವಲ್ಲಿ ಕೆಲಬರ್ ಕೊಂದು ಸುರಲೋಕ ಪ್ರಾಪ್ತನಾದನ್.' 'ತಮ್ಮ ಗವುಂಡನು ಪುಲಿಯನಿಱಿದು ಸತ್ತೊಡೆ ಗಂಗಪೆರ್ಮಾಡಿ ಮೆಚ್ಚುಗೊಟ್ಟುದು' 'ರಾಚಗವುಂಡನ ಮಗ ಕಳ್ಳರ ಕೂಡೆ ಕಾದಿ ಸತ್ತು ಸುರಲೋಕಗತನಾದ.' 'ಬಮ್ಮಣ ಹೆಗ್ಗಡೆ ಸ್ವಾಮಿ ಕಾರ್ಯಕ್ಕೆ ಬಂದು ಮಳಲಿಯ ಸಿಂಗಜ್ಜನ ಕೂಡೆ ಕಾದಿಯಳಿಯಲು ದುಗ್ಗ ವೆಗ್ಗಡಿಗೆ ಬಿಟ್ಟ ಭೂಮಿ' 'ಮಸರೆಯಲಿ ಗಲುಡನ ಮಕ್ಕಳು ಕಾಳ ಬೊಮ್ಮ ಸೋಮ ದಾಯಾದಿತನದಿಂ ಕಂನವನಿಕ್ಕಿಯಿಱಿಯೆ ತಂಮ ಮಕ್ಕಳು ಹೆಂಡಿರ ಕೂಡೆ ಹುಯ್ಯಿಲ ನೆಬ್ಬಿಸಿ....ಕೊಂದು ತಾನುಂ ಶಿವಪಾದದೊಳೈಕ್ಯನಾದಂ.' 'ಪಡೆಯೆಡೆ ಬೊಪ್ಪಂ ತಂನ ಕುದುರೆ ನೆಲವೂರಿ ವಿಟ್ಟಿ ನೆಕ್ಕಟಿ ಬಂದನೆಯ ಮಸದೆಯೊಡೆಯ ಸೂಱೆಗೊಂಡ ಪುಯ್ಯಲ ಕೇಳ್ದು ಕಲಿ ನಿಲ್ಲದೆ ಪರಿದು ತಾಗಿದ ಹಂಚೆಯರ್ಜುನನಾಗಳು ಮಲೆದರಿ ಮಲ್ಲ ಯುದ್ಧದಲು ಬಾಗುಲಿ ಗರಗೌಡ ಮಯು ತಳುದಿಱಿದು ಬಿದ್ದ ಮಲ್ಲಯ್ಯಂ ನಲಿ ನಲಿದುಯಿದಚ್ಚರಸಿಯರಾಗಲು .. ಸುರಲೋಕಕ್ಕೆ ಸಾರಿದಂ.' 'ಮಾಲ್ಯನಾಡು ಮುವತಱ ಮೂಲಸ್ಥಾನ ಹಳೆಯಬೀಡಿನ ಕಲೆ ದೇವರ ಸ್ಥಾನಿಕ ವೀರ ರಾಮಯ್ಯನ ಮಗ ಕಲಯ್ಯನು ಆ ಕಲದೇವರ ಹಳಸಿಗಲೂರ ನಿಧಾಯವ ಅರಕಾರಕ್ಕೆ ಧರ್ಮವ ಕೆಡಿಸಿ ಕಾರು ಸೂರೆಗೊಂಬಲ್ಲಿ ಆ ಕಲ್ಲಯನು ಕೆಲಸಮಾಡಿಕೊಂಡು ದೇವಲೋಕ ಪ್ರಾಪ್ತ ನಾಗಿ ಧರ್ಮವನುದ್ಧರಿಸಿದನು—ಅದಕೆ ನಟ್ಟ ಕಂಬ'— ಈ ಕೆಲವು ವಾಕ್ಯಗಳು ವೀರಗಲ್ಲುಗಳ ವೈವಿಧ್ಯವನ್ನೂ ವಿವಿಧ ಮುಖಗಳನ್ನೂ ಪರಿಚಯ ಮಾಡಿ ಕೊಡುವುವು.

ಕೀಲ್ಗುಂಟೆ, ಗರುಡಗಲ್ಲುಗಳು ಇನ್ನೊಂದು ತೆರದ ವೀರಗಲ್ಲುಗಳು. ಸ್ವಾಮಿ ಯಾದವನು ಸತ್ತಾಗ ಅವನ ಪರಿವಾರದವರು ಅವನಿಗೆ ನೆರವಾಗಿ ಕಾಳಗ ಮಾಡಿ ಯಾಗಲಿ ಮಾಡದೆಯಾಗಲಿ ಪ್ರಾಣವನ್ನು ಬಿಟ್ಟು ಸ್ವಾಮಿ ಭಕ್ತಿಯನ್ನು ಪ್ರದರ್ಶನ ಮಾಡುತ್ತಿದ್ದರು. ತಿ. ನರಶೀಪುರದ ತಾಲ್ಲೋಕಿನ ದೊಡ್ಡ ಹುಂಡಿಯ ಶಾಸನದಲ್ಲಿ ಗಂಗರಾಜ ನೀತಿಮಾರ್ಗನು ಇಹಲೋಕನನ್ನು ತ್ಯಜಿಸಿದಾಗ ಅವನ ಸೇವಕನು ತನ್ನ ಮನೆಗಾರ್ತಿಯೊಂದಿಗೆ ಪ್ರಾಣ ಬಿಟ್ಟನೆಂದು ಉಕ್ತವಾಗಿದೆ. ದಾವಣಗೆರೆಯ ಶಾಸನ ವೊಂದರಲ್ಲಿ ಚಂಡಿಯರಸನೆಂಬ ಗಂಗರಾಜನು ಸತ್ತನೆಂದೂ ಅವನ ಸೇವಕರ ಲ್ಲೊಬ್ಬನು ಕೀಲ್ಗುಂಟೆಯಾದನೆಂದೂ ತಿಳಿದು ಬರುತ್ತದೆ. ಅರಕಲುಗೂಡು ತಾಲ್ಲೋಕಿನ ಎರಡು ಶಾಸನಗಳಿಂದ ಗಂಗರಸ ರಾಚಮಲ್ಲನು ಸತ್ತಾಗ ಸ್ವಾಮಿ ಭಕ್ತರಿಬ್ಬರು ಅಗ್ನಿಪ್ರವೇಶ ಮಾಡಿದರೆಂದು ಗೊತ್ತಾಗುತ್ತದೆ. ಕೃಷ್ಣರಾಜಪೇಟೆ ತಾಲ್ಲೋಕಿನ ಅಗ್ರಹಾರ ಬಾಚಳ್ಳಿಯ ವೀರಗಲ್ಲುಗಳಿಂದ ಹೊಯ್ಸಳರ ಭೃತ್ಯರಾಗಿದ್ದ

ಪರಿವಾರದವರು ವಂಶಪಾರಂಪರ್ಯವಾಗಿ ವಿನಯಾದಿತ್ಯನಿಂದ ಹಿಡಿದು ಮುಮ್ಮಡಿ ನರಸಿಂಹನವರೆಗೆ ಸ್ವಾಮಿಗಳ ಜೊತೆಯಲ್ಲಿ—ಇಡೀ ಸಂಸಾರವೇ—ಪ್ರಾಣತ್ಯಾಗ ಮಾಡಿದುದು ಉಕ್ತವಾಗಿದೆ. (ಎ.ಕ. ೪—ಕೃ.ಪೇ. ೧೦) ಹೊಯ್ಸಳನಾರ ಸಿಂಹನು ಕಾಲವಾದಾಗ ರಾಜಪುತ್ರ ಲಕ್ಷ್ಮನೂ ಅವನ ಪಡೆಯ ಸಾವಿರ ಮಂದಿ ಯೋಧರೂ ಗರುಡನನ್ನಾಲಂಗಿಸಿ ವೀರಸ್ವರ್ಗವನ್ನು ಸೇರಿದರು. ಈ ವಿಷಯವು ಹೋಯ್ಸಳೇಶ್ವರ ದೇವಾಲಯದ ಬಳಿ ಇರುವ ಕಂಬದ ಮೇಲೆ ಬರೆಯಲ್ಪಟ್ಟಿದೆ (ಎ.ಕ.ಹಾ.ಬೇ ೧೧೨).

ಮಹಾಸತೀ ಕಲ್ಲು ಅಥವಾ ಮಾಸ್ತಿ ಕಲ್ಲುಗಳೂ ವೀರಗಲ್ಲಿನ ಜಾತಿಗೇ ಸೇರಿದುವು. ಪತಿಭಕ್ತಿ ಪರಾಯಣಿಯರಾದವರಿಗೆ ಸತಿಯೆಂದು ಹೆಸರು. ಈ ಮಹಾಸತಿಯರು ಪತಿ ಸ್ವರ್ಗಸ್ಥನಾದರೆ ಪತಿಯೊಡನೆಯೇ ತಾವೂ ಸಹಗಮನ ಮಾಡುವ ಪದ್ಧತಿಯು ಬಹಳ ಕಾಲದಿಂದಲೂ ಕರ್ಣಾಟಕದಲ್ಲಿ ರೂಢಿಯಲ್ಲಿದೆ. ಇದು ಮಹಾ ಪವಿತ್ರಕಾರ್ಯವೆಂದು ಪರಿಗಣಿತವಾಗಿರುವುದಲ್ಲದೆ ಸತೀಪೂಜೆಯೂ ಪುಣ್ಯಕರವೆಂದು ಅಂಗೀಕೃತವಾಗಿ ಅನೇಕ ಮಹಾಸತಿಗಳ ಗುಡಿಗಳೂ ನಿರ್ಮಿತವಾಗಿವೆ. ವೀರರ ಸ್ಮಾರಕಗಳು ವೀರಗಲ್ಲುಗಳಾದರೆ ಮಹಾಸತಿಯರ ಸ್ಮಾರಕಗಳು ಮಾಸ್ತೀಕಲ್ಲುಗಳು. ವೀರಗಲ್ಲುಗಳ ಹಾಗೆಯೇ ಇದರಲ್ಲಿಯೂ ಕೆತ್ತನೆಯ ಶಿಲ್ಪಗಳಿರುತ್ತವೆ. ವೀರಗಲ್ಲಿನಲ್ಲಿ ವೀರಪುರುಷರ ಸಂಬಂಧವಾದ ಚಿತ್ರಗಳಿದ್ದರೆ ಮಾಸ್ತಿಕಲ್ಲುಗಳಲ್ಲಿ ಮಹಾಸತಿಗೆ ಸಂಬಂಧಪಟ್ಟ ಶಿಲ್ಪಗಳಿರುತ್ತವೆ. ಈ ಕಲ್ಲುಗಳಿಗೆ ' ಸಹಾನುಭೂತಿ ಕಲ್ಲು ' ' ಮದವಳಿಗೆ ಕಲ್ಲು ' ' ತೋಳ್‌ಕೈಗಲ್ಲು ' ಎಂದೂ ಹೆಸರುಂಟು. ಹೊಸಪೇಟೆಯಲ್ಲಿರುವ ನಂದಾರಾಮ ತೋಪಿನಲ್ಲಿಯೂ ಸಾಗರ ತಾಲ್ಲೋಕು ಮಾಲಂದೂರಿನಲ್ಲಿರುವ ಮಾಸ್ತಿ ಹಕ್ಕಲಿನಲ್ಲಿಯೂ ಕಿಕ್ಕೇರಿಯ ಹತ್ತಿರವಿರುವ ಅಂಕನಹಳ್ಳಿಯಲ್ಲಿಯೂ ಇಂತಹ ಅನೇಕ ಮಾಸ್ತಿಕಲ್ಲುಗಳಿವೆ.

ಸಲ್ಲೇಖನಶಿಲೆಯೆಂಬುದು ಮತ್ತೊಂದು ಜಾತಿಯ ಶಾಸನಗಳು. ಜೈನರು ಅವಸಾನ ಕಾಲ ಸಮೀಪಿಸಿತೆಂದು ತೋರಿದಾಗ ಯಾವುದಾದರೊಂದು ಪವಿತ್ರಕ್ಷೇತ್ರಕ್ಕೆ ಹೋಗಿ ನಿರಶನವ್ರತದಿಂದ ಈ ಶರೀರವನ್ನು ಕೊನೆಗಾಣಿಸುತ್ತಾರೆ. ಇಂತಹವರ ಸ್ಮಾರಕವಾಗಿ ಶಾಸನವನ್ನು ಹಾಕಿಸುವುದು ಪದ್ಧತಿ. ಈ ಕಲ್ಲುಗಳಲ್ಲಿ ಸಲ್ಲೇಖನ ವ್ರತವನ್ನು ಕೈಕೊಂಡು ಅಳಿದವರ ಜೀವನ ಚರಿತ್ರೆ ಸಂಕ್ಷೇಪವಾಗಿ ಉಕ್ತವಾಗಿರುವುದುಂಟು. ಶ್ರವಣಬೆಳುಗೊಳದಲ್ಲಿ ಇಂತಹ ಅನೇಕ ಕಲ್ಲುಗಳಿರುತ್ತವೆ. ಹೆಚ್ಚು ಕಡಿಮೆ ಇದೇ ಜಾತಿಗೆ ಸೇರಿದುವು ನಿಸದಿ ಕಲ್ಲುಗಳು.

ಮತ್ತೆ ಕೆಲವು ವಿಜಯಸ್ತಂಭಗಳು. ಶಿಕಾರಿಪುರದ ತಾಲ್ಲೋಕಿನಲ್ಲಿರುವ ಶಾತಕರ್ಣಿಯ ಮಳವಳ್ಳಿ ಶಾಸನವೂ, ಕದಂಬರ ತಾಳಗುಂದದ ಶಾಸನವೂ ಈ ವರ್ಗಕ್ಕೆ ಸೇರಿದವು.

ಬೇರೆ ಕೆಲವು ಶಾಸನಗಳು ವ್ಯಕ್ತಿಗಳು ದೇಶಕ್ಕೂ ಸಮಾಜಕ್ಕೂ ಸಲ್ಲಿಸಿದ ಸೇವೆಗೆ

ಪ್ರತಿಯಾಗಿ ಪಡೆದ ದತ್ತಿಗಳು. ಇವುಗಳಲ್ಲಿ ಕೆರೆಯ ಕೊಡಿಗೆ ಅಥವಾ ಕೆರೆಯ ಭಂಡಿ ಮುಖ್ಯವಾದುವು. ಕೆರೆಗಳ ಸ್ಥಾಪನೆ ಮತ್ತು ರಕ್ಷಣೆಗೆ ಪ್ರೋತ್ಸಾಹ ಮಾಡುವುದು ಇವುಗಳ ಉದ್ದೇಶ. ಹಳೇ ಬೂದನೂರು ಶಾಸನದಲ್ಲಿ ಸಾವರಾಶಿ ಭಟ್ಟಾರಕನು ಒಂದು ಕೆರೆಯನ್ನು ನಿರ್ಮಿಸಿದುದಕ್ಕಾಗಿ ದತ್ತಿಯನ್ನು ಪಡೆದಿದ್ದಾನೆ. ಓತೀಕೆರೆ ಈಶ್ವರ ದೇವಾಲಯದ ಸಮೀಪದಲ್ಲಿರುವ ಶಾಸನದಲ್ಲಿ (ಎ.ಕ. ತುಮ, ಚಿಕ್ಕ. ೧೭) ಹಿರೀಕೆರೆಗೆ ಕಲ್ಲುತೂಬು ಕಟ್ಟಿಸಿದುದಕ್ಕಾಗಿ ಶಾನುಭೋಗನಿಗೆ ಭೂಮಿಯನ್ನು ಕೊಟ್ಟಿರುವುದು ಉಕ್ತವಾಗಿದೆ. ಬೆಂಗಳೂರು ಜಿಲ್ಲೆಯ ಕಲ್ಕೆರೆ ಗ್ರಾಮದ ಕೊಂಡಿಯಪ್ಪನು ಕೆರೆಯ ಕಾಮಗಾರಿ ಮಾಡಿಸಿದುದಕ್ಕಾಗಿ ಕೆರೆ ಕೊಡಿಗೆಯನ್ನು ಪಡೆದಿದ್ದಾನೆ. ಮುಮ್ಮಡಿ ಕೆಂಪೇಗೌಡನು ಚಟ್ಟಲದಾಸ ಬೋಯಿಯೆಂಬುವನು ೧೬ ಕೋಣಗಳನ್ನಿಟ್ಟುಕೊಂಡು ಪ್ರತಿ ದಿನವೂ ಸೂರ್ಯೋದಯದಿಂದ ಸೂರ್ಯಾಸ್ತಮಯದವರೆಗೆ ಕೋಣನೊಂದಕ್ಕೆ ೧೨ ಮೂಟೆಯಂತೆ ಕೆರೆಯಲ್ಲಿ ತುಂಬಿರುವ ಮೆಕ್ಕಲು ಮಣ್ಣನ್ನು ತೆಗೆದು ಹಾಕುವುದಕ್ಕಾಗಿ ಒಂದು ಕೆರೆಯ ಭಂಡಿಯನ್ನು ಬಿಟ್ಟಿದ್ದಾನೆ (ಎ.ಕ.ಮಾಗಡಿ, ೩೦-೫). ಸಿಂಪಣ ನಾಯಕನು ತನ್ನ ತಂದೆಗೆ ಧರ್ಮವಾಗಬೇಕೆಂದು ಅಗರದ ಕೆರೆಗೆ ಭಂಡಿನಡೆಯುವುದಕ್ಕಾಗಿ ಹೊಲವನ್ನು ಬಿಟ್ಟಿದ್ದಾನೆ (ಎ.ಕ.೪,ಬೆಂಗ. ೮೫). ಇವಲ್ಲದೆ ನಗರಪಾಲನ ಮಾಡಿದುದಕ್ಕಾಗಿ, ಗ್ರಾಮವನ್ನು ಪಟ್ಟಣವನ್ನಾಗಿ ಮಾರ್ಪಡಿಸಿದುದಕ್ಕಾಗಿ, ಸಂತೆ ಕೂಡಿಸಿದುದಕ್ಕಾಗಿ, ದೋಣಿ ನಡೆಸಿದುದಕ್ಕಾಗಿ, ರೋಗ ನಿವಾರಣೆ ಮಾಡಿದುದಕ್ಕಾಗಿ ದಿಬ್ಬಗಳನ್ನು ಪ್ರದರ್ಶಿಸಿದುದಕ್ಕಾಗಿ ಪೂಜೆ ಮಾಡುವುದಕ್ಕಾಗಿ, ಪುರಾಣ ಪಠಣಕ್ಕಾಗಿ, ಸ್ತೋತ್ರ ಪಾರಾಯಣಕ್ಕಾಗಿ ಅನೇಕ ಕೊಡಿಗೆಗಳು ಕೊಡಲ್ಪಟ್ಟಿವೆ.

ಜನಗಳಿಗೆ ನೀತಿಪ್ರಸಾರ ಮಾಡುವುದಕ್ಕಾಗಿಯೇ ಹುಟ್ಟಿರುವ ಶಾಸನಗಳು ಕೆಲವು. ಉತ್ತರ ಕರ್ಣಾಟಕದ ಶಾಸನವೊಂದರಲ್ಲಿ (ಕ. ಶಾ. ಕಾಲಚೂರ್ಯ. ೮) ಈ ಕೆಳಗಿನ ಶ್ಲೋಕವು ಪ್ರಕಟವಾಗಿದೆ.

" ವರಂ ತೇಜಸ್ವಿನೋ ಮೃತ್ಯುಃ ನ ತು ಮಾನಾವಖಂಡನಂ
ಮೃತ್ಯುಸ್ತತ್ಷಣಿಕೋ ದುಃಖಂ ಮಾನಭಂಗಂ ದಿನೇ ದಿನೇ||"

ಅಶೋಕನ ಶಾಸನಗಳು ಬೌದ್ಧಮತ ತತ್ವಗಳಾದ ಅಹಿಂಸಾಸ್ತೇಯಸತ್ಯಗಳನ್ನು ಪಾಲಿಸಬೇಕೆಂದು ಘೋಷಿಸುತ್ತವೆ. ನೆಲಮಂಗಲದ ತಾಲ್ಲೋಕಿನ ಕುದುರೆಗುಂಡಿನ ಶಾಸನದಲ್ಲಿ ಸೋಮವಾರದ ದಿನ ಏರನ್ನು ಕಟ್ಟಕೂಡದೆಂದು ನಿಷೇಧಿಸಿದೆ. ಮತ್ತೆ ಅನೇಕವು ಸದಾಚಾರ, ಧರ್ಮಬೋಧನೆ, ಮತ್ತು ಸತ್ಸಂಪ್ರದಾಯಗಳಿಗೆ ಸೇರಿದ ಹಲವು ನೀತಿಗಳನ್ನು ಪ್ರಕಟಿಸುತ್ತವೆ.

ಲೇಖನವಿದ್ದೂ ಇಲ್ಲದೆಯೂ ಇರುವ ವಾಮನ ಮುದ್ರೆಯ ಕಲ್ಲು ಮತ್ತು ಚಕ್ರ ಮುದ್ರೆಯಕಲ್ಲು (ತಿರುವಾಟಿಕ್ಕಲ್) ಪ್ರತಿಯೊಂದು ಪ್ರಾಚೀನ ನಿವೇಶನಗಳಲ್ಲಿಯೂ ಸಿಕ್ಕುತ್ತವೆ. ಇವು ಗ್ರಾಮ ನಗರ ದೇಶಗಳ ಎಲ್ಲೆಗಳನ್ನು ಗುರ್ತಿಸುವ ಗಡಿಗಲ್ಲುಗಳು.

ಇವುಗಳಲ್ಲದೆ ಇತರ ಹಲವಾರು ವಿಷಯಗಳನ್ನೊಳಗೊಂಡ ಶಾಸನಗಳು

ಅಸಂಖ್ಯಾಕವಾಗಿವೆ. ಅವುಗಳನ್ನು ಸಂಪೂರ್ಣವಾಗಿ ನಿರ್ದೇಶಿಸುವುದು ಅಸಾಧ್ಯ. ದೇವಾಲಯ ನಿರ್ಮಾಣ—ಜೀರ್ಣೋದ್ಧಾರ, ಮೂರ್ತಿಗಳ ಪ್ರತಿಷ್ಠೆ, ವಾಪೀಕೂಪ ತಟಾಕಗಳ ರಚನೆ, ಧರ್ಮಶಾಲೆಯ ಸ್ಥಾಪನೆ, ಬೃಂದಾವನ ಪ್ರತಿಷ್ಠೆ, ಶಿಲಾರಥದಾನ, ಸುಂಕಗಳ ರಿಯಾಯಿತಿ, ಸ್ಥಲವೃತ್ತಿ, ಶಾಸನಗಳ ಪುನರ್ವ್ಯವಸ್ಥೆ, ಸ್ತಂಭ, ದ್ವಾರ, ಗೋಪುರ, ಮಂಟಪಗಳ ಜೀರ್ಣೋದ್ಧಾರ, ಗ್ರಾಮಾಧಿಕಾರಿಗಳಿಗೆ ಬಿಟ್ಟಿರುವ ರಿಯಾಯತಿಗಳು, ಗೋಸಾಸದಾನ, ಕಾವಲ್‌ಕಟ್ಟು, ಮಹಾಜನರ ವ್ಯವಸ್ಥೆ, ಸಂಸ್ಥಾಪತ್ರ, ದೇಶಾಚಾರ ಪ್ರಕಟನ, ಹಬ್ಬಹರಿದಿನಗಳ ವಿವರಣೆ, ಮಹಾಪುರುಷರ ಆಗಮನ ನಿರ್ದೇಶ ಮೊದಲಾದ ವಿಷಯಗಳು ಶಾಸನಗಳಲ್ಲಿ ಸೂಚಿತವಾಗಿರುವ ಹಲವು ವಿಷಯಗಳು.

ರಚನಾ ದೃಷ್ಟಿಯಿಂದ ಶಾಸನವನ್ನು ನಾಲ್ಕು ಭಾಗವಾಗಿ ವಿಭಾಗಿಸಬಹುದು. ಮೊದಲನೆಯದು ಇಷ್ಟದೇವತಾ ಪ್ರಾರ್ಥನೆ. ಇದು ಅವರವರ ಸಮಯಾಚಾರಗಳಿಗನುಗುಣವಾಗಿರುತ್ತವೆ.

**ಶ್ರೀಮತ್ಪರಮ ಗಂಭೀರ ಸ್ಯಾದ್ವಾದಾಮೋಘಲಾಂಛನಂ ।**
**ಜೀಯಾತ್ತ್ರೈಲೋಕನಾಥಸ್ಯ ಶಾಸನಂ ಜಿನ ಶಾಸನಂ ॥**

ಎಂಬುದು ಜೈನರ ಶಾಸನಗಳಲ್ಲಿಯೂ.

**ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ।**
**ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ॥**

ಎಂಬುದು ಶೈವರ ಶಾಸನಗಳಲ್ಲಿಯೂ

**ಜಯತ್ಯಾವಿಷ್ಕೃತಂ ವಿಷ್ಣೋಃ ವಾರಾಹಂ ಶೋಭಿತಾರ್ಣವಂ ।**
**ದಕ್ಷಿಣೋನ್ನತ ದಂಷ್ಟ್ರಾಗ್ರ ವಿಶ್ರಾಂತ ಭುವನಂ ವಪುಃ ॥**

ಎಂಬುದು ವೈಷ್ಣವರ ಶಾಸನಗಳಲ್ಲಿಯೂ ಧ್ಯಾನ ಶ್ಲೋಕಗಳಾಗಿರುತ್ತವೆ. ಆದರೆ ಈ ನಿಯಮ ಎಲ್ಲ ಶಾಸನಗಳಲ್ಲಿಯೂ ಉಂಟೆಂದು ಭಾವಿಸಬಾರದು. ಅನೇಕಗಳಲ್ಲಿ ಈ ಶ್ಲೋಕಗಳಿಲ್ಲದಿರುವುದೂ ಉಂಟು. ಶ್ಲೋಕಗಳಿರಲಿ ಇಲ್ಲದಿರಲಿ 'ಶ್ರೀ' 'ಸ್ವಸ್ತಿಶ್ರೀ' 'ನಮಸ್ಸಿದ್ಧೇಭ್ಯಃ' 'ಶುಭಮಸ್ತು' 'ಶ್ರೀಮತೇ ರಾಮಾನುಜಾಯ ನಮಃ' 'ಶ್ರೀ ಗಣಾಧಿಪತಯೇ ನಮಃ' 'ಭದ್ರಮಸ್ತು ಜಿನಶಾಸನಸ್ಯ' ಮೊದಲಾದ ಮಾತುಗಳಿರುವುದೂ ಉಂಟು. ಇವುಗಳ ಜೊತೆಗೆ

**ಭದ್ರಮಸ್ತು ಜಿನಶಾಸನಾಯ ಸಂಪದ್ಯತಾಂ ಪ್ರತಿವಿಧಾನ ಹೇತವೇ ।**
**ಅನ್ಯವಾದಿ ಮದ ಹಸ್ತಿ ಮಸ್ತಕ ಸ್ಫೋಟನಾಯ ಘಟನೇ ಪಟೀಯಸೇ ॥**
**ಭದ್ರಂ ಭೂಯಾತ್ ಜಿನೇಂದ್ರಾಣಾಂ ಶಾಸನಾಯಾಘನಾಶಿನೇ ।**
**ಕುತೀರ್ಥಧ್ವಾಂತಸಂಘಾತಪ್ರಭಿನ್ನಘನಭಾನವೇ ॥**
**ಜಗತ್ತ್ರಿತಯ ನಾಥಾಯ ನಮೋ ಜನ್ಮ ಪ್ರಮಾಥಿನೇ ।**
**ನಯ ಪ್ರಮಾಣ ವಾಗ್ರಶ್ಮಿ ಧ್ವಸ್ತಧ್ವಾಂತಾಯ ಶಾಂತಯೇ ॥**

ಎಂಬುವು ಜೈನ ಶಾಸನಗಳಲ್ಲಿಯೂ

ಹರೇರ್ಲೀಲಾವರಾಹಸ್ಯ ದಂಷ್ಟ್ರಾ ದಂಡಸ್ಸಪಾತುವಃ ।
ಹೇಮಾದ್ರಿ ಕಲಶಾಯತ್ರ ಧಾತ್ರೀ ಛತ್ರಶ್ರಿಯಂ ದಧೌ ॥
ನಮಸ್ತಸ್ಮೈ ವರಾಹಾಯ ಲೀಲಾಯೋದ್ಧರತೇ ಮಹೀಂ ।
ಖುರಮಧ್ಯಗತೋಯತ್ರ ಮೇರುಃ ಕಣಕಣಾಯತೇ ॥
ಶ್ರೀಮತ್ರೈಲೋಕ್ಯ ಪೂಜ್ಯಾಯ ಸರ್ವಕರ್ಮ ಸುಸಾಕ್ಷಿಣೇ ।
ಫಲದಾಯ ನಮೋ ನಿತ್ಯಂ ಕೇಶವಾಯ ಶಿವಾಯಚ ॥

ಎಂಬುವು ವೈದಿಕರ ಶಾಸನಗಳಲ್ಲಿಯೂ ಆದಿಶ್ಲೋಕಗಳಾಗಿರುತ್ತವೆ.

ಶಾಸನದ ಎರಡನೆಯ ಭಾಗವು ಬಹು ಮುಖ್ಯವಾದುದು. ಈ ಭಾಗದಲ್ಲಿಯೇ ಶಾಸನ ಬರೆದಕಾಲ, ಆಗ ಆಳುತ್ತಿದ್ದ ರಾಜ, ಸಾಮಂತ, ಮಹಾಪ್ರಧಾನ, ದಂಡ ನಾಯಕ, ರಾಜಗುರು ಮೊದಲಾದವರ ವಿಷಯಗಳು ಉಕ್ತವಾಗಿರುತ್ತವೆ. ಇಲ್ಲಿಯೇ ಸಂಬಂಧಪಟ್ಟವರ ವಂಶಾವಳಿ, ಬಿರುದಾವಳಿ, ಶೌರ್ಯ ಪ್ರತಾಪಗಳು ಯಥೋಚಿತ ವಾಗಿ ವರ್ಣಿತವಾಗಿರುತ್ತವೆ. ಅನೇಕ ಸಂದರ್ಭಗಳಲ್ಲಿ ಅವರವರ ಅಧೀನದಲ್ಲಿರುವ ರಾಜ್ಯಗಳ ವಿಸ್ತಾರ ಮತ್ತು ಎಲ್ಲೆಗಳು ನಿರೂಪಿತವಾಗಿರುತ್ತವೆ ದಾನಶಾಸನಗಳಾ ದರೆ ದಾತೃ ಪ್ರತಿಗ್ರಹೀತರುಗಳ ಯೋಗ್ಯತೆ ಸಂಬಂಧ ಮೊದಲಾದುವುಗಳ ವಿವರಗಳಿ ರುತ್ತವೆ. ವೀರಗಲ್ಲು ಮಾಸ್ತಿ ಕಲ್ಲುಗಳಾದರೆ ವೀರರ ಮಹಾಸತಿಗಳ ಶೌರ್ಯ ಸ್ಥೈರ್ಯ ಪರಾಕ್ರಮ, ಪಾತಿವ್ರತ್ಯಾದಿ ಗುಣಗಳ ಉಲ್ಲೇಖವಿರುತ್ತದೆ. ಈ ಭಾಗವೇ ಐತಿ ಹಾಸಿಕ ದೃಷ್ಟಿಯಿಂದ ಬಹು ಗಣ್ಯವಾದುದು. ಈ ಭಾಗದಲ್ಲಿ ಉಕ್ತವಾಗಿರುವ ಬಿರುದಾವಳಿಗಳನ್ನೆಲ್ಲಾ ಪ್ರತ್ಯೇಕವಾಗಿ ಸಂಗ್ರಹಿಸಿದರೆ ಕರ್ಣಾಟಕದ ಇತಿಹಾಸವು ಬಹುಸುಪುಷ್ಟವಾಗುವುದಲ್ಲದೆ ಈಗಿನ ಎಷ್ಟೋ ಸಮಸ್ಯೆಗಳು ಪರಿಹಾರವಾಗುವುವು. ಈ ಭಾಗದಲ್ಲಿ ಉಕ್ತವಾಗಿರುವ ಪ್ರಾಚೀನ ಸ್ಥಳಗಳ ವಿವರಗಳನ್ನು ಸಂಗ್ರಹಿಸಿದರೆ ಕರ್ಣಾಕದ ಪ್ರಾಚೀನ ವೈಭವದ ಕೈಗನ್ನಡಿಯಾಗುತ್ತದೆ.

ಶಾಸನದ ಮೂರನೆಯ ಭಾಗದಲ್ಲಿ ಶಾಸನದ ಉದ್ದೇಶವು ವಿವರಗಳ ಸಹಿತ ವಾಗಿ ನಿರೂಪಿತವಾಗಿರುತ್ತವೆ. ಅವುಗಳ ಸ್ವರೂಪವನ್ನು ಮೇಲೆ ಶಾಸನಗಳ ವೈವಿಧ್ಯ ವನ್ನು ತಿಳಿಸುವ ಸಂದರ್ಭದಲ್ಲಿ ವಿಶದಪಡಿಸಿದೆ.

ಕಡೆಯದಾದ ನಾಲ್ಕನೆಯ ಭಾಗದಲ್ಲಿ ಶಾಸನೋಕ್ತವಾದ ಧರ್ಮರಕ್ಷಣೆಗೆ ಸಾಧಕವಾದ ಮುಂದಿನ ಶ್ಲೋಕಗಳೂ ಮಾತುಗಳೂ ಬರುತ್ತವೆ.

ಬಹುಭಿರ್ವಸುಧಾದತ್ತಾ ರಾಜಭಿಃ ಸಗರಾದಿಭಿಃ ।
ಯಸ್ಯ ಯಸ್ಯ ಯದಾಭೂಮಿಃ ತಸ್ಯ ತಸ್ಯ ತಥಾ ಫಲಂ ॥
ಸ್ವದತ್ತಾದ್ವಿಗುಣಂ ಪುಣ್ಯಂ ಪರದತ್ತಾನುಪಾಲನಂ ।
ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂ ಭವೇತ್ ॥

ಸಾಮಾನ್ಯೋಯಂ ಧರ್ಮಸೇತುರ್ನೃಪಾಣಾಂ ಕಾಲೇ ಕಾಲೇ ಪಾಲನೀಯೋ ಭವದ್ಭಿಃ ।
ಸರ್ವಾನೇತಾನ್ ಭಾವಿನಃ ಪಾರ್ಥಿವೇಂದ್ರಾನ್ ಭೂಯೋ ಭೂಯೋ ಯಾಚತೇ
ರಾಮಚಂದ್ರಃ ॥

ದಾನಪಾಲನಯೋರ್ಮಧ್ಯೇ ದಾನಾತ್ ಶ್ರೇಯೋನುಪಾಲನಂ ।
ದಾನಾತ್ಸ್ವರ್ಗಮವಾಪ್ನೋತಿ ಪಾಲನಾದಚ್ಯುತಂಪದಂ ॥
ಏಕೈವ ಭಗಿನೀ ಲೋಕೇ ಸರ್ವೇಷಾಮೇವ ಭೂಭುಜಾಂ ।
ನ ಭೋಜ್ಯಾ ನಕರಗ್ರಾಹ್ಯಾ ವಿಪ್ರದತ್ತಾಂ ವಸುಂಧರಾಂ॥

ಮದ್ವಂಶಜಾ ಪರ ಮಹೀಪತಿ ವಂಶಜಾ ವಾ ಯೇ ಭೂಮಿಪಾಃ ಸತತಮುಜ್ವಲಧರ್ಮ ಚಿತ್ತಾಃ ।
ಮದ್ಧರ್ಮಮೇವ ಸತತಂ ಪರಿಪಾಲಯಂತಿ ತತ್ಪಾದಪದ್ಮಯುಗಳಂ ಶಿರಸಾ ವಹಾಮಿ ॥

ಸ್ವದತ್ತಾ ಪುತ್ರಿಕಾ ಧಾತ್ರೀ ಪಿತೃದತ್ತಾ ಸಹೋದರೀ ।
ಅನ್ಯದತ್ತಾತು ಮಾತಾಸ್ಯಾತ್ ದತ್ತಾಂ ಭೂಮಿಂ ಪರಿತ್ಯಜೇತ್ ॥
ಸ್ವದತ್ತಂ ಪರದತ್ತಂ ವಾ ಯೋ ಹರೇತ ವಸುಂಧರಾಂ ।
ಷಷ್ಟಿರ್ವರ್ಷಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ ॥

ಆದಿತ್ಯ ಚಂದ್ರಾವನಿಲೋನಲಶ್ಚ ದ್ಯೌರ್ಭೂಮಿರಾಪೋ ಹೃದಯಂ ಯಮಶ್ಚ ।
ಅಹಶ್ಚ ರಾತ್ರಿಶ್ಚ ಉಭೇಚ ಸಂಧ್ಯೇ ಧರ್ಮಶ್ಚ ಜಾನಾತಿ ನರಸ್ಯ ವೃತ್ತಂ ॥

ಪ್ರಿಯದಿಂದಿಂತಿದನೆಯ್ದೆ ಕಾವ ಪುರುಷರ್ಗಾಯುಂ ಮಹಾಶ್ರೀಯುಮ
ಕ್ಕೆಯಿದಂ ಕಾಯದೆ ಕೊಲ್ವ ಪಾಪಿಗೆ ಕುರುಕ್ಷೇತ್ರೋರ್ವಿಯೊಳ್ ಬಾರಣಾ
ಸಿಯೊಳಂ ಕೋಟಿಮುನೀಂದ್ರರಂ ಕವಿಲೆಯಂ ವೇದಾಢ್ಯರಂ ಕೊಂದೊಂ
ದಯಶಂ ಸಾರ್ಗುಮಿದೆಂದು ಸಾರಿದಪುವೀ ಶೈಳಾಕ್ಷರಂ ಸತತಂ ॥

ಮೇಲೆ ಹೇಳಿದ ಶ್ಲೋಕಗಳೇ ಅಲ್ಲದೆ ದಾನಪಾಲನದ ಮೇಲ್ಮೆಯನ್ನೂ ಅದರ ನಾಶದಿಂದಾಗುವ ಘೋರತೆಯನ್ನೂ ಅನೇಕ ರೀತಿಯ ಮಾತುಗಳು ಭಿನ್ನ ಭಿನ್ನವಾಗಿ ವರ್ಣಿಸುತ್ತವೆ.

'ಇಂತೀ ಧರ್ಮವನಾವನೊರ್ಬಂ ಪರಿಪಾಲಿಸಿದಂಗೆ ಸಾವಿರಕವಿಲೆಯಂ ಕೋಡುಂ ಕೊಳಗಮುಂ ಪೊನ್ನಲು ಕಟ್ಟಿ ಗಂಗೆಯ ತಡಿಯಲು ಸಾಸಿರ್ವರ್ ಪಾರ್ವರ್ಗೆ ದಾನಂಗೆಯ್ದು ಕೊಟ್ಟ ಫಲಂ. ಈ ಧರ್ಮವನಾವನೊರ್ವನಳಿದಂ ಸಾಸಿರಕಪಿಲೆಯಂ ಗಂಗೆಯ ತಡಿಯಲು ಸ್ವಹಸ್ತದಿಂ ಕೊಂದ ಪಾತಕನಕ್ಕುಂ' 'ಇದಾನಟಿದೋನ್ಪಂಚ ಮಹಾಪಾತಕನಕ್ಕೊಂ' 'ಇದನಪಹರಿಸಿದವಂಗೆ ಕಾಶಿಯೊಳ್ಮಾಡಿದ ಗೋವಧ ಸುರಾ ಪಾನ ಇವು ಮೊದಲಾದ ಪಾತಕಗಳಪ್ಪುವು.' 'ಈ ಧರ್ಮಕ್ಕೆ ಕಂಟಕರಾದವರು ಉಪೇಕ್ಷಿಸಿದವರು ತಮ್ಮ ತಾಯಿ ತಂಗಿಯ ಕೆಡಿಸಿದವರು. ಶ್ವಾನಗಾರ್ಧಬವ ಭಕ್ಷಿಸಿದವರು, ಅಗ್ರಹಾರವ ಅಳಿದವರು, ಮಹಾ ತಟಾಕವನೊಡೆದ ಪಾತಕ, ಹಡೆದ ತಂದೆಯ, ಹಿರಿಯರ, ಶಿಶುಗಳ, ಗೋವುಗಳ ಗಂಗೆಯ ತಡಿಯಲಿ ಕೊಂದವರು' :— ಇತ್ಯಾದಿ ವಿಧವಿಧ ಪುಣ್ಯಪಾಪಗಳ ಉಲ್ಲೇಖಗಳು ಪ್ರತಿಯೊಂದು ಶಾಸನದಲ್ಲಿಯೂ ಒಂದಲ್ಲ ಒಂದು ರೀತಿಯಲ್ಲಿ ಉಕ್ತವಾಗಿರುತ್ತವೆ.

ಅನೇಕ ಶಾಸನಗಳ ಕಡೆಯ ಭಾಗದಲ್ಲಿ ಶಾಸನವನ್ನು ರಚಿಸಿದ ಕವಿಯ, ಬರೆದ

ಲಿಪಿಕಾರನ, ಕಂಡರಿಸಿದ ಒವಜ ಅಥವಾ ರೂವಾರಿಯ ಹೆಸರುಗಳು ವಿವರಗಳೊಡನೆ ಕೆತ್ತಲ್ಪಟ್ಟಿರುತ್ತವೆ. ಶಿಕಾರಿಪುರದ ಎರಡು ಶಾಸನಗಳಲ್ಲಿ ಬರುವ

ಎನುತ ಮಧುರೋಕ್ತಿಯಿಂ ತ
ನ್ನತಿಶಯ ವಚೋವಿಭೂತಿಗಿದುವೆ ಯಶಶ್ಶಾ
ಸನಮಾದುದೆಂಬಿನಂ ಶಾ
ಸನಮನಿದಂ ಬರೆದನಾಶುಕವಿನಿಟಿಲಾಕ್ಷಂ ||
ಕವಿಸುತಮೆನಲೊರೆದತಿಪಟು
ಕವಿ ಸಾರಸ್ವತಮಹೋದಯನ ಕಿಂಕರನೀ
ಶಿವಧರ್ಮಶಾಸನವನಭಿ
ನವಮಾಗಿರೆ ಮಲ್ಲಿಕಾರ್ಜುನಾರ್ಯ್ಯಂ ಬರೆದಂ ||

ಎಂಬ ಎರಡು ಪದ್ಯಗಳೂ, ಶ್ರವಣಬೆಳುಗೊಳದ ಶಾಸನವೊಂದರಲ್ಲಿ ಸಿಕ್ಕುವ

ಪೊಡವಿಗೆ ಸಂದ ಗೊಮ್ಮಟಜಿನೇಂದ್ರ ಗುಣಸ್ತವನಕ್ಕೆ ಕ
ನ್ನಡಕವಿ ಬೊಪ್ಪನೆಂದೆನಿಪ ಬೊಪ್ಪಣಪಂಡಿತನೊಲ್ದು ಪೇಳ್ದವಂ ।
ಕಡೆಯಿಸಿದಂ ಬಲಂ ಕವಡಮಯ್ಯನ ದೇವಣನಬ್ಬಿ ಯಿಂದೆ ಬಾ
ಗಡೆಗೆಯ ರುದ್ರನಾದರದೆ ಮಾಡಿಸಿದಂ ವಿಳಸತ್ಪ್ರತಿಷ್ಠೆಯಂ ||

ಎಂಬ ಪದ್ಯವೂ, 'ಶ್ರೀಮಚ್ಚಾರುಕೀರ್ತಿ ದೇವರ ಗುಡ್ಡ ಲೇಖಕ ಬೋಕಿಮಯ್ಯ ಬರೆದ, ಬಿರುದ ರೂವಾರಿಮುಖತಿಳಕ ಗಂಗಾಚಾರಿಯ ತಮ್ಮ ಕಾವಾಚಾರಿ ಕಂಡರಿಸಿದ' 'ಶ್ರೀಮನ್ಮಲಧಾರಿ ದೇವರಗುಡ್ಡಂ ಬಿರುದ ಲೇಖಕ ಮದನಮಹೇಶ್ವರಂ ಮಲ್ಲಿನಾಥಂ ಬರೆದಂ, ಬಿರುದ ರೂವಾರಿ ಮುಖತಿಳಕಂ ಗಂಗಾಚಾರಿ ಕಂಡರಿಸಿದಂ'—ಈ ಮೊದಲಾದ ವಾಕ್ಯಗಳೂ ಕೆಲವು ಉದಾಹರಣೆಗಳು.

ಶಾಸನಗಳಿಂದಾಗುವ ಪ್ರಯೋಜನ ಬಹು ಮುಖವಾದುದು. ಮೊದಲು ಶಾಸನಗಳು ಪ್ರಾಚೀನ ಇತಿಹಾಸವನ್ನು ನಿರ್ಮಿಸಲು ಸಾಧಕವಾದ ಅನೇಕ ವಿಷಯಗಳನ್ನೊದಗಿಸುವುವು. ಅವುಗಳ ಆಧಾರದಿಂದಲೇ ಈಗ ಕರ್ಣಾಟಕದ ಕ್ರಿ. ಪೂ. ಮೂರು ನಾಲ್ಕನೆಯ ಶತಮಾನದಿಂದ ಆಧುನಿಕ ಕಾಲದವರೆಗಿನ ಚರಿತ್ರೆಯು ಸೃಷ್ಟಿಯಾಗುತ್ತಿರುವುದು. ಶಾಸನಗಳಲ್ಲಿ ಬಹುಭಾಗವು ದಾನ ಶಾಸನಗಳೇ ಆಗಿರುವುದರಿಂದ ದಾತೃಪ್ರಗೃಹೀತೃಗಳ ವಂಶಾವಳಿ, ಅಧಿಕಾರ, ಗುಣಮಾಲೆ ಮೊದಲಾದುವು ಉಕ್ತವಾಗಿರುತ್ತವೆ. ಅವರ ಆಶ್ರಯದಾತರ, ಮಂತ್ರಿಗಳ, ಸಾಮಂತರ, ಸೇನಾಧಿಪತಿಗಳ, ಧರ್ಮಗುರುಗಳ ಸಂಪೂರ್ಣ ವಿವರಗಳು ದೊರೆಯುತ್ತವೆ. ಆಯಾ ಕಾಲದ ರಾಜಕೀಯ ತತ್ತ್ವಗಳ ಅರಿವುಂಟಾಗಿ ರಾಜ್ಯಾಡಳಿತದ ಸ್ವರೂಪವು ಮನದಟ್ಟಾಗುತ್ತದೆ. ಜನರ ಆಚಾರ ವ್ಯವಹಾರಗಳು, ಧ್ಯೇಯಸಾಧನೆ, ಆಶೆ ಆತಂಕಗಳು, ಹಬ್ಬ ಹರಿದಿನಗಳು, ಸಮಾಜ ನಿಯಮಗಳು ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಸೂಚಿತವಾಗಿರುತ್ತವೆ. ಸಾಂಸ್ಕೃತಿಕ ಚರಿತ್ರೆಯನ್ನು ರಚಿಸಲು ಬೇಕಾಗುವ ಸಮಸ್ತ ಸಾಧನ

ಗಳೂ ಸಿಕ್ಕುತ್ತವೆ. ಬೌದ್ಧ, ಜೈನ, ಶೈವ, ವೀರಶೈವ, ಲಕುಲೀಶ ಪಾಶುಪತ, ಕಾಶ್ಮೀರ ಶೈವ, ಕಾಳಾಮುಖ, ವೈಷ್ಣವ, ಶ್ರೀ ವೈಷ್ಣವ, ದಾಸ ಪಂಥಗಳಿಗೆ ಸಂಬಂಧ ಪಟ್ಟ ಅನೇಕ ಆಚಾರ್ಯರ ವಿಷಯಗಳು ಶಾಸನಗಳಲ್ಲಿ ಉಕ್ತವಾಗಿರುವುದರಿಂದ ಕರ್ನಾಟಕದ ಧಾರ್ಮಿಕ ಚರಿತ್ರೆಯ ರಚನೆಗೆ ಅವುಗಳು ಬಹುಮಟ್ಟಿಗೆ ಸಹಾಯ ವಾಗುತ್ತವೆ. ಆರ್ಥಿಕ ದೃಷ್ಟಿಯಿಂದ ಅವುಗಳಿಂದಾಗುವ ಪ್ರಯೋಜನ ಅಪಾರ. ಆಯಾ ಕಾಲಗಳ ವ್ಯಾಪಾರ ಸ್ಥಿತಿ, ಅವುಗಳ ವಿಸ್ತಾರ, ನಾಣ್ಯಗಳು—ಅವುಗಳ ವೈವಿಧ್ಯ, ಆಕಾರ, ತೂಕ, ಬೆಲೆ, ರಚನೆ, ಮುದ್ರೆ, ಮುದ್ರಿಸಿದ ಅಧಿಕಾರಿ, ಟಂಕಸಾಲೆ, ಸುಂಕಗಳು ಮತ್ತು ಅವುಗಳ ರಿಯಾಯಿತಿ, ಸಂತೆಗಳು, ಬೆಳಸುಗಳು, ಅವು ಬೆಳೆ ಯುವ ಭೂಮಿ, ಅವುಗಳ ವಿಧಾನ ಕ್ರಮ ಮತ್ತು ಅಳತೆ, ಧಾನ್ಯಗಳ ಪರಿವರ್ತನ ಕ್ರಮ ಮತ್ತು ಅವುಗಳ ಅಳತೆಯ ಸಾಧನಗಳು ಮೊದಲಾದುವುಗಳ ವಿವರಗಳು ಸಿಕ್ಕುತ್ತವೆ. ಇಮ್ಮಡಿ ಕೃಷ್ಣರಾಜ ಒಡೆಯರ ಅವಸರದ ಚಾವಡಿಯಿಂದ ಹೊರಟ ಸನ್ನದು ಒಂದರಲ್ಲಿ ಮುಂದಿನ ಹಲವು ಸುಂಕಗಳು ಉಕ್ತವಾಗಿವೆ:—ಹೊಲಗದ್ದೆ, ತೋಟ ತೊಡಕೆ, ಅಣೆ ಅಚ್ಚುಕಟ್ಟು, ಹಳ್ಳಿ ಹಿರಿಯೂರು, ಸೊಪ್ಪಿನ ತೋಟ, ತಿಪ್ಪೆಯ ಹಳ್ಳ, ಮಗ್ಗಮನೆ, ಅರವಾಸಿ, ಪೊಮ್ಮು, ಜಾತಿ, ಗೂಟ, ಸಮಯಾಚಾರ, ಹತ್ತಿ, ಗಂಧ, ಬಿಟ್ಟಿಗಾಣಿಕೆ, ನಾಮಗಾಣಿಕೆ, ಬೀಡಿಗೆ, ಪುರವರ್ಗ, ಸೇನಾಯಿ, ಗುರುಕಾಣಿಕೆ, ಮಕ್ಕಳು, ಮಗ್ಗಲು, ಲೋಹ, ನಾಣ್ಯ ಮೊದಲಾದುವು. ಇಂತಹದರ ಅರಿವು ಅರ್ಥ ಶಾಸ್ತ್ರಕ್ಕೆ ಎಷ್ಟು ವಿಶೇಷವಾದುದೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಕರ್ನಾಟಕದ ವಾಸ್ತುಶಿಲ್ಪ, ತಕ್ಷವಿದ್ಯೆ, ಮೂರ್ತಿ ಶಿಲ್ಪ, ಸಂಗೀತ ಮೊದಲಾದುವುಗಳ ಉಗಮ, ವೈವಿಧ್ಯ, ರೀತಿ, ಸ್ಥಾಪನೆ, ಜೀರ್ಣೋದ್ಧಾರ–ಎಲ್ಲದರ ವಿವರಗಳೂ ಶಾಸನಗಳಿಂದ ಲಭ್ಯ ವಾಗುತ್ತದೆ. ಕರ್ನಾಟಕದ ಕಲಾಭಿಜ್ಞರಾದ ರೂವಾರಿಗಳು, ಒವಜರು, ಶಿಲ್ಪಿಗಳು, ಸಂಗೀತಗಾರರು ಇವರುಗಳ ಚರಿತ್ರೆಯನ್ನು ಬರೆಯಲು ಕರ್ನಾಟಕದ ಶಾಸನಗಳಲ್ಲಿ ಸಿಕ್ಕುವಷ್ಟು ಸಾಧನ ಸೌಲಭ್ಯ ಪ್ರಪಂಚದ ಮತ್ತಾವೆಡೆಯಲ್ಲಿಯೂ ಸಿಕ್ಕುವುದಿಲ್ಲವೆಂದು ಹೇಳಬಹುದು. ಬೇಲೂರು, ಹಳೆಯಬೀಡು, ಸೋಮನಾಥಪುರ, ನುಗ್ಗೆಯಹಳ್ಳಿ, ಅರಸೀಕೆರೆ, ತುರವೇಕೆರೆ, ನಂದೀದುರ್ಗ, ಶಿವಗಂಗೆ, ಮೇಲ್ಕೋಟೆ ಮೊದಲಾದೆಡೆ ಗಳಲ್ಲಿ ಅಲ್ಲಿಯ ಕಲಾಕೃತಿಗೆ ಕಾರಣರಾದ ಶಿಲ್ಪಿಗಳ ಹೆಸರು, ಯೋಗ್ಯತೆ, ಬಿರುದು, ವಂಶ ಮುಂತಾದ ವಿವರಗಳೆಲ್ಲ ಸಂಬಂಧಪಟ್ಟ ಸ್ಥಳಗಳಲ್ಲಿಯೇ ಸೂಚಿತವಾಗಿವೆ. ಅಲ್ಲದೆ ಒಬ್ಬೊಬ್ಬ ಕಲಾಭಿಜ್ಞನ ವೈಯಕ್ತಿಕ ಚರಿತ್ರೆಯನ್ನು ಪ್ರತ್ಯೇಕವಾಗಿ ಸಂಪೂರ್ಣವಾಗಿ ಚಿತ್ರಿಸಲು ಸೌಕರ್ಯವಿದೆ. ಮಲ್ಲಿತಮ್ಮನೊಬ್ಬನ ಎಂಬತ್ತೈದು ವರ್ಷದ ಕಾರ್ಯವನ್ನು ಶಾಸನಗಳ ಆಧಾರದಿಂದ ನಿಷ್ಕರ್ಷಿಸಬಹುದಾಗಿದೆ.

ಸ್ಥಳೀಯ ಇತಿಹಾಸಗಳನ್ನು ಬರೆಯಲು ಶಾಸನಗಳು ಬಹು ಉಪಯುಕ್ತವಾಗಿವೆ. ಕರ್ನಾಟಕದಲ್ಲಿ ಈಗ ನಾಮಾವಶೇಷವಾಗಿರುವ ಒಂದೊಂದು ಹಳ್ಳಿ, ಊರು, ಗ್ರಾಮ, ನಗರ, ನಿವೇಶನಗಳು ತಮ್ಮದೇ ಆದ ಒಂದು ಸ್ಫೂರ್ತಿದಾಯಕ ಚರಿತ್ರೆ

ಯನ್ನು ಹೊಂದಿವೆ. ಅವುಗಳ ಸಂಪೂರ್ಣ ಉಲ್ಲೇಖ ಕರ್ಣಾಟಕದ ಪ್ರಾಚೀನ ವೈಭವವನ್ನು ಬೆಳಕಿಗೆ ತರುವುದರಲ್ಲಿ ಸಂದೇಹವಿಲ್ಲ. ಅವುಗಳನ್ನು ಸಂಗ್ರಹಿಸಲು ಪ್ರಧಾನಸಾಧನ ಶಾಸನಗಳು.

ಇವೆಲ್ಲಕ್ಕಿಂತಲೂ ಭಾಷಾ ಸಾಹಿತ್ಯ ಚರಿತ್ರೆಗಳಲ್ಲಿ ಶಾಸನಗಳಿಗೆ ಪ್ರತ್ಯೇಕವಾದ ಸ್ಥಾನವಿದೆ. ಭಾಷೆಯ ಆದಿರೂಪದಿಂದ ಇಲ್ಲಿಯವರೆಗಿನ ಚರಿತ್ರೆಯನ್ನು ರಚಿಸುವುದು ಶಾಸನಾಧಾರಗಳಿಂದ ಮಾತ್ರ ಸಾಧ್ಯ. ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡ ಭಾಷೆಗಳ ಸ್ವರೂಪ, ಬೆಳವಣಿಗೆ, ಮಾರ್ಪಾಟು ಶಾಸನಗಳಲ್ಲಿ ಅವಿಚ್ಛಿನ್ನವಾಗಿ ಪ್ರದರ್ಶಿತವಾಗಿವೆ. ಕೆಲವು ಶಾಸನಗಳು ಪ್ರಾಂತ ಭೇದಗಳ ವೈವಿಧ್ಯವನ್ನೂ ಹೊರಗೆಡಹುತ್ತವೆ. ಸಾಹಿತ್ಯ ಗ್ರಂಥಗಳಲ್ಲಿ ಸಿಕ್ಕದಿರುವ ಅನೇಕ ಶಬ್ದಗಳು ಇಲ್ಲಿ ಸಿಕ್ಕುತ್ತವೆ. ಕೆಲವು ಶಬ್ದಗಳು ಭಿನ್ನಾರ್ಥದಲ್ಲಿ ಉಪಯುಕ್ತವಾಗಿರುತ್ತವೆ. ಮತ್ತೆ ಕೆಲವು ಸ್ಪಷ್ಟಾರ್ಥಕ್ಕೆ ಪೂರಕಗಳಾಗಿರುತ್ತವೆ. ಕನ್ನಡ ಕೋಶವನ್ನು ಸಿದ್ಧಪಡಿಸುವಾಗ ಇವುಗಳ ಪ್ರಯೋಜನ ವಿಶೇಷವಾಗಿರುತ್ತವೆ. ವಾಳ್ಗಚ್ಚು, ಭಟಾರಿ, ಹೊಡಕೆ, ಸಂವರಣೆ, ಸಮುದ್ಧರಣ, ಜೊವ್ವಲಿಗೆ, ಮೂವಿಟ್ಟ, ಮೇಲಕ್ಕ, ಬಿತ್ತುವಟ್ಟ, ಪತ್ತೊಂದಿ, ಮೊದಲಾದ ಶಬ್ದಗಳೂ ವಿವಿಧ ಅಳತೆಗಳಿಗೆ ಸಂಬಂದಪಟ್ಟ ನಳಿ, ಕುಳಿ, ಧಾರ, ಧರಣ, ಸಿದ್ದೆ, ಸೆಡೆ, ಸಿನ್ನೆ, ಸಿವನೆ, ಹಾಡ, ಮೊದಲಾದುವೂ ಈ ಜಾತಿಗೆ ಸೇರಿದುವು. ಸಾಹಿತ್ಯ ಗ್ರಂಥಗಳಲ್ಲಿ ಕಾಣಲಾಗದ ಅನೇಕ ಅಪೂರ್ವ ಛಂದಸ್ಸುಗಳನ್ನೂ ಶಾಸನಗಳಲ್ಲಿ ಕಾಣಬಹುದು. ಅಲ್ಲದೆ ಅಚ್ಚಗನ್ನಡ ಛಂದಸ್ಸುಗಳಾದ ತ್ರಿಪದಿ, ಸಾಂಗತ್ಯ, ಅಕ್ಕರ ಮೊದಲಾದುವುಗಳ ಚರಿತ್ರೆಯನ್ನೂ ಮಾರ್ಪಾಟನ್ನೂ ಶಾಸನಗಳಿಂದ ನಿರ್ಧರಿಸಬಹುದು.

ಸಾಹಿತ್ಯ ದೃಷ್ಟಿಯಿಂದ ಅನೇಕ ಶಾಸನಗಳು ಪುಟ್ಟ ಕಾವ್ಯಗಳಂತೆಯೇ ಇವೆ. ಕವಿಚರಿತೆ ಕಾರರಿಂದ ಸಂಗ್ರಹೀತವಾದ 'ಶಾಸನ ಪದ್ಯ ಮಂಜರಿ'ಯಲ್ಲಿ ಇಂತಹವುಗಳನೇಕವನ್ನು ಕಾಣಬಹುದು. ಅನೇಕ ಅಜ್ಞಾತ ಕವಿಗಳ ಮತ್ತು ಗ್ರಂಥಗಳ ಪರಿಚಯವಾಗುವುದಿಲ್ಲಿ. ಪರಿಚಿತರಾದವರ ವಿಷಯವಾಗಿ ಹೆಚ್ಚು ಅಂಶಗಳು ಬೆಳಕಿಗೆ ಬರುವುದೂ ಉಂಟು. ಅನೇಕರ ಅನಿರ್ದಿಷ್ಟವಾದ ಕಾಲವು ಅವುಗಳ ಸಹಾಯದಿಂದ ಸ್ಪಷ್ಟವಾಗುವುದು. ಸಾಹಿತ್ಯ ಚರಿತ್ರೆಯಲ್ಲಿ ಕಂಡು ಬರುವ ಹೊಸಮಾರ್ಗ ಚಳುವಳಿ ವೈವಿಧ್ಯ ಮೊದಲಾದುವು ಅವುಗಳಲ್ಲಿ ಪ್ರತಿಬಿಂಬಿತವಾಗಿರುವುವು. ಆದುದರಿಂದ ಶಾಸ್ತ್ರೀಯವಾದ ಸಾಹಿತ್ಯ ಚರಿತ್ರೆಗೆ ಶಾಸನಾಭ್ಯಾಸ ಅನಿವಾರ್ಯ.

ದಕ್ಷಿಣ ಭಾರತದ ಬೇರೆ ಬೇರೆ ಲಿಪಿಗಳ ಬೆಳವಣಿಗೆಯನ್ನು ಚಿತ್ರಿಸಲು ಕರ್ಣಾಟಕದ ಶಾಸನಗಳು ಬಹು ಮಟ್ಟಿಗೆ ಸಹಾಯಕವಾಗುವುವು. ವಾಸ್ತವವಾಗಿ ದಕ್ಷಿಣ ಭಾರತದ ಲಿಪಿಗಳಿಗೆಲ್ಲ ಅಶೋಕನ ಶಾಸನಗಳೇ ಮೂಲ. ಕನ್ನಡ ಲಿಪಿಶಾಸ್ತ್ರದ ಚರಿತ್ರೆಗೆ ಬೇರೊಂದು ಸಾಧನವಾದ ಕೈ ಬರಹದ ಪ್ರತಿಗಳು ೧೪ನೆಯ ಶತಮಾನದಿಂದ ಹಿಂದಕ್ಕೆ ಸಿಕ್ಕದಿರುವುದರಿಂದ ಅದಕ್ಕಿಂತ ಹಿಂದಿನ ಇತಿಹಾಸವನ್ನು ಗುರುತಿ

ಸಲು ಶಾಸನಗಳಿಗೇ ಮರೆ ಹೋಗಬೇಕು. ಅಲ್ಲಿಂದ ಮುಂದಕ್ಕೂ ಪ್ರತಿಯೊಂದು ಶತಮಾನಗಳ ಬೇರೆ ಬೇರೆ ಪಾದಗಳಲ್ಲಿ ಅನುಸ್ಯೂತವಾಗಿ ರಚಿತವಾಗಿರುವ ಕೈ ಬರಹದ ಗ್ರಂಥಗಳೂ ಉಪಲಬ್ಧವಲ್ಲದುದರಿಂದ ಆ ಕಾಲದ ಚರಿತ್ರೆಯನ್ನು ಸಂಪೂರ್ಣಗೊಳಿಸುವುದಕ್ಕೂ ಶಾಸನಗಳೇ ಪೂರಕ.

ಕೊನೆಯಲ್ಲಿ ಶಾಸನ ಸಾಹಿತ್ಯದ ಭವಿಷ್ಯವನ್ನು ಕುರಿತು ಒಂದೆರಡು ಮಾತುಗಳನ್ನಾಡುವುದು ಅಸಂಬದ್ಧವಾಗಲಾರದು. ಈ ಕ್ಷೇತ್ರದಲ್ಲಿ ಪ್ರಾಚೀನ ವಿದ್ವಾಂಸರಿಂದ ಅಮೋಘವಾದ ಕೆಲಸ ನಡದಿದೆ. ಅದಕ್ಕೆ ಅವರೊಬ್ಬೊಬ್ಬರೂ ವಂದನೀಯರು. ಆದರೆ ಇನ್ನೂ ಆಗಬೇಕಾಗಿರುವ ಕೆಲಸ ಅಪಾರ. ರವೀಂದ್ರನಾಥಟಾಕೂರರ ಮಾತಿನಲ್ಲಿ ಹೇಳುವುದಾದರೆ ಇದುವರೆಗೆ ಆಗಿರುವ ಕೆಲಸ ಬೆರಣಿ ಆಯುವ ಕೆಲಸ ಮಾತ್ರ. ಇನ್ನು ಅದರ ಸಹಾಯದಿಂದ ಒಲೆಹಚ್ಚಿ ಅಡಿಗೆ ಮಾಡಿ ರಸಕವಳವನ್ನು ತಿಂದು ಪುಷ್ಟಿಯನ್ನು ಪಡೆಯಬೇಕಾಗಿದೆ. ಇದುವರೆಗೆ ಪಂಡಿತರು ಸಂಗ್ರಹಿಸಿರುವುವೇ ಅಲ್ಲದೆ ಪ್ರತಿವರ್ಷವೂ ಹೊಸ ಹೊಸ ಶಾಸನಗಳು ಅಲ್ಲಲ್ಲಿ ಸಿಕ್ಕುತ್ತಲೇ ಇರುತ್ತವೆ. ಸಂಗ್ರಹಕಾರ್ಯ ನೈಜಾಂ ಕರ್ನಾಟಕದಲ್ಲಿ ಬಹು ತ್ವರಿತವಾಗಿ ನಡೆಯಬೇಕು. ಸ್ಥೂಲವಾದ ಒಂದು ಪರಾಮರ್ಶದಿಂದ ಅಲ್ಲಿಯೇ ಸುಮಾರು ೫೦೦೦ಕ್ಕಿಂತ ಕಡಿಮೆಯಿಲ್ಲದಷ್ಟು ಹೊಸ ಶಾಸನಗಳು ಸಿಕ್ಕುವ ಭರವಸೆ ಇದೆ. ಈಗಾಗಲೇ ಅಲ್ಲಿಯ ತಿಳಿಯದ ಜನ ಅನೇಕ ಶಾಸನಗಳನ್ನು ಒಡೆದು ಬೇರೆ ಬೇರೆ ಕಾರ್ಯಗಳಿಗೆ ಉಪಯೋಗಿಸುತ್ತಿರುವುದು ಅನೇಕರ ಅನುಭವಕ್ಕೆ ಬಂದಿದೆ. ಇವುಗಳ ಸಂಗ್ರಹ, ಸಂಪಾದನೆ, ಅನುವಾದ ಮತ್ತು ವಿಮರ್ಶೆಯಾಗದಿದ್ದರೆ ಚಾಳುಕ್ಯ ಮತ್ತು ರಾಷ್ಟ್ರಕೂಟರ ಚರಿತ್ರೆಯು ಅಪೂರ್ಣವಾಗಿಯೇ ಉಳಿಯುವುದು. ಸ್ವತಂತ್ರ ಭಾರತದ ಕೇಂದ್ರ ಸರ್ಕಾರವಾಗಲಿ ಪ್ರಾಂತೀಯ ಪ್ರಜಾಸರ್ಕಾರವಾಗಲಿ ಈ ವಿಷಯಕ್ಕೆ ಪ್ರಪ್ರಥಮ ಪ್ರಾಮುಖ್ಯತೆಯನ್ನು ಕೊಟ್ಟು ಕೆಲಸ ಮಾಡಬೇಕು. ಉಳಿದ ಭಾಗಗಳಲ್ಲಿ ಶೇಖರವಾಗಿರುವ ಶಾಸನಗಳಲ್ಲಿ ಕೆಲವುಗಳ ಮೂಲ, ಮತ್ತೆ ಕೆಲವುಗಳ ಅನುವಾದ, ಬೇರೆ ಕೆಲವುದರ ಪಟ್ಟಿ ಇನ್ನು ಕೆಲವುದರ ವಿಮರ್ಶೆ ಪ್ರಕಟವಾಗಿದೆ. ಮೈಸೂರು ಶಾಸನದ ಇಲಾಖೆಯಿಂದ ಪ್ರಕಟವಾದ ಎಪಿಗ್ರಾಫಿಯಾ ಕರ್ಣಾಟಕದ ಶಾಸನಗಳು ಪ್ರದೇಶಾನುಗುಣವಾಗಿ ಜೋಡಿಸಲ್ಪಟ್ಟಿವೆ. ಅದೇ ಇಲಾಖೆಯ ಆದಿವರ್ಷಗಳ ವರದಿಗಳಲ್ಲಿ ಮೊದಲು ಬರಿಯ ವಿಮರ್ಶೆಗಳೂ ಮುಂದಕ್ಕೆ ಮೂಲ ಮತ್ತು ಅನುವಾದಗಳೂ ಇತ್ತೀಚೆಗೆ ಮೂಲ, ಅನುವಾದ ವಿಮರ್ಶೆಗಳೂ, ವಂಶಾನುಗುಣವಾದ ಪಟ್ಟಿಗಳೊಡನೆ ಪ್ರಕಟಿತವಾಗಿವೆ. ಭಾರತ ಸರ್ಕಾರದ ನೇತೃತ್ವದಲ್ಲಿ ಮದ್ರಾಸ್ ಶಾಸನದ ಇಲಾಖೆಯಿಂದ ಪ್ರತಿವರ್ಷವೂ ಶೇಖರವಾದ ಶಾಸನಗಳ ಪಟ್ಟಿ ಪ್ರಕಟವಾಗುತ್ತಿದ್ದು ಇತ್ತೀಚೆಗೆ ವಂಶಾನುಗುಣವಾದ ಶಾಸನಸಂಗ್ರಹಗಳ ಸಂಪುಟಗಳು ಹೊರಬೀಳುತ್ತಿವೆ. ಡಾ. ಶಾಮಶಾಸ್ತ್ರಿಗಳು ಸಂಪಾದಿಸಿರುವ ಬೊಂಬಾಯಿ ಕರ್ಣಾಟಕದ ಶಾಸನಗಳೂ ಪ್ರದೇಶಾನುಗುಣವಾದುವು. ಶ್ರೀಮಾನ್ ಆರ್.ಎಸ್. ಪಂಚಮುಖಿಯವರು ಯಾವುದೋ ಒಂದು

ಕಾಲದಲ್ಲಿ ಶೇಖರವಾದುವನ್ನು ವಂಶಾನುಗುಣವಾಗಿ ಪ್ರಕಟಿಸಿದ್ದಾರೆ. ಇವುಗಳಿಗೆಲ್ಲ ಒಂದು ಏಕರೂಪತೆಯನ್ನು ತರಬೇಕು. ಕರ್ಣಾಟಕದ ಎಲ್ಲ ಶಾಸನಗಳನ್ನೂ—ಅಶೋಕನ ಕಾಲದಿಂದ ಇಲ್ಲಿಯವರೆಗೆ—ಕಾಲಾನುಗುಣವಾಗಿ ಜೋಡಿಸಬೇಕು. ಈ ಕಾರ್ಯವು ಯಾರಿಂದಲೂ ತೃಪ್ತಿಕರವಾಗಿ ನಡೆದಿಲ್ಲ. ೧೯೦೬ರಲ್ಲಿ ಮಿ. ಕೀಲ್‌ಹಾರನ್ ಅವರು ದಕ್ಷಿಣ ಭಾರತದ ಅಲ್ಲಿಯವರೆಗೆ ದೊರೆತ ಶಾಸನಗಳನ್ನು ಜೋಡಿಸಿದ್ದರು. ೧೯೩೬ರಲ್ಲಿ ಡಾ. ಎಸ್. ಕೃಷ್ಣಸ್ವಾಮಯ್ಯಂಗಾರ್ಯರು ಕೀಲ್‌ಹಾರನ್ನರ ಕಾರ್ಯವನ್ನು ಮುಂದುವರಿಸಿ ತಮ್ಮ ಕಾಲದವರೆಗಿನ ಪಟ್ಟಿಯನ್ನು ಸಿದ್ಧಪಡಿಸಿದರು. (ಇವುಗಳಲ್ಲಿಯೂ ಕಾಲ ನಿರ್ದಿಷ್ಟವಲ್ಲದ ಅನೇಕ ಶಾಸನಗಳು ಸೇರಿಲ್ಲ). ಅಲ್ಲಿಂದ ಮುಂದಕ್ಕೆ ಆ ಕಾರ್ಯವನ್ನು ಯಾರೂ ಮುಂದುವರಿಸಿಲ್ಲ. (ಡಾ. ಎ. ಎಸ್. ನರಸಿಂಹಯ್ಯ, ಮಿ. ಗೈ ಯವರಂತಹ ಒಬ್ಬಿಬ್ಬರು ಕೆಲವು ಶತಮಾನಗಳಿಗೆ ಸಂಬಂಧಪಟ್ಟ ಕನ್ನಡ ಶಾಸನಗಳನ್ನು ತಮ್ಮ ವ್ಯಾಸಂಗಕ್ಕೆ ಜೋಡಿಸಿಕೊಂಡಿರುವುದುಂಟು) ಈಗ ಶಾಸನಗಳ ಶಾಸ್ತ್ರೀಯ ಅಭ್ಯಾಸ ನಡೆಯಬೇಕು. ಕರ್ಣಾಟಕದ ಬೇರೆ ಬೇರೆ ಶಾಖೆಗಳಲ್ಲಿ ಸಂಗ್ರಹೀತವಾದ ಎಲ್ಲ ಶಾಸನಗಳೂ ಕಾಲಾನುಗುಣವಾಗಿ ಜೋಡಿಸಲ್ಪಡಬೇಕು. ಆ ಮೇಲೆ ಆವಶ್ಯಕ ಬಂದಹಾಗೆಲ್ಲ ಭಾಷಾನುಗುಣವಾಗಿ, ವಂಶಾನುಗುಣವಾಗಿ, ದೇಶಾನುಗುಣವಾಗಿ, ವಿಷಯಾನುಗುಣವಾಗಿ ಅವುಗಳನ್ನು ವಿಭಾಗಿಸಬೇಕು. ಅವುಗಳ ಆಧಾರದ ಮೇಲೆ ಭಿನ್ನ ಭಿನ್ನ ವಿಷಯಗಳನ್ನು ಪಟ್ಟಿಯ ರೂಪದಲ್ಲಿ (Tabular form) ಸಿದ್ಧಪಡಿಸಿಕೊಂಡು ಅವುಗಳನ್ನು ಒಟ್ಟುಗೂಡಿಸಿ ಕರ್ಣಾಟಕದ ಸರ್ವತೋಮುಖವಾದ ಚರಿತ್ರೆಯನ್ನು ನಿರ್ಮಾಣ ಮಾಡಬೇಕು. ಈ ಕೆಲಸವನ್ನು ಕಾರ್ಯಗತವನ್ನಾಗಿ ಮಾಡುವುದು ಸೂಚಿಸುವಷ್ಟು ಸುಲಭವೇನೂ ಅಲ್ಲ. ಸುಮಾರು ಮೂವತ್ತು ಸಾವಿರ ಶಾಸನಗಳನ್ನು ವಿವಿಧ ರೀತಿಯಲ್ಲಿ ಜೋಡಿಸಿ ಬೇರೆ ಬೇರೆ ರೀತಿಯಿಂದ ವಿಷಯ ಸಂಗ್ರಹಣ ಮಾಡಬೇಕಾದರೆ ಸುಮಾರು ನೂರಾರು ವಿದ್ವಾಂಸರು ಹತ್ತಾರು ವರ್ಷಗಳ ಕಾಲ ಶ್ರಮಿಸಬೇಕಾಗುತ್ತದೆ. ಇದನ್ನು ಯಾವ ಒಂದು ಸಂಸ್ಥೆಯೂ ಪ್ರತ್ಯೇಕವಾಗಿ ನಡೆಸಲು ಸಾಧ್ಯವಿಲ್ಲ. ಕರ್ಣಾಟಕದ ವಿವಿಧ ವಿಶ್ವವಿದ್ಯಾನಿಲಯಗಳಿಗೆ ಸೇರಿದ ಪ್ರೌಢಶಾಲೆಗಳಲ್ಲಿ ಉಚ್ಚವ್ಯಾಸಂಗದ ವಿಷಯವನ್ನಾಗಿ ಇವುಗಳನ್ನು ಸೇರಿಸುವುದೊಂದೇ ಈ ಕಾರ್ಯ ಸಾಧನೆಗೆ ಸುಲಭವಾದ ಉಪಾಯ ವಿಶ್ವವಿದ್ಯಾನಿಲಯದ ಕನ್ನಡ, ಸಂಸ್ಕೃತ, ಇತಿಹಾಸ, ತತ್ತ್ವಶಾಸ್ತ್ರ, ಅರ್ಥಶಾಸ್ತ್ರ, ಇಂಡಾಲಜಿ ಶಾಖೆಯ ವಿದ್ಯಾರ್ಥಿಗಳು ತಮ್ಮ ಆನರ್ಸ್, ಎಂ.ಎ., ಮತ್ತು ಡಾಕ್ಟರೇಟ್ ಪ್ರಶಸ್ತಿಗಳ ವ್ಯಾಸಂಗಕ್ಕೆ ಈ ವಿಷಯಗಳನ್ನು ಆರಿಸಿಕೊಳ್ಳಬೇಕು. ಸರ್ಕಾರದವರು ಇವುಗಳ ವ್ಯಾಸಂಗಕ್ಕೆ ಪ್ರತ್ಯೇಕ ವಿದ್ಯಾರ್ಥಿವೇತನಗಳನ್ನು ಕಲ್ಪಿಸಬೇಕು. ಪ್ರೌಢಶಾಲೆಗಳ ವಿದ್ಯಾರ್ಥಿ ಮತ್ತು ಉಪಾಧ್ಯಾಯ ವರ್ಗಕ್ಕೂ ಶಾಸನದ ಇಲಾಖೆಗೂ ನಿಕಟ ಸಂಬಂಧವಿರಬೇಕು. (ಈ ಸಂಬಂಧದಲ್ಲಿ ಮೈಸೂರು ಶಾಸನದ ಇಲಾಖೆಯು ಹಿಂದಿನಂತೆ ತಕ್ಷಣ ವಿಶ್ವವಿದ್ಯಾನಿಲಯದ ಆವರಣಕ್ಕೆ ವರ್ಗಾಯಿಸಲ್ಪಡಬೇಕೆಂಬುದನ್ನು ಜ್ಞಾಪಿಸಿಕೊಳ್ಳಬೇಕು)

ಶಾಸನ ಸಾಹಿತ್ಯದಲ್ಲಿ ನುರಿತ ಅಧ್ಯಾಪಕರಿಗೂ ಅಭ್ಯಾಸ ಮಾಡಿದ ವಿದ್ಯಾರ್ಥಿಗಳಿಗೂ ಮುಂದಿನ ಜೀವನದಲ್ಲಿ ಸರಿಯಾದ ಮನ್ನಣೆ ದೊರೆಯಬೇಕು. ಅವರು ಮಾಡಿದ ಸಂಶೋಧನೆಗಳು ವಿಶ್ವವಿದ್ಯಾನಿಲಯದ ಗ್ರಂಥಮಾಲೆಗಳಲ್ಲಿ ಆಗಾಗ ಪ್ರಕಟವಾಗಿ ಜನಸಾಮಾನ್ಯರನ್ನು ಮುಟ್ಟುವಂತಾಗಬೇಕು.

ಸ್ವತಂತ್ರ ಭಾರತದಲ್ಲಿ ಇತ್ತೀಚೆಗೆ ಅನುಸರಿಸುತ್ತಿರುವ ಕೇಂದ್ರೀಕರಣ ನೀತಿ ಯಿಂದ ಇತರ ಶಾಖೆಗಳಂತೆಯೇ ಶಾಸನ ಶಾಖೆಗೂ ಸ್ವಲ್ಪ ಮಟ್ಟಿಗೆ ಧಕ್ಕೆಯುಂಟಾ ಗಿದೆ. ಅಖಿಲ ಭಾರತದ ಪ್ರಾಚ್ಯ ವೈಭವವೆಲ್ಲವೂ ಕೇಂದ್ರಕ್ಕೆ ಘನತೆಯನ್ನೂ ಗೌರವ ವನ್ನೂ ತರುತ್ತದೆಂಬುದರಲ್ಲಿ ಸಂದೇಹವಿಲ್ಲ. ಆದರೆ ಆ ಕಾರ್ಯದಲ್ಲಿ ಪ್ರದೇಶಗಳಿಗೆ ಅನ್ಯಾಯವಾಗಬಾರದು ಪ್ರಾಚೀನ ಕಲಾಕೃತಿಗಳೆಲ್ಲವನ್ನೂ ಕೇಂದ್ರ ಸರ್ಕಾರದವರು ವಹಿಸಿಕೊಂಡು ಶಾಸನ ಸಂಶೋಧನ ಕಾರ್ಯವನ್ನು ಪ್ರದೇಶಗಳಲ್ಲಿ ಕೇಂದ್ರದ ಉಪ ಶಾಖೆಗಳಾಗಿ ನಡಸುವುದು ಖಂಡಿತವಾಗಿ ಅವುಗಳ ಪ್ರಗತಿಗೆ ಕುಂದನ್ನುಂಟುಮಾಡು ತ್ತದೆ. ಅನೇಕ ಸಲ ಕೇಂದ್ರಾಧಿಕಾರಿಗೆ ಪ್ರಾದೇಶಿಕ ವಿಷಯವಾಗಿ ಪಾಂಡಿತ್ಯವಾಗಲಿ ಅಭಿಮಾನವಾಗಲಿ ಇರುತ್ತದೆಂದು ನಂಬುವುದಕ್ಕಾಗುವುದಿಲ್ಲ. ಬೃಹದ್ದೃಷ್ಟಿಯಿಂದ ಲಘುಶಾಖೆಗಳ ಪ್ರಗತಿ ಕುಂಠಿತವಾಗುತ್ತದೆ. ಕೇಂದ್ರವು ಆಡಳಿತಾಧಿಕಾರವನ್ನು ವಹಿಸಿಕೊಂಡರೂ ಪ್ರಾದೇಶಿಕ ಶಾಖೆಗಳನ್ನು ಸ್ವತಂತ್ರ ಉಪಶಾಖೆಗಳನ್ನಾಗಿ ಉಳಿಸಿ ಆಯಾ ಪ್ರಾದೇಶಿಕ ಪಂಡಿತರ ನೇತೃತ್ವದಲ್ಲಿಯೇ ನಡಸಿಕೊಂಡು ಬರುವುದು ಶ್ರೇಯಸ್ಕರ.

ಆದುದರಿಂದ ಮೇಲೆ ಸೂಚಿಸಿರುವಂತೆ ವಿದ್ಯಾರ್ಥಿಗಳ, ವಿದ್ವಾಂಸರ, ಸರ್ಕಾರದ ಗಮನ ಆ ಸಾಹಿತ್ಯ ರಾಶಿಯ ಕಡೆ ಹರಿಯಲಿ. ಅದರ ಸಂಶೋಧನೆಯ ಫಲ ಜನ ಸಾಮಾನ್ಯರಿಗುಂಟಾಗಲಿ. ಕರ್ಣಾಟಕದ ಪ್ರಾಚ್ಯವೈಭವರವಿ ಸ್ವತಂತ್ರ ಭಾರತದ ಗಗನಾಂಗಣದಲ್ಲಿ ಚಿರಸ್ಥಾಯಿಯಾಗಿ ನಿಲ್ಲಲಿ.

ಓಂ ತತ್ಸತ್

**ಎ. ಅನಂತರಂಗಾಚಾರ್.**

## ಪ್ರಮಾಣ ಕೋಶಗಳು

೧ ಎಪಿಗ್ರಾಫಿಯಾ ಕರ್ಣಾಟಿಕಾ ಸಂಪುಟಗಳು.
೨ ಮೈಸೂರು ಶಾಸನದ ಇಲಾಖೆಯ ವರದಿಗಳು.
೩ ಮದ್ರಾಸ್ ಶಾಸನದ ಇಲಾಖೆಯ ವರದಿಗಳು.
೪ ಕರ್ಣಾಟಕದ ಶಾಸನಗಳು—ಶ್ರೀ. ಆರ್. ಎಸ್. ಪಂಚಮುಖಿಯವರಿಂದ.
೫ ಬೊಂಬಾಯಿ ಕರ್ಣಾಟಕದ ಶಾಸನಗಳು.
೬ Dynasties of the Kanarese Districts.—Fleet.
೭ Mysore Gazetteer—Sri. Hayavadana Rao,

## ಲೇಖನಗಳು

೧ ವೀರಗಲ್ಲುಗಳು ಮತ್ತು ಮಾಸ್ತಿ ಕಲ್ಲುಗಳು

ಶ್ರೀ. ತಿ. ತಿ. ಶರ್ಮ (ಸಂಭಾವನೆ)

೨ ಕನ್ನಡನಾಡಿನ ಶಾಸನಗಳು ಮತ್ತು ಕನ್ನಡ ಭಾಷಾ ಸಾಹಿತ್ಯ :

ಶ್ರೀ ತಿ. ತಿ. ಶರ್ಮ—(ಸಮರ್ಪಣೆ)

೩ ಶಾಸನಗಳ ಪರಿಭಾಷೆ

ಶ್ರೀ. ಆರ್. ರಾಮರಾವ್, (ಸಂಭಾವನೆ)

# ಸಾಹಿತ್ಯದ ಸ್ವರೂಪ ಮತ್ತು ವಿಮರ್ಶೆ

ಕೆಲವೊಂದು ವೇಳೆ ಸಾಹಿತಿಗೆ ಮನ್ನಣೆ ಸಿಕ್ಕಿರದಿದ್ದರೂ ಸಾಮಾನ್ಯವಾಗಿ ಸಾಹಿತ್ಯಕ್ಕೆ ಮಾತ್ರ ಸರ್ವಕಾಲದಲ್ಲಿಯೂ ಮನ್ನಣೆ ಸಿಕ್ಕಿದೆ. ಅಚ್ಚಿನ ಸೌಕರ್ಯಗಳಿಲ್ಲದ ಕಾಲದಲ್ಲಿ ನಿರ್ಮಿತವಾದ ಸಾಹಿತ್ಯವನ್ನು ನಮ್ಮ ಪೂರ್ವಜರು ಮುಖಪರಂಪರೆಯಿಂದಾಗಲಿ, ತಾಡವಾಲಿಗಳ ಮೂಲಕವಾಗಲಿ ತಲೆತಲಾಂತರಗಳಿಗೆ ತಲುಪಿಸಿದ್ದೇ ಈ ಮಾತಿಗೆ ಸಾಕ್ಷಿ. ಸಾವಿರಾರು ವರ್ಷಗಳ ಪೂರ್ವದಲ್ಲಿ ರಚಿತವಾದ ಭಾರತವನ್ನು ನಮ್ಮ ಜನ ಐದನೆಯ ವೇದವೆಂದು ಪೂಜಿಸುತ್ತಿದೆ. ರಾಮಾಯಣವು ಸಾಹಿತ್ಯವೂ ಹೌದು, ಧರ್ಮಗ್ರಂಥವೂ ಹೌದು. ಕಾಳಿದಾಸ ಭವಭೂತಿಗಳು ಯಾವಕಾಲದಲ್ಲಿಯೂ ಸುಸಂಸ್ಕೃತವಾದ ಅಭಿರುಚಿಗೆ ಆಪ್ತಬಂಧುಗಳು. ಆಯಾಕಾಲಕ್ಕೆ ಆಯಾಸಾಹಿತಿಗಳಿಗೆ ಯಾವ ರೀತಿಯ ಮನ್ನಣೆ ಸಿಕ್ಕಿತೆಂಬುದು ತಿಳಿಯಲಾಗದ ವಿಷಯ. ಆದರೆ ಅವರ ಕೃತಿಗಳು ಮಾತ್ರ ಕಾಲಪುರುಷನ ಕೈತಪ್ಪಿಸಿ ಶತಮಾನಗಳನ್ನು ಮೆಟ್ಟಿನಿಂತದ್ದು ಒಂದು ದೃಷ್ಟಿಯಿಂದ ಜನತೆಯ ಸುಸಂಸ್ಕೃತವಾದ ರಸಾಭಿಜ್ಞತೆಗೆ ನಿದರ್ಶನವಾಗಬಹುದು. ಇನ್ನೊಂದು ದೃಷ್ಟಿಯಿಂದ ಇಂಥ ಮಹತ್ತರ ಕೃತಿಗಳು ಕಾಲಾತೀತವಾಗಿ ನಿಲ್ಲಬೇಕಾದರೆ ತಲೆತಲಾಂತರಗಳ ಮನಸ್ಸನ್ನೂ ಸೆರೆಹಿಡಿದು ಸೂರೆಗೊಳ್ಳಬಲ್ಲ ಯಾವುದೋ ಒಂದು ಅಂತಃಶಕ್ತಿಯಿಂದ ಕೂಡಿದವುಗಳಾಗಿರಬೇಕು. ಸಾಹಿತ್ಯ ಬದುಕಬೇಕಾದರೆ ಅದರ ಭಕ್ತರಲ್ಲಿ ಶ್ರೇಷ್ಠವಾದ ರಸಾಭಿಜ್ಞತೆ ಬೇಕೆಂಬುದು ನಿಜವಾದರೂ ಸಾಹಿತ್ಯವೇ ಶಕ್ತಿಯುತವಾಗಿರದಿದ್ದರೆ ಕೇವಲ ರಸಾಭಿಜ್ಞತೆ ಏನನ್ನೂ ಮಾಡಲಾರದು. ಆದ್ದರಿಂದ, ಎಲ್ಲ ದೇಶಗಳಲ್ಲಿಯೂ, ಎಲ್ಲ ಕಾಲದಲ್ಲಿಯೂ ನಿರ್ಮಿಸಲ್ಪಟ್ಟಿರಬಹುದಾದ ಮಹೋನ್ನತ ಸಾಹಿತ್ಯ ಎಲ್ಲ ದೇಶಗಳಲ್ಲಿಯೂ ಎಲ್ಲ ಕಾಲದಲ್ಲಿಯೂ ರಸಿಕಜ್ಞರನ್ನು ಸೆರೆಹಿಡಿಯಬಲ್ಲ ಶಕ್ತಿಯಿಂದ ಕೂಡಿರಬೇಕು. ಗ್ರೀಸ್ ದೇಶದ ಮಹಾಕಾವ್ಯವಾದ ಹೋಮರನ 'ಇಲಿಯಡ್ಡ'ನ್ನು, ಶೇಕ್ಸಪಿಯರನ ನಾಟಕಗಳನ್ನು, ಮಿಲ್ಟನ್‌ಕವಿಯ 'ಪ್ಯಾರಾಡಾಯಿಸ್ ಲಾಸ್ಟ್' ಮಹಾಕಾವ್ಯವನ್ನು ನಾವು ದೇಶಕಾಲಗಳ ಯಾವ ಕಟ್ಟುಗಳನ್ನು ಮನ್ನಿಸದೆ ಓದಿ ಆನಂದಪಡುತ್ತೇವೆ. ವ್ಹರ್ಜಿಲ್ ರೋಮದವನೆಂದಾಗಲಿ, ಗಯಟೆ ಜರ್ಮನಿಯವನೆಂದಾಗಲಿ, ಇವರಿಬ್ಬರೂ ನಮ್ಮಿಂದ ದೂರವಾಗಿ ಯಾವುದೋ ಒಂದು ಕಾಲದಲ್ಲಿ ತಮ್ಮ ಕೃತಿಗಳನ್ನು ನಿರ್ಮಿಸಿದರೆಂದಾಗಲಿ, ನಾವು ಅವರಿಗೆ ಮನ್ನಣೆಯನ್ನು ಸಲ್ಲಿಸದಿರುವುದಿಲ್ಲ. ಪಂಪ, ರನ್ನ, ಅಲ್ಲಮ, ಬಸವಣ್ಣ, ಲಕ್ಷ್ಮೀಶ, ಕುಮಾರವ್ಯಾಸರ ಕೃತಿಗಳನ್ನು ಓದಿ ಆನಂದಪಡುತ್ತಿರುವರು ಅವರ ಕಾಲ ಯಾವುದು, ಅವರ ದೇಶ ಯಾವುದು, ಅವರ ಮತಪಂಥಗಳು ಯಾವವು ಎಂಬ ಪ್ರಶ್ನೆಗಳನ್ನು ಎತ್ತುವುದಿಲ್ಲ, ಎತ್ತಬೇಕಾಗಿಲ್ಲ. ಅವರವರ ಕೃತಿಗಳ

ಸತ್ವಕ್ಕೆ, ಶಕ್ತಿಗೆ, ಈ ಯಾವ ಅಂಶಗಳ ನೇರವಾದ ಸಂಬಂಧವೂ ಇಲ್ಲ. ಆ ಶಕ್ತಿ ಸತ್ವಗಳಿಗೆ ನಾವು ತಲೆಬಾಗಿದಾಗ ಈ ಯಾವ ಅಂಶಗಳೂ ನಮ್ಮ ಗಮನಕ್ಕೆ ಬರುವುದಿಲ್ಲ. ಆದ್ದರಿಂದ ಮಹೋನ್ನತವಾದ ಸಾಹಿತ್ಯ ಕಾಲದೇಶ ಮತಪಂಥಗಳನ್ನು ಮೀರಿ ಮರೆಯಿಸಿ, ತನ್ನ ಪ್ರಭಾವವನ್ನು ಬೀರುವಂಥದಾಗಿರುತ್ತದೆ ಎಂಬುದು ನಿರ್ವಿವಾದ.

ಇಂಥ ಪ್ರಭಾವ ಸಾಮರ್ಥ್ಯವನ್ನು ಯಾವ ಗುಣಗಳ ಮೂಲಕ ಸಾಹಿತ್ಯ ಸಾಧಿಸಿರಬಹುದೆಂಬುದು ವಿಚಾರಾರ್ಹ ವಿಷಯವಾಗಿದೆ. ಯಾವ ಘಟಕಗಳು ಸೇರಿಕೊಂಡು ಬರವಣಿಗೆಯನ್ನು ವೇದಸಮಾನವಾಗಿ ಮಾಡಬಲ್ಲವೆಂಬ ವಿಷಯ ಯೋಚನೆಗೆ ಯೋಗ್ಯವಿಷಯ. ಈ ವಿಷಯ ವಿವರಣೆಯೇ ವಿಮರ್ಶೆಯ ಸ್ಥೂಲವಾದ ಕರ್ತವ್ಯ. ಕಳೆದ ಕೆಲವು ಶತಮಾನಗಳಲ್ಲಿ ವಿಜ್ಞಾನ ಮುಂತಾದವುಗಳ ಪರಿಣಾಮವಾಗಿ ಮಾನವ ಜೀವನದ ಬಾಹ್ಯಸ್ವರೂಪ ಎಷ್ಟೋ ಪರಿಯಿಂದ ಬದಲಾಗಿದೆ. ಆದರೆ ಮಾನವನ ಆಂತರಿಕ ಜೀವನ ಬದಲಾಗಿದೆಯೇ ಎಂಬುದು ವಿವರಗಳಲ್ಲಿ ವಿವಾದಾಸ್ಪದವಾಗಿದ್ದರೂ ಸ್ಥೂಲವಾಗಿ ಯಾವ ವಾದಕ್ಕೂ ಆಸ್ಪದವಿಲ್ಲ. ಮನುಷ್ಯನ ಜೀವನ ಕ್ರಮ ಬದಲಾಗಿದ್ದರೂ ಆತನ ಸ್ವಭಾವ ಬದಲಾಗಿಲ್ಲ. ಮಾನವ ಪ್ರಾಣಿ ಹೆಚ್ಚು ಕಡಿಮೆ ಮಾನವ ಪ್ರಾಣಿಯಾಗಿಯೇ ಉಳಿದಿದ್ದಾನೆ. ಆರ್ಥಿಕ, ರಾಜಕೀಯ, ಸಾಮಾಜಿಕ, ಧಾರ್ಮಿಕ, ವಿಷಯಗಳನ್ನು ಪರ್ಯಾಲೋಚಿಸುವ ಆತನ ಬಗೆಗಳು ಬದಲಾವಣೆ ಹೊಂದಿದ್ದರೂ ಆತನಲ್ಲಿಯ ಮಾನವ ಸಹಜವಾದ ಶಕ್ತಿದೌರ್ಬಲ್ಯಗಳು, ನೋವುನಲಿವುಗಳು, ಆಶೆ ಆಕಾಂಕ್ಷೆಗಳು, ಎಂದಿನಂತೆಯೇ ಇವೆ. ಮನುಷ್ಯ ಚೆಲುವನ್ನು ಕಂಡಾಗ ಆನಂದವನ್ನು ಪಡೆಯುತ್ತಾನೆ. ಎಂದಿನಂತೆಯೇ ನೋವಿಗೆ ಅಳುಕುತ್ತಾನೆ. ಶಕ್ತಿಯಿಂದ ಗಭೀರನಾಗಿ ಉನ್ಮತ್ತನಾಗುತ್ತಾನೆ. ಸೋಲಿನಿಂದ ಸಣ್ಣವನಾಗಿ ಕೃಪಣನಾಗುತ್ತಾನೆ. ಎಂದಿನಂತೆಯೇ ಜೀವನವನ್ನು ಕೆಲವೊಂದು ವೇಳೆ ಧೈರ್ಯದಿಂದಾದರೆ ಕೆಲವೊಂದು ವೇಳೆ ಕಾತರತೆಯಿಂದ ಎದುರಿಸುತ್ತಾನೆ. ಸಾವಿನೆದುರು ಚಿಂತಾಗ್ರಸ್ತನಾಗಿ ಮುಂದುಗಾಣದವನಾಗುತ್ತಾನೆ. ಯಾವ ಕಾಲದಲ್ಲಿಯೂ ಮನುಷ್ಯ ಸ್ವರ್ಗಕ್ಕಾಗಿ ಆಸೆ ಪಟ್ಟಿದ್ದಾನೆ; ನರಕಕ್ಕೆ ಹೆದರಿದ್ದಾನೆ. ಸುತ್ತಲಿನ ನಾಗರಿಕತೆಯ ಅಸ್ಪಷ್ಟವಾದ ಪ್ರಭಾವಗಳಿಗೆ ಸರಿಯಾಗಿ ಜೀವನದ ವಿವಿಧರಂಗಗಳಲ್ಲಿ ಯಾವುದು ಸರಿ, ಯಾವುದು ಸರಿಯಲ್ಲವೆಂಬ ವಿವೇಕಕ್ಕೆ ಎಡೆ ಕೊಟ್ಟಿದ್ದಾನೆ.

ಉತ್ತಮಸಾಹಿತ್ಯ ಜೀವನಕ್ಕೆ ಯಾವಾಗಲೂ ಅನಿವಾರ್ಯವಾಗಿದ್ದ ಈ ಚಿರಂತನ ಅಂಶಗಳನ್ನು ಕುರಿತದ್ದೇ ಆಗಿರುತ್ತದೆ. ಅನಾದಿ ಕಾಲದಿಂದಲೂ ಮಾನವ ಜೀವನ ಮಾನವನಿಗೊಂದು ಸಮಸ್ಯೆಯಾಗಿದ್ದರಿಂದಲೇ ಸಾಹಿತ್ಯನಿರ್ಮಿತಿಗೆ ನಿತ್ಯ ಸಂದರ್ಭವಾಗಿದೆ. ನಿಸರ್ಗದ ಭವ್ಯಭೀಕರತೆಯನ್ನು, ಉಷಃಕಾಲದ ಸೊಬಗನ್ನು ನೋಡಿ ಸೃಷ್ಟಿಯ ಸೋಜಿಗದೆದುರು ಬೆರಗಾಗಿ ನಿಂತು ಋಕ್ಕುಗಳನ್ನು ಹಾಡಿದ ಮಾನವನ ಚೇತನ ಇಂದಿಗೂ ಶ್ರಾವಣದ ಸೊಬಗನ್ನು ನೋಡಿ ಆನಂದಪಟ್ಟು ಭಾವಗೀತವನ್ನು ಹಾಡುತ್ತದೆ. ಅದರಂತೆಯೇ ವಿಚಾರಪರನಾದ ಮಾನವನಿಗೆ ಯಾವ

ಕಾಲದಲ್ಲಿಯೂ ಪ್ರಪಂಚದ ಉದ್ದಿಶ್ಯವೇನು, ಜೀವನ ಇತ್ಯರ್ಥ ಯಾವುದು, ಬದುಕು ಸಾವುಗಳ ಕೊನೆ ಯಾವುದು ಮೊದಲಾದ ಪ್ರಶ್ನೆಗಳನ್ನು ಎದುರಿಸಬೇಕಾಗಿದೆ. ಸತ್ಯದ ಸ್ವರೂಪವನ್ನು ತಿಳಿಯಬೇಕೆಂದು ಹಾತೊರೆದು ಹುಡುಕುವ ಮನಸ್ಸು ಅನುಭವವನ್ನು ಅಳೆದು ಅದನ್ನು ಕುರಿತು ಆಳವಾಗಿ ಯೋಚಿಸಿದೆ. ಸುಖವಾಗಿರಬೇಕೆಂಬ ಬಯಕೆಯೂ ಅನಿವಾರ್ಯ. ತನ್ನ ಕಲ್ಯಾಣವನ್ನು ಸಾಧಿಸಿ ಲೋಕವು ಯಾವಾಗಲೂ ಮಂಗಲ ವಾದುದನ್ನೇ ಅರಸಿ ಅದನ್ನೇ ಸಾಧಿಸಲೆಂಬ ಬಯಕೆ ಬಗೆಬಗೆಯಾಗಿ ಸಾಹಿತ್ಯದಲ್ಲಿ ಒಡಮೂಡಿ ನಿಂತಿದೆ. ಹೀಗೆ ಮಹೋನ್ನತವಾದ ಸಾಹಿತ್ಯದಲ್ಲಿ ಮಾನವ ಹೃದಯದ ಅನುಭವದ ವೈವಿಧ್ಯದಂತೆ ಅದರ ಆಳವೂ, ಅನ್ವೇಷಣಬುದ್ಧಿಯೂ, ಆ ಅನ್ವೇಷಣೆ ಯಲ್ಲಿ ದೊರಕಿದ ಸತ್ಯ ಶಿವ ಸುಂದರಗಳ ದರ್ಶನವೂ ಅಡಕವಾಗಿದ್ದರಿಂದಲೇ ಶತ ಮಾನಗಳಾಚೆ ನಿರ್ಮಿತವಾಗಿದ್ದರೂ ಅದಕ್ಕೆ ಎಂದಿಗೂ ಒಂದು ಅರ್ಥ ಒದಗುತ್ತದೆ. ಆಧುನಿಕ ಕಾಲದಲ್ಲಿಯ ವಿಜ್ಞಾನದ ಚಮತ್ಕೃತಿಗಳನ್ನು ನೋಡಿ ಮಾನವನ ಅದ್ಭುತ ಶಕ್ತಿಯನ್ನು ನಾವು ಎಷ್ಟುಸಲ ಕೊಂಡಾಡಿರಲಿಕ್ಕಿಲ್ಲ? ಇಂಥದೇ ಒಂದು ಭಾವನೆ ಯಿಂದ ಪ್ರೇರಿತವಾಗಿಯೇ ಶೇಕ್ಸಪಿಯರನು What a piece of work is a man! ಎನ್ನಲಿಲ್ಲವೆ? ಆದರೆ ಅದೇ ಕವಿಯು ಇನ್ನೊಂದು ಸಂದರ್ಭದಲ್ಲಿ, ಬೇರೊಂದು ಮನಃ ಸ್ಥಿತಿಯಲ್ಲಿ 'ಬದುಕಿದೊಂದು ಬಾಲಕನು ಪೇಳ್ದ, ಸದ್ದುಗದ್ದಲ ತುಂಬಿ ಅರ್ಥಮೇ ನಿರದ ಕಥೆ' ಎನ್ನಲಿಲ್ಲವೆ? ಬದುಕಿನ ಚೆಲುವನ್ನು ನೂರ್ಮಡಿಯಾಗಿಸಿ ತೋರಿಸುವ ಕಾಳಿದಾಸನೂ 'ಮರಣಂ ಪ್ರಕೃತಿಃ ವಿಕೃತಿರ್ಜೀವಿತಂ' ಎಂದ. ಜೀವನದ ಸತ್ಯವನ್ನು ತಿಳಿಯಹೋಗಿ ಕೊನೆಗಾಣದ ಸಂಶಯವೇ ಸತ್ಯವೇ ಎಂದು ಸಂಕಟಪಟ್ಟವರೂ ಇದ್ದಾರೆ. ಹೀಗೆ ಸತ್ಯಶಿವ ಸುಂದರಗಳ ವಿವಿಧ ಸ್ವರೂಪಗಳನ್ನು, ವಿಶ್ವವ್ಯಾಪಿಯಾದ ಬಗೆಗಳನ್ನು ಸಾಹಿತ್ಯ ಚಿತ್ರಿಸುತ್ತಿರುವುದರಿಂದಲೇ ಅದಕ್ಕೆ ಸರ್ವಕಾಲದಲ್ಲಿಯೂ ಮನ್ನಣೆ ಸಿಕ್ಕಿದೆ. ಮಾನವನ ಅಂತರಂಗದಲ್ಲಿಯ ಅಳುಕು, ಬಿಡಿಸಲಾಗದ ಒಗಟೆ ಗಳು, ಮಾನವನ ಮನಸ್ಸಿನ ಮೇಲೆ ಮಾಡಿದ ಪರಿಣಾಮಗಳೇ ಸಾಹಿತ್ಯಕ್ಕೆ ತಳಪಾಯ ವಾಗಿ ನಿಂತಿದೆ. ಚೆಲುವಿಗಾಗಿ ಹಂಬಲಿಸಿ ಅದನ್ನು ನೋಡಿದಾಗ ನಲಿಯುವ ಹೃದಯ ಮರುಕ್ಷಣದಲ್ಲಿಯೇ ಆ ಚೆಲುವು ಇಲ್ಲದಾಗಿದ್ದುದನ್ನು ನೋಡಿದಾಗಿನ ನಿರಾಶೆ; ಬದುಕಿನಲ್ಲಿ ದಿಟವನ್ನು ಕಂಡುಹಿಡಿದೆನೆಂದ ಕ್ಷಣವೇ ಆ ದಿಟವೇ ನೂರು ಮುಖವಾಗಿದ್ದುದನ್ನು ತಿಳಿದು ಸತ್ಯದ ಅರಿವು ಸಾಧ್ಯವೇ ಎಂದು ಕೇಳಿಕೊಳ್ಳಬೇಕಾದ ತಾತ್ವಿಕ ಕಳವಳ; ಕಲ್ಯಾಣದ ಮಾರ್ಗವನ್ನು ಅನುಸರಿಸುತ್ತಿದ್ದೇನೆಂಬ ವಿಶ್ವಾಸದಲ್ಲಿ ನಡೆದಾಗಲೂ ಆ ಮಾರ್ಗದಲ್ಲಿಯೇ ಅಕಲ್ಯಾಣ, ಅನ್ಯಾಯಗಳು ತಲೆದೋರಿ ನಿಂತು ದನ್ನು ನೋಡಿದಾಗಿನ ಮನಸ್ಸಿನ ತೊಡಕು; ಇಂಥವೇ ಸಾವಿರಾರು ಸಂದರ್ಭಗಳನ್ನು ಕುರಿತು ಏರ್ಪಟ್ಟ ಅನುಭವನಿರೂಪಣೆಯೇ ಸಾಹಿತ್ಯವಾದ್ದರಿಂದ ಅದಕ್ಕೆ ಸ್ಥಲಕಾಲ ಗಳ, ಜಾತಿ ಮತಪಂಥಗಳ ನಿರ್ಬಂಧ ಉಳಿಯುವುದಿಲ್ಲ. ಅನುಭವಿಸುವ ಹೃದ ಯವೇ ನಿರ್ಮಿತಿಗೆ ಅಡಿಗಲ್ಲಾಗಿ ಆಸ್ವಾದನೆಗೆ ಮುಖ್ಯಸಾಧನವಾಗುತ್ತದೆ.

ವಿಶ್ವವ್ಯಾಪಿಯಾದ, ಉದಾತ್ತವಾದ, ಬಹುಮುಖವಾದ ಜೀವನದ ದರ್ಶನವೇ ಸಾಹಿತ್ಯ. ಅಥವಾ ಇಂಥ ದರ್ಶನವನ್ನು ಒದಗಿಸುವುದೇ ಸಾಹಿತ್ಯದ ಮುಖ್ಯ ಉದ್ದೇಶವೆಂದು ಹೇಳಬಹುದು. ಎಲ್ಲ ಸಾಹಿತ್ಯವೂ ಉದ್ದಿಷ್ಟ ಪೂರ್ಣವಾಗಿರುತ್ತದೆಯೆ, ಅಥವಾ ಯಾವಾಗಲೂ 'ಪ್ರಯೋಜನ' ಕಾರಿಯೆ ಆಗಿರುತ್ತದೆಯೆ ಎಂದು ಕೇಳಿಕೊಳ್ಳುವುದಕ್ಕಿಂತ ಒಂದಿಲ್ಲೊಂದು ದೃಷ್ಟಿಯಿಂದ ಅರ್ಥಪೂರ್ಣವಾಗಿದೆಯೆ ಎಂದು ಕೇಳಿಕೊಳ್ಳುವುದು ಹೆಚ್ಚು ಸಮಂಜಸವಾದೀತು. ಸಾಹಿತ್ಯದ ಅರ್ಥಪೂರ್ಣತೆಯೇ ಅದರ ಉದ್ದಿಷ್ಟ, ಧ್ಯೇಯ, ಪ್ರಯೋಜನ. ಅಸಾಮಾನ್ಯವಾಗಿದ್ದುದರ ಅಸಾಮಾನ್ಯತೆಯೆಂಥದು, ಸಾಮಾನ್ಯವಾಗಿದ್ದುದರಲ್ಲಿಯೂ ಸಾಮಾನ್ಯ ಮನುಷ್ಯನ ದೃಷ್ಟಿಗೆ ಗೋಚರವಾಗದ ಅಂಶಗಳಿರಬಹುದು ಎಂಬುದನ್ನು ಕವಿ ತೋರಿಸಿಕೊಡುತ್ತಾನೆ. ಅನುಭವವನ್ನು ಅರ್ಥದ ದೃಷ್ಟಿಯಿಂದ ನೋಡದ ಹೊರತು ಅದಕ್ಕೆ ಬೆಲೆ ಬಾರದು. ತನ್ನದೇ ಆಗಲಿ, ಇನ್ನೊಬ್ಬರದೇ ಇರಲಿ, ಹತ್ತು ಅನುಭವಗಳನ್ನು ಸಂಕಲನ—ಸಮವಾಯ ದೃಷ್ಟಿಗಳಿಂದ ನೋಡುವುದು ಮನುಷ್ಯನ ಬುದ್ಧಿಯ ಲಕ್ಷಣ—ಬುದ್ಧಿಯ ಉಪಯೋಗ. ಹಿಂದಿನ ಅನುಭವವನ್ನು ಇಂದಿನದರೊಡನೆ ಜೋಡಿಸಿ, ಹೋಲಿಸಿ, ಬೆಲೆಕಟ್ಟಿ ಅದರಿಂದ ಏನಾದರೊಂದು ಅರ್ಥವನ್ನು ಗ್ರಹಿಸದಿದ್ದರೆ ಮನುಷ್ಯನಿಗೂ ಪ್ರಾಣಿಪಕ್ಷಿ ಪ್ರಪಂಚಕ್ಕೂ ಇದ್ದ ವ್ಯತ್ಯಾಸವೇನು? ಈ ದೃಷ್ಟಿಯಿಂದ ಮನುಷ್ಯ ಯಾವಾಗಲೂ ಹೊಸ ಅನುಭವಗಳನ್ನು ಅಪೇಕ್ಷಿಸುತ್ತಾನಲ್ಲದೆ, ಆ ಅನುಭವಗಳಲ್ಲಿ ಹುದುಗಿಕೊಂಡಿರಬಹುದಾದ ಸಾಮ್ಯವೈಷಮ್ಯಗಳನ್ನು, ಆ ಸಾಮ್ಯವೈಷಮ್ಯಗಳಾಚೆ ನಿಂತಿರಬಹುದಾದ ಅರ್ಥಸೂಚನೆಯನ್ನು ತತ್ವವನ್ನು ತಿಳಿಯಬಯಸುತ್ತಾನೆ. ಅನುಭವಗಳ ಸಮುದಾಯಕ್ಕೆ ಬುದ್ಧಿಯ ಮೂಲಕ ಒಂದು ಸಂಯೋಜಿತ ಸ್ವರೂಪವನ್ನು ಕೊಟ್ಟು ಬದುಕಿನ ಬಗೆಯಲ್ಲಿ ಒಂದು ತತ್ವಜ್ಞಾನವನ್ನು ಬೆಳಸಲೆಸಗುತ್ತಾನೆ. ಅನುಭವದ ಮುಖಾಂತರವಾಗಿ ಬದುಕಿನ ತಿರುಳನ್ನು ತಿಳಿಯಲು ಹವಣಿಸುತ್ತಾನೆ. ಈ ಅನ್ವೇಷಣೆಯಲ್ಲಿ ಸತ್ಯವಾದದ್ದು ಯಾವುದು ಸತ್ಯವಲ್ಲದ್ದು ಯಾವುದು, ಸುಂದರವಾದದ್ದು ಯಾವುದು, ಸುಂದರವಲ್ಲದ್ದು ಯಾವುದು ಎಂಬ ವಿವೇಕವು ಆಳವಾಗುತ್ತ ನಡೆದ ಹಾಗೆ ಮಾನವ ಜೀವನದಲ್ಲಿ ಮಂಗಳಕರವಾದದ್ದು ಯಾವುದು ಅಲ್ಲದ್ದು ಯಾವುದು ಎಂಬುದರ ತಿಳಿವು ಬೆಳೆಯುತ್ತದೆ; ಜೀವನ ಕ್ರಮ ಸುಸಂಸ್ಕೃತವಾಗುತ್ತದೆ. ನೋಡುವ ನೋಟ ತಿಳಿಯಾಗುತ್ತದೆ. ಪ್ರಪಂಚದ ವಿಸ್ತಾರವನ್ನು ವೈಚಿತ್ರ್ಯವನ್ನು ತಿಳಿಯಬಲ್ಲದಾಗುತ್ತದೆ. ಸಾಮಾನ್ಯ ಮನುಷ್ಯನೆದುರಿನ ಪ್ರಪಂಚವನ್ನೇ ಅಸಾಮಾನ್ಯವಾದ, ಅರ್ಥಪೂರ್ಣವಾದ ದೃಷ್ಟಿಯಿಂದ ನೋಡುವಂತಾಗುತ್ತದೆ. ಆದ್ದರಿಂದಲೇ ಸಾಹಿತ್ಯದ ದೃಷ್ಟಿ ತಿಳಿವಿನ ದೃಷ್ಟಿ, ಸ್ವರ್ಗ ಮರ್ತ್ಯ ಪಾತಾಳಗಳನ್ನು ಸಮಗ್ರವಾಗಿ ತೋರಿಸುವ ದಿವ್ಯದೃಷ್ಟಿ, ಚೆಲುವನ್ನು ತೋರಿಸುವ ರಸದೃಷ್ಟಿ. ಮಾನವಮಾನವರ ನಡುವೆ ಬಾಂಧವ್ಯವನ್ನು ಬೆಳೆಯಿಸುವ ಸಮದೃಷ್ಟಿ.

ಹುಟ್ಟಿದ ಜೀವ ಅನಿವಾರ್ಯವಾಗಿ ಬದುಕಬಹುದು—ಬದುಕುತ್ತದೆ. ಅಲ್ಲದೆ

ಬದುಕಬೇಕೆಂಬ ಹಂಬಲ ಜೀವಕೋಟಿಗೆಲ್ಲವೂ ಸಾಮಾನ್ಯವಾದದ್ದಲ್ಲದೆ, ಜನ್ಮಸಿದ್ಧ ವಾದದ್ದು. ಆದರೆ ಮಾನವನೆನಿಸಿಕೊಂಡವ ಸಾಯಲಾರದ್ದಕ್ಕೆ ಬದುಕಿದ್ದೇನೆಂದು ಹೇಳಿದರೆ ಅದು ಅವನಲ್ಲಿಯ ಮಾನವತೆಯ ಸತ್ಯಕ್ಕೆ ಅವಮಾನ. ಹೀಗೆನ್ನುವವರು ಯಾರಾದರೂ ಇದ್ದರೂ ಅವರು ನಿಯಮವನ್ನು ಸಮರ್ಥಿಸುವ ಅಪವಾದಗಳಂತೆಯೇ ಇರಬಹುದು. ಬಾಳಬೇಕು, ಸುಖವಾಗಿ ಬಾಳಬೇಕು, ಒಳ್ಳೆಯವನೆನಿಸಿಕೊಂಡು ಬಾಳಬೇಕು ಎನ್ನುವ ಆಶೆಗಳು ಸಾಮಾನ್ಯವಾದವುಗಳು. ಆದರೆ ಬದುಕಿನ ಸ್ವರೂಪ ವನ್ನು ತಿಳಿದುಕೊಂಡು ಬಾಳಬೇಕು, ಅಣುರೇಣುತೃಣಕಾಷ್ಠಗಳಲ್ಲಿಯೂ ಚಲಿಸಿ ಚೇತನಗೊಳಿಸುತ್ತಿರುವ ನಿಸರ್ಗದ ಜೀವಶಕ್ತಿಯ ಅಂಶಭಾಗಿಯಾದ ತಾನು ಅದೇ ಶಕ್ತಿಯ ಲಕ್ಷಾನುಲಕ್ಷ ಅವತಾರ ಆವಿರ್ಭಾವಗಳೊಡನೆ ಸಮರಸನಾಗಿ ಹಿರಿಯಾಗಿ ಬಾಳಬೇಕು ಎಂಬ ಅಭಿಲಾಷೆ ಮಾತ್ರ ಸುಸಂಸ್ಕೃತರಿಗೆಯೇ ಸೇರಿದ್ದು. ಈ ತೆರೆದ ಉಚ್ಚ್ರಾಯ ಜೀವನವೇ ಸಾಹಿತ್ಯ ವ್ಯಾಸಂಗದ ಗುರಿ. ಉಲ್ಲಾಸದ ಉಚ್ಚಶಿಖರ ವನ್ನೂ ಶೋಕದ ಪಾತಾಳವನ್ನೂ ಕಣ್ಣೆದುರು ತೋರಿಸುವ ಶೇಕ್ಸಪಿಯರನ ಕಾವ್ಯ ಪ್ರತಿಭೆಯ ಅಂಕಿತದಲ್ಲಿ ನಮ್ಮ ಮನಸ್ಸು ಇದ್ದಾಗ, ಅದರ ಅನುಭವದ ಯೋಗ್ಯತೆ ಎಂಥದು, ಅದನ್ನ ಮಹತ್ವವೆಂಥದು ಎಂಬುದನ್ನು ನಾವು ನೆನೆಯಬಹುದು. ಸೀತೆ ಶಕುಂತಲೆಯರೊಡನೆ ಕಳವಳಪಡುವಾಗ, ವಚನಕಾರರ, ದಾಸರ ಅನುಭವದ ರಸ ತರಂಗಿಣಿಯಲ್ಲಿ ಓಲಾಡುತ್ತಿರುವಾಗ ನಮ್ಮ ಮನಸ್ಸಿನ ಹದ, ಸಂವೇದನೆಯ ಸಾಮರ್ಥ್ಯ ಬೇರೆಯಾಗಿಯೇ ಇರುತ್ತವಲ್ಲದೆ ದಿನಬಳಕೆಯ ಜೀವನದ ಮಟ್ಟದಿಂದ ದೂರವಾಗಿ ಉನ್ನತಾವಸ್ಥೆಯಲ್ಲಿರುತ್ತವೆ. ಹಿರಿಯಾದ ಸಾಹಿತ್ಯ ಮನಸ್ಸಿನ ಈ ಉನ್ನತಾವಸ್ಥೆ ಯನ್ನೂ ತೋರಿಸುವಂಥದು. ಜೀವನವನ್ನು ನಮ್ಮ ನಮ್ಮ ಶಕ್ತಿ, ಯೋಗ್ಯತೆ, ಸಂಸ್ಕೃತಿಗಳಿಗನುಗುಣವಾಗಿ ನೂರು ಮಟ್ಟಗಳಲ್ಲಿ ನಡೆಯಿಸಿಕೊಂಡು ಹೋಗಬಹುದು. ಹೇಗೋ ಹೊಟ್ಟೆ ಹೊರೆದುಕೊಂಡು ಮರಣ ಬಂದಾಗ ಕಾಲವಶನಾಗಬಲ್ಲ ಮಾನವ ಬದುಕಿದ್ದಾಗ ತಿಳವಿನ ದಾರಿಯಲ್ಲಿ, ಉದಾತ್ತಧ್ಯೇಯಮಾರ್ಗದಲ್ಲಿ ನಡೆದು, ಸಾವನ್ನು ಧೈರ್ಯದಿಂದ ಎದುರಿಸಬಹುದು. ಒಂದು ಜೀವಮಾನದಲ್ಲಿಯೇ ಹತ್ತು ಜೀವಮಾನಗಳ ಅನುಭವವನ್ನು ಪಡೆಯಬಹುದು. ಈ ತೆರದ ಸಾಧನೆಗೆ ಸಾಹಿತ್ಯ ಒಂದು ಹಿರಿಯಾದ ಸಾಧನವಾಗಬಹುದು. ಇಲ್ಲಿ ಜ್ಞಾನವಿದೆ, ವಿಜ್ಞಾನವಿದೆ. ತತ್ವದ ತಿರುಳಿದೆ, ಚರಿತ್ರೆಯ ವಿಚಿತ್ರವಿದೆ. ಮಾನವ ಕೋಟಿಯ ಅನುಭವವನ್ನು ಅಳವಡಿಸಿಕೊಂಡೇ ಸಾಹಿತ್ಯ ನಿರ್ಮಿತಿಯಾಗುತ್ತಿದ್ದಾಗ ಅದರ ಅಂತರಂಗದಲ್ಲಿ ಎಲ್ಲವೂ ಅಡಕವಾಗಿದೆ. ಎಲ್ಲದರ ಸಮನ್ವಯವನ್ನು ಅದು ಸಾಧಿಸಿ ಮಾನವ ಕೋಟಿಯ ಸಂಸ್ಕೃತಿಯ ಸಂಕೇತವಾಗಬಹುದು. ಅದಕ್ಕೆಂತಲೇ ಸ್ಕ್ಲೆಗೆಲ್ ಎಂಬ ಜರ್ಮನ್ ವಿಮರ್ಶಕ ಸಾಹಿತ್ಯವೆಂದರೆ ಒಂದು ಜನಾಂಗದ ಬೌದ್ಧಿಕ ಜೀವನದ ಸಾರಸರ್ವಸ್ವ ಎಂದು ಹೇಳಿದ.

ಸಾಹಿತ್ಯದ ಮಹತ್ವವನ್ನು ಮತ್ತು ಅದರ ಉಪಯುಕ್ತತೆಯನ್ನು ಕುರಿತು ಹೇಳಿದ

ಮೇಲಿನ ಮಾತುಗಳನ್ನು ಲಲಿತ-ಕಲೆಗಳಲ್ಲಿ ಯಾವುದಕ್ಕೂ ಅನ್ವಯಿಸಬಹುದು. ಸಾಹಿತ್ಯವೇ ಆಗಲಿ, ಶಿಲ್ಪವೇ ಆಗಲಿ ಚಿತ್ರಕಲೆಯೇ ಆಗಲಿ, ಯಾವ ಕಲೆಯಾದರೂ ಜೀವನದ ಭವ್ಯತೆಯನ್ನು, ಅದರ ಅಗಾಧಸ್ವರೂಪವನ್ನು ತಿಳಿದು ತಿಳಿಯಿಸಬೇಕೆಂಬ ಆಶೆಯ ತಳಹದಿಯ ಮೇಲೆ ನಿಂತಿರುತ್ತದೆ. ವಿಶಿಷ್ಟ ವ್ಯಕ್ತಿಗಳು ತಮಗೆ ಸಹಜ ವೆನಿಸಿದ ವಾಹಕವನ್ನಾರಿಸಿಕೊಂಡು ತಮ್ಮ ಜೀವನ ದರ್ಶನವನ್ನು ಆ ವಾಹಕದ ಮೂಲಕವಾಗಿ ಮೂರ್ತಗೊಳಿಸುತ್ತಾರೆ. ಲೇಖಕನಾದವ ಭಾಷೆಯನ್ನು, ಶಿಲ್ಪಿಯಾದವ ಕಲ್ಲನ್ನು, ಸಂಗೀತಕಾರ ನಾದವನ್ನು, ಚಿತ್ರಕಾರ ವರ್ಣಗಳನ್ನು ಬಳಸಿ ತಮ್ಮ ತಮ್ಮ ಕೆಲಸಕ್ಕೆ ತೊಡಗುತ್ತಾರೆ. ಎಲ್ಲರ ಸಾಧನಗಳು ಬೇರೆಯಾದರೂ ಗುರಿ ಒಂದೇ. ಜೀವನ ವನ್ನು ಆಳವಾಗಿ ಅನುಭವಿಸಿ, ಆ ಅನುಭವದ ಆಳವನ್ನು ಅದರ ಫಲವನ್ನು ಇನ್ನೊಬ್ಬ ರಿಗೆ ಅರುಹುವದೇ ಆ ಗುರಿ. ಆದ್ದರಿಂದ ಕಲಾವಿದನು ತನ್ನ ನಿರ್ಮಿತಿಯ ಮೂಲಕ ತನ್ನ ಬಾಳನ್ನಲ್ಲದೆ ಇತರರ ಬಾಳನ್ನು ಬೆಳಗುವ ಪುಣ್ಯಶಾಲಿಯಾಗುತ್ತಾನೆ. ಅಂತೆಯೇ ಸಾಹಿತ್ಯ ಸಂಗೀತಾದಿ ಕಲಾವಿಹೀನನು ಸಾಕ್ಷಾತ್‌ಪಶುವೆಂಬ ಮಾತು ರೂಢಿಯಲ್ಲಿದೆ.

ಇದರಿಂದ ಸಾಹಿತ್ಯ ಮುಂತಾದ ಲಲಿತ ಕಲೆಗಳ ವ್ಯಾಸಂಗ ಎಷ್ಟು ಮಹತ್ವ ದ್ದೆಂಬುದನ್ನು ನಾವು ಗುರುತಿಸಬಹುದು. ಯಾವ ಕಲೆಯೂ ಅಷ್ಟೇ. ಸಾಹಿತ್ಯ ಭಾಷೆಯ ಮುಖಾಂತರ ತನ್ನ ಗುರಿಯನ್ನು ಸಾಧಿಸುತ್ತದೆ. ಶಬ್ದದ ಅಂತಃಶಕ್ತಿಯ ಅದ್ಭುತವನ್ನು ನಾವು ಅಲ್ಲಿ ಕಾಣಬಹುದು. ಈ ಶಕ್ತಿ ದೈವಿಕ ಶಕ್ತಿ ಎನ್ನುವವರ ಮತ ಹಾಗಿರಲಿ ಆ ಶಕ್ತಿ ಏನಿದ್ದರೂ ಎಂಥದಿದ್ದರೂ ಅದರ ಮೂಲಕ ಹೃದಯ ಗಳಲ್ಲಿಯ ಸುಪ್ತ ಭಾವನೆಗಳು ಬೆಳಕಿಗೆ ಬರಬಹುದು. ಮಾನವನ ಅಂತರ್ಯದಲ್ಲಿ ಹುದುಗಿಕೊಂಡ ಜೀವನದ ಬಗೆಯಲ್ಲಿಯ ನೋವು ನಲಿವುಗಳು ರೂಪತಾಳಬಹುದು. ಅನುಭವ ಶಬ್ದರೂಪದಲ್ಲಿ ಅರ್ಥಪೂರ್ಣವಾಗಬಹುದು. ಆಂಗ್ಲ ವಿಮರ್ಶಕನೊಬ್ಬನು ಹೇಳುವಂತೆ ಸಾಹಿತ್ಯದ ಪ್ರಭಾವದಿಂದ ಮಾನವರಲ್ಲಿ ಐಕ್ಯಭಾವ ಉಂಟಾಗಬಲ್ಲ ದಾದರೆ, ಒಂದು ರಾಷ್ಟ್ರದ ಜೀವನವೇ ಒಮ್ಮುಖವಾಗಿ ಸಾಗಬಹುದಾದರೆ, ಸಾಹಿತ್ಯ ಒಂದು ಜನಜೀವನದ ಪ್ರತೀಕವಾಗಿ ನಿಲ್ಲಬಹುದಾದರೆ, ಭೂತ ಭವಿಷ್ಯಗಳು, ಪೂರ್ವ ಪಶ್ಚಿಮಗಳು ಒಂದಾಗಿ ಒಂದನ್ನೊಂದು ಅರಿಯುವಂತಾದರೆ, ಆ ಸಾಹಿತ್ಯದ ನಿರ್ಮಾತೃ ಗಳು ಮಾನವ ಕುಲದ ಆಧಾರಸ್ತಂಭರು, ಪ್ರವಾದಿಗಳು. ಅಂಥ ಸಾಹಿತ್ಯದ ವ್ಯಾಸಂಗ ಸಣ್ಣ ಪುಟ್ಟ ಕೆಲಸವಲ್ಲ. ಜೀವನ ಹಿರಿದಾಗಬೇಕು, ಮಾನವನಿಗೆ ಸಾಧ್ಯವಿದ್ದ ಪೂರ್ಣತೆಯನ್ನು ಪಡೆಯಬೇಕೆಂಬ ಹಂಬಲವಿದ್ದವರಿಗೆ ಸಾಹಿತ್ಯ ಕೈದೀವಿಗೆಯಾದೀತು.

ಉತ್ತಮ ಸಾಹಿತ್ಯದ ಉತ್ತಮತೆಯನ್ನು, ಅದರ ಘನತೆಯನ್ನು, ಅದರ ಮಹತ್ವ ಮತ್ತು ಉಪಯುಕ್ತತೆಯನ್ನು ತಿಳಿಹೇಳುವುದೇ ವಿಮರ್ಶೆಯ ಮುಖ್ಯವಾದ ಉದ್ದೇಶ. ಎಲ್ಲ ಸಾಹಿತ್ಯಾಭಿಲಾಷಿಗಳೂ ಒಂದೇ ಯೋಗ್ಯತೆಯವರಾಗಿರುವುದಿಲ್ಲ. ಅಲ್ಲದೆ ಎಲ್ಲ ಸಾಹಿತಿಗಳೂ ಎಲ್ಲರಿಗೂ ಸಹಜವಾಗಿ ಅರ್ಥವಾಗಬಹುದಾದ ರೀತಿಯಲ್ಲಿ ಬರೆಯುವು ದಿಲ್ಲ. ಇದು ಕೇವಲ ಅನುಸರಿಸಿದ ರೀತಿ ಅಥವಾ ಪ್ರತಿಪಾದಿಸಿದ ವಿಷಯದ ಪ್ರಶ್ನೆ

ಯಾಗಿರದೆ ಸಾಹಿತ್ಯ ಪ್ರಪಂಚದಲ್ಲಿ ರೂಢವಾಗಿದ್ದ ಸಂಪ್ರದಾಯದ ತೊಡಕಾಗಿರಬಹುದು. ಅಲ್ಲದೆ ಸಾಹಿತ್ಯದಲ್ಲಿ ಯಾವಾಗಲೂ ಉದ್ದಿಷ್ಟವು ಸೂಚಿತವಾಗಿರುವುದರಿಂದ ಬುದ್ಧಿ ಚುರುಕಾಗಿರದವನಿಗೆ ಅದು ಹೊಳೆಯದೆ ಹೋಗಬಹುದು. ಪ್ರಯೋಗಿಸಲ್ಪಟ್ಟ ವಾಹಕವೂ ಕೆಲವೊಂದು ವೇಳೆ ತೊಡಕುಗಳನ್ನುಂಟು ಮಾಡಬಹುದು — ಭಾಷೆ ಸರಳವಾಗಿರಬಹುದು, ಕ್ಲಿಷ್ಟವಾಗಿರಬಹುದು. ಭಾಷೆಯ ವಿಶಿಷ್ಟ ಪ್ರಯೋಗದ ಮೂಲಕ ಓದುಗನ ಮನಸ್ಸಿನ ಮೇಲೆ ಬೇರೆ ಬೇರೆಯಾದ ಪರಿಣಾಮಗಳನ್ನು ಉಂಟು ಮಾಡುವ ಧೋರಣೆಯನ್ನು ಲೇಖಕ ಇಟ್ಟುಕೊಂಡಿರಬಹುದು. ಲೋಕದಲ್ಲಿ ಪ್ರತಿಯೊಬ್ಬನ ಅಭಿರುಚಿಯೂ ಭಿನ್ನವಾಗಿರುವುದರಿಂದ, ಎಲ್ಲರಿಗೂ ಎಲ್ಲಕಾಲದಲ್ಲಿಯೂ ಎಲ್ಲ ತೆರದ ಸಾಹಿತ್ಯದ ಸೌಂದರ್ಯವನ್ನು ಸವಿಯುವುದು ಅಸಾಧ್ಯವಾಗಿರುವುದರಿಂದ ಲೋಕ ಮತ್ತು ಲೇಖಕನ ನಡುವೆ ವಿಮರ್ಶಕ ಬಂದು ನಿಂತು ಸಹಾಯಕಾರಿಯಾಗುತ್ತಾನೆ. ಆದ್ದರಿಂದ ವಿಷಯ, ರೀತಿ, ಅರ್ಥ, ಇವುಗಳ ವಿವಿಧ ಬಗೆಗಳನ್ನು, ಇವೆಲ್ಲವೂ ಏಕಜೀವವಾಗಿ ಹೆಣೆದುಕೊಂಡು ನಿಂತ ಬಗೆಯನ್ನು ಆ ಹೆಣಿಕೆಯಲ್ಲಿ ನೆಲೆನಿಂತಿರಬಹುದಾದ ಸೌಂದರ್ಯವನ್ನು, ವಿವರವಾಗಿ ಬಿಡಿಸಿ ವಿವರಿಸಿ ತೋರಿಸುವುದೇ ವಿಮರ್ಶಕನ ಕೆಲಸ. ಆತ ಹೆಚ್ಚಿನ ಹೊಣೆಯನ್ನು ಹೊತ್ತು, ಬೇರೆಯೊಂದು ಮಟ್ಟದಲ್ಲಿ ನಿಂತು ಲೇಖಕನ ಕಾರ್ಯನಿರ್ವಹಣವನ್ನು ಕುರಿತು ಚರ್ಚಿಸಬಹುದು ಅದಕ್ಕೂ ಮುಂದಕ್ಕೆ ಸಾಗಿ ಕೃತಿಯ ಮತ್ತು ಅದರ ವಿಷಯದ ಯೋಗ್ಯಾಯೋಗ್ಯತೆಯನ್ನು ಚರ್ಚಿಸಬಹುದು, ತನ್ನ ಅಭಿಮತವನ್ನು ವ್ಯಕ್ತಮಾಡಬಹುದು. ಸರಿಸಮಾನವಾದ ಇತರ ಕೃತಿಗಳೊಡನೆ ಹೋಲಿಸಿ ತೂಗಿನೋಡಬಹುದು. ಒಟ್ಟಿನಲ್ಲಿ ನಿರ್ಣಯವನ್ನು ಹೇಳಬಹುದು. ಆದರೆ ಯಾವುದನ್ನು ಮಾಡಿದರೂ ಆತ ತನ್ನ ಆದ್ಯ ಕರ್ತವ್ಯವಾದ ಕೃತಿಯ ಕೂಲಂಕಷವಾದ ಅಭ್ಯಾಸವನ್ನಾಗಲಿ, ಆ ಅಭ್ಯಾಸಕ್ಕೆ ಅಗತ್ಯವಾದ ನಯವಾದ ವಿಭಜನೆಯನ್ನಾಗಲಿ, ಇವೆರಡಕ್ಕೂ ಅನಿವಾರ್ಯವಾದ ಸಹಾನುಭೂತಿಪರವಾದ ದೃಷ್ಟಿಯನ್ನಾಗಲಿ ಬದಿಗಿರಿಸಿ ತನ್ನ ಕೆಲಸವನ್ನು ಸಮರ್ಥವಾದ ರೀತಿಯಲ್ಲಿ ಮಾಡಲಾರ.

ಸಾಹಿತ್ಯದ ಪ್ರತಿಯೊಂದು ಕೃತಿಯನ್ನೂ ನಾವು ಸ್ಥೂಲವಾಗಿ ಮೂರು ದೃಷ್ಟಿಗಳಿಂದ ನೋಡಬಹುದು. ಮೊದಲನೆಯದಾಗಿ, ಅದೊಂದು ಸಂಪೂರ್ಣವಾದ ಕೃತಿ ; ಕೆಲವೊಂದು ವಿಷಯವನ್ನು ವಿಶಿಷ್ಟವಾದ ರೀತಿಯಲ್ಲಿ ನಿರೂಪಿಸಿದ ಕೃತಿ ಎಂಬ ದೃಷ್ಟಿ. ಎರಡನೆಯದಾಗಿ, ಆ ಕೃತಿ ಕೇವಲ ಕೃತಿಯಾಗಿರದೆ ಅದನ್ನು ನಿರ್ಮಿಸಿದವನ ಮನಸ್ಸಿನ ಅಥವಾ ಚೇತನದ ಒಂದು ಚಿತ್ರ ಎಂಬ ದೃಷ್ಟಿ. ಮೂರನೆಯದಾಗಿ ಯಾವ ಮಾನವ ಸಮಾಜದ ಮಧ್ಯದಲ್ಲಿ ಆ ಕೃತಿ ರೂಪತಾಳಿ, ಬದುಕಿ ತನ್ನ ಕಾರ್ಯವನ್ನು ಸಾಧಿಸಬೇಕಾಗಿದೆಯೊ ಆ ಸಮಾಜದ ದೃಷ್ಟಿ. ಮೊದಲನೆಯ ದೃಷ್ಟಿಯಿಂದ ನಡೆಸಿದ ವಿವರಣೆಯಲ್ಲಿ ಕೃತಿಯ ಅಂಗಾಂಗಗಳ ಗುಣ ದೋಷ ವಿಮರ್ಶೆ ನಡೆಯಬಹುದು. ಎರಡನೆಯ ದೃಷ್ಟಿಯಿಂದ ಆ ಕೃತಿಯ ನಿರ್ಮಾಣವಾಗುತ್ತಿದ್ದಾಗ

ನಿರ್ಮಾತೃವಿನ ಅಂತರಂಗದಲ್ಲಿ ನಡೆದ ಏರುಪೇರುಗಳ ವಿವರಣೆ ಸಾಧ್ಯವಾಗಬಹುದು. ಮೂರನೆಯ ದೃಷ್ಟಿಯಿಂದ ಕೃತಿಯ ಒಟ್ಟು ಪರಿಣಾಮ, ಅದರ ಉಪಯುಕ್ತತೆ, ಯೋಗ್ಯತೆ, ಸ್ಥಾನಮಾನಗಳ, ಚರ್ಚೆ ನಡೆಯಬಹುದು. ಈ ಮೂರೂ ದೃಷ್ಟಿಗಳನ್ನು ಅಳವಡಿಸಿಕೊಂಡ ದೃಷ್ಟಿಯೇ ಸಮಗ್ರವಾದ ವಿಮರ್ಶದೃಷ್ಟಿ. ಇಂಥ ವಿಮರ್ಶೆ ಅಪರೂಪವಾದರೂ ಆದರ್ಶದ ದೃಷ್ಟಿಯಿಂದ ಯಾವಾಗಲೂ ಬೇಕಾದುದು. ಆದುದರಿಂದ ಸಾಹಿತ್ಯವನ್ನು ಈ ಮೂರೂ ದೃಷ್ಟಿಗಳಿಂದ ನೋಡಲು ಯತ್ನಿಸುವುದೇ ವಿಮರ್ಶೆಯ ಉದ್ದೇಶ.

ಈ ಮೂರೂ ದೃಷ್ಟಿಗಳ ತುಲನಾತ್ಮಕ ಮಹತ್ವವನ್ನು ಅವುಗಳಿಗಿದ್ದ ತಾತ್ವಿಕ ತಳಹದಿಯನ್ನು ತಿಳಿಯುವುದಗತ್ಯವಾಗಿದೆ. ಸಾಹಿತ್ಯವನ್ನು ನಿರ್ಮಿಸುವವನ ಶಕ್ತಿ ಸಾಮರ್ಥ್ಯಗಳು ನಿರ್ಮಿತವಾದ ಕೃತಿಯೊಂದನ್ನು ಓದಿ ಆನಂದ ಪಡುವವನ ಶಕ್ತಿ ಸಾಮರ್ಥ್ಯಗಳಿಗಿಂತ ಬೇರೆಯಾಗಿರುತ್ತವಲ್ಲದೆ ವಿಶಿಷ್ಟಸ್ವರೂಪದ್ದಾಗಿರುತ್ತವೆ. ಬರೆಯುವವರ ಸಂಖ್ಯೆ ಓದುವವರ ಸಂಖ್ಯೆಗಿಂತ ಸಣ್ಣದಾಗಿರುತ್ತದೆಂಬುದೇ ಇದಕ್ಕೆ ಸಾಕ್ಷಿ. ಲೇಖಕ ಮತ್ತು ವಾಚಕ ಇಬ್ಬರನ್ನು ಬಿಟ್ಟು ಕೃತಿಯೊಂದನ್ನು ವಿಮರ್ಶಿಸುವವನ ದೃಷ್ಟಿಯೂ, ಆತನ ಶಕ್ತಿಸಾಮರ್ಥ್ಯಗಳೂ ಇವರಿಬ್ಬರ ಶಕ್ತಿಸಾಮರ್ಥ್ಯಗಳಿಂದಲೂ ಬೇರೆಯಾಗಿದ್ದು ವಿಶಿಷ್ಟಸ್ವರೂಪವುಳ್ಳವಾಗಿರುತ್ತವೆ. ಎಲ್ಲ ಲೇಖಕರೂ ಎಲ್ಲ ವಾಚಕರೂ, ಒಳ್ಳೆಯ ವಿಮರ್ಶಕರಾಗಲಾರರೆಂಬುದೇ ಇದಕ್ಕೆ ನಿದರ್ಶನ. ಅಂತೆಯೇ ಲೇಖಕ, ವಾಚಕ, ವಿಮರ್ಶಕ, ಎಂದು ಬೇರೆ ಬೇರೆಯಾಗಿಯೇ ಹೇಳುತ್ತೇವೆ. ಸಾಹಿತ್ಯನಿರ್ಮಾಣ ಶಕ್ತಿ, ಸಾಹಿತ್ಯದ ರಸಾನುಭವದ ಶಕ್ತಿಯಿಂದ ಬೇರೆಯಾಗಿದ್ದಂತೆ ಸಾಹಿತ್ಯವನ್ನು ವಿಮರ್ಶಿಸುವ ಶಕ್ತಿ ಮೊದಲಿನ ಎರಡರಿಂದಲೂ ಬೇರೆಯಾಗಿರುತ್ತದೆ. ವಿಮರ್ಶಸಾಮರ್ಥ್ಯದ ಬಗೆಯಲ್ಲಿ ಒಂದು ಮಾತನ್ನು ನಾವು ಇಲ್ಲಿ ನೆನೆಯಬಹುದು. ವ್ಯಾಸಂಗ ಅಧ್ಯಯನಾದಿಗಳ ಫಲವಾಗಿ ವಿಮರ್ಶನ ಸಾಮರ್ಥ್ಯವನ್ನು ನಾವು ಗಳಿಸಬಹುದು, ಬೆಳೆಯಿಸಿಕೊಳ್ಳಬಹುದು. ಆದರೆ ಸಾಹಿತ್ಯವನ್ನು ನಿರ್ಮಿಸುವ ಬಗೆಯನ್ನಾಗಲಿ, ಅದನ್ನು ಅನುಭವಿಸಿ ಆನಂದ ಪಡೆಯುವ ರೀತಿಯನ್ನಾಗಲಿ, ಯಾರಿಗೆ ಯಾರೂ ಹೇಳಿಕೊಡಲಾರರು. ನಿರ್ಮಿತಿಗೆ ನಿಸರ್ಗದತ್ತವಾದ ಪ್ರತಿಭೆ ಬೇಕಾದಂತೆ ರಸಗ್ರಹಣಕ್ಕೆ ಸ್ವಭಾವಗತವಾದ ಒಲವು ಅಪೇಕ್ಷೆಗಳು ಬೇಕು. ಇವೆರಡುಗಳನ್ನೂ 'ಲೋಕಶಾಸ್ತ್ರಾದ್ಯವೇಕ್ಷಣಾತ್' ಬೆಳೆಯಿಸಿಕೊಳ್ಳಬಹುದಾದರೂ ಸ್ವಭಾವಗತವಾಗಿ ನಮ್ಮಲ್ಲಿ ಇಲ್ಲದ ಪಕ್ಷದಲ್ಲಿ ಅವುಗಳನ್ನು ಗಳಿಸಿಕೊಳ್ಳಲಾರೆವು. ನಿರ್ಮಾಣಶೀಲವಾದ ಮನಃಸ್ಥಿತಿಯನ್ನಾಗಲಿ, ರಸಗ್ರಹಣಕ್ಷಮವಾದ ಮನಃಸ್ಥಿತಿಯನ್ನಾಗಲಿ ವಿಮರ್ಶೆ ನಿರ್ಮಿಸಲಾರದೆಂದೇ ವಿಮರ್ಶೆಯ ಕಾರ್ಯರಂಗದಂತೆ ಅದರ ಧ್ಯೇಯ ಧೋರಣೆಗಳೂ ಬೇರೆಯಾಗಿಯೇ ಉಳಿಯುತ್ತವೆ. ಯಾವ ಕಾರಣದಿಂದಲೇ ಆಗಲಿ ಸಾಹಿತ್ಯ ನಿರ್ಮಿತವಾಗಿದೆ, ಆಗುತ್ತಿದೆ ಎಂಬ ಮಾತನ್ನು ಗೃಹೀತವೆಂದಿಟ್ಟುಕೊಂಡೇ ವಿಮರ್ಶೆ ಮುಂದೆ ಸಾಗುತ್ತದೆ. ಈ ದೃಷ್ಟಿಯಿಂದ ನೋಡಿದರೆ, ಯಥಾವತ್ತಾದ ವಿಮರ್ಶೆಯ ಕಾರ್ಯಕ್ಷೇತ್ರ ನಿರ್ದಿಷ್ಟವಾಗಿ, ನಿರ್ಮಾಣ

ಪೂರ್ವದಲ್ಲಿಯ ಲೇಖಕನ ಅಂತರಂಗದ ವಿವರ ಅಭ್ಯಾಸವಾಗಲಿ, ನಿರ್ಮಿತವಾದ ನಂತರ ಕೃತಿಯು ವಾಚಕನ ಮೇಲೆ ಮಾಡಬಹುದಾದ ಪರಿಣಾಮವಾಗಲಿ, ವಿಮರ್ಶೆಯ ನೇರವಾದ ಕಾರ್ಯಕ್ಷೇತ್ರಗಳಲ್ಲ. ವಿಮರ್ಶೆಯ ಮುಖ್ಯ ಸಂಬಂಧ ನಿರ್ಮಿತವಾದ ಸಾಹಿತ್ಯದೊಡನೆ ಮಾತ್ರ. ಆದರೂ ನಿರ್ಮಾಣಕ್ರಮ ಮತ್ತು ಕೃತಿಯ ಪರಿಣಾಮ ಕೃತಿಗೆ ಅತಿನಿಕಟವಾಗಿ ಸಂಬಂಧಿಸಿದ್ದ ಕಾರಣ ಸಮಗ್ರವಾದ ವಿಮರ್ಶೆ ಅವೆರಡನ್ನೂ ವಿವರಿಸಬೇಕಾಗುತ್ತದೆ. ಆದುದರಿಂದಲೇ ಈ ಮೂರು ದೃಷ್ಟಿಗಳನ್ನು ಅಳವಡಿಸಿಕೊಂಡ ವಿಮರ್ಶೆಯೇ ಸಮಗ್ರವಾದದ್ದೆಂದು ಹೇಳಿಯಾಗಿದೆ. ಈ ಮೂರು ದೃಷ್ಟಿಗಳಲ್ಲಿ ನಾವು ಮೊದಲ ಸ್ಥಾನವನ್ನು ಕೊಟ್ಟದ್ದು ಕೃತಿಗೆ—ವಿಮರ್ಶಕನ ದೃಷ್ಟಿಗೆ. ಎರಡನೆಯ ಸ್ಥಾನ ನಿರ್ಮಾಣದ ಕ್ರಮಕ್ಕೆ—ಲೇಖಕನ ದೃಷ್ಟಿಗೆ. ಮೂರನೆಯದು ರಸಾನುಭವಕ್ಕೆ—ವಾಚಕನ ದೃಷ್ಟಿಗೆ.

ವಿಮರ್ಶೆ ಇಡೀ ಸಾಹಿತ್ಯಪ್ರಪಂಚಕ್ಕೆಯೇ ಅನ್ವಯಿಸುವಂಥದಿರಬಹುದು. ಅಥವಾ ತದ್ವಿರುದ್ಧವಾಗಿ, ವಿಶಿಷ್ಟವಾದ ಕೃತಿಯೊಂದಕ್ಕೆ ಸಂಬಂಧಿಸಿದ್ದಿರಬಹುದು. ಮೊದಲನೆಯ ವಿಮರ್ಶೆಯ ರೀತಿಗೆ ನಾವು ಸಾಹಿತ್ಯಶಾಸ್ತ್ರ ಎಂಬ ಸಾಮಾನ್ಯವಾದ ಹೆಸರನ್ನು ಕೊಡಬಹುದು ಸಾಹಿತ್ಯಪ್ರಪಂಚದಲ್ಲಿಯ ನೂರಾರು ಕೃತಿಗಳ ಪರಿಶೀಲನೆಯ ಮೂಲಕ ಗುರುತಿಸಬಹುದಾದ ಕೆಲವೊಂದು ತತ್ವಗಳ ಸಂಕಲನವೇ ಈ ಶಾಸ್ತ್ರ. ಈ ತತ್ವಗಳು ಸಾಮಾನ್ಯವಾಗಿ ಸರ್ವರಿಗೂ ಗ್ರಾಹ್ಯವಾಗಿರುತ್ತವೆ ಎಂದು ಹೇಳಬಹುದು. ಸಾಹಿತ್ಯ ಯಾವಾಗಲೂ ಸತ್ಯ, ಶಿವ, ಸುಂದರಗಳ ದರ್ಶನವಾಗಿರಬೇಕು. ಎಂಬಂಥ ಮಾತುಗಳನ್ನು ನಾವು ಪ್ರತಿಪಾದಿಸುತ್ತಿದ್ದಾಗ ಯಾವುದೊಂದು ಕೃತಿಯ ಬಗೆಯಲ್ಲಿ ನಾವು ಮಾತನಾಡದೆ ಇಡೀ ಸಾಹಿತ್ಯದ ಬಗೆಯಲ್ಲಿಯೇ, ಎಲ್ಲ ಸಾಹಿತ್ಯ ಕೃತಿಗಳಿಗೂ ಅನ್ವಯಿಸಬಹುದಾದಂಥ ಮಾತನ್ನು ಹೇಳುತ್ತಿರುತ್ತೇವೆ. ಈ ತತ್ವಗಳು ಬುದ್ಧಿಗ್ರಾಹ್ಯವಾದ ತತ್ವಗಳು. ಈ ತೆರದ ತತ್ವಗಳ ವಿವೇಚನೆಯಲ್ಲಿ ಸಾಹಿತ್ಯವೆಂದರೇನು? ಸಾಹಿತ್ಯವೆನಿಸಿಕೊಂಡು ಬಾಳಿರಬೇಕಾದರೆ ಅದರಲ್ಲಿ ಯಾವ ಗುಣಗಳು ಅನಿವಾರ್ಯವಾಗಿ ಇರಲೇಬೇಕು? ಸಾಹಿತ್ಯದ ಗುರಿಯೇನು, ಕಾರ್ಯ ಯಾವುದು? ಇಂಥ ಪ್ರಶ್ನೆಗಳಿಗೆ ವಿಶೇಷವಾದ ಸ್ಥಾನವಿರುತ್ತದೆ. ಈ ಪ್ರಶ್ನೆಗಳಿಗೆ ನಾವು ಹೇಳಬಹುದಾದ ಉತ್ತರಗಳನ್ನು, ಎಂದರೆ ಸಾಹಿತ್ಯದ ಸ್ವರೂಪದ ಬಗೆಯಲ್ಲಿಯ ನಮ್ಮ ತಿಳಿವನ್ನು, ಶಾಸ್ತ್ರೀಯವಾಗಿ, ಕ್ರಮಬದ್ಧವಾಗಿ ಕೆಲವೊಂದು ತತ್ವಗಳ ರೂಪದಲ್ಲಿ ವಿವರಿಸಬಹುದು. ಆದರೆ ಈ ಎಲ್ಲ ತತ್ವಗಳು ನಮ್ಮ ಗ್ರಹಿಕೆಯ, ನಮ್ಮ ತಿಳುವಿನ ಸುಸಂಘಟಿತವಾದ ಪ್ರತೀಕಗಳು ಮಾತ್ರವಾಗಬಲ್ಲವು. ಸಾಹಿತ್ಯ ಹೀಗೆಯೇ ಇರಬೇಕು, ಈ ತತ್ವಗಳನ್ನು ಹೊರತು ಪಡಿಸಿ ಸಾಹಿತ್ಯವಿರಲಾರದು ಎಂದು ಎಂದಿಗೂ ವಿಧಿಸುವುದು ಸಾಧ್ಯವಿಲ್ಲ. ಸಾಹಿತ್ಯಸತ್ವ-ಸಾಹಿತ್ಯದ ಸ್ವರೂಪ-ಅನುಭವಸಿದ್ಧವಾದ ಒಂದು ವಿಷಯ. ಅದರ ಬಗೆಯಲ್ಲಿ ನಾವು ಕೇಳಿಕೊಂಡ ಪ್ರಶ್ನೆಗಳಿಗೆ ನಾವೇ ಹೇಳಿದ ಉತ್ತರಗಳ ಸಂಕಲನವೇ ಸಾಹಿತ್ಯಶಾಸ್ತ್ರ. ಹಾಗೆ ನೋಡಿದರೆ ಸಾಹಿತ್ಯಶಾಸ್ತ್ರ,

ಅದಕ್ಕೂ ವಿಸ್ತಾರವಾದ ರಸಶಾಸ್ತ್ರದ ಒಂದು ಅಂಗ. ರಸಶಾಸ್ತ್ರದ ವಿವೇಚನೆಯೂ ಒಂದು ಮಟ್ಟದಲ್ಲಿ ತತ್ವಶಾಸ್ತ್ರದ ಮೇರೆಯನ್ನು ಮುಟ್ಟಬೇಕಾಗುತ್ತದೆ. ಸಾಹಿತ್ಯ, ರಸ, ತತ್ವ ಇವುಗಳ ಮೇರೆಗಳನ್ನು ಸ್ಪಷ್ಟವಾಗಿ ಉಲ್ಲೇಖಿಸುವುದು ಕಷ್ಟ ಸಾಧ್ಯ. ಎಲ್ಲ ಪ್ರವಾಹಗಳೂ ಸಮುದ್ರವನ್ನು ಸೇರುವಂತೆ ಎಲ್ಲ ವಿಚಾರ ವಿವೇಚನೆಗಳೂ ತತ್ವಾಂಬುಧಿಯನ್ನು ಸೇರುವುದು ಅನಿವಾರ್ಯವಲ್ಲವೆ ?

ಆದರೆ ನಿಜವಾದ ವಿಮರ್ಶೆ ವಿಶಿಷ್ಟಕೃತಿಗೆ ಸಂಬಂಧಪಟ್ಟದ್ದು. ಇಲ್ಲಿ ತತ್ವದ ವಿವೇಚನೆಗಿಂತ ಕೃತಿಯ ಗುಣದೋಷದ ಚರ್ಚೆ ಯೋಗ್ಯವಲ್ಲದೆ, ಆವಶ್ಯಕ. ಆಗಲೆ ನಾವು ಗುಣದೋಷ ಎಂಬ ಮಾತುಗಳನ್ನು ಬಳಸುತ್ತಿದ್ದೇವೆ ಸರ್ವಮಾನ್ಯವಾಗಿ ಗ್ರಾಹ್ಯವಾದ ಕೆಲವು ತತ್ವಗಳ ಹೊರತು ಗುಣದೋಷ ನಿಷ್ಕರ್ಷೆಯಾಗುವಂತಿಲ್ಲ. ಹತ್ತರಲ್ಲಿ ಎಂಟು ಜನ ಯಾವ ಕಾಲದಲ್ಲಿಯೂ ಒಂದು ವಸ್ತು ಒಳ್ಳೆಯದು ಎನ್ನದ ಹೊರತು ಅದನ್ನು ನಾವು ಒಳ್ಳೆಯದು ಎಂದು ಅನ್ನುವುದಿಲ್ಲ. ಅನ್ನುವುದೇ ಆದರೆ ಅದು ನಮ್ಮ ವೈಯಕ್ತಿಕ ಅಭಿಪ್ರಾಯ ಮಾತ್ರ. ಸಾಹಿತ್ಯದ ಒಂದು ಕೃತಿಯ ವಿಮರ್ಶೆಯಲ್ಲಿಯೂ ಇದೇ ಮಾತು. ಒಂದು ಕೃತಿಯ ಬಗೆಯಲ್ಲಿಯ ಒಂದು ವೈಯಕ್ತಿಕ ಅಭಿಪ್ರಾಯ ಹೆಚ್ಚು ಜನಕ್ಕೆ ಒಪ್ಪಿತವಾದ ಹಾಗೆ ಅಥವಾ ಅಭಿಪ್ರಾಯ ಒಂದು ತತ್ವದ ಸ್ವರೂಪವನ್ನು ತಾಳುತ್ತ ಹೋದ ಹಾಗೆ–ಅಭಿಪ್ರಾಯಕ್ಕೆ ಮಹತ್ವ ಬರುತ್ತದಲ್ಲದೆ ಅದು ವಿಮರ್ಶೆಯೆನಿಸಿಕೊಳ್ಳಲು ಸಮರ್ಥವಾಗುತ್ತದೆ. ಕೃತಿಯ ಗುಣದೋಷ ಚರ್ಚೆಯೇ ವಿಮರ್ಶೆ ಎಂದಾಗ ಆ ಚರ್ಚೆ ಕೃತಿಯ ಸಮಗ್ರ ಸ್ವರೂಪದ ಚರ್ಚೆಯೂ ಆಗಬಹುದು. ಅಥವಾ ಆ ಕೃತಿಯ ಅಂಗಗಳಾಗಿದ್ದ ವಿಷಯ, ರೀತಿ, ರೂಪ, ಶೈಲಿ ಮುಂತಾದ ಅಂಶಗಳ ಚರ್ಚೆಯಾಗಬಹುದು. ನಿಜವಾದ ವಿಮರ್ಶೆ ಈ ಅಂಶಗಳ ಮತ್ತು ಈ ಅಂಶಗಳ ಸಮಷ್ಟಿಯ ಸಮಗ್ರ ವಿವೇಚನೆಯಾಗಬೇಕಾಗುತ್ತದೆ.

ವಿ. ಎಂ. ಇನಾಂದಾರ್.

# ಯಂತ್ರಶಿಲ್ಪ ಮತ್ತು ನಾಗರಿಕತೆ

ಮಾನವನ ಇತಿಹಾಸದಲ್ಲಿ ಯಂತ್ರಶಿಲ್ಪದ ಸ್ಥಾನವೇನು ? ಅವನ ನಾಗರಿಕತೆ ಯಲ್ಲಿ ಒಂದೊಂದು ಯುಗದಲ್ಲಿಯೂ ಯಂತ್ರಶಿಲ್ಪದಿಂದ ಏನು ಸಹಾಯ ದೊರಕಿದೆ ? ಎಂದು ವಿಚಾರಮಾಡಬಹುದು. ನಾಗರಿಕತೆಯೆಂದರೆ ಏನು ? ಎನ್ನುವುದನ್ನು ಒಂದು ಮಾತಿನಲ್ಲಿ ಹೇಳುವುದು ಸಾಧ್ಯವಿಲ್ಲ. ಪ್ರಗತಿಯ ಸೋಪಾನದಲ್ಲಿ ಮೇಲುಮೇಲಕ್ಕೆ ಏರುವ ಹಂಬಲಿನಿಂದ ನಾವು ಮಾಡುವ ದೀರ್ಘಯತ್ನವೇ ನಾಗರಿಕತೆಯ ಕುರುಹು. ಒಂದು ಕಡೆ ನಮ್ಮ ಜೀವನವನ್ನುಪರಿಪೂರ್ಣವಾಗಿ ಮಾಡುವುದಕ್ಕೆಬೇಕಾದ ಬುದ್ಧಿ, ತಿಳಿವಳಿಕೆ, ಪ್ರಕೃತಿಯ ವಿಧವಿಧವಾದ ಸೊಬಗು, ಸಮಾಜದ ಸೌಜನ್ಯ, ಆಚಾರ, ಮೊದಲಾದ ತತ್ತ್ವಗಳಿವೆ. ಇನ್ನೊಂದು ಕಡೆ ಇವುಗಳಿಗೆ ಪ್ರತಿಯಾಗಿ ಮಿಡಿಯುತ್ತ, ಇವೆಲ್ಲವೂ ಬೇಕೆಂದು ಹಾತೊರೆಯುತ್ತಾ, ಇರುವ ಮಾನವ ಸಹಜವಾದ ಪ್ರವೃತ್ತಿ ಗಳಿವೆ ಈ ತತ್ತ್ವಗಳನ್ನೆಲ್ಲಾ ಗ್ರಹಿಸಿ ಪ್ರವೃತ್ತಿಗಳು ಸಮಾಧಾನಹೊಂದಿ ಜೀವನವು ಮುಂದು ವರಿದಾಗ ಮಾತ್ರ ನಾವು ಸಭ್ಯರೆಂದುಕೊಳ್ಳಬಹುದು. ಈ ಹೊಂದಿಕೆಯ ಹದವು ಬೇರೆ ಬೇರೆ ದೇಶಗಳಲ್ಲಿ, ಬೇರೆ ಬೇರೆ ಕಾಲಗಳಲ್ಲಿ ವ್ಯತ್ಯಾಸ ವಾಗುವುದು ಸ್ವಾಭಾವಿಕ. ಅದಕ್ಕಾಗಿ ಪ್ರಾಚೀನ ಚೀನದ ನಾಗರಿಕತೆಯೂ ಇವತ್ತಿನ ಜಪಾನಿನ ನಾಗರಿಕತೆಯೂ ಭಿನ್ನವಾಗಿದೆಯೆನ್ನುತ್ತೇವೆ. ಆದರೆ ಎರಡೂ ನಾಗರಿಕತೆ ಗಳೆಂದು ಒಪ್ಪದೆ ಇರುವುದು ಸಾಧ್ಯವಲ್ಲ.

ನಮ್ಮ ಸುತ್ತ ಹರಡಿರುವ ನೈಸರ್ಗಿಕಶಕ್ತಿಯ ಸ್ವರೂಪಗಳನ್ನೂ, ಸಾಮಗ್ರಿ ಗಳನ್ನೂ ನಮ್ಮ ಉಪಯೋಗಕ್ಕಾಗಿ ಬಳಸಿಕೊಳ್ಳುವ ಕಲೆಯೇ ಯಂತ್ರಶಿಲ್ಪ. ಈ ಸಾಮಗ್ರಿಗಳು ಯಾವುವು, ಶಕ್ತಿಯ ಮಿತಿಯೇನು ಎಂಬುದನ್ನು ಅವುಗಳ ಉಪ ಯೋಗ ಅವಲಂಬಿಸಿರುತ್ತದೆ. ಈ ರೀತಿಯ ಉಪಯೋಗಗಳಲ್ಲಿ ಮುಖ್ಯವಾದುವು ಕೆಲವು; ಗೌಣವಾದುವು ಕೆಲವು. ಗೌಣವಾದ ಉಪಯೋಗಗಳಿಗೆ ಒಂದು ಮಿತಿಯಿಲ್ಲ. ಬಳಸಿಕೊಳ್ಳಬೇಕೆಂಬ ಇಚ್ಛೆ, ಹೊಸ ಅನುಕೂಲಗಳಿಗಾಗಿ ಬಯಕೆ, ಇವು ಬುದ್ಧಿಯನ್ನು ಪ್ರಚೋದಿಸಿ ನಿರ್ಮಾಣಕಾರ್ಯದಲ್ಲಿ ತೊಡಗಿಸುತ್ತವೆ. ಯಾವ ವಿಧವಾದ ಅನು ಕೂಲಗಳು ಬೇಕು-ಎನ್ನುವುದೇ ಇಲ್ಲಿ ಮುಖ್ಯವಾದ ವಿಷಯ. ಈ ವಿಚಾರದಲ್ಲಿ ಒಂದು ದೇಶಕ್ಕೂ ಮತ್ತೊಂದು ದೇಶಕ್ಕೂ, ಒಂದು ಸಮಯಕ್ಕೂ ಇನ್ನೊಂದಕ್ಕೂ ಕಂಡ ಹಾಗೆ ವ್ಯತ್ಯಾಸಗಳಿರುತ್ತವೆ. ಈ ವ್ಯತ್ಯಾಸಗಳಿಗೆ ಅನುಗುಣವಾಗಿ ಆಯಾಯಾ ಕಾಲದ ನಿರ್ಮಾಣಗಳೂ ಬದಲಾಗುತ್ತವೆ. ಒಂದು ವೇಳೆ ಯಾವ ಹೊಸ ಬಯ ಕೆಯೂ ಕಾಣಿಸಿಕೊಳ್ಳದೆ ಇರುವ ಕಾಲದಲ್ಲಿ ನಿರ್ಮಾಣಕಾರ್ಯವೂ ತಟಸ್ಥವಾಗಿಯೇ ಇರುತ್ತದೆ. ಹೀಗೆ ಒಂದು ಕಾಲದ ಯಂತ್ರ ಕಲೆಗೂ, ಒಂದು ದೇಶದ ಯಂತ್ರ ಕಲೆಗೂ ವ್ಯತ್ಯಾಸವನ್ನು ಕಾಣಬಹುದು.

ಸಕಲ ಶಕ್ತಿಗೂ, ಸಮಸ್ತ ಸಾಮಗ್ರಿಗಳಿಗೂ ನಮಗೆ ಪಂಚಭೂತಗಳೇ ಆಧಾರ. ಪ್ರಪಂಚದ ಯೋಗಕ್ಷೇಮದ ಭಾರವನ್ನೆಲ್ಲಾ ಹೊತ್ತಿರುವುದು ಸೂರ್ಯನ ತೇಜಸ್ಸು. ಭೂಮಿಯ ಮೇಲೆ ನಡೆಯುವ ಎಲ್ಲಾ ಕಾರುಬಾರುಗಳನ್ನೂ ಚಲಾಯಿಸುವ ಶಕ್ತಿ ಬಂದಿರುವುದು ಸೂರ್ಯನಿಂದ. ನಾವು ಕೈಯಲ್ಲಿ ಹತಾರಗಳನ್ನು ಹಿಡಿಯಲಿ, ಎತ್ತುಗಳಿಂದ ಗಾಡಿಗಳನ್ನು ಎಳೆಸಲಿ, ಗಾಳಿಯಿಂದ, ನೀರಿನಿಂದ ಚಕ್ರಗಳನ್ನು ತಿರುಗಿಸಲಿ, ಕಟ್ಟಿಗೆ, ಕಲ್ಲಿದ್ದಲು, ಎಣ್ಣೆ, ಪೆಟ್ರೋಲು, ಏನನ್ನು ಬೇಕಾದರೂ ಉರಿಸಲಿ, ಅಥವಾ ವಿದ್ಯುತ್ತಿನಿಂದ ಯಂತ್ರಗಳನ್ನು ನಡೆಸಲಿ, ಎಲ್ಲಕ್ಕೂ, ಒಂದಲ್ಲ, ಒಂದು ವಿಧದಲ್ಲಿ ಸೂರ್ಯನಿಂದಲೇ ಚಲಿಸುವ ಶಕ್ತಿ ಲಭಿಸಿದೆ. ಈ ಶಕ್ತಿಯನ್ನು ಯಾರು ಸೃಷ್ಟಿಸಿದವರು? ಅನಾದಿಯಾಗಿ, ಅನಂತವಾಗಿ, ಸರ್ವವ್ಯಾಪಿಯಾಗಿ, ಸರ್ವತೋಮುಖವಾಗಿ, ಶಕ್ತಿ ಎಲ್ಲೆಲ್ಲಿಯೂ ಹಬ್ಬಿದೆ. ಇದನ್ನು ಬಳಸಿಕೊಳ್ಳುವುದು ಮಾತ್ರ ನಮ್ಮ ಕೆಲಸ. ಯಂತ್ರ ವಿದ್ಯೆಯ ಜಿಜ್ಞಾಸೆಯಲ್ಲಿ ತೊಡಗಿರುವಾಗ ನಾವು ಸೂರ್ಯನ ಅನುಗ್ರಹವೊಂದನ್ನು ಪಡೆದುಕೊಂಡರೆ ಸಾಕು. ಅನಂತಸೂರ್ಯರನ್ನೊಳಕೊಂಡ ಊಹಾತೀತವಾದ ಆಕಾಶದ ಗೊಡವೆಗೆ ನಾವು ಹೋಗಬೇಕಾಗಿಲ್ಲ. ಹಾಗೆ ನೋಡಿದರೆ ಸೂರ್ಯನ ತೇಜಸ್ಸಿನಲ್ಲಿಯೂ ಅಲ್ಪಭಾಗವನ್ನು ಮಾತ್ರ ನಾವು ಬಳಸಬಹುದು. ಈ ತೇಜಸ್ಸಿನ ಅಂಶಗಳಾದ ಭೂಮಿ, ನೀರು, ಗಾಳಿ, ಈ ಮೂರೇ ನಮ್ಮ ಕೆಲಸಕ್ಕೆಲ್ಲಾ ಸಾಕು.

ನಮ್ಮ ಭಾಗಕ್ಕೆ ಭೂಮಿ ಅಚಲ, ಅನಂತ. ಎಲ್ಲರನ್ನೂ ಎಲ್ಲವನ್ನೂ ಸಹನೆಯಿಂದ ಹೊತ್ತ ವಿಶ್ವಂಭರೆ. ಸಕಲೈಶ್ವರ್ಯಗಳನ್ನು ತುಂಬಿಕೊಂಡಿರುವ ವಸುಮತಿ. ಮಾನವನೇ ಮೊದಲಾಗಿ ಸಮಸ್ತ ಪ್ರಾಣಿಗಳೂ ಏನೇ ಮಾಡಲಿ ಎಲ್ಲವನ್ನೂ ಮನ್ನಿಸುವ ಕ್ಷಮಾ. ಉಪಯೋಗವನ್ನು ತಿಳಿದವರಿಗೆ ಭೂಮಿಯಲ್ಲಿರುವ ಪ್ರತಿಯೊಂದು ಪದಾರ್ಥವೂ ಒಂದೊಂದು ರತ್ನವೇ. ಅದಕ್ಕಾಗಿ ಭೂಮಿ ರತ್ನಗರ್ಭಾ. ಮಾನವನ ಚರಿತ್ರೆಯಲ್ಲಿ ಮೊದಲಿನಿಂದ ಕೊನೆಯವರೆಗೆ ಬೇಕಾಗುವ ಸೌಕರ್ಯಗಳಿಗೆಲ್ಲಾ ಸಾಮಗ್ರಿಗಳು ಇಲ್ಲಿವೆ.

ನೀರು ಮನುಷ್ಯನಿಗೆ ಜೀವನ, ಅಮೃತ. ಈ ನೀರನ್ನು ತುಂಬಿ ಇಟ್ಟಿರುವ ಸಮುದ್ರ ರತ್ನಾಕರ. ಸಮುದ್ರದ ನೀರು ಸೂರ್ಯನ ಬಿಸಿಲಿನಲ್ಲಿ ಕಾದು ಆವಿಯಾಗಿ ಮೇಘವಾಗಿ, ಗಾಳಿಯ ಸಹಾಯದಿಂದ ಮಳೆಯ ನೀರಿನ ರೂಪವಾಗಿ ಭೂಮಿಯನ್ನು ತಣಿಸಿ, ಭೂಗರ್ಭದಲ್ಲೂ, ಮೇಲುಗಡೆಯಲ್ಲಿಯೂ ವ್ಯಾಪಿಸಿ ಎಲ್ಲಿ ಬೇಕೆಂದರೆ ಅಲ್ಲಿ ದೊರಕಿ ಎಲ್ಲ ಜೀವನವನ್ನು ಪೋಷಿಸಿಕೊಂಡು ಬರುತ್ತಿದೆ.

ವಾಯುವು ಜಗತ್ಪ್ರಾಣನಾಗಿ, ಸದಾ ಸಂಚರಿಸುತ್ತಾ ಜೀವರಾಶಿಗಳನ್ನೆಲ್ಲಾ ಕಾಪಾಡಿಕೊಂಡು ಬರುತ್ತಿದ್ದಾನೆ.

ಪ್ರಾಣಿಗಳು ಬದುಕುವುದಕ್ಕೆ, ಬಾಳುವುದಕ್ಕೆ, ಅವಶ್ಯವಾದ ಚೇತನವನ್ನು ಕೊಡುವುದು ಮಾತ್ರವೇ ಅಲ್ಲ, ಯಂತ್ರವಿದ್ಯೆಗೆ ಬೇಕಾದ ಅಚೇತನವಾದ ಸಾಮಗ್ರಿ

ಗಳಿಲ್ಲಕ್ಕೂ, ಭೂಮಿ, ನೀರು, ಗಾಳಿ ಇವೇ ಉಗ್ರಾಣ. ಪ್ರತಿಗಳಿಗೆಯಲ್ಲಿಯೂ ಪಂಚಭೂತಗಳಿಂದ ಪ್ರಾಣಿಗಳು ಉಪಕಾರವನ್ನು ಹೊಂದುತ್ತಿವೆ.

ಹೀಗೆ ಸೌಕರ್ಯಗಳನ್ನು ಕಲ್ಪಿಸಿಕೊಂಡ ಮಾನವನು ಉಪಕೃತನಿಗೆ ಸಹಜವಾಗಿರಬೇಕಾದ ಕೃತಜ್ಞತೆಯಿಂದ ವರದರಾದ ಪಂಚಭೂತಗಳಲ್ಲಿ ಪೂಜ್ಯಭಾವವನ್ನಿಟ್ಟು, ಅವರನ್ನು ದೇವತ್ವದ ಮಟ್ಟಕ್ಕೇರಿಸಿ, ಆರಾಧನೆಮಾಡಿ ಕೃತಕೃತ್ಯನಾಗುತ್ತಾನೆ. ಸೂರ್ಯನ ಶ್ರೇಷ್ಠವಾದ ತೇಜಸ್ಸೇ ನಮ್ಮ ಬುದ್ಧಿಯನ್ನು ಪ್ರಚೋದಿಸಲಿ ಎಂಬುದು ಮಹಾಮಂತ್ರವಾಗುತ್ತದೆ.

ಈ ಪೂಜ್ಯಭಾಗಕ್ಕೆ ಮತ್ತೊಂದು ಕಾರಣವನ್ನು ಕಾಣಬಹುದು. ಅದು ಈ ಭೂತಗಳ ಅಪಾರವಾದ ಶಕ್ತಿ. ಒಂದು ಸಾರಿ ಈ ಶಕ್ತಿಯ ಸೌಮ್ಯರೂಪವನ್ನು ಕಂಡು ಹಿಗ್ಗಿ ಮಾನವನು ಕೊಂಡಾಡುತ್ತಿದ್ದರೆ ಇನ್ನೊಂದು ಸಾರಿ ಇದೇ ಶಕ್ತಿಯ ಭೈರವರೂಪವನ್ನು ನೋಡಿ ಬೆದರಿ ಕೈಮುಗಿದು ಮತ್ತೆ ಶಾಂತಳಾಗಲೆಂದು ಪ್ರಾರ್ಥಿಸುತ್ತಾನೆ.

ಪಂಚಭೂತಗಳು ವರದರಾಗಿರಬಹುದು. ನಮಗೆ ವರವನ್ನು ಕೇಳುವ ದರದು ಬೇಕಲ್ಲ. ಕೇಳಿದರೂ ಎಂಥ ವರವನ್ನು ಕೇಳಬೇಕು ? ಭಸ್ಮಾಸುರನಂತೆಯೋ, ಮೈದಾಸನಂತೆಯೋ ಬೇಡಿ ಪಾಡುಪಟ್ಟು ವರವನ್ನು ಪಡೆದರೂ ಫಲವೇನು ? ವೃಥಾ ಕಷ್ಟಪಡುವುದು ಮನುಷ್ಯನ ಪದ್ಧತಿಯಲ್ಲ. ದಿನದಿನಕ್ಕೆ ಏನು ಬೇಕೋ ಅದನ್ನು ಹೊಂದಿಸಿಕೊಳ್ಳುವುದಕ್ಕೆ ಬವಣೆಪಡುವುದೇ ಸಾಕಾಗಿದೆ.

ನಮ್ಮ ನಿತ್ಯದ ಅವಶ್ಯಕತೆಗಳನ್ನು ಎರಡು ವಿಧವಾಗಿ ವಿಂಗಡಿಸಬಹುದು ಕೇವಲ ಪ್ರಾಣಧಾರಣೆಗಾಗಿ ಬೇಕಾದವು ಒಂದು ಗುಂಪು. ಶರೀರ ಪೋಷಣೆಗೆ ಅನ್ನ, ಕುಡಿಯುವುದಕ್ಕೆ ನೀರು, ಉಡುವುದಕ್ಕೆ ಬಟ್ಟೆ, ಚಳಿ, ಮಳೆ, ಬಿಸಿಲು, ಬಾಧಿಸದ ಹಾಗೆ ನಿಲ್ಲಲು ನೆರಳು, ಆರೋಗ್ಯಸಾಧನೆ—ಇವು ಈ ಗುಂಪಿಗೆ ಸೇರಿವೆ. ಇನ್ನು ಇವುಗಳನ್ನು ದೊರಕಿಸುವುದಕ್ಕೆ ಸಾಧನಗಳನ್ನು ಕಲ್ಪಿಸಬೇಕು. ಇದಕ್ಕಾಗಿ ಉತ್ಪನ್ನಗಳ ತಯಾರಿ, ಉತ್ಪತ್ತಿಯಾಗುವ ಸ್ಥಳದಿಂದ ಉಪಯೋಗವಾಗುವ ಸ್ಥಳಕ್ಕೆ ಸಾಗಿಸುವುದಕ್ಕೆ ಏರ್ಪಾಡು, ವರ್ತಮಾನವನ್ನು ಕಳುಹಿಸುವ ವ್ಯವಸ್ಥೆ, ಎಲ್ಲಾ ಶಾಖೆಗಳೂ ಒಮ್ಮುಖವಾಗಿ ಕೆಲಸಮಾಡುವ ಹಾಗೆ ಹತೋಟಿ ಇಡುವುದಕ್ಕೆ ಆಡಳಿತ, ಇವೆಲ್ಲಾ ನೆರವಾಗಬೇಕಾಗುತ್ತದೆ. ಪ್ರಾರಂಭದಲ್ಲಿ ಈ ಸರಳವಾದ ಅಗತ್ಯಗಳೇ ಸಾಕಾದರೂ, ಸಮಾಜವು ಬೆಳೆದ ಹಾಗೆಲ್ಲಾ ಹೊಸ ಕೊರತೆಗಳು ಕಾಣಿಸಿಕೊಳ್ಳುತ್ತವೆ. ಇವುಗಳನ್ನು ಸಾಮಾಜಿಕ ಹವ್ಯಾಸಗಳೆಂದು ಕರೆಯಬಹುದು. ಒಂದು ದೃಷ್ಟಿಯಲ್ಲಿ ಇವು ಅವಶ್ಯವೇ ಅಲ್ಲ. ಆದರೆ ನಿತ್ಯದ ಕೊರತೆಗಳು ಮಾಯವಾದ ಮೇಲೆ ಇವು ಕಾಲಿಡುತ್ತವೆ. ವಿನೋದ, ವಿರಾಮ, ಸೌಖ್ಯಸಾಧನೆ, ಇವು ಈ ಜಾತಿಗೆ ಸೇರಿದುವು. ಕ್ರಮೇಣ ಅನ್ನ, ನೀರು, ಎಷ್ಟು ಆವಶ್ಯಕವೋ ಇವೂ ಅಷ್ಟೇ ಅವಶ್ಯವೆಂಬ ಪರಿಸ್ಥಿತಿ ಬರುತ್ತದೆ. ಹೀಗೆ ಕೇವಲ ಉಪಯೋಗಕ್ಕಾಗಿ ಬೇಕಾಗುವ ಸಾಮಾನುಗಳು ಕರಗತವಾದ ಮೇಲೆ ಮಾನವ ಸಹಜವಾದ ಅತೃಪ್ತಿ ಭೌತ ಸಾಮ್ರಾ

ಷ್ಯಕ್ಕೆ ಮೀರಿದ ಆಕಾಂಕ್ಷೆಗಳಿಗಾಗಿ ಹಾತೊರೆಯುತ್ತದೆ. ರಾಜಕೀಯ, ಕಲೆ, ಧರ್ಮ, ಸತ್ಯಾನ್ವೇಷಣೆ, ಈ ದಾರಿಗಳಲ್ಲಿ ದುಡಿಯುತ್ತದೆ. ಇದೊಂದು ಅನಂತವಾದ ಅನ್ವೇಷಣೆ. ಈ ಅನ್ವೇಷಣೆಯನ್ನು ಸದ್ಯಕ್ಕೆ ಬಿಟ್ಟು, ಯಂತ್ರಶಿಲ್ಪಕ್ಕೂ, ನಾಗರಿಕತೆಗೂ, ಮೊದಲಿನಿಂದ ಇರುವ ಸಂಬಂಧವನ್ನು ಮಾತ್ರ ಇಲ್ಲಿ ವಿಚಾರಮಾಡಬಹುದು.

ಶಿಲ್ಪಕತೆಯ ಕೃತಿಗಳೇ ನಾಗರಿಕತೆಯ ಹೊರವ್ಮೈಯೆನ್ನಬಹುದು. ಜನಾಂಗದ ಹೆಬ್ಬಯಕೆಗಳೆಲ್ಲವೂ ಈ ರೀತಿಯಲ್ಲಿ ಮೂರ್ತಿವೆತ್ತು ಆ ಕಾಲದ ಸ್ಮಾರಕಗಳಾಗಿ ನಿಂತಿವೆ. ಜನಜೀವನವು ಪುಷ್ಟವಾದಾಗಲೆಲ್ಲಾ ಪುಷ್ಟವಾಗಿ, ಕ್ಷೀಣಿಸಿದಾಗ ಕ್ಷೀಣಿಸಿ, ನಾಗರಿಕತೆಯ ಏರಿಳಿತಗಳನ್ನು ಒಂದು ವಿಧದಲ್ಲಿ ಶಿಲ್ಪಕಲೆ ಪ್ರತಿಬಿಂಬಿಸುತ್ತದೆ.

ನಾಗರಿಕತೆಯ ಇತಿಹಾಸದಲ್ಲಿ ಒಂದು ವಿಶೇಷವನ್ನು ಕಾಣಬಹುದು. ಅದ್ಯ ಪ್ರಾರಂಭವಾದಾಗಿನಿಂದ ಮೇಲು ಮುಖವಾಗಿ ಧಾರಾಕಾರವಾಗಿ ಬೆಳೆದು ಯಾವ ದೇಶದಲ್ಲೂ ಯಾವ ಕಾಲದಲ್ಲೂ ಅದು ಮುಗಿಲು ಮುಟ್ಟಿಲ್ಲ. ಆಯಾ ಜನತೆಯ ಧ್ಯೇಯಗಳಿಗೆ ಹೊಂದಿಕೊಂಡು ಉದ್ಭವವಾದದ್ದು ಬೆಳೆದು ಉಚ್ಛ್ರಾಯಸ್ಥಿತಿಗೆ ಬರುತ್ತದೆ. ಬಂದದ್ದು ಅಲ್ಲಿಯೇ ನಿಂತಿರುವುದಿಲ್ಲ. ಅವನತಿ ಕಾಲಿಡುತ್ತದೆ. ನಾನಾ ಕಾರಣಗಳಿಂದ ಜನ ದುರ್ಬಲರಾಗಬಹುದು. ಬೇರೊಂದೆಡೆಯಿಂದ ಶಕ್ತರಾದ ಮಂದಿ ನುಗ್ಗಿಬಂದು ಹಳೆಯ ನಾಗರಿಕತೆಯ ಮೇಲೆ ದಾಳಿಮಾಡಬಹುದು. ಆಗಲೂ ಗೆದ್ದವರು ಸೋತವರ ಸಭ್ಯತೆಯ ಬಹು ಭಾಗವನ್ನು ತಮ್ಮದಾಗಿ ಮಾಡಿಕೊಂಡು ಹೊಸದೊಂದು ನಾಗರಿಕತೆಯ ಉತ್ಪತ್ತಿಗೆ ಕಾರಣವಾಗುತ್ತಾರೆ. ಕ್ರಮೇಣ ಇದೂ ಕಾಲಗತಿಯನ್ನನುಸರಿಸಿ ಲಯವಾಗಬಹುದು. ಸೂರ್ಯೋದಯ, ಏರುಬಿಸಿಲು, ಇಳಿಬಿಸಿಲು, ಸೂರ್ಯಾಸ್ತ ದಿನವೂ ನಡೆದಂತೆ, ಅಥವಾ ಬೇಸಿಗೆ, ಮಳೆಗಾಲ, ಚಳಿಗಾಲ, ಇವು ಪ್ರತಿವರ್ಷವೂ ತಿರಿಗಿತಿರಿಗಿ ಬರುವಂತೆ, ನಾಗರಿಕತೆಯೂ ಹುಟ್ಟು, ಏರುಗಡೆ, ಅಳಿವು, ಈ ಅನಿವಾರ್ಯವಾದ ಅಂಶಗಳನ್ನೊಂಡ ಪರಿವರ್ತನಕ್ರಮದಲ್ಲಿ ಬೆಳೆಯುತ್ತಿರುವುದು ಕಾಣುತ್ತದೆ.

ನಾಗರಿಕತೆಯೇ ಹೀಗೆ ಏರಿಳಿತಗಳಿಗೆ ಸಿಕ್ಕಿದಮೇಲೆ ಅದರ ಹೊರವ್ಮೈಯಾದ ಶಿಲ್ಪಕಲೆಗೂ ಇದೇ ಗತಿ ಬರುತ್ತದೆ. ಒಂದು ಕಾಲದಲ್ಲಿ ಅದು ಚಿಗುರಿ ಹೂಬಿಟ್ಟಂತೆ ಇನ್ನೊಂದು ಕಾಲದಲ್ಲಿ ಕಾಣದೆ ಇರಬಹುದು. ಒಂದೇ ದೇಶದಲ್ಲಿ ಒಂದೇ ನಾಗರಿಕತೆಯ ಅವಧಿಯಲ್ಲಿಯೂ ಶಿಲ್ಪಕಲೆಯ ಬೆಳವಣಿಗೆ ಒಂದೇ ಧಾಟಿಯಲ್ಲಿ ಮುಂದೆ ಸಾಗಿರುವುದಿಲ್ಲ. ನಾಲ್ಕು ಕಾಲ ಚುರುಕಾಗಿ ಓಡಿ, ಬೇಸತ್ತಂತೆ ಕುಳಿತು, ಇಲ್ಲವೆ ನಿದ್ದೆಮಾಡಿ, ಮತ್ತೆ ಮೈಕೊಡವಿಕೊಂಡು ಏಳಬಹುದು. ಇಲ್ಲವೆ ತಣ್ಣಗಾಗಬಹುದು.

ಈ ಚಟುವಟಿಕೆಗೂ ಈ ಪಾಲುಮಾರಿಕೆಗೂ ಕಾರಣವೇನು? ಎಲ್ಲರೂ ಎಲ್ಲವೂ ಒಂದೇ ಸಮವಾಗಿ ಬೆಳೆಯುತ್ತ ಹೋಗಬಾರದೆ? ಆಗಬಹುದು. ಆದರೆ ಅದು ನಮಗೇ ಬೇಕಿಲ್ಲ. ಒಂದು ಕಾಲದಲ್ಲಿ ಬೇಕೆನಿಸಿದರೂ ಇನ್ನೊಂದು ಕಾಲದಲ್ಲಿ ಏಕೋ ಏನೂ ಬೇಡವಾಗುತ್ತದೆ. ವಿಜಯನಗರದ ಸಾಮ್ರಾಜ್ಯವನ್ನು ಸ್ಥಾಪನೆ

ಮಾಡಿ ವೈಭವದಿಂದ ಮೆರೆದ ಜನವೇ ಆಮೇಲೆ ಎಷ್ಟೋ ಶತಮಾನಗಳ ಕಾಲ ತೆಪ್ಪಗಿರಲಿಲ್ಲವೆ? ಆಗ ಇದ್ದ ಶಕ್ತಿ ಈ ಮಧ್ಯೆ ಎಲ್ಲಿ ಹೋಗಿತ್ತು? ಇತ್ತು. ಸುಪ್ತವಾಗಿತ್ತು. ಮತ್ತೊಬ್ಬ ವಿದ್ಯಾರಣ್ಯರಂಥ ಮಹಾವಿಭೂತಿಯ ಅವತಾರಕ್ಕಾಗಿ ಕಾದಿತ್ತು. ಅವತಾರವಾಯಿತು. ಮತ್ತೆ ಪ್ರಬುದ್ಧವಾಗಿದೆ. ಹಾಗೆಯೇ ಪ್ರತಿಯೊಂದು ದೇಶದಲ್ಲಿಯೂ ಜನಜೀವನಕ್ಕೆ ಹೊಂದಿಕೊಂಡು ಶಿಲ್ಪಕಲೆ ವಿಜ್ಞಾನಿಗಳ ಬೆಂಬಲ ದೊರಕಿದಾಗ ಬೆಳೆದು ಅದು ಯಾವ ಕಾರಣದಿಂದಲೋ ಮಾಯವಾದಾಗ ಸೊರಗಿ ಹೋಗುತ್ತದೆ.

ಜನಜೀವನವು ಮೇಲಿನ ಮಟ್ಟದಲ್ಲಿರುವಾಗಲೂ ಮಹಾಜನರ ನೆರವು ಇಲ್ಲದೆ ಹೋದರೆ ಶಿಲ್ಪಕಲೆ ಬೆಳೆಯುವುದು ಅಸಾಧ್ಯದ ಮಾತು. ಸಾಹಿತ್ಯವು ಬೆಳೆಯುವುದಕ್ಕೂ ಜನಜೀವನದ ಗತಿ ತೀವ್ರವಾಗಿರಬೇಕು. ಆದರೂ ಬಾಳುವ ಸಾಹಿತ್ಯ ಹುಟ್ಟುವುದು ಅಲ್ಲೊಬ್ಬ ಇಲ್ಲೊಬ್ಬ ಸಾಹಿತಿಯ ಹೃದಯದಲ್ಲಿ. ಹೊರಕ್ಕೆ ಬರುವುದು ಅವನ ವಾಣಿಯಿಂದ. ಹರಡುವುದು ಅಷ್ಟೇನೂ ಹೆಚ್ಚಿನ ಸಂಖ್ಯೆಯಲ್ಲಿ ಕಾಣಲಾಗದ ಸಹೃದಯದ ಸಹಾನುಭೂತಿಯಿಂದ. ಸಾಮಾನ್ಯ ಜನರ ಬಾಳನ್ನೇ ಲಲಿತ ಕಲೆಗಳು ಪ್ರತಿಬಿಂಬಿಸಿದರೂ ಆ ಜನ ಇವುಗಳಲ್ಲಿ ನೇರವಾಗಿ ಪಾತ್ರವಹಿಸುವುದು ಸಾಧ್ಯವೂ ಅಲ್ಲ, ಸೂಕ್ತವೂ ಅಲ್ಲ. ಆದರೆ ಶಿಲ್ಪಕಲೆಯ ಕಾಮಗಾರಿಗಳಲ್ಲಿ ನಮಗೆಲ್ಲ ಅನ್ನವನ್ನು ನೀಡುವ ಬೇಸಾಯದಲ್ಲಿ ಹೇಗೋ ಹಾಗೆ ಕೆಲಸ ಸಾಗುವುದು ಜನಸಾಮಾನ್ಯದ ಕೈಯಿಂದ. ಹಳೇಬೀಡಿನ ದೇವಸ್ಥಾನಬೇಕು—ಎಂದು ಜನ ಕೇಳಿದರು. ಯಾವ ಜಾಗದಲ್ಲಿ ಕಟ್ಟಬೇಕು, ಕಟ್ಟಡದ ಉದ್ದ, ಅಗಲ, ಎತ್ತರ, ಸಾಮಗ್ರಿ, ನಮೂನೆ, ಇವೆಲ್ಲಾ ಹೇಗಿರಬೇಕು ಎಂದು ನಿರ್ಣಯಮಾಡಿದವನು ಮೇಧಾವಿಯೂ ರಸಿಕನೂ ಆದ ಶಿಲ್ಪಿ. ಸಾಹಿತ್ಯದ ಕೃತಿ ಸಾಹಿತಿಯ ಹೃದಯದಲ್ಲಿ ಮೊದಲು ಮೂಡಿದಂತೆ ಕಟ್ಟುವುದಕ್ಕೂ ಮುಂಚೆ ಹೇಗೆ ಕಟ್ಟಬೇಕು, ಕಟ್ಟಿದ ಮೇಲೆ ನಾಲ್ಕು ದಿಕ್ಕುಗಳಿಂದಲೂ ಅದು ಹೇಗೆ ಕಾಣುತ್ತದೆ, ಎಂಬ ಕಲಾಕೃತಿಯ ಭಾವೀ ರೂಪವು ಮೊದಲು ಮೂಡಿದ್ದು ಈ ವಿಶ್ವಕರ್ಮನ ಮನಸ್ಸಿನಲ್ಲಿ. ಈ ರೂಪವು ಶಿಲಾಕೃತಿಯಾಗಿ ಮೂರ್ತೀಭವಿಸಿದ್ದು ಸಾಮಾನ್ಯಜನರ ಸಂತತವಾದ ಶ್ರಮದ ಫಲದಿಂದ.

ಕುಡಿದ ನೀರು ಅಲ್ಲಾಡದೆ ಇರುವ ಹಾಗೆ ಸುಖವಾಗಿರಬೇಕೆಂಬುದೇ ಮನುಷ್ಯನ ಆಸೆ. ನೈಸರ್ಗಿಕವಾದ ಪ್ರವೃತ್ತಿ ಹೀಗಿರುವಾಗ ಮೈ ಬಗ್ಗಿಸಿ ಕೆಲವು ಮಾಡಬೇಕಾದರೆ ಏನಾದರೂ ಬಯಕೆ, ದರದು ಬೇಕು. ದರದು ಎಷ್ಟು ಅತುರವೋ ಅಷ್ಟೇ ಚುರುಕಾಗಿ ಕೆಲಸ ನಡೆಯುತ್ತದೆ. ಈಕ್ಷಣ ಏನುಬೇಕು ಎನ್ನುವುದೇ ಮುಖ್ಯವಾದ ಪ್ರಶ್ನೆ. ಶತ್ರುಗಳು ನುಗ್ಗುವರು. ಕೋಟೆಯನ್ನು ಊರ ಸುತ್ತ ಕಟ್ಟಬೇಕು. ಕೋಟೆಯ ಹೊರಗಡೆ ಕಂದಕಬೇಕು. ಕಂದಕದಲ್ಲಿ ನೀರನ್ನು ತುಂಬಬೇಕು. ಬೇಕು, ಬೇಕು—ಎಂದು ಮಂತ್ರವನ್ನು ಜಪಿಸುತ್ತಾ ಆವಶನಾಗಿ ಊರಿನವರನ್ನೆಲ್ಲಾ

ಒಟ್ಟುಗೂಡಿಸಿ, ಸಾಮಾನನ್ನು ಜಮಾಯಿಸಿ, ಹಗಲೆನ್ನದೆ, ರಾತ್ರಿಯೆನ್ನದೆ, ಗೋಡೆಯ ಯನ್ನು ಕಟ್ಟಿದ್ದಾಯಿತು. ಹೊರಗಡೆ ಕಂದಕವನ್ನೂ ಅಗೆದದ್ದಾಯಿತು. ಇದನ್ನು ತಂತ್ರವೆನ್ನಬಹುದು. ಅಗೆಯುವುದಕ್ಕೆ, ಕಂದಕದೊಳಕ್ಕೆ ನೀರು ತುಂಬುವುದಕ್ಕೆ ಸಲಕರಣೆಗಳು ಬೇಕು ಇದನ್ನು 'ಯಂತ್ರ' ಎನ್ನಬಹುದು. ಕಂದಕದಲ್ಲಿ ನೀರು ತುಂಬಿತು. ಶತ್ರುಗಳ ಭೀತಿ ಸದ್ಯಕ್ಕೆ ತಪ್ಪಿತು ಒಳಗೆ ಯಾರೂ ಬರುವಂತಿಲ್ಲ. ಇದು ಸಿದ್ಧಿ. ಹೀಗೆ ಯಂತ್ರಶಿಲ್ಪದ ಪ್ರತಿಯೊಂದು ಕೃತಿಯಲ್ಲಿಯೂ ಮಂತ್ರ, ತಂತ್ರ, ಯಂತ್ರ, ಸಿದ್ಧಿ, ಈ ನಾಲ್ಕು ಹೆಜ್ಜೆಗಳನ್ನು ಕಾಣಬಹುದು.

ಈಗ ಒಂದು ಜನತೆಯ ಶಿಲ್ಪಕಲೆಗೂ ಇನ್ನೊಂದರ ಕಲೆಗೂ ವ್ಯತ್ಯಾಸಗಳಿರುವುದಕ್ಕೆ ಕಾರಣವನ್ನು ಕಾಣಬಹುದು. ಮಂತ್ರ, ಬಯಕೆ ಏನು ಬೇಕು–ಎನ್ನುವುದೇ ಬೇರೆ. ತಂತ್ರ–ಏನುಬೇಕೋ ಅದನ್ನು ನಿರ್ಮಿಸುವುದಕ್ಕೆ ಸಾಮಗ್ರಿಗಳನ್ನು ಹೇಗೆ ಜೋಡಿಸುವುದು—ಇದೇ ಬೇರೆ. ಯಂತ್ರ, ಒಂದೊಂದು ಕೆಲಸದ ಸಾಧನೆಗೆ ಬೇಕಾಗುವ ಶಕ್ತಿ, ಅದರ ಉಪಯೋಗಕ್ರಮ– ಇದೂ ಬೇರೆ. ಹೀಗೆ ಈ ಮೂರು ಪ್ರತ್ಯೇಕವಾದ ಮೇಲೆ ಸಿದ್ಧಿಯೂ ಬೇರೆ ಯಾಗಬೇಕು.

ಏನು ಬೇಕು ಎಂಬುದನ್ನು ನಿರ್ಧರಿಸುವುದು ಆ ಕಾಲದ ನಾಗರಿಕತೆಗೆ ಸೇರಿದ್ದು. ಒಂದು ದೇಶದಲ್ಲಿ ಒಂದು ದೇವಸ್ಥಾನ ಬೇಕಾಗಬಹುದು. ಮತ್ತೊಂದು ದೇಶದಲ್ಲಿ ಒಂದು ಮದ್ದಿನ ಕಾರ್ಖಾನೆ ಬೇಕಾಗಬಹುದು. ಕಂಡ ಹಾಗೆ ಇವೆರಡಕ್ಕೂ ತಂತ್ರ, ಯಂತ್ರಗಳೇ ಬೇರೆ. ಹೀಗೆ ಶಿಲ್ಪಕಲೆಯ ಮೇಲೆ ನಾಗರಿಕತೆಯ ಹಿಡಿತ ನೇರವಾಗಿದೆ. ಜನದ ಬಯಕೆಗಳು ಯಾವುವೋ ಅವನ್ನು ಸಿದ್ಧಿಸಿಕೊಡುವುದಕ್ಕಾಗಿ ಯಂತ್ರ ಶಿಲ್ಪ ದುಡಿಯಬೇಕಾಗುತ್ತದೆ.

ಪ್ರತಿಯಾಗಿ ನಾಗರಿಕತೆಯ ಮೇಲೂ ಯಂತ್ರಶಿಲ್ಪದ ಪರಿಣಾಮವಿಲ್ಲದೆ ಇಲ್ಲ. ಹೊಗೆ ಬಂಡಿಯ ನಿರ್ಮಾಣವಾದಾಗ ನಾವು ಅನಾದಿಯೆಂದು ತಿಳಿದಿದ್ದ ಎಷ್ಟೋ ಪದ್ಧತಿಗಳಲ್ಲಿ ಒಂದು ಕ್ರಾಂತಿಯೇ ಆಯಿತು. ಎತ್ತು, ಕುದುರೆ, ಇವುಗಳನ್ನು ಬಿಟ್ಟರೆ ದೂರದ ಸಂಚಾರವೇ ನಡೆಯುತ್ತಿರಲಿಲ್ಲ. ಈಗ ಬಂಡಿಗಳ ಮೇಲಿನ ಅವಲಂಬನೆ ಕಡಿಮೆಯಾಗಿದೆ. ಮದ್ದಿನ (Gunpowder) ನಿರ್ಮಾಣವಾದ ಮೇಲೆ ಅನೂಚಾನವಾಗಿ ಬಂದಿದ್ದ ಚತುರಂಗ ಬಲದ ಉಪಯೋಗವೇ ನಿಂತಿತು. ಹಿಂದಿನಿಂದಲೂ ಆಚರಣೆಯಲ್ಲಿದ್ದ ದ್ವಂದ್ವಯುದ್ಧ, ಧನುರ್ಯುದ್ಧ, ಗದಾಯುದ್ಧ, ಈ ಯುದ್ಧ ಕ್ರಮಗಳು ಮಾಯವಾದವು. ಆಮೇಲೆ ಪ್ಯಾರಚೂಟ್, ಏರೋಪ್ಲೇನ್, ಇವು ಬಂದುವು. ಕೋಟೆ ಕೊತ್ತಲಗಳು ಅನಾವಶ್ಯಕ ಮಾತ್ರವೇ ಅಲ್ಲ ಅನಾಹುತಕ್ಕೆ ಕಾರಣಗಳಾಗುವ ಸಂಭವ ಪ್ರಾಪ್ತವಾಯಿತು.

ಯಂತ್ರನಿರ್ಮಾಣದ ಪರಿಣಾಮವಾಗಿ ನಮಗೆ ಸಹಜವಾಗಿ ಕಾಣಬಂದ ಸಂಪ್ರದಾಯಗಳಲ್ಲೂ ವಿಶೇಷ ಬದಲಾವಣೆಗಳಾಗುತ್ತವೆ. ಈಗಂತೂ ನಾವು ಕೂಪ ಮಂಡೂಕಗಳ ಹಾಗೆ ಇರುವುದು ಸಾಧ್ಯವೇ ಇಲ್ಲ. ಇವತ್ತಿನ ವಿಮಾನಯುಗದಲ್ಲಿ

ಇಡೀ ಪ್ರಪಂಚವೇ ನಮಗೆ ತಾಯಿನಾಡಾಗಬೇಕಾಗುತ್ತದೆ. ಜನಾಂಗಗಳ ಮಧ್ಯೆ ಅಡ್ಡಕಟ್ಟೆಗಳಂತೆ ಇರುವ ಭೇದಗಳು ಈ ಪ್ರವಾಹದಲ್ಲಿ ಕೊಚ್ಚಿಹೋಗಬೇಕಾಗುತ್ತವೆ. ಭೂಮಿ, ನೀರು, ಗಾಳಿ, ಬೆಳಕು, ಆಕಾಶ, ಇವೇ ಎಲ್ಲರಿಗೂ ತವರುಮನೆ. ಏಷ್ಯ ಖಂಡವೇ ಬೇರೆ, ಅಮೇರಿಕ ಖಂಡವೇ ಬೇರೆ ಎನ್ನುವ ಹಾಗಿಲ್ಲ.

ಆಕಾಶವಿಮಾನವೆಂಬ ಯಂತ್ರವು ತಂದಿರುವ ಈ ಹೊಸಯುಗದಲ್ಲಿ ನಾವು ಮಾಡಿಕೊಂಡ ಸಂಪ್ರದಾಯಗಳೇ ಅಲ್ಲದೆ ದೇವರೇ ಸೃಷ್ಟಿಸಿರುವ ಶರೀರಧರ್ಮಗಳೂ ಬದಲಾಗಬೇಕಾಗುತ್ತವೆ. ಗ್ರೀನ್‌ಲೆಂಡಿನ ಕೊರೆಯುವ ಚಳಿಯನ್ನೂ, ಸಹರ ಮರು ಭೂಮಿಯ ಉರಿಬಿಸಿಲನ್ನೂ ತಡೆದುಕೊಳ್ಳುವುದಕ್ಕೆ ನಮ್ಮ ಶರೀರವನ್ನು ತಿದ್ದಿಕೊಳ್ಳ ಬೇಕು. ಹೊಸ ಸನ್ನಿವೇಶಗಳಿಗೆ ಒಗ್ಗಿಕೊಳ್ಳಲು ಕಲಿಯಬೇಕು—ಇಲ್ಲವೆ, ಅಳಿಯ ಬೇಕು. ಇಷ್ಟೂ ಒಂದು ವೈಜ್ಞಾನಿಕ ನಿರ್ಮಾಣದ ಫಲ.

ಭೂಗೋಳವನ್ನೇ ಒಂದುಗೂಡಿಸುವ ಸಮಾರಂಭವನ್ನು ಯಶಸ್ವಿಯಾಗಿ ಮಾಡುವುದಕ್ಕೆ ಇನ್ನೂ ಕೆಲವು ಉಪಕರಣಗಳನ್ನು ಯಂತ್ರಶಿಲ್ಪಿ ಕೊಟ್ಟಿದ್ದಾನೆ. ಈಗಾಗಲೇ ಕಡಲಾಚೆ ನಡೆಯುವ ಮಾತು ಕತೆಗಳನ್ನು ಆ ಕ್ಷಣವೇ ರೇಡಿಯೋ ಮೂಲಕ ಎಲ್ಲಿಂದ ಬೇಕಾದರೂ ಕೇಳಬಹುದು. ಟೆಲಿವಿರ್ಷ ಆಗಲೇ ಮಗ್ಗಲು ಮನೆಗೆ ಬಂದಿದೆ. ಇಷ್ಟರಲ್ಲಿಯೇ ಸಾವಿರಾರು ಮೈಲಿಗಳ ಆಚೆ ಇರುವವರೊಂದಿಗೆ ಪಕ್ಕದಲ್ಲಿ ಕುಳಿತು ಸ್ನೇಹಿತನೊಂದಿಗೆ ಮಾತಾಡಿದ ಹಾಗೆ ಮಾತಾಡುವುದು ಸಾಧ್ಯವಾದೀತು. ಜೀವನದಲ್ಲಿ ಎಲ್ಲಿಯೂ ಯಾವ ಕಾಲದಲ್ಲಿಯೂ ಇರದೆ ಇದ್ದ ಚುರುಕು ಬಂದಿದೆ. ಈಗ ಅವರಿಗೆ ಇವರು ಕಾಗದ ಬರೆದು ಜವಾಬು ನೋಡಿಕೊಂಡು ಮತ್ತೆ ಬರೆಯುವಷ್ಟು ಸಾವಕಾಶವನ್ನೂ ಈಗ ತಡೆಯುವ ಹಾಗಿಲ್ಲ. ಜಗಲಿಯ ಮೇಲೆ ಕುಳಿತುಕೊಂಡು ಪಕ್ಕದಲ್ಲಿ ಇರುವವರ ಜೊತೆಯಲ್ಲಿ ಎಷ್ಟು ಸರಾಗವಾಗಿ ಈಗ ಮಾತಾಡುತ್ತೇವೆಯೋ ಅಷ್ಟೇ ಸರಾಗವಾಗಿ ಮಹಾಸಾಗರಗಳ ಆಚೆ ಇರುವವರನ್ನು ನೋಡಿ, ಅವರ ದನಿ ಯನ್ನು ಕೇಳಿ, ಅವರ ಇಂಗಿತವನ್ನು ಅರಿತು, ಯೋಚನೆಮಾಡಿ ಉತ್ತರಕೊಡ ಬಹುದು. ಒಂದು ದೃಷ್ಟಿಯಲ್ಲಿ ಇದು ನಾಗರಿಕತೆಗೆ ಹೆಮ್ಮೆಯ ವಿಚಾರ. ನಾಗರಿಕತೆಗೆ ಈ ತ್ರಾಣ ಎಲ್ಲಿಂದ ಬಂತು ? ನಿಸ್ಸಂಶಯವಾಗಿಯೂ ಇದು ಆ ಮಾಯಾವಿ— ಯಂತ್ರಶಿಲ್ಪಿಯ ಪ್ರಸಾದ.

ಆಯಿತು ಮುಂದೇನು ? ಈ ಯಂತ್ರಸಿದ್ಧಿ, ಇದರಿಂದ ಮಾನವನಿಗೆ ಒದಗಿ ಬಂದ ಅತಿಬಲ, ಇವೇ ಸಭ್ಯತೆಯ ಗುರಿಯೆ ? ಈ ಅತಿಬಲವನ್ನು ಪಳಗಿಸಿ ಹದ್ದಿನಲ್ಲಿಟ್ಟು ಯುಕ್ತವಾದ ರೀತಿಯಲ್ಲಿ ಉಪಯೋಗಿಸುವ ನೀತಿಬಲ ಇರುವುದೆಂದು ಮನುಷ್ಯನ ಇವತ್ತಿನ ಅಂತರರಾಷ್ಟ್ರೀಯ ನಡತೆಯಲ್ಲಿ ಯಾವ ಸೂಚನೆಯನ್ನೂ ಕಾಣುವಹಾಗಿಲ್ಲ. ಹುಚ್ಚುಬಿಟ್ಟ ಅತ್ತೆಯ ಕೈಯಲ್ಲಿನ ಒನಕೆಯ ಹಾಗಿದೆ—ಮಾನ ವನ ಕೈಯಲ್ಲಿರುವ ಈ ಖಡ್ಗ. ಅತ್ತೆಗಳು ಜ್ಞಾನವಾಗಿ ಭತ್ತವನ್ನೇ ಕುಟ್ಟುತ್ತಾರೋ, ಯಾವುದೋ ಅಜ್ಞಜ್ಞಾನದಲ್ಲಿ ತೊಟ್ಟಿಲಲ್ಲಿ ಮಲಗಿರುವ ಮಗುವಿನ ತಲೆಯನ್ನೇ

ಒಡೆಯುತ್ತಾರೋ ಹೇಳುವವರು ಯಾರು ? ನಾಗರಿಕತೆಯು ಪರಿವರ್ತನಕ್ರಮದಲ್ಲಿ ಮುಂದೆ ಸಾಗುವುದೆಂದು ಹಿಂದೆಯೇ ನೋಡಿದ್ದೇವೆ. ಈ ನಾಗರಿಕತೆ ಬಾಳ ಬೇಕಾದರೆ ಅತ್ತಿಗೆ ಹುಚ್ಚು ಸಂಪೂರ್ಣವಾಗಿ ಬಿಡಬೇಕು. ಕೈಯಿಂದ ಒನಕೆಯನ್ನು ಕಸಿದುಕೊಳ್ಳುವುದು ಸಾಧ್ಯವಾಗಲಾರದು. ಇಲ್ಲದಿದ್ದರೆ ವಂಶೋದ್ಧಾರಕನ ನಿರ್ನಾಮ ವಾದೀತು. ಈ ಹುಚ್ಚು ಬಿಡಿಸುವ ಭಾರವೂ ವಿಜ್ಞಾನದ ಪಾಲಿಗೇ ಬರಬೇಕಾಗು ತ್ತದೆ. ವಿಜ್ಞಾನವೇನೋ ಚಿಕಿತ್ಸೆಯನ್ನು ಅರಿತಿದೆಯೆಂದು ತೋರುತ್ತದೆ. ಅದನ್ನು ಬಳಸುವ ಶಕ್ತಿಗಳಿಗೆ ಪಾಶವಬಲವೊಂದೇ ಅಲ್ಲದೆ ನೀತಿ ಬಲವೂ ಅದೃಷ್ಟವಶಾತ್ ಪ್ರಾಪ್ತವಾದರೆ ಇದು ಸಾಧ್ಯವಾಗುತ್ತದೆ. ಇಲ್ಲದಿದ್ದರೆ ಹಿಂದೆ ಬಾಳಿ ಬೆಳೆದು ಅಳಿದ ನಾಗರಿಕತೆಗಳಂತೆ ಇದೂ ಕಣ್ಮರೆಯಾಗುವ ಕಾಲ ಬರಬಹುದು. ಬರದ ಹಾಗೆ ನೋಡಿ ಕೊಳ್ಳುವುದು ಪ್ರತಿಯೊಬ್ಬ ನಾಗರಿಕನ ಕರ್ತವ್ಯ. ಕಾಲಗರ್ಭದಲ್ಲಿ ಏನಿದೆಯೋ ? 'ಸರಸ್ವತೀ ಶ್ರುತಮಹತಾಂ ಮಹೀಯತಾಂ' ಇದು ಭಾರತದ ರಾಷ್ಟ್ರಕವಿಕಾಳಿ ದಾಸನ ಆಸೆ. 'ಸ್ವಾರ್ಥವಿಲ್ಲದ ಪಂಡಿತ ವೈಜ್ಞಾನಿಕರ ಮಾತು ನಡೆಯಲಿ.'

ಎಚ್. ಸಿ. ಕಪಿನೀಪತಿಭಟ್ಟ.

# ಸಹನೆ

ಸಹನೆ ಇಲ್ಲದಿರುವುದೇ ಜಗತ್ತಿನ ಇಂದಿನ, ಏಕೆ, ಹಿಂದಿನ ಎಲ್ಲ ಸಮಸ್ಯೆಗಳಿಗೂ ಸಮರಗಳಿಗೂ ಮೂಲ ಕಾರಣ. ವರ್ಣದ್ವೇಷದ ಬೇರು, ಅಸಹನೆ. ಶತಮಾನಗಳಿಂದ ಅದು ಏಷ್ಯ ಆಫ್ರಿಕ ಅಮೇರಿಕ ಯೂರೋಪ್ ಆಸ್ಟ್ರೇಲಿಯಾ ಖಂಡಗಳಲ್ಲಿ ಕಾಣಿಸಿಕೊಂಡಿದೆ. ನೀಗ್ರೋ ಜನರು ಮಾನವ ಪ್ರಾಣಿಗಳೇ ಅಲ್ಲ ಎಂದು ಸಾಧಿಸುವ ಸಾಹಸಕ್ಕೂ ಅಮೇರಿಕದ ಶಾಸ್ತ್ರಜ್ಞರನ್ನು ಅದು ಕೆರಳಿಸಿದೆ. ಕರಿಯ ಜನರು ಬಿಳಿಯ ಜನರೊಂದಿಗೆ ಕೂಡಿ ಬಾಳುವುದಕ್ಕೂ ಅನರ್ಹರು, ಎಂದು ಡಾ. ಮಲಾನರು ಇಂದು ದ. ಆಫ್ರಿಕದಲ್ಲಿ ವಾದಿಸಿ ಮನ್ನಣೆ ಪಡೆಯುತ್ತಿದಾರೆ. ಲೀಗ್ ಆಫ್ ನೇಷನ್ಸ್ ಸಂಸ್ಥೆಯ ಮೂಲಕ ವರ್ಣದ್ವೇಷವನ್ನು ತೊಡೆದು ಹಾಕಬೇಕೆಂದು ಪ್ರಯತ್ನಿಸಿದ ಜಪಾನೀಯರಿಗೆ ಆ ಉದ್ಯಮದಲ್ಲಿ ಸೋಲಾದುದೇ, ಅವರನ್ನು ಎರಡನೆಯ ಮಹಾಯುದ್ಧಕ್ಕೆ ಪ್ರೇರೇಪಿಸಿದ ಕಾವಿಗೆ ಕಾರಣ. ಅನ್ಯಮತೀಯರೊಂದಿಗೆ ಒಂದೇ ರಾಷ್ಟ್ರದಲ್ಲಿರಲು ಸಹನೆ ಇಲ್ಲದ್ದರಿಂದಲೇ, ಮುಸ್ಲಿಮರು ಪಾಕಿಸ್ತಾನವನ್ನು ಬೇಡಿದ್ದು; ಭಾರತವನ್ನು ಒಡೆದು, ತಮ್ಮದೇ ಆದ ಒಂದು ಭಾಗವನ್ನು ಪ್ರತ್ಯೇಕಿಸಿದ್ದು. ಲಾಟಿನ್ ಭಾಷೆಯ ಕ್ರೈಸ್ತಧರ್ಮ ಗ್ರಂಥಗಳನ್ನು ಪೂಜ್ಯವೆಂದು ಭಾವಿಸಿದವರಿಗೆ, ಗ್ರೀಕ್ ಭಾಷಾಂತರದ ಅದೇ ಕ್ರೈಸ್ತ ಗ್ರಂಥಗಳು ಅಷ್ಟೇ ಪೂಜ್ಯವೆಂಬ ಸಹನೆ ಇಲ್ಲದೆ, ಯೂರೋಪ್ ಖಂಡ, ಮತೀಯ ದೃಷ್ಟಿಯಿಂದ, ಎರಡು ತುಂಡಾಯಿತು. ತಮ್ಮ ಮತವೇ ಸರಿ, ಅದೇ ಶ್ರೇಷ್ಠ ; ಅದನ್ನನುಸರಿಸದೆ ಇರುವವರೆಲ್ಲ ಅದನ್ನು ಅಲ್ಲಗಳೆಯುವರು, ಅಂಥವರೊಂದಿಗೆ ಸಂಪರ್ಕ ಕೂಡದು, ಅಂಥವರ ದುರಹಂಕಾರವನ್ನು ಸದೆಬಡಿಯಬೇಕು, ಎಂಬ ಅಸಹನೆಯಿಂದಲೇ, ನೂರಾರು ದೇಶಗಳಲ್ಲಿ ರಕ್ತದ ಕೋಡಿ ಹರಿದು, ಮಾರಿಗೌತಣವಾಗಿರುವುದು. ಈಚೆಗಂತೂ, ಯಾವ ಆರ್ಥಿಕ ತಳಹದಿಯ ಮೇಲೆ ರಾಷ್ಟ್ರವನ್ನು ಸುಭದ್ರವಾಗಿ ಸುಪುಷ್ಟವಾಗಿ ಸಂಪದ್ಯುಕ್ತವಾಗಿ ಕಟ್ಟಬೇಕು, ಎಂಬ ಸಮಸ್ಯೆಗೆ, ಎರಡು ಮೂರು ಬಗೆಯ ಮಾರ್ಗಗಳು ಅಲ್ಲಲ್ಲಿ ರೂಢಿಗೆ ಬಂದು ಆ ಮಾರ್ಗಗಳೇ ಮತಗಳಂತೆ ಪ್ರಭಾವ ಬೀರ ತೊಡಗಿವೆ. ಬೇರೆ ಬೇರೆ ಮಾರ್ಗಗಳಿಂದ ಒಂದೇ ಗುರಿಯನ್ನು ಸಾಧಿಸಲು ಯತ್ನಿಸುವ ವಿವಿಧ ಜನ ಸಮೂಹಗಳಿಗೆ ಪರಸ್ಪರ ಸಹನೆ ಇಲ್ಲದಿರುವುದೇ ಇಂದಿನ ಮಹಾ ಸಮಸ್ಯೆ.

ಪ್ರೀತಿಗೂ ವೈರಕ್ಕೂ ನಡುವಣ ಮಾರ್ಗವೇ ಸಹನೆ. ನಮ್ಮಂತೆಯೇ ನಡೆಯದ ನುಡಿಯದ ಜನರ ಸಂಪರ್ಕ ನಮಗೆ ಬೇಡವೆನಿಸುತ್ತದೆ, ಇದು ಸ್ವಾಭಾವಿಕ. ನಾವು ತಪ್ಪು ಎಂದು ಭಾವಿಸುವ ಒಂದು ಅಭಿಪ್ರಾಯವನ್ನು ಸರಿ ಎಂದು ನಂಬಿ ಅದರ ಪರ ವಾದಿಸುವವರ ಮಾತು ನಮಗೆ ರುಚಿಸುವುದಿಲ್ಲ, ಇದೂ ಸ್ವಾಭಾವಿಕ. ಆ ನಡೆ ನುಡಿ, ಆ ವಾದ, ನಮ್ಮ ಮನಶ್ಶಾಂತಿಯನ್ನೂ ಪ್ರತಿಷ್ಠೆಯನ್ನೂ ನೆಮ್ಮದಿಯನ್ನೂ ಕಲಕಿ

ಕದಡಿಸುತ್ತವೆ. ಆದ್ದರಿಂದ, ಅವು ನಮ್ಮ ಕೋಪವನ್ನು ಕೆರಳಿಸುತ್ತವೆ ಇಂಥ ಕೋಪವನ್ನು ತಡೆದಿರಿಸುವ ಶಕ್ತಿಯೇ ಸಹನೆ.

'ಲೋಕೋ ಭಿನ್ನರುಚಿಃ' ಎಂಬ ಅರಿವನ್ನು ಪಡೆದವರು, ಭಿನ್ನ ಮತಗಳ ವಾದಕ್ಕೆ ಕಿವಿಗೊಡುತ್ತಾರೆ. ನಮ್ಮ ಅಭಿಪ್ರಾಯದಲ್ಲೂ ತಪ್ಪಿರಬಹುದೆಂದು ಒಪ್ಪುತ್ತಾರೆ. ಸತ್ಯಕ್ಕೆ ಅನೇಕ ಮುಖಗಳಿವೆ, ಅದನ್ನು ನಾವು ಅರಿತ ಬಗೆ ಅಸಂಪೂರ್ಣ, ಇತರರೆಲ್ಲ ದುಷ್ಟರು ಮೂರ್ಖರು ಕುರುಡರು ಅಸಂಬಂಧ ಪ್ರಲಾಪ ಮಾಡುವವರು ಎಂದು ನಂಬ ಕೂಡದು, ಎಂದು ತಿಳಿಯುವುದೇ ಸಹನೆಯ ಲಕ್ಷಣ.

ಆಧುನಿಕ ವಿಜ್ಞಾನ ಶಾಸ್ತ್ರಗಳ ಅಭ್ಯಾಸಿಗಳಿಗೆ ಈ ಸಹನಾ ಮನೋಭಾವ ಚಿರಪರಿಚಿತ. 'ಇದೇ ಸತ್ಯ! ಇಷ್ಟೇ ಸತ್ಯ!' ಎಂದು ಯಾವ ವಿಜ್ಞಾನಿಯೂ ಹೇಳುವಂತಿಲ್ಲ. ಈವರೆಗಿನ ಸಂಶೋಧನೆಗಳನ್ನೂ ಈ ರೀತಿಯ ಅಭಿಪ್ರಾಯಗಳು ಇಂಥಿಂಥ ಸನ್ನಿವೇಶಗಳನ್ನೂ ಸಂಘಟನೆಗಳನ್ನೂ ಸಮರ್ಪಕವಾಗಿ ವಿವರಿಸುತ್ತವೆ, ನನ್ನ ಮತ್ತು ಇಂಥಿಂಥ ಸನ್ನಿವೇಶಗಳನ್ನೂ ಸಂಘಟನೆಗಳನ್ನೂ ಸಮರ್ಪಕವಾಗಿ ವಿವರಿಸುತ್ತವೆ, ನನ್ನ ಮತ್ತು ಇತರ ನಿಷ್ಪಕ್ಷಪಾತ ಮನೋಭಾವದವರಿಗೆ ಈ ಅರ್ಥ ಸಮಂಜಸವಾಗಿ ತೋರುತ್ತದೆ, ಎಂದು ಮಾತ್ರ ಆತ ಹೇಳಬಲ್ಲ. ನಾಳೆ, ಹೊಸ ಸಂಶೋಧನಾ ಮಾರ್ಗವೊಂದರ ಪ್ರಭಾವದಿಂದ, ವಸ್ತು ಸಂಚಯ ಒಂದರ ನಿರ್ಮಾಣದಿಂದ ಹೊಸ ತತ್ವವೊಂದು ಹೆಚ್ಚು ಸಮಂಜಸವಾಗಿ ಕಂಡು ಬಂದರೆ, ಇಂದಿನ ಈ ಅಭಿಪ್ರಾಯವನ್ನು ತ್ಯಜಿಸುವುದಕ್ಕೂ ಆತ ಸಿದ್ಧನಿರಬೇಕು. ಇದುವರೆಗೆ ದೊರೆತಿರುವ ನಿದರ್ಶನಗಳ ಸಾಮಗ್ರಿಯಿಂದ, ಇಂದು, ಈ ತತ್ವ ಸರಿ ಎನಿಸುತ್ತಿದೆ, ಎಂದಲ್ಲದೆ, ಅದಕ್ಕಿಂತ ಹೆಚ್ಚು ಖಂಡಿತವಾಗಿ ವಾದ ಹೂಡುವ ವೈಜ್ಞಾನಿಕರನ್ನು ಮೂರ್ಖರೆಂದೇ ಹೇಳಬೇಕಾಗುತ್ತದೆ. ತೆರೆದ ಮನ, ತಗ್ಗಿದ ತಲೆ, ವಿಶಾಲವಾದ ಹೃದಯ, ಸುತ್ತ ಹರಿವ ಕಣ್ಣು, ಇವು ಸಹನೆ ಇರುವವರ ಕುರುಹುಗಳು.

ಆದರೆ, ಇಂತಹ ಮನೋಭಾವವನ್ನು ಪಡೆಯುವುದೂ, ಬೆಳೆಸಿಕೊಳ್ಳುವುದೂ, ಉಳಿಸಿಕೊಳ್ಳುವುದೂ ಶ್ರಮಸಾಧ್ಯ. ಚಿಕ್ಕಂದಿನಿಂದಲೂ, ನಮಗೆಲ್ಲರಿಗೂ ಇತರ ಮತಗಳ ಮೇಲೂ ಜನಾಂಗಗಳ ಮೇಲೂ, ಹಿರಿಯರ ಸಹವಾಸದಿಂದ ಹಲವು ದ್ವೇಷಾಸೂಯೆಗಳೂ ಖಂಡಿತಾಭಿಪ್ರಾಯಗಳೂ ರೂಢವಾಗಿ ಬಿಡುತ್ತವೆ. ಅನುಮಾನಕ್ಕೆ ಆಸ್ಪದವಿಲ್ಲದೆ, ಅಲುಗಾಡಿಸಲು ಸಾಧ್ಯವಾಗದೆ, ಅವು ಬೇರು ಬಿಟ್ಟಿರುತ್ತವೆ. ಕಳಿಂಗರೂ, ಬಂಗಾಳಿಗಳು, ತುರುಷ್ಕರು, ಜಪಾನೀಯರು, ಬಿಳಿಯವರು, ಎಂದು ಕೇಳಿದಾಗಲೇ, ಆಯಾ ಜನರ ಯಾವುದೋ ಒಂದು ಚಿತ್ರ ನಮ್ಮ ಕಣ್ಣೆದುರಿಗೆ ನಿಲ್ಲುತ್ತವೆ. ಅಂಥ ಚಿತ್ರಗಳು, ವಿಚಾರದ ಶ್ರಮದಿಂದ ನಮ್ಮನ್ನು ಪಾರುಮಾಡುತ್ತವೆ, ಸರಿ! ಆದರೂ, ಮುಂದೆ, ಆ ಚಿತ್ರಗಳನ್ನು ತಿದ್ದಬೇಕಾದ ಅವಕಾಶ ದೊರೆತಾಗ, ಅವಶ್ಯಕತೆ ತೋರಿದಾಗ, ನಾವು ಅದಕ್ಕೆ ಸಿದ್ಧರಾಗುವುದಿಲ್ಲ. ಏಕೆಂದರೆ, ಬಹು ದಿವಸದ ಬಳಕೆಯಿಂದ ನಮಗೆ ಆ ಚಿತ್ರಗಳು ಮೋಹಕವಾಗಿ ಕಾಣಿಸುತ್ತವೆ;

ಚಿಕ್ಕಂದಿನಲ್ಲಿ ನಾವು ಪಡೆದ ಅಜ್ಞಾನವೇ ನಮಗೆ ಪ್ರಿಯವಾಗುತ್ತದೆ. ಆ ಆಸ್ತಿಯನ್ನು ಬಿಸುಟು, ಹೊಸಜ್ಞಾನ ಧನವನ್ನು ಪಡೆಯುವ ಸಾಹಸದಿಂದ ನಾವು ಹಿಂಜರಿಯುತ್ತೇವೆ. ನಮ್ಮ ಭಾಷೆಯೇ ಕಿವಿಗಿಂಪು, ಅದರ ಲಿಪಿಯೇ ಅತ್ಯಂತ ಸುಂದರ ಹಾಗೂ ಹಾಗೂ ಶಾಸ್ತ್ರೀಯ, ನಮ್ಮ ಆಹಾರ ಪದ್ಧತಿಯೇ ಅತ್ಯಂತ ಪುಷ್ಟಿದಾಯಕ, ನಮ್ಮ ಕೋಮೇ ಅತ್ಯಂತ ಸಭ್ಯ, ನಮ್ಮ ದೇಶವೇ ಜಗತ್ತಿಗೆ ಗುರು, ಮಾರ್ಗದರ್ಶಕ— ಎಂಬಿವೇ ಮುಂತಾದ ಅಭಿಪ್ರಾಯಗಳನ್ನು, ಅವು ಎಷ್ಟುಮಟ್ಟಿಗೆ ನಿರಾಧಾರ ಎಷ್ಟುಮಟ್ಟಿಗೆ ಸರಿ, ಎಂದು ವಿವೇಚಿಸುವುದಕ್ಕೂ ನಾವು ಹೆದರುವೆವು. ವಿವೇಚಿಸಿದರೆ, ಎಲ್ಲಿ ನಮ್ಮ ಸ್ವಾಭಿಮಾನಕ್ಕೆ ಚ್ಯುತಿ ಬರುವುದೋ, ಎಲ್ಲಿ ನಾವು ಪರರಿಗೆ ತಲೆಬಾಗಬೇಕೋ,ಎಂಬ ಅಂಜಿಕೆ ನಮಗೆ. ಇತರರೂ ಸಭ್ಯರು, ಇತರರ ನುಡಿಗಳೂ ಲಿಪಿಗಳೂ ಆದರಣೀಯ, ಇತರ ದೇಶಗಳೂ ಹಲವಾರು, ಕಾರಣಗಳಿಂದಾಗಿ ಪೂಜನೀಯ, ಎಂದು ಒಪ್ಪಿಕೊಳ್ಳಲು ಸಹನೆ ಅತ್ಯಗತ್ಯ.

ಪ್ರೀತಿಗೌರವಗಳು,ಮನಶ್ಶಾಂತಿಗೆ ಎಷ್ಟು ಉಪಯುಕ್ತವೋ, ದ್ವೇಷ ವೈರಗಳೂ ಅಷ್ಟೇ ಉಪಯುಕ್ತ. ದ್ವೇಷಕ್ಕೂ ವೈರಕ್ಕೂ ಅವಕಾಶವನ್ನೇ ಕೊಡದ, ಗೃಹಜೀವನ, ಸಾಮಾಜಿಕ ಜೀವನದಲ್ಲಿ ಬಾಳಬೇಕಾಗಿ ಬಂದವರು, ಇತರ ಮನೆಯವರನ್ನೂ ಇತರ ಕುಲದವರನ್ನೂ ಇತರ ದೇಶದವರನ್ನೂ ಅಸಹನೆಯಿಂದ ಕಾಣುತ್ತಾರೆ. ಅಂದರೆ, ತಂದೆತಾಯಿ ಅಣ್ಣತಮ್ಮ ನಂಟರಿಷ್ಟರು ಗುರುಹಿರಿಯರು ಇವರಲ್ಲಿ ತಪ್ಪು ಕಂಡಾಗ, ಅದನ್ನು ಧರ್ಮದ ಕಟ್ಟಿನಿಂದಲೋ ಮರ್ಯಾದೆಯ ಮುಸುಕಿನಿಂದಲೋ ಶಿಷ್ಟಾಚಾರದ ಶಿಸ್ತಿನಿಂದಲೋ, ಸಭ್ಯರೀತಿಯಿಂದಲಾದರೂ, ಹೊರಗಡೆ ಹಲವಕಾಶವಿಲ್ಲದೆ, ಅಂತರಂಗದಲ್ಲೇ ಅದುಮುಬೇಕಾಗಿ ನಿರ್ಬಂಧಿಸುವ ಸಮಾಜದಲ್ಲಿ ಬೆಳೆದರೆ, ಅಂತಹವರು ಪರಮತ ಪರರಾಷ್ಟ್ರಗಳ ಮೇಲೆ ತಮ್ಮ ದ್ವೇಷ ವೈರಗಳನ್ನು ತಿರುಗಿಸಿ ತೃಪ್ತಿಪಡೆಯುತ್ತಾರೆ ಎಂದು ಮನಶ್ಶಾಸ್ತ್ರಜ್ಞರೂ ಹೇಳುತ್ತಾರೆ. ಪ್ರಜಾಪ್ರಭುತ್ವ ಪದ್ಧತಿಯಲ್ಲಿ, ವಿಮರ್ಶಾತ್ಮಕ ಟೀಕೆಗೂ ವಿನೋದಾತ್ಮಕ ಕೀಟಲೆಗಳಿಗೂ ಹರಟೆಗೂ ಕುಹಕ ನುಡಿಗಳಿಗೂ, ಅವಕಾಶ ದೊರೆಯುವುದರಿಂದ ಅಂಥ ವ್ಯವಸ್ಥೆಯಲ್ಲಿ ಶಿಕ್ಷಿತರಾದವರು ಹೆಚ್ಚು ಸಹನೆಯಿಂದ ವರ್ತಿಸುತ್ತಾರೆ ಎಂಬುದು ಅವರ ಮತ.

ಪ್ರೀತಿ ಗೌರವಗಳನ್ನು ಬಲವಂತದಿಂದಲೂ ಭಯೋತ್ಪಾದನೆಯಿಂದಲೂ ಪಡೆಯುವ ವಾತಾವರಣದಲ್ಲಿ ಬೆಳೆದರೆ, ವಿರಸನೀರಸಗಳನ್ನು ವಿನೋದರೂಪದಲ್ಲಾಗಲಿ, ವಿಮರ್ಶೆಯರೂಪದಲ್ಲಾಗಲಿ ಹೊರಗೆಡಹಲು ಅವಕಾಶವಿಲ್ಲದ ಶಿಕ್ಷಣಕ್ರಿಯ ಆಡಳಿತ ಕ್ರಮಗಳಿಗೊಳಪಟ್ಟರೆ, ಅಂಥವರು ದ್ವೇಷ ವೈರಗಳನ್ನು ಅಸಹನೆಯ ಮೂಲಕವೇ, ಇತರ ಪ್ರಾಂತದವರ ಮೇಲಾಗಲಿ ಇತರ ಧರ್ಮದ ಮೇಲಾಗಲಿ ಪ್ರದರ್ಶಿಸುತ್ತಾರೆ.

ಭಯಗ್ರಸ್ತರಿಗೆ ಅಸಹನೆ ಹೆಚ್ಚು. ಅವನಿಗೆ ಎಲ್ಲೆಲ್ಲೂ ಶತ್ರುಗಳೇ ಕಾಣಿಸುತ್ತಾರೆ. ತಮ್ಮ ತತ್ವಗಳಲ್ಲಿ ಹುಳುಕುಗಳಿವೆ ಎಂದು ತಿಳಿದರೆ ಎಲ್ಲಿ ಅವುಗಳಲ್ಲಿ

ನಂಬಿಕೆ ಕಡಮೆಯಾಗುತ್ತದೋ ಎಂಬ ಕಾರಣದಿಂದ, ಅವರು ಒರೆಗಲ್ಲಿಗೆ ಹೆದರು ತ್ತಾರೆ. 'ವಾದೇ ವಾದೇ ಜಾಯತೇ ತತ್ವಬೋಧಃ'ಎಂಬುದನ್ನು ಮರೆತು, ವಾದಕ್ಕೂ ಕೂಡ ಅವರು ಹಿಂಜರಿಯುತ್ತಾರೆ. ಅಥವಾ, ವಾದದಲ್ಲಿ ಕೀಳು ಪಟ್ಟುಗಳನ್ನೇ ಉಪ ಯೋಗಿಸಿ ಪ್ರತಿವಾದಿಗಳನ್ನು ಹೀಯಾಳಿಸಿ ದೂಷಿಸಿ ಓಡಿಸುತ್ತಾರೆ. ಇವರು ಮಿತ್ರರು ಇವರು ಶತ್ರುಗಳು, ಮಿತ್ರರಲ್ಲದವರೆಲ್ಲ ಶತ್ರುಗಳು, ಬಿಳಿಯಲ್ಲದ್ದೆಲ್ಲ ಕಪ್ಪು, ತಮ್ಮ ದಲ್ಲದ್ದೆಲ್ಲ ವಿರೋಧ, ಎಂಬ ಕವಲು ಅವರ ವಿಚಾರವನ್ನು ಹೊಕ್ಕಿರುತ್ತದೆ. ಬಿಳಿಗೂ ಕಪ್ಪಿಗೂ ನಡುವೆ, ಹಗಲಿಗೂ ರಾತ್ರಿಗೂ ನಡುವೆ ಇರುವಂತೆ, ಮುಚ್ಚಂಜೆ ನಡುಸಂಜೆ ಕಡುಸಂಜೆಗಳಿರುವಂತೆಯೇ, ಅನೇಕ ತರಹದ ಬಗೆಬಗೆ ಘನದ ಪದರಗಳಿರಬಹು ದೆಂದು ಅವರ ಬುದ್ಧಿ ಒಪ್ಪದು. ಪಾಪಿಗೂ ಒಂದು ಭವಿಷ್ಯ ಉಂಟು, ಸಾಧುವಿಗೂ ಒಂದು ಭೂತಕಾಲವಿತ್ತು, ಎಂದು ಅವರು ಮನಗಾಣರು. ಅದು ಸಹನೆಯ ಲಕ್ಷಣ. ಇಂದಲ್ಲ ನಾಳೆ ಈತ ಮಿತ್ರನಾದಾನು, ಇಂದಲ್ಲ ನಾಳೆ ಪರಿಸ್ಥಿತ ಸುಧಾರಿತವಾದೀತು, ಎಂದು ನಂಬಲು ತಾಳ್ಮೆ ಬೇಕು, ವಿವೇಕಬೇಕು.

ಅಲ್ಲದೆ, ತಮ್ಮ ಸ್ವಂತ ಕುಂದುಕೊರತೆಗಳನ್ನು ಯಾರು ಚೆನ್ನಾಗಿ ಆತ್ಮ ಪರೀಕ್ಷೆಯಿಂದ ಅರಿತಿರುವರೋ ಅವರು ಇತರರ ವಿಷಯದಲ್ಲೂ ಹೆಚ್ಚು ಸಹನೆ ಯಿಂದಿರುತ್ತಾರೆ. ತನ್ನಿಂದ ತಾನೂ ತುಸು ಬೇರೆಯಾಗಿ ನಿಂತು, ವಿವೇಚಿಸಿದರೆ, ತನ್ನ ತಪ್ಪುಗಳೆಲ್ಲ ತನಗೆ ವೇದ್ಯವಾಗುತ್ತದೆ. ಹಾಸ್ಯಪ್ರಕೃತಿ ಇರುವ ಪುಣ್ಯವಂತರಿಗೆ ಈ ಅಭ್ಯಾಸ ಉಂಟು. ಅದರಿಂದ, ಅವರು ಎಲ್ಲರನ್ನೂ ಸಹಾನುಭೂತಿಯಿಂದ ಅವ ಲೋಕಿಸುತ್ತಾರೆ. 'ನಾನು ಹಿಡಿದ ಕುದುರೆಗೆ ಕೊಂಬು ನಾಲ್ಕು' ಎಂದು ಅವರು ಎಂದಿಗೂ ವಾದಿಸುವುದಿಲ್ಲ. ಹಾಗೆ ಬೇರೊಬ್ಬರು ವಾದಿಸಿದಾಗ, ಅವರ ಆ ಘೋಷ ಣೆಯ ಹಿಂದಿನ ಹಟ, ತಿಳಿಗೇಡಿತನ ತುಂಟಜಂಬ ಇವುಗಳನ್ನು ನೋಡಿ, ಅವರು ನಗುತ್ತಾರೆ, ಅಷ್ಟೆ; ಕ್ರೋಧ ತಾಳುವುದಿಲ್ಲ. ' ಅಯ್ಯೋ, ಮಂಕೆ ! ಇಂಥ ಕೆಸರಿನಲ್ಲಿ ಬಿದ್ದು ಒದ್ದಾಡುತೀಯಾ ! ' ಎಂದು ಪರಿತಪಿಸುತ್ತಾರೆ. ಮೂಢರನ್ನೂ ಮೂರ್ಖ ರನ್ನೂ ಧೂರ್ತರನ್ನೂ ಹುಚ್ಚರನ್ನೂ ' ಸಹಿಸು ' ವುದಕ್ಕೆ, ಹಾಸ್ಯದೃಷ್ಟಿ ತುಂಬ ಸಹಾಯಕಾರಿ.

ವಿಚಾರಪರರೆಲ್ಲರೂ ' ಸಹನೆ 'ಯಿಂದಲೇ ವರ್ತಿಸುತ್ತಾರೆ. ಆದರೆ, ತಮ್ಮ ವಿಚಾರಶಕ್ತಿಯನ್ನು ಯಾವುದಾದರೂ ಒಂದು ಗ್ರಂಥಕ್ಕಾಗಲಿ, ಒಬ್ಬ ಗುರುವಿ ಗಾಗಲಿ, ಸಂಸ್ಥೆಗಾಗಲಿ, ಪಕ್ಷಕ್ಕಾಗಲಿ ಒತ್ತೆ ಇಟ್ಟು, ಆರಾಮವಾಗಿ, ಚಿಂತೆಯ ಗೊಂದಲವಿಲ್ಲದೆ ಕುರಿಜೀವನವನ್ನು ನಡೆಸುವವರಿಗೆ ಸಹನೆ ಕಡಮೆ. ವಿಚಾರದ ಬೆಳಕಿನಲ್ಲಿ ವಿಷಯದ ಬಣ್ಣಬಣ್ಣಗಳು ಎದ್ದು ಕಾಣುತ್ತವೆ. ಆ ಬಣ್ಣ ಆತನಿಗೆ ಪ್ರಿಯವಾದರೆ, ಈ ಬಣ್ಣ ನನಗೆ ಪ್ರಿಯ ಎಂಬ ವೈಶಾಲ್ಯ ಉಂಟಾಗುತ್ತದೆ.

' ಪರಮತ ಸಹಿಷ್ಣುತೆ ' ಎಂಬ ಗುಣ ನಮ್ಮ ಅಸಹಾಯತೆಯನ್ನು ವ್ಯಕ್ತ ಪಡಿಸುತ್ತದೆ: ಪರಮತವನ್ನು ನಿರ್ಮೂಲಮಾಡಲಾರೆವು; ಆದ್ದರಿಂದ, ಅದನ್ನು

ಸಹಿಸಬೇಕಾಗಿ ಬಂದಿದೆ ಎಂಬಷ್ಟೇ ಅದರ ಅರ್ಥ. ಬುದ್ಧಿಪೂರ್ವಕವಾಗಿ ಮತಗಳ ವೈವಿಧ್ಯತೆಯನ್ನು ಕಂಡು, ಪರಮತಗಳ ಅಸ್ತಿತ್ವಕ್ಕೆ ಸಂತೋಷದಿಂದ ಅವಕಾಶ ಕೊಡುವುದು, ಇನ್ನೂ ಒಂದು ಹೆಜ್ಜೆ ಮುಂದಿನ ದೃಷ್ಟಿ. ಈ ದೃಷ್ಟಿಯನ್ನು ಪ್ರಪಂಚದ ಅನೇಕ ನಾಗರಿಕ ಜನಸಮುದಾಯಗಳು ಇನ್ನೂ ಪಡೆದಿಲ್ಲ

ಆದರೆ, ಭಾರತ ಸಂಸ್ಕೃತಿ ಇದಕ್ಕೂ ಮುಂದಿನ ಮತ್ತೊಂದು ಮಹಾಸೋಪಾನ ವನ್ನು ಆಗಲೇ, ಎಂದರೆ, ೨೨೦೦ ವರ್ಷಗಳ ಹಿಂದೆಯೇ ನಿರ್ಮಿಸಿ ಬೆಳಗುತ್ತಿದೆ. ಶ್ರೀಮಾನ್ ಕೃಷ್ಣಶಾಸ್ತ್ರಿಗಳವರ ಉತ್ತೇಜನದಿಂದ, ನಾನು ಮೈಸೂರು ವಿಶ್ವ ವಿದ್ಯಾಲಯದ ಕನ್ನಡ ಗ್ರಂಥಮಾಲೆಗಾಗಿ ಬರೆದ 'ಅಶೋಕ' ಎಂಬ ಗ್ರಂಥದಿಂದ, ಅಶೋಕ ಚಕ್ರವರ್ತಿಯ ಹನ್ನೆರಡನೆಯ ಶಿಲಾಫಲಕ ಶಾಸನದ ಭಾಷಾಂತರವನ್ನು, ಅದಕ್ಕೆ ಸಾಕ್ಷಿಯಾಗಿ, ಇಲ್ಲಿ ಉದಹರಿಸಲು ಇಚ್ಛಿಸುತ್ತೇನೆ.

" ...ಸರ್ವ ಪ್ರಕಾರದಲ್ಲೂ ಪರಮತದವರನ್ನು ಪೂಜಿಸಲೇ ಬೇಕು. ಹೀಗೆ ಮಾಡಿದರೆ, ತನ್ನ ಮತವೂ ವರ್ಧಿಸುತ್ತದೆ; ಪರಮತಕ್ಕೂ ಉಪಕಾರವಾಗುತ್ತದೆ. ಅನ್ಯಥಾ ಮಾಡಿದರೆ, ತನ್ನ ಮತಕ್ಕೆ ಹಾನಿ, ಪರಮತಕ್ಕೆ ಅಪಕಾರ. ಏಕೆಂದರೆ, ಆತ್ಮಮತವನ್ನು ಹೇಗೆ ಬೆಳಗಿಸಲಿ ಎಂಬ ಆತುರದಿಂದ ಯಾರು ಅದನ್ನೇ ಪೂಜಿಸಿ ಪರಮತವನ್ನು ಹಳಿಯುತ್ತಾರೋ ಅವರು ತಮ್ಮ ವರ್ತನೆಯಿಂದ ತಮ್ಮ ಮತಕ್ಕೆ ಹೆಚ್ಚು ಹಾನಿಯುಂಟು ಮಾಡುತ್ತಾರೆ."

ಎಂಥ ಉದಾರವಾದ ದೃಷ್ಟಿ ! ಮತಗಳಿಗೆಲ್ಲ ಪೂಜೆ ! ಅದು ತಮ್ಮದಾಗಿರಲಿ, ಇತರರದಾಗಿರಲಿ ! ಒಟ್ಟು ಎಲ್ಲ ವಿಚಾರಗಳಿಗೂ ಎಲ್ಲ ತತ್ವಗಳಿಗೂ ಎಲ್ಲ ಧರ್ಮ ಗಳಿಗೂ ಎಲ್ಲರಿಂದಲೂ ಪುರಸ್ಕಾರ ! ...ಇಂತಹ ಆರೋಗ್ಯದಾಯಕವಾದ ಇಂತಹ ಗಾಳಿ ಬೆಳಕುಗಳಲ್ಲೇ ಸತ್ಯ ಪರಿಪುಷ್ಟವಾಗಿ ಬೆಳೆಯುವುದು.

ಸಹನೆಯನ್ನೂ ಮೀರಿದ ಮಹಾಸ್ವಾತಂತ್ರ್ಯ ಇದು. ಇದು ನಮ್ಮ ಪೂರ್ವಾರ್ಜಿತ ಸ್ವತ್ತು. ಆದರೆ, ನಮ್ಮಲ್ಲಿ ಅನೇಕರು ಇನ್ನೂ ಈ ಸಹನೆಯನ್ನೇ ಸಾಧಿಸಿಕೊಂಡಿಲ್ಲವೆಂಬುದು ಶೋಚನೀಯ. ಪರಮತಗಳನ್ನು ಗೌರವಿಸಿ, ಅವುಗಳ ಅಸ್ತಿತ್ವವನ್ನು ಉಳಿಸಿ, ಅವುಗಳನ್ನು ಪೂಜಿಸುವುದೇ ನಮ್ಮ ಧರ್ಮ, ಎಂದು ಘೋಷಿ ಸಿದ ನಾಡು, ಭಾರತ.

*   *   *   *   *

ಶ್ರೀ ಕೃಷ್ಣಶಾಸ್ತ್ರಿಗಳು ತಮ್ಮ ಲೇಖನಗಳ ಮೂಲಕ, ಭಾಷಣಗಳ ಮೂಲಕ, ದಿನದಿನವೂ ತಮ್ಮ ಗೆಳೆಯರೊಂದಿಗೂ ಶಿಷ್ಯರೊಂದಿಗೂ ಆಡುತ್ತಿದ್ದ ಸರಸ ಸಂಭಾಷಣೆಗಳ ಮೂಲಕ ಈ ಚೇತನವನ್ನೇ ತುಂಬುತ್ತಿದ್ದರು. ಇನ್ನೂ ಅನೇಕ ವರ್ಷಗಳ ಕಾಲ ಅವರು ಈ ಸೇವೆಯನ್ನು ನಾಡಿಗೂ ನುಡಿಗೂ ತುಂಬಲಿ ಎಂಬುದೇ ನನ್ನ ಬಯಕೆ.

**ನಾ. ಕಸ್ತೂರಿ.**

# ಸಂಸ್ಕೃತಿ ವಿವೇಚನೆ

ಸಂಸ್ಕೃತಿಯ ವಿವೇಚನೆಗೆ ತೊಡಗುವ ಮೊದಲು ಸಂಸ್ಕೃತಿ ಎಂಬ ಪದವನ್ನು ನಾವು ಯಾವ ಅರ್ಥದಲ್ಲಿ ಬಳಸಬೇಕು ಎಂಬುದರ ಸ್ಥೂಲಮಾನವಾದ ವಿಚಾರ ವನ್ನಾದರೂ ಸ್ಪಷ್ಟಪಡಿಸಿಕೊಳ್ಳಬೇಕು. ಈ ಶಬ್ದವನ್ನು ಅನೇಕರು ಅನೇಕ ಅರ್ಥ ಗಳಲ್ಲಿ—ಒಮ್ಮೊಮ್ಮೆ ಪರಸ್ಪರ ವಿರುದ್ಧಾರ್ಥಗಳಲ್ಲಿ—ಬಳಸುತ್ತಿದ್ದಾರೆ. ಕೆಲವು ವೇಳೆ ಅಪಹಾಸ್ಯಕರವಾದ ರೀತಿಯಲ್ಲಿಯೂ ಅಪಾಯಕರವಾದ ರೀತಿಯಲ್ಲಿಯೂ ಈ ಪದದ ಪ್ರಯೋಗವಾದದ್ದನ್ನು ಕಾಣುತ್ತೇವೆ. ರಾಷ್ಟ್ರವಾದಿಗಳು, ಭಾಷಾಭಿಮಾನಿಗಳು, ಪ್ರಾದೇಶಿಕ ಮುಖಂಡರು, ಮತನಿಷ್ಠರು, ಜಾತೀಯತೆಯ ಪುರಸ್ಕೃತರೇ ಮೊದ ಲಾದವರು ಸಂಸ್ಕೃತಿ(?)ಯ ಹೆಸರಿನಲ್ಲಿ ತಮ್ಮ ತಮ್ಮ ವಿಚಾರಗಳನ್ನು ಮಂಡಿಸುತ್ತಾರೆ. ಹಿಂದೂ ಸಂಸ್ಕೃತಿ, ವೀರಶೈವ ಸಂಸ್ಕೃತಿ; ಕರ್ನಾಟಕ ಸಂಸ್ಕೃತಿ, ಮಹಾರಾಷ್ಟ್ರ ಸಂಸ್ಕೃತಿ, ಕನ್ನಡ ಸಂಸ್ಕೃತಿ, ಕೊಂಕಣಿ ಸಂಸ್ಕೃತಿ; ಪಟ್ಟಣ ಸಂಸ್ಕೃತಿ, ಹಳ್ಳಿಯ ಸಂಸ್ಕೃತಿ; ಇವೇ ಮುಂತಾಗಿ ಅನೇಕ ಪ್ರಕಾರದ ಸಂಸ್ಕೃತಿಗಳ ಉಲ್ಲೇಖವು ಬಳಕೆ ಯಲ್ಲಿದೆ. ಆದರೆ ಇಂಥ ಪ್ರಸಂಗಗಳಲ್ಲಿ ಈ ಶಬ್ದವನ್ನು ಬಳಸುವಾಗ ಒಂದು ಬಗೆಯ ವಿಚಾರದ ಗೊಂದಲವಿದ್ದಂತೆ ತೋರುತ್ತದೆ. ಈ ಪದದ ಅರ್ಥವು ಇನ್ನೂ ನಿಶ್ಚಿತ ನಾಗಿಲ್ಲವೇನೋ. ಇಷ್ಟು ಪ್ರಚಾರದಲ್ಲಿರುವ ಪದದ ನಿಶ್ಚಿತಾರ್ಥವನ್ನು ಮಾಡಿಕೊಂಡು ಆಮೇಲೆ ಅದನ್ನು ಬಳಸುವದು ವಿಚಾರವಂತರೆಲ್ಲರ ಕರ್ತವ್ಯವಾಗಿದೆ. ಇಲ್ಲವಾದರೆ, ನಮ್ಮ ವಿಚಾರದಲ್ಲಿ ಅಸ್ಪಷ್ಟತೆ, ಅಸಮಂಜಸತೆ, ಅಸಂಬದ್ಧತೆಗಳು, ತಲೆದೋರುತ್ತವೆ. ನಮ್ಮ ದೇಶದ ಹಾಗು ಪಾಶ್ಚಾತ್ಯ ರಾಷ್ಟ್ರಗಳ ಹಲವರು ವಿದ್ವಾಂಸರು ಸಂಸ್ಕೃಯ ವಿವರಣೆಯನ್ನು ಕೊಡಲು ಯತ್ನಿಸಿದ್ದಾರೆ. ಕೆಲವರು ಇದರ ವ್ಯಾಖ್ಯೆಯನ್ನು ಮಾಡುವ ಸಾಹಸವನ್ನೂ ತೋರಿದ್ದಾರೆ. ಇಲ್ಲಿ ಕೆಲವನ್ನು ಪರಾಮರ್ಶಿಸಿ ನನ್ನ ದೃಷ್ಟಿ ಯಲ್ಲಿ ಸಂಸ್ಕೃತಿಯೆಂದರೇನೆಂಬುದನ್ನು ವಿವರಿಸಲು ಯತ್ನಿಸುತ್ತೇನೆ.

ಸಂಸ್ಕೃತಿ ಎಂಬ ಶಬ್ದವೇ ತೀರ ಇತ್ತೀಚೆಗೆ–ಎಂದರೆ, ಭಾರತಕ್ಕೆ ಆಂಗ್ಲ ಭಾಷೆಯ ಸಂಪರ್ಕವಾದ ಮೇಲೆ ಪ್ರಚಾರದಲ್ಲಿ ಬಂದ ಪದವೆಂದು ಹೇಳಿದರೆ ಅನೇಕರಿಗೆ ಆಶ್ಚರ್ಯವಾಗಬಹುದು. ಈ ಶಬ್ದವು ಕಿವಿಯಮೇಲೆ ಬಿದ್ದಾಗ, ಇದೊಂದು ಬಹು ಪುರಾತನ ಪರಂಪರೆಯ, ಶಬ್ದವಿರಬೇಕೆಂದು ಭಾಸವಾಗುತ್ತದೆ. ಸಂಸ್ಕೃತ ಕೋಶ ಗಳನ್ನು ತೆಗೆದು ನೋಡಿದರೆ ' ಸಂಸ್ಕೃತಿ ' ಎಂಬ ಶಬ್ದವೇ ಸಿಕ್ಕುವುದಿಲ್ಲ. ಯಾವ ಸಂಸ್ಕೃತ ಗ್ರಂಥಗಳಲ್ಲಿಯೂ ಈ ಶಬ್ದವು ಬಂದಂತಿಲ್ಲ. ' ಸಂಸ್ಕಾರ ' ಎಂಬ ಪದ ವುಂಟು. ' ಸಂಸ್ಕೃತ ' ಎಂಬ ಶಬ್ದವುಂಟು. ಆದರೆ ' ಸಂಸ್ಕೃತಿ ' ಎಂಬ ರೂಪ ವನ್ನು ಮಾಡಿಕೊಂಡು, ಒಂದು ವಿಶಿಷ್ಟಾರ್ಥದಲ್ಲಿ ಬಳಸುವದು ಆಧುನಿಕ ಕಾಲದ ಒಂದು ರೂಢಿ. ಆಂಗ್ಲಭಾಷಾ ಸಾಹಿತ್ಯದ ಪ್ರಚಾರದಿಂದ ಹಲವು ಹೊಸ ವಿಚಾರ

ಗಳೂ, ಆ ವಿಚಾರಗಳಿಗನುಗುಣವಾಗಿ ಹೊಸ ಶಬ್ದಗಳೂ, ನಮ್ಮ ದೇಶಕ್ಕೆ ಪರಿಚಿತವಾದವು. ಆಂಗ್ಲಭಾಷೆಯಲ್ಲಿ ಬಳಕೆಯಲ್ಲಿರುವ ಕೆಲವು ಮಹತ್ವದ ಶಬ್ದಗಳಿಗೆ ಪ್ರತಿಯಾಗಿ ನಮ್ಮ ಭಾಷೆಯಲ್ಲಿ ಪದನಿರ್ಮಾಣವಾಗಬೇಕಾಯಿತು. 'Culture' ಎಂಬುದಕ್ಕೆ ಪ್ರತಿಯಾಗಿ 'ಸಂಸ್ಕೃತಿ' ಎಂಬ ಶಬ್ದವನ್ನು ಉಪಯೋಗಿಸುವುದಕ್ಕೆ ಮೊದಲಾಯಿತು. ಇದನ್ನು ಮೊದಲು ಬಳಸಿದವರಾರೆಂಬುದು ತಿಳಿಯದು. ಮೊದಮೊದಲು ಭಾರತದ ಎಲ್ಲ ಪ್ರಾಂತಗಳಲ್ಲಿಯೂ 'Culture' ಶಬ್ದಕ್ಕೆ ಪ್ರತಿಯಾಗಿ 'ಸಂಸ್ಕೃತಿ' ಎಂಬ ಪದವು ಉಪಯೋಗಿಸಲ್ಪಡುತ್ತಿದ್ದಿಲ್ಲ. ಸಭ್ಯತೆ, ನಯ, ನಾಗರಿಕತೆ ಮೊದಲಾದ ಸಂಸ್ಕೃತ ಶಬ್ದಗಳನ್ನು ಬೇರೆ ಬೇರೆ ಕಡೆಗಳಲ್ಲಿ ಉಪಯೋಗಿಸುತ್ತಿದ್ದರು. ಆದರೆ ಇತ್ತೀಚೆಗೆ ಭಾರತದ ಎಲ್ಲ ಭಾಷೆಗಳಲ್ಲಿಯೂ 'ಸಂಸ್ಕೃತಿ' ಎಂಬ ಪದವೇ ರೂಢವಾಗಿದೆ 'ಸಂಸ್ಕೃತಿ' ಎಂಬ ಶಬ್ದವು ನಮ್ಮಲ್ಲಿ ಮೊದಲು ಇದ್ದಿಲ್ಲವಾದ್ದರಿಂದ ಸಂಸ್ಕೃತಿಯೇ ಇದ್ದಿಲ್ಲವೆಂದು ಹೇಳಿದಂತಾಗಲಿಲ್ಲ. ಅದನ್ನು ತಿಳಿಸುವ ರೀತಿ ಬೇರೆಯಾಗಿತ್ತು.

ಆಂಗ್ಲಭಾಷೆಯಲ್ಲಿ 'Culture' ಪದದ ಅರ್ಥವನ್ನು ಯಾವ ರೀತಿಯಾಗಿ ಮಾಡಲಾಗುತ್ತದೆ ಎಂಬುದನ್ನು ಮೊದಲು ತಿಳಿದುಕೊಳ್ಳುವ. ಅಲ್ಲಿಯೂ ಈ ಪದಕ್ಕೆ ನಿಶ್ಚಿತಾರ್ಥವಿಲ್ಲ. ಇದರ ವ್ಯಾಖ್ಯೆಮಾಡುವುದು ಅತಿದುಸ್ತರವೆಂದು ಈ ವಿಷಯವಾಗಿ ವಿಚಾರಮಾಡಿದ ಪ್ರಸಿದ್ಧ ಲೇಖಕರು ಹೇಳುತ್ತಾರೆ. ಜೀವನದಲ್ಲಿ ಅನೇಕ ಅಂಶಗಳ ಸ್ಪಷ್ಟ ವ್ಯಾಖ್ಯೆಗಳನ್ನು ಕೊಡುವದು ಅಶಕ್ಯವಾದ ಮಾತು. ಅದು ಏನು ? ಅದರ ಸ್ವರೂಪವೇನು ? ಎಂಬುದು ನಮಗೆ ಹೊಳೆಯಬಹುದು. ಆದರೆ ಅದನ್ನೇ ಒಂದು ವ್ಯಾಖ್ಯೆಯ ಚೌಕಟ್ಟಿನಲ್ಲಿ ಕೂಡಿಸುವುದು ಅತ್ಯಂತ ಕಠಿನವಾಗುತ್ತದೆ. ಕಲೆ, ಸೌಂದರ್ಯ, ಪ್ರೀತಿ, ರುಚಿ, ರಸಿಕತೆ, ಇವುಗಳ ವಿವರಣೆಯನ್ನು ಕೊಡಬಹುದೇ ಹೊರತು, ವ್ಯಾಖ್ಯೆ ಮಾಡುವುದು ಅಸಾಧ್ಯವಾದ ಮಾತು ಇವುಗಳ ವಿಷಯವಾಗಿ ನಮ್ಮಲ್ಲಿ ಒಂದು ಕಲ್ಪನೆ ಇರುತ್ತದೆ. ಅದನ್ನೇ ಶಬ್ದಗಳಲ್ಲಿ ಹೇಳಿದಾಗ ಕುಂಠಿತರಾಗುತ್ತೇವೆ. ಸಕ್ಕರೆ ಸಿಹಿ ಎಂದು ಹೇಳಬಹುದು. ಸಿಹಿ ಎಂದರೇನು ? ಎಂದು ಕೇಳಿದರೆ ಏನು ಹೇಳಬೇಕು ? ಇದರಂತೆಯೇ 'ಸಂಸ್ಕೃತಿ'. ಆದ್ದರಿಂದ 'ಸಂಸ್ಕೃತಿ'ಯ ವ್ಯಾಖ್ಯೆಯನ್ನು ಕೊಡುವ ಸಾಹಸಕ್ಕೆ ಕೈಯಿಕ್ಕದೆ, ಅದರ ಸ್ವರೂಪವನ್ನು ವಿವರಿಸಿ, ಅದರಲ್ಲಿ ಅಡಕವಾಗಬೇಕಾದ ಅಂಶಗಳನ್ನು ಗಮನಿಸಿ ಅದರ ಒಂದು ಮಸುಕು ಚಿತ್ರವನ್ನು ಮೂಡಿಸುವದು—ಒಂದು ವಿವರಣೆಯನ್ನು ಕೊಡುವುದು—ನನ್ನ ಉದ್ದೇಶವಾಗಿದೆ.

ಸಂಸ್ಕೃತಿಯನ್ನು ಮೂರು–ನಾಲ್ಕು ತೆರನಾಗಿ ವಿವೇಚಿಸುವುದುಂಟು. ವ್ಯಕ್ತಿವಾಚಕವಾಗಿಯೂ ರಾಷ್ಟ್ರವಾಚಕವಾಗಿಯೂ ಸಮಾಜವಾಚಕವಾಗಿಯೂ ಮತವಾಚಕವಾಗಿಯೂ ಅದನ್ನು ಉಪಯೋಗಿಸಲಾಗುತ್ತದೆ. ಎಮರಸನ್, ಮ್ಯಾಥು ಅರ್ನಾಲ್ಡ, ಪಾವಿಸ್, ಮೊದಲಾದವರು ಸಂಸ್ಕೃತಿಯನ್ನು ವ್ಯಕ್ತಿವಾಚಕವಾಗಿಟ್ಟು

ಕೊಂಡು ತಮ್ಮ ವಿಚಾರಗಳನ್ನು ಮಂಡಿಸಿದ್ದಾರೆ. ಕ್ಲೈವಬೆಲ್, ವಾಯಿಟಹೆಡ್, ಕಾರ್ಲಮ್ಯಾನ್‌ಹೈನ್, ಟಿ. ಎಸ್. ಇಲಿಯಟ್ ಮೊದಲಾದವರು ಇದನ್ನು ಸಂಘ ವಾಚಕವಾಗಿಟ್ಟುಕೊಂಡು ತಮ್ಮ ವಿಚಾರಗಳನ್ನು ಪುರಸ್ಕರಿಸಿದ್ದಾರೆ. ಸಾಮಾನ್ಯವಾಗಿ ಸುಸಂಸ್ಕೃತ ಮನುಷ್ಯ, ಅಸಂಸ್ಕೃತ ಮನುಷ್ಯ ಎಂದು ವ್ಯಕ್ತಿಗಳ ವಿಷಯವಾಗಿ ಮಾತನಾಡುತ್ತೇವೆ. ವ್ಯಕ್ತಿಯಲ್ಲಿ ಸಂಸ್ಕೃತಿಯುಂಟೋ ಇಲ್ಲವೋ ಎಂಬುದನ್ನು ವಿಚಾರಿಸುತ್ತೇವೆ. ಇಲ್ಲಿ 'ಸಂಸ್ಕೃತಿ' ಎಂಬ ಶಬ್ದವನ್ನು ನಯ, ವಿನಯ, ಬುದ್ಧಿಮತ್ತೆ, ಸಹಾನುಭೂತಿ, ದಯೆ, ಸಹಿಷ್ಣುತೆ, ರಸಿಕತೆ, ಮೊದಲಾದ ಗುಣಗಳ ಸಂಘಾತಕ್ಕೆ ಪ್ರತಿಯಾಗಿ ಉಪಯೋಗಿಸುತ್ತೇವೆ. ಅದೇ ಅಸಹಿಷ್ಣುತೆ, ಮತಾಂಧತೆ, ಪಾರುಷ್ಯ, ಅರಸಿಕತೆ, ಅಹಂಮನ್ಯತೆ, ವಿಷಯಾಸಕ್ತಿ ಮೊದಲಾದ ದುರ್ಗುಣ ಗಳುಳ್ಳವನನ್ನು ಅಸಂಸ್ಕೃತ ಮನುಷ್ಯನೆಂದು ಕರೆಯುತ್ತೇವೆ. ಅಸಂಸ್ಕೃತಿ, ಸುಸಂಸ್ಕೃತಿ ಎಂಬ ಪದಗಳು ಪೂರ್ವಕಾಲದಿಂದಲೂ ಸಂಸ್ಕೃತ ಭಾಷೆಗಳಲ್ಲಿ ಪ್ರಚಲಿತವಿದ್ದ ಪದಗಳೆಂಬುದನ್ನು ಗಮನಿಸಬೇಕು. ವ್ಯಕ್ತಿ ತನ್ನ ಸಂಸ್ಕೃತಿಯನ್ನು ಹೆಚ್ಚಿಸಿಕೊಳ್ಳಲು ಯತ್ನಿಸಬೇಕು; ಅದೇ ಅವನು ಜೀವನದಲ್ಲಿ ಸಾಧಿಸಬೇಕಾದ ಪುರು ಷಾರ್ಥ ಎಂದು ಎಮರ್ಸನ್, ಮ್ಯಾಥು ಅರ್ನಾಲ್ಡ ಮೊದಲಾದವರು ಹೇಳುತ್ತಾರೆ. ಮ್ಯಾಥು ಅರ್ನಾಲ್ಡನು ಸಂಸ್ಕೃತಿಯ ತಿರುಳನ್ನು ಎರಡು ಶಬ್ದಗಳಲ್ಲಿ ಸೂತ್ರಪ್ರಾಯ ವಾಗಿ ಹೇಳಿದ್ದಾನೆ: Sweetness and Light. (ಮಾಧುರ್ಯ ಮತ್ತು ಪ್ರಭೆ)—ನಾವು ಇದನ್ನೇ ರಸಿಕತೆ ಮತ್ತು ಜ್ಞಾನ ಎಂದು ಹೇಳಬಹುದು—ಇವೇ ಸಂಸ್ಕೃತಿಯ ಮುಖ್ಯಾಂಶಗಳೆಂದು ಇಟ್ಟುಕೊಳ್ಳಬಹುದು.

ಸಂಸ್ಕೃತಿಯೆಂದರೆ ಕಲಾಭಿರುಚಿ ಎಂದು ಹೇಳುವುದುಂಟು. ಸಂಸ್ಕೃತಿಯೆಂದರೆ ಪಾಂಡಿತ್ಯವೆಂದು ಭ್ರಮೆಗೊಳ್ಳುವವರೂ ಇದ್ದಾರೆ; ಧರ್ಮದೃಷ್ಟಿಯೆಂದು ತಿಳಿಯು ವವರೂ ಇದ್ದಾರೆ. ಆದರೆ ಪಾಂಡಿತ್ಯವಾಗಲಿ, ಕೇವಲ ಕಲಾಭಿರುಚಿಯಾಗಲಿ, ಧರ್ಮದೃಷ್ಟಿಯಾಗಲಿ, ಇವು ಒಂದೊಂದೇ ಸಂಸ್ಕೃತಿಯೆನಿಸಲಾರವು. ಸಂಸ್ಕೃತಿ ಯೆನ್ನುವುದು ಮಾನವನ ಅಂತರಂಗದ ಒಂದು ಸುಸ್ಥಿತಿ, ಪರಿಪಾಕ; ಜೀವನದ ಸಾರ ವನ್ನು ಗ್ರಹಿಸಿ ಆನಂದಿಸುವ ಒಂದು ಪ್ರವೃತ್ತಿ. ಅದರಲ್ಲಿ ಕಲೆ, ಸಾಹಿತ್ಯ, ತತ್ತ್ವ ಗಳಷ್ಟೇ ಅಲ್ಲದೆ, ಬೇರೆ ಜನರೊಡನೆ ಸಂಬಂಧ, ನಯ, ವಿನಯ, ನಿಸರ್ಗಪ್ರೇಮ ಮೊದಲಾದ ಇನ್ನೂ ಅನೇಕ ಗುಣಗಳು ಸಮಾವಿಷ್ಟವಾಗುತ್ತವೆ. ಸಂಸ್ಕೃತಿಯೆನ್ನು ವುದು ಒಬ್ಬ ವ್ಯಕ್ತಿಯ ಜೀವನದಲ್ಲಿ ಅನೇಕಾನೇಕ ಪ್ರಭಾವಗಳಿಂದ ಉಂಟಾದ ಹೃದಯ ಪರಿಪಾಕ. Powysರ ಗ್ರಂಥದಲ್ಲಿ ಸಂಸ್ಕೃತಿಯನ್ನು ಹೀಗೆ ವರ್ಣಿಸಲಾಗಿದೆ: 'ನಾವು ಕಲಿತ ವಿಷಯಗಳನ್ನು ಮರೆತಮೇಲೆ ನಮ್ಮಲ್ಲುಳಿಯುವ ಸಂಸ್ಕಾರವಿಶೇಷವೇ ಸಂಸ್ಕೃತಿ.'*

---

* 'Culture is what is left over after you have forgotten all you definitely set out to learn.'

ಒಂದು ಸಂಗತಿಯನ್ನು ಇಲ್ಲಿ ನಾವು ಅವಶ್ಯವಾಗಿ ಗಮನಿಸಬೇಕು. ಸಂಸ್ಕೃತಿ ನಿರ್ಮಾಪಕರೆಲ್ಲ ಅವಶ್ಯವಾಗಿ ಸುಸಂಸ್ಕೃತರಾಗಿರಬೇಕೆಂಬ ನಿಯಮವಿಲ್ಲ. ಮಹಾ ಕವಿ, ಕಲಾವಿದ, ವಿಜ್ಞಾನಿ, ತತ್ತ್ವಜ್ಞಾನಿ, ಇವರೆಲ್ಲರೂ ಸಂಸ್ಕೃತಿ ನಿರ್ಮಾಕರೇ. ಆದರೆ ಇವರೆಲ್ಲ ಸುಸಂಸ್ಕೃತರಿರಲೇಬೇಕೆಂದು ಹೇಳಲಿಕ್ಕಾಗದು. ಮಹಾಕವಿ ಯಲ್ಲಿಯೂ ಪಾರುಷ್ಯವಿರಬಹುದು, ಅಸಹಿಷ್ಣುತೆ ಇರಬಹುದು, ಅಹಂಮನ್ಯತೆ ಇರ ಬಹುದು. ಸುಸಂಸ್ಕೃತರಲ್ಲಿರಬೇಕಾದ ಎಲ್ಲಾ ಗುಣಗಳೂ ಒಬ್ಬನಲ್ಲಿಯೇ ಕಾಣು ವುದೂ ಅಪೂರ್ವವೇ. ಇದೊಂದು ಆದರ್ಶ. ಈ ಆದರ್ಶಕ್ಕಾಗಿ ಪ್ರತಿಯೊಬ್ಬ ವ್ಯಕ್ತಿಯೂ ಹೆಣಗಬೇಕೆಂದು ಎಮರ್ಸನ್ ಮೊದಲಾದವರು ಹೇಳುತ್ತಾರೆ. ಸಂಸ್ಕೃತಿ ಯನ್ನು ಬೆಳಸಿಕೊಳ್ಳಲಿಕ್ಕೂ ಉಪಾಯ ಸೂಚಿಸಿದ್ದಾರೆ. ಯಾವ ಗ್ರಂಥಗಳನ್ನು ಓದಬೇಕು, ಯಾವ ಕಲಾಕೃತಿಗಳನ್ನು ಸಂದರ್ಶಿಸಬೇಕು, ಯಾವ ತತ್ತ್ವಗಳನ್ನು ಅಭ್ಯಸಿಸಬೇಕು ಎನ್ನುವುದಕ್ಕೆ ಸೂಚನೆಗಳನ್ನೂ ಮಾಡಿದ್ದಾರೆ. ಏಕೆಂದರೆ ಪರಿಪೂರ್ಣ ತೆಯೇ ಸಂಸ್ಕೃತಿಯ ಹಿರಿಯ ಆದರ್ಶ.

ಅರ್ನಾಲ್ಡ, ಪಾವಿಸ್ ಮೊದಲಾದವರು ಹೇಳುವ ಈ ವ್ಯಕ್ತಿಸಂಬಂಧವಾದ ಸಂಸ್ಕೃತಿಯ ಕಲ್ಪನೆ, ಸಂಸ್ಕೃತಭಾಷೆಯಲ್ಲಿ ಮೊದಲಿನಿಂದಲೂ ಪ್ರಚಾರದಲ್ಲಿರುವ 'ಸಂಸ್ಕಾರ' ಎಂಬ ಶಬ್ದದ ಅರ್ಥವ್ಯಾಪ್ತಿಯಲ್ಲಿ ಅಡಕವಾಗುತ್ತದೆಂದು ತೋರು ತ್ತದೆ. ನಮ್ಮಲ್ಲಿ ಎಂದಿನಿಂದಲೂ ಬೆಳೆದು ಬಂದ ವಿಚಾರದಂತೆ ಪ್ರತಿಯೊಬ್ಬ ವ್ಯಕ್ತಿಯೂ ಒಳ್ಳೆಯ ಸಂಸ್ಕಾರವನ್ನು ಪಡೆಯಲು ಯತ್ನಿಸಬೇಕು. ಸಂಸ್ಕಾರವು ಶಿಕ್ಷಣ, ಆವರಣ, ವ್ಯಕ್ತಿಯ ನಾನಾ ಅನುಭವಗಳು, ನಿಸರ್ಗ, ಇವೆಲ್ಲವುಗಳಿಂದಲೂ ಉಂಟಾಗುತ್ತದೆ. ಇವೆಲ್ಲವುಗಳನ್ನೂ ಪಡೆದುಕೊಂಡು ವ್ಯಕ್ತಿಯ ಅಂತರಂಗದಲ್ಲಿ ಉಳಿಯುವುದು ಸಂಸ್ಕಾರ. ವ್ಯಕ್ತಿಯ ಸಂಸ್ಕಾರದಿಂದಲೇ ಆತನು ಮೇಲೋ, ಕೀಳೋ ಎಂದು ತಿಳಿಯಬಹುದು. 'ಸಂಸ್ಕಾರ'ದ ಈ ರೀತಿಯ ಪ್ರಯೋಗಕ್ಕಾಗಿ ಕೆಳಗಿನ ಉದಾಹರಣೆಗಳನ್ನು ನೋಡಬಹುದು.

> "ನಿಸರ್ಗಸಂಸ್ಕಾರವಿನೀತ ಇತ್ಯಸೌ
> ನೃಪೇಣ ಚಕ್ರೇ ಯುವರಾಜ ಶಬ್ದಭಾಕ್"
>
> — ರಘುವಂಶ ಸರ್ಗ. ೩.

> "ಪರಿಪೂತಸ್ವಭಾವಃ ಆರ್ಷೇಣ ಸಂಸ್ಕಾರೇಣ"
>
> -- ಉತ್ತರರಾಮಚರಿತ.

'ಸಂಸ್ಕೃತಿ' ಪದವನ್ನು ಸಂಘವಾಚಕವಾಗಿ ಬೇರೆ ಕೆಲವರು ಉಪ ಯೋಗಿಸುತ್ತಾರೆ. 'ಸಂಸ್ಕೃತಿ' ಎನ್ನುವುದು ಒಂದು ಜನಸಮುದಾಯವು ಬೆಳಸಿ ಕೊಂಡು ಬಂದ ಒಂದು ಜೀವನದೃಷ್ಟಿ, ಒಂದು ಜೀವನಮಾರ್ಗ ಎಂದು ಇವರ ಅಭಿ ಪ್ರಾಯ. ಇಂಥ ಸಂದರ್ಭಗಳಲ್ಲಿ ಸಂಸ್ಕೃತಿ ಮತ್ತು ನಾಗರಿಕತೆ (Culture and Civilization) ಇವುಗಳಲ್ಲಿಯ ವ್ಯತ್ಯಾಸವನ್ನು ತೋರಿಸಲಿಕ್ಕೆ ಯತ್ನಿಸುತ್ತಾರೆ.

ಅನೇಕಸಲ ಈ ಎರಡು ಪದಗಳನ್ನು ಅಭೇದಭಾವದಿಂದ ಬಳಸಿದವರೂ ಇದ್ದಾರೆ. ಈ ಪದಗಳ ತಾರತಮ್ಯವನ್ನು ನಾವು ಹೀಗೆ ಹೇಳಬಹುದು: ಸಂಸ್ಕೃತಿ, ಒಂದು ವ್ಯಕ್ತಿಯ ಇಲ್ಲವೆ ಜನಾಂಗದ ಅಂತರಂಗಜೀವನಕ್ಕೆ ಸಂಬಂಧಪಟ್ಟುದು, ಅದೇ ನಾಗರಿಕತೆ ಬಾಹ್ಯಜೀವನಕ್ಕೆ ಸಂಬಂಧಿಸಿದುದು.* ಸಂಸ್ಕೃತಿ ಎಲ್ಲ ತರಗತಿಯ ಜನಾಂಗ ಗಳಲ್ಲಿಯೂ ಕಾಣಬರುತ್ತದೆ.

ಕಾಡುಜನರ ಸಂಸ್ಕೃತಿ (Primitive Culture) ಎಂದು ಹೇಳುತ್ತೇವೆ. ಕಾಡುಜನರ ನಾಗರಿಕತೆ (Primitive Civilization) ಎಂದು ಯಾರೂ ಹೇಳುವು ದಿಲ್ಲ. ಕಾವ್ಯ, ಲಲಿತಕಲೆ, ತತ್ತ್ವಜ್ಞಾನ, ಧರ್ಮಗಳಿಗೆ ಸಂಬಂಧಿಸಿದ್ದು ಸಂಸ್ಕೃತಿ; ರಾಜ್ಯಪದ್ಧತಿ, ಯಾಂತ್ರಿಕಪ್ರಗತಿ, ಜೀವನಸೌಕರ್ಯ, ಸಮಾಜರಚನೆ, ಮೊದಲಾದು ವಕ್ಕೆ ಸಂಬಂಧಪಟ್ಟುದು ನಾಗರಿಕತೆ. ಉಪನಿಷತ್‌ಕಾಲದ ಭಾರತವು ಸಂಸ್ಕೃತಿಯ ಉನ್ನತಶಿಖರಕ್ಕೇರಿತ್ತೆಂದು ಹೇಳಬಹುದು; ಆದರೆ ನಾಗರಿಕತೆಯಲ್ಲಿ ಬಹಳ ಮುಂದು ವರಿದಿದ್ದಿಲ್ಲ. ಪ್ರಾಚೀನ ಗ್ರೀಕದೇಶವು ಸಂಸ್ಕೃತಿಯ ಶಿಖರಕ್ಕೇರಿತ್ತು; ಆದರೆ ಪ್ರಾಚೀನ ರೋಮದೇಶವು ಗ್ರೀಸದೇಶಕ್ಕಿಂತಲೂ ನಾಗರಿಕತೆಯಲ್ಲಿ ಮುಂದುವರಿದಿತ್ತೆಂದು ಹೇಳು ತ್ತೇವೆ. ಇಂದಿನ ಕಾಲದ ಒಂದೆರಡು ಉದಾಹರಣೆಗಳನ್ನೂ ಇಲ್ಲಿ ಕೊಡಬಹುದು. ಹಿಟ್ಲರನ ಕಾಲದ—ಇಲ್ಲವೆ ಕಾಲ ಕೆಳಗಿನ—ಜರ್ಮನಿಯು ನಾಗರಿಕತೆಯಲ್ಲಿ ಮುಂದು ವರಿದಿತ್ತು; ಸಂಸ್ಕೃತಿಯನ್ನು ಆತ ಗಡಿಪಾರು ಮಾಡಿದ್ದ. ಅಮೇರಿಕೆಯ ಸಂಯುಕ್ತ ಸಂಸ್ಥಾನವು ನಾಗರಿಕತೆಯಲ್ಲಿ ಜಗತ್ತಿನ ಎಲ್ಲ ರಾಷ್ಟ್ರಗಳನ್ನೂ ಮೀರಿಸಿದೆ. ಆದರೆ ಸಂಸ್ಕೃತಿಯಲ್ಲಿ ಆಂಗ್ಲದೇಶವನ್ನು ಸರಿಗಟ್ಟಲಾರದು. ಹೀಗೆ ಸಂಸ್ಕೃತಿ ಮತ್ತು ನಾಗರಿಕತೆಗಳ ವ್ಯತ್ಯಾಸವನ್ನು ತೋರಿಸಬಹುದಾದರೂ ಎರಡೂ ಪದಗಳ ಅರ್ಥ ವ್ಯಾಪ್ತಿಯ ಸೀಮಾರೇಖೆಯನ್ನು ಗುರುತಿಸುವುದು ಅನೇಕಸಲ ಸಾಧ್ಯವಾಗುವುದಿಲ್ಲ.

ಸಂಸ್ಕೃತಿಯನ್ನು ಸಂಘವಾಚಕವಾಗಿ ಉಪಯೋಗಿಸುವವರು ಯಾವುದೇ ಒಂದು ಜನಾಂಗದ ಸಮಗ್ರಜೀವನಮಾರ್ಗವನ್ನೇ ಸಂಸ್ಕೃತಿಯೆಂದು ಭಾವಿಸುತ್ತಾರೆ. ಸಂಸ್ಕೃತಿಯಲ್ಲಿ ತರಗತಿಗಳನ್ನೂ ಕೆಲವು ಲೇಖಕರು ನಿರ್ಮಿಸುತ್ತಾರೆ. ಹಾಗು ಯಾವು ದೊಂದು ದೇಶದ ಯಾವುದೊಂದು ಕಾಲಾವಧಿಯನ್ನಿಟ್ಟುಕೊಂಡು ಅದರ ಸಂಸ್ಕೃತಿ ಯನ್ನು ಅತ್ಯುನ್ನತವೋ, ಉನ್ನತವೋ, ಸಾಧಾರಣವೋ ಎಂಬುದನ್ನು ನಿಷ್ಕರ್ಷಿಸಲಿಕ್ಕೆ ಯತ್ನಿಸಿದ್ದಾರೆ. ಅತ್ಯುನ್ನತ ಸಂಸ್ಕೃತಿಯ ಮುಖ್ಯ ಲಕ್ಷಣಗಳಾವುವು ಎಂಬ ಬಗ್ಗೆಯೂ ಒಮ್ಮತವಿದ್ದಂತೆ ಕಾಣುವುದಿಲ್ಲ. ಲೇಖಕನು ತನ್ನ ಒಲವುಗಳಿಗನುಸಾರ ವಾಗಿ ಆ ಲಕ್ಷಣಗಳನ್ನು ಹೇಳಬಹುದು. ದೇಶಗಳನ್ನೂ, ಐತಿಹಾಸಿಕ ಯುಗಗಳನ್ನೂ ಆಯ್ದುಕೊಳ್ಳುವಾಗ ಪಾಶ್ಚಾತ್ಯಲೇಖಕರು ಯುರೋಪ ಖಂಡವನ್ನು ಮಾತ್ರ ಗಮ ನಿಸುತ್ತಾರೆ. ಮೊನ್ನೆಮೊನ್ನೆಯವರೆಗೆ ಅವರಲ್ಲಿ ಬಹಳ ಜನ ಯುರೋಪುಖಂಡದಲ್ಲಿ

*"Civilization is what we have; Culture is what we are."

ಮಾತ್ರ ಸಂಸ್ಕೃತಿ ಇತ್ತೆಂದು ಭಾವಿಸುತ್ತಿದ್ದರು. ಇತ್ತೀಚಗೆ ಪೌರಸ್ತ್ಯ ಸಂಸ್ಕೃತಿಗಳ ಅರಿವೂ ಪಾಶ್ಚಾತ್ಯ ಲೇಖಕರಿಗೆ ಉಂಟಾಗುತ್ತಿದೆ. ಐತಿಹಾಸಿಕ ಯುಗಗಳನ್ನು ಕೆಳಗಿನಂತೆ ನಿರ್ಧರಿಸಬಹುದು: ಗ್ರೀಕದೇಶದಲ್ಲಿ ಪೆರಿಕ್ಲಿಸನ ಕಾಲ, ನಮ್ಮ ದೇಶದಲ್ಲಿ ಗುಪ್ತ ಸಾಮ್ರಾಟರ ಯುಗ, ಕರ್ನಾಟಕರಲ್ಲಿ ಹೊಯ್ಸಳರ ಕಾಲ, ಹೀಗೆ ಯಾವುದೊಂದು ಕಾಲಾವಧಿಯನ್ನು ತೆಗೆದುಕೊಂಡು ಆಗಿನ ಸಂಸ್ಕೃತಿಯ ಎತ್ತರವನ್ನು ಅಳೆಯಲು ಯತ್ನಿಸಬಹುದು. ಎ. ಎನ್. ವಾಯಿಟಹೆಡ್ ಎಂಬ ವಿಖ್ಯಾತದಾರ್ಶನಿಕನು* ಸತ್ಯ, ಸೌಂದರ್ಯ, ಸಾಹಸ, ಕಲೆ ಮತ್ತು ಶಾಂತಿ ಇವೈದು ಉನ್ನತ ಸಂಸ್ಕೃತಿಯ ಮುಖ್ಯಾಂಶಗಳೆಂದು ಹೇಳುತ್ತಾನೆ. ಈ ಅಂಶಗಳು ಉನ್ನತ ಸಂಸ್ಕೃತಿಯ ಯುಗಗಳಲ್ಲಿ ಹೆಚ್ಚುಕಡಿಮೆ ಪ್ರಮಾಣದಲ್ಲಿ ಮಹತ್ವದ ಸ್ಥಾನವನ್ನು ಆಕ್ರಮಿಸಿದ್ದನ್ನು ಕಾಣಬಹುದು. ಯಾವುದೇ ಜನಾಂಗವು ಇಂಥ ಸಂಸ್ಕೃತಿಯನ್ನು ಮುಟ್ಟಲಿಕ್ಕೆ ಶಕ್ತಿ ಸರ್ವಸ್ವವನ್ನೂ ಉಪಯೋಗಿಸಬೇಕು. ಇಂಥ ಸಂಸ್ಕೃತಿ ಮಾನವ ಜನಾಂಗದ ಆದರ್ಶ.

ಇಲ್ಲಿ ಒಂದು ಅಂಶವನ್ನು ಮುಖ್ಯವಾಗಿ ಗಮನಿಸಬೇಕು. 'ಸಂಸ್ಕೃತಿ'ಯನ್ನು ಸಂಘ ವಾಚಕವಾಗಿ ಅಥವಾ ಜನಾಂಗವಾಚಕವಾಗಿ ಉಪಯೋಗಿಸಬೇಕೋ ಇಲ್ಲವೆ ವ್ಯಕ್ತಿವಾಚಕವಾಗಿ ಉಪಯೋಗಿಸಬೇಕೋ? ಸಂಸ್ಕೃತಿ ಶಬ್ದವನ್ನು ಸಂಘವಾಚಕವಾಗಿ ಬಳಸುವುದೇ ಹೆಚ್ಚು ಸಾಧುವೆಂದು ನಾನು ಅಭಿಪ್ರಾಯಪಡುತ್ತೇನೆ. ವ್ಯಕ್ತಿ ಸಂಸ್ಕೃತಿಯನ್ನು ನಿರ್ದೇಶಿಸಲು 'ಸಂಸ್ಕಾರ' ಎಂಬ ಪದವನ್ನು ಇಟ್ಟುಕೊಳ್ಳಬೇಕು. ಈ ವಿಶಿಷ್ಟಾರ್ಥಗಳಲ್ಲಿಯೇ ಈ ಪದಗಳನ್ನು ಬಳಸುವುದು ಹೆಚ್ಚು ಅನುಕೂಲ ಹಾಗು ಸಮಂಜಸ. ಟಿ ಎಸ್ ಇಲಿಯಟ್ ಎಂಬ ಸುಪ್ರಸಿದ್ಧ ಆಂಗ್ಲಕವಿ, ಸಂಸ್ಕೃತಿ (Culture) ಎಂಬ ಪದವನ್ನು ಸಂಘವಾಚಕವಾಗಿಯೇ ಉಪಯೋಗಿಸುವುದು ಹೆಚ್ಚು ಯೋಗ್ಯವೆಂದು ಅಭಿಪ್ರಾಯಪಡುತ್ತಾನೆ. ಆತನ ದೃಷ್ಟಿಯಲ್ಲಿ ಸಂಸ್ಕೃತಿ ಒಂದು ಜನಾಂಗದ ಸಮಗ್ರಜೀವನಮಾರ್ಗವನ್ನೇ ಒಳಗೊಳ್ಳುತ್ತದೆ. ಮತಧರ್ಮ, ಸಾಹಿತ್ಯ, ಲಲಿತಕಲೆ, ಆಟಪಾಟಗಳು, ವೇಷಭೂಷಗಳು, ಚಟಗಳು, ಎಲ್ಲವೂ ಸಂಸ್ಕೃತಿಯ ಅಂಗಗಳಾಗಿದ್ದರೂ ಸಂಸ್ಕೃತಿಯೆಂಬುದು ಇವೆಲ್ಲವುಗಳಿಗಿಂತಲೂ ಭಿನ್ನವಾಗಿದೆ. ಅದು ಸಾಂಘಿಕಜೀವನದಲ್ಲಿ ಬೆರೆತುಕೊಂಡಿರುತ್ತದೆ † "ಜೀವನ ಸಾರ್ಥಕ್ಯವೇ ಸಂಸ್ಕೃತಿಯೆಂದೂ ಹೇಳಬಹುದು. ಯಾವುದೆಂದು ಪುರಾತನ ನಷ್ಟ ಸಂಸ್ಕೃತಿಯ ಅವಶೇಷಗಳನ್ನೂ ಪ್ರಭಾವವನ್ನೂ ಕುರಿತು ಚಿಂತನ ಮಾಡುವಾಗ, ಆ ಸಂಸ್ಕೃತಿ

---

* Truth, beauty, adventure, art and peace.

† Culture may even be described simply as that which makes life worth living. And it is what justifies other people and other generations in saying, when they contemplate, the remains and the influence of an extinct civilization, that it was worthwhile for that civilization to have existed.

ಇದ್ದುದು ಸಾರ್ಥಕವಾಯಿತು, ಎಂಬ ಭಾವ ನಮ್ಮಲ್ಲಿ ಉಂಟಾದರೆ ಅದು ಆ ಕಾಲದ ಸಂಸ್ಕೃತಿ."

ಸಂಸ್ಕೃತಿಯು, ಒಂದು ಪ್ರದೇಶದಲ್ಲಿ ಸಾಮೂಹಿಕವಾಗಿ ವಾಸಿಸುವ ಒಂದು ವಿಶಿಷ್ಟ ಮಾನವಸಮಾಜದ ಸಮಗ್ರಜೀವನರೀತಿ. ಸಂಸ್ಕೃತಿ ಆ ಜನರ ಕಲೆಗಳು, ಸಮಾಜರಚನೆ, ಅವರ ರೀತಿನೀತಿಗಳು--ಮತಧರ್ಮಗಳು-- ಇವುಗಳಲ್ಲಿ ಒಡಮೂಡುತ್ತದೆ.

ಇಲ್ಲಿಯವರೆಗೆ ಸಂಸ್ಕೃತಿ ಎಂಬ ಪದದ ಅರ್ಥದ ಬಗೆಗೆ ಇರುವ ಕೆಲವು ಮುಖ್ಯವಾದ ವಿಚಾರಗಳನ್ನು ಪರಿಶೀಲಿಸಿದ್ದಾಯಿತು. ಇವುಗಳಲ್ಲಿ ಭಿನ್ನತೆಯು ಕಾಣಬಹುದಾದರೂ ಮೂಲಸ್ವರೂಪದ ಅಂಶಗಳಲ್ಲಿ ಒಮ್ಮತವೇ ಇದೆಯೆನ್ನುವುದು ಸ್ಪಷ್ಟ. ಸಂಸ್ಕೃತಿಯ ಸ್ಪಷ್ಟವ್ಯಾಖ್ಯೆಯನ್ನುಹುಡುಕಲು ಯತ್ನಿಸುವುದಕ್ಕಿಂತ ಸಂಸ್ಕೃತಿಯನ್ನು ಎಲ್ಲಿಎಲ್ಲಿ ಕಾಣಬಹುದು ಎಂಬುದನ್ನು ತಿಳಿದುಕೊಳ್ಳುವದು ಹೆಚ್ಚು ಸುಗಮವಿದೆ. ಒಂದು ಜನಸಮುದಾಯದ ಸಂಸ್ಕೃತಿಯನ್ನು ಅಭ್ಯಸಿಸಬೇಕಾದರೆ ನಾವು ಯಾವ ಯಾವ ವಿಷಯಗಳನ್ನು ಕುರಿತು ಆಲೋಚಿಸಬೇಕೆಂಬುದನ್ನು ನಿರ್ಧರಿಸಬೇಕು. ಅವುಗಳಲ್ಲಿ ಮುಖ್ಯವಾದುವು ಯಾವುವು ಎಂಬುದನ್ನು ನಿಷ್ಕರ್ಷಿಸಿಕೊಳ್ಳಬೇಕು. ಆ ವಿಷಯಗಳ ಸಮಗ್ರಸಮಾಲೋಚನೆ ಮಾಡಿದರೆ ಯಾವುದೊಂದು ಪ್ರದೇಶದಲ್ಲಿಯ ಜನಸಮುದಾಯದ ಸಂಸ್ಕೃತಿಯ ಚಿತ್ರವು ನಮಗೆ ಕಾಣುತ್ತದೆ ಇಲ್ಲಿ ಪ್ರದೇಶ ಮತ್ತು ಜನಸಮುದಾಯ—ಈ ಎರಡು ಪದಗಳನ್ನು ಗಮನಿಸಬೇಕು. ಪ್ರದೇಶವು ದೇಶವಲ್ಲ—ಎಂದರೆ ರಾಜಕೀಯವಾಗಿ ಒಂದೇ ಆಧಿಪತ್ಯಕ್ಕೆ ಒಳಪಟ್ಟಿರುವ ಪ್ರದೇಶವಲ್ಲ. ಜನಸಮುದಾಯವೆಂದರೆ ಒಂದೇ ಮೂಲಮಾನವಜಾತಿ (race)ಯಲ್ಲ. ಬೇರೆಬೇರೆ ರಾಜಕೀಯ ಆಧಿಪತ್ಯಕ್ಕೆ ಅಧೀನರಾಗಿರುವವರೂ, ಬೇರೆಬೇರೆ ಮಾನವ ಜಾತಿಗೆ ಸೇರಿದವರೂ ಒಂದೇ ಸಂಸ್ಕೃತಿಯವರಿರಬಹುದು. ಅದರಂತೆ ಒಂದೇ ಆಧಿಪತ್ಯದ ಕೆಳಗೆ ಇರುವವರೂ, ಒಂದೇ ಮಾನವಜಾತಿಗೆ ಸೇರಿದವರೂ ಭಿನ್ನಭಿನ್ನ ಸಂಸ್ಕೃತಿಯವರಿರಬಹುದು.

ಒಂದು ಪ್ರದೇಶದ ಜನಸಮುದಾಯದ ಸಂಸ್ಕೃತಿಯನ್ನು ತಿಳಿದುಕೊಳ್ಳಲು ಅಲ್ಲಿ ರೂಢವಾಗಿರುವ ಕೆಳಗೆ ಕಾಣಿಸಿದ ಅಂಶಗಳ ಅಭ್ಯಾಸವನ್ನು ಮಾಡುವುದು ಅವಶ್ಯವೆಂದು ತೋರುತ್ತದೆ: (೧) ಮತಧರ್ಮಗಳು. (೨) ದರ್ಶನಗಳು. (೩) ಭಾಷೆ-ಸಾಹಿತ್ಯ (೪) ಲಲಿತಕಲೆಗಳು. (೫) ಸಮಾಜರಚನೆ. (೬) ಧರ್ಮಶಾಸ್ತ್ರ—ಕಾನೂನು ಕಟ್ಟಳೆಗಳು. (೭) ರಾಜಕೀಯ, ಆರ್ಥಿಕ ಪರಿಸ್ಥಿತಿ. (೮) ಜಾನಪದ ಸಾಹಿತ್ಯ. (೯) ಧರ್ಮಸಾಹಿತ್ಯಗಳಲ್ಲಿ ಪ್ರತಿಬಿಂಬಿತವಾದ ಜನಾಂಗದ ಆದರ್ಶಗಳು (೧೦) ಪರಂಪರೆ. ಇದಕ್ಕೂ ಮೊದಲು ಆ ಪ್ರದೇಶದ ಭೌಗೋಲಿಕ ಪರಿಸ್ಥಿತಿ ಮತ್ತು ಐತಿಹಾಸಿಕ ಹಿನ್ನೆಲೆಗಳನ್ನು ತಿಳಿದುಕೊಳ್ಳುವುದೂ ಅವಶ್ಯವಿರುತ್ತದೆ. ಇತಿಹಾಸವಂತೂ ಬಹಳ ಮುಖ್ಯವಾದುದು. ಏಕೆಂದರೆ ಸಂಸ್ಕೃತಿಯು ಪರಂಪರೆಯಿಂದ

ಬೆಳೆಯುವಂತಹುದು. ಅದು ಕಟ್ಟಡದಂತೆ ಒಮ್ಮೆಲೇ ನಿರ್ಮಿತವಾಗುವುದಿಲ್ಲ; ವೃಕ್ಷದಂತೆ ಸ್ವಾಭಾವಿಕವಾಗಿ ಕಾಲಾನುಕ್ರಮವಾಗಿ ಬೆಳೆಯತಕ್ಕದು. ಪರಂಪರೆಯನ್ನು ಅರಿತುಕೊಳ್ಳಲು ಇತಿಹಾಸದ ಜ್ಞಾನವು ಅತ್ಯವಶ್ಯ.

ಒಂದು ಪ್ರದೇಶದ ಸಂಸ್ಕೃತಿಯೆಂದು ಹೇಳುವುದು ಯೋಗ್ಯವೆ? ಅಖಿಲ ಮಾನವ ಜನಾಂಗದ ಸಂಸ್ಕೃತಿ ಒಂದೇ ಎಂದು ಹೇಳುವುದು ಯಥಾರ್ಥವಲ್ಲವೆ? ಸಂಸ್ಕೃತಿಯ ಅಭ್ಯಾಸಕ್ಕಾಗಿ ಪ್ರದೇಶಗಳ ಗಡಿಗಳನ್ನು ನಿರ್ಧರಿಸಿಕೊಳ್ಳುವುದು ಹೇಗೆ? ಎಂಬ ಪ್ರಶ್ನೆಗಳಿಗೆ ಉತ್ತರಕೊಡುವುದು ಅವಶ್ಯವೆಂದು ಕಾಣುತ್ತದೆ. ಒಂದು ರೀತಿಯಲ್ಲಿ ವಿಚಾರಮಾಡಿದರೆ ಮನುಷ್ಯ ಮಾತ್ರರೆಲ್ಲರೂ ಒಂದೇ. ಮನುಷ್ಯನ ಮನಸ್ಸು, ಭಾವಗಳು ಮುಂತಾದುವೆಲ್ಲ ಎಲ್ಲ ಕಾಲದಲ್ಲಿಯೂ ಒಂದೇ ಆಗಿವೆ. ಮಾನವನ ಉನ್ನತಿಯ ಆಕಾಂಕ್ಷೆಗಳೂ ಒಂದೇ ಆಗಿವೆ. ಆದ್ದರಿಂದ ಮಾನವ ಸಂಸ್ಕೃತಿ ಒಂದೇ ಎಂದು ಏಕೆ ಹೇಳಬಾರದು? ಆದರೆ ಮೂಲದಲ್ಲಿ ಮಾನವರೆಲ್ಲ ಒಂದೇ ಆಗಿದ್ದರೂ ಜಗತ್ತಿನ ಮಾನವಸಮಾಜಗಳನ್ನು ಅವಲೋಕಿಸಿದರೆ ಅನೇಕ ಭೇದಗಳು ಕಂಡುಬರುತ್ತವೆಯೆಂಬುದನ್ನು ಯಾರೂ ಅಲ್ಲಗಳೆಯಲಾರರು. ಈ ಭೇದಗಳೆಲ್ಲ ಅಳಿದುಹೋಗಿ ಒಂದೇ ರೀತಿಯಾಗಬೇಕೆಂದು ಆದರ್ಶವನ್ನಿಟ್ಟುಕೊಳ್ಳಬಹುದು. ಆದರೆ ಇಂದಿನವರೆಗಿನ ಮಾನವನ ಇತಿಹಾಸವನ್ನು ಪರಿಶೀಲಿಸಿದರೆ ಭೇದಗಳೇನೊ ಇದ್ದೇ ಇವೆ. ಹಾಗೂ ಈ ಭೇದಗಳಿಗೆ ಒಂದು ಐತಿಹಾಸಿಕವಾದ ಪೂರ್ವಪರಂಪರೆ ಇದೆ. ಇನ್ನು ಮುಂದೆ ಏನಾಗಬೇಕು, ಏನಾದೀತು ಎಂಬ ಭಾವವನ್ನಿಟ್ಟುಕೊಂಡು ಈಗಿದ್ದ ಭೇದಗಳನ್ನು ನಾವು ಕಡೆಗಣಿಸಲಾಗದು. ಅಲ್ಲದೆ, ಈ ಭೇದಗಳೆಲ್ಲ ಸಂಪೂರ್ಣವಾಗಿ ಅಳಿದುಹೋಗುವುದು ಇಷ್ಟವೆ ಎಂಬ ಪ್ರಶ್ನೆಗೂ ನಿರ್ಧಾರದ ಉತ್ತರಕೊಡುವುದು ದುಸ್ತರವಿದೆ. ಬಹುತರವಾಗಿ ಇಂಥ ಕೆಲವೊಂದು ಭೇದಗಳಿಂದಲೇ ಮಾನವನ ಪ್ರಗತಿ ಹೆಚ್ಚು ಚೆನ್ನಾಗಿ ಸಾಧಿಸುತ್ತದೆಯೆಂದು ಕಾಣುತ್ತದೆ.* ಕಮ್ಯುನಿಸ್ಟ ವಿಚಾರ ಪ್ರಣಾಲಿಯ ಜನರು, ಕೆಲವೊಂದು ಧರ್ಮಮತಪುರಸ್ಕರ್ತರು ಎಲ್ಲ ಭೇದಗಳನ್ನು ಅಳಿಸಿಬಿಟ್ಟು ಇಡಿಯ ಜಗತ್ತಿಗೆ ಒಂದೇ ಒಂದು ಮಾರ್ಗವನ್ನು—ಸಾಧ್ಯವಿದ್ದರೆ ಸಾಂತ್ವನ ರೀತಿಯಿಂದ, ಅವಶ್ಯಬಿದ್ದರೆ ಕೈಜೋರಿನಿಂದ-- ಹಾಕಿಕೊಡಬೇಕೆಂಬ ಹವ್ಯಾಸದಲ್ಲಿದ್ದಾರೆ. ಇದು ಪ್ರಜಾಪ್ರಭುತ್ವದ ರೀತಿಯಲ್ಲ; ಸರ್ವಾಧಿಕಾರತ್ವದ ರೀತಿ.

ಮಾನವನ ಸಹಜವಾದ ಆಶೆ ಆಕಾಂಕ್ಷೆಗಳಿಗೆ ಸಂಸ್ಕೃತಿಯೆಂದು ಹೆಸರು ಕೊಡುವದು ಅಷ್ಟೇನು ಸಾಧುವಾಗಿ ಕಾಣುವುದಿಲ್ಲ. ಅದಕ್ಕೆ ಮಾನವತೆಯೆಂದು ಕರೆಯಬಹುದು. ಪ್ರಪಂಚದಲ್ಲಿ ಬೇರೆಬೇರೆ ಸಂಸ್ಕೃತಿಗಳಿವೆಯೆಂದಿಟ್ಟುಕೊಂಡೇ

---

* ..... a world culture, which is simply a uniform culture would be no culture at all. We would have a humanity dehumanised. It would be a nightmare.- *T. S. Eliot*

ವಿವೇಚನೆಯನ್ನು ಮಾಡಬೇಕು. ಹಾಗಾದರೆ ಸಂಸ್ಕೃತಿಯ ಅಭ್ಯಾಸಕ್ಕೆ ಪ್ರದೇಶವನ್ನು ನಿರ್ಧರಿಸುವುದು ಹೇಗೆ ? ಸಂಸ್ಕೃತಿಯ ಕ್ಷೇತ್ರಸೀಮೆ ಯಾವುದು ? ಅದು ಒಂದು ರಾಷ್ಟ್ರವೆ ? ಜನಾಂಗವೆ ? ಮತವೆ ? ಭಾಷೆಯೆ ? ಜಾತಿಯೆ ? ಇವುಗಳಲ್ಲಿ ಒಂದೊಂದೂ ಸಂಸ್ಕೃತಿಯ ಅಂಗಗಳಾಗಿದ್ದರೂ ಒಂದರಿಂದಲೇ ಸಂಸ್ಕೃತಿಯ ಕ್ಷೇತ್ರವನ್ನು ಗೊತ್ತುಪಡಿಸಲಿಕ್ಕೆ ಸಾಧ್ಯವಿಲ್ಲ. ಮತಧರ್ಮಕ್ಕೂ, ಸಂಸ್ಕೃತಿಗೂ, ಅತ್ಯಂತ ನಿಕಟ ಸಂಬಂಧವಿದ್ದರೂ ಅದೊಂದರಿಂದಲೇ ಒಂದೇ ಸಂಸ್ಕೃತಿಯಾಗಲಾರದು. ಚೀನದೇಶದ ಕ್ರಿಸ್ತೀಧರ್ಮದವನಿಗೂ, ಆಫ್ರಿಕಾಖಂಡದ ನಿಗ್ರೋ ಕ್ರೈಸ್ತನಿಗೂ, ಇಂಗ್ಲಂಡದ ಕ್ರೈಸ್ತಮತದವನಿಗೂ ಸಾಂಸ್ಕೃತಿಕ ಸಂಬಂಧ ಎಳ್ಳನಿತೂ ಇಲ್ಲ. ಇವರೆಲ್ಲರೂ ಬೇರೆಬೇರೆ ಸಂಸ್ಕೃತಿಗಳಿಗೆ ಒಳಪಟ್ಟವರು. ಅನೇಕಸಾರಿ ಮತಧರ್ಮದ ಮೇಲೆ ಸಂಸ್ಕೃತಿಯನ್ನು ನಿರ್ಧರಿಸುವ ಹವ್ಯಾಸವನ್ನು ಕಾಣುತ್ತೇವೆ. ಮುಸ್ಲಿಮರು ಎಲ್ಲಿಯೇ ಇರಲಿ, ಎಲ್ಲರೂ ಒಂದೇ ಸಂಸ್ಕೃತಿಗೆ ಒಳಪಟ್ಟವರೆಂದು ಅನೇಕ ಮುಸ್ಲಿಮ ಮುಖಂಡರು ಉದ್ಘೋಷಿಸುತ್ತಾರೆ. ಜಿನ್ನಾಸಾಹೇಬರು ಇದೇ ಕೂಗನ್ನು ಎತ್ತಿಕೊಂಡು ಪಾಕಿಸ್ತಾನದ ಕಲ್ಪನೆಯನ್ನು ಪುರಸ್ಕರಿಸಿದರು. ಮುಸ್ಲಿಮನೊಬ್ಬನಿದ್ದರೂ ಅವನದು ಒಂದು ರಾಷ್ಟ್ರ, ವಿಶಿಷ್ಟಸಂಸ್ಕೃತಿ ಎಂದು ಅವರ ವಾದವಾಗಿತ್ತು. ಆದರೆ ಈ ವಿಚಾರವು ಸಮಂಜಸವಾಗಿಲ್ಲ; ವಸ್ತುಸ್ಥಿತಿ ಇದಕ್ಕೆ ವಿಪರೀತವಾಗಿದೆ. ಹೀಗೆಯೇ ನಾವು ಭಾಷೆ, ಜನಾಂಗ ಮುಂತಾದುವುಗಳಿಗೂ ಹೇಳಬಹುದು. ಒಂದೇ ಮೂಲಮಾನವ ಜಾತಿಯ ಜನರು ಬೇರೆಬೇರೆ ಸಂಸ್ಕೃತಿಯವರಿರಬಹುದು; ರಾಜಕೀಯವಾಗಿ ಒಂದೇ ರಾಷ್ಟ್ರದಲ್ಲಿರುವವರೂ ಭಿನ್ನಸಂಸ್ಕೃತಿಯವರಿರಬಹುದು.

ಸಂಸ್ಕೃತಿಯ ಪ್ರದೇಶವನ್ನು ನಿರ್ಧರಿಸುವಾಗ ಈ ವಿಚಾರಗಳನ್ನು ಗಮನಿಸುವುದು ಅವಶ್ಯವೆಂದು ನನಗೆ ತೋರುತ್ತದೆ. (೧) ಅದು ಒಂದು ನಿರ್ದಿಷ್ಟವಾದ ಭೌಗೋಲಿಕ ಪ್ರದೇಶವಿರಬೇಕು. (೨) ಸಂಸ್ಕೃತಿಯ ಅಭ್ಯಾಸಕ್ಕೆ ಅವಶ್ಯವೆಂದು ಮೇಲೆ ಹೇಳಿದ ಎಲ್ಲ ಅಂಶಗಳಲ್ಲಿ—ಇಲ್ಲವೆ ಹೆಚ್ಚಿನ ಸಂಖ್ಯೆಯ ಅಂಶಗಳಲ್ಲಿ—ಆ ಪ್ರದೇಶ ಜನರ ಜೀವನ ರೀತಿಯ ಸಮರೂಪವಾಗಿರಬೇಕು. ಹೀಗಿದ್ದರೆ ಅದೊಂದು ವಿಶಿಷ್ಟ ಸಂಸ್ಕೃತಿಯ ಪ್ರದೇಶವೆಂದು ನಾವು ಇಟ್ಟುಕೊಳ್ಳಬಹುದು.

ಹೀಗೆ ಒಂದು ಪ್ರದೇಶವನ್ನು ನಿರ್ಧರಿಸಿಕೊಂಡರೂ ಆ ಪ್ರದೇಶದಲ್ಲಿಯೇ ಒಂದೊಂದು ವಿಭಾಗದಲ್ಲಿ ಭೇದಗಳು ಕಂಡುಬರುತ್ತವೆ. ಜಿಲ್ಲೆಜಿಲ್ಲೆಗೂ—ಅದೇಕೆ ಹಳ್ಳಿಹಳ್ಳಿಗೂ ಕೆಲವು ವಿಷಯಗಳಲ್ಲಿ ಭಿನ್ನತೆ ಒಡಮೂಡುತ್ತದೆ. ಹಾಗಾದರೆ ಇವೆಲ್ಲ ಭಿನ್ನತೆಗಳಿಗೂ ಒಂದೊಂದು ಸಂಸ್ಕೃತಿಯೆಂದು ಏಕೆ ಕರೆಯಬಾರದು ? ಹೀಗೆ ಸ್ಥಳೀಯ ಭಿನ್ನತೆಗೆಲ್ಲ ಸಂಸ್ಕೃತಿಯೆಂದು ಹೇಳುತ್ತ ಹೋದರೆ ಅದಕ್ಕೆ ಕೊನೆಯೆಲ್ಲಿ ? ಓಣಿ ಓಣಿಗೂ, ಮನೆಮನೆಗೂ, ಒಂದೇ ಮನೆಯಲ್ಲಿ ವ್ಯಕ್ತಿವ್ಯಕ್ತಿಗೂ ವ್ಯತ್ಯಾಸಗಳಿದ್ದೇ ಇರುತ್ತವೆ. ಇವುಗಳಿಗೆಲ್ಲ ಸಂಸ್ಕೃತಿಯೆಂದು ಹೇಳುವುದು ಸರಿಯಲ್ಲ. ಅವುಗಳಿಗೆ ಸ್ಥಲರೂಢಿಗಳು, ವ್ಯಕ್ತಿ ವೈಶಿಷ್ಟ್ಯಗಳು ಎಂದು ಹೇಳೋಣ.

ಸಂಸ್ಕೃತಿ ಪ್ರದೇಶದ ಸೀಮಾರೇಷೆಗಳೂ ಕಾಲಕ್ರಮದಲ್ಲಿ ಬದಲಿಸಬಹುದೆಂಬು ದನ್ನು ನಾವು ಲಕ್ಷಿಸಬೇಕು. ಸಂಸ್ಕೃತಿಯೆಂಬುದು ಪ್ರಕೃತಿನಿರ್ಮಿತವಲ್ಲ; ಮಾನವ ನಿರ್ಮಿತ. ಮಾನವಯತ್ನದಿಂದ ಸಂಸ್ಕೃತಿಯೂ ಬದಲಿಸಬಹುದು. ಇಂದಿನ ಅಫಗಾನಿಸ್ತಾನವು ಮೊದಲು ಭಾರತದ ಅಂಗವಾಗಿದ್ದಿತು. ಧೃತರಾಷ್ಟ್ರನ ರಾಣಿ ಗಾಂಧಾರದೇಶದವಳು—ಎಂದರೆ ಇಂದಿನ ಕಂದಹಾರದವಳು. ಆ ದೇಶದಲ್ಲಿ ಹಿಂದೆ ಭಾರತೀಯ ಸಂಸ್ಕೃತಿಯೇ ರೂಢವಾಗಿತ್ತು. ಕಾಲಕ್ರಮದಲ್ಲಿ ಪರಿಸ್ಥಿತಿ ಮಾರ್ಪಟ್ಟಿತು. ಇದೇ ರೀತಿ ಭಾರತದ ಅಂಗವಾಗಿದ್ದು, ಇಂದು ಸಿಡಿದು ಹೋದ, ಪಾಕಿಸ್ತಾನದ ಪ್ರದೇಶಗಳ ಸಂಸ್ಕೃತಿ ಕೆಲವು ಶತಮಾನಗಳ ನಂತರ ಗುರುತು ಸಿಕ್ಕಲಾರದಷ್ಟು ಭಾರತೀಯ ಸಂಸ್ಕೃತಿಯಿಂದ ಭಿನ್ನವಾಗಬಹುದು. ಸಂಸ್ಕೃತಿಯನ್ನು ಪೋಷಿಸಿ ಕೊಂಡು, ಕಾಪಾಡಿಕೊಂಡು ಹೋಗುವುದು ಜನಾಂಗದ ಕಾರ್ಯ. ಜನಾಂಗವನ್ನು ರೂಪಿಸುವದು ಸಂಸ್ಕೃತಿ ; ಸಂಸ್ಕೃತಿಯನ್ನು ರೂಪಿಸುವುದು ಜನಾಂಗ. ಅವು ಪರಸ್ಪರ ಪರಿಣಾಮಕಾರಿಗಳು.

ಸಂಸ್ಕೃತಿಯ ಕೆಲ ಮುಖ್ಯ ಅಂಶಗಳ ಮಹತ್ವ, ಅವು ಸಂಸ್ಕೃತಿಯನ್ನು ತಿಳಿದು ಕೊಳ್ಳಲು ಹೇಗೆ ಸಹಾಯಕವಾಗುತ್ತವೆ ಎನ್ನುವುದನ್ನು ಸಮಾಲೋಚಿಸೋಣ—

**ಮತಧರ್ಮಗಳು**— ಇವು ಸಂಸ್ಕೃತಿಯ ಅತಿ ಮುಖ್ಯವಾದ ಅಂಗವಾಗಿವೆ. ಮತಧರ್ಮಗಳೇ ಸಂಸ್ಕೃತಿಯೆಂದು ಹೇಳುವಷ್ಟು ಅವಕ್ಕೂ ಸಂಸ್ಕೃತಿಗೂ ನಿಕಟ ಸಂಬಂಧವಿದೆ. ಆದರೆ ಮತಧರ್ಮಗಳೇ ಸಂಸ್ಕೃತಿಯಲ್ಲ. ಯಾವ ಮತಧರ್ಮಕ್ಕೂ ಒಳಪಟ್ಟಿರದ ಮನುಷ್ಯನು ಒಂದು ವಿಶಿಷ್ಟ ಸಂಸ್ಕೃತಿಗೆ ಒಳಪಟ್ಟಿರಬಹುದು. ಇಂದಿನ ಭಾರತದ ಸುಶಿಕ್ಷಿತ ಯುವಕನು ಯಾವ ಮತದಲ್ಲಿಯೂ ವಿಶ್ವಾಸವಿಲ್ಲದವನಾಗಿರ ಬಹುದು. ಆದರೂ ಆತನ ಸಂಸ್ಕೃತಿ, ಭಾರತೀಯ ಸಂಸ್ಕೃತಿ. ಭಾರತದಲ್ಲಿಯ ಎಲ್ಲ ಮತಧರ್ಮಗಳು ಈ ಭಾರತೀಯ ಸಂಸ್ಕೃತಿಯ ಮೇಲೆ ಪ್ರಭಾವ ಬೀರಿವೆ. ಹೀಗಿರು ವಾಗ ಅಪ್ರತ್ಯಕ್ಷವಾಗಿಯಾದರೂ ಭಾರತದ ಮತಧರ್ಮಗಳ ಪ್ರಭಾವವು ಈ ಸುಶಿಕ್ಷಿತ ಯುವಕನ ಮೇಲಾಗಿರುತ್ತದೆ. ಯಾವ ದೇಶದ ಇತಿಹಾಸವನ್ನು ನಾವು ಪರಿಶೀಲಿ ಸಿದರೂ ಮತಧರ್ಮಗಳು ಆ ದೇಶದ ಜನಜೀವನದ ಮೇಲೆ ಅತಿಗಾಢವಾದ ಪರಿ ಣಾಮವನ್ನು ಮಾಡಿವೆಯೆಂಬುದು ಸ್ಪಷ್ಟವಾಗುತ್ತದೆ. ಸಾಹಿತ್ಯ, ಲಲಿತಕಲೆ, ಸಮಾಜ ರಚನೆ, ರಾಜಕಾರಣ, ಆದರ್ಶಗಳು, ಎಲ್ಲವುಗಳಲ್ಲಿಯೂ ಮತಧರ್ಮಗಳ ಪ್ರಭಾವ ವನ್ನು ಕಾಣುತ್ತೇವೆ. ಯುರೋಪ ಖಂಡದಲ್ಲಿ ಕ್ರೈಸ್ತಮತದ ಪ್ರಚಾರವಾದನಂತರ ಅಲ್ಲಿಯ ಸಂಸ್ಕೃತಿ ಬೇರೆ ದಾರಿಯನ್ನೇ ಹಿಡಿಯಿತು. ಕ್ರೈಸ್ತಮತದ ಆದರ್ಶಗಳೂ, ರೀತಿನೀತಿಗಳೂ ಗ್ರೀಕ ಮತ್ತು ರೋಮನ್ ಸಂಸ್ಕೃತಿಯ ತಳಹದಿಯ ಮೇಲೆ ನಿಂತಿದ್ದ ಯುರೋಪಿನ ಸಂಸ್ಕೃತಿಯನ್ನು ಮಾರ್ಪಡಿಸಿದವು—ಅದೇಕೆ ಅದನ್ನು ಪೂರ್ತಿನಾಶ ಮಾಡಿದವೆಂದೂ ಹೇಳಬಹುದು. ಇಂದು ಗ್ರೀಕ್ ಮತ್ತು ರೋಮನ್ ಸಂಸ್ಕೃತಿಗಳನ್ನು ಮೃತ ಸಂಸ್ಕೃತಿಗಳೆಂದು ಕರೆಯುತ್ತೇವೆ. ಇಸ್ಲಾಂ ಧರ್ಮವು ಪ್ರವೇಶಿಸಿದ ರಾಷ್ಟ್ರಗಳು

ತಮ್ಮ ಪೂರ್ವ ಸಂಸ್ಕೃತಿಯನ್ನು ಬಹುಮಟ್ಟಿಗೆ ಕಳೆದುಕೊಂಡವು. ಇರಾಣ, ಇಜಿಪ್ತ ಗಳು ಇದಕ್ಕೆ ನಿದರ್ಶನಗಳಾಗಿವೆ. ಭಾರತದ ಕಡೆಗೆ ದೃಷ್ಟಿಯನ್ನು ಹೊರಳಿಸಿದಾಗ ಮತಧರ್ಮಗಳ ಪ್ರಭಾವವು ಹೆಜ್ಜೆಹೆಜ್ಜೆಗೂ ಕಾಣುತ್ತದೆ. ನಮ್ಮ ಕಟ್ಟಡಗಳು, ಲಲಿತ ಕಲೆಗಳು, ಸಾಹಿತ್ಯ ಎಲ್ಲವೂ ಮತಧರ್ಮಪ್ರಚೋದಿತವಾಗಿವೆ. ಮತಧರ್ಮಗಳನ್ನು ಬಿಟ್ಟು ಇಲ್ಲಿ ಇನ್ನೇನಾದರೂ ಇದೆಯೋ ಅನ್ನುವಷ್ಟು ವ್ಯಾಪಕವಾದ ಪರಿಣಾಮವು ಕಂಡುಬರುತ್ತದೆ. ಜನತೆಯ ಮನಸ್ಸು ನಡೆನುಡಿಗಳು ಮತಧರ್ಮಗಳಿಂದ ರೂಪಿತ ವಾಗುತ್ತವೆ. ಆಧುನಿಕ ಯುಗದಲ್ಲಿ ಮತಗಳಿಗೆ ಹಿಂದಿನಷ್ಟು ಮಹತ್ವವಿಲ್ಲ. ಅವಿಶ್ವಾಸದ ವಾತಾವರಣವು ಎಲ್ಲೆಡೆಗೂ ಬೆಳೆಯ ಹತ್ತಿದೆ. ಏನಿದ್ದರೂ ಒಂದು ಪ್ರದೇಶದ ಸಂಸ್ಕೃತಿಯನ್ನು ತಿಳಿದುಕೊಳ್ಳಲಿಕ್ಕೆ ಅಲ್ಲಿ ಪರಂಪರೆಯಾಗಿ ಪ್ರಚಲಿತವಿರುವ ಮತ ಧರ್ಮಗಳನ್ನೂ, ಜನಜೀವನದ ಮೇಲೆ ಅವು ಬೀರಿದ ಪ್ರಭಾವವನ್ನೂ ತಿಳಿದುಕೊಳ್ಳು ವದು ಅತ್ಯವಶ್ಯವಾಗಿರುತ್ತದೆ.

**ದರ್ಶನಗಳು**––ನಮ್ಮ ದೇಶದಲ್ಲಿ ಮತಧರ್ಮಗಳಿಗೂ ದರ್ಶನಗಳಿಗೂ ಒಂದು ಬಗೆಯ ಅಭೇದಭಾವವಿದೆ. ಆದರೆ ಬೇರೆ ದೇಶಗಳಲ್ಲಿ—ವಿಶೇಷವಾಗಿ ಯುರೋಪ ಖಂಡದಲ್ಲಿ ದರ್ಶನಗಳೆಲ್ಲವೂ ಮತಧರ್ಮಗಳಾಗುವುದಿಲ್ಲ. ನಮ್ಮಲ್ಲಿ ದರ್ಶನಗಳು ಸಾಧನ ಮಾರ್ಗಗಳು ; ಯುರೋಪದಲ್ಲಿ ಅವು ಬೌದ್ಧಿಕ ವ್ಯವಸಾಯಗಳು. ಒಂದು ಪ್ರದೇಶದಲ್ಲಿ ಮನ್ನಣೆಯನ್ನು ಪಡೆದ ದರ್ಶನಗಳು ಅಲ್ಲಿಯ ಜನಜೀವನದ ಆದರ್ಶವನ್ನು ನಿರ್ಧರಿಸುತ್ತವೆ. ಶೂನ್ಯವಾದ, ಮಾಯವಾದ, ಅತಿ ಮಾನವವಾದ ಮೊದಲಾದುವು ಗಳು ಆಯಾ ಪ್ರದೇಶದ ಜನರ ಮೇಲೆ ಗಾಢವಾದ ಪ್ರಭಾವವನ್ನು ಬೀರಿವೆ. ಹಿಟ್ಲರನ ಕಾಲದ ಜರ್ಮನಿಯ ಸಾಮ್ರಾಜ್ಯಲಾಲಸೆ, ಜರ್ಮನ್ ಜನಾಂಗದ ಶ್ರೇಷ್ಠತ್ವದ ಕಲ್ಪನೆ ಮೊದಲಾದುವುಗಳಿಗೆ ನೀಚೆ (Nitchze)ಯ ಅತಿ ಮಾನವ ವಾದದ ದರ್ಶನವು (Cult of the superman) ಬಹುಮಟ್ಟಿಗೆ ಕಾರಣವೆಂದು ಹೇಳುತ್ತಾರೆ. ನಮ್ಮ ದೇಶದಲ್ಲಿ ಕಾಲಕಾಲಕ್ಕೆ ಉದಯ ಹೊಂದಿದ ತತ್ವಜ್ಞಾನಿಗಳ ದರ್ಶನಗಳು ನಮ್ಮ ಜನರ ಮೇಲೆ ವರ್ಚಸ್ಸು ಬೀರಿವೆ.

**ಭಾಷೆ, ಸಾಹಿತ್ಯ**—ಒಂದು ಜನಾಂಗದ ಆಂತರಿಕ ಜೀವನದ ಕೈಗನ್ನಡಿ, ಭಾಷೆ ಎಂದು ಹೇಳುತ್ತಾರೆ. ಜನರ ಆಶೆ ಆಕಾಂಕ್ಷೆಗಳು, ಭಾವಗಳು, ವಿಚಾರಗಳು, ಬೇರೆ ಎಲ್ಲ ವ್ಯವಹಾರಗಳು ಭಾಷೆಯ ಮುಖಾಂತರವೇ ನಡೆಯಬೇಕಾಗುತ್ತದೆ. ಹೀಗಿರು ವಾಗ ಒಂದು ಭಾಷೆಯನ್ನಾಡುವ ಜನರ ಜೀವನವು ಒಂದು ತೆರನಾಗಿ ರೂಪುಗೊಳ್ಳು ವುದು ಸ್ವಾಭಾವಿಕವಾಗಿದೆ. ಎಂತಲೇ ಭಾಷೆಗೂ ಸಂಸ್ಕೃತಿಗೂ ಇಷ್ಟು ನಿಕಟವಾದ ಸಂಬಂಧ. ಒಂದೊಂದು ಭಾಷೆಯನ್ನಾಡುವ ಜನರು ಒಂದೊಂದು ಸಂಸ್ಕೃತಿ ಯವರು ಎಂದು ಕೂಡ ಹಲವರು ಪ್ರತಿಪಾದಿಸುತ್ತಾರೆ. ಇದು ಅತಿಶಯೋಕ್ತಿಯ ವಿಚಾರ. ಜನರ ಭಾಷೆಗಿಂತಲೂ ಆ ಭಾಷೆಯಲ್ಲಿ ವ್ಯಕ್ತವಾಗುವ ಭಾವವು ಹೆಚ್ಚು ಮಹತ್ವದ್ದು. ಬೇರೆಬೇರೆ ಭಾಷೆಗಳಲ್ಲಿ ಒಂದೇ ಭಾವವು ವ್ಯಕ್ತವಾಗುತ್ತಿದ್ದರೆ ಒಂದೇ

ಸಂಸ್ಕೃತಿಯಲ್ಲವೇ? ಇಲ್ಲಿ ಭಾಷೆ ಬೇರೆಯಾದರೂ ಸಂಸ್ಕೃತಿಯೊಂದೇ. ಭಾಷೆ ಸಂಸ್ಕೃತಿಯ ವಾಹಕವೆಂದು ಈ ಚರ್ಚೆಯಲ್ಲಿ ಮುಖ್ಯ ಸ್ಥಾನವನ್ನು ಪಡೆಯುತ್ತದೆ.

'ಸಾಹಿತ್ಯವು ಜನಜೀವನದ ಪಡಿನೆಳಲು.' ಅಲ್ಲಿ ಜನಾಂಗದ ಆಂತರಿಕ ಜೀವನವೂ ಬಾಹ್ಯಜೀವನವೂ ವ್ಯಕ್ತವಾಗಿರುತ್ತವೆ. ಒಂದು ಜನಾಂಗವನ್ನು ತಿಳಿದುಕೊಳ್ಳಲು ಆ ಜನಾಂಗದ ಇತಿಹಾಸಕ್ಕಿಂತಲೂ ಸಾಹಿತ್ಯವು ಹೆಚ್ಚು ಪ್ರಯೋಜನಕಾರಿಯಾಗುತ್ತದೆ. ಆಂಗ್ಲದೇಶದ ಇತಿಹಾಸವನ್ನು ಓದುವುದಕ್ಕಿಂತಲೂ ಆಂಗ್ಲಭಾಷೆಯ ಸಾಹಿತ್ಯವನ್ನು ಅಭ್ಯಾಸಿಸಿದರೆ ಅಲ್ಲಿಯ ಜನತೆಯ ಪರಿಚಯವು ಹೆಚ್ಚು ಆತ್ಮೀಯ ರೀತಿಯಲ್ಲಾಗುತ್ತದೆ ಒಬ್ಬ ಮಹಾಕವಿಯ ಮಹಾಕೃತಿ ಇಡಿಯ ಜನಾಂಗದ ಜೀವನದ ಮೇಲೆಯೇ ಬೆಳಕನ್ನು ಬೀರುತ್ತದೆ. ಭಾರತೀಯರ ಜೀವನವನ್ನು ತಿಳಿದುಕೊಳ್ಳಬೇಕಾದರೆ ರಾಷ್ಟ್ರೀಯ ಮಹಾಪುರಾಣಗಳಾದ ಮಹಾಭಾರತ ರಾಮಾಯಣಗಳನ್ನು ಅಭ್ಯಸಿಸಬೇಕು.

**ಲಲಿತ ಕಲೆಗಳು**—ವಾಸ್ತುಶಿಲ್ಪ, ಮೂರ್ತಿಶಿಲ್ಪ, ಚಿತ್ರಶಿಲ್ಪ, ನೃತ್ಯ, ನಾಟ್ಯ, ಸಂಗೀತ ಮೊದಲಾದುವೆಲ್ಲ ಲಲಿತಕಲೆಗಳೆನ್ನಿಸುತ್ತವೆ. ಇವುಗಳಲ್ಲಿ ಜನಾಂಗದ ಮನೋಧರ್ಮವು ವ್ಯಕ್ತವಾಗುತ್ತದೆ. ಜನಾಂಗದ ಅಂತರಾತ್ಮವೇ ಇವುಗಳಲ್ಲಿ ಒಡಮೂಡುತ್ತವೆ. ರಾಷ್ಟ್ರದ ಸಂಸ್ಕೃತಿಯನ್ನು ತಿಳಿಯಲು ಇವೆಲ್ಲವುಗಳ ಪರಿಜ್ಞಾನವು ಅತ್ಯಂತ ಅವಶ್ಯ ಪ್ರಾಚೀನ ಕಾಲದ ಇಜಿಪ್ತದ ಸಂಸ್ಕೃತಿಯನ್ನು ತಿಳಿದುಕೊಳ್ಳಲು ಅಲ್ಲಿಯ ಭವ್ಯ ಕಟ್ಟಡಗಳೂ, ವಿಚಿತ್ರಮೂರ್ತಿಗಳೂ ನಮಗೆ ಮುಖ್ಯ ಸಾಧನ. ಗ್ರೀಸ, ರೋಮ, ಭಾರತಗಳ ಪ್ರಾಚೀನ ಸಂಸ್ಕೃತಿಗಳನ್ನೂ ಇಂಗ್ಲಂಡ, ಅಮೇರಿಕೆಗಳ ಅರ್ವಾಚೀನ ಸಂಸ್ಕೃತಿಗಳನ್ನು ಅಭ್ಯಸಿಸಬೇಕಾದರೆ ಅಲ್ಲಿಯ ಕಲೆಗಳ ಕಡೆಗೆ ನಾವು ಗಮನ ಕೊಡಬೇಕು. ಇವುಗಳಲ್ಲಿ ವಾಸ್ತುಶಿಲ್ಪ, ಮೂರ್ತಿಶಿಲ್ಪಗಳು ಶಾಶ್ವತವಾಗಿ ಉಳಿಯುವ ಸ್ವರೂಪವುಳ್ಳವುಗಳಾದ್ದರಿಂದ ಪ್ರಾಚೀನ ಸಂಸ್ಕೃತಿಗಳ ಇತಿಹಾಸಕ್ಕೆ ಇವೇ ಆಧಾರಗಳಾಗುತ್ತವೆ. ಮೂರ್ತಿಶಿಲ್ಪದಲ್ಲಿಯೂ, ಚಿತ್ರಶಿಲ್ಪದಲ್ಲಿಯೂ ಆಯಾ ಕಾಲದ ಜನರ ವೇಷ ಭೂಷಣಗಳೂ, ಯುದ್ಧೋಪಕರಣಗಳೂ, ಸಾಂಘಿಕ ಜೀವನದ ಉಳಿದ ಸಲಕರಣೆಗಳೂ ಚಿತ್ರಿತವಾಗಿರುತ್ತವೆ. ಆ ಕಾಲದ ಮತಧರ್ಮಗಳ ತತ್ತ್ವಗಳನ್ನು ತಿಳಿದುಕೊಳ್ಳಲು ಸಹಾಯಕಾರಿಯಾಗುತ್ತವೆ.

**ಸಮಾಜರಚನೆ, ಧರ್ಮಶಾಸ್ತ್ರ**— ಸಮಾಜರಚನೆಯು ಬಾಹ್ಯಜೀವನದ ಅನುಕೂಲಕ್ಕಾಗಿ ಉಂಟಾದದ್ದೆಂದು ಎನ್ನಿಸಬಹುದಾದರೂ ಅದರ ಹಿನ್ನೆಲೆಯಾಗಿ ಆ ಕಾಲದ ಜನಾಂಗದ ಆದರ್ಶಗಳೂ, ಆಕಾಂಕ್ಷೆಗಳೂ ಇರುತ್ತವೆಂಬುದನ್ನು ಮರೆಯಲಾಗದು. ಸಮಾಜರಚನೆಯು ಕೆಲವು ಮೂಲತತ್ತ್ವಗಳನ್ನು ಅವಲಂಬಿಸಿರುತ್ತದೆ. ಸ್ತ್ರೀಪುರುಷ ಸಂಬಂಧ, ವಿವಾಹಸಂಸ್ಥೆಗಳು ಸಂಸ್ಕೃತಿಯ ಮಾನದಂಡಗಳು. ಈ ತತ್ತ್ವಗಳಲ್ಲಿ ಆ ಪ್ರದೇಶದ ಸಂಸ್ಕೃತಿಯನ್ನು ಕಾಣಬಹುದು. ಕೆಲವೊಂದು ಸಮಾಜಶಾಸ್ತ್ರಜ್ಞರ ಅಭಿಪ್ರಾಯದಂತೆ ಸಮಾಜ ಶಾಸ್ತ್ರವೇ (Sociology) ಸಂಸ್ಕೃತಿಶಾಸ್ತ್ರ.

ಆದರೆ ಸಮಾಜಶಾಸ್ತ್ರದಲ್ಲಿ ಕೆಲವು ಮಾನಸಿಕ-ಆಧ್ಯಾತ್ಮಿಕ ಅಂಶಗಳಿಗೆ ಅಷ್ಟೊಂದು ಪ್ರಾಧಾನ್ಯವಿರುವದಿಲ್ಲ. ಸಂಸ್ಕೃತಿ ಸಮಾಜರಚನೆಯನ್ನು ಅಂಗಮಾಡಿಕೊಂಡ ಒಂದು ವ್ಯಾಪಕವಾದ ಪದ. ಸಮಾಜರಚನೆಯು ಸಂಸ್ಕೃತಿಯ ರೀತಿಯನ್ನು ಗುರುತಿಸುವದಕ್ಕೆ ಬಹು ಮುಖ್ಯವಾದ ಸಾಧನ. ಪ್ರಪಂಚದಲ್ಲಿ ಕಾಣಬರುವ ನಾನಾ ಪ್ರಕಾರದ ಸಮಾಜರಚನಾಕ್ರಮವು ಬೇರೆ ಬೇರೆ ಸಂಸ್ಕೃತಿಗಳ ದ್ಯೋತಕವಾಗಿದೆ.

ಧರ್ಮಶಾಸ್ತ್ರಗಳು ಇಲ್ಲವೆ ಶಾಸನಗಳು ಕಾಯದೆ ಕಾನೂನುಗಳು ಸಮಾಜವನ್ನು ನಿಯಮಿತಗೊಳಿಸುವ ಮುಖ್ಯ ಸಾಧನಗಳು. ಧರ್ಮಶಾಸ್ತ್ರವು ಅನೇಕ ಸಲ ಮತು ಧರ್ಮವನ್ನು ಅವಲಂಬಿಸಿರುತ್ತದೆ. ನಮ್ಮ ದೇಶದಲ್ಲಿಯೇ ಹಿಂದೂ ಕಾಯದೆ, ಮುಸ್ಲಿಂ ಕಾಯದೆ, ಹೀಗೆ ಬೇರೆ ಬೇರೆ ಕಾಯದೆಗಳು ಪ್ರಚಲಿತವಿವೆ. ಇತ್ತೀಚೆಗೆ ಶಾಸನಗಳನ್ನು ಮತಧರ್ಮಗಳಿಂದ ಬೇರ್ಪಡಿಸಿ ಲೌಕಿಕರೀತಿಯಿಂದ ನಿಯೋಜಿಸ ಬೇಕೆಂಬ ಅಭಿಪ್ರಾಯವು ಪ್ರಬಲವಾಗುತ್ತಿದೆ. ಆದರೆ ಸಂಸ್ಕೃತಿಯ ಅಭ್ಯಾಸಕ್ಕೆ ಧರ್ಮಶಾಸ್ತ್ರಗಳ ಪರಿಜ್ಞಾನವೂ ಆವಶ್ಯಕ.

**ರಾಜಕೀಯ, ಆರ್ಥಿಕಪರಿಸ್ಥಿತಿ** - ಸಮಾಜರಚನೆಯ ವಿಷಯವಾಗಿ ಹೇಳಿದಂತೆ ರಾಜಕೀಯ ವಿಚಾರಗಳೂ ರಾಜ್ಯಭಾರ ಕ್ರಮವೂ ಜನಾಂಗದ ಆದರ್ಶ ಆಕಾಂಕ್ಷೆಗಳಿಂದ ರೂಪಿತವಾಗಿರುತ್ತದೆ. ಈ ರೀತಿಯಾಗಿ ರಾಜಕೀಯ ಪರಿಸ್ಥಿತಿಯೂ ಸಂಸ್ಕೃತಿ ಅಭ್ಯಾಸದ ಒಂದು ಮುಖ್ಯ ಅಂಗವಾಗಿರುತ್ತದೆ. ಆಧುನಿಕಯುಗದಲ್ಲಿ ರಾಜಕೀಯ ವಿಚಾರವು ಉಳಿದೆಲ್ಲ ವಿಚಾರಗಳಿಗಿಂತಲೂ ಬಹಳ ಮಹತ್ವದ ಸ್ಥಾನ ವನ್ನು ಪಡೆದಿದೆ. ಯಾವದೇ ಒಂದು ಕಾಲದ ಸಂಸ್ಕೃತಿಯನ್ನು ತಿಳಿದುಕೊಳ್ಳಲಿಕೆ ಆ ಕಾಲದ ರಾಜ್ಯಪರಿಸ್ಥಿತಿ ಹೇಗಿತ್ತು, ರಾಜನ ವಿಷಯಕ್ಕೆ ಇಲ್ಲವೆ ಸರಕಾರದ ವಿಷಯಕ್ಕೆ ಜನ ಸಾಮಾನ್ಯರ ದೃಷ್ಟಿ ಹೇಗಿತ್ತು ಎಂಬುವು ಮುಖ್ಯವಾದವುಗಳು.

ಆರ್ಥಿಕ ಪರಿಸ್ಥಿತಿಯೇ ಮಾನವನ ಎಲ್ಲ ವ್ಯಾಪಾರಗಳಿಗೂ ಮೂಲ ಪ್ರಚೋದಕ ಕಾರಣವೆಂದು ಮಾರ್ಕ್ಸವಾದಿಗಳು ಹೇಳುತ್ತಾರೆ.—ಅವರ ಅಭಿಪ್ರಾಯದಂತೆ ಧರ್ಮ, ಮತ, ಸ್ತ್ರೀಪುರುಷರ ಸಂಬಂಧ, ಲಲಿತಕಲೆ, ಸಾಹಿತ್ಯ, ಇವೆಲ್ಲವುಗಳೂ ಜನತೆಯ ಆರ್ಥಿಕಪರಿಸ್ಥಿತಿಯಿಂದಲೇ ರೂಪಿತವಾಗಿರುತ್ತವೆ. ಏಕೆ, ಸಮಗ್ರಮಾನವಕುಲದ ಇತಿಹಾಸವೇ ಆರ್ಥಿಕಪರಿಸ್ಥಿತಿಯ ಏರಿಳಿತದ ಇತಿಹಾಸ. ಆರ್ಥಿಕ ವಿಚಾರವು ಮಾನವನ ಜೀವನದಲ್ಲಿ ಎಷ್ಟೇ ಪ್ರಾಮುಖ್ಯಸ್ಥಾನವನ್ನು ಆಕ್ರಮಿಸಿದ್ದರೂ ಇದೊಂದ ರಿಂದಲೇ ಮನುಷ್ಯನ ಎಲ್ಲ ಆಂತರಿಕ, ಬಾಹ್ಯ ವ್ಯವಹಾರಗಳು ಉದ್ಭೂತವಾಗುತ್ತವೆ ಯೆಂದು ಹೇಳುವುದು ಅತಿಶಯೋಕ್ತಿಯ ಒಂದು ಹಠವಾದ. ಏಕೆಂದರೆ ಮನುಷ್ಯನು ತನ್ನ ಆರ್ಥಿಕ ಪರಿಸ್ಥಿತಿಯನ್ನು ಲೆಕ್ಕಿಸದೆ ತನ್ನ ಜೀವನವನ್ನು ರೂಪಿಸಬಲ್ಲ. ಮಾನವನ ಮನಸ್ಸು—ಬೇಕಾದರೆ ಆತ್ಮ—ಅನಂತ ವೈವಿಧ್ಯಶಕ್ತಿಗಳುಳ್ಳದ್ದಾಗಿದೆ. ಅದನ್ನು ಯಾವುದೇ ಒಂದು ಪೂರ್ವಗ್ರಹ ವಿಚಾರದ ಚೌಕಟ್ಟಿನಲ್ಲಿ ಇಟ್ಟು ಇಂಥ ಪರಿಸ್ಥಿತಿಯಲ್ಲಿ ಹೀಗೆಯೇ ಆಗುತ್ತದೆಯೆಂದು ಹೇಳುವುದು ಸತ್ಯದ ವಿಪರ್ಯಾಸವಾಗುತ್ತದೆ. ಆದರೆ

ಆರ್ಥಿಕ ಪರಿಸ್ಥಿತಿ ಜನರ ಆಚಾರವಿಚಾರಗಳ ಮೇಲೆ ಗಾಢವಾದ ಪ್ರಭಾವವನ್ನು ಬೀರುವುದೆಂದು ಒಪ್ಪಲೇಬೇಕು.

**ಜನಪದ ಸಾಹಿತ್ಯ**—ಜನಪದ ಸಾಹಿತ್ಯವು, ಸಾಹಿತ್ಯವು ಸಾಮಾನ್ಯ ಜನತೆಯಲ್ಲಿ ಬೇರೂರಿ ಹಬ್ಬಿಕೊಂಡ ಸಂಸ್ಕೃತಿಯನ್ನು ತಿಳಿದುಕೊಳ್ಳಲಿಕ್ಕೆ ಅತ್ಯಂತ ಅವಶ್ಯವು. ಒಂದು ಅರ್ಥದಲ್ಲಿ ಇಡಿಯ ಜನತೆಯೇ ಜನಪದ ಸಾಹಿತ್ಯದ ಕರ್ತೃವೆಂದು ಹೇಳಬಹುದು. ಲಾವಣಿಗಳು, ಹಳ್ಳಿಯ ಹಾಡುಗಳು, ಊರಿನ ಹೆಸರುಗಳು, ಗಾದೆಗಳು, ಜನರಲ್ಲಿ ಪ್ರಚಲಿತವಿದ್ದ ಕಥೆಗಳು– ಇವೇ ಮುಂತಾದವು ಜನಪದ ಸಾಹಿತ್ಯದಲ್ಲಿ ಸಮಾವೇಶವಾಗುತ್ತವೆ. ಸುಶಿಕ್ಷಿತ ವರ್ಗದವರ ಸಾಹಿತ್ಯ, ತತ್ವಜ್ಞಾನ, ಲಲಿತಕಲೆಗಳು ಇವೆಲ್ಲವೂ ಜನಪದ ಸಾಹಿತ್ಯದ ಮೇಲೆ ಪರಿಣಾಮವನ್ನುಂಟುಮಾಡುತ್ತವೆ. ಪ್ರತಿಯಾಗಿ ಜನಪದ ಸಾಹಿತ್ಯವು ಮೇಲಿನ ವರ್ಗದವರೆಂದು ಹೇಳಿಕೊಳ್ಳುವವರ ಸಾಹಿತ್ಯ, ಲಲಿತಕಲೆ ಮೊದಲಾದವುಗಳ ಮೇಲೆ ಪರಿಣಾಮವನ್ನುಂಟುಮಾಡುತ್ತವೆ. ಹೀಗೆ ಪರಸ್ಪರ ಪರಿಣಾಮದಿಂದ ಅಖಿಲಜನತೆಯಲ್ಲಿ ಕಾಣಬರುವ ಮನೋಧರ್ಮವು, ಜೀವನಮಾರ್ಗವು ಸಂಸ್ಕೃತಿಯೆಂದು ಹೇಳಬಹುದು. ಜನತೆಯ ಸಂಸ್ಕೃತಿ, (Popular culture) ಸಂಸ್ಕೃತಿ—ಎಂದು ಎರಡು ವಿಧವಾಗಿ ಸಂಸ್ಕೃತಿಯನ್ನು ನಿರ್ದೇಶಿಸುವುದುಂಟು. ಆದರೆ ಹೀಗೆ ವ್ಯತ್ಯಾಸ ಮಾಡುವ ಅವಶ್ಯಕತೆ ಕಾಣುವುದಿಲ್ಲ. ಸಂಸ್ಕೃತಿಯೆಂಬುದು ಸಾಮಾನ್ಯ ಜನತೆಯಲ್ಲೂ ಮೇಲಿನ ವರ್ಗದವರಲ್ಲಿಯೂ ಒಂದೇ ತೆರನಾಗಿ ವ್ಯಾಪಿಸಿರುತ್ತದೆ. ಹೀಗೆ ಎಲ್ಲಾ ವರ್ಗಗಳಲ್ಲಿಯೂ ಕಾಣಬರುವ ಮನೋಧರ್ಮವೇ ಸಂಸ್ಕೃತಿ. ಜನಪದ ಸಾಹಿತ್ಯವೂ ಸಂಸ್ಕೃತಿಯ ಅಭ್ಯಾಸದ ಒಂದು ಮುಖ್ಯಅಂಗ.

**ಪರಂಪರೆ; ಆದರ್ಶಗಳು**—ಸಂಸ್ಕೃತಿ ಪರಂಪರೆಯಿಂದ ಬೆಳೆಯತಕ್ಕದ್ದು. ಆದುದರಿಂದ ಜನಾಂಗದಲ್ಲಿ ನೆಲೆಸಿರುವ ಪರಂಪರೆ, ಪದ್ಧತಿಗಳ ಪರಿಜ್ಞಾನವು ಸಂಸ್ಕೃತಿಯ ಅಭ್ಯಾಸಕ್ಕೆ ಅವಶ್ಯ. ಒಂದು ಜನಾಂಗದ ಆಂತರಿಕ ಜೀವನವನ್ನ ತಿಳಿದುಕೊಳ್ಳಲಿಕ್ಕೆ ಅಲ್ಲಿ ರೂಢವಾಗಿರುವ ಭಿನ್ನ ಭಿನ್ನ ಪರಂಪರೆಗಳನ್ನು ಅಭ್ಯಸಿಸಬೇಕಾಗುವುದು. ಈ ಮಾತು ಮನೆತನಗಳಿಗೂ ರಾಷ್ಟ್ರಗಳಿಗೂ ಜನಾಂಗಗಳಿಗೂ ಅನ್ವಯಿಸುವುದು. ಇದೇ ರೀತಿಯಾಗಿ ಯಾವುದೇ ಜನಾಂಗದ ಜೀವನದ ಆದರ್ಶಗಳು ಪರಂಪರೆಯಲ್ಲಿ ಹೇಗೆ ಒಡಮೂಡಿರುತ್ತವೆ ಎಂಬುದನ್ನು ಗಮನಿಸಬೇಕು. ಏಕೆಂದರೆ ಮಾನವನು ತನ್ನೆದುರಿಗೆ ಇಟ್ಟುಕೊಂಡ ಆದರ್ಶದಿಂದ ಆತನ ಕೃತ್ಯಗಳು ಬಹಳ ಮಟ್ಟಿಗೆ ರೂಪಿತವಾಗಿರುತ್ತವೆ. ಜನಾಂಗದ ಬಾಹ್ಯಾಚರಣೆಯಾದರೂ ಅವರ ಮನೋಧರ್ಮವಾದರೂ ಆದರ್ಶಗಳಿಂದ ರೂಪವನ್ನು ಪಡೆಯುತ್ತವೆ. ಈ ಕಾರಣಗಳಿಂದ ಜನಾಂಗದ ಆದರ್ಶಗಳಾವುವು ಎಂಬುದನ್ನು ಸಂಸ್ಕೃತಿಯ ಅಭ್ಯಾಸಕ್ಕಾಗಿ ಗೊತ್ತುಪಡಿಸಲು ಯತ್ನಿಸಬೇಕು. ಈ ವಿಷಯವನ್ನು ಒಂದು ಉದಾಹರಣೆಯಿಂದ ಸ್ಪಷ್ಟಪಡಿಸಲು ಯತ್ನಿಸುತ್ತೇನೆ. ಭಾರತ ಮತ್ತು ಯುರೋಪ ಈ ಎರಡು ಘಟಕಗಳ ಸಾಂಸ್ಕೃತಿಕ

ಆದರ್ಶವನ್ನು ಲಕ್ಷಿಸಿದರೆ ಬಹಳಮಟ್ಟಿನ ವ್ಯತ್ಯಾಸವು ಕಂಡುಬರುತ್ತದೆ. ಬಹು ಪುರಾತನಕಾಲದಿಂದಲೂ ಭಾರತೀಯರು ಋಷಿ, ತತ್ವಜ್ಞಾನಿ, ದಾರ್ಶನಿಕ, ಕವಿ, ಅನುಭಾವಿ, ವಿರಾಗಿ ಇಂಥವರನ್ನೇ ಆದರ್ಶವಾಗಿಟ್ಟುಕೊಂಡಿದ್ದಾರೆ. ಅದೇ ಯುರೋಪಿನಲ್ಲಿ ರಣರಂಗವೀರರು, ರಾಜಕಾರಣಿಗಳು, ವೈಜ್ಞಾನಿಕರು ಇವರೇ ಆದರ್ಶಗಳಾಗಿದ್ದಾರೆ. ಭಾರತದಲ್ಲಿ ಯಾಜ್ಞವಲ್ಕ್ಯ, ಬುದ್ಧ, ಕಾಳಿದಾಸ, ಶಂಕರಾ ಚಾರ್ಯ, ಬಸವಣ್ಣ ಇವರೇ ಮೊದಲಾದ ಮಹಾವ್ಯಕ್ತಿಗಳು ಜನತೆಯ ಹೃದಯದಲ್ಲಿ ಪ್ರಾಮುಖ್ಯ ಸ್ಥಾನವನ್ನು ಆಕ್ರಮಿಸಿದ್ದಾರೆ. ಅದೇ ಈ ವ್ಯಕ್ತಿಗಳ ಕಾಲದ ಯೋಧರು, ಚಕ್ರವರ್ತಿಗಳು, ಮೊದಲಾದವರನ್ನು ನಮ್ಮ ಜನತೆ ಮರೆತುಬಿಟ್ಟದೆ. ಯುರೋಪಿನಲ್ಲಿ ಸಿಕಂದರ, ಜ್ಯೂಲಿಯಸ್ ಸೀಜರ್, ಶಾರ್ಲಮಾನ್, ನೆಪೋಲಿಯನ್ ಇವರೇ ಮೊದ ಲಾದ ವೀರಾಧಿವೀರರು ಜಗಜ್ಜೇತೃಗಳು ಜನಮನದಲ್ಲಿ ನೆಲೆಯಾಗಿ ನಿಂತಿದ್ದಾರೆ. ಈ ಆದರ್ಶಗಳ ವ್ಯತ್ಯಾಸಗಳಿಗೆ ಆಯಾಪ್ರದೇಶದಲ್ಲಿ ರೂಢಿಯಾಗಿರುವ ಸಂಸ್ಕೃತಿ ಹಾಗೂ ಆ ಸಂಸ್ಕೃತಿಯಿಂದ ರೂಪಿತವಾದ ಸಾಮಾನ್ಯ ಮನೋಧರ್ಮ ಇವೇ ಕಾರಣಗಳೆಂದು ಹೇಳಬಹುದು.

ಇಲ್ಲಿಯವರೆಗೆ ಸಂಸ್ಕೃತಿಯ ಸ್ಥೂಲಮಾನವಾದ ವಿವೇಚನೆಯನ್ನು ಮಾಡಿ ಸಂಸ್ಕೃತಿಯ ಅಭ್ಯಾಸಕ್ಕೆ ಯಾವ ಅಂಶಗಳ ಪರಿಜ್ಞಾನವು ಅವಶ್ಯವೆಂದು ವಿವರಿಸಿ ದ್ದಾಯಿತು. ಈಗ ಬಹಳ ಸ್ವಲ್ಪದರಲ್ಲಿ ಭಾರತಕ್ಕೆ ಈ ವಿವೇಚನೆ ಯಾವ ರೀತಿಯಲ್ಲಿ ಅನ್ವಯಿಸುವುದೆಂಬುದನ್ನು ಸಮಾಲೋಚಿಸಿ ಈ ಲೇಖನವನ್ನು ಪೂರ್ತಿಗೊಳಿಸ ಬಹುದು. ಭಾರತವನ್ನು ಸಂಸ್ಕೃತಿಯ ಅಭ್ಯಾಸಕ್ಕಾಗಿ ಒಂದು ಪ್ರದೇಶವೆಂದು ಇಟ್ಟುಕೊಳ್ಳಲಿಕ್ಕೆ ಪ್ರಬಲವಾದ ಕಾರಣಗಳಿವೆ. ಭಾರತದಲ್ಲಿ ರೂಢಿಯಾಗಿರುವ ಸಂಸ್ಕೃತಿ ಒಂದೋ ಹಲವೋ ಎಂದು ಕೆಲಪಂಡಿತರು ವಾದವಿವಾದ ಮಾಡುತ್ತಾರೆ. ಮೇಲೆ ವಿವರಿಸಿದ ಅಂಶಗಳನ್ನು ಗಮನಿಸಿದರೆ ಭಾರತದಲ್ಲಿ ಆ ಸೇತು ಹಿಮಾಚಲದ ವರೆಗೆ ವ್ಯಾಪಿಸಿದ ಸಂಸ್ಕೃತಿ ಒಂದೇ ಒಂದು ಎಂದು ಸ್ಪಷ್ಟವಾಗುವುದು. ಇಂಥ ವಿಶಾಲವಾದ ಭೂಪ್ರದೇಶದಲ್ಲಿ ಪ್ರಾದೇಶಿಕ ಭೇದಗಳು ವಿಪುಲವಾಗಿ ಕಂಡು ಬರುವುದು ತೀರ ಸಹಜವಾಗಿದೆ. ಆಹಾರ, ವೇಷ ಭೂಷಣಗಳು, ಭಾಷೆ, ಆಟಪಾಟಗಳು ಇವೇ ಮೊದಲಾದವುಗಳಲ್ಲಿ ಅನೇಕಾನೇಕ ಭಿನ್ನತೆಗಳು ಭಾರತದ ಬೇರೆ ಬೇರೆ ಭಾಗ ಗಳಲ್ಲಿ ಕಂಡುಬರುತ್ತವೆ. ಆದರೆ ಈ ಭಿನ್ನತೆಗಳೆಲ್ಲವೂ ಅಮುಖ್ಯವಾದ ವಿಷಯಗಳಿಗೆ ಸಂಬಂಧಪಟ್ಟುವು. ಭಾರತದ ಸಾಂಸ್ಕೃತಿಕ ಜೀವನಾಡಿ ದೇಶಾದ್ಯಂತವೂ ಒಂದೇ ರೀತಿಯಾಗಿ ಮಿಡಿಯುತ್ತಿದೆ. ಮತಧರ್ಮಗಳೂ, ದರ್ಶನಗಳೂ, ಲಲಿತಕಲೆಗಳೂ, ಧರ್ಮಶಾಸ್ತ್ರಗಳೂ, ಆದರ್ಶಗಳೂ, ಪರಂಪರೆ ಇವೆಲ್ಲವೂ ಭಾರತದ ತುಂಬೆಲ್ಲ ಒಂದೇ ಬಗೆಯಾಗಿವೆ. ಇಲ್ಲಿಯವರೆಗೆ ಭಾರತದಲ್ಲಿ ರಾಜಕೀಯ ಐಕ್ಯವು ಸ್ಥಾಪಿತವಾಗಿರದಿ ದ್ದರೂ ಸಾಂಸ್ಕೃತಿಕ ಐಕ್ಯವು ಎಂದಿನಿಂದಲೂ ಇದ್ದೇ ಇದೆ. ಭಿನ್ನ ಭಿನ್ನ ಭಾಷೆ, ಭಿನ್ನ ಭಿನ್ನ ವಂಶ, ಭಿನ್ನ ಭಿನ್ನ ಪದ್ಧತಿಗಳು ಇವೆಲ್ಲವುಗಳನ್ನೊಳಗೊಂಡ ನಮ್ಮ

ವಿಶಾಲವಾದ ದೇಶದಲ್ಲಿ ಸಂಸ್ಕೃತಿಯ ಏಕತೆಯನ್ನು ಸ್ಥಾಪಿಸಿ ನಮ್ಮ ಪೂರ್ವಜರು ಒಂದು ಪವಾಡವನ್ನೇ ಮೆರಿದಿದ್ದಾರೆ.

ಆದುದರಿಂದ ಭಾಷಾಭೇದದಿಂದಾಗಲಿ, ಪ್ರಾದೇಶಿಕಭೇದಗಳಿಂದಾಗಲಿ ಭಾರತದಲ್ಲಿ ಬೇರೆ ಬೇರೆ ಸಂಸ್ಕೃತಿಗಳಿರುವುವೆಂದು ಸಾಧಿಸುವದು ಅಶಕ್ಯವೂ ಅನಿಷ್ಟವೂ ಆಗಿದೆ. ಹೀಗೆ ಸಾಧಿಸುವವರು ಸಂಸ್ಕೃತಿ ಎಂಬ ಪದವನ್ನು ತಮ್ಮದೇ ಆದ ವಿಶಿಷ್ಟವಾದ ಸಂಕುಚಿತಾರ್ಥದಲ್ಲಿ ಬಳಸುತ್ತಾರೆಂದು ಕಾಣುತ್ತದೆ. ಭಾಷೆಯನ್ನೇ ಸಂಸ್ಕೃತಿಯ ತಳಹದಿಯನ್ನಾಗಿ ಇಟ್ಟುಕೊಂಡರೆ ಒಂದೇ ಭಾಷೆಯನ್ನಾಡುವ ಜನರಲ್ಲಿ ಕೂಡ ಭಿನ್ನ ಭಿನ್ನ ಪದ್ಧತಿಗಳು, ರೂಢಿಗಳು ನೆಲೆಸಿರುವದಕ್ಕೆ ಕಾರಣಗಳನ್ನು ಏನೆಂದು ಹೇಳಬೇಕು? ಉದಾಹರಣೆಗಾಗಿ ಕರ್ನಾಟಕವು ಒಂದು ಸಾಂಸ್ಕೃತಿಕ ಘಟಕವೆಂದಿಟ್ಟುಕೊಂಡರೆ ಮೈಸೂರು, ದಕ್ಷಿಣ ಕನ್ನಡ, ಉತ್ತರ ಕರ್ನಾಟಕ ಇವುಗಳಲ್ಲಿ ಕಾಣಬಂದ ಪದ್ಧತಿ ಭಿನ್ನತೆಗಳಿಗೂ ಸಂಸ್ಕೃತಿ ಎಂಬ ಹೆಸರು ಕೊಡಬೇಕಾದೀತು. ಈ ಕಾರಣಗಳಿಗಾಗಿ ಇವುಗಳನ್ನು ಪ್ರಾದೇಶಿಕ ರೂಢಿಗಳೆಂದು ಕರೆದು ಸಂಸ್ಕೃತಿಯೆಂಬ ಪದಕ್ಕೆ ಜನಾಂಗದ ಆಂತರಿಕ ಜೀವನವನ್ನು ರೂಪಿಸುವ ಪ್ರಚೋದಕ ಶಕ್ತಿ ಎಂದು ಇಟ್ಟುಕೊಳ್ಳುವದು ಹೆಚ್ಚು ಸಾಧುವೆಂದು ಕಾಣುತ್ತದೆ.

ಸಮನ್ವಯ, ಸಾಮರಸ್ಯ–ಇವೇ ಭಾರತೀಯ ಸಂಸ್ಕೃತಿಯ ಉಜ್ವಲ ಆದರ್ಶಗಳು. ಯುಗಯುಗಾಂತರಗಳಿಂದ ಭಾರತವು ಈ ಆದರ್ಶಗಳನ್ನು ಸಾಧಿಸಲಿಕ್ಕೆ ಬಹುಮಟ್ಟಿಗೆ ಯಶಸ್ವಿಯಾಗಿ ಪ್ರಯತ್ನಿಸಿದೆ. ಈ ಸಂದರ್ಭದಲ್ಲಿ ಆಧುನಿಕ ಯುಗದ ಮಹಾವ್ಯಕ್ತಿಗಳಾದ ಇಬ್ಬರು ಭಾರತಪುತ್ರರ ಉಕ್ತಿಗಳನ್ನು ಉದ್ಧರಿಸಿ ಈ ಲೇಖವನ್ನು ಪೂರ್ತಿಗೊಳಿಸುತ್ತೇನೆ.

'ನಾನಾತ್ವದಲ್ಲಿ ಏಕತೆಯನ್ನು ಸಾಧಿಸುವುದು, ಭಿನ್ನತೆಯಲ್ಲಿ ಸಾಮರಸ್ಯವನ್ನು ಸ್ಥಾಪಿಸುವುದು—ಇದೇ ಭಾರತದ ಸಹಜವಾದ ಸನಾತನ ಧರ್ಮ. ಭಾರತವು ಭಿನ್ನತೆಯೆಂದರೆ ವಿರೋಧವೆಂದೂ, ಪರಕೀಯರೆಂದರೆ ವೈರಿಗಳೆಂದೂ ಎಂದೂ ಭಾವಿಸುವುದಿಲ್ಲ. ಭಾರತವು ಯಾರನ್ನೂ ದೂರೀಕರಿಸುವುದಿಲ್ಲ; ಯಾರನ್ನೂ ನಾಶಗೊಳಿಸುವುದಿಲ್ಲ. ಯಾವ ಮಾರ್ಗವನ್ನೂ ತಿರಸ್ಕರಿಸುವುದಿಲ್ಲ; ಉನ್ನತ ಆದರ್ಶಗಳ ಮಹತಿಯನ್ನು ಮನ್ನಿಸುತ್ತದೆ; ಇವುಗಳನ್ನೆಲ್ಲ ಒಂದು ಭವ್ಯ ಸಾಮರಸ್ಯದಲ್ಲಿ ಒಂದುಗೂಡಿಸಲಿಕ್ಕೆ ಯತ್ನಿಸುತ್ತದೆ.'* —ರವೀಂದ್ರನಾಥ ಠಾಕೂರರು.

*'ಭಾರತದಲ್ಲಿ ತೀರ ಪುರಾತನಕಾಲದಲ್ಲಿಯೇ ಆಧ್ಯಾತ್ಮಿಕ ಸಾಂಸ್ಕೃತಿಕ

---

* The realization of unity in diversity, the establishment of a synthesis in variety—this is the inherent, the sanatana Dharma of India. India does not admit difference to be conflict, nor does he espy an enemy in every stranger. She expels none, destroys none, she acquires no method, recognizes the greatness of ideals, and seeks to bring them all into one form of harmony. —**Tagore**

ಏಕತೆಯು ಪರಿಪೂರ್ಣಗೊಳಿಸಲ್ಪಟ್ಟಿತು. ಈ ಏಕತೆ ಹಿಮಾಲಯ ಪರ್ವತ ಮತ್ತು ಎರಡು ಸಾಗರಗಳ ಮಧ್ಯೆದಲ್ಲಿರುವ ಮಹಾಜನಸಮುದಾಯದ ಜೀವನದಲ್ಲಿ ಹಾಸು ಹೊಕ್ಕಾಗಿ ಬೆರೆತುಕೊಂಡಿತು. ಭಾರತದ ಜನಾಂಗಗಳು ಭಿನ್ನ ಭಿನ್ನ ರಾಜಕೀಯ ಆರ್ಥಿಕ ಪದ್ಧತಿಗಳುಳ್ಳ ಪರಸ್ಪರ ವಿಭಿನ್ನರಾಷ್ಟ್ರಗಳು ಎಂದೂ ಆಗಲಿಲ್ಲ. ಆದರೆ ಒಂದು ಆಧ್ಯಾತ್ಮಿಕ ಸಾಂಸ್ಕೃತಿಕ ಮಹಿಮಾಸಂಪನ್ನವಾದ ಬೃಹದ್ರಾಷ್ಟ್ರದ ಉಪ ಘಟಕಗಳಾಗಿ ಬಾಳಿದುವು. ಈ ರಾಷ್ಟ್ರವು ಭೌಗೋಲಿಕವಾಗಿ ಬೇರೆ ರಾಷ್ಟ್ರಗಳಿಂದ ಬೇರೆಯಾಗಿದ್ದು, ತನ್ನ ವಿಶಿಷ್ಟ ವ್ಯಕ್ತಿತ್ವವನ್ನು ಕಾಯ್ದುಕೊಂಡು ತನ್ನದೇ ಆದ ಒಂದು ವಿಶಿಷ್ಟ ಧರ್ಮವನ್ನೂ ಸಂಸ್ಕೃತಿಯನ್ನು ಕಾಪಾಡಿಕೊಂಡು ಬಂದಿದೆ.'†

—ಶ್ರೀ ಅರವಿಂದರು.

**ವಿ. ಜಿ. ಕುಲಕರ್ಣಿ.**

---

† In India at a very early time the spiritual and cultural unity was made complete and became the very stuff of the life of all this great surge of humanity between the Himalayas and the two seas. The peoples of India were never so much distinct nations divided from each other by separate political and economic life as sub people of a great spiritual and cultural nation, itself firmly separated physically from other nations, by its strong sense of difference, its peculiar common Religion and Culture.

—Sri Auravindo

# ಪಂಪ—ಭಾರವಿ

ತಾಪಸನಾದ ಅರ್ಜುನ ಮತ್ತು ಕಿರಾತವೇಷಧಾರಿಯಾದ ಶಿವ ಇವರ ಯುದ್ಧವು ಕವಿಕಾವ್ಯ ಪ್ರಪಂಚದಲ್ಲಿ ಅತ್ಯಂತ ಮೋಹಕವಾದ ಕಥೆಗಳಲ್ಲಿ ಒಂದು. ಅರ್ಜುನ ಮೊದಲೇ ವೀರಾಧಿವೀರ; ಇಂಥವನ ಪರಾಕ್ರಮವನ್ನು ಒರೆಗೆ ಹಚ್ಚಿ ಪರೀಕ್ಷಿಸಿ ಲೋಕ ವಿಖ್ಯಾತನನ್ನಾಗಿ ಪರಾಕ್ರಮಧವಳನನ್ನಾಗಿ ಮಾಡಿದವನು ಸಾಕ್ಷಾತ್ ಪಿನಾಕಿಯೆಂದಮೇಲೆ ಈ ಕಥೆಯ ಮಹತ್ವವನ್ನು ಬೇರೆ ಹೇಳಬೇಕಾಗಿಲ್ಲ. ಗಾಂಡೀವಧನ್ವಿಯು ಪಿನಾಕಿಯೊಡನೆ ಯುದ್ಧಮಾಡಿ ಶಿವನಿಂದ ಶಹಬಾಸ್‌ಗಿರಿಯನ್ನು ಪಡೆಯುವುದರಿಂದ ಅರ್ಜುನನ ಪ್ರಾಶಸ್ತ್ಯಕ್ಕೆ ಕಳೆಯೇರುತ್ತದೆ. ಕಿರಾತಾರ್ಜುನಲೀಲಾ ಪ್ರಸಂಗವು ಹೆಚ್ಚು ಆಡಂಬರವಿಲ್ಲದೆ ಸರಳವಾಗಿರುವುದರಿಂದಲೂ ಪರಾಕ್ರಮ ಪ್ರಶಂಸೆಯ ಪ್ರದರ್ಶನಕ್ಕೆ ಅವಕಾಶವಿತ್ತಿರುವುದರಿಂದಲೂ ಇದು ಕವಿಗಳಿಗೇ ಅಲ್ಲದೆ, ಪಾಮರರಿಗೂ ಪ್ರಿಯವಾಗಿದೆ. ಪೌರುಷವನ್ನೂ ಪರಾಕ್ರಮವನ್ನೂ ಪ್ರದರ್ಶಿಸತಕ್ಕ ಅವಕಾಶಗಳು ನಮ್ಮ ದೇಶದ ಜನಗಳಿಗೆ ಹಿಂದಿನ ಕಾಲದಲ್ಲಿ ಇದ್ದಂತೆ ಈಗ ಇಲ್ಲ ಎಂಬುದು ಸ್ಪಷ್ಟ. ಅಂದಿನ ಜನಗಳಿಗೆ ವೀರರಸ ಪ್ರಧಾನವಾದ ಯುದ್ಧದ ವರ್ಣನೆಗಳಲ್ಲಿ ಹೆಚ್ಚು ಆಸಕ್ತಿ ಇದ್ದಿತು. ಜನಾಭಿರುಚಿಯನ್ನು ಹೆಚ್ಚಿಸತಕ್ಕ ಯುದ್ಧದ ವರ್ಣನೆಗಳಿಂದ ಕೂಡಿದ ಕಾವ್ಯಗಳನ್ನು ಅಂದಿನ ಕವಿಗಳು ರಚಿಸುತ್ತಿದ್ದರು. ಕಿರಾತಾರ್ಜುನರ ಯುದ್ಧದ ಪ್ರಸಂಗವು ವೀರರಸಪ್ರಧಾನವಾದ ಕುತೂಹಲದಾಯಕವಾದ ಕಥೆ. ಇದನ್ನೇ ಕಾವ್ಯಕ್ಕೆ ವಸ್ತುವನ್ನಾಗಿ ಆರಿಸಿಕೊಂಡು ಭಾರವಿಯು 'ಕಿರಾತಾರ್ಜುನೀಯಂ' ಎಂಬ ಮಹಾಕಾವ್ಯವನ್ನು ರಚಿಸಿದ್ದಾನೆ. ಮಹಾಭಾರತವೆಂಬ ಮಹಾರ್ಣವದಲ್ಲಿ ಕಿರಾತಾರ್ಜುನರ ಯುದ್ಧ ಪ್ರಸಂಗದಂಥ ಹಲವು ಕಿರುದೆರೆಗಳು ಕಂಗೊಳಿಸುತ್ತಿವೆ. ಮಹಾಭಾರತದ ಕಥಾಪ್ರವಾಹದ ಸೆಳೆವಿನಿಂದ ಮುಂದಕ್ಕೆ ಒಯ್ಯಲ್ಪಡುವ ನಮ್ಮ ಮನಸ್ಸು ಅಲ್ಲಲ್ಲಿ ಇಂಥ ರಸವತ್ ಕಥಾಲಹರಿಗಳನ್ನು ಕಂಡು ಸದ್ಯಸ್ತೃಪ್ತಿಯನ್ನು ಹೊಂದುತ್ತದೆ. ಆದರೆ ಅಲ್ಲಿಯೇ ವಿರಮಿಸಿ ಅದರ ಬೃಹತ್ತನ್ನೂ ಮಹತ್ತನ್ನೂ ವಿವರವಾಗಿ ಕಾಣುವಷ್ಟು ಅವಕಾಶವಿರುವುದಿಲ್ಲ. ಮಹಾಭಾರತದಲ್ಲಿ ಪ್ರಧಾನ ವಿಷಯವಾದ ಭಾರತ ಯುದ್ಧಕ್ಕೆ ಪ್ರತಿಯೊಂದೂ ಸಿದ್ಧವಾಗುತ್ತಿರುತ್ತದೆ. ಅಪ್ರಧಾನವಾದ ಹಲವು ಕಥಾ ಪ್ರಸಂಗಗಳು ಮುಖ್ಯೋದ್ದೇಶಕ್ಕೆ ಮಾತ್ರ ಉಪಷ್ಟಂಭಕವಾಗಿರುತ್ತವೆ. ಗೌರೀಶಂಕರವನ್ನು ಏರುವವನಿಗೆ ಮಾರ್ಗದಲ್ಲಿ ಕಂಡುಬರುವ ಹಲವು ಶಿಖರಗಳು ಗೋಚರಿಸುತ್ತವೆಯೆಂಬುದು ನಿಜ. ಆದರೆ ಅವನ ದೃಷ್ಟಿಯೆಲ್ಲ ಉದ್ದಿಷ್ಟ ವಿಷಯದ ಕಡೆಗೆ ಇರುತ್ತದೆ. ಶಿಖರವನ್ನು ಏರಿ ಹಿಂದಿರುಗಿ ಬಂದ ಅನಂತರ ಅವನ ಅನುಭವಗಳಲ್ಲಿ ಗೌರೀಶಂಕರದ ಅನುಭವವೇ ಹೆಚ್ಚು ಆಳವಾದದ್ದಾಗಿರುವುದಾದರೂ, ಮಾರ್ಗದಲ್ಲಿನ ಅನುಭವಗಳು ಮುಖ್ಯ ಅನುಭವಕ್ಕೆ ಹಿನ್ನೆಲೆಯಾಗಿ

ಪರಿಣಮಿಸಿರುತ್ತವೆ. ಹೀಗೆ ಮಹಾಭಾರತದಲ್ಲಿ ಕಿರಿಯದಾದರೂ ಮುಖ್ಯ ಪಾತ್ರವನ್ನು ವಹಿಸಿರುವ ಕಿರಾತಾರ್ಜುನರ ಯುದ್ಧದ ಪ್ರಸಂಗವನ್ನು ಎತ್ತಿಕೊಂಡು ಅದರ ಸರ್ವಸೌಂದರ್ಯವನ್ನು ಮನದಣಿಯುವಂತೆ ವಿಶದವಾಗಿ ಭಾರವಿ " ಕಿರಾತಾರ್ಜುನೀಯಂ " ಕಾವ್ಯದಲ್ಲಿ ಬೆಳಗಿದ್ದಾನೆ. ಅಲ್ಲಿ ಯಾವುದು ಸೂಕ್ಷ್ಮವೋ ಅದು ಇಲ್ಲಿ ವಿವರ; ಅಲ್ಲಿ ಯಾವುದು ಅಸ್ಪಷ್ಟವೋ ಇಲ್ಲಿ ಅದು ಸುಸ್ಪಷ್ಟ; ಅಲ್ಲಿ ಯಾವುದು ಸೂಚ್ಯವೋ ಅದು ಇಲ್ಲಿ ವಾಚ್ಯ. ಅಲ್ಲಿ ಒಂದು ಕಡೆ ಬೆಳಕು, ಅದರ ಹಿಂದೆ ನೆಳಲು ಇದ್ದರೆ ಇಲ್ಲಿ ಎರಡು ಕಡೆಯೂ ಕವಿಯ ಪ್ರತಿಭಾ ಜ್ಯೋತಿಯು ಬೆಳಗಿ ಸಹೃದಯರ ಕಾವ್ಯ ಸಂವೇದನಾ ಚಕ್ಷುಸ್ಸನ್ನು ತಣಿಸುತ್ತದೆ. ಮಹಾಭಾರತ ಒಂದು ರಸಬಿಂದು, ಅದು ಇಲ್ಲಿ ಒಂದು ಸ್ವತಂತ್ರ ಮಹಾಕಾವ್ಯವಾಗಿದೆ. 'ಕಿರಾತಾರ್ಜುನೀಯಂ' ಕಾವ್ಯದ ನಾಯಕ ಅರ್ಜುನ. ಅರ್ಜುನನ ಚಿತ್ತಸ್ಥೈರ್ಯವನ್ನೂ, ಸಂಯಮವನ್ನೂ, ಪರಾಕ್ರಮವನ್ನೂ ಒಂದರೊಡನೊಂದನ್ನು ಚಿತ್ರಿಸುವ ಸದವಕಾಶ ಭಾರವಿಗೆ ಇಲ್ಲಿ ದೊರೆತಿದೆ. ಮಹಾಭಾರತದ ಮುಖ್ಯ ಪಾತ್ರವಾದ ಪಾಂಡುಪುತ್ರ ಅರ್ಜುನನ ಜೀವನದಲ್ಲಿನ ಒಂದು ಪ್ರಸಂಗದ ವರ್ಣನೆಗೆ ಮಹಾಭಾರತದಲ್ಲಿ ಎಷ್ಟು ಅವಕಾಶ ಕೊಡಬಹುದೋ ಅದಕ್ಕಿಂತ ಹೆಚ್ಚನ್ನು ಅಲ್ಲಿ ನಾವು ನಿರೀಕ್ಷಿಸಲಾರೆವು. ಆದರೆ ಇಲ್ಲಿ ಭಾರವಿಗೆ ಅರ್ಜುನನ ಪಾತ್ರಕ್ಕೆ ಪೂರ್ಣ ಗಮನವನ್ನು ಕೊಟ್ಟು ವರ್ಣಿಸುವ ಸೌಲಭ್ಯ ದೊರೆತಿದೆ. ಗೂಢಚಾರನಾಗಿ ಹೋಗಿದ್ದ ವನೇಚರನು ದುರ್ಯೋಧನನ ರಾಜ್ಯದ ವಿಚಕ್ಷಣೆಯನ್ನು ತಿಳಿದುಕೊಂಡು ಬಂದು ಹೇಳಿದ ವಿಷಯಗಳನ್ನು ಕೇಳಿದಾಗಿನ ದ್ರೌಪದಿ, ಭೀಮ, ಧರ್ಮರಾಯ ಇವರ ಮಾತುಕತೆಗಳನ್ನೂ, ಇಂದ್ರ-ಅರ್ಜುನ, ಕಿರಾತದೂತ-ಅರ್ಜುನ-ಇವರ ಸಂಭಾಷಣೆಗಳನ್ನೂ ನಾಟಕೀಯವಾಗಿ ಚಿತ್ರಿಸಿರುವುದಲ್ಲದೆ ತನ್ನ ಕಾವ್ಯ ರಚನಾ ಸಾಮರ್ಥ್ಯವನ್ನೂ ಪಾಂಡಿತ್ಯವನ್ನೂ ಪ್ರತಿಭೆಯನ್ನೂ ಪ್ರಕಾಶಪಡಿಸಲು ಭಾರವಿಗೆ ' ಕಿರಾತಾರ್ಜುನೀಯ 'ವು ತಕ್ಕ ರಂಗವಾಗಿ ಪರಿಣಮಿಸಿದೆ. ತನ್ನ ಕಾವ್ಯಕ್ಕೆ ಮಹಾಕಾವ್ಯದ ರೂಪವನ್ನು ಕೊಡಬೇಕೆಂಬುದೂ, ಅರ್ಜುನನನ್ನು ನಾಯಕನನ್ನಾಗಿ ಚಿತ್ರಿಸಿ ವೀರರಸವನ್ನು ಪ್ರತಿಪಾದಿಸಬೇಕೆಂಬುದೂ ಭಾರವಿಯ ಮುಖ್ಯ ಉದ್ದೇಶವೆಂಬುದಾಗಿ ತೋರುತ್ತದೆ. ತನ್ನ ಕಾವ್ಯವನ್ನು ಮಹಾಕಾವ್ಯದ ಮಟ್ಟಕ್ಕೆ ಏರಿಸುವ ಸಲುವಾಗಿ ಅವಕಾಶ ಸಿಕ್ಕಿದಾಗಲೆಲ್ಲ ವರ್ಣನೆಗಳನ್ನು ಸೇರಿಸಿರುವುದನ್ನೂ ನಾವು ಕಾಣಬಹುದಾಗಿದೆ.

ಭಾರವಿಯ ' ಕಿರಾತಾರ್ಜುನೀಯ 'ವು ಪಂಪನ ಕಾಲಕ್ಕಾಗಲೇ ಅನುಪಮ ಯಶಸ್ಸನ್ನು ಸಂಪಾದಿಸಿದ್ದಿತು. ಕಾವ್ಯರಚನೆಯನ್ನು ಮಾಡುವ ಕವಿ ಪ್ರಗಲ್ಭರಿಗೆ ' ಕಿರಾತಾರ್ಜುನೀಯ'ವು ಮಾರ್ಗದರ್ಶಕವಾಗಿಯೂ, ಆದರ್ಶವಾಗಿಯೂ ಇದ್ದಿತು. ಕವಿಗಳಿಗೆ ಪಂಡಿತರಿಗೆ ರಾಜಾಶ್ರಯವು ವಿಶೇಷವಾಗಿದ್ದ ಯುಗವದು. ಪಂಡಿತರು ಮೆಚ್ಚತಕ್ಕ ಕಾವ್ಯಗಳಿಗೆ ಮಾನ್ಯತೆ ಇದ್ದಿತು. ಪಂಡಿತರಂಜನೆಯನ್ನು ತನ್ನ ಮುಖ್ಯ ಉದ್ದೇಶದಲ್ಲೊಂದಾಗಿಟ್ಟುಕೊಂಡು ಹೊರಟ ಕಾವ್ಯ ಭಾರವಿಯ 'ಕಿರಾತಾರ್ಜುನೀಯ.'

ಅಂದಿನ ಕನ್ನಡ ಕವಿಗಳು ಮಹಾಕಾವ್ಯರಚನೆಯ ಮಾರ್ಗವನ್ನೊಪ್ಪಿ ಅಷ್ಟಾದಶ ವರ್ಣನೆಗಳು ಮಹಾಕಾವ್ಯಗಳಿಗೆ ಅನಿವಾರ್ಯವೆಂದು ತಿಳಿದು ಕಥಾಂಶಗಳಿಗಿಂತಲೂ ವರ್ಣನಾಂಶಗಳಿಗೇ ಹೆಚ್ಚು ಪ್ರಾಧಾನ್ಯತೆಯನ್ನು ಕೊಟ್ಟರಲ್ಲವೆ? ಅವರಿಗೆ ಮಾರ್ಗ ದರ್ಶಕರು ಭಾರವಿ ಮತ್ತು ಮಾಘರು ಎಂದು ನಾವು ತಿಳಿಯಬಹುದಾಗಿದೆ. ಕನ್ನಡ ಕಾವ್ಯರಚನೆಗೆ ಮಾರ್ಗ ತೋರಿಸಿ ಸ್ಫೂರ್ತಿಯನ್ನು ಸಂಸ್ಕೃತ ಕಾವ್ಯಗಳು ಇತ್ತುವು. ಇಂಥ ಸಂಸ್ಕೃತ ಕಾವ್ಯಗಳಲ್ಲಿ ಭಾರವಿಯ 'ಕಿರಾತಾರ್ಜುನೀಯ'ವು ಮುಖ್ಯವಾದುದು. ಇನ್ನೂ ಒಂದುಹೆಜ್ಜೆ ಮುಂದುವರಿದು, ಮಹಾ ಕಾವ್ಯಗಳಿಗೆ ಮಾರ್ಗವನ್ನು ಹಾಕಿಕೊಟ್ಟ ಕವಿಗಳಲ್ಲಿ ಭಾರವಿ ಮೊದಲಿಗನು ಎಂದರೂ ಸಲ್ಲುವುದು. ಆದುದರಿಂದ ಇಂಥ ಕಾವ್ಯ ವನ್ನು ಪಂಪನು ಓದಿದ್ದಿರಲೇಬೇಕು. ಪಂಪನು ಭಾರವಿಯ 'ಕಿರಾತಾರ್ಜುನೀಯ' ವನ್ನು ಕೇವಲ ಓದಿದ್ದಿರಲಿಲ್ಲ, ಚೆನ್ನಾಗಿ ಮನನ ಮಾಡಿದ್ದನು. ಭಾರವಿಯ ಕಾವ್ಯ ರೀತಿ ಮತ್ತು ವರ್ಣನಾ ಕೌಶಲಗಳು ಪಂಪನಿಗೆ ಮನದಟ್ಟಾಗಿದ್ದುವೆಂದು ತೋರುತ್ತದೆ. ವಸ್ತು ಸ್ಥಿತಿ ಹೀಗಿರಬೇಕಾದರೆ ಪಂಪನ ಕಾವ್ಯದ ಮೇಲೆ ಭಾರವಿಯು ತನ್ನ ಪ್ರಭಾವ ವನ್ನು ಬೀರುವುದು ಸಹಜವಾಗಿಯೇ ಇದ್ದಿತು. ಪಂಪನು ತನ್ನ ಕಾವ್ಯಕ್ಕೆ ಮಹಾ ಭಾರತದ ವಿಷಯವನ್ನೇ ವಸ್ತುವನ್ನಾಗಿ ಆರಿಸಿಕೊಂಡನು. ಮಹಾಭಾರತದ ನಾಯಕನನ್ನಾಗಿ ಅರ್ಜುನನನ್ನು ಆರಿಸಿಕೊಂಡು 'ವಿಕ್ರಮಾರ್ಜುನ ವಿಜಯ'ವನ್ನು ರಚಿಸಿದನು. ಭಾರವಿಯ ಕಾವ್ಯದ ವಸ್ತುವು 'ವಿಕ್ರಮಾರ್ಜುನ ವಿಜಯ'ದ ಕಥೆಯ ಹಂದರದಲ್ಲಿ ಸೇರಿಕೊಂಡಿದೆ. ಎರಡು ಕಾವ್ಯಗಳಿಗೂ ಅರ್ಜುನನೇ ನಾಯಕ. ಆದ್ದರಿಂದ ಭಾರವಿಯ ಪ್ರಭಾವ ಪಂಪನ ಮೇಲೆ ಬೀಳುವುದು ಅನಿವಾರ್ಯ. ಈ ಪ್ರಭಾವದ ಸ್ವರೂಪವೇನು, ಮತ್ತು ಪಂಪ ಎಷ್ಟರಮಟ್ಟಿಗೆ ಭಾರವಿಗೆ ಕೃತಜ್ಞನು ಎಂಬುದನ್ನು ಪರಿಶೀಲಿಸುವುದು ಯೋಗ್ಯವಾದುದಾಗಿದೆ.

'ಕತೆ ಪಿರಿದಾದರೂ ಕತೆಯ ಮೆಯ್ಗಿಡಲೀಯದೆ ಸಮಸ್ತ ಭಾರತವನ್ನು ಅಪೂರ್ವ'ವಾಗಿ ಹೇಳ ಹೊರಟವನು ಪಂಪ. ಇವನು ತನ್ನ ಕಾವ್ಯಕ್ಕೆ ಅರ್ಜುನನನ್ನು ನಾಯಕನನ್ನಾಗಿ ಮಾಡಿಕೊಂಡಿದ್ದಾನೆ. ಅರ್ಜುನನಿಗೆ ಪ್ರಾಶಸ್ತ್ಯ ಕೊಡುವ ಪ್ರತಿ ಯೊಂದು ಅಂಶವನ್ನೂ ಎಚ್ಚರಿಕೆಯಿಂದ ನಡೆಸಿಕೊಂಡು ಹೋಗುವುದು ಪಂಪನ ಕರ್ತವ್ಯ. ಕಿರಾತರೂಪಿ ಶಿವ ಮತ್ತು ತಾಪಸರೂಪಿ ಅರ್ಜುನರ ಯುದ್ಧದ ಪ್ರಸಂಗವು ಅರ್ಜುನನ ಪರಾಕ್ರಮಶಿಖರಕ್ಕೆ ಧವಳಕಳಶಪ್ರಾಯವಾದುದು. ಇಂಥ ಸಂದರ್ಭವನ್ನು ಪಂಪ ಸಾಕಷ್ಟು ಪರಿಷ್ಕಾರವಾಗಿಯೇ ವರ್ಣಿಸಬೇಕಾದುದು ಅವನ ಕರ್ತವ್ಯ. ಪಂಪಭಾರತದ 'ಕತೆಯ ಮೆಯ್ಗಿಡಲೀಯ'ದಂತೆ ಮಿತಿಯನ್ನರಿತು ಯಥಾ ಯೋಗ್ಯವಾಗಿ ಈ ಪ್ರಸಂಗವನ್ನು ಬೆಳೆಸಿದ್ದಾನೆ. ಆದರೆ ಸಮಸ್ತಭಾರತದ ಕಥೆಯಲ್ಲಿ ಇದೂ ಒಂದು ಘಟನೆ ಎಂಬುದನ್ನು ಮರೆತು ತನ್ನ ನಾಯಕನೆಸಗಿದ ಮಹಾಕಾರ್ಯವೊಂದನ್ನು ಸವಿಸ್ತಾರವಾಗಿ ವರ್ಣಿಸುವ ಉತ್ಸಾಹಾಧಿಕ್ಯಕ್ಕೆ ಕೈಹಾಕ ದಿರುವುದು ಪಂಪನ ಉಚಿತಜ್ಞತೆಯನ್ನೇ ಸಾರುತ್ತದೆ. ಸಮಸ್ತ ಭಾರತದ ದೃಷ್ಟಿಗೆ

ಹೊಂದುವಂತೆ ಈ ಸಂದರ್ಭವನ್ನು ರಸವತ್ತಾಗಿ ವರ್ಣಿಸಿ ಪಂಪ ವಿಮರ್ಶಕರ ಮೆಚ್ಚುಗೆಯನ್ನು ಪಡೆದಿದ್ದಾನೆ. 'ಕಿರಾತಾರ್ಜುನೀಯ'ವು ಮಹಾ ಕಾವ್ಯ. ಪಂಪ ಭಾರತದ ಕಿರಾತಾರ್ಜುನ ಪ್ರಸಂಗವು ಸಮಸ್ತಭಾರತ ಕಥೆಯ ಒಂದು ಘಟನೆ. ಆದುದರಿಂದ ಪಂಪ ಭಾರವಿಯ ಕಾವ್ಯಮಾರ್ಗವನ್ನು ಇಲ್ಲಿ ಅನುಸರಿಸುವುದನುಚಿತ. ಭಾರವಿಯ ಕಾವ್ಯಸಂಪತ್ತು ಪಂಪನಿಗೆ ಹೃದಯಗತವಾಗಿದ್ದಿತು. ಆದುದರಿಂದ ಪಂಪನ ಕಥಾ ಸರಣಿಯಲ್ಲಿ ಭಾರವಿಯ ಪ್ರಭಾವ ಕಂಡುಬರುವುದು ಸಹಜ. ಭಾರವಿಯ ಒಂದೊಂದು ಭಾವವನ್ನು ಅಲ್ಲಲ್ಲಿ ಅನುವಾದಿಸಿರಬಹುದು, ಭಾರವಿಯ ಒಂದು ಭಾವವನ್ನು ವಿಸ್ತರಿಸಿ ಅದನ್ನು ಹೆಚ್ಚು ರಸವತ್ತಾಗಿ ಮಾಡಿರಬಹುದು, ಭಾರವಿಯಲ್ಲಿಲ್ಲದ ವರ್ಣನಾ ಕೌಶಲವನ್ನು ಮೆರೆದಿರಬಹುದು. ಆದರೆ ಇಂಥ ಸಂದರ್ಭಗಳಲ್ಲಿ ಹೆಜ್ಜೆಹೆಜ್ಜೆಗೂ ಪಂಪ ತನ್ನತನವನ್ನೂ, ಸ್ವಪ್ರತಿಭೆಯನ್ನೂ ಮೆರೆದಿದ್ದಾನೆಯೇ ಹೊರತು ಅನ್ಯಥಾ ಇಲ್ಲ. ಸ್ವಸ್ವಕ್ಷೇತ್ರಗಳಲ್ಲಿ ಪಂಪ ಭಾರವಿಯರು ಸ್ವಯಮಾಚಾರ್ಯರು. ಕಾಲದೃಷ್ಟಿಯಿಂದ ಭಾರವಿ ಹಿಂದಿನವನು, ಪಂಪ ಈಚಿನವನು. ಈ ಇಬ್ಬರಲ್ಲಿನ ಮಧುರಬಾಂಧವ್ಯವೆಂಥದು ಎಂಬುದನ್ನು ಇಲ್ಲಿ ನೋಡುವ ಪ್ರಯತ್ನಮಾಡಲಾಗುತ್ತಿದೆ. ಪಂಪ ಭಾರವಿಯರಿಗೆ ಮತ್ತೊಂದು ಸವಿ ನಂಟುಂಟು. ಭಾರವಿಯು ದಕ್ಷಿಣದೇಶದವನೆಂದೂ, ಪಶ್ಚಿಮ ತೀರ ಪ್ರದೇಶ ವಾಸಿಯೆಂದೂ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಪಂಪನು ಬನವಾಸಿ ಪ್ರಾಂತದವನು. ಸಹ್ಯಾದ್ರಿಯ ಔನ್ನತ್ಯವೂ, ಕಾನನ ಶ್ರೀಯೂ, ಚಂದನಗಂಧವನ್ನು ಹೊತ್ತು ತರುವ ಎಲರೂ, ಸೀಮಾವಿನ ಮಧುರ ಮಕರಂದವೂ, ಮಲ್ಲಿಗೆಯ ಇಡಿಗಂಪೂ ಪಂಪ ಭಾರವಿಯರಿಬ್ಬರಿಗೂ ಪರಿಚಿತವಾದುವುಗಳೇ. ಹೀಗಿರುವಾಗ ಸಹ್ಯಾದ್ರಿಯಣುಗನ ಕಾವ್ಯ ಪುಷ್ಪದ ರಸಬಿಂದುಗಳನ್ನು ಬನವಾಸಿಯಣುಗನಾದ ಮಧುಪನು ಹೀರಿ ಮಧುರತರವಾದ ತನ್ನ ಕಾವ್ಯಮಧುವಿಗೆ ಅದರ ಅಲ್ಪಸವಿಯನ್ನು ಸೇರಿಸಿ ತನ್ನ ಕಾವ್ಯವೆಂಬ ಜೇನುಗೂಡಿನಲ್ಲಿ ಸಹೃದಯರ ರಸದೂಟಕ್ಕಾಗಿ ಕೂಡಿಸಿಟ್ಟಿದ್ದಾನೆಂದರೆ ಅತಿಶಯೋಕ್ತಿಯಾಗಲಾರದು.

ಭಾರವಿಯ 'ಕಿರಾತಾರ್ಜುನೀಯ'ವು ಪ್ರಾರಂಭವಾಗುವುದು ಯುಧಿಷ್ಠಿರನ ಕಡೆಯ ವನೇಚರನೊಬ್ಬನು ಗುಪ್ತಚಾರನಾಗಿ ಕೌರವರ ರಾಜ್ಯ ನಿರೀಕ್ಷಣೆಯನ್ನು ಮಾಡಿಕೊಂಡು ಬಂದು ದ್ವೈತವನದಲ್ಲಿ ವನವಾಸಿಗಳಾಗಿದ್ದ ಪಾಂಡವರಿಗೆ ನಿರೂಪಿಸುವುದರಿಂದ. ಆಗ ಶತ್ರುವಾದ ಕೌರವನಿಂದ ರಾಜ್ಯವನ್ನು ಕಿತ್ತುಕೊಳ್ಳಲು ಸ್ಫೂರ್ತಿ ಕೊಡುವಂಥ ಮಾತುಗಳನ್ನು ದ್ರೌಪದಿ ಮತ್ತು ಭೀಮರು ನೊಂದ ಹೃದಯದಿಂದ ಹೊರಚೆಲ್ಲುತ್ತಾರೆ. ಧರ್ಮರಾಜನು ಅವರ ಮನಸ್ಸನ್ನು ಸಮಾಧಾನಪಡಿಸುವಂಥ ಮತ್ತು ಉಪಯುಕ್ತವಾದಂಥ ಉತ್ತರವನ್ನು ಕೊಡುತ್ತಾನೆ. ಮೊದಲನೆಯ ಮೂರು ಸರ್ಗಗಳಲ್ಲಿ ಈ ಭಾಗವನ್ನು ಭಾರವಿ ಕುಶಲತೆಯಿಂದ ನಿರೂಪಿಸಿದ್ದಾನೆ. ಇಲ್ಲಿ ತನ್ನ ನೀತಿಶಾಸ್ತ್ರಜ್ಞಾನವನ್ನು ಚೆನ್ನಾಗಿ ಬೆಳಗಿದ್ದಾನೆ. ಭೀಮ, ದ್ರೌಪದಿ, ಧರ್ಮರಾಜ

ಇವರು ಆಡುವ ಮಾತುಗಳು ಆಯಾ ಪಾತ್ರವನ್ನು ಪೋಷಿಸುತ್ತವೆ. ಮಹಾಭಾರತ ದಲ್ಲಿ ಗುಪ್ತಚಾರನ ವಿಷಯ ಬರುವುದಿಲ್ಲ. ಗುಪ್ತಚಾರನಾದ ವನೇಚರನ ವಿಷಯವು ಭಾರವಿಯ ಕಾವ್ಯಕ್ಕೆ ಆಕರ್ಷಣೀಯವಾದ ಪ್ರಾರಂಭವನ್ನೂ, ಕಥೆಯ ಗತಿಗೆ ಒಂದು ಪ್ರೇರಕ ಶಕ್ತಿಯನ್ನೂ ಕೊಟ್ಟಿದೆ. ಕಥಾಪ್ರಸ್ಥಾನಕ್ಕೆ ಗುಪ್ತಚಾರನ ವಿಷಯವು ವಿಶೇಷಸಹಾಯವನ್ನು ಮಾಡುವುದಲ್ಲದೆ ಕಥಾರಂಭಕ್ಕೆ ಭೂಷಣಪ್ರಾಯವಾಗಿದೆ. ಅರ್ಜುನನು ದ್ರೌಪದಿ, ಭೀಮ ಮತ್ತು ಧರ್ಮರಾಜ-ಇವರ ಮಾತುಗಳ ನಡುವೆ ಬಾಯಿ ಹಾಕುವುದಿಲ್ಲ; ಅವನ ಬಾಯಿಂದ ಒಂದು ಮಾತನ್ನೂ ನಾವು ಕೇಳುವುದಿಲ್ಲ. ಇದು ಅರ್ಜುನನ ಪಾತ್ರಕ್ಕೆ ಶ್ರೇಷ್ಠತೆಯನ್ನು ಸಂಪಾದಿಸಿ ಕೊಡುತ್ತದೆ. ಈ ಮೌನ ಅರ್ಜುನನ ವಿಷಯದಲ್ಲಿ ಒಂದು ವಿಶೇಷ ಗೌರವವನ್ನು ಹುಟ್ಟಿಸುತ್ತದೆ. ಅವನು ಮುಂದೆ ಎಸಗುವ ತಪಸ್ಸಿಗೆ ತಕ್ಕ ಯೋಗ್ಯತೆಯಿದೆ ಎಂಬುದನ್ನು ಇದು ಸೂಚಿಸುತ್ತದೆ. ಅವನ ಮೌನದಿಂದ ಅವನ ಸಂಯಮವೂ ಸತ್ವವೂ ವೇದ್ಯವಾಗುವಂತೆ ಮಾಡಿ ಮುಂದೆ ಆ ಗುಣಗಳು ತಪಸ್ಸಿನಿಂದ ಪೂರ್ಣಫಲವನ್ನು ಕೊಟ್ಟುವು ಎನ್ನುವುದು ಸಮಂಜಸವಾಗಿದೆ. ಕಿವಿಗೊಟ್ಟು ಮನಗೊಟ್ಟು ಅರ್ಜುನನು ದ್ರೌಪದಿ, ಭೀಮ ಮತ್ತು ಯುಧಿಷ್ಠಿರರ ವಾದ ಸರಣಿಯನ್ನು ಅರ್ಥಮಾಡಿಕೊಳ್ಳುತ್ತ ಮನಸ್ಸಿನಲ್ಲೇ ಅಳೆಯುತ್ತ ಬೆಲೆಕಟ್ಟುತ್ತ ಇದ್ದನೆಂದು ತೋರುತ್ತದೆ. ಅವನೇನಾದರೂ ಉತ್ತರ ವನ್ನು ಕೊಡಬಹುದೇ ಎನ್ನುವ ಹೊತ್ತಿಗೆ ವ್ಯಾಸರು ಬಂದು ತಪಸ್ಸುಮಾಡಿ ಅಸ್ತ್ರವನ್ನು ಸಾಧಿಸುವ ಕೆಲಸವನ್ನು ಅವನಿಗೆ ಒಪ್ಪಿಸಿಬಿಡುತ್ತಾರೆ. ಅರ್ಜುನನು ಎಲ್ಲರಿಗೂ ನಮ ಸ್ಕರಿಸಿ ವಿನಯವೇ ಮೈವೆತ್ತಂತೆ ತಪಸ್ಸಿಗೆ ನಡೆಯುವ ಚಿತ್ರ ಅವನ ವ್ಯಕ್ತಿತ್ವವನ್ನು ಕಣ್ಣಿಗೆ ಕಟ್ಟುವಂತೆ ಮಾಡುತ್ತದೆ.

ಬಿಲ್ಲು, ಬತ್ತಳಿಕೆ ಮತ್ತು ಖಡ್ಗಗಳನ್ನು ಮೈಮೇಲೆ ಧರಿಸಿಯೂ ಮುನಿವೇಷ ದಿಂದ ತಪಸ್ಸು ಮಾಡುವ ಅರ್ಜುನನ ಚಿತ್ತಸ್ಥೈರ್ಯ ಮತ್ತು ದೃಢವ್ರತಗಳು ಓದು ಗರನ್ನು ಸೂರೆಗೊಳ್ಳುತ್ತವೆ. ಇಂದ್ರನು ಕಳುಹಿಸುವ ಅಪ್ಸರೆಯರು ಅರ್ಜುನನ ಸಂಯಮವನ್ನು ಕೆಡಿಸುವುದರಲ್ಲಿ ವಿಫಲರಾಗುತ್ತಾರೆ. ಇದು ಅರ್ಜುನನು ಪರೀಕ್ಷೆ ಯಲ್ಲಿ ತೇರ್ಗಡೆಯಾದುದರ ಗುರುತು. ಮಹಾಭಾರತದಲ್ಲಿ ಇಂದ್ರನು ಅಪ್ಸರೆಯರನ್ನು ಅರ್ಜುನನ ತಪಸ್ಸಿನ ಪರೀಕ್ಷಾರ್ಥವಾಗಿ ಕಳುಹಿಸುವ ವಿಷಯ ಬರುವುದಿಲ್ಲ.

ವೃದ್ಧನ ವೇಷದಲ್ಲಿ ಬರುವ ಇಂದ್ರನ ಪ್ರಶ್ನೆಗಳಿಗೆ ಅರ್ಜುನನು ಕೊಡುವ ಉತ್ತರವು ಗಂಭೀರವಾಗಿದೆ, ಅವನ ಮುನಿವೃತ್ತಿಗೆ ಯೋಗ್ಯವಾಗಿದೆ. ಇಂದ್ರನ ಉಪದೇಶದಂತೆ ಶಿವನನ್ನು ಕುರಿತು ತಪಸ್ಸು ಮಾಡುವ ಅರ್ಜುನನ ಚಿತ್ರ ಮುಂದಿ ನದು. ಇಂದ್ರನಂತೆ ಭೀಮಾಕಾರನಾಗಿ ಉಜ್ವಲಮೂರ್ತಿಯಾಗಿ ರವಿಯ ತೇಜಸ್ಸನ್ನು ಧಿಕ್ಕರಿಸುವಂತೆ ಇರುವವನೊಬ್ಬನು ತಪಸ್ಸು ಮಾಡುತ್ತಿದ್ದಾನೆ ಎಂದು ಮುನಿಗಳು ಶಿವನಲ್ಲಿ ಬಿನ್ನಹ ಮಾಡಿಕೊಳ್ಳುವ ಮಾತುಗಳಲ್ಲಿ ಅರ್ಜುನನ ಪೂರ್ಣ ವ್ಯಕ್ತಿತ್ವವನ್ನು ನಾವು ಮನಗಾಣುತ್ತೇವೆ.

ಶಿವನು ಕಿರಾತರೂಪವನ್ನು ಧರಿಸಿ ತನ್ನ ಗಣಗಳನ್ನು ಬೇಡಪಡೆಯನ್ನಾಗಿ ಮಾಡಿ ಕರೆದುಕೊಂಡು ಅರ್ಜುನನು ತಪಸ್ಸು ಮಾಡುತ್ತಿರುವ ಪರ್ವತ ಪ್ರಾಂತಕ್ಕೆ ಬರುತ್ತಾನೆ. ಮೂಕದಾನವನು ಭಯಂಕರವಾದ ಹಂದಿಯ ರೂಪದಲ್ಲಿ ಅರ್ಜುನನ ಮೇಲೆ ನುಗ್ಗುತ್ತಾನೆ. ಅರ್ಜುನನೂ ಶಿವನೂ ಒಟ್ಟಿಗೆ ಬಾಣಪ್ರಯೋಗ ಮಾಡುತ್ತಾರೆ. ಹಂದಿ ಚೀರಿಕೊಂಡು ಬಿದ್ದು ಸಾಯುತ್ತದೆ. ಅರ್ಜುನನು ಹಂದಿಯದೇಹದಲ್ಲಿ ನಾಟಿದ್ದ ತನ್ನ ಬಾಣವನ್ನು ತೆಗೆದುಕೊಳ್ಳಲು ಹೋದಾಗ ಕಿರಾತಪಡೆಯವನೊಬ್ಬನು ಬಂದು ತಡೆಯುತ್ತಾನೆ. ಕಿರಾತನಿಗೂ ಅರ್ಜುನನಿಗೂ ನಡೆಯುವ ಸಂವಾದ ಮನೋಹರವಾಗಿದೆ. ಕಿರಾತನ ಉದ್ಧತವಾದ ವಚನಗಳಿಂದ ಅರ್ಜುನನು ಆಕ್ರಾಂತನಾದರೂ, ಸಮುದ್ರದ ಅಲೆಗಳಿಂದ ಹೊಡೆತಕ್ಕೆ ಸಿಕ್ಕಿದ ಪರ್ವತದಂತೆ ಕೋಪ ಗೊಂಡರೂ ತನ್ನ ಧೈರ್ಯವನ್ನು ಬಿಡದೆ ಅಪ್ರಕಂಪಚಿತ್ತನಾಗಿ ಉತ್ತರ ಕೊಡುವುದು ಅವನ ಮುನಿತನದ ಮತ್ತು ತಪಸ್ಸಿನ ಫಲವೆಂಬಂತೆ ಕಾಣುತ್ತದೆ. ಮುಂದೆ ಪಿನಾಕಿಗೂ ಗಾಂಡೀವಿಗೂ ನಡೆಯುವ ಯುದ್ಧವು ವಿಸ್ತಾರವಾಗಿ ವರ್ಣಿತವಾಗಿದೆ. ಪಿನಾಕಿಯ ಔನ್ನತ್ಯಕ್ಕೂ ಅರ್ಜುನನ ಗಾಂಭೀರ್ಯಕ್ಕೂ ಎಲ್ಲೂ ಭಂಗ ಬರದಂತೆ ವರ್ಣಿಸಿರುವುದು ಭಾರವಿಯ ಪ್ರತಿಭೆಯನ್ನು ಮೆರೆಯುತ್ತದೆ. ಅರ್ಜುನನು ಶಿವನೊಡನೆ ಯುದ್ಧಮಾಡುವಾಗ ಬಳಲಿ ತನ್ನ ಶಕ್ತಿ ಕುಂದುತ್ತಿರುವುದನ್ನು ಕಂಡು ಮಣಲ ಲಿಂಗವನ್ನು ಪೂಜಿಸುವನೆಂದೂ, ಅರ್ಜುನನು ಪೂಜಿಸುವ ಪುಷ್ಪಹಾರ ಶಿವನ ತಲೆಯ ಮೇಲೆ ರಾರಾಜಿಸುವುದೆಂದೂ ಮಹಾಭಾರತದಲ್ಲಿ ಬರುತ್ತದೆ. ಯುದ್ಧ ನಡೆಯುತ್ತಿರುವಾಗ ನಡುವೆ ಹೋಗಿ ಪೂಜಿಸುವುದು ಅಷ್ಟು ಸಮಂಜಸವಾಗಲಾರದು ಅಲ್ಲದೆ ಅರ್ಜುನನ ಪರಾಕ್ರಮ ಪ್ರಶಂಸೆಗೆ ಇದು ಸಹಾಯಕವಾಗುವುದಿಲ್ಲ. ಆದುದರಿಂದ ಇದನ್ನು ಭಾರವಿ ಕೈ ಬಿಟ್ಟಿರುವುದು ಉಚಿತವಾಗಿ ಕಾಣುತ್ತದೆ. ಕದನದಲ್ಲಿ ಶಿವನು ಮೇಲಕ್ಕೆ ನೆಗೆದಾಗ ಒಂದುಸಲ ಅರ್ಜುನನು ಅವನ ಕಾಲನ್ನು ಹಿಡಿದೆಳೆಯುತ್ತಾನೆ. ಆಗ ಅರ್ಜುನನನ್ನು ಶಿವನು ಬಿಗಿಯಾಗಿ ಅಪ್ಪಿಕೊಳ್ಳುತ್ತಾನೆ. ಈ ಒಂದು ಕ್ಷಣದಲ್ಲಿ ಅರ್ಜುನನು ಪಡೆದಷ್ಟು ಆನಂದವನ್ನು ಅವನು ಇಡೀ ತಪಸ್ಸಿನಿಂದಲೂ ಪಡೆಯಲಿಲ್ಲ. ಆಗ ಹರನ ನಿಜವಾದ ರೂಪ ಅರ್ಜುನನಿಗೆ ಕಾಣಿಸಿಕೊಳ್ಳುತ್ತದೆ. ಅರ್ಜುನ ತನ್ನ ಪ್ರಯತ್ನದಲ್ಲಿ ಜಯಶೀಲನಾಗಿ ಆಶೀರ್ವಾದಪೂರ್ವಕವಾಗಿ ಅಸ್ತ್ರವನ್ನು ಪಡೆಯುತ್ತಾನೆ.

'ಕಿರಾತಾರ್ಜುನೀಯ'ದ ಕಥೆಯ ಈ ಸ್ಥೂಲ ಪರಿಚಯವನ್ನು ಮಾಡಿಕೊಂಡು ಪಂಪಭಾರತದಲ್ಲಿ ಬರುವ ಈ ಕಥಾ ಭಾಗವನ್ನು ಓದಿದರೆ ಪಂಪನು ಭಾರವಿಯ ಕಥಾ ಸರಣಿಯನ್ನೇ ಬಹುಮಟ್ಟಿಗೆ ಅನುಸರಿಸಿದ್ದಾನೆಂಬುದನ್ನು ಕಾಣಬಹುದು. ಪಂಪನು 'ಕಿರಾತಾರ್ಜುನೀಯ'ದ ಕಥೆಯ ಮಾರ್ಗದಲ್ಲಿಯೇ ನಡೆದಿರುವುದಕ್ಕೆ ಕಾರಣ ಮಹಾಭಾರತದ ಕಥೆಯಲ್ಲಿ ಒಂದೆರಡು ಬದಲಾವಣೆಗಳನ್ನು ಮಾಡಿಕೊಂಡಿರುವುದೂ, ಅರ್ಜುನನ ಪಾತ್ರ ಅಲ್ಲಿ ಉದಾತ್ತವಾಗಿರುವುದೂ ಆಗಿದೆ. ಪಂಪನು ಈ ಭಾಗವನ್ನು

ರಚಿಸುತ್ತ ನಡೆದಂತೆ ಅವನ ಮನಸ್ಸಿನಲ್ಲಿ 'ಕಿರಾತಾರ್ಜುನೀಯ'ದ ಹಲವೊಂದು ಭಾವಗಳು ಮೂಡಿ ಬಂದಿರುವುದು ಸಹಜ. ಅವುಗಳಲ್ಲಿ ಕೆಲವು ಸ್ವಪ್ರಯತ್ನವಿಲ್ಲದೆಯೇ ಅಥವಾ ತಾನಾಗಿಯೇ ಪಂಪನ ಕಾವ್ಯದಲ್ಲಿ ಸೇರಿಕೊಂಡು ಹೋಗಿರುವುದೂ ಸಹಜ. ಕೆಲವೆಡೆ ತಾನು ಭಾರವಿಯ ಕಾವ್ಯದಲ್ಲಿ ಅನುಭವಿಸಿ ಆನಂದಿಸಿದ ಒಂದೊಂದು ಭಾಗವನ್ನು ವಿಸ್ತರಿಸಿಯೂ ಇದ್ದಾನೆ, ಕೆಲವೆಡೆ ಸಂಗ್ರಹ ಮಾಡಿಯೂ ಇದ್ದಾನೆ. ಆದುದರಿಂದ ಪಂಪ 'ಕಿರಾತಾರ್ಜುನೀಯ'ವನ್ನೇ ಎದುರಿಗಿಟ್ಟುಕೊಂಡು ಪದ್ಯ ಪದ್ಯಗಳನ್ನು ಅನುವಾದ ಮಾಡಿದ್ದಾನೆಂದು ಹೇಳುವುದು ಖಂಡಿತ ಉಚಿತವಲ್ಲ. ಪಂಪ ಭಾರತದ ಕಿರಾತರುದ್ರಾರ್ಜುನೀಯ ಕಥಾಭಾಗವನ್ನು ವಾಚಿಸುತ್ತಿದ್ದರೆ ಕಾವ್ಯ ವಾಹಿನಿ ಎಲ್ಲಿಯೂ ತಡೆಯದೆ ಮುಗ್ಗುರಿಸದೆ ನಿರರ್ಗಳವಾಗಿ ಹರಿಯುವುದನ್ನು ಕಾಣುತ್ತೇವೆ. ಉತ್ತಮವಾದ ಕೃಷಿಯಿಂದ ಉತ್ತಮವಾದ ಬೆಳೆ ಹುಟ್ಟುವಂತೆ ಕವಿಯಾದವನು ಪೂರ್ವ ಕವಿಶ್ರೇಷ್ಠರ ಮಹತ್ ಕೃತಿಗಳನ್ನು ಅಧ್ಯಯನ ಮಾಡದೆ ಉತ್ತಮ ಕಾವ್ಯವನ್ನು ರಚಿಸಲಾರ. ಇಂಥ ಕವಿಯ ಕಾವ್ಯದಲ್ಲಿ ಪೂರ್ವಕವಿಸೂರಿಗಳ ಭಾವಗಳು ರೂಪಾಂತರದಲ್ಲಿಯಾಗಲಿ ನೇರವಾಗಿಯಾಗಲಿ ಒಡಮೂಡುವುದು ಅಸಹಜವಲ್ಲ. ಆಯಾ ಭಾವಗಳು ಕವಿಯ ಮನಸ್ಸನ್ನು ವಿಶೇಷವಾಗಿ ಆಕರ್ಷಿಸಿರುತ್ತವೆ ಮತ್ತು ಅವನ ಮನಸ್ಸಿನಲ್ಲಿ ಮನೆ ಮಾಡಿಕೊಂಡಿರುತ್ತವೆ. ಸಮಯ ಬಂದಾಗ ಇವು ಯಾವ ಪ್ರಯತ್ನ ವಿಶೇಷವೂ ಇಲ್ಲದೆ ತಾನಾಗಿ ಅವನ ಕಾವ್ಯವನ್ನು ಪ್ರವೇಶಿಸುತ್ತವೆ. ಕೊಂಚ ವಿಸ್ತೃತವಾದ ರೂಪದಲ್ಲಿ ಭಾರವಿಯ ಪ್ರಭಾವವು ಪಂಪನ ಕಾವ್ಯದ ಮೇಲೆ ಹೀಗೆ ಆಗಿದೆ ಎಂದು ಹೇಳಬೇಕಾಗುತ್ತದೆ. ಭಾರವಿಯು ಯಾವ ಕಥೆಯನ್ನು ವಸ್ತುವನ್ನಾಗಿಟ್ಟುಕೊಂಡು ಕಾವ್ಯವನ್ನು ರಚಿಸಿದ್ದಾನೆಯೋ ಅದೇ ಕಥೆಯನ್ನೇ ತನ್ನ ಕಾವ್ಯದಲ್ಲಿ ಪಂಪನೂ ತರಬೇಕಾಗಿರುವುದೇ ಇದಕ್ಕೆ ಕಾರಣ. ಈ ದೃಷ್ಟಿಯಿಂದ ನೋಡುವುದಾದರೆ ಪಂಪನು ಭಾರವಿಗೆ ಕೆಲವು ವಿಷಯಗಳಲ್ಲಿ ಕೃತಜ್ಞನೆಂದು ಹೇಳಬೇಕಾಗುತ್ತದೆಯೇ ಹೊರತು ಅನ್ಯಥಾ ಭಾವಿಸಲು ಮಾರ್ಗವಿಲ್ಲ.

ಪಂಪನು ಭಾರವಿಯ 'ಕಿರಾತಾರ್ಜುನೀಯ'ವನ್ನು ಅನುಸರಿಸಿರುವುದರಲ್ಲಿ ವಿವೇಕವನ್ನೂ, ಮಿತಿಯನ್ನೂ, ತನ್ನ ಆಯ್ಕೆಯ ಕೌಶಲವನ್ನೂ ಬೆಳಗಿದ್ದಾನೆ. ಕಥೆಯು ಬೆಳೆಯುವ ಭಾಗದಲ್ಲಿ ಸಾರವತ್ತಾದುದನ್ನು–ಅದೂ ತನಗೆ ಬೇಕಾದಷ್ಟನ್ನು, ತನ್ನ ಉದ್ದೇಶ ಸಾಧನೆಗೆ ನೆರವಾಗುವಂಥದನ್ನು–ತೆಗೆದುಕೊಂಡು, ವರ್ಣನಾಭಾಗ ಬಂದಾಗ ತನ್ನ ಸ್ವತಂತ್ರ ಮಾರ್ಗವನ್ನು ಅನುಸರಿಸಿದ್ದಾನೆ. 'ಕಿರಾತಾರ್ಜುನೀಯ'ವನ್ನು ವಸ್ತುವಿಗನುಸಾರವಾಗಿ ನಾಲ್ಕು ಭಾಗಗಳನ್ನಾಗಿ ವಿಭಾಗಿಸಬಹುದು. ವನೇಚರನು ಯುಧಿಷ್ಠಿರನಲ್ಲಿಗೆ ಹಿಂದಿರುಗಿ ಬಂದು ದುರ್ಯೋಧನನ ರಾಜನೀತಿ ನೈಪುಣ್ಯವನ್ನು ವರ್ಣಿಸುವುದು; ದ್ರೌಪದಿ, ಭೀಮ, ಯುಧಿಷ್ಠಿರ ಇವರ ಸಂವಾದ; ವ್ಯಾಸರ ಆಗಮನ, ಮಂತ್ರೋಪದೇಶ, ಅರ್ಜುನನು ತಪಸ್ಸಿಗಾಗಿ ಇಂದ್ರಕೀಲಕ್ಕೆ ನಡೆಯುವುದು;–ಇದು ಮೊದಲನೆಯ ಭಾಗ. ಇಲ್ಲಿಗೆ 'ಕಿರಾತಾರ್ಜುನೀಯ'ದಲ್ಲಿ

ಮೂರನೆಯ ಸರ್ಗ ಮುಗಿಯುತ್ತದೆ. ನಾಲ್ಕರಿಂದ ಹತ್ತನೆಯ ಸರ್ಗ ಪೂರ್ತಿ ಎರಡನೆಯ ಭಾಗ. ಈ ಭಾಗ ವರ್ಣನೆಗಳಿಂದ ತುಂಬಿದೆ.[1] ಹನ್ನೊಂದರಿಂದ ಹದಿಮೂರನೆಯ ಸರ್ಗ ಮೂರನೆಯ ಭಾಗ. ಅಪ್ಸರೆಯರ ಪ್ರಯತ್ನ ವಿಫಲವಾದುದನ್ನು ಕಂಡು ಇಂದ್ರನು ಅರ್ಜುನನಿದ್ದಲ್ಲಿಗೆ ವೃದ್ಧನ ವೇಷದಲ್ಲಿ ಬರುವುದು; ಇಂದ್ರಾರ್ಜುನರ ಸಂವಾದ; ಹರನನ್ನು ಕುರಿತು ತಪಸ್ಸು ಮಾಡುವಂತೆ ಇಂದ್ರನ ಉಪದೇಶ: ಅರ್ಜುನನ ತಪಸ್ಸು; ತಪೋಜ್ಯೋತಿಯಿಂದ ತಪ್ತರಾದ ಋಷಿಗಳು ಹರನಲ್ಲಿಗೆ ಹೋಗಿ ಹೇಳಿಕೊಳ್ಳುವುದು; ಶಿವನು ಅವರಿಗೆ ಅಭಯವನ್ನಿತ್ತು ಕಿರಾತರೂಪಿನಿಂದ ತನ್ನ ಗಣಗಳೊಡನೆ ಬರುವುದು; ಹಂದಿಯ ಹನನ, ಕಿರಾತ ಅರ್ಜುನರ ಸಂವಾದ;—ಇದು ಮೂರನೆಯ ಭಾಗದಲ್ಲಿ ಬರುವ ಕಥಾಭಾಗ. ಹದಿನಾಲ್ಕರಿಂದ ಹದಿನೆಂಟನೆಯ ಸರ್ಗಸೇರಿ ನಾಲ್ಕನೆಯ ಭಾಗ. ಈಶ್ವರಾರ್ಜುನರ ಯುದ್ಧವರ್ಣನೆ, ಹರಸಾಕ್ಷಾತ್ಕಾರ, ಅಸ್ತ್ರಲಾಭ-ಇದು ಈ ನಾಲ್ಕನೆಯ ಭಾಗದ ಕಥೆ. ಈ ನಾಲ್ಕು ವಿಭಾಗಗಳನ್ನೂ ವೀಕ್ಷಿಸಿದಾಗ ಒಂದು ವಿಷಯ ನಮಗೆ ಗೋಚರವಾಗುತ್ತದೆ. ಒಂದು ಮತ್ತು ಮೂರನೆಯ ಭಾಗಗಳು ಹೆಚ್ಚಿಗೆ ಕಥಾಂಶಗಳಿಂದ ನಿಬಿಡವಾಗಿಯೂ, ಎರಡು ಮತ್ತು ನಾಲ್ಕನೆಯ ಭಾಗಗಳು ವರ್ಣನಾಂಶಗಳಿಂದ ಕಿಕ್ಕಿರಿದು ತುಂಬಿಯೂ ಇವೆ. ಕಥಾಂಶಗಳಿಂದ ಕೂಡಿದ ಭಾಗದಲ್ಲಿ ವರ್ಣನೆಗಳಿಲ್ಲವೆಂದಲ್ಲ. ಅಲ್ಲಿ ಕಥೆ ಪ್ರಧಾನವಾಗಿಯೂ, ವರ್ಣನೆ ಅದಕ್ಕೆ ಉಪಷ್ಟಂಭಕವಾಗಿಯೂ ಬರುತ್ತದೆ. ವರ್ಣನಾ ಭಾಗದಲ್ಲಿ ವರ್ಣನೆ ಮಾಡಲು ಕಥೆ ಒಂದು ಹಿನ್ನೆಲೆ ಮಾತ್ರವಾಗಿದೆ. ಕಥಾಂಶಗಳಿಂದ ಕೂಡಿದ ಒಂದು ಮತ್ತು ಮೂರನೆಯ ಭಾಗಗಳಿಂದ ಹೆಚ್ಚು ಭಾವಗಳನ್ನು ಪಂಪ ಅನುವದಿಸಿರು

---

1 ಅರ್ಜುನನು ತಪಸ್ಸಿಗಾಗಿ ಇಂದ್ರಕೀಲಕ್ಕೆ ಹೋಗುತ್ತಿರುವಾಗ ಶರತ್ಕಾಲ ಆರಂಭವಾಗಿದ್ದಿತು. ಅರ್ಜುನನು ಶರತ್ತಿನ ಸೌಂದರ್ಯವನ್ನು ಮೆಚ್ಚಿಕೊಳ್ಳುತ್ತಾನೆ. ಇಲ್ಲಿ ಕವಿಗೆ ಶರದೃತುವನ್ನು ವರ್ಣಿಸುವ ಸೌಲಭ್ಯ ದೊರೆತಿದೆ. ದಾರಿಯಲ್ಲಿ ಅರ್ಜುನನು ಕಂಡ ಹಳ್ಳಿಗಳು, ಅಲ್ಲಿಯ ಗೊಲ್ಲತಿಯರು, ಕಳಮಾಕ್ಷೇತ್ರಗಳು ಮೊದಲಾದುವನ್ನು ವರ್ಣಿಸಿದ್ದಾನೆ. ನಾಲ್ಕನೆಯ ಸರ್ಗದಲ್ಲಿ ಈ ವರ್ಣನೆಗಳು ಬರುತ್ತವೆ. ಐದು ಮತ್ತು ಆರನೆಯ ಸರ್ಗಗಳಲ್ಲಿ ಹಿಮಾಚಲ ಮತ್ತು ಗಂಗಾನದಿಯ ವರ್ಣನೆಗಳೂ, ಅರ್ಜುನನ ತಪಸ್ಸು, ಇಂದ್ರನು ಅರ್ಜುನನ ನಿಯಮಸ್ಥಿರತೆಯನ್ನು ಅರಿಯಲು ಅಪ್ಸರೆಯರನ್ನು ಕಳುಹಿಸಿಕೊಡುವ ವಿಷಯವೂ ಬರುತ್ತವೆ. ಅಪ್ಸರೆಯರು ಭೂಮಿಗೆ ಇಳಿದು ಬರುವುದು, ಅವರ ವಿಹಾರ, ಸೂರ್ಯಚಂದ್ರರ ಉದಯ ಮತ್ತು ಅಸ್ತ, ರಾತ್ರಿ, ಬೆಳುದಿಂಗಳು, ಅರ್ಜುನನ ಮುಂದೆ ಅಪ್ಸರೆಯರ ನರ್ತನ, ಆರು ಋತುಗಳು, ಅಪ್ಸರೆಯರು ವಿಫಲರಾದುದು—ಇವುಗಳ ಸವಿಸ್ತಾರವಾದ ವರ್ಣನೆಯು ಏಳು, ಎಂಟು, ಒಂಬತ್ತು ಮತ್ತು ಹತ್ತನೆಯ ಸರ್ಗಗಳ ವಿಷಯ. ವರ್ಣನೆಗಳನ್ನು ವರ್ಣನೆಗಳಿಗಾಗಿಯೇ ತುಂಬಿರುವವರಲ್ಲಿ ಭಾರವಿ ಮೊದಲಿಗನೆಂದು ತಿಳಿದು ಬರುತ್ತದೆ. ಸಂಸ್ಕೃತ ಮತ್ತು ವಿಶೇಷವಾಗಿ ಕನ್ನಡ ಕಾವ್ಯಗಳಲ್ಲಿ ಅಷ್ಟಾದಶವರ್ಣನೆಗಳಿಗೆ ವಿಶೇಷ ಮಹತ್ವ ಬಂದಿರುವುದನ್ನು ಇಲ್ಲಿ ನಾವು ಸ್ಮರಿಸಿಕೊಳ್ಳಬೇಕು. ಭಾರವಿ ಇವರಿಗೆ ಮೇಲ್ಪಂಕ್ತಿಯಾಗಿದ್ದಾನೆ ಎನ್ನಬಹುದು.

ವುದೂ ವರ್ಣನೆಗಳ ಸಂದರ್ಭ ಬಂದಾಗ ಸ್ವತಂತ್ರ ಮಾರ್ಗವನ್ನು ಅವಲಂಬಿಸಿದ್ದಾನೆ ಎನ್ನುವುದೂ ಈ ಮುಂದಿನ ಪರಿಶೀಲನೆಯಿಂದ ವ್ಯಕ್ತಪಡುತ್ತದೆ.

ದುರ್ಯೋಧನನು ಕಾಡಿನಲ್ಲಿ ಬೇಡರಂತೆ ತೊಳಲುವ ದಾಯಾದಿಗಳ ಕಂದಿ ಕುಂದಿದ ಮುಖಗಳನ್ನು ನೋಡುವುದೂ, ತನ್ನ ವೈಭವವನ್ನು ಅವರಿಗೆ ತೋರಿಸುವುದೂ ಈ ಎರಡೇ ಸಂಸಾರಫಲವೆಂದು ಬಗೆದು ತನ್ನ ಪರಿವಾರ ಸಮೇತನಾಗಿ ಪಾಂಡವರು ವನವಾಸವಿದ್ದ ಕಾಡಿಗೆ ಬಂದರೆ ಅಲ್ಲಿ ಆದದ್ದೇ ಬೇರೆ. ದುರ್ಯೋಧನನು ಚಿತ್ರಾಂಗದನೆಂಬ ಗಂಧರ್ವನಿಂದ ಬಂಧಿತನಾಗುತ್ತಾನೆ. ಭಾನುಮತಿಯ ಹುಯ್ಯಲನ್ನು ಕೇಳಿ ಯುಧಿಷ್ಠಿರನು ಅರ್ಜುನನನ್ನು ಕಳುಹಿಸಿ ಅವನಿಂದ ದುರ್ಯೋಧನನನ್ನು ಬಿಡಿಸುತ್ತಾನೆ. ಹೀಗೆ ಅವಮಾನ ಹೊಂದಿ ರಾಜಧಾನಿಗೆ ಹಿಂದಿರುಗಿ ಬಂದ ದುರ್ಯೋಧನನು ರಾಜ್ಯವಾಳುವುದರಲ್ಲಿ ತನ್ನ ಸರ್ವ ಸಾಮರ್ಥ್ಯವನ್ನೂ ವೆಚ್ಚಮಾಡುತ್ತಾನೆ. ತನ್ನ ಒಳ್ಳೆಯ ಆಡಳಿತದಿಂದ ಪ್ರಜೆಗಳನ್ನು ತನ್ನವರನ್ನಾಗಿ ಮಾಡಿಕೊಂಡರೆ ಪಾಂಡವರು ಅಜ್ಞಾತವಾಸವನ್ನು ಮುಗಿಸಿಕೊಂಡು ಬಂದರೂ ಕೂಡ ಪ್ರಜೆಗಳು ಪಾಂಡವರನ್ನುಳಿದು ತನ್ನ ಪಕ್ಷಪಾತಿಗಳಾಗಿ ತನ್ನ ಒಡೆತನವನ್ನೇ ಸಂತೋಷದಿಂದ ಒಪ್ಪಿಕೊಂಡಿರುವರು ಎಂದು ಭಾವಿಸುತ್ತಾನೆ.

ದುರ್ಯೋಧನನು 'ಜೂಜಿನಲ್ಲಿ ಗೆದ್ದ ನೆಲವನ್ನು ನಯಜ್ಞನಾಗಿ ತನ್ನಲ್ಲಿ ಹತ್ತಿಸಿ ದುಶ್ಶಾಸನನನ್ನು ಯುವರಾಜನನ್ನಾಗಿ ಮಾಡಿ ನಿರ್ವ್ಯಾಜನಾಗಿ ಅರಸುಗೆಯ್ಯುತ್ತಿರಲು' ಇತ್ತ 'ಯುಧಿಷ್ಠಿರನಟ್ಟಿದ ಕಿರಾತದೂತಂ ತಾಪಸವ್ಯಾಜನಾಗಿ ಪೋಗಿ ಸುಯೋಧನನ ವಾರ್ತೆಯೆಲ್ಲಮನಱಿದು ಬಂದು ಅಜಾತ ಶತ್ರುಗೆ ಇಂತೆಂದು ಬಿನ್ನಪಂಗೆಯ್ದಂ' ಎಂದು ಪಂಪ ಭಾರತದಲ್ಲಿ ಕಿರಾತಾರ್ಜುನರ ಯುದ್ಧದ ಕಥಾಭಾಗವು ಆರಂಭವಾಗುತ್ತದೆ.[2] 'ಕಿರಾತಾರ್ಜುನೀಯ'ದ ಮೊದಲನೆಯ ಪದ್ಯದಲ್ಲಿಯೂ ಕೂಡ ಇದೇ ರೀತಿ ಕಥೆ ಆರಂಭವಾಗಿದೆ.

**ಶ್ರಿಯಃ ಕುರೂಣಾಮಧಿಪಸ್ಯ ಪಾಲನೀಂ । ಪ್ರಜಾಸುವೃತ್ತಿಂ ಯಮಯುಂಕ್ತ ವೇದಿತುಂ ॥**
**ಸ ವರ್ಣಲಿಂಗೀ ವಿದಿತಃ ಸಮಾಯಯೌ । ಯುಧಿಷ್ಠಿರಂ ದ್ವೈತವನೇ ವನೇಚರಃ ॥**

[ಕುರುದೇಶದ ಅಧಿಪತಿಯ ಆಡಳಿತ ಸಂಪತ್ತು ಮತ್ತು ಪ್ರಜೆಗಳಲ್ಲಿನ ವ್ಯವಹಾರವು ಹೇಗಿದೆ ಎಂಬುದನ್ನು ತಿಳಿಯಲು ಬ್ರಹ್ಮಚಾರಿಯ ವೇಷದಿಂದ ಕಳುಹಿಸಲ್ಪಟ್ಟಿದ್ದ ವನೇಚರನು ದ್ವೈತವನಕ್ಕೆ ಬಂದು ಯುಧಿಷ್ಠಿರನನ್ನು ಕಂಡನು.]

'ಕಿರಾತಾರ್ಜುನೀಯ'ದ ಕಾವ್ಯಾರಂಭದಲ್ಲಿ ಬಂದಿರುವ ಈ ಪದ್ಯದ ರೀತಿಯಲ್ಲಿಯೇ 'ಯುಧಿಷ್ಠಿರನಟ್ಟಿದ ಕಿರಾತ ದೂತಂ ...' ಎಂದು ಮೊದಲಾಗುವ ವಚನ ಭಾಗದಲ್ಲಿ ಸಂಗ್ರಹವಾಗಿ ಪಂಪನು ಕಥಾರಂಭವನ್ನು ಮಾಡಿದ್ದಾನೆ. ಕಿರಾತದೂತನ

---

2 ಪಂಪ ಭಾರತದಲ್ಲಿ ಕಿರಾತಾರ್ಜುನಲೀಲಾ ಪ್ರಸಂಗವು ಏಳನೆಯ ಆಶ್ವಾಸದ ೩೯ ನೆಯ ಪದ್ಯದ ಮುಂದಿನ ವಚನದಲ್ಲಿ ಪ್ರಾರಂಭವಾಗಿ [ಪುಟ ೧೭೯, ಪರಿಷತ್ತಿನ ಪ್ರಕಟಣೆ] ಎಂಟನೆಯ ಆಶ್ವಾಸದಲ್ಲಿ ೩೬ ನೆಯ ಪದ್ಯದ ಮುಂದಿನ ವಚನದಲ್ಲಿ [ಪುಟ ೧೯೯] ಮುಗಿಯುತ್ತದೆ.

ವರದಿಯನ್ನು ಪಂಪನು ಮುಂದಿನ ಐದು ಪದ್ಯಗಳಲ್ಲಿ ಕೊಟ್ಟಿದ್ದರೆ, ಅದನ್ನು ಭಾರವಿ ವಿಸ್ತಾರವಾಗಿ ಇಪ್ಪತ್ತೈದು ಪದ್ಯಗಳಲ್ಲಿ ಬೆಳೆಸಿದ್ದಾನೆ. ಕಿರಾತದೂತನು 'ಕಿವಿಗಿನಿದುಂ ನೃಪಂಗೆ ಹಿತಮುಂ ನುಡಿಯೆಲ್ಲಿಯುಮಿಲ್ಲ ಕೇಳ ಬಿನ್ನವಿಸುವೆನೆನ್ನ ಕಂಡುದನೆ' ಎಂದು ತನ್ನ ಮಾತನ್ನು ಆರಂಭಿಸುತ್ತಾನೆ. 'ಕಿರಾತಾರ್ಜುನೀಯ'ದಲ್ಲಿ ಈ ಮೇಲಿನ ಮಾತಗಳು ಬಂದಿರುವ ಸಂದರ್ಭವನ್ನು ಪರಿಶೀಲಿಸೋಣ. ದೂತನು ತಾನು ಮುಂದೆ ಹೇಳುವ ಮಾತುಗಳಿಗೆ ಈ ರೀತಿ ಪೀಠಿಕೆಯನ್ನು ಹಾಕಿ ಕೊಳ್ಳುತ್ತಾನೆ : 'ರಹಸ್ಯವಾದ ಕೆಲಸಗಳನ್ನು ನಿರ್ವಹಿಸಲು ನಿಯುಕ್ತರಾದ ಭೃತ್ಯರಿಂದ ಗೂಢಚಾರರ ಕಣ್ಣುಗಳ ಮೂಲಕ ನೋಡುವವರೂ ನಿಗ್ರಹಾನುಗ್ರಹ ಸಮರ್ಥರೂ ಆದ ರಾಜರು ವಂಚಿತರಾಗಕೂಡದು. ಆದುದರಿಂದ ನನ್ನ ಮಾತುಗಳು ಪ್ರಿಯವಾಗಲಿ ಅಪ್ರಿಯವಾಗಲಿ ನೀವು ಸಹಿಸಿಕೊಳ್ಳಬೇಕಾಗಿದೆ. **ಹಿತವೂ ಮನೋಹರವೂ ಆದ ಮಾತು ದುರ್ಲಭವಲ್ಲವೆ.**'[3] 'ಹಿತಂ ಮನೋಹಾರಿಚ ದುರ್ಲಭಂ ವಚಃ' ಎಂಬ ಮಾತಿನ ಸಮರ್ಥನೆಯನ್ನು 'ಕಿವಿಗಿನಿದುಂ. ..' ಎಂಬ ಮೇಲಿನ ಪದ್ಯದಲ್ಲಿ ತರಲಾಗಿದೆ. ಆದರೆ ಪಂಪ ವಿವರಕ್ಕೆ ಹೋಗದೆ 'ಕಿವಿಗೆ ಪ್ರಿಯವಾದ ಮತ್ತು ರಾಜನಿಗೆ ಹಿತವಾದ ಮಾತು ಎಲ್ಲಿಯೂ ಇಲ್ಲ' ಎಂಬಷ್ಟನ್ನೇ ದೂತನ ಬಾಯಲ್ಲಿ ಹೇಳಿಸಿ ಮುಂದಕ್ಕೆ ಸಾಗಿದ್ದಾನೆ. 'ದುರ್ಯೋಧನನ ರಾಜ್ಯದಲ್ಲಿ ತಾನು ಎಲ್ಲಿಯೂ ಯುಧಿಷ್ಠಿರನಿಗೆ ಪ್ರಿಯವಾದ ಸಮಾಚಾರವನ್ನು ಕೇಳಲಿಲ್ಲ; ತಾನು ಈಗ ಅಪ್ರಿಯವಾದ ಮಾತನ್ನೇ ನಿವೇದಿಸಬೇಕಾಗಿದೆ; ಇದಕ್ಕಾಗಿ ನನ್ನನ್ನು ಕ್ಷಮಿಸಬೇಕು' ಎಂಬ ಭಾವವು ಇಷ್ಟರಲ್ಲೇ ಹೊರಪಡುತ್ತದೆ, ಆದುದರಿಂದ ಪಂಪನು ಇದನ್ನು ಸಂಗ್ರಹವಾಗಿ ಹೇಳಿ ಮುಗಿಸಿದ್ದಾನೆ. ಆದರೆ ಭಾರವಿಯ ಪದ್ಯದಿಂದ ಹೊರಪಡುವ ಅರ್ಥಗಾಂಭೀರ್ಯವನ್ನೂ ಸ್ವಾರಸ್ಯವನ್ನೂ ನಾವು ಕಡೆಗಣಿಸಲಾರೆವು. ದೂತನು ಮುಂದುವರಿದು ಹೀಗೆ ಹೇಳುತ್ತಾನೆ :

> ..........................ಜೂದಿನೊಳುಕ್ಕವದಿಂದೆ ಗೆಲ್ದ ನಿ ||
> ನ್ನವನಿತಳಂ ಕರಾತಳದ ಪೋಲ್ ತನಗಂ ಬೆಸಕೆಯ್ಯೆ ಕೆಯ್ಗೆವಾ ।
> ಡುವ ನಯಮಾ ಬೃಹಸ್ಪತಿಯುಮಂ ಗೆಲೆವಂದುದು ಧಾರ್ತರಾಷ್ಟ್ರನಾ ||4

ಈ ಪದ್ಯದ ಭಾವವನ್ನು 'ಕಿರಾತಾರ್ಜುನೀಯ'ದ ಈ ಕೆಳಗಿನ ಪದ್ಯಾರ್ಥದೊಡನೆ ಹೋಲಿಸಿ ನೋಡೋಣ :

> ದುರೋದರಚ್ಛದ್ಮಜಿತಾಂ ಸಮೀಹತೇ ನಯೇನ ಜೇತುಂ
> ಜಗತೀಂ ಸುಯೋಧನಃ ||5

---

3. ಕ್ರಿಯಾಸು ಯುಕ್ತೈರ್ನೃಪ ಚಾರ ಚಕ್ಷುಷೋ ನವಂಚನೀಯಾಃ
ಪ್ರಭವೋಽನುಜೀವಿಭಿಃ ।
ಅತೋಽರ್ಹಸಿ ಕ್ಷಂತುಮಸಾಧು ಸಾಧು ವಾ ಹಿತಂ ಮನೋಹಾರಿ ಚ
ದುರ್ಲಭಂ ವಚಃ ||—I—4
4. ಪಂ. ಭಾ. VII—40
5. ಕಿರಾ. I—7

'ದ್ಯೂತದಲ್ಲಿ ಮೋಸದಿಂದ ಗೆದ್ದ ರಾಜ್ಯವನ್ನು ಸುಯೋಧನನು ನಯದಿಂದ ವಶೀಕರಿಸಿಕೊಳ್ಳಲು ಇಚ್ಛಿಸುತ್ತಾನೆ' ಎಂಬುದರ ಭಾವವೇ ಪಂಪನ ಮೇಲಿನ ವೃತ್ತದಲ್ಲಿ ಬಂದಿರುವುದಾದರೂ ಅಲ್ಲಿರುವ ಒಂದೆರಡು ವ್ಯತ್ಯಾಸಗಳನ್ನು ಗಮನಿಸದೆ ವಿಧಿಯಿಲ್ಲ. 'ನಯೇನ ಜೇತುಂ' ಎಂಬುದರ ಅರ್ಥವನ್ನು 'ಕರಾತಳದ ವೊಲ್ ತನಗಂ ಬೆಸಕೆಯ್ಯೆ ಕೆಯ್ಗಿಮಾಡುವ ನಯಂ' ಎಂದು ವಿಸ್ತರಿಸಿದ್ದಾನೆ. ಅಲ್ಲದೆ ಪಂಪ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ 'ದುರ್ಯೋಧನನು ರಾಜ್ಯವನ್ನು ವಶಪಡಿಸಿಕೊಳ್ಳುವ ನಯವು ಬೃಹಸ್ಪತಿಯನ್ನೂ ಮೀರಿಸಿತು' ಎಂದು ಹೇಳಿರುವುದರಲ್ಲಿ ಅಡಗಿರುವ ಸ್ವಾರಸ್ಯವನ್ನು ನಾವು ಗಮನಿಸಬೇಕು. ಪಂಪನು ಭಾರವಿಯ ಭಾವವನ್ನು ವಿಸ್ತರಿಸಿ ಅದಕ್ಕೆ ಹೆಚ್ಚಿನ ಸೊಗಸನ್ನು ಉಂಟುಮಾಡಿಕೊಡುವುದರ ಮೂಲಕ ತನ್ನ ಪ್ರತಿಭೆಯನ್ನು ಪ್ರದರ್ಶಿಸಿದ್ದಾನೆ. ಭಾರವಿಯ ಎರಡು ಪದ್ಯಗಳ ಸ್ವಾರಸ್ಯವನ್ನು ಒಂದು ವೃತ್ತದಲ್ಲಿ ಅಡಗಿಸಿಯೂ ಅದರಲ್ಲಿ ತನ್ನತನವನ್ನು ಮೆರೆದಿದ್ದಾನೆ.

ದೂತನು ಮುಂದುವರಿದು 'ದುರ್ಯೋಧನನನ್ನು ರಾಜಾಧಿರಾಜರುಗಳು ತಾವಾಗಿ ಬಂದು ಓಲೈಸುತ್ತಿದ್ದಾರೆ. ಶತ್ರುಗಳನ್ನು ಗೆದ್ದೆನೆಂದು ಹಮ್ಮಿನಲ್ಲಿ ಆತನು ತನ್ನನ್ನು ತಾನು ಮರೆಯಲಿಲ್ಲ. ಆದರೆ ಅರಿಗನ ಸಾಹಸದ ಮಾತು ಒಂದೊಂದು ವೇಳೆ ಅಕ್ಕಪಕ್ಕದವರ ಬಾಯಲ್ಲಿ ಸುಳಿದಾಗ ಮಂತ್ರವನ್ನು ಹೇಳಿ ಹೇಳಿದಂತೆ ಉರಗವು ಹೆದರಿ ಹೆದರಿ ತಲೆಯನ್ನು ತಗ್ಗಿಸುವಂತೆ ಅಂಜಿ ದುರ್ಯೋಧನನು ತಲೆ ಮುಚ್ಚಿಕೊಳ್ಳುತ್ತಾನೆ. ರಾಜಕಾರ್ಯದ ರೀತಿಯನ್ನು ನನ್ನಂಥವನು ತಿಳಿಯುವುದು ಸಾಧ್ಯವೇ! ಹೆಚ್ಚಿಗೆ ಹೇಳುವುದೇನು, ಶತ್ರು ಎಚ್ಚತ್ತಿದ್ದಾನೆ' ಎಂದು ತನ್ನ ಮಾತನ್ನು ಉಪಸಂಹರಿಸುವನು.

> ಅಱಿವಿಂತು, ರಾಜಕಾರ್ಯದ
> ತೆಱನೆನಗಱಿವಂತು ಮೊಗ್ಗೆ, ದೇವರ ಮುಂದಾ।
> ನಱಿಯೆಂ ಪಿರಿದುಂ ಗಳಿಪಲ್,
> ಮಱಸೊಂದಿದನಲ್ಲನ್+ಅಹಿತನೆಚ್ಚತ್ತಿರ್ದಂ ॥

ಇದು ಕಿರಾತದೂತನ ಕೊನೆಯ ಮಾತು. 'ಕಿರಾತಾರ್ಜುನೀಯದಲ್ಲಿ' "ನಿನ್ನ ಕರ್ತವ್ಯ ಪಥವನ್ನು ನೀನು ಕಾಣು, ನಾನು ಕೇವಲ ವಾರ್ತೆಯನ್ನರುಹುವ ಚಾರನಷ್ಟೆ"[6]

---

6 ತದಾಶು ಕರ್ತುಂ ತ್ವಯಿ ಜಿಹ್ಮಮುದ್ಯತೇ ವಿಧೀಯತಾಂ ತತ್ರ ವಿಧೇಯಮುತ್ತರಮ್।
ಪರಪ್ರಣೀತಾನಿ ವಚಾಂಸಿ ಚಿನ್ವತಾಂ ಪ್ರವೃತ್ತಿಸಾರಾಃ ಖಲು ಮಾದೃಶಾಂ ಗಿರಃ ॥—I-25
"ಆದುದರಿಂದ ನಿಮ್ಮನ್ನು ಗೆಲ್ಲುವ ಉದ್ದೇಶದಿಂದ ಕಪಟವನ್ನಾಚರಿಸಲುದ್ಯುಕ್ತನಾಗಿರುವ ದುರ್ಯೋಧನನ ವಿಷಯದಲ್ಲಿ ನೀವು ಮಾಡುವ ಪ್ರತೀಕಾರದ ಕರ್ತವ್ಯವನ್ನು ಜಾಗ್ರತೆ ಮಾಡುವುದಾಗಲಿ. ಇತರರ ಉಕ್ತಿಗಳನ್ನೇ ಆರಿಸಿಕೊಳ್ಳುವವನಾದ ನನ್ನಂಥವನ ಮಾತುಗಳು ಕೇವಲ ವೃತ್ತಾಂತಗಳ ಸಾರದಿಂದ ಕೂಡಿರುತ್ತವೆ." (ನಾವು ವರ್ತಮಾನವನ್ನು ತಿಳಿಸುವವರಷ್ಟೆ, ಕರ್ತವ್ಯವೇನೆಂಬುದನ್ನು ಉಪದೇಶಿಸಲು ಸಮರ್ಥರಲ್ಲ ಎಂದು ಇದರ ಭಾವ.)

ಎಂದು ದೂತನ ಬಾಯಲ್ಲಿ ಹೇಳಿಸಿರುವುದನ್ನೇ " ರಾಜಕಾರ್ಯದ ತೆಱನ್ ಎನಗಱಿ ವಂತು ಮೊಗ್ಗೆ ! " ಎಂಬ ಪಂಪಭಾರತದ ವಾಕ್ಯವು ಸ್ಪಷ್ಟಪಡಿಸುತ್ತದೆಂಬುದು ನಿಜ. ಆದರೂ ಅವೆರಡಕ್ಕೂ ಎಷ್ಟೊಂದು ವ್ಯತ್ಯಾಸ ! ಇದನ್ನು ಅರಿತುಕೊಳ್ಳಲು 'ದೇವರ ಮುಂದಾನಱಿಯೆಂ ಪಿಱಿದುಂ ಗಱಿಪಲ್ ' ಎಂಬ ಮಾತನ್ನು ನೋಡಬೇಕು. ಗುಪ್ತ ಚಾರನಾದ ದೂತನೊಬ್ಬನು ತನ್ನ ಒಡೆಯನ ಮುಂದೆ ಯಾವ ವಿನಯವನ್ನು ಪ್ರಕಟಿಸ ಬೇಕೋ ಅದನ್ನು ಪಂಪನು ಮರೆತಿಲ್ಲ. ' ಮಱಿಸೊಂದಿದನಲ್ಲನ್, ಅಹಿತನ್ ಎಟ್ಟಿ ತ್ತಿರ್ದಂ ' ಎಂಬ ಮಾತು ಸಂಕ್ಷೇಪವಾದರೂ ಗೂಢವಾದ ಅರ್ಥವನ್ನು ಸೂಸುತ್ತದೆ. ' ದುರ್ಯೋಧನನು ಯಾವ ನಯದಿಂದ ರಾಜ್ಯವನ್ನು ತನ್ನ ವಶಮಾಡಿಕೊಂಡಿರು ತ್ತಾನೆಯೋ ಅದನ್ನು ಅರಿತು, ನಿಮ್ಮ ರಾಜ್ಯವನ್ನು ಅವನಿಂದ ಹಿಂತೆಗೆದುಕೊಳ್ಳಲು ಏನು ಮಾಡಬೇಕೋ ಆ ವಿಷಯದಲ್ಲಿ ಜಾಗ್ರತೆಯಾಗಿರುವುದು ' ಎಂಬ ಎಚ್ಚರಿಕೆಯ ಮಾತನ್ನು ಕೂಡ ಅದು ಸೂಚಿಸುತ್ತದೆ. ಯಾವುದನ್ನು ಭಾರವಿ ಸ್ಪಷ್ಟವಾಕ್ಯಗಳಲ್ಲಿ ಆಡಿಸಿದ್ದಾನೆಯೋ ಆ ಮಾತನ್ನು ಪಂಪ ಧ್ವನಿಪೂರ್ವಕವಾಗಿ ನುಡಿಸಿದ್ದಾನೆ. ಕಿರಾತಾರ್ಜುನೀಯದ ವನೇಚರ ಸ್ಪಷ್ಟವಾಗಿ " ಪ್ರತೀಕಾರ ತೆಗೆದುಕೊಳ್ಳುವ ನಿನ್ನ ಕರ್ತವ್ಯವನ್ನು ನೀನು ಜಾಗ್ರತೆಮಾಡು " ಎಂದು ಯುಧಿಷ್ಠಿರನಿಗೆ ಕರ್ತವ್ಯ ಜ್ಞಾನ ವನ್ನು ಕೊಡುತ್ತಾನೆ. ' ಕಿರಾತಾರ್ಜುನೀಯ' ದ ವನೇಚರ ನೀತಿವಿದ ಮತ್ತು ನಯಜ್ಞ. ಇದು ಭಾರವಿಯ ಮನೋಧರ್ಮವನ್ನು ವ್ಯಕ್ತಪಡಿಸುವುದೆಂದು ಹೇಳ ಬಹುದು. ಅವನ ಕಾವ್ಯದಲ್ಲಿ ದ್ರೌಪದಿ, ಭೀಮ, ಯುಧಿಷ್ಠಿರರೇ ಆದಿಯಾಗಿ ವನೇ ಚರ ಕಿರಾತರುಗಳೂ ಕೂಡ ನಯಜ್ಞರಂತೆ ನಡೆದುಕೊಳ್ಳುತ್ತಾರೆ, ನುಡಿಯುತ್ತಾರೆ. ಇಲ್ಲಿ ಗುಪ್ತಚಾರನಾದ ವನೇಚರನು ರಾಜನೀತಿ, ಚಾರನೀತಿಯನ್ನೂ, ತನ್ನ ಅಂತ ಸ್ತನ್ನೂ, ಕರ್ತವ್ಯವನ್ನೂ ತಿಳಿದ ಪೂರ್ಣವ್ಯಕ್ತಿಯಂತೆ ನಮಗೆ ಕಾಣಿಸಿಕೊಳ್ಳುತ್ತಾನೆ. ಆದರೆ ಪಂಪಭಾರತದ ದೂತ ಒಡೆಯನಲ್ಲಿ ವಿನಯವನ್ನು ಪ್ರಕಟಿಸಿ ಮಾನವತೆಯನ್ನು ಉಳಿಸಿಕೊಂಡಿದ್ದಾನೆ.

ಕಿರಾತದೂತನ ಮಾತನ್ನು ಕೇಳಿದ ಯಜ್ಞಸೇನ ತನೂಜೆಯು ಯಮತನೂಜ ನನ್ನು ಕುರಿತು ಪಾಂಡವರಾದ ತಮ್ಮವರೈವರ ಮತ್ತು ತನ್ನ ಪ್ರಕೃತ ದುಃಸ್ಥಿತಿಯನ್ನು ಕುರಿತು ಮಾರ್ಮಿಕವಾದ ಮಾತುಗಳನ್ನಾಡುತ್ತಾಳೆ[7]. " ನುಡಿವೂಡೆ ರಾಜಕಾರ್ಯ ನಯಮೆತ್ತ, ಅಬಲಾಜನದೊಂದು ಬುದ್ಧಿಯೆತ್ತ " ಎಂದು ದ್ರೌಪದಿ ಆರಂಭಿಸುತ್ತ " ನುಡಿಯದೆ ಕೆಮ್ಮಗಿರ್ದೊಡಂ ಇರಲ್ಕೆ ಅಣಂ ಈಯದೆ ನಿಮ್ಮೊಳೆನ್ನುಮಂ ನುಡಿಯಿಸಿ ದಪ್ಪುವು ಆ ಕುರುಕುಳರ್ಕಳ ಗೆಯ್ದ ಅಪರಾಧ ಕೋಟಿಗಳ್ "[8] ಎನ್ನುತ್ತಾಳೆ.

---

7. ಈ ಭಾಗ ಪಂಪಭಾರತದಲ್ಲಿ VII-45-52. ಎಂಟು ಪದ್ಯಗಳಲ್ಲಿ ಬಂದಿದೆ. ಕಿರಾತಾರ್ಜುನೀಯದಲ್ಲಿ I 28-46. ಹತ್ತೊಂಬತ್ತು ಪದ್ಯಗಳಲ್ಲಿ ಬಂದಿದೆ.

8. ಪಂ. ಭಾ. VII—45.

ದೂತನು ತಂದ ವರ್ತಮಾನದಿಂದ ದ್ರೌಪದಿಗೆ ತನ್ನ ಹಿಂದಿನ ಅಪಮಾನಗಳೆಲ್ಲ ಸ್ಮರಣೆಗೆ ಬಂದುವು, ಆಗ ಅವಳು ಸುಮ್ಮನಿರಬೇಕೆಂದರೂ ಆಗಲಿಲ್ಲ ಎಂದು ಹೇಳಿರುವು ದರಿಂದ ಕಥೆಯು ಗೂಢಚಾರನ ಮಾತುಗಳಿಂದ ದ್ರೌಪದಿಯ ಮಾತುಗಳಿಗೆ ಹೇಗೆ ಹೆಜ್ಜೆಯಿಡುತ್ತ ಮುಂದೆ ಹೋಗಿದೆ ಎಂಬುದನ್ನು ನಾವು ಕಾಣುತ್ತೇವೆ. ನಕುಲ ಸಹದೇವರುಗಳ ವಿಷಯದಲ್ಲಿ ದ್ರೌಪದಿ ಹೇಳುವ ಮಾತು 'ಕಿರಾತಾರ್ಜುನೀಯ'ದಲ್ಲಿ ಹೇಗೆ ಬಂದಿದೆಯೆಂಬುದನ್ನು ನೋಡೋಣ: "ಕಾಡಿನ ನೆಲದಲ್ಲಿ ಮಲಗಿ ಅವರ ದೇಹವು ಒರಟಾಗಿದೆ; ಕೆದರಿದ ತಲೆಗೂದಲುಗಳಿಂದ ಕಾಡಾನೆಗಳಂತೆ ಕಾಣುತ್ತಾರೆ; ಹೀಗೆ ಧೈರ್ಯಸಂಯಮಗಳಿಂದಿರುವ ಯಮಳರನ್ನು ನೋಡಿಯೂ ಕೂಡ ನೀನು ಸುಮ್ಮನಿರುವೆಯಲ್ಲ" 9 ಎಂದು ದ್ರೌಪದಿ ಯುಧಿಷ್ಠಿರನನ್ನು ಕುರಿತು ಹೇಳುತ್ತಾಳೆ. 'ಈ ಸ್ಥಿತಿಯಲ್ಲಿರುವವರನ್ನು ನೋಡಿಯೂ ಕೂಡ ನಿನ್ನ ಮನಸ್ಸು ನೋಯದಲ್ಲ, ಏನು ಧೈರ್ಯ ನಿನ್ನದು' ಎಂಬ ಭಾವ ಸೂಚಿತವಾಗುತ್ತದೆ. ಈ ಪದ್ಯದಿಂದ ಕಾಡಿನಲ್ಲಿ ಜೀವಿಸುತ್ತಿರುವ ಯಮಳರ ಸ್ಪಷ್ಟ ಕಲ್ಪನೆ ನಮಗೆ ಉಂಟಾಗುತ್ತದೆ. 'ಕಾಯಕ್ಲೇಶದಿಂದ ಅಡವಿಯ ಕಾಯನ್ನೂ ಹಣ್ಣು ಹಂಪಲುಗಳನ್ನೂ ಉದಿರಿಸಿಕೊಂಡು ತಿಂದು ನಿನ್ನನ್ನಗಲದೆ ಇರುವ ಈ ಯಮಳರು' "ಆವ ತೆಱದಿಂ ನೋಯಿಸರಯ್ ನಿನ್ನ ನನ್ನಿಕಾಱನ ಮನಮಂ" ಎಂದು ಪಂಪ ವರ್ಣಿಸಿದ್ದಾನೆ. 'ಕಿರಾತಾರ್ಜುನೀಯ' ದಲ್ಲಿ ಬರುವ 'ಕೆದರಿದ ತಲೆಗೂದಲಿನ ಕಾಡಾನೆಗಳಂತಿರುವ ಯಮಳರ' ಸ್ಪಷ್ಟ ಚಿತ್ರ ಪಂಪ ಭಾರತದಲ್ಲಿ ಬಂದಿಲ್ಲ. "ಕಥಂ ತ್ವಮೇತತ್ ಧೃತಿ ಸಂಯಮೌ ಯಮೌ, ವಿಲೋಕಯನ್ನುತ್ಸಹಸೇ ನ ಬಾಧಿತುಂ" ಎಂಬುದರ ಭಾವವನ್ನು ಪಂಪ ತನ್ನ ಕಂದ ಪದ್ಯದ ಪೂರ್ವಾರ್ಧದಲ್ಲಿ ತಕ್ಕಮಟ್ಟಿಗೆ ತಂದಿದ್ದಾನೆ. ಅದರಲ್ಲೂ "ಆವ ತೆಱದಿಂ ನೋಯಿಸರಯ್ ನಿನ್ನ ನನ್ನಿಕಾಱನ ಮನಮಂ" ಎಂಬಲ್ಲಿ 'ನನ್ನಿಕಾಱ' ಎಂದು ದ್ರೌಪದಿ ಯುಧಿಷ್ಠಿರನನ್ನು ಚುಚ್ಚಿ ನುಡಿದಿದ್ದಾಳೆ. ಈ ಒಂದು ಪದದ ಬಲದಿಂದ ಇಡೀ ಪದ್ಯಕ್ಕೇ ಶಕ್ತಿಬಂದಿದೆ.

ದ್ರೌಪದಿ ಯುಧಿಷ್ಠಿರನ ಸ್ಥಿತಿಯನ್ನು ಕುರಿತು.

> ಎಮ್ಮಯ್ವರ ಬೇವಸಮುಂ
> ನೀಂ ಮನದೊಳ್ ನೆನೆಯೆಯುಪ್ಪೊಡಂ ನಿನ್ನಿರವಂ।
> ನೀಂ ಮರುಳೆ ಬಗೆಯದಂತುಂ
> ಘುಮ್ಮೆಂಬಡವಿಯೊಳಡಂಗಿ ಚಿಂತಿಸುತಿರ್ಪಾ ॥ 10

ಎಂದು ನುಡಿಯುತ್ತಾಳೆ.

---

9. ವನಾಂತಶಯ್ಯಾ ಕಠಿನೀ ಕೃತಾಕೃತೀ ಕಚಾಚಿತಾ ವಿಷ್ವಗಿವಾಗಜೌ ಗಜೌ।
ಕಥಂ ತ್ವಮೇತೌ ಧೃತಿ ಸಂಯುಮೌ ಯುಮೌ ವಿಲೋಕಯನ್ನುತ್ಸಹಸೇ.
ನ ಬಾಧಿತುಂ ॥ I-36.

10. ಪಂ. ಭಾ. VII-50.

ಇದೇ ಸಂದರ್ಭದಲ್ಲಿ ‘ ಕಿರಾತಾರ್ಜುನೀಯ ’ದಲ್ಲಿ ದ್ರೌಪದಿ ಧರ್ಮರಾಜನನ್ನು ಕುರಿತು “ ಹಿಂದೆ ಬಹಳ ಬೆಲೆಬಾಳುವ ಸುಪ್ಪತ್ತಿಗೆಯ ಮೇಲೆ ಮಲಗಿ ಮಂಗಲ ಗೀತಗಳಿಂದ ಎಚ್ಚರಗೊಳ್ಳುತ್ತಿದ್ದವನು ಈಗ ಇಲ್ಲಿ ಈ ಒರಟಾದ ನೆಲದ ಮೇಲೆ ದರ್ಭೆಗಳನ್ನು ಹಾಸಿಕೊಂಡು ಮಲಗಿ ಅಮಂಗಲಕರವಾದ ನರಿಗಳ ಕೂಗಿನಿಂದ ಎಚ್ಚರಗೊಳ್ಳುತ್ತಿರುವೆಯಲ್ಲಾ ! ” [11] ಎಂದು ಹೇಳುತ್ತಾಳೆಂದು ವರ್ಣಿತವಾಗಿದೆ. ಕಿರಾತಾರ್ಜುನೀಯದಲ್ಲಿ ಬರುವ ಈ ಚಿತ್ರ ಸುಂದರವಾಗಿದೆಯೆಂಬುದು ನಿಸ್ಸಂಶಯ. ‘ ನಿನ್ನಿರವಂ ನೀಂ, ಮರುಳೆ !, ಬಗೆಯದಂತುಂ ಘುಮ್ಮೆಂಬಡವಿಯೊಳ್ ಅಡಂಗಿ ಚಿಂತಿಸುತಿರ್ಪಾ ! ’ ಎಂಬಲ್ಲಿ ‘ ಘುಮ್ಮೆಂಬಡವಿಯೊಳ್ ಅಡಂಗಿ ’ ಎಂಬಲ್ಲಿ ಧರ್ಮರಾಜನಸ್ಥಿತಿ ಥಟ್ಟನೆ ಪಾಠಕರಿಗೆ ವೇದ್ಯವಾಗುವಂತೆ ಧ್ವನಿಚಿತ್ರವನ್ನು ಪಂಪ ಕೊಟ್ಟಿರುವುದಕ್ಕೆ ನಾವು ಮೆಚ್ಚಬೇಕಾಗಿದೆ. ‘ ಘುಮ್ಮೆಂಬ ಅಡವಿ ’ ಎಂಬ ಮಾತು ಇಡೀ ಪದ್ಯದ ಅರ್ಥವನ್ನು ಬೆಳಗುತ್ತದೆ. “ ತಪ್ಪನ್ನು ನುಡಿಯುವುದಿಲ್ಲ ಎಂಬ ನಿನ್ನ ವ್ರತ ನಿನಗೆ ಒಪ್ಪುವುದಿಲ್ಲ. ಶತ್ರುಗಳು ನಿನಗೆ ತಪ್ಪಿ ನಡೆದಿದ್ದಾರೆ. ಅವರು ತಪ್ಪಿದ ಬಳಿಕ ನೀನು ತಪ್ಪಿದರೂ ತಪ್ಪಿಲ್ಲ. ” [12] ಎಂದು ತನ್ನ ಮಾತನ್ನು ದ್ರೌಪದಿ ಮುಗಿಸುತ್ತಾಳೆ.

ಹೀಗೆ ಮಾತನಾಡಿದ ‘ ಪಾಂಚಾಲರಾಜತನೂಜೆಯ ಮಾತಿಗೆ ಬೆಂಬಲಂಬಾಯ್ವಂತೆ ’ ಭೀಮಸೇನನು ನುಡಿಯುತ್ತಾನೆ.[13] ದ್ರೌಪದಿಯ ನೊಂದ ಮನಸ್ಸಿನಿಂದ ಹೊರಬಂದ ನುಡಿಕಿಡಿಗಳು ಎಲ್ಲರ ಮನಸ್ಸನ್ನೂ ಕೆರಳಿಸಿವೆಯಾದರೂ, ಭೀಮನ ಮನಸ್ಸು ತಕ್ಷಣ ಪ್ರತಿಧ್ವನಿಕೊಡುವುದು ನ್ಯಾಯವಾಗಿಯೇ ಇದೆ. ಭೀಮ ಸ್ವಲ್ಪ ಒರಟ ; ಅಲ್ಲದೆ ಅವನಿಗೆ ಸಹನೆಯ ಶಕ್ತಿಯೂ ಕಡಮೆ. ಎಲ್ಲಕ್ಕಿಂತ ಮಿಗಿಲಾಗಿ ಮಹಾಭಾರತದಲ್ಲಿ ಅತ್ಯಂತ ಹೆಚ್ಚು ನೊಂದ ವ್ಯಕ್ತಿಯೆಂದರೆ ಭೀಮ. ಆದುದರಿಂದ ದ್ರೌಪದಿಯ ಮಾತಿನಿಂದ ಪ್ರಚೋದಿತನಾಗಿ ಮೊಟ್ಟಮೊದಲು ಭೀಮನು ಮಾತನಾಡುವುದು ಸಹಜವಾಗಿಯೇ ಇದೆ. ವನೇಚರನ ಮಾತಿನಿಂದ ಕಥಾಪ್ರಸ್ಥಾನವನ್ನು ಕಂಡ ನಾವು ಆ ಮಾತುಗಳಿಂದ ಹಿಂದಿನದೆಲ್ಲ ಮರುಕಳಿಸಿದ ದ್ರೌಪದಿಯ ನುಡಿಗಳನ್ನು ಕೇಳುತ್ತೇವೆ.

ದ್ರೌಪದಿಯ ಮಾತುಗಳಿಗೆ ಒತ್ತಾಸೆಯಾದ ಮಾತುಗಳನ್ನು ಭೀಮ ಆಡುತ್ತಾನೆ. ಭೀಮನು “ ಪ್ರಿಯೆಯ ವಿಹಿತವೂ ಮನಃಪ್ರಿಯವೂ ಆದ ಮಾತುಗಳನ್ನು ಶ್ರೇಷ್ಠವಾದುವೆಂದು ನಿಶ್ಚಯಿಸಿ ಉಪಪತ್ತಿಯಿಂದ ಕೂಡಿದ ಊರ್ಜಿತಾಶ್ರಯವಾದ

---

11. ಪುರಾಧಿರೂಢಃ ಶಯನಂ ಮಹಾಧನಂ ವಿಬೋಧ್ಯಸೇ ಯಃ ಸ್ತುತಿಗೀತಿ ಮಂಗಲೈಃ ।
ಅದಭ್ರದರ್ಭಾಮಧಿಶಯ್ಯ ನ ಸ್ಥಲೀಂ ಜಹಾಸಿ ನಿದ್ರಾಮಶಿವೈಃ ಶಿವಾರುತೈಃ ॥

12. ಪಂ. ಭಾ. VII-52. 13. ಪಂ. ಭಾ. VII-52 ವ. ಭೀಮನ ಮಾತಿನಿಂದ ಕಿರಾತಾರ್ಜುನೀಯದಲ್ಲಿ ಎರಡನೆಯ ಸರ್ಗವು ಆರಂಭವಾಗುತ್ತದೆ.

ಮಾತುಗಳನ್ನು ಆಡಿದನು" 14 ಎಂದು 'ಕಿರಾತಾರ್ಜುನೀಯ'ದಲ್ಲಿ ಹೇಳಿರುವುದನ್ನು ನೋಡಿದಾಗ ಕಥೆಯ ಒಂದೊಂದು ಘಟನೆಯೂ ಒಂದರಿಂದ ಒಂದಕ್ಕೆ ಸರಪಳಿಯ ಕೊಂಡಿಯಂತೆ ಹೇಗೆ ಸೇರಿಕೊಂಡು ಬೆಳೆದಿದೆ ಎಂಬುದು ಗೋಚರವಾಗುತ್ತದೆ. ಇದನ್ನೇ ಪಂಪನು"ಎಂದ ಪಾಂಚಾಳರಾಜತನೂಜೆಯ ಮಾತಿಂಗೆ ಬೆಂಬಲಂಬಾಯ್ವಂತೆ ಭೀಮಸೇನನಿಂತೆಂದಂ" ಎಂದು ಹೇಳಿದ್ದಾನೆ. ಭೀಮನು "ದ್ರೌಪದಿಯಾಡಿದುದು ತಕ್ಕುದೇ ಹೊರತು, ಆಕೆ ಅಲ್ಲದುದನ್ನು ಹೇಳಲಿಲ್ಲ. ನೀವು ಬೇಕಾದರೆ ಕೇಳಿ, ಇಲ್ಲ ದಿದ್ದರೆ ಬಿಡಿ. ಮರುಮಾತಿಗೆಡೆಯಿಲ್ಲ. ನನ್ನ ಮನದ ಮುನಿಸು ನನ್ನನ್ನು ಮಾತ ನಾಡಿಸುತ್ತಿದೆ." 15 ಎಂದು ಯುಧಿಷ್ಠಿರನಿಗೆ ಹೇಳುತ್ತಾ ತನ್ನ ಮಾತಿಗೆ ಪೀಠಿಕೆ ಹಾಕಿಕೊಳ್ಳುತ್ತಾನೆ.

ನಾಲ್ಕುಂ ನೃಪವಿದ್ಯೆಯುನಾ
ಡಳ್ಕಲ್ತುಂ ನೆಱೆಯೆ ಕಲ್ತೆಯಿಲ್ಲಾಗದೆ ಸೋ ।
ಲಲ್ಕೆ ನೃಪ ದೊರೆಯೆ ನೆಲನಂ,
ವಲ್ಕಲ ವಸನಕ್ಕೆ ಮೆಯ್ಯನಾಂಪುದು ಪೆಂಪೇ ॥ 16

ಇದು ಭೀಮ ಧರ್ಮರಾಯನಿಗೆ ಹೇಳುವ ಮಾತು. ಇದೇ ಭಾವವು "ಕಿರಾತಾ ರ್ಜುನೀಯ'ದಲ್ಲಿ ಹೀಗಿದೆ: "ಧರ್ಮರಾಜ! ಚತುರ್ವಿದ್ಯೆಗಳಲ್ಲಿ ಪ್ರಸಿದ್ಧಿಯನ್ನು ಪಡೆದ ವಿವೇಕದಿಂದ ಕೂಡಿದ ನಿನ್ನ ಮತಿಯು ಹೆಣ್ಣಾನೆಯು ಕೆಸರಿಗೆ ಬೀಳುವಹಾಗೆ ವಿಪರ್ಯಯವನ್ನು ಪಡೆದು ನಾಶವನ್ನು ಪಡೆಯುತ್ತದೆ." 17 "ಹೆಣ್ಣಾನೆಯು ಕೆಸರಿನಲ್ಲಿ ಮುಳುಗುವಂತೆ ನಿನ್ನ ಬುದ್ಧಿಯು ಅವಿವೇಕದಿಂದ ನಾಶವಾಗುತ್ತದೆ." ಎಂಬ ಭಾವವನ್ನು ಪಂಪನು ಕೈಬಿಟ್ಟಿದ್ದಾನೆ. ಇದಕ್ಕೆ ಬದಲಾಗಿ 'ವಲ್ಕಲ ವಸನಕ್ಕೆ ಮೆಯ್ಯನಾಂಪುದು ಪೆಂಪೇ' ಎಂಬ ನೂತನ ಭಾವವನ್ನು ತಂದಿದ್ದಾನೆ. ಭೀಮ ಸ್ವಭಾವತಃ ಒರಟನೇನೋ ಅಹುದು. ಆದರೆ 'ಅಣ್ಣನಿಗೆ ಬುದ್ಧಿ ವ್ಯತ್ಯಾಸವಾಗಿದೆ' ಎಂದು ಪರುಷವಾಗಿ ಭೀಮ ಹೇಳುವುದು ಅಷ್ಟು ಸಮಂಜಸವಾಗಿ ಕಾಣಲಾರದು. ಸಾಮಾನ್ಯರ ಕುಟುಂಬದಲ್ಲಿ ಒರಟನಾದ ತಮ್ಮ ತನ್ನ ಅಣ್ಣನನ್ನು 'ಅವಿವೇಕಿ' ಎಂದು ವೊದಲಾಗಿ ಅನ್ನುವುದು ಸಾಮಾನ್ಯವಾದರೂ ಪಾಂಡವ ವಂಶದಲ್ಲಿ ಜನಿಸಿದ ಭೀಮ ಹೀಗೆ ಹೇಳಲಾರನು. 'ಕಿರಾತಾರ್ಜುನೀಯ'ದಲ್ಲಿ ಮುಂದೆ ಬರುವ ಭೀಮನ ಮಾತುಗಳು ರಾಜನೀತಿ ಜ್ಞಾನದಿಂದ ತುಂಬಿತುಳುಕುತ್ತಿವೆ. ಭೀಮ ಪರಾಕ್ರಮಿಯ ರೀತಿ ನೀತಿಗಳನ್ನೂ, ಅಭಿಮಾನಧನನ ಆಧಿಕ್ಯವನ್ನೂ ಕುರಿತು ಹೇಳು ತ್ತಾನೆ. ನಯವಾದ ಸಾರವತ್ತಾದ ವಾಕ್ಯಗಳನ್ನು ಆಡುವ ನೀತಿವಿದನಾದ ಭೀಮನು

---

14. ಕಿರಾ II—1 15. ಪಂ. ಭಾ. VII—53

16. ಪಂ. ಭಾ. VII—54

17. ಚತುಸ್ಪೃಷ್ವಪಿ ತೇ ವಿವೇಕಿನೀ ನೃಪ ವಿದ್ಯಾಸು ನಿರೂಢಿಮಾಗತಾ ।
ಕಥಮೇತ್ಯ ಮತಿರ್ವಿಪರ್ಯಯಂ ಕರಿಣೀ ಪಂಕಮಿವಾವಸೀದತಿ ॥ II-6

ಅಣ್ಣನಲ್ಲಿ ಮತಿವಿಪರ್ಯವನ್ನು ಸ್ಪಷ್ಟವಾದ ವಾಕ್ಯಗಳಲ್ಲಿ ಆರೋಪಿಸಿರುವುದು ನ್ಯಾಯವೇ ಎಂಬ ಪ್ರಶ್ನೆ ಏಳುತ್ತದೆ. ಭೀಮನು ಎಂಥ ಒರಟ, ಅವನ ಬಾಯಿಂದ ಎಂಥ ಉದ್ವೇಗಪೂರಿತ ಮಾತುಗಳು ಹೊರಟುವು ಎಂಬುದನ್ನು ಮೊದಲಿಗೇ ಸ್ಪಷ್ಟ ಪಡಿಸಲು ಇಂಥ ಮಾತನ್ನು ಭಾರವಿ ಭೀಮನಿಂದ ಆಡಿಸಿದ್ದಾನೆಂದು ಬೇಕಾದರೂ ಸಮಾಧಾನ ಹೇಳಬಹುದು ; ಇಲ್ಲವೇ ಧರ್ಮರಾಯನ ಪ್ರಕೃತಸ್ಥಿತಿಯನ್ನು ವಾಸ್ತವಿಕ ದೃಷ್ಟಿಯಿಂದ ಅಳೆದುನೋಡುವ ಭೀಮನಿಗೆ ತೋರಿದ ಸಹಜಭಾವನೆ ಇದು ಎಂದಾದರೂ ಸಮಾಧಾನ ಹೇಳಬಹುದು. ಆದರೆ ಈ ಸಂದರ್ಭದಲ್ಲಿ ಪಂಪ ಭೀಮನನ್ನು ಭೀಮನನ್ನಾಗಿಯೇ ಉಳಿಸಿಕೊಂಡಿರುವನಲ್ಲದೆ ಅವನ ಪಾತ್ರಕ್ಕೆ ಕುಂದುಂಟಾಗದ ರೀತಿಯಲ್ಲಿ ನೋಡಿಕೊಂಡಿದ್ದಾನೆ. ನೀತಿವೇತ್ತನಂತೆ ಮಾತನಾಡುತ್ತ ಭೀಮ "ಮಾನಧನನಿಗೆ ಪ್ರಿಯವಾದ ಶ್ರೇಷ್ಠಪದವನ್ನು ಏರಬೇಕೆಂದೆನ್ನುವ ಧೀರನು ಆತ್ಮ ಪೌರುಷವನ್ನುಅನರ್ಥಗಳನ್ನೆಲ್ಲ ನಿವಾರಿಸಿಕೊಳ್ಳಲು ಸಮರ್ಥವಾದ ತನ್ನ ಆಲಂಬನವನ್ನಾಗಿ ಮಾಡಿಕೊಳ್ಳುತ್ತಾನೆ"[18] 'ನೀನು ಹೀಗೆ ಕುಳಿತಿರುವುದುನ್ಯಾಯವೇ ?' ಎಂದು ನುಡಿಯುತ್ತಾನೆ. ಪಂಪಭಾರತದಲ್ಲಿ

> ಸಲೆಸಂದಿರ್ದ ತೊತ್ತಂದುಂ
> ತಲೆವರೆಗಂ ನಮಗೆ ಪರಿಭವಂ ಕೃಷ್ಣೆಯ ಮುಂ ।
> ದಲೆಯಂ ಪಿಡಿದೆೞೆವಲ್ಲಿಯೆ
> ತಲೆವಿಡಿದರ್ ನಮ್ಮ ಬೀರಮಂ ಕೌರವರುಂ ‖ 19.

ಎಂದು ಭೀಮನ ಮಾತು ಬರುತ್ತದೆ.

'ಶಿರೀಷ ಕೋಮಲೆಯಾದ ದ್ರೌಪದಿಯ ವಿಲೋಲ ನೀಲ ಕಬರೀಭರವನ್ನು ತೆಗೆವಾಗ ಆ ಕುಲಪಾಂಸುಲನ ಕೈಯಬೆರಳುಗಳು ಹತ್ತಿ ಅಚ್ಚೊತ್ತಿದಂತೆ ಆಕೆಯ ತಲೆಗೂದಲುಗಳು ಕೊಂಕಾಗಿ ನಮ್ಮ ಪರಾಕ್ರಮವನ್ನು ಮೂದಲಿಸುವಂತೆ'[20] ಇವೆ. 'ಅಂದು ಸಭಾಮಧ್ಯದಲ್ಲಿ ಅಸಿತೇಂದೀವರ ಲೋಲಲೋಚನೆಯನ್ನು ಪಸುವನ್ನು ಮೋದುವಂತೆ ಮೋದಿದುದನ್ನುಕಂಡೂ ಕೂಡ ನಿನ್ನ ನನ್ನಿಗಾಗಿ ಇದುವರೆಗೊ ಹಲ್ಲಕಚ್ಚಿ ಸೈರಿಸಿಕೊಂಡು ಇದ್ದೆ. ಆದರೆ ಇನ್ನು ದುಶ್ಶಾಸನನ ಎದೆಯ ಬಿಸಿರಕ್ತವನ್ನು ಪಾನಮಾಡಿ ಬಾಯ ತೀಟೆಯನ್ನು ತೀರಿಸಿಕೊಂಡ ಹೊರತು ಸುಮ್ಮನಿರುತ್ತೇನೆಯೆ'[21] ಎಂದು 'ಗದಾದಂಡವನ್ನು ಭುಜಾದಂಡದಲ್ಲಿ ಅಳವಡಿಸಿಕೊಂಡು ಶತ್ರುಗಳಿದ್ದ ದಿಕ್ಕನ್ನು ನೋಡಿ ಹೊರಡಲು' ಭೀಮಸೇನ ಬಯಸುತ್ತಾನೆ. ಭೀಮನ ಈ ಮಾತುಗಳು ಅವನ ಕ್ರೋಧವನ್ನೂ, ಕೌರವರಿಂದುಂಟಾದ ಅನರ್ಥಪರಂಪರೆಗಳನ್ನನುಭವಿಸಿದವನ ಮನಸ್ಸಿನ ಮುಳಿಸನ್ನೂ, ಅವನ ಪರಾಕ್ರಮವನ್ನೂ, ದೃಢನಿಶ್ಚಯವನ್ನೂ ಪ್ರಕಟಪಡಿಸು

---

18. ಕಿರಾ II—13. 19. ಪಂ. ಭಾ. VII—56.
20. ಪಂ. ಭಾ. VII—57. 21. ಪಂ. ಭಾ. VII—58.

ತ್ತವೆ. ದ್ರೌಪದಿಯ ಮುಂದಲೆಯನ್ನು ಸಭಾಮಧ್ಯದಲ್ಲಿ ಹಿಡಿದೆಳೆದದ್ದೇ ಭಾರತದ ಆದಿಗೆ ಕಾರಣ. ಶತ್ರುಗಳು ಮಾಡಿರುವ ಅವಮಾನದಲ್ಲಿ ಇದಕ್ಕಿಂತ ಹಿರಿದಾದುದು ಇನ್ನೊಂದಿಲ್ಲ. ಭೀಮನ ಮನಸ್ಸನ್ನು ಇದು ಎಷ್ಟರಮಟ್ಟಿಗೆ ಆಕ್ರಮಿಸಿರಬಹುದು ಎಂಬುದಕ್ಕೆ ಈ ಮೇಲಿನ ಮಾತುಗಳೇ ಸಾಕ್ಷಿ. ಶತ್ರುಗಳಿಗೆ ಪ್ರತೀಕಾರ ಮಾಡದೆ ಅಡವಿಯಲ್ಲಿ ಕುಳಿತಿರುವುದು ಆತ್ಮಪೌರುಷವನ್ನೇ ನೆಚ್ಚಿರುವ ವ್ಯಕ್ತಿಗೆ ಎಳ್ಳಷ್ಟೂ ಹಿಡಿಸುವುದಿಲ್ಲ. ಆದರೆ ಅಣ್ಣನಾದ ಯುಧಿಷ್ಠಿರನ ಧರ್ಮದ ಭಾರಕ್ಕೆ ಭೀಮನೂ ಕೂಡ ಮಣಿಯಲೇಬೇಕಾಗಿದೆ. ಭೀಮನು ಹಲ್ಲು ಕಚ್ಚಿಕೊಂಡು ಕುಳಿತಿದ್ದಾನೆ. ಇಂಥ ಸಂದರ್ಭದಲ್ಲಿ ಶತ್ರುವಿನ ಮೇಲೆ ಸೇಡು ತೀರಿಸಿಕೊಳ್ಳಬೇಕೆಂಬ ವಿಚಾರವಾಗಿ ಮಾತು ಬಂದರೆ, ನೋಟಕ್ಕೆ ಮೌನವಾಗಿ ಕಾಣುತ್ತಿದ್ದ ಜ್ವಾಲಾಮುಖಿ ಸ್ಫೋಟಗೊಂಡು ತನ್ನಲ್ಲಿರುವುದನ್ನೆಲ್ಲ ಕಾರುವಂತೆ, ಭೀಮನು ತನ್ನ ಮನಸ್ಸಿನಲ್ಲಿ ತುಂಬಿದ್ದ ಮಾತುಗಳನ್ನು ಹೊರಚೆಲ್ಲಿ ಸಮಾಧಾನಗೊಳ್ಳುವುದು ಸಹಜ. ಪಂಪನ ಈ ಮೇಲಿನ ನಿರೂಪಣೆ ರಸೌಚಿತ್ಯದ ದೃಷ್ಟಿಯಿಂದಲೂ ಪಾತ್ರದ ದೃಷ್ಟಿಯಿಂದಲೂ ಅಗತ್ಯವಾದುದೆಂಬುದನ್ನು ನಾವು ಕಾಣುತ್ತೇವೆ. ಇಲ್ಲಿ ಕವಿಯ ಭಾಷೆ ಮತ್ತು ಶೈಲಿ ಎರಡೂ ವಸ್ತುವಿಗೆ ಸರಿಯಾಗಿ ಹೊಂದಿಕೊಂಡಿವೆ. ಈ ಸಂದರ್ಭದಲ್ಲಿ 'ಕಿರಾತಾರ್ಜುನೀಯ'ದ ಭೀಮನ ಪಾತ್ರದೊಡನೆ ಪಂಪಭಾರತದ ಭೀಮನ ಪಾತ್ರವನ್ನು ಹೋಲಿಸಿದರೆ ಪಂಪಭಾರತದ ಭೀಮನನ್ನು ನಾವು ಮೆಚ್ಚುತ್ತೇವೆ ಎಂದು ಹೇಳಬಹುದು.

ಕೋಪಗೊಂಡ ಭೀಮನನ್ನು ನೋಡಿ ಧರ್ಮಪುತ್ರನು "ಕೋಪ ತಾಪದಿಂ ಮಸಗಿದ ಮದಗಜಮನೆ ಮಾಣಿಸುವಂತೆ ಎಂತಾನುಂ ಮೃದು ವಚನಂಗಳಿಂ ಮುಳಿಸನ್ ಆಱಿಸುತಿರ್ದನ್."[22] ಭೀಮನ ಕೋಪವನ್ನು ಧರ್ಮರಾಜನು ಸಮಾಧಾನಪಡಿಸಿದ್ದನ್ನು ಪಂಪ ಈ ಒಂದೇ ಒಂದು ಉಪಮಾನದಿಂದ ಮುಗಿಸಿದ್ದಾನೆ. ಧರ್ಮರಾಜನು "ಹೀಗೆ ವಿಕಾರವನ್ನು ತೋರಿಸಿ ಕೋಪಾಕ್ರಾಂತ ಚಿತ್ತನಾದ ಮರುತಸುತನನ್ನು ದುಷ್ಟ ಆನೆಯನ್ನೆಂತೋ ಅಂತೆ ಸಮಾಧಾನಪಡಿಸಲಾರಂಭಿಸಿದನು"[23] ಎಂದು 'ಕಿರಾತಾರ್ಜುನೀಯ'ದಲ್ಲಿ ಕವಿ ವರ್ಣಿಸಿದ್ದಾನೆ. ಗಜದ ಉಪಮೆ 'ಪಂಪಭಾರತ' 'ಕಿರಾತಾರ್ಜುನೀಯ' ಎರಡರಲ್ಲೂ ಬಂದಿದೆ. ಪಂಪ ಭೀಮನನ್ನು ಮದಗಜಕ್ಕೆ ಹೋಲಿಸುತ್ತಾನೆ; ಭಾರವಿ ದುಷ್ಟದ್ವಿರದಕ್ಕೆ ಹೋಲಿಸುತ್ತಾನೆ. ಅಲ್ಲದೆ ಭೀಮನು ಕೋಪದಿಂದ ವಿಕಾರವನ್ನು ತೋರಿಸಿದನೆಂದು ಭಾರವಿ ವರ್ಣಿಸಿರುವುದನ್ನು ಪಂಪ ಬಿಟ್ಟಿರುವುದು ಉಚಿತವಾಗಿ ಕಾಣುತ್ತದೆ. ಭೀಮನ ಮಾತುಗಳು ಕೋಪದಿಂದ ಕೂಡಿದ್ದರೂ ವಿಕಾರ ಪೂರಿತವಾದುವುಗಳಲ್ಲ. ಭೀಮನು ವಿಕಾರದಿಂದ ನುಡಿದನೆಂದರೆ ಭೀಮನ ಮಾತುಗಳಿಗೆ ಬೆಲೆ ಇಲ್ಲದೆ ಹೋಗುವುದೊಂದು, ಆ ಮಾತುಗಳಲ್ಲಿ ತುಂಬಿರುವ ರಸಕ್ಕೆ ಭಂಗ ಬರುವುದೊಂದು, ಹೀಗೆ ಎರಡು ನ್ಯೂನತೆಗಳು ಉಂಟಾಗುತ್ತವೆ.

---

22. ಪಂ. ಭಾ. VII-58ವ. 23. ಕಿರಾ. II-25.

ವಿವೇಕಿಗಳು, ಜ್ಞಾನಿಗಳು ಮತ್ತು ಇಂದ್ರಿಯ ನಿಗ್ರಹವುಳ್ಳವರು ನಡೆದುಕೊಳ್ಳುವ ರೀತಿಯನ್ನೂ, ಕೋಪ ಮತ್ತು ಕ್ಷಮೆಗಳ ಸ್ವರೂಪವನ್ನೂ, ಶತ್ರುಗಳನ್ನು ಗೆಲ್ಲುವುದಕ್ಕೆ ತಕ್ಕ ಸಮಯ, ಉಪಾಯ ಮೊದಲಾದುವುಗಳನ್ನೂ ಧರ್ಮರಾಜನು ಭೀಮನಿಗೆ ವಿಶದಪಡಿಸುತ್ತಾನೆಂದು 'ಕಿರಾತಾರ್ಜುನೀಯ'ದಲ್ಲಿ ಇಪ್ಪತ್ತೆಂಟು ಪದ್ಯಗಳಲ್ಲಿ ಭಾರವಿ ವರ್ಣಿಸಿದ್ದಾನೆ. ಇವುಗಳನ್ನೆಲ್ಲ ವರ್ಣಿಸುವುದಕ್ಕೆ ಪಂಪನಿಗೆ ಕಾಲವೂ ಇಲ್ಲ, ಸ್ಥಳವೂ ಇಲ್ಲ. "ಆಕುಲನಾದ ಅರ್ಜುನಾಗ್ರಜನಿಗೆ ನಿರ್ಮಲವಾದ ನೀತಿಮಾರ್ಗವನ್ನು ಧರ್ಮನು ಉಪದೇಶಿ"[24] ಸಿದುದನ್ನು ವಿಸ್ತಾರವಾಗಿ ವರ್ಣಿಸಲು ಭಾರವಿಗೆ ಅವಕಾಶವುಂಟು, ಪಂಪನಿಗೆ ಇಲ್ಲ ; ಅಷ್ಟೆ.

ಧರ್ಮಪುತ್ರನು ಭೀಮಸೇನನ ಮುಳಿಸನ್ನು ಆರಿಸುತ್ತಿರುವಲ್ಲಿ

> ಕನಕ ಪಿಶಂಗ ತುಂಗ ಜಟಿಕಾ ವಳಯಂ ಕುಡುಮಿಂಚಿನೋಳಿಯಂ ।
> ನೆನೆಯಿಸೆ, ನೀಲ ನೀರದ ತನುಚ್ಛವಿ ಭಸ್ಮರಜೋವಿಲಿಪ್ತಂ+ಅಂ ।
> ಜನ ಗಿರಿಯಂ ಶರಜ್ಜಳಧರಂ ಕವಿದಂತಿರೆ, ಚೆಲ್ವನಾಳ್ದು ಘೋಽಂ ।
> ಕನೆ ನಭದಿಂದಂ+ಅಂದು+ಇೞಿದನಲ್ಲಿಗೆ ವೃದ್ಧ ಪರಾಶರಾತ್ಮಜಂ ॥ [25]

ವೇದವ್ಯಾಸಮುನಿಯ ಆಗಮನವನ್ನು ಪಂಪ ಒಂದು ವೃತ್ತದಲ್ಲಿ ಮುಗಿಸಿದರೆ ಭಾರವಿ ಅದಕ್ಕೆ ಆರು ಪದ್ಯಗಳನ್ನು[26] ಮೀಸಲಾಗಿಸಿದ್ದಾನೆ. 'ಪರಾಶರಾತ್ಮಜರು ಸಾಕ್ಷಾತ್ ಮನೋರಥವೇ ಬಂದಂತೆ ಕಾಣಿಸಿಕೊಂಡರು'[27] ಎಂದೂ, 'ಪುಣ್ಯಸಂಚಯವೇ ದೇಹವನ್ನು ಧರಿಸಿ'[28] ಬಂದಂತೆ ಇದ್ದ ವೇದವ್ಯಾಸರನ್ನು ಧರ್ಮರಾಜನು ನೋಡಿದನೆಂದೂ ಭಾರವಿ ವರ್ಣಿಸಿದ್ದಾನೆ. ಆಕಸ್ಮಾತ್ತಾಗಿ ಬಂದ ವೇದವ್ಯಾಸಮುನಿ ಧರ್ಮರಾಜನಿಗೆ ಹೇಗೆ ಕಾಣಿಸಿಕೊಂಡನು ಎಂಬುದನ್ನು ಭಾರವಿ ಎರಡು ಪದ್ಯಗಳಲ್ಲಿ ಕೊಟ್ಟಬಳಿಕ ಧರ್ಮರಾಜನು ಮುನಿಗೆ ಮಾಡಿದ ಆದರ ಸತ್ಕಾರವನ್ನು ವರ್ಣಿಸಿದ್ದಾನೆ. ಆದರವನ್ನು ಪಡೆದು ಸುಖಾಸನದಲ್ಲಿ ಉಪವಿಷ್ಟನಾದ ಮುನಿಯ ಚಿತ್ರವು ಮೂರನೆಯ ಸರ್ಗದ ಮೊದಲ ಮೂರು ಪದ್ಯಗಳಲ್ಲಿ ಬಂದಿದೆ ಅವುಗಳಲ್ಲಿ ಮೊದಲನೆಯ ಪದ್ಯವನ್ನು ಪರಿಶೀಲಿಸೋಣ. "ಶರಚ್ಚಂದ್ರನ ಕಿರಣಗಳಂತೆ ಆಹ್ಲಾದಕರವಾಗಿ ಮೇಲಕ್ಕೆ ಎರಚುತ್ತಿರುವ ಕಿರಣಜಾಲಗಳಿಂದ ಕೂಡಿ ಉನ್ನತವಾಗಿಯೂ, ಕಪ್ಪು ಮತ್ತು ಹಳದಿ ಬಣ್ಣಗಳಿಂದ ಕೂಡಿಯೂ, (ಆದುದರಿಂದ) ವಿದ್ಯುತ್ತಿನಿಂದ ಕೂಡಿದ ಮೇಘದಂತೆಯೂ ಇರುವ ಜಟೆಯನ್ನು ಧರಿಸಿ"ದ[29] ಸುಖೋಪವಿಷ್ಟನಾದ

---

24. ಕಿರಾ. II-54.
25. ಪಂ. ಭಾ. VII-59. 26. ಕಿರಾ. II. 54-56.; III. 1-3.
27. ಕಿ.ರಾ. II-54. 28. ಕಿ.ರಾ. II-56.

ದದೃಶೇ ಜಗತೀಭುಜಾ ಮುನಿಃ ಸ ವಪುಷ್ಮಾನಿವ ಪುಣ್ಯಸಂಚಯಃ

29. ಕಿರಾ. III-1.

ತತಃ ಶರಚ್ಚಂದ್ರಕರಾಭಿರಾಮೈರುತ್ಸರ್ಪಿಭಿಃ ಪ್ರಾಂಶುಮಿವಾಂಶುಜಾಲೈಃ ।
ಬಿಭ್ರಾಣಮಾನೀಲರುಚಂ ಪಿಶಂಗೀರ್ಜಟಾಸ್ತಡಿತ್ವಂತಮಿವಾಂಬುವಾಹಂ ॥

ಮುನಿಯನ್ನು ಕುರಿತು ಧರ್ಮರಾಜನು ಮಾತನಾಡಿದನು. ಮೇಲೆ ಉದ್ಧರಿಸಿದ ಪಂಪನ ವೃತ್ತದಲ್ಲಿ ಎರಡು ಉಪಮಾನಗಳಿವೆ. 'ಕನಕ ಪಿಶಂಗ ತುಂಗ ಜಟಿಕಾ ವಳಯಂ ಕುಡುಮಿಂಚಿನೋಳಿಯಂ ನೆನೆಯಿಸೆ' ಎಂಬುದು ಮೊದಲನೆಯದು. ಇದು ಮುನಿಯ ಜಟೆಯ ವರ್ಣನೆ. ಇದಕ್ಕೆ ಸಂವಾದಿಯಾಗಿ 'ಬಿಭ್ರಾಣಮಾನೀಲ ರುಚಂ ಪಿಶಂಗೀರ್ಜಟಾಸ್ತಡಿತ್ವಂತಮಿವಾಂಬುವಾಹಂ' ಎಂದು ಕಿರಾತಾರ್ಜುನೀಯದಲ್ಲಿ ಬಂದಿರುವುದನ್ನು ಕಾಣಬಹುದು. ಪಂಪ ಜಟೆಯ ಬಣ್ಣವನ್ನು ಚಿನ್ನದ ಹಳದಿಯ ಬಣ್ಣವೆಂದು ಉಲ್ಲೇಖಿಸಿ ಕುಡುಮಿಂಚಿನ ಕಾಂತಿಗೆ ಜಟೆಯನ್ನು ಹೋಲಿಸಿದ್ದಾನೆ. ಆದರೆ ಭಾರವಿಯ ವರ್ಣನೆ ಇದಕ್ಕಿಂತ ಉತ್ತಮವೆಂದು ತೋರುತ್ತದೆ. ಎಷ್ಟೇ ವಯಸ್ಸಿನ ವ್ಯಕ್ತಿಯಾಗಿದ್ದರೂ ಸ್ವಾಭಾವಿಕವಾಗಿ ತಲೆಗೂದಲು ಅಚ್ಚಹಳದಿಯಾಗಿರುವುದಿಲ್ಲ. ಕಪ್ಪು ಮಿಶ್ರಿತವಾದ ಹಳದಿಯ[30] ಬಣ್ಣ ಜಟೆಯ ನೈಜ ಬಣ್ಣವನ್ನು ಹೋಲುತ್ತದೆಂದು ಹೇಳಬಹುದು. ಅದಕ್ಕನುಸಾರವಾಗಿ ಜಟೆ ವಿದ್ಯುತ್ತಿನಿಂದ ಕೂಡಿದ ಮೇಘದಂತೆ ಇದ್ದಿತು ಎನ್ನುವುದು ಸಮಂಜಸವಾಗಿದೆ. ಮೇಘ ಕಪ್ಪು, ಮಿಂಚು ಹಳದಿ. ಇವೆರಡೂ ಸಮ್ಮಿಳಿತವಾದಾಗ ಉಂಟಾಗುವ ಸಂಯೋಜಿತ ವರ್ಣವೇ ಜಟೆಯ ಬಣ್ಣ ಎಂಬುದು ಸ್ಪಷ್ಟ. 'ನೀಲನೀರದ ತನುಚ್ಛವಿ ಭಸ್ಮರಜೋವಿಲಿಪ್ತಂ ಅಂಜನಗಿರಿಯಂ ಶರಜ್ಜಳಧರಂ ಕವಿದಂತಿರೆ ಚೆಲ್ವನಾಳ್ದು' ಎಂಬುದು ಎರಡನೆಯದು. ವೇದವ್ಯಾಸರ ದೇಹದ ಬಣ್ಣ ಕಪ್ಪೆಂದೂ, ಈ ದೇಹದ ಮೇಲೆ ಅವರು ಹಚ್ಚಿಕೊಂಡಿರುವ ಬಿಳಿಯ ವಿಭೂತಿ ನೀಲಿಯ ಬಣ್ಣದ ಅಂಜನ ಪರ್ವತವನ್ನು ಶರತ್ಕಾಲದ ಬಿಳಿಯ ಮೋಡ ಕವಿದಂತಿದೆಯೆಂದೂ ಪಂಪ ವರ್ಣಿಸಿರುವುದು ಮನೋಹರವಾಗಿದೆ. ದೇಹದ ಕಪ್ಪುಕಾಂತಿಗೂ ವಿಭೂತಿಯ ಬಿಳಿಯ ಕಾಂತಿಗೂ ಸಾಮಂಜಸ್ಯವನ್ನು ಹೊಂದಿಸಿರುವುದು ಪಂಪನ ಪ್ರತಿಭಾದ್ಯೋತಕವಾಗಿದೆ. ಭಾರವಿಯ ಒಂದು ಸುಂದರ ಚಿತ್ರವನ್ನು ಕೈಬಿಟ್ಟದರೂ ಅದಕ್ಕೆ ಬದಲಾಗಿ ಬೇರೊಂದು ಸುಂದರತರವಾದ ಚಿತ್ರವನ್ನು ಪಂಪ ಸಹೃದಯರಿಗೆ ನೀಡಿದ್ದಾನೆ.

ಯುಧಿಷ್ಠಿರನು ಅರ್ಘ್ಯಪಾದ್ಯಾದಿಗಳಿಂದ ವೇದವ್ಯಾಸರನ್ನು ಸತ್ಕರಿಸುತ್ತಾನೆ. ಧರ್ಮರಾಯಾದಿಗಳ ಇರವು ವೇದವ್ಯಾಸರಿಗೂ ಕಣ್ಣಿನಲ್ಲಿ ನೀರನ್ನು ತರಿಸುತ್ತದೆ. ಬಳಿಕ ಧರ್ಮನಂದನ "ನಮ್ಮ ವನವಾಸ ಪರಿಶ್ರಮವು ನೀಗಿತು: ಸಾಗರಗಳಿಂದ ಪರಿವೃತವಾದ ಧರಿತ್ರಿಯನ್ನು ಆಳಿದಂತೆ ಆಯಿತು; ನಮ್ಮ ಹೃದ್ರೋಗ ಅಡಗಿತು; ಅನೇಕ ಮಂಗಳ ಪರಂಪರೆಗಳು ದೊರೆಕೊಂಡುವು; ನಿಮ್ಮ ಪಾದಪದ್ಮ ನಿರೀಕ್ಷಣದಿಂದ ಏನಾಗದು?"[31] ಎಂದು ವಿಜ್ಞಾಪಿಸಿಕೊಳ್ಳುತ್ತಾನೆ. ಇದೇ ರೀತಿಯ ಮಾತು ಕಿರಾತಾರ್ಜುನೀಯದಲ್ಲಿಯೂ ಕೂಡ ಬರುತ್ತದೆ; ವಿವರದಲ್ಲಿ ವ್ಯತ್ಯಾಸವಿದ್ದರೂ ಧ್ವನಿ ಇದೇ ಆಗಿದೆ. 'ಸಂದರ್ಶನಂ ಲೋಕಗುರೋರಮೋಘಂ ತವಾತ್ಮಯೋನೇರಿವ ಕಿಂ

30. ಪಿಶಂಗವೆಂದರೆ ಪಿಂಗಲ ವರ್ಣ; ಕಂದುಹಳದಿ. 31. ಪಂ.ಭಾ. VII.60.

ನಧತ್ತೇ '[32] ಎಂದು ಧರ್ಮರಾಜ ಹೇಳುವಲ್ಲಿ ' ಕಿಂ ನಧತ್ತೇ ' ಎಂಬುದಕ್ಕೆ ಯಾವ ಶಕ್ತಿಯಿದೆಯೋ ಅದನ್ನು ಪಂಪನ ' ಏನಾಗದು ಪೇೞ್ ' ಎಂಬ ಮಾತಿನಲ್ಲಿ ಕಾಣ ಬಹುದಾಗಿದೆ. " ಆಪತ್ಪಯೋಧಿಯಲ್ಲಿ ಅತ್ಯಾಪತ್ತಿನಿಂದ ಮುಳುಗಿ ನವೆಯುತ್ತಿರುವ ನಮಗೆ ನೀವೇ ಶರಣು. ನೀವೇ ತಿಳಿದು ನಮಗೆ ಆಪತ್ಪ್ರತೀಕಾರವಾವುದು ಎಂಬುದನ್ನು ಈಗಲೇ ತಿಳಿಸಿ "[33] ಎಂದು ಧರ್ಮರಾಯ ಬೇಡಿಕೊಳ್ಳುತ್ತಾನೆ. ಇದೇ ಸಂದರ್ಭದಲ್ಲಿ 'ಕಿರಾತಾರ್ಜುನೀಯ'ದಲ್ಲಿ ಬರುವ ' (ನಿಸ್ಪೃಹರಾದ) ತಮ್ಮಿಂದ ಕಲ್ಯಾಣಕರವಾದ ಮಾತುಗಳನ್ನು ಕೇಳುವ ಇಚ್ಛೆ ನನ್ನನ್ನು ಮಾತನಾಡಿಸುತ್ತಿದೆ ' ಎಂಬ ಧರ್ಮರಾಯನ ಮಾತು ಅವನ ಪಾತ್ರದ ಗಾಂಭೀರ್ಯವನ್ನೂ ಔನ್ನತ್ಯವನ್ನೂ ಸ್ಪಷ್ಟಪಡಿಸುತ್ತದೆ ಪಾಂಡವರ ಆಗಿನ ಸ್ಥಿತಿಗೆ ಸಂಬಂಧಿಸಿದಂತೆ ಕಲ್ಯಾಣಕರವಾದ ಮಾತುಗಳು ಎಂಬುದಕ್ಕೆ ಶತ್ರುಗಳನ್ನು ಜಯಿಸುವುದು ಎಂಬ ಅರ್ಥವೇ ಫಲಿಸುತ್ತದೆ. ಶತ್ರುಗಳನ್ನು ಗೆಲ್ಲುವ ಉಪಾಯವನ್ನು ಹೇಳಿ ಎಂಬ ನೇರವಾದ ಮಾತಿಗಿಂತ ಧರ್ಮರಾಯನ ಬಾಯಿಂದ ಬರುವ ಈ ಮೇಲಿನ ಮಾತುಗಳು ಅವನ ಪಾತ್ರಕ್ಕೆ ಯೋಗ್ಯವಾಗಿವೆ. ಆದರೆ ಪಂಪ ಕಥಾದೃಷ್ಟಿಯಿಂದ ನೇರವಾದ ಮಾತುಗಳನ್ನೇ ಧರ್ಮರಾಯನ ಬಾಯಿಂದ ಆಡಿಸಿದ್ದಾನೆ.

ವ್ಯಾಸರು ಆಗಿನ ಪಾಂಡವರ ಸ್ಥಿತಿಗೆ ತಮ್ಮ ಅನುಕಂಪೆಯನ್ನು ತೋರಿಸುತ್ತ ಉತ್ತರಕೊಡುತ್ತಾರೆ. " ತನ್ನ ವರ್ತನಮುಂ ಮೋಹಮನುಂಟುಮಾಡೆ "[34] ಎಂಬ ಮಾತಿನಲ್ಲಿ ವ್ಯಾಸರ ಮನೋಭಾವವನ್ನು ಕವಿ ಹೃದಯಂಗಮವಾಗಿ ಚಿತ್ರಿಸಿದ್ದಾನೆ. ಸರ್ವಸಂಗ ಪರಿತ್ಯಾಗ ಮಾಡಿದ ತಪೋಧನರಿಗೂ ಮೋಹವುಂಟುಮಾಡುವ ಸ್ಥಿತಿ ಅವರ ಹೃದಯದ ಮರುಕವನ್ನೂ ಪಾಂಡವರ ಶೋಚನೀಯ ಸ್ಥಿತಿಯನ್ನೂ ಒಟ್ಟಿಗೆ ನಮ್ಮ ಕಣ್ಣಿಗೆ ಕಟ್ಟುವಂತೆ ಮಾಡುತ್ತದೆ. " ಹನ್ನೆರಡು ವರ್ಷಗಳ ನಿಮ್ಮ ವನವಾಸದ ಅವಧಿ ಮುಗಿಯುತ್ತ ಬಂದಿತು. ನಿಮ್ಮ ಶತ್ರುವು ನಿಮಗೆ ಆಮೇಲೂ ರಾಜ್ಯವನ್ನು ಕೊಡನು. ಯುದ್ಧ ಹತ್ತಿರ ಬಂದಿತೆಂದು ತಿಳಿಯಿರಿ.[35] ಭೀಷ್ಮ, ದ್ರೋಣ, ಕೃಪ, ಕರ್ಣ ಇವರು ಒಬ್ಬರಿಗಿಂತ ಒಬ್ಬರು ಮಹಾಗರ್ವಿತರು.[36] ಆ ಕೌರವರ ಮುಳಿಸುಗಳೂ ಮುಳಿದು ತುಡುವ ದಿವ್ಯೇಷುಗಳೂ ಪ್ರಳಯದ ಉರಿ, ಕಾಳಕೂಟದ ಗುಳಿಗೆ, ಹರನ ಹಣೆಗಣ್ಣಿನ ಕಿಚ್ಚು–ಇವುಗಳ ಅಳವಿಗೂ ಅಗ್ಗಳವಾದುವು "[37] ಎಂದು ರಿಪುವಿನ ಸಾಮರ್ಥ್ಯವನ್ನು ತೋರಿಸಿಕೊಟ್ಟು ' ಅವರನ್ನು ಗೆಲ್ಲಬೇಕಾದರೆ ವಿಕ್ರ

---

32 ಕಿರಾ. III-7. 33. ಪಂ.ಭಾ. VII.61. 34. ಪಂ.ಭಾ. VII-63ವ.

35. ಪಂ.ಭಾ. VII.64. 36. ಪಂ.ಭಾ. VII-65. ಕಿರಾ. III-18ರಿಂದ ಬರುವ ಭಾವಗಳು ಸಂಗ್ರಹೀತವಾಗಿ ಪಂ.ಭಾ. VII.65ರಲ್ಲಿ ಬಂದಿವೆ. VII-66 ಕಂದ ಪದ್ಯ ಪಂಪನ ಸ್ವಂತ ಕಲ್ಪನೆ.

37. ಪಂ. ಭಾ. VII-66.

ಮಾರ್ಜುನನೇ ಸರಿ; ಆತನು ದಿವ್ಯಾಸ್ತ್ರಗಳನ್ನು ಸಾಧಿಸಬೇಕು. ಅದಕ್ಕಾಗಿ ಮಂತ್ರೋಪದೇಶ ಮಾಡಲು ಬಂದಿದ್ದೇನೆ' ಎಂದು ಯುಧಿಷ್ಠಿರನಿಗೆ ಹೇಳಿ ವಿಕ್ರಮಾರ್ಜುನನಿಗೆ ಮಂತ್ರಾಕ್ಷರಗಳನ್ನು ಉಪದೇಶಿಸುತ್ತಾರೆ ವ್ಯಾಸರು. ಬಳಿಕ ಗುಹ್ಯಕನನ್ನು ಸ್ಮರಣಮಾತ್ರದಿಂದ ಬರಿಸಿ ಅರ್ಜುನನನ್ನು ಇಂದ್ರಕೀಲಕ್ಕೆ ಕಳುಹಿಸಿ ಬರುವುದೆಂದು ಅಪ್ಪಣೆಮಾಡುತ್ತಾರೆ. ಯುಧಿಷ್ಠಿರನು ಕೃತಕೃತ್ಯನಾದವನಂತೆ ಅವರಿಗೆ ಸಾಷ್ಟಾಂಗವೆರಗುತ್ತಾನೆ. ಅನಂತರ ವೇದವ್ಯಾಸರು ಗಗನಮಾರ್ಗವನ್ನು ಹಿಡಿಯುತ್ತಾರೆ.[38].

ಅರ್ಜುನನು ಮರುಮಾತಿಲ್ಲದೆ ಗಂಭೀರವಾಗಿ ತಪಸ್ಸಿಗೆ ನಡೆಯಲು ಸಿದ್ಧನಾಗುತ್ತಾನೆ ತನ್ನ ಅಣ್ಣತಮ್ಮಂದಿರನ್ನೂ ಪತ್ನಿಯಾದ ದ್ರೌಪದಿಯನ್ನೂ ಬೀಳ್ಕೊಡುವ ದೃಶ್ಯ ಅಪೂರ್ವವಾದುದು. ಇಷ್ಟು ದಿವಸ ಕಷ್ಟಸುಖಗಳಲ್ಲಿ ಸಮಪಾಲುಗೊಂಡು ವನವಾಸ ಸಹವಾಸಿಗಳಾಗಿದ್ದ ಅಣ್ಣತಮ್ಮಂದಿರನ್ನೂ ಪ್ರಿಯೆಯನ್ನೂ ಅಗಲುವುದರಲ್ಲಿ ವಿರಹವಿದೆ; ಮುಂದೆ ಸಾಧಿಸಬಹುದಾದ ಕಾರ್ಯದಲ್ಲಿ ಜಯಗಳಿಸಿ ಯಶಸ್ವಿಯಾಗುವೆನೆಂಬುದರಲ್ಲಿ ಗೆಲವು ಇದೆ. ಇವೆರಡರ ನಡುವೆ ಅರ್ಜುನನ ಮನಸ್ಸು ತೂಗಾಡುತ್ತದೆ. ಇದೇ ಸ್ಥಿತಿ ಪಾಂಡವ ಸಹೋದರರಲ್ಲಿಯೂ ಇದೆ. ವನವಾಸದ ಸಹವಾಸದಿಂದ ಅರ್ಜುನನನ್ನು ಬಿಟ್ಟಿರುವುದು ದುಃಖಕರವಾದರೂ ಅರ್ಜುನನು ಸಾಧಿಸಬಹುದಾದ ಅಸ್ತ್ರಲಾಭದ ವಿಷಯವನ್ನು ದೃಷ್ಟಿಯಲ್ಲಿಟ್ಟುಕೊಂಡು ಆ ದುಃಖವನ್ನು ಅವರು ಸಹಿಸಿಕೊಂಡರಂತೆ [39] ಅರ್ಜುನನನ್ನು ಅಗಲುವ ಈಗಿನ ವಿರಹದ ದುಃಖವೋ, ಅರ್ಜುನನು ಪಡೆಯುವ ಅಸ್ತ್ರದಿಂದ ತಮಗೆ ಮುಂದೊದಗಬಹುದಾದ ಉತ್ಕರ್ಷವನ್ನು ಊಹಿಸಿಕೊಳ್ಳುವುದರಿಂದ ಉಂಟಾಗುವ ಹರ್ಷವೋ ಇತರರೆಲ್ಲರಿಗಿಂತಲೂ ದ್ರೌಪದಿಗೆ ಹೆಚ್ಚು. ಏಕೆಂದರೆ ದ್ರೌಪದಿಯೇ ಹೆಚ್ಚು ನೊಂದಿರುವವಳು, ಅಪಮಾನಗೊಂಡಿರುವವಳು. ಈ ಭಾಗ 'ಕಿರಾತಾರ್ಜುನೀಯ'ದಲ್ಲಿ ಮನೋಹರವಾಗಿ ವರ್ಣಿತವಾಗಿದೆ. ಆದರೆ ಇಂಥ ವಿವರಗಳಿಗೆಲ್ಲ ಕೈಹಾಕಲು ಪಂಪನಿಗೆ ಇರುವ ಅವಕಾಶ ಅಲ್ಪ. ಆದರೂ ಅರ್ಜುನನು ಹೊರಟು ನಿಂತಾಗಿನ ದ್ರೌಪದಿಯ ವರ್ಣನೆಯನ್ನು ಕೈಬಿಟ್ಟಿಲ್ಲ. ಮೊದಲು 'ಕಿರಾತಾರ್ಜುನೀಯ'ದಲ್ಲಿರುವ ವರ್ಣನೆಯನ್ನು ಅವಲೋಕಿಸೋಣ. ಪ್ರಯಾಣಕ್ಕೆ ಸಿದ್ಧನಾಗಿ ನಿಂತಿರುವ "ಅರ್ಜುನನನ್ನು ನೋಡುತ್ತಿರುವ ದ್ರೌಪದಿಯು ತನ್ನ ಮನಸ್ಸಿನಲ್ಲಿರುವುದನ್ನು ಸ್ಫುಟವಾಗಿ ಹೇಳುವ (ಅರ್ಜುನನ ಅಗಲುವಿಕೆಯ ದುಃಖವನ್ನು

---

38 'ಕಿರಾತಾರ್ಜುನೀಯ'ದಲ್ಲಿ ವ್ಯಾಸರ ಮಾತು ಮೂರನೆಯ ಸರ್ಗದಲ್ಲಿ ೧೧ನೆಯ ಪದ್ಯದಿಂದ ೨೩ನೆಯ ಪದ್ಯ ಪೂರ್ತ ಬಂದಿದೆ. ಮಂತ್ರೋಪದೇಶದ ವಿವರ ಎರಡು ಪದ್ಯಗಳಲ್ಲಿ ಬಂದಿದೆ. ಬಳಿಕ ವ್ಯಾಸರು ಮಾಯವಾಗಿ ಯಕ್ಷ ಬರುವುದರ ವರ್ಣನೆ ೩೦ನೆಯ ಪದ್ಯದಲ್ಲಿ ಬರುತ್ತದೆ.

39. ಕಿರಾ. III-33-35

ಸೂಚಿಸುವ) ಅಭಿಲಾಷೆಯುಳ್ಳವಳಾಗಿದ್ದರೂ ಮಂಗಲಕಾರ್ಯಕ್ಕೆ ಭಂಗಬರಬಹುದೆಂಬ ಭೀತಿಯಿಂದ ಬಾಷ್ಪಾವೃತವಾದ, ಬಿಂದುಸಹಿತವಾದ, ನೀಲೋತ್ಪಲದಂತಿರುವ ವಿಲೋಚನಗಳನ್ನು ಮುಚ್ಚಲು ಸಹಿಸಲಿಲ್ಲ." [40] ಎಷ್ಟು ನವುರಾದ ಮಧುರವಾದ ಭಾವವನ್ನು ಕವಿ ಈ ಒಂದು ಪದ್ಯದಲ್ಲಿ ಸೂಚಿಸಿದ್ದಾನೆ; ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ದ್ರೌಪದಿ ಅರ್ಜುನನ ಕಡೆ ಬೀರಿದ ನೋಟವನ್ನು ರಸಗರ್ಭಿತವಾಗಿ ವರ್ಣಿಸಿದ್ದಾನೆ. "ಸ್ವಭಾವಸಿದ್ಧವಾದ ಪ್ರೀತಿಯಿಂದ ಮನೋಹರವಾದ, ಸುಂದರಿಯಾದ ದ್ರೌಪದಿಯಿಂದ ಅರ್ಪಿತವಾದ, ತನ್ನ ಲೋಚನಗಳನ್ನು ಆಸೆಗೊಳಿಸುವ ಆಕೆಯ ನೋಟವನ್ನು ಶುದ್ಧವಾದ ಮನಸ್ಸೆಂಬ ಬೊಗಸೆಯಿಂದ ದಾರಿಗೆ ಕಟ್ಟಿದ ಬುತ್ತಿಯಂತೆ ಅರ್ಜುನನು ಅತಿಶಯವಾಗಿ ಗ್ರಹಿಸಿದನು." [41] ಪಂಪಭಾರತದ ಈ ಕೆಳಗಿನ ಪದ್ಯವನ್ನು ಇವುಗಳೊಡನೆ ಹೋಲಿಸಿ ನೋಡೋಣ.

ಬಳ್ವಳ ನೀಳ್ದ ಕಣ್ಮಲರ ತಳ್ತಿಮೆಯಿಂ ಕರೆಗಣ್ಮಿ ಬೆಳ್ಗಡ
ಲ್ಗಳ್ವರಿಯಲ್ಕಮಾಟಿಸಿದೊಡೊಯ್ಯನೆ ಮಂಗಳಭಂಗಭೀತಿಯಿಂ ।
ತಳ್ವದೆ ಮೂಡೆ ಬಾಷ್ಪ ಜಳಮಂ ಕಳಿದು+ ಅಬ್ಜಿಕಱಸೀಯೆ ಸಂಬಳಂ
ಗೊಳ್ವವೊಲಾ ತಳೋದರಿಯ ಚಿತ್ತಮನಿಟ್ಟುಕೊಳಿಗೊಂಡನರ್ಜುನಂ ॥ [42]

ಮೇಲೆ ಉದಾಹರಿಸಿರುವ ಭಾರವಿಯ ಎರಡು ಪದ್ಯಗಳ ಭಾವವನ್ನೂ ಪಂಪ ಒಂದು ವೃತ್ತದಲ್ಲಿ ಅಡಕಮಾಡಿದ್ದಾನೆ. ಹೀಗೆ ಸಣ್ಣ ಅಚ್ಚಿನಲ್ಲಿ ಎರಕ ಹೊಯ್ಯುವಾಗ ಮೂಲದ ಸೊಗಸು ಪೂರ್ಣವಾಗಿ ಇಳಿದು ಬಂದಿಲ್ಲವೆಂಬುದು ನಮ್ಮ ಅವಗಾಹನೆಗೆ ಬರುತ್ತದೆ. ಬಾಷ್ಪದಿಂದ ಆವೃತವಾದ ಕಣ್ಣು 'ಬಿಂದು ಸಹಿತವಾದ ನೀಲೋತ್ಪಲ'ದಂತೆ ಇದ್ದಿತೆನ್ನುವ ಉಪಮಾನ ಕಾವ್ಯರಸಾಸ್ವಾದಕರಿಗೆ ಮೆಚ್ಚುಗೆಯಾದುದು ಅದನ್ನು ಪಂಪ ಬಿಟ್ಟು ಬಿಟ್ಟಿದ್ದಾನೆ. 'ಬಳ್ವಳ ನೀಳ್ದ ಕಣ್ಮಲರ

---

40. ತುಷಾರಲೇಖಾಕುಲಿತೋತ್ಪಲಾಭೇ ಪರ್ಯಶ್ರುಣೀ ಮಂಗಲಭಂಗಭೀರುಃ ।
ಅಗೂಢಭಾವಾಪಿ ವಿಲೋಕನೇ ಸಾ ನ ಲೋಚನೇ ಮೀಲಯಿತುಂ
ವಿಷೇಹೇ ॥
ಕಿರಾ. III-36.

41. ಅಕೃತ್ರಿಮಪ್ರೇಮರಸಾಭಿರಾಮಂ ರಾಮಾರ್ಪಿತಂ ದೃಷ್ಟಿ ವಿಲೋಭಿ ದೃಷ್ಟಂ ।
ಮನಃಪ್ರಸಾದಾಂಜಲಿನಾ ನಿಕಾಮಂ ಜಗ್ರಾಹ ಪಾಥೇಯಮಿವೇಂದ್ರ
ಸೂನುಃ ॥
ಕಿರಾ. III-37.

42, ಪಂ. ಭಾ. VII-68

ತಳ್ತಿಮೆಯಿಂ ಕರಿಗಣ್ಮೆ ಬೆಳ್‌ಕಡಲ್ಗಳ್‌ ಪರಿಯಲ್ಕಂ ಆಟಿಸಿದೊಡೆ' ಎಂದು ವಿಶಾಲ ಲೋಚನಗಳಲ್ಲಿ ಕಣ್ಣೀರು ತುಂಬಿ ಬಿಳಿಯ ಕಡಲೇ ಹರಿಯುವಂತಿದ್ದಿತೆಂದು ವರ್ಣಿಸಿರುವುದು ಭಾರವಿಯ ಪದ್ಯದಲ್ಲಿ ಬಂದಿಲ್ಲ. ಅರ್ಜುನನು ಆಗಲಿ ಹೋಗುವನಲ್ಲ ಎಂದು ದ್ರೌಪದಿಗೆ ದುಃಖವಾಗಿ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ಪ್ರಿಯನು ಮಹಾಕಾರ್ಯ ಸಾಧನೆಯೊಂದಕ್ಕೆ ಹೊರಟು ನಿಂತಿರುವ ಪ್ರಯಾಣ ಸಮಯದಲ್ಲಿ ಕಣ್ಣಿನಿಂದ ನೀರು ತೊಟ್ಟಿಕ್ಕಿದರೆ ಮಂಗಲ ಕಾರ್ಯಕ್ಕೆ ಭಂಗವನ್ನು ತಂದಂತಾಗುತ್ತದೆ ಎಂದು ಕಣ್ಣುಗಳನ್ನು ದ್ರೌಪದಿ ಮುಚ್ಚಲಿಲ್ಲವಂತೆ. ಕಣ್ಣು ತುಂಬ ನೀರು ತುಂಬಿದೆ, ರೆಪ್ಪೆಯನ್ನು ಅಲುಗಾಡಿಸಿದರೆ ನೀರು ಕೆಳಗೆ ಬೀಳುವುದು. ಆದರೆ ದ್ರೌಪದಿ ಹಾಗೆ ಮಾಡಲಾರಳು. ದ್ರೌಪದಿಯ ಕಣ್ಣುಗಳನ್ನು ನೋಡಿದರೆ ತನ್ನ ಮನಸ್ಸಿನಲ್ಲಿರುವ ಏನನ್ನೋ ಅರ್ಜುನನಿಗೆ ದ್ರೌಪದಿ ಹೇಳಲಿಷ್ಟಪಡುವಳು ಎಂಬಂತೆ ಕಾಣಿಸುತ್ತದೆ ಎಂಬ ಭಾರವಿಯ ವರ್ಣನೆ ಇದಕ್ಕಿಂತ ಸ್ವಾರಸ್ಯವಾಗಿದೆ. 'ಅಗೂಢ ಭಾವಾಪಿ' ಎಂಬ ಒಂದು ಪದದಲ್ಲಿ ಭಾರವಿ ಎಷ್ಟೊಂದು ಅರ್ಥವನ್ನು ತುಂಬಿದ್ದಾನೆ! ಪಂಪ ಈ ಭಾವವನ್ನು ಬಿಟ್ಟಿರುವುದಕ್ಕೆ ಒಂದು ಕಾರಣವಿದೆ ಈ ವರ್ಣನೆಯ ತರುವಾಯ ದ್ರೌಪದಿ ತನ್ನ ಪ್ರಿಯನನ್ನು ಕುರಿತು ಆಡಿದ ಮಾತುಗಳು 'ಕಿರಾತಾರ್ಜುನೀಯ'ದಲ್ಲಿ ಉಕ್ತವಾಗಿವೆ. ಏನನ್ನೋ ಹೇಳಲಿಚ್ಛಿಸುವಂತೆ ಅವಳ ನಯನಗಳು ಕಂಡುದಕ್ಕೂ ಮುಂದೆ ಅವಳು ಮಾತನಾಡಿದುದಕ್ಕೂ ಭಾರವಿ ಹೊಂದಿಸಿದ್ದಾನೆ ಆದರೆ ಇದು ಅಷ್ಟು ಹಿತವಾಗಿ ಕಾಣುವುದಿಲ್ಲ. ಅವಳ ನೋಟದಲ್ಲಿ ಏನೋ ಸಂದೇಶವನ್ನು ಹೇಳಲಿಚ್ಛಿಸಿರುವುದು ಕಾಣುತ್ತದೆ; ಆದರೆ ಅದು ಹಾಗೆಯೇ ಉಳಿಯಿತು; ಅರ್ಜುನ ಪ್ರಯಾಣಿಸಿದ ಎನ್ನುವುದರಲ್ಲಿ ಓದುಗರ ಕಲ್ಪನೆಗೆ ತಣಿವುಂಟಾಗುವಷ್ಟು ಬೇರೆ ರೀತಿಯಲ್ಲಿ ಆಗಲಾರದು. ಅನುಕ್ತ ಸಂದೇಶವನ್ನು ನೋಟದಿಂದಲೇ ಸೂಚಿಸಿದ್ದರೆ ಉತ್ತಮವಾಗುತ್ತಿತ್ತು. ಈ ರಹಸ್ಯವನ್ನು ಮನಸ್ಸಿನಲ್ಲಿಟ್ಟುಕೊಂಡೋ ಏನೋ ಪಂಪ ಮೊದಲು ದ್ರೌಪದಿ ಅರ್ಜುನನನ್ನು ಕುರಿತು ಹೇಳತಕ್ಕ ಮಾತುಗಳನ್ನು ಅವಳ ಬಾಯಿಂದ ಆಡಿಸಿ ಅನಂತರ ಈ ವರ್ಣನೆಯನ್ನು ಕೊಡುತ್ತಾನೆ. 'ಅರ್ಜುನನು ದಾರಿಗೆಂದು ಕಟ್ಟಿದ ಬುತ್ತಿಯಂತೆ ಆ ತಳೋದರಿಯ ಚಿತ್ತವನ್ನು ಆಕರ್ಷಿಸಿದನು' ಎಂಬ ವರ್ಣನೆಯೂ ಕೂಡ ದ್ರೌಪದಿಯ ಮಾತಿನ ಅನಂತರ ಬಂದರೇನೇ ಚೆನ್ನು. 'ದ್ರೌಪದಿಯ ನೋಟವನ್ನು ಶುದ್ಧವಾದ ಮನಸ್ಸೆಂಬ ಬೊಗಸೆಯಿಂದ ದಾರಿಗೆ ಕಟ್ಟಿದ ಬುತ್ತಿಯಂತೆ ಅತಿಶಯವಾಗಿ ಗ್ರಹಿಸಿದನು' ಎಂಬ ಭಾರವಿಯ ವರ್ಣನೆ ಪಂಪನದಕ್ಕಿಂತ ಹೆಚ್ಚು ಉಚಿತವೆಂದು ತೋರುತ್ತದೆ. ನೋಟದ ಸ್ಥಳದಲ್ಲಿ ಮನಸ್ಸನ್ನು ಕಲ್ಪಿಸಿಕೊಂಡಿರುವುದು ಅಷ್ಟು ವಿಹಿತವಾಗಿ ಕಾಣಲಾರದು. ದ್ರೌಪದಿ ಅರ್ಜುನನಿಗೆ ಕೊಡುವ ಸಂದೇಶದಲ್ಲಿ ಅವನು ಹೋಗುವ ಕಾರ್ಯ ಸಾಧನೆಯಾಗಲಿ ಎಂಬರ್ಥವಿದೆ. "ಮೈಯ್ಸುಖವನ್ನು ಬಗೆಯದೆ ಶತ್ರುಗಳ ಕಡು ಪೆರ್ಚನ್ನು ಬಗೆ. ನನ್ನ ಪ್ರತಿಜ್ಞೆಯನ್ನೂ ಎದೆಯಲ್ಲಿ ಸ್ಮರಿಸಿಕೋ. ಮುನಿ ಉಪದೇಶಿಸಿರುವ ಮಂತ್ರವು ನಿನ್ನ ಮನಸ್ಸಿನಲ್ಲಿ ನೆಲಸಿರಲಿ,

ನಿನ್ನ ಕಾರ್ಯ ನೆರವೇರಲಿ"[43] ಎನ್ನುತ್ತಾಳೆ ದ್ರೌಪದಿ. ಬಳಿಕ ಗುಹ್ಯಕನ ಹೆಗಲನ್ನೇರಿ ಅರ್ಜುನ ಇಂದ್ರಕೀಲಾಭಿಮುಖನಾಗುತ್ತಾನೆ. ಆಗ ತಾನೆ ಶರತ್ಕಾಲ ಪ್ರಾಪ್ತವಾಗಿದ್ದಿತು ಆ ಸೌಂದರ್ಯವನ್ನೂ, ಹಿಮಾಲಯದ ದೃಶ್ಯದ ಸೊಬಗನ್ನೂ ಮೆಚ್ಚುತ್ತ ಇಂದ್ರಕೀಲದಲ್ಲಿ ಒಂದು ಕಡೆ ನಿಂತು ಅರ್ಜುನನು ತಪಸ್ಸಿಗೆ ಆರಂಭಿಸುತ್ತಾನೆ ಈ ಸಂದರ್ಭದಲ್ಲಿ ಪಂಪ ಒಂಬತ್ತು ಪದ್ಯಗಳನ್ನು ವರ್ಣನೆಗೇ ಮೀಸಲಾಗಿಟ್ಟಿದ್ದಾನೆ[44] ಭಾರವಿಯಾದರೋ ವರ್ಣನೆಗಳಿಗೆ ಎರಡು ಸರ್ಗಗಳಷ್ಟು ಅವಕಾಶವನ್ನು ಪಡೆದಿದ್ದಾನೆ. ಈ ಇಬ್ಬರು ಕವಿಗಳ ವರ್ಣನಾಶಕ್ತಿಯನ್ನು ಕುರಿತು ಮುಂದೆ ಪರಿಶೀಲಿಸಲಾಗುತ್ತದೆ.

ಅರ್ಜುನನು 'ತನ್ನ ವಿಜಯಶ್ರೀಯ ಬರವಿಂಗಿದಿರ್ವಂದಂತೆ ಬಂದ ಶರತ್ಕಾಲ ಶ್ರೀಯನುತ್ಕಂಠಿತ ಹೃದಯನಾಗಿ ಮೆಚ್ಚಿ ನೋಡು'[45]ತ್ತ ಬರುತ್ತಿರುವಲ್ಲಿ ಮುಂದೆ 'ಶಾರದ ನೀರವಂಗಳೆಲ್ಲಮೊಂದೆಡೆಗೆ ತೆರಳ್ದೊಟ್ಟಿ ಬೆಟ್ಟಾದಂತಿರ್ದ ನೀಹಾರಗಿರಿ'[46] ಯನ್ನು ಕಾಣುತ್ತಾನೆ. ಅದೇ ಹಿಮಾಚಲ. 'ಹಿಮಾಚಲ ಶಿಖರದ ಮೇಲೆ ಪಾಯ್ವ ಗಂಗಾ ಸ್ರೋತ'ವು ಮನೋಹರವಾದ ಧ್ವಜದ ಬಿಳಿಯ ಬಟ್ಟೆಯ ವಿಲಾಸವನ್ನು ತೋರಿಸುವಂತಿರಲು ಕಣ್ಗೊಳಿಸಿತ್ತು.[47] ಈ ಉಪಮಾನವನ್ನು 'ಕಿರಾತಾರ್ಜುನೀಯ'ದ "ಧೃತ ಸಿತವ್ಯಜನಾಮಿವ ಜಾಹ್ನವೀಂ'[48] ಎಂಬುದರೊಡನೆ ಹೋಲಿಸಿ ನೋಡಬಹುದು. ಪಂಪ ಭಾರತದಲ್ಲಿ ಹಿಮಾಲಯದ ಮೇಲಿನಿಂದ ಹರಿಯುತ್ತಿರುವ ಗಂಗೆಯನ್ನು ಧ್ವಜಾಂಶುಕಕ್ಕೆ ಹೋಲಿಸಿದ್ದರೆ ಭಾರವಿ ಸಿತವ್ಯಜನಕ್ಕೆ (ಬಿಳಿಯ ಬೀಸಣಿಗೆಗೆ) ಹೋಲಿಸಿದ್ದಾನೆ. ಪಂಪನ ಹೋಲಿಕೆ ಭಾರವಿಯದಕ್ಕಿಂತ ಉತ್ತಮವಾಗಿದೆಯೆನ್ನಬಹುದು. ಮುಂದೆ ತೋರುತ್ತಿರುವ ಕೈಲಾಸ ಪರ್ವತವನ್ನು ಪಂಪನು ಎರಡು ವೃತ್ತಗಳಲ್ಲಿ[49] ವರ್ಣಿಸಿದ ಅನಂತರ ಅರ್ಜುನನು ಇಂದ್ರಕೀಲದಲ್ಲಿ ತಪಸ್ಸಿಗೆ ನಿಲ್ಲುತ್ತಾನೆಂದು ಹೇಳಿದೆ. ಅರ್ಜುನನು ತಪಸ್ಸಿಗೆ ನಿಲ್ಲುವ ಸ್ಥಳದ ಪ್ರಕೃತಿಯೂ ಕೂಡ ಅನುಕೂಲವಾಗಿಯೇ ತೋರುತ್ತದೆ. 'ಕಮಲಗಳ ಸೌರಭವನ್ನು ಹೊತ್ತು ತಂದ ಗಾಳಿ ನಯದಿಂದ ಬಂದು ಅಪ್ಪಿಕೊಳ್ಳುವಂತೆ ತೀಡುತ್ತಿರಲು, ಭೃಂಗಗಳ ಝೇಂಕಾರವು

---

43. ಪಂ. ಭಾ. VII-67. ಕಿರಾತಾರ್ಜುನೀಯದಲ್ಲಿ III 41-47 ಪದ್ಯಗಳಲ್ಲಿ ಬರುವ ಭಾವಗಳನ್ನು 'ಬಗೆಪಗೆವರ ಕಡುಪೆರ್ಚನ್' ಎಂಬಷ್ಟರಲ್ಲಿ ಪಂಪ ಮುಗಿಸಿದ್ದಾನೆ. ಉಳಿದ ಕಂದದ ವಿಷಯವನ್ನು ಕಿರಾ. III-54ರಲ್ಲಿ ಕಾಣಬಹುದು.

44. ಪಂ. ಭಾ. VII-69-77

45 ಪಂ. ಭಾ. VII-71ವ

46. ಪಂ. ಭಾ. VII-71ವ

47. ಪಂ. ಭಾ. VII-73

48. ಕಿರಾ. V-15

49 ಪಂ. ಭಾ. VII-74, 75

ಮಂಗಳಗಾನದಂತಿರಲು, ಕುಡಿಯಿಟ್ಟು ಹೂವುಬಿಟ್ಟ ಬಳ್ಳಿಗಳು ಅಲಂಕರಿಸಿಕೊಂಡು ಹೂವನ್ನು ನೀಡುತ್ತಿರಲು, ಬೆಟ್ಟವು ಹರಿಗನಿಗೆ ಇಷ್ಟಾರ್ಥ ಸಿದ್ಧಿಯನ್ನು ಅರ್ಘ್ಯ ಕೊಡುವಂತೆ ಆಯಿತು.'[50] ಇದೇ ಸಂದರ್ಭದಲ್ಲಿ 'ಕಿರಾತಾರ್ಜುನೀಯ'ದಲ್ಲಿ ಬಂದಿರುವ ವರ್ಣನೆಯ ಸೊಗಸನ್ನು ಆಸ್ವಾದಿಸೋಣ. 'ಶ್ರೇಷ್ಠರಾದ ಸ್ತುತಿಪಾಠಕರಂತೆ ಮಾಡಲ್ಪಟ್ಟ ದುಂಬಿಗಳನಾದವೇ ಜಯಘೋಷವಾಗಿ ವಾಯುವಿನಿಂದ ಪ್ರೇರಿತವಾಗಿಅಳ್ಳಾಡುವ (ಚಾಮರವನ್ನು ಹೋಲುವ) ತುದಿಗೊಂಬೆಗಳನ್ನುಳ್ಳ ವೃಕ್ಷಗಳು ಇಂದ್ರಸುತನ ಮೇಲೆ ಹೂವುಗಳನ್ನು ತಳಿದುವು.[51] ಮುಕ್ತವಾದ ಕಮಲದ ಪರಾಗಗಳಿಂದಲೂ ಗಂಗಾನದಿಯ ನೀರಿನ ಸಣ್ಣ ತುಂತುರುಗಳಿಂದಲೂ ಕೂಡಿದ ಸುಖಸ್ಪರ್ಶವುಳ್ಳ ಮಾರುತಗಳು ಸ್ನೇಹಿತರು ಸ್ನೇಹಿತರನ್ನು ಹೇಗೋ ಹಾಗೆ ಅರ್ಜುನನನ್ನು ಎದುರುಗೊಂಡು ಅಪ್ಪಿಕೊಂಡವು.'[52] ಈ ಎರಡು ಪದ್ಯಗಳಲ್ಲಿ ಮೊದಲನೆಯ ಪದ್ಯದ ಬಹುಭಾಗವು ಪಂಪನ ವೃತ್ತದಲ್ಲಿ ಮೂಡಿ ಬಂದಿದೆ. ವಾಯುವಿನಿಂದ ಅಳ್ಳಾಡುತ್ತಿರುವ ಮರದ ಕೊಂಬೆಗಳು ಅರ್ಜುನನಿಗೆ ಚಾಮರವನ್ನು ಬೀಸುವಂತೆ ಕಾಣುತ್ತಿದ್ದುವು ಎಂಬ ಭಾವ ಪಂಪನ ವೃತ್ತದಲ್ಲಿ ಬಂದಿಲ್ಲ ಈ ರೀತಿ ಸ್ವಾಗತವನ್ನು ಕೋರುತ್ತ ಇಂದ್ರಕೀಲವು ಹರಿಗನಿಗೆ ಇಷ್ಟಾರ್ಥ ಸಂಸಿದ್ಧಿಯನ್ನು ಅರ್ಘ್ಯ ಕೊಡುವಂತೆ ಕಂಡಿತು ಎಂಬ ಹೊಸ ಭಾವವೊಂದನ್ನು ಪಂಪನು ಜೋಡಿಸಿಕೊಂಡಿದ್ದಾನೆ. ಮೇಲೆ ಉದಾಹೃತವಾಗಿರುವ ಭಾರವಿಯ ಎರಡನೆಯ ಪದ್ಯದ ಭಾವವು ಬಹು ಸುಂದರವಾಗಿರುತ್ತದೆ. ಕಮಲದ ಪರಾಗಗಳ ಸೌರಭದಿಂದಲೂ ಗಂಗೆಯ ನೀರಿನ ತುಂತುರುಗಳ ಶೈತ್ಯದಿಂದಲೂ ಮಾರುತದ ಸ್ಪರ್ಶವು ಹಿತವಾಗಿದ್ದಿತು, ಸುಖಸ್ಪರ್ಶದಿಂದ ಕೂಡಿದ ಆಲಿಂಗನವು ಸ್ನೇಹಿತನು ಸ್ನೇಹಿತನನ್ನು ಎದುರುಗೊಂಡು ಅಪ್ಪಿಕೊಳ್ಳುವಂತೆ ಇದ್ದಿತು ಎಂದು ಹೇಳುವಲ್ಲಿ ಅರ್ಜುನನನ್ನು ಪ್ರಕೃತಿ ಎದುರುಗೊಂಡು ಕರೆದುಕೊಂಡಿತೆಂದು ಅರ್ಥವಾಗುತ್ತದೆ. ಅರ್ಜುನನು ತನ್ನ ಪ್ರಯತ್ನದಲ್ಲಿ ಸಫಲನಾಗುತ್ತಾನೆಂಬುದಕ್ಕೆ ಇವೆಲ್ಲಾ ಸೂಚನೆಗಳು. ಅರ್ಜುನನ ತಪಸ್ಸಿಗೆ ಪ್ರಕೃತಿಯೂ ಕೂಡ ಸಹಾಯ ಮಾಡಿತೆಂದು ಭಾರವಿ ಬಹು ಹೃದ್ಯವಾಗಿ ವರ್ಣಿಸಿದ್ದಾನೆ:[53] 'ಗಾಳಿ ಸುಗುಂಧಯುಕ್ತವಾಗಿ ಮೆಲ್ಲಗೆ ಬೀಸುತ್ತದೆ,

---

50. ಪಂ. ಭಾ. VII–77

51. ತನುಸಿಂದ್ಯಬಂದಿನ ಇವೇಂದ್ರಸುತಂ ವಿಹಿತಾಲಿನಿಕ್ವಣಜಯಧ್ವನಯಃ ।
ಪವನೇರಿತಾಕುಲವಿಜಿಹ್ಮಶಿಖಾ ಜಗತೀರುಹೋಽವಚಕರುಃ ಕುಸುಮೈಃ ॥
ಕಿರಾ. VI–2

52. ಅವಧೂತ ಪಂಕಜಪರಾಗ ಕಣಾಸ್ತನುಜಾಹ್ನವೀ ಸಲಿಲ ವೀಚಿಭಿದಃ।
ಪರಿರೇಭಿರೇಽಭಿಮುಖಮೇತ್ಯ ಸುಖಾಃ ಸುಹೃದಃ ಸಖಾಯಮಿವ ತಂ
ಮರುತಃ ॥
ಕಿರಾ. VI–3

53. ಕಿರಾ. VI 25–27

ಸೂರ್ಯನ ತಾಪ ಗುಣವೂ ಸುಖಕರವಾಗಿ ಪರಿಣಮಿಸುತ್ತದೆ. ಅರ್ಜುನನು ಹೂವು ಕುಯ್ಯಲು ಬಂದರೆ ವೃಕ್ಷಗಳು ತಾವಾಗಿ ತಮ್ಮ ಕೊಂಬೆಗಳನ್ನು ಬಗ್ಗಿಸಿ ಹೂವನ್ನು ನೀಡುತ್ತವೆ. ಈ ರೀತಿಯಲ್ಲಿ ಪ್ರಕೃತಿ ತಪಸ್ಸಿನಿಂದ ಕೃಶನಾದ ಅರ್ಜುನನನ್ನು ಸೇವಿಸುತ್ತದೆ. ಪಂಚಭೂತಗಳೂ ಕೂಡ ಅರ್ಜುನನಲ್ಲಿರುವ ಭೂತಹಿತಾದಿಗುಣ ಸಂಪತ್ತನ್ನು ನೋಡಿ ಭಕ್ತಿಯಿಂದ ಸೇವಿಸುತ್ತವೆ.' [54] ಅರ್ಜುನನ ತಪಸ್ಸಿಗೆ ಇದಕ್ಕಿಂತ ಹೆಚ್ಚಿನ ಪ್ರಶಂಸೆ ಬೇಕಿಲ್ಲ. ಭಾರವಿ ಇಲ್ಲಿ ತನ್ನ ವರ್ಣನಾ ಕೌಶಲವನ್ನು ಪೂರ್ಣವಾಗಿ ಪ್ರಕಟಿಸಲು ಪ್ರಯತ್ನಿಸಿ ಸಫಲನಾಗಿದ್ದಾನೆ. ಇಲ್ಲಿ ಅವನ ಕವಿತಾಗುಣಕ್ಕೆ ನಾವು ಮಾರುಹೋಗುತ್ತೇವೆ. ಪಂಪನು ತನ್ನ ಎದುರಿಗಿಟ್ಟುಕೊಂಡಿರುವ ಸಮಸ್ತ ಭಾರತದ ಕಥೆಯಲ್ಲಿ ಎಲ್ಲವನ್ನೂ ಅಳವಡಿಸಬೇಕಾಗಿರುವುದರಿಂದ ಹೆಚ್ಚು ವಿವರಕ್ಕೆ ಹೋಗಲಾರ. ಸಂಗ್ರಹವಾಗಿ ಮಾತ್ರ ವರ್ಣಿಸಬಲ್ಲ. ಆದರೆ ಎಲ್ಲೂ ಸ್ವಾರಸ್ಯಕ್ಕೆ ಭಂಗತಂದಿಲ್ಲ. ವನವನಿತಾವೃಂದವು ಆನಂದದಿಂದಲೂ ಭಕ್ತಿಯಿಂದಲೂ ನಿತ್ಯನಿತ್ಯವೂ ಹೊಸ ದೆಂಬಂತಾಗಲು ಭಸಿತ, ವಲ್ಕಲ, ಯಜ್ಞೋಪವೀತ ಮೊದಲಾದುವುಗಳನ್ನು ತುಡಲೂ, ಉಡಲೂ, ಪೂಸಲೂ ಸಾಕಾಗುವಷ್ಟನ್ನು ಕೊಟ್ಟಿತು[55] ಎಂಬಷ್ಟರಲ್ಲಿ ಅರ್ಜುನನ ತಪಸ್ಸಿಗೆ ಪ್ರಕೃತಿ ನೀಡಿದ ಸೇವೆಯನ್ನು ಹೇಳಿ ಪಂಪ ಮುಗಿಸಿದ್ದಾನೆ.

ಅದಿರದ ಚಿತ್ತದಿಂದಲೂ ಅಳ್ಕದ ಮನದಿಂದಲೂ ಎತ್ತಿಕಟ್ಟಿದ ಜಡೆ, ತೊಟ್ಟ ರತ್ನಕವಚ, ಕಟ್ಟಿಕೊಂಡ ಬಿಲ್ಲು, ದೊಣೆ ಮತ್ತು ಹೊಳೆಯುವ ಕತ್ತಿ ಇವುಗಳಿಂದಲೂ ನೋಡುವ ನೋಟಕರಿಗೆ ಅರ್ಜುನ ಸೌಮ್ಯ ಭಯಂಕರನಾಗಿದ್ದಾನೆ[56] ಇದನ್ನು ಭಾರವಿ 'ಚಿತ್ರಮಿದಂ ಮುನಿತಾ ವಿರೋಧಿ ನ ಚ ನಾಸ್ಯ ರಾಜತೇ' ಎಂದು ಅರ್ಜುನನ ಮುನಿಪ್ರವೃತ್ತಿಯನ್ನೂ ಧರಿಸಿದ್ದ ಕವಚ ಮತ್ತು ಧನುಸ್ಸನ್ನೂ ಕುರಿತು ವರ್ಣಿಸಿದ್ದಾನೆ. ಅರ್ಜುನನ ತಪೋಮಯ ಶಿಖಿಗಳಿಂದ ಆ ಗಿರೀಂದ್ರ ಕಂದರದಲ್ಲಿ ತಪಸ್ಸುಮಾಡುತ್ತಿದ್ದ ತಪೋಧನರ ತಪಸ್ಸೆಲ್ಲವೂ ಬೆಂದು 'ಬೆಂದ ನುಲಿಯಂತೆ ಏತರ್ಕಂ ಮುಟ್ಟಲ್ಲದೆ ಮುಟ್ಟುಗಿಡಲು' ದೇವೇಂದ್ರನು 'ತನಗಾದ ಹೃತ್ಕಂಪದೊಳಮಾಸನ ಕಂಪದೊಳಂ ನರೇಂದ್ರ ತಾಪಸಂ ತನ್ನಿಂದ್ರತ್ವಮಂ ಕೊಳಲೆಂದು ತಪಂಗೆಯ್ದಪನೆಂಬ ಸಂಕೆಯೊಳ್ ತಪೋವಿಘಾತಂ ಮಾಡಿಮೆಂದು ತನ್ನ ನಚ್ಚಿನ ಅಚ್ಚರಸೆಯರುಮನಾಱುಂ ಋತು ಗಳುಮಂ ಗಂಧರ್ವರುಮಂ ಕಾಮದೇವನಂ ದಂಡನಾಯಕಂ ಮಾಡಿ' [57] ಹೇಳಿ ಕಳುಹಿಸುತ್ತಾನೆ. 'ಕಿರಾತಾರ್ಜುನೀಯ'ದಲ್ಲಿಯಾದರೊ ದೇವೇಂದ್ರನು ಧ್ಯಾನ ದಿಂದ ಅರ್ಜುನನ ತಪಸ್ಸಿನ ಸ್ಥಿರತೆಯನ್ನು ಅರಿತರೂ ಅವನ ನಿಯಮಸ್ಥಿರತೆಯನ್ನು

---

54. ಮರುತಃ ಶಿವಾ ನವತೃಣಾ ಜಗತೀ ವಿಮಲಂ ನಭೋ ರಜಸಿ ವೃಷ್ಟಿರಪಾಂ ।
ಗುಣಸಂಪದಾನುಗಣತಾಂ ಗಮಿತಃ ಕುರುತೇಽಸ್ಯ ಭಕ್ತಿಮಿವ ಭೂತಗಣಃ ॥
ಕಿರಾ. VI-33

55. ಪಂ.ಭಾ. VII-78. 56. ಪಂ.ಭಾ. VII-79. 57. ಪಂ.ಭಾ. VII-80ವ

ತಿಳಿದುಕೊಳ್ಳಲು ಸುರಸುಂದರಿಯರನ್ನು ಕಳುಹಿಸುತ್ತಾನೆಂದು ನಿರೂಪಿತವಾಗಿದೆ.[58] 'ಕಿರಾತಾರ್ಜುನೀಯ'ದಲ್ಲಿ ಹೇಳಿರುವುದೇ ಸಮಂಜಸವಾಗಿ ಕಾಣುತ್ತದೆ. ಆಸನ ಕಂಪದ ವಿಷಯ ಜೈನಪುರಾಣಗಳಲ್ಲಿ ಆಗಿಂದಾಗ್ಗೆ ಬರುತ್ತಿರುತ್ತದೆ. ಯಾವನಾದರೊಬ್ಬ ತಪಸ್ವಿ ಉಗ್ರವಾಗಿ ತಪಸ್ಸನ್ನು ಆಚರಿಸಲಾರಂಭಿಸಿದರೆ ದೇವೇಂದ್ರನಿಗೆ ತನ್ನ ಆಸನ ಕಂಪವಾಗುತ್ತದಂತೆ! ಪಂಪನು ಈ ವಿಷಯವನ್ನು ಇಲ್ಲಿ ಸೇರಿಸಿಕೊಂಡಿರುವಂತೆ ತೋರುತ್ತದೆ. ಆದರೆ ಪಂಪನ ಪಕ್ಷವನ್ನು ಸಮರ್ಥಿಸುವಂತೆ ಒಂದು ಸಮಾಧಾನವನ್ನು ಹೇಳಬಹುದಾಗಿ ಕಾಣುತ್ತದೆ. 'ಯಾವನೋ ಒಬ್ಬ ತಪಸ್ವಿ ತನ್ನಿಂದ್ರತ್ವವನ್ನು ಕೊಳ್ಳಲೆಂದು ತಪಸ್ಸು ಮಾಡುತ್ತಿದ್ದಾನೆಂದು ಇಂದ್ರನು ತನಗಾದ ಆಸನಕಂಪ ಹೃತ್ಕಂಪಗಳಿಂದ ಶಂಕಿಸಿ ಆತನ ತಪೋಭಂಗಕ್ಕೆ ಅಪ್ಸರೆಯರನ್ನು ಕಳುಹಿಸುತ್ತಾನೆ. ಅಪ್ಸರೆಯರೂ ಕಾಮದೇವನೂ ಸೋತು ಹಿಂದಿರುಗಿ ಬಂದಾಗ ಅವನಿಗೆ ನಿಜತ್ವ ತಿಳಿಯುತ್ತದೆ. ಆಗ ಇಂದ್ರನು ನರೇಂದ್ರತಾಪಸನ ಧೈರ್ಯಕ್ಕೆ ಮೆಚ್ಚಿ ಧರಾಮರ ವೇಷದಲ್ಲಿ ಇಂದ್ರಕೀಲ ನಗೇಂದ್ರಕ್ಕೆ ಬಂದು[59] ಅರ್ಜುನನನ್ನು ಪರೀಕ್ಷಿಸಿ ಅವನಿಗೆ ಮುಂದಿನ ದಾರಿಯನ್ನು ತೋರಿಸುತ್ತಾನೆ' ಎಂದು ಹೇಳುವುದಕ್ಕೆ ಅವಕಾಶವಿದೆ. ಹಾಗಿಲ್ಲದಿದ್ದರೆ ಇಂದ್ರನು ಬ್ರಾಹ್ಮಣ ವೇಷದಲ್ಲಿ ತಪಸ್ವಿ ಅರ್ಜುನನನ್ನು ನೋಡ ಬಂದಾಗ

> ಕಂಡು ನಿಜ ತನಯನಳವೆರ್ದೆ
> ಗೊಂಡಿರೆ ಮುದುಪಾರ್ವನಾಗಿ ಮೆಲ್ಲನೆ ಸಾರ್ವಾ।
> ಖಂಡಳನಂ ಕಾಣಲೊಡಂ
> ಗಾಂಡಿವಿಗಿರದುರ್ಚಿ ಪಾಯ್ದುವಶ್ರುಜಲಂಗಳ್ ॥ [60]

ಎಂದು ಇಂದ್ರನ ವಿಷಯದಲ್ಲಿ ಬರುವ ವರ್ಣನೆಗೆ ಭಂಗ ಬರುತ್ತದೆ. ಸಂದೇಹಕ್ಕೆ ಅವಕಾಶವುಂಟಾಗದಂತೆ ಪಂಪನ ನಿರೂಪಣೆಯಿದ್ದಿದ್ದರೆ ಯಾವ ಚರ್ಚೆಗೂ ಅವಕಾಶವಿರುತ್ತಿರಲಿಲ್ಲ.

ಮನಸಿಜನ ಬೆಂಬಲವೂ ಆರು ಋತುಗಳ ನೆರವೂ ತಮಗಿರುವಾಗ ಸೋಲದೆ ಇರುವವರಾರು ಎಂದು ದೇವಾಪ್ಸರೋವೃಂದವು ಜಂಬ ಕೊಚ್ಚಿಕೊಂಡು ಭೂಮಿಗೆ ಬರುತ್ತದೆ.[61] ಅವರು ಮಹೀತಳಕ್ಕೆ ಇಳಿದು ಬರುತ್ತಿರಬೇಕಾದರೆ 'ಗಗನತಳಮೆಲ್ಲಂ

---

58. ಪ್ರಣಿಧಾಯ ಚಿತ್ತಮಥ ಭಕ್ತತಯಾ ವಿದಿತೇಽಪ್ಯಪೂರ್ವ ಇವ ತತ್ರ ಹರಿಃ।
ಉಪಲಬ್ಧುಮಸ್ಯ ನಿಯಮಸ್ಥಿರತಾಂ ಸುರಸುಂದರೀರಿತಿ ವಚೋಽಭಿದಧೇ ॥
ಕಿರಾ. VI-39

59. ಪಂ. ಭಾ. VII-94ವ. 60. ಪಂ. ಭಾ. VIII-2.

61. ಪಂ. ಭಾ. VII-81

ತಮ್ಮತ್ತೊಟ್ಟ ದಿವ್ಯಾಭರಣ ಕಿರಣಂಗಳೊಳ್ ತೊಳಗಿ ಬೆಳಗಿತು.[62] ಈ ಮುಂದೆ ಆರು ಋತುಗಳ ಪ್ರಭಾವವೂ ಅಪ್ಸರೆಯರ ಗಾನ ನರ್ತನಾದಿಗಳೂ ಹದಿಮೂರು ಪದ್ಯಗಳಲ್ಲಿ ಮನೋಹರವಾಗಿ ವರ್ಣಿತವಾಗಿವೆ. ಇಲ್ಲಿ ನಿಜವಾಗಿಯೂ ನಾವು ಪಂಪನ ವರ್ಣನಾ ಸಾಮರ್ಥ್ಯವನ್ನು ಕಾಣುತ್ತೇವೆ. ಅಪ್ಸರೆಯರು ಅರ್ಜುನನನ್ನು ನೋಡಿ ಆತನು ತಮ್ಮಲ್ಲಿ ಮೋಹಗೊಳ್ಳುವಂತಾಗುವ ಬದಲು ತಾವೇ ಆತನ ಭದ್ರಾಕೃತಿಯಿಂದ ಮೋಹಿತರಾಗುತ್ತಾರೆ. ಅಪ್ಸರೆಯರು ತನ್ಮಯರಾಗಿ ಪೊಸದೇಸೆಯಿಂದ ಹಾಡುತ್ತಾರೆ, ನರ್ತಿಸುತ್ತಾರೆ. ಅವರ ನರ್ತನ ಎಷ್ಟು ರಸಪೋಷಕವಾಗಿದೆಯೆಂಬುದನ್ನು ಪಂಪನ ಮಾತಿನಲ್ಲಿಯೇ ನೋಡೋಣ :

ಆಡದ ಮೆಯ್ಗಳಿಲ್ಲ ನಿಡುಮೆಯ್ಗಳುಮಾಡಿದುವಂತೆ ಮೆಟ್ಟುವಳ್ ।
ನೋಡಿದರೆಲ್ಲರಂ ಪಿಡಿದು ಮೆಟ್ಟಿದಳ್ + ಇಟ್ಟಳಮಾಯ್ತು ದೇಸಿ ಕೆ ॥
ಯ್ದೂಡಿದುದಿಲ್ಲಮಾರ್ಗಮೆನೆ ವಿಸ್ಮಯಮಾಗಿರೆ ತನ್ನ ಮುಂದೆ ಬಂ ।
ದಾಡಿದಳಾ ತಿಳೋತ್ತಮೆಯುನೊಲ್ದನುಮಿಲ್ಲ ನರೇಂದ್ರತಾಪಸಂ ॥ [63]

ಇದೇ ಸಂದರ್ಭದಲ್ಲಿ 'ಕಿರಾತಾರ್ಜುನೀಯ'ದಲ್ಲಿ ಬಂದಿರುವ ವರ್ಣನೆಯನ್ನು ಪರಿಶೀಲಿಸೋಣ: 'ನರ್ತಕಿಯರ ವಿಲಾಸಪರಿಪೂರ್ಣವಾದಂಥ ಕಣ್ಣುಗಳು ಅಭಿನಯಿಸಬೇಕಾಗಿದ್ದ ನರ್ತನಾಂಶವನ್ನಾಗಲೀ, ಚಂಚಲಾಂಗುಲಿಗಳನ್ನಾಗಲೀ ಪಾಣಿಪಲ್ಲವವನ್ನಾಗಲಿ ಅನುಸರಿಸಲಿಲ್ಲ. ಆದರೆ ಆ ಕಣ್ಣುಗಳು ಮೊಟ್ಟಮೊದಲಿಗೆ ಅರ್ಜುನನಲ್ಲಿ ನಾಟಿದ್ದರಿಂದ ಅವನನ್ನು ಬಿಟ್ಟು ಅಲ್ಲಾಡಲಿಲ್ಲ.'[64] ನರ್ತಕಿಯರು ಪ್ರಥಮ ಪ್ರವೇಶದಲ್ಲಿಯೇ ಅರ್ಜುನನಿಗೆ ಸೋತು ಹೋಗಿದ್ದರು. ಅವರ ದೃಷ್ಟಿ ಸಂಪೂರ್ಣವಾಗಿ ಅವನಲ್ಲಿಯೇ ನಾಟಿಹೋಗಿತ್ತು. ಹೀಗಿರುವಾಗ ಅವರು ರಸಭಾವವ್ಯಂಜಕವಾಗುವಂತೆ ನರ್ತಿಸಲಸಮರ್ಥರಾದರು. ನಾಟ್ಯಶಾಸ್ತ್ರದ ಪ್ರಕಾರ ದೃಷ್ಟಿ ಅಭಿನೇಯವನ್ನೂ ಹಸ್ತವನ್ನೂ ಅನುಸರಿಸಬೇಕು. ಇಲ್ಲಿ ನರ್ತಕಿಯರು ನರ್ತಿಸುತ್ತಿದ್ದುದು ನಿಜ, ಆದರೆ ಅವರ ದೃಷ್ಟಿ ಮಾತ್ರ ನರ್ತನದ ರಸಕ್ಕೆ ಪೋಷಕವಾಗುವಂತೆ ಇರದೆ ಒಂದೇ ಕಡೆ ಅನುಲಗ್ನವಾಗಿದ್ದಿತು. 'ರಾಗಾರ್ತೈಃ ನ ಕಿಂಚಿತ್ ಕರಣೀಯಂ ಅನುಸಂಧೇಯಂ ಇತಿ ಭಾವಃ' ಎಂದು ಮಲ್ಲಿನಾಥನು ತನ್ನ ವ್ಯಾಖ್ಯಾನದಲ್ಲಿ ಮೇಲಿನ ಪದ್ಯದ ಸ್ವಾರಸ್ಯವನ್ನು ಸಂಗ್ರಹಿಸಿ ಹೇಳಿದ್ದಾನೆ. 'ರಾಗಾರ್ತರಾದವರಿಗೆ ಏನು ಮಾಡಲೂ ತೋಚುವುದಿಲ್ಲ, ಸಮಂಜಸವಾಗಿ ನಡೆದುಕೊಳ್ಳಲೂ ಬರುವುದಿಲ್ಲ' ಎಂದು

---

62. ಪಂ. ಭಾ. VII-81 ವ. ಇದನ್ನು ಕಿರಾ. VII-16ರೊಡನೆ ಹೋಲಿಸಿ.
63. ಪಂ. ಭಾ, VII-91
64. ಪ್ರಕೃತಮನುಸಸಾರ ನಾಭಿನೇಯಂ ಪ್ರವಿಕಸದಂಗುಲಿ ಪಾಣಿಪಲ್ಲವಂ ವಾ ।
ಪ್ರಥಮಮುಪಹಿತಂ ವಿಲಾಸಿಚಕ್ಷುಃ ಸಿತತುರುಗೇ ನಚಚಾಲ ನರ್ತಕೀನಾಮ್ ॥
ಕಿರಾ. X-41

ಇದರ ಅರ್ಥ. ಆದರೆ ಪಂಪ ತದ್ವಿರುದ್ಧವಾದ ಅರ್ಥವನ್ನು ತಂದಿದ್ದಾನೆ. ಅಪ್ಸರೆಯರು ಅರ್ಜುನನನ್ನು ಸೋಲಿಸಲು ಬಂದವರು ತಾವೇ ಆತನಿಗೆ ಮಾರುಹೋಗಿದ್ದಾರೆ. ಅವರು ತಮ್ಮ ಮನೋಭೀಷ್ಟವನ್ನು ನೆರವೇರಿಸಿಕೊಳ್ಳುವುದರಲ್ಲಿ ನಿರತರಾಗಿದ್ದಾರೆಯೇ ಹೊರತು ತಮ್ಮ ಕರ್ತವ್ಯವನ್ನು ಅವರು ಮನಃಪೂರ್ವಕವಾಗಿ ನೆರವೇರಿಸುವುದನ್ನು ಮರೆತಿದ್ದಾರೆ. ತಮ್ಮ ಇಷ್ಟಾರ್ಥವು ಕೈಗೂಡಬೇಕಾದರೆ ಅರ್ಜುನನನ್ನು ತಾವು ಆಕರ್ಷಿಸಬೇಕು. ಅವರಿಗೆ ಈ ಕೆಲಸದಲ್ಲಿ ಸಹಾಯ ಮಾಡುವುದು ಗಾನ, ನರ್ತನ, ಮಾತು ಅಪ್ಸರೆಯರು ಮೊದಲು ಅಮೋಘವಾಗಿ ಹಾಡಿದ್ದಾರೆ, ಈಗ ನರ್ತಿಸುತ್ತಿದ್ದಾರೆ. ಇವರಡೂ ರಸಭಾವವ್ಯಂಜಕವಾಗಿದ್ದರೇನೇ ಅರ್ಜುನನು ಆಕರ್ಷಿತನಾಗಬಹುದು. ಅದಕ್ಕನುಸಾರವಾಗಿ ನರ್ತನದಲ್ಲೇ ತಮ್ಮ ಮನಸ್ಸನ್ನೆಲ್ಲ ಇಟ್ಟು ಅಭಿನಯಿಸಿದ್ದಾರೆ. ' ಆಡದ ಮೆಯ್ಗಳಿಲ್ಲ, ನಿಡು ಮೆಯ್ಗಳುಂ ಆಡಿದುವು ' ಎಂಬಲ್ಲಿ ಆ ನರ್ತನ ಎಷ್ಟು ಕಲಾ ಪರಿಪೂರ್ಣವಾಗಿದ್ದಿತೆಂಬುದನ್ನು ಓದುಗರು ಅರಿತುಕೊಳ್ಳಬಹುದು.

ಹೀಗೆ ಅಪ್ಸರೆಯರು ' ಎಡೆಯಾಡಿಯೂ, ಮನಂಗೊಳ್ಳುವಂತೆ ಪಾಡಿಯೂ ಮನುಜಮಾಂಧಾತನನ್ನು ಸೋಲಿಸಲಾರದೆ ' ಅವನ ಗಂಡಗಾಡಿಗೆ ಸೋತು ಹತ್ತಿರ ಬಂದು ಮೃದುಮಧುರಾಲಾಪಗಳಿಂವ ಅರ್ಜುನನನ್ನು ಆಕರ್ಷಿಸಲು ಪ್ರಯತ್ನಿಸುತ್ತಾರೆ. ಇಲ್ಲಿ ಭಾರವಿಯ ' ಕಿರಾತಾರ್ಜುನೀಯ'ದಿಂದ ಎರಡು ಪದ್ಯಗಳನ್ನು ನಿದರ್ಶನವಾಗಿ ತೆಗೆದುಕೊಳ್ಳೋಣ ನಾಯಿಕೆಯಿಂದ ಕಳುಹಿಸಲ್ಪಟ್ಟ ದೂತಿಯೊಬ್ಬಳು ಅರ್ಜುನನನ್ನು ಕುರಿತು ಹೀಗೆ ಹೇಳುತ್ತಾಳೆ: ' ಕಠಿನತೆಯನ್ನು ತ್ಯಜಿಸು, (ನನ್ನ) ಮಾತನ್ನು ಗ್ರಹಿಸು, ಮುನಿಗಳ ಮನಸ್ಸು ಕರುಣಾಮೃದುವಾದುದಲ್ಲವೆ, ನಿರ್ಭಾಗ್ಯರು ಮಾತ್ರ ಹತ್ತಿರ ಬಂದುದನ್ನು ತಿರಸ್ಕರಿಸುವರು.'[65] ಇನ್ನೊಬ್ಬಳು ' ಶಮವು ಮನಸ್ಸಿನಲ್ಲಿದ್ದರೆ ಈ ಚಾಪವೇಕೆ? ಶಠನೇ! ನಿನಗೆ ವಿಷಯವು ಪ್ರಿಯವೇ ಹೊರತು ಮುಕ್ತಿಯಲ್ಲ. ನಿನ್ನ ಹೃದಯವನ್ನು ಆಕ್ರಮಿಸಿಕೊಂಡಿರುವ ಯಾವಳೋ ಒಬ್ಬಳು ಹೃದಯೇಶ್ವರಿ ಅಲ್ಲಿ ಅನ್ಯಕಾಮಿನಿಯರಿಗೆ ಅವಕಾಶವನ್ನು ಕೊಡುವುದಿಲ್ಲ '[66] ಈ ರೀತಿ ಅಸೂಯೆ

---

65. ಜಹಿ ಕಠಿನತಾಂ ಪ್ರಯಚ್ಛ ವಾಚಂ ನನು ಕರುಣಾಮೃದು ಮಾನಸಂ ಮುನೀನಾಮ್ ।
ಉಪಗತಮವಧೀರಯನ್ತ್ಯಭವ್ಯಾಃ ಸ ನಿಪುಣಮೇತ್ಯ ಕಯಾಚಿದೇವ ಮೂಚೇ ।
ಕಿರಾ. X 51

66. ಯದಿ ಮನಸಿ ಶಮಃ ಕಿಮಂಗ ಚಾಪಂ ಶಠ ವಿಷಯಾಸ್ತವ ವಲ್ಲಭಾ ನ ಮುಕ್ತಿಃ ।
ಭವತು ದಿಶತಿ ನಾನ್ಯಕಾಮಿನೀಭ್ಯಸ್ತವ ಹೃದಯೇ ಹೃದಯೇಶ್ವರಾವಕಾಶಮ್
ಕಿರಾ. X.55

ಯಿಂದ ಕಂಪಿಸುತ್ತಿರುವ ಅಧರೋಷ್ಠಗಳಿಂದ ನುಡಿದವಳಾಗಿ ಮಾನಾಪಮಾನಾಭಿ ಮಾನ ಲಜ್ಜೆ ಮೊದಲಾದುವುಗಳನ್ನು ಬಿಟ್ಟವಳಾಗಿ ತನ್ನ ಕಿವಿಯಲ್ಲಿ ಧರಿಸಿದ್ದ ಉತ್ಪಲ ಪುಷ್ಪದಿಂದ ಅರ್ಜುನನನ್ನು ಹೊಡೆದಳು. ಇಲ್ಲಿ ಭಾರವಿ ವಿಪ್ರಲಂಭ ಶೃಂಗಾರದಲ್ಲಿ ಔತ್ಸುಕ್ಯವೆಂಬ ವ್ಯಭಿಚಾರಿ ಭಾವವನ್ನು ತಂದಿದ್ದಾನೆ. ಇದಕ್ಕಾಗಿ ಭಾರವಿಯನ್ನು ಮೆಚ್ಚಬೇಕು. ಯಾವ ಅಪ್ಸರೆಯರು ತಮ್ಮ ಮನಸ್ಸು ಅರ್ಜುನನಲ್ಲಿ ನಟ್ಟಿದ್ದರಿಂದ ಸರಿಯಾಗಿ ನರ್ತಿಸಲಾರದೆ ಹೋದರೋ ಅವರೇ ಹೀಗೆ ಯುಕ್ತಿಯುಕ್ತವಾಗಿ ಮಾತ ನಾಡಬಲ್ಲರೇ ಎಂಬ ಒಂದು ಸಂದೇಹವುಂಟಾಗುವುದು ಸಹಜ. ಆದರೆ ಒಂದೇ ಸಂದರ್ಭದ ಹಲವಾರು ಭಾವಗಳನ್ನು ತರುವಲ್ಲಿ ಇದು ಅನಿವಾರ್ಯ. ಇದೇ ಸಂದರ್ಭದಲ್ಲಿ ಅಪ್ಸರೆಯರ ಮಾತುಗಳು ಪಂಪಭಾರತದಲ್ಲಿ ಬಹು ಸಹಜವಾಗಿಯೂ ಸ್ವಾಭಾವಿಕ ವಾಗಿಯೂ ಬಂದಿರುವುದನ್ನು ಕಾಣಬಹುದು.

> ಕಡುತಪದಿಂದೆ ನಿನ್ನ ಪಡೆಪಾವುದೊ ಗಾವಿಲ, ಸಗ್ಗಮಲ್ತೆ, ಪೋ।
> ನುಡಿಯವೊ ಮೂರ್ಖ, ಸಗ್ಗದ ಫಲಂ ಸುಖಮಲ್ತೆ, ಸುಖಕ್ಕೆ ಪೇೞ್ಕೊಡಂ।
> ಬಡದವರಾರೊ, ಪೆಂಡಿರೊಳಗಾರ್ ಪೆಱರ್, ಆಮೆ ದಲ್, ಆಮೆ ಬಂದು ಕಾ।
> ಲ್ವಿಡಿದಪೆವು,+ಇಂಬುಕೆಯ್ವೊಡೆ+ಇವು ಮೆಲ್ಲಡಿಗಳ್ಗಡ, ಕರ್ಚುಗ ಬೂದಿಯಂ ॥[67]

ಸ್ವಾಭಾವಿಕವಾಗಿ ಎಂಥವರೂ ಆಸೆಪಡುವುದು ಸ್ವರ್ಗಸುಖವನ್ನು. ಸ್ವರ್ಗಸುಖದಲ್ಲೆಲ್ಲಾ ಅತ್ಯಂತ ಹೆಚ್ಚಿನದು ಅಲ್ಲಿಯ ಹೆಸರಾಂತ ಅಪ್ಸರೆಯರ ಒಡನಾಟ. ಅಂಥ ಅಪ್ಸರೆಯರು ತಾವೇ ಬಂದು ಕಾಲುಹಿಡಿದುಕೊಳ್ಳುವಾಗ ಮತ್ತೆ ಇನ್ನೇನು ಬೇಕು? ಇದು ಅರ್ಜುನನ ಅದೃಷ್ಟವೇ ಸರಿ ಎಂದು ಅಪ್ಸರೆಯರು ಹೇಳುವುದು ಸಮಂಜಸವಾಗಿದೆ. ಈ ಅಪ್ಸರೆಯರ ಸಂಭಾಷಣೆ ಸರಳ ಸುಂದರವಾಗಿದೆ.[68] ಹೀಗೆ ಅಪ್ಸರೆಯರು ಅನೇಕ ರೀತಿಯಲ್ಲಿ 'ಲಲ್ಲೆಯ ಚೆಲ್ಲದ ಪುರುಡಿನ ಮುಳಿಸಿನ ನೆವದ ಪಡೆಮಾತು'ಗಳನ್ನು ನುಡಿದೂ ಆ ಅಚಳಿತ ಧೈರ್ಯನ ಮನಸ್ಸನ್ನು ಚಲಿಯಿಸಲಾರದೆ ಹೋಗುತ್ತಾರೆ. ಅಪ್ಸರೆಯರು, ಗಂಧರ್ವರು, ಕಾಮದೇವ ಎಲ್ಲರೂ ಮುಖವನ್ನು ಇಳಿ ಬಿಟ್ಟುಕೊಂಡು ಸ್ವರ್ಗಕ್ಕೆ ಹಿಂದಿರುಗಿ ಹೋಗಿ ದೇವೇಂದ್ರನ ಮುಖವನ್ನು ನೋಡಲು ನಾಚಿ ಕೊಂಡಿರುತ್ತಾರೆ.

ಆಗ ಇಂದ್ರನು ತನ್ನ ಮಗನ ನಿಷ್ಠೆಯನ್ನೂ ಸಂಯಮವನ್ನೂ ಕಂಡು ಸಂತೋಷ ಗೊಂಡು ಮುದುಹಾರುವನಾಗಿ ಅರ್ಜುನನಲ್ಲಿಗೆ ಬರಲು ಗಾಂಡೀವಿ 'ಮನದೊಳಾದ ಮೋಹರಸಮೆ ಕಣ್ಣಿಂ ತುಳುಂಕುವಂತೆ'[69] ಹೊರಹೊಮ್ಮುತ್ತಿರುವ ಕಣ್ಣೀರನ್ನು ಒರಸಿಕೊಂಡು ಇಂದ್ರನಿಗೆ ಅತಿಥಿ ಸತ್ಕಾರವನ್ನು ಎಸಗುತ್ತಾನೆ. ಇಲ್ಲಿ ಭಾರವಿ 'ಪೃಥಾಸೂನು ಇಂದ್ರನನ್ನು ಕಂಡು ಅತ್ಯಂತ ಸ್ನೇಹಪರವಶನಾದನು. ಬಂಧುವು

---

67. ಪಂ.ಭಾ VII-93. 68. ಪಂ.ಭಾ. VII-92 ಮತ್ತು 94ನ್ನೂ ಕೂಡ ಇದರೊಡನೆ ಗಮನಿಸಬೇಕು. 69. ಪಂ. ಭಾ. VIII-2 ವ.

ಅವಿಜ್ಞಾತನಾದರೂ ಮನಸ್ಸು ತಾನಾಗಿಯೇ ಸಂತೋಷವನ್ನು ಪಡೆಯುತ್ತದೆ'[70] ಎಂದು ವರ್ಣಿಸಿದ್ದಾನೆ. 'ಕಂಡು ನಿಜತನಯನಳವೆರ್ದೆಗೊಂಡಿರೆ........'[71] ಎಂದು ಮೊದಲಾಗುವ ಕಂದ ಪದ್ಯದಲ್ಲಿ ಕೇವಲ ಸ್ನೇಹವುಕ್ಕಿತು ಎಂದು ಭಾರವಿ ಹೇಳಿರುವುದನ್ನು ತಂದೂ ತೃಪ್ತಿವಡೆಯದೆ 'ಮನಸ್ಸಿನಲ್ಲಾದ ಮೋಹರಸವೆ ಕಣ್ಣಿಂದ ತುಳುಕುವಂತೆ ಹೊರಹೊಮ್ಮುವ ಕಣ್ಣೀರು' ಎಂದು ಪಂಪ ಮನೋಹರವಾಗಿ ವರ್ಣಿಸಿದ್ದಾನೆ. ಹಿಂದಿನ ಒಂದು ಕಂದ ಪದ್ಯದಲ್ಲಿ ಹೇಳಿರುವುದು ಬೇಕೇ ಇಲ್ಲ, ಈ ಕೆಲವೇ ಮಾತುಗಳು ಸಾಕು, ನಮ್ಮನ್ನು ಸೂರೆಗೊಳ್ಳುವುವೆಂಬುದು ಸತ್ಯ

ಇಂದ್ರನು ಅರ್ಜುನನನ್ನು ಕುರಿತು

ನೀನಾರ್ಗೆ ? ನಿನ್ನ ಪೆಸರೇನ್ ?
ಈ ನಿಯಮಕ್ಕೆಂತು ಮೆಯ್ಯನೊಡ್ಡಿದೆ ? ಇದು ದಲ್
ತಾನಾಶ್ಚರ್ಯಂ+ಇದೇನ
ಜ್ಞಾನಿಯವೋಲ್ ತಪಕೆ ಬಿಲ್ಲುಮಂಬುಂ ದೊರೆಯೇ ॥ [72]

ಎಂದು ಕೇಳುತ್ತಾನೆ. ಇಂದ್ರನ ಸಂಭಾಷಣೆಯು 'ಕಿರಾತಾರ್ಜುನೀಯ'ದಲ್ಲಿ ಇಪ್ಪತ್ತೆರಡು ಪದ್ಯಗಳಲ್ಲಿ ಬರುತ್ತದೆ.[73] ಆದರೆ ಒಂದೇ ಒಂದು ಕಂದದಲ್ಲಿ ಪಂಪ ಆವಶ್ಯಕವಾದಷ್ಟನ್ನು ಮಾತ್ರ ಸೇರಿಸಿ ಪರಿಣಾಮಕಾರಿಯಾಗಿ ಮಾಡಿದ್ದಾನೆ.

ಇಂದ್ರನ ಪ್ರಶ್ನೆಗೆ ಅರ್ಜುನನು ಉತ್ತರಕೊಡುತ್ತ "ನೀನು ಹೇಳಿದುದು ಸರಿ. ನನ್ನ ಈಗಿನ ಸ್ಥಿತಿ ಮೋಕ್ಷಕ್ಕೆ ಹೊಂದುವುದಿಲ್ಲ. ನನ್ನ ಈಗಿನ ಸ್ಥಿತಿಯಲ್ಲಿ ಐಹಿಕದ ಬಂಧನವುಂಟು. ನಿನಗೆ ಇರತಕ್ಕ ವಿಷಯವನ್ನು ತಿಳಿಸದೆ ಸುಳ್ಳುಹೇಳಿ ಕಾಡುವುದು ನನಗೆ ಸಮನೇ ?"[74] ಎಂದು ಹೇಳಿ ತನ್ನ ತಪಸ್ಸಿನ ಉದ್ದೇಶವನ್ನು ಅರುಹುತ್ತಾನೆ.

ನಿನಗಂ ಪೇೞ್ವೊಡೆ ಪಾಂಡುರಾಜ ತನಯಂ ಗಾಂಡೀವಿಯೆಂ, ದಾಯಿಗಂ।
ಗೆ ನೆಲಂ ಜೂದಿನೊಳೊತ್ತೆವೋಗೆ ಬನಮಂ ಪೊಕ್ಕು ಅಣ್ಣನ್+ಎಂದ+ಒಂದು ಮಾ।
ತನಣಂ ಮೀಱದೆ ನಿಂ[ದು, ಶಂಕರ]ನ ನೀನಾರಾಧಿಸು+ಎಂದು+ಇಂತು+ಇದಂ ।
ಮುನಿ ಪಾರಾಶರನೊಲ್ದು ಪೇೞೆ ಹರ ಬರ್ಪನ್ನಂ ತಪಂ ಗೆಯ್ದಪೆಂ ॥ [75]

ಇಲ್ಲಿ ಒಂದು ಸಂಶಯಕ್ಕೆ ಎಡೆಯಿದೆ. ಪರಾಶರಮುನಿ ಈಶ್ವರನನ್ನು ಕುರಿತು ತಪಸ್ಸು ಮಾಡು ಎಂದು ಉಪದೇಶಿಸಿದನೆ? 'ನಿಮ್ಮ ಶತ್ರುಗಳನ್ನು ಗೆಲ್ಲಲು ದಿವ್ಯಾಸ್ತ್ರಗಳನ್ನು ಪಡೆಯುವ ಉಪಾಯವನ್ನೂ ಮಂತ್ರವನ್ನೂ ಉಪದೇಶಿಸಲು

---

70. ಕಿರಾ. XI-8. 71. ಪಂ. ಭಾ. VIII-2.
72. ಪಂ. ಭಾ. VIII-3. ಇದರೊಡನೆ ಕಿರಾ. XI-14 ನ್ನು ಹೋಲಿಸಿ ನೋಡಿ.
73. ಕಿರಾ. XI—10-31. 74. ಪಂ. ಭಾ. VIII—4.
75. ಪಂ. ಭಾ. VIII - 5.

ಬಂದಿದ್ದೇನೆ'[76] ಎಂದು ಅವನು ಹೇಳಿದುದಾಗಿ ಹಿಂದೆ ಬಂದಿದೆ. ಅರ್ಜುನನು ಇಂಥವರನ್ನು ಕುರಿತು ತಪಸ್ಸು ಮಾಡುತ್ತಿದ್ದಾನೆ ಎಂದು ಖಚಿತವಾಗಿ ಈವರೆಗೆ ಬಂದಿಲ್ಲ. 'ಪರಾಶರನಂದನನುಪದೇಶದೊಳ್ ತಪನ ಪ್ರಭಂ ತಪಂಗೆಯ್ಯಲ್ ತಗುಳ್ದೊಡೆ'[77] ಎಂದು ಅರ್ಜುನನು ತಪಸ್ಸನ್ನು ಆರಂಭಮಾಡಿದಾಗ ಹೇಳಿದೆ. ಈ ಅನುಮಾನವನ್ನು ಸಮರ್ಥಿಸುವಂತೆ ಪರಿಷತ್ತಿನ ಪಾಠ 'ಶಂಕರನ' ಎಂದು ಮೇಲಿನ ವೃತ್ತದಲ್ಲಿ ಇದ್ದು ಅದಕ್ಕೆ ಅನೇಕ ಪಾಠಾಂತರಗಳಿವೆ. ಕವಿಯ ಪಾಠ ಯಾವುದು ಎಂಬುದನ್ನು ಸರಿಯಾಗಿ ತಿಳಿಯಲು ಅಡ್ಡಿಗಳಿರುವುದರಿಂದ ಪರಿಷತ್ತು 'ಶಂಕರನ' ಎಂಬ ಪಾಠವನ್ನು ಇಟ್ಟುಕೊಂಡಿದೆ. ಈ ಸಂದರ್ಭದಲ್ಲಿ 'ಕಿರಾತಾರ್ಜುನೀಯ'ದಲ್ಲಿ "ಕೃಷ್ಣದ್ವೈಪಾಯನನ ಆದೇಶದಂತೆ ಇಂಥ ವ್ರತವನ್ನು ಧರಿಸಿದ್ದೇನೆ. ಸುಖವಾಗಿ ಉಪಾಸನೆ ಮಾಡಬಹುದಾದ ಇಂದ್ರನನ್ನು ಕುರಿತು ಆರಾಧಿಸಲು ಪ್ರಯತ್ನಿಸುತ್ತಿದ್ದೇನೆ."[78] ಎಂದು ಅರ್ಜುನನು ಇಂದ್ರನಿಗೆ ಉತ್ತರ ಕೊಟ್ಟಂತೆ ನಿರೂಪಿತವಾಗಿದೆ. 'ಕಿರಾತಾರ್ಜುನೀಯ'ದಲ್ಲಿ ಅರ್ಜುನನು ಇಂದ್ರನನ್ನೇ ಕುರಿತು ತಪಸ್ಸು ಮಾಡಿದನೆಂದು ಅನೇಕ ಕಡೆಗಳಲ್ಲಿ ಸ್ಪಷ್ಟವಾಗಿ ಬಂದಿದೆ. ಕಥಾಸರಣಿಯಲ್ಲಿ ಬಹುಮಟ್ಟಿಗೆ ಅನುಸರಿಸಿರುವ 'ಕಿರಾತಾರ್ಜುನೀಯ' ದಂತೆಯೇ ಪಂಪನೂ ನಿರೂಪಿಸಿರಬೇಕು. ಅರ್ಜುನನು ಮೊದಲಿನಿಂದ ಈಶ್ವರನನ್ನೇ ಕುರಿತು ತಪಸ್ಸು ಮಾಡುತ್ತಿದ್ದರೆ ಇಂದ್ರನು ಬಂದು 'ಆರಾಧಿಸು ನೀಂ ಮಗನೆ ದುರಿತಹರನಂ ಹರನಂ'[79] ಎಂದು ಹೇಳಬೇಕಾದ ಪ್ರಮೇಯವೇನು ? ಆದುದರಿಂದ ಇಂದ್ರನ ಪರವಾಗಿಯೇ ಇಲ್ಲಿ ಪಾಠವಿರಬೇಕೆಂದು ಸ್ಪಷ್ಟವಾಗಿ ತೋರುತ್ತದೆ. 'ಶಂಕರನ' ಎಂಬುದನ್ನು 'ಶಕ್ರನನೆ' ಅಥವಾ 'ಸಕ್ಕನನೆ' ಎಂದೂ ನಾಲ್ಕನೆಯ ಪಾದದಲ್ಲಿ ಬರುವ 'ಹರ' ಎಂಬುದನ್ನು 'ಹರಿ' ಎಂದೂ ತಿದ್ದಬೇಕೆಂದು ಕೆಲವರು ಅಭಿಪ್ರಾಯ ಪಡುತ್ತಾರೆ.[80] 'ಹರ' ಇದು ಅಕಾರಾಂತಪದ, ಪ್ರಕೃತಿ ಪ್ರಯೋಗದಲ್ಲಿದೆ. ಇದು ವ್ಯಾಕರಣ ವಿರುದ್ಧ. ಇಂಥ ಪ್ರಯೋಗ ಪಂಪನಲ್ಲಿ ಕಂಡು ಬರುವುದಿಲ್ಲ ಆದುದರಂದ 'ಹರಿ' (ಎಂದರೆ ಇಂದ್ರ) ಎಂದು ಇಲ್ಲಿ ಇದ್ದಿರಬೇಕು. ಮುಂದಿನ ಆರು ಮತ್ತು ಒಂಭತ್ತನೆಯ ಪದ್ಯಗಳಲ್ಲಿ[81] ಬರುವ 'ಪುರಂದರನೊಸೆದಿತ್ತುದೊಂದು ಬರದಿಂದುಱಿದೆನ್ನ ವಿರೋಧಿವರ್ಗಮಂ ಕರಗಿಪೆನ್' ಎಂಬ ಅರ್ಜುನನ ಮಾತಿನಲ್ಲಿಯೂ, 'ಎಂದು ತಿರೋಹಿತನಾಗಿ ಪುರಂದರನುಂ

---

76. ಪಂ. ಭಾ. VII–66 ವ. 77. ಪಂ. ಭಾ. VII—79 ವ.

78. ಕೃಷ್ಣದ್ವೈಪಾಯನಾದೇಶಾದ್ಬಿಭರ್ಮಿ ವ್ರತಮೀದೃಶಮ್ ।
ಭೃಶಮಾರಾಧನೇ ಯತ್ತಃ ಸ್ವಾರಾಧ್ಯಸ್ಯ ಮರುತ್ವತಃ ॥ ಕಿ.ರಾ. XI–46.

79. ಪಂ. ಭಾ. VIII—8. 80. ಪಂಪ ಭಾರತದ (ಪರಿಷತ್ತಿನ ಪ್ರಕಟನೆ) ಉಪೋದ್ಘಾತದ XLII ಮತ್ತು XLIII ನೆಯ ಪುಟಗಳನ್ನು ನೋಡಿ.

81. ಪಂ. ಭಾ. VIII—6ಮತ್ತು 9.

ಪೋದನ್' ಎಂಬಲ್ಲಿಯೂ ಪುರಂದರ ಎಂಬ ಪದ ಬಂದಿದೆ. ಇದಕ್ಕೆ ಇಂದ್ರನೆಂದು ಎರಡು ಕಡೆಯಲ್ಲಿಯೂ ಅರ್ಥಮಾಡುವುದೇ ಸರಿಯಾಗಿ ಕಾಣುತ್ತದೆ. ಒಂದು ಕಡೆ ಶಿವ ಎಂದೂ ಒಂದು ಕಡೆ ಇಂದ್ರ ಎಂದೂ ಬೇರೆ ಬೇರೆ ಅರ್ಥ ಮಾಡುವುದು ಕವಿಯ ಆಶಯವಾಗಿ ಕಾಣುವುದಿಲ್ಲ. ಅಲ್ಲದೆ ಪಂಪಭಾರತದ ಈ ಕೆಳಗಿನ ಪದ್ಯಕ್ಕೂ

ಸ್ಫುರಿತ ತಪೋಮಯಾನಳನಿನೀ ಯೊಡಲಂ ನೆಗಟ್ಟಿರ್ದೀ ಗಿರೀಂದ್ರ ಕಂ।
ದರದೊಳಗಿಂತೆ ದಲ್ ಕರಗಿಪೆಂ ಪೆಱತೇಂ ಪಡೆ ಮಾತೊ ಮೇಣ್ ಪುರಂ।
ದರನೊಸೆದಿತ್ತುದೊಂದು ಬರದಿಂದುಱದೆನ್ನ ವಿರೋಧಿ ವರ್ಗಮಂ।
ಕರಗಿಪೆನಲ್ಲದಿಲ್ಲಿ ಸೆರಗಂ ಬೆರಗಂ ಬಗೆಯೆಂ ದ್ವಿಜೋತ್ತಮಾ॥ [82]

ಮತ್ತು 'ಕಿರಾತಾರ್ಜುನೀಯ'ದ 'ವಾತಾಹತವಾದ, ಅಭ್ರವನ್ನು ತಗುಲಿಕೊಂಡಿರುವ ಈ ನಗದ ತುದಿಯಲ್ಲಿ ಲಯಹೊಂದುತ್ತೇನೆ, ಅಥವಾ ಸಹಸ್ರಾಕ್ಷನನ್ನು ಆರಾಧಿಸಿ ನನ್ನ ಅಪಯಶಸ್ಸಿನ ಶಲ್ಯವನ್ನು ಕೀಳುತ್ತೇನೆ" [83] ಎಂಬ ಪದ್ಯಕ್ಕೂ ಸಾಮ್ಯವಿದೆ. 'ಕಿರಾತಾರ್ಜುನೀಯ'ದಲ್ಲಿ ಸಹಸ್ರಾಕ್ಷ ಎಂದು ಸ್ಪಷ್ಟವಾಗಿರುವುದರಿಂದ ಪಂಪಭಾರತದ ಮೇಲಿನ ಪದ್ಯದಲ್ಲಿ ಬರುವ 'ಪುರಂದರ' ಎಂಬುದಕ್ಕೆ ಇಂದ್ರ ಎಂದು ಅರ್ಥ ಮಾಡುವುದೇ ಸರಿ. ಅರ್ಜುನನು ಇಂದ್ರನನ್ನೇ ಕುರಿತು ಏಕೆ ತಪಸ್ಸು ಮಾಡಿದನೆಂಬುದಕ್ಕೆ ಮಹಾಭಾರತದಲ್ಲಿ ಕೊಟ್ಟಿರುವ ಕಾರಣ ಸಕಾರಣವಾಗಿ ಕಾಣುತ್ತದೆ. "ಇಂದ್ರ ಅರ್ಜುನನ ತಂದೆ. ಖಾಂಡವ ವನ ದಹನಾನಂತರದಲ್ಲಿ ಇಂದ್ರ ಅರ್ಜುನನ ಪರಾಕ್ರಮವನ್ನು ಹೊಗಳಿದ್ದನು. ಅರ್ಜುನನು ಮುಂದೆ ಉತ್ತಮಾಸ್ತ್ರಗಳನ್ನು ಪಡೆಯುವನೆಂದು ಶತಶೃಂಗದಲ್ಲಿ ಧರ್ಮರಾಜಾದಿಗಳಿದುರಿಗೆ ಅವನು ಹೇಳಿದ್ದನು." ಮೇಲೆ ಉದಾಹರಿಸಿದ "ಕೃಷ್ಣದ್ವೈಪಾಯನಾದೇಶಾತ್..." ಎಂದು ಮೊದಲಾಗುವ 'ಕಿರಾತಾರ್ಜುನೀಯ'ದ ಪದ್ಯಕ್ಕೆ ವ್ಯಾಖ್ಯಾನವನ್ನು ಬರೆಯುತ್ತ ಮಲ್ಲಿನಾಥನು 'ತಸ್ಯ ಕ್ಷತ್ರಿಯದೈವತತ್ವಾದಿತಿ ಭಾವಃ' (ಇಂದ್ರನು ಕ್ಷತ್ರಿಯರ ದೇವತೆ ಎಂಬುದರಿಂದ ಅರ್ಜುನನು ಇಂದ್ರನನ್ನೇ ಕುರಿತು ತಪಸ್ಸು ಮಾಡತೊಡಗಿದನು) ಎಂದು ಹೇಳಿರುವುದೂ ಕೂಡ ಮೇಲಿನ ಮಾತಿಗೇ ಉಪಷ್ಟಂಭಕವಾಗಿ ಕಾಣುತ್ತದೆ. ಈ ಮೇಲಿನ ಎಲ್ಲ ಕಾರಣಗಳ ಮೇಲಿಂದ "ನಿನಗಂ ಪೇಟ್ಟೊಡೆ...." ಎಂದು ಆರಂಭವಾಗುವ ವೃತ್ತದ ಮೂರನೆಯ ಪಾದದಲ್ಲಿ ಬರುವ 'ಶಂಕರನ' ಎಂಬ ಪರಿಷತ್ತಿನ ಪಾಠಕ್ಕೆ ಬದಲಾಗಿ ಇಂದ್ರ ಎಂಬ ಅರ್ಥ ಬರುವ ಪದವಿರಬೇಕೆಂಬುದು ನಿಶ್ಚಿತವಾಗುತ್ತದೆ. 'ದಪಂಕಮ,' 'ದಸಂಕಮ,' 'ದಸಂಕತ' ಎಂಬ ಈ ಮೂರು ಪಾಠಾಂತರಗಳಿಂದ ಇಂದ್ರ ಪರವಾಗಿ ಅರ್ಥವನ್ನು ಕೊಡುವ ಯಾವುದಾದರೂ ಶಬ್ದ ಸಿದ್ಧಿಸು

---

82. ಪಂ.ಭಾ. VIII-6.

83. ವಿಚ್ಛಿನ್ನಾಭ್ರವಿಲಾಯಂ ವಾ ವಿಲೀಯೇ ನಗಮೂರ್ಧನಿ।
ಆರಾಧ್ಯ ವಾ ಸಹಸ್ರಾಕ್ಷಮಯಶಃಶಲ್ಯಮುದ್ಧರೇ॥ ಕಿರಾ. XI-79.

ತ್ತದೋ ಎಂಬುದನ್ನು ವಿದ್ವಾಂಸರು ನಿರ್ಣಯಿಸಬೇಕಾಗಿದೆ.[84] 'ಸಕ್ಕನನೆ' ಎಂದು ಇಟ್ಟುಕೊಳ್ಳುವುದಕ್ಕೆಯಾವ ಅಡ್ಡಿಯೂ ಇಲ್ಲವಾದರೂ ನಮಗೆ ದೊರಕಿರುವ ಪ್ರತಿಗಳಲ್ಲಿ ಇರುವ ಪಾಠಾಂತರಗಳಿಂದ ಈ ಶಬ್ದ ಹೇಗೆ ಸಿದ್ಧಿಸುವುದು ಎಂಬ ಪ್ರಶ್ನೆ ನಿಲ್ಲುತ್ತದೆ.[85]

ದುರಿತಹರನಾದ ಹರನನ್ನು ಕುರಿತು ತಪಸ್ಸು ಮಾಡುವಂತೆ ಅರ್ಜುನನಿಗೆ ಪುರಂದರನು ಹೇಳಿ ಹೋಗುತ್ತಾನೆ. ಆಗ ಅರ್ಜುನನು ಶಿವನನ್ನು ಕುರಿತು ತಪಸ್ಸ ನ್ನಾಚರಿಸುತ್ತಾನೆ. ತ್ರಿಪುರಾರಿಯಂತೆ ಶೋಭಿಸುವ ಅರ್ಜುನನ ತಪಸ್ಸಿನ ತಪೋ ಜ್ವಾಲೆಯನ್ನು ಪಂಪ ಈ ಕೆಳಗಿನ ಪದ್ಯದಲ್ಲಿ ವರ್ಣಿಸಿದ್ದಾನೆ :

ಖರ ಕರ ಕಿರಣಾವಳಿಯಂ
ಪರಿದೆಟ್ಟಿಬಿಟ್ಟುದುವು ಪಗಲಿರುಳ್ ಶಶಿರುಚಿಯಂ ।
ಪರಿಭವಿಸಿ ನಭಮುನಡರ್ದುವು
ನರೇಂದ್ರು ತಾಪಸ ತಪೋಮಯೂಖಾವಳಿಗಳ್ ॥ 86

84. 'ಸಂಕ್ರಂದನ' ಎಂಬ ಪದಕ್ಕೂ 'ಸಂಕಮು' ಎಂಬ ಪದಕ್ಕೂ ಸಂಬಂಧ ವಿದೆಯೇ ಎನ್ನಿಸುತ್ತದೆ. 'ಸಂಕ್ರಂದನ' ಎಂಬ ಪದಕ್ಕೆ 'ಸಂಕಮು' ಎಂಬ ತದ್ಭವ ಸಿದ್ಧಿಸುವುದಾದರೆ ಸಮಸ್ಯೆಯು ಪರಿಹಾರವಾಗುತ್ತದೆ.

85. ಗದುಗಿನ ಭಾರತದಲ್ಲಿ ಅರ್ಜುನನು ಶಿವನನ್ನೇ ಕುರಿತು ತಪಸ್ಸು ಮಾಡಿ ದಂತೆ ಮೊದಲಿನಿಂದಲೂ ನಿರೂಪಿತವಾಗಿರುವುದನ್ನು ಇಲ್ಲಿ ಗಮನಿಸಬಹುದು. ನೋಡಿ: ಗದುಗಿನ ಭಾರತ ಅರಣ್ಯಪರ್ವ ಸಂಧಿ ೫. ಪದ್ಯ ೧೫ ರಿಂದ ೪೭. ಮೊದಲು ಇಂದ್ರನನ್ನು ಕುರಿತು ಅರ್ಜುನನು ತಪಸ್ಸು ಮಾಡಿದ ನೆಂದು ಮಹಾಭಾರತದಲ್ಲಿ ಸ್ಪಷ್ಟವಾಗಿ ಉಕ್ತವಾಗಿದೆ.

'ಶಕ್ರಮೇವ ಪ್ರಪದ್ಯಸ್ವ ಸತೇಽಸ್ತ್ರಾಣಿ ಪ್ರದಾಸ್ಯತಿ ।
ದೀಕ್ಷಿತೋಽದ್ಯೈವಗಚ್ಛತ್ವಂ ದ್ರಷ್ಟುಂ ದೇವಂ ಪುರಂದರಂ ॥'

ಎಂದು ಧರ್ಮರಾಜನು ಅರ್ಜುನನಿಗೆ ಹೇಳಿಕಳುಹಿಸುವುದನ್ನು ಇಲ್ಲಿ ಉದಾಹರಿಸಬಹುದು.

86. ಪಂ. ಭಾ. VIII-10. ಇದನ್ನು 'ಕಿರಾತಾರ್ಜುನೀಯ' ದ XII-12 ಮತ್ತು 13 ರೊಡನೆ ಹೋಲಿಸಿ ನೋಡಬಹುದು.

ರಜನೀಷು ರಾಜತನಯಸ್ಯ ಬಹುಲ ಸಮಯೇಽಪಿ ಧಾಮಭಿಃ ।
ಭಿನ್ನತಿಮಿರ ನಿಕರಂ ನಜಹೇ ಶಶಿರಶ್ಮಿಸಂಗಮಯುಜಾ ನಭಃ ಶ್ರಿಯಾ ॥
ಮಹತಾ ಮಯೂಖ ನಿಚಯೇನ ಶಮಿತರುಚಿ ಜಿಷ್ಣು ಜನ್ಮನಾ ।
ಹ್ರೀತಮಿವ ನಭಸಿ ವೀತಮಲೇ ನ ವಿರಾಜತೇಸ್ಮ ವಪುರಂಶುಮಾಲಿನಃ ॥

"ಕೃಷ್ಣಪಕ್ಷದ ರಾತ್ರಿಯಲ್ಲಿಯೂ ಕೂಡ ರಾಜತನಯನಾದ ಅರ್ಜುನನ ತೇಜಸ್ಸಿ ನಿಂದ ಭಿನ್ನಮಾಡಲ್ಪಟ್ಟ ಕತ್ತಲೆಯಮೊತ್ತವನ್ನುಳ್ಳ ನಭವು ಶಶಿರಶ್ಮಿಯೊಡನೆ ಸೇರಿದಾಗ ತನ್ನ ಶ್ರೀಯನ್ನು ಬಿಡಲಿಲ್ಲ. (ಅರ್ಜುನನಿಂದ ಬೆಳುದಿಂಗಳಿಗೆ ಸಮಾನವಾದ ಜ್ಯೋತಿಯು ಹೊರಟು ಗಗನವನ್ನು ಬೆಳಗಿತೆಂದು ಅರ್ಥ.)

"ಅರ್ಜುನನಿಂದ ಹೊರಟ ಮಹತ್ತಾದ ಮಯೂಖ ನಿಚಯದಿಂದ ಕಾಂತಿಗುಂದಿದ ಸೂರ್ಯಬಿಂಬವು ಲಜ್ಜಿತವಾಗಿ ನಿರ್ಮಲವಾದ ಆಕಾಶದಲ್ಲಿ ಕೂಡ ವಿರಾಜಿಸಲಿಲ್ಲ."

ಹೀಗೆ ಉಗ್ರೋಗ್ರ ತಪಸ್ಸನ್ನು ಮಾಡುತ್ತಿರಲು ಅರ್ಜುನನ ತಪೋಜ್ವಾಲೆಯು ತಪೋವಿಘಾತವನ್ನು ಮಾಡಲು ಇಂದ್ರಕೀಲನಗೇಂದ್ರದ ತಪೋಧನರೆಲ್ಲ ನೆರೆದು ಕೈಲಾಸಕ್ಕೆ ಬಂದು ಅಲ್ಲಿ ಗಿರಿಜೆಯೊಡನಿರುವ ಶಿವನಿಗೆ ಈ ಹೊಸ ತಪಸ್ವಿಯ ವಿಷಯವನ್ನು ಬಿನ್ನವಿಸಿಕೊಳ್ಳುತ್ತಾರೆ :

ಆರೋಪಿತ ಚಾಪಂ, ಸಂ
ಧಾರಿತ ಕವಚಂ, ಧೃತೋಗ್ರಶರಧಿಯುಗಂ, ತಾ।
ವಾರಂದಮಲ್ಲ + ಅವಂ, ತ್ರಿಪು
ರಾರಿ ಕೇಳ್, ತ್ರಿಪುರಮಿಸುವ ನಿನ್ನನೆ ಪೋಲ್ವಂ ॥ 87

ಆಗ ಹರನು ಧ್ಯಾನದಿಂದ ವಿಷಯವನ್ನೆಲ್ಲ ತಿಳಿದು ಮುಗುಳ್ನಗೆ ನಕ್ಕು 'ಆತನಿಗೆ ತಕ್ಕುದನ್ನು ನಾನೆ ಬಲ್ಲೆ' ನೆಂದು ಮುನಿವೃಂದವನ್ನು ಕಳುಹಿಸಿಕೊಡುತ್ತಾನೆ. ತಾನು ಕಿರಾತರೊಡೆಯನ ರೂಪವನ್ನು ಧರಿಸಿ ತನ್ನ ಭೂತಗಣಗಳನ್ನು ಕಿರಾತರನ್ನಾಗಿ ಮಾಡಿಕೊಂಡು ಇಂದ್ರಕೀಲಕ್ಕೆ ಬರುತ್ತಾನೆ. ಅಲ್ಲಿ ಮೂಕದಾನವನೆಂಬ ದೈತ್ಯ ವರಾಹನು ಅರ್ಜುನನ ಮೇಲೆ ನುಗ್ಗಲು ಅರ್ಜುನ ಮತ್ತು ಹರ ಇಬ್ಬರೂ ಏಕ ಕಾಲದಲ್ಲಿ ಹಂದಿಯ ಮೇಲೆ ಬಾಣ ಪ್ರಯೋಗ ಮಾಡುತ್ತಾರೆ. ಹಂದಿ ಸತ್ತು ಬೀಳುತ್ತದೆ. ಬಾಣವನ್ನು ತೆಗೆದುಕೊಳ್ಳುವ ನೆವದಿಂದ ವಿವಾದವನ್ನು ಹೂಡಿ ಅರ್ಜುನನೊಡನೆ ಯುದ್ಧಕ್ಕೆ ನಿಲ್ಲುತ್ತಾನೆ ಹರ. ಆತನ ಚತುರಂಗ ಬಲವನ್ನು ಎದುರಿಸಿ ಅರ್ಜುನನೊಬ್ಬನೆ ಹೋರಾಡಿ ಅದನ್ನು ಸೋಲಿಸಿ ಹಿಮ್ಮೆಟ್ಟಿಸುತ್ತಾನೆ. ಕೊನೆಗೆ ಹರನೊಡನೆ ಅರ್ಜುನ ಮಲ್ಲ ಯುದ್ಧವನ್ನು ಹೂಡುತ್ತಾನೆ. ಅರ್ಜುನ ಒಂದು ಸಲ ಹರನನ್ನು ನೆಲಕ್ಕೆ ಹಾಕಿ ಗಂಟಲನ್ನು ಮೆಟ್ಟುವಾಗ ಶಿವ ನಿಜರೂಪವನ್ನು ತೋರಿಸುತ್ತಾನೆ. ಅರ್ಜುನ ಭಕ್ತಿಯಿಂದ ಶಿವನಿಗೆ ನಮಸ್ಕರಿಸುತ್ತಾನೆ. ಶಿವ ಮೆಚ್ಚಿ ಅರ್ಜುನನಿಗೆ ಪಾಶುಪತಾಸ್ತ್ರವನ್ನು ಕೊಡುತ್ತಾನೆ.

'ಕಿರಾತಾರ್ಜುನೀಯ'ದ ಮೊದಲನೆಯ ನಾಲ್ಕು ಸರ್ಗಗಳಲ್ಲಿ ಕಂಡುಬರುವ ಕಥಾ ವಿಲಾಸ, ಸಂವಾದ ರಮಣೀಯತೆ ಪುನಃ ನಮಗೆ ಕಾಣಿಸುವುದು ಹದಿಮೂರು ಮತ್ತು ಹದಿನಾಲ್ಕನೆಯ ಸರ್ಗಗಳಲ್ಲಿ. ಹಂದಿಯ ದೇಹದಲ್ಲಿ ನಾಟಿದ್ದ ಬಾಣ ತನ್ನ ಒಡೆಯನದು ಎಂದು ಅದನ್ನು ಕೇಳಲು ಬರುವ ಕಿರಾತದೂತನ ಸಂಭಾಷಣೆ ಮತ್ತು ಅರ್ಜುನ ಅವನಿಗೆ ಕೊಡುವ ಉತ್ತರಗಳು ಭಾರವಿಯ ಸಂವಾದ ರಚನಾ ಕೌಶಲ್ಯವನ್ನು ಪ್ರಕಟಪಡಿಸುತ್ತವೆ. ಹದಿನಾಲ್ಕನೆಯ ಸರ್ಗದ ಮಧ್ಯದಿಂದ ಮುಂದಕ್ಕೆ ಸುಮಾರು ನಾಲ್ಕು ಸರ್ಗಗಳು ಯುದ್ಧವರ್ಣನೆಯಿಂದ ಕೂಡಿವೆ.

---

87. ಪಂ. ಭಾ. VIII-12. 'ಕಿರಾತಾರ್ಜುನೀಯ'ದ XII-14 ಮತ್ತು 27 ರೊಡನೆ ಹೋಲಿಸಬಹುದು.

ಕಿರಾತರೂಪವನ್ನು ಧರಿಸಿದ ಶಿವನನ್ನು ಕುರಿತು ಹದಿನಾಲ್ಕು ಪದ್ಯಗಳಲ್ಲಿ ಭಾರವಿ ವರ್ಣಿಸಿದ್ದರೆ ಪಂಪ ಒಂದು ಪದ್ಯದಲ್ಲಿ ಮುಗಿಸಿದ್ದಾನೆ.[88] ಹಂದಿಯ ವರ್ಣನೆಯನ್ನೂ[89] ಮತ್ತು ಅದನ್ನು ಕೊಂದ ಬಗೆಯನ್ನೂ ಒಂದೊಂದು ಪದ್ಯದಲ್ಲಿ ಪಂಪ ವರ್ಣಿಸಿದ್ದಾನೆ. ಆದರೆ 'ಕಿರಾತಾರ್ಜುನೀಯ'ದಲ್ಲಿ ಹದಿಮೂರು ಪದ್ಯಗಳು ಹಂದಿಯು ಮೇಲೆ ನುಗ್ಗಿ ಬರುತ್ತಿರುವುದನ್ನು ಕಂಡಾಗಿನ ಅರ್ಜುನನ ಮನಸ್ಸಿನ ಆಲೋಚನೆಗಳನ್ನು ನಿರೂಪಿಸುತ್ತವೆ.[90] "ಹಂದಿ ಎದುರಿಗೆ ರಭಸದಿಂದ ಬರುತ್ತಿದೆ. ಇದು ನನ್ನ ಮೇಲೆ ಬೀಳಲು ಬರುತ್ತಿರುವ ಶತ್ರುವೇ ಇರಬೇಕು. ಏಕೆಂದರೆ ನನ್ನ ಮನಸ್ಸು ಸ್ಖಲನವಾಗಿದೆ. ವಿಮಲ ಮತಿಗಳ ಮನಸ್ಸು ಎದುರಿನವನು ಶತ್ರುವೋ ಮಿತ್ರನೋ ಎಂಬುದನ್ನು ಸೂಚಿಸುತ್ತದೆ. ದುರ್ಯೋಧನ ಇದನ್ನು ಅಟ್ಟಿದ್ದಾನೆಯೋ ಏನೋ. ಇದನ್ನು ನಾನು ಕೊಲ್ಲಬೇಕು. ಶತ್ರುಗಳನ್ನು ಕೊಲ್ಲುವುದು ತಪ್ಪಲ್ಲ" ಎಂದು ಆಲೋಚಿಸಿ ಅರ್ಜುನ ಒಂದು ನಿರ್ಧಾರಕ್ಕೆ ಬಂದು ಆಮೇಲೆ ಬಾಣ ಬಿಡುತ್ತಾನೆ. ಹಂದಿ ತನ್ನ ಮೇಲೆ ಬೀಳಲು ಬರುತ್ತಿದೆ ಎನ್ನುವಾಗ ಇಷ್ಟೊಂದು ವಿಷಯವನ್ನು ಆಲೋಚಿಸುತ್ತ ಕುಳಿತರೆ ಎಷ್ಟು ಹೊತ್ತು ಕಳೆದು ಹೋಗಬಹುದು, ಇದು ಕಾಲ ವಿಳಂಬವನ್ನು ತೋರಿಸುವುದಲ್ಲವೇ ಎಂದು ನಾವು ಆಲೋಚಿಸಬೇಕಾಗುತ್ತದೆ. ಅರ್ಜುನನ ಮನಸ್ಸಿನ ಸ್ಥಿತಿಯನ್ನು, ನಿರೂಪಿಸಲೂ ಮುನಿವ್ರತದಲ್ಲಿರುವ ಅರ್ಜುನ ಹಂದಿಯನ್ನು ಕೊಲ್ಲುವುದು ನ್ಯಾಯ ಎಂಬುದನ್ನು ಸಮರ್ಥಿಸಲೂ ಭಾರವಿ ಕಾಲ ವಿಳಂಬವನ್ನು ಗಣಿಸಿಲ್ಲ. ನಿಮಿಷಮಾತ್ರದಲ್ಲಿ ಆದ ಚರ್ಚೆ ಮತ್ತು ನಿರ್ಧಾರವನ್ನು ಕವಿವಾಣಿ ವಿಶದಪಡಿಸಬೇಕಾದರೆ ಹೆಚ್ಚು ಕಾಲಾವಕಾಶ ಬೇಕಾಗಿಯೇ ಆಗುತ್ತದೆ. ಅರ್ಜುನ ಶಿವ ಇಬ್ಬರೂ ಏಕಕಾಲದಲ್ಲಿ ಬಾಣತೊಟ್ಟರು. ಆ ಬಾಣಗಳೆರಡೂ ಹಂದಿಯ ದೇಹವನ್ನು ಏಕಕಾಲದಲ್ಲಿ ಪ್ರವೇಶಿಸಿದುವು ಎಂಬಲ್ಲಿಗೆ ಹದಿನಾಲ್ಕು ಪದ್ಯಗಳಾಗುತ್ತವೆ.[91] ಇದೆಲ್ಲವನ್ನೂ ಪಂಪ ಒಂದೇ ಒಂದು ಪದ್ಯದಲ್ಲಿ ಸಂಗ್ರಹವಾಗಿ ವರ್ಣಿಸಿದ್ದಾನೆ:

> ತೆಗೆದೆಚ್ಚರ್ಜುನನಂಬು ತೀವೆ ತುದಿಯಿಂ ಬಾಲಂಬರಂ ಪಂದಿ ಸಾ।
> ಳಗೆ ವೋಪಂತಿರೆ ನೋಡ ಸಂಬಳಿಗೆವೋಯ್ತೆಂಬನ್ನೆಗಂ ಕೊಂಡುದು+ಜ॥
> ಯ್ಯಗೆ ಪಾರ್ದೆಚ್ಚ ವೃಷಾಂಕನಂಬು ತನುವಂ ಪಚ್ಚಂತೆ ಕೊಂಡತ್ತು, ತೊ।
> ಟ್ಟಗೆ ವೈಮಾನಿಕ ಕೋಟಿಗಂದು ಪಿರಿದೊಂದುತ್ಸಾಹಮುಪ್ಪನ್ನೆಗಂ॥[92]

ಹೀಗೆ ಮೂಕದಾನವನನ್ನು ಕೊಂದ ಅನಂತರದಲ್ಲಿ ತನ್ನ ಬಾಣವನ್ನು ಪರಾಕ್ರಮಥವ

---

88. ಪಂ. ಭಾ. VIII-14. ಕಿರಾ. XII 10-54.
89. ಪಂ. ಭಾ. VIII-15.
90. ಕಿರಾ. XIII 1-12.
91. ಕಿರಾ. XIII 15-29.
92. ಪಂ. ಭಾ. VIII-16

ಳನು ತೆಗೆದುಕೊಂಡು ಬತ್ತಳಿಕೆಯೊಳಗಿಟ್ಟು ಹೋಗಿ ಪೂಗೊಳದಲ್ಲಿ ಕೈಕಾಲುಗಳನ್ನು ತೊಳೆದುಕೊಂಡು ಪುನಃ ಏಕಪಾದದಲ್ಲಿ ತಪಸ್ಸಿಗೆ ನಿಲ್ಲುತ್ತಾನೆ. ಅನಂತರ ಶಿವನು ಅಟ್ಟಿದ ಬೇಡರ ವೇಷದ ಗುಹನು ದೂತನಾಗಿ ಅಂಬನ್ನು ಕೇಳಲು ಬರುತ್ತಾನೆ. ಹಂದಿ ಸತ್ತ ಒಡನೆ ಅರ್ಜುನ ತನ್ನ ಬಾಣವನ್ನು ತೆಗೆದುಕೊಳ್ಳಲು ಹೋದಾಗ ಎದುರಿಗೆ ಒಬ್ಬ ಕಿರಾತ ಬಂದು ನಿಂತಿರುವುದನ್ನು ಕಾಣುತ್ತಾನೆ ಎಂದು 'ಕಿರಾತಾರ್ಜುನೀಯ' ದಲ್ಲಿ ನಿರೂಪಿತವಾಗಿದೆ. ಶಿವನ ಆಜ್ಞೆಯನ್ನು ತಿಳಿಸಲು ಬಂದ ಕಿರಾತನವನು.'ಕಿರಾತಾ ರ್ಜುನೀಯ'ದ ಅರ್ಜುನನಿಗಿಂತ ಪಂಪಭಾರತದ ಅರ್ಜುನನ ರೀತಿ ಯೋಗ್ಯವಾಗಿ ಕಾಣುತ್ತದೆ. ತಾನು ಮಾಡಬೇಕಾದ ಕೆಲಸವನ್ನು ಮಾಡಿದವನಾಗಿ ಯಾವ ಯೋಚ ನೆಯೂ ಇಲ್ಲದೆ ಪುನಃ ತಪಸ್ಸಿಗೆ ನಿಲ್ಲುವ ಮನಃಸ್ಥಿತಿ ಅವನಿಗಿದೆ. 'ಕಿರಾತಾರ್ಜುನೀಯ' ದಲ್ಲಿ ಕಿರಾತನ ಮಾತು ಮೂವತ್ತೆರಡು ಪದ್ಯಗಳಲ್ಲಿಯೂ, ಅರ್ಜುನನ ಉತ್ತರ ಇಪ್ಪತ್ತುಮೂರು ಪದ್ಯಗಳಲ್ಲಿಯೂ ಬಂದಿರುವುದನ್ನು ಪಂಪ ಎರಡೆರಡು ಪದ್ಯಗಳಲ್ಲಿ ಮುಗಿಸಿಬಿಟ್ಟಿದ್ದಾನೆ.[93] "ನಿನ್ನಂಥವನು ಇನ್ನೊಬ್ಬರ ಬಾಣವನ್ನು ತೆಗೆದುಕೊಳ್ಳ ಬಾರದು. ನಿನ್ನ ಮುನಿತನಕ್ಕೆ ಪರರೊಡವೆಯನ್ನು ತೆಗೆದುಕೊಳ್ಳುವುದು ತಕ್ಕುದಲ್ಲ. ನಮ್ಮ ಒಡೆಯನೇ ಈ ನಗಕ್ಕೂ ಒಡೆಯ. ಅವನೇ ಇಲ್ಲಿಯ ಮೃಗಗಳನ್ನು ಕೊಲ್ಲ ಲರ್ಹ. ಅವನ ರಾಜ್ಯದಲ್ಲಿರುವ ನಿನ್ನನ್ನು ಹಂದಿಯನ್ನು ಕೊಲ್ಲುವುದರ ಮೂಲಕ ರಕ್ಷಿಸಿದ್ದಾನೆ. ನಿನ್ನನ್ನು ಅವನು ಕ್ಷಮಿಸಿದ್ದಾನೆ. ಅವನ ಸ್ನೇಹವನ್ನು ಬೇಡಿಕೋ, ಬಾಣಗಳು ಬೇಕಾದರೆ ಅವನನ್ನೇ ಕೇಳಿಕೋ ಕೊಡುತ್ತಾನೆ" ಎಂದು ಕಿರಾತದೂತನು ಅರ್ಜುನನಿಗೆ ಹೇಳುತ್ತಾನೆಂದು 'ಕಿರಾತಾರ್ಜುನೀಯ'ದಲ್ಲಿ ನಿರೂಪಿತವಾಗಿದೆ. ಇಲ್ಲಿ ಕಿರಾತರೊಡೆಯನಿಗೂ ಶಿವನಿಗೂ ಅನ್ವಯಿಸುವಂತೆ ಸಮಾನವಾದ ಮಾತುಗಳನ್ನು ಜಾಣ್ಮೆಯಿಂದ ಅಳವಡಿಸಲಾಗಿದೆ. ಪರಮಾತ್ಮನಲ್ಲಿ ಶರಣು ಹೋಗಿ ಅವನನ್ನು ಬೇಡಿಕೊಂಡರೆ ನಿನಗೆ ಬೇಕಾದ ಅಸ್ತ್ರಗಳನ್ನು ಕೊಡುತ್ತಾನೆ ಎಂಬ ಅರ್ಥ ಬರುವಂತೆ ಕಿರಾತನ ಮಾತು ಬರುತ್ತದೆ. ಇವನ ಭಾಷಣಕ್ಕೆ ಲೆಕ್ಕಾಚಾರವಾಗಿ ಅರ್ಜುನ ಉತ್ತರ ಕೊಡುತ್ತಾನೆ. "ನನಗೆ ಸ್ನೇಹದ ವಿಲೋಭನವನ್ನು ತೋರಿಸಿದ್ದೀಯೆ, ಬುದ್ಧಿಯ ವ್ಯಾಮೋಹಾರ್ಥವಾಗಿ ಭಯಪ್ರದರ್ಶಿಸಿದ್ದೀಯೆ. ನೀನು ಬಾಣದ ವಿಷಯವನ್ನು ಹೇಳಿ ದ್ದರಲ್ಲಿ ನ್ಯಾಯವೇ ಬೇರೆ ಇದ್ದಂತೆ ಕಾಣುತ್ತದೆ. ನಿಮ್ಮ ಬಾಣ ಎಲ್ಲಿಯೋ ಪರ್ವತ ದಲ್ಲಿ ಕಳೆದುಹೋಗಿರಬಹುದು, ಅಲ್ಲಿ ಹುಡುಕಿ. ನನ್ನಲ್ಲಿ ಅಕ್ಷಯ ತೂಣೀರವಿದೆ. ಕಿರಾತನ ಬಾಣಗಳು ನನಗೆ ಬೇಕಿಲ್ಲ. ಕಾಡಿನಲ್ಲಿ ಯಾರು ಕೊಲ್ಲುತ್ತಾರೋ ಅವರದು ಪ್ರಾಣಿ. ನನಗೆ ಅಡ್ಡಿ ಬಂದ ಮೃಗವನ್ನು ರಕ್ಷಣಾರ್ಥವಾಗಿ ಸಂಹರಿಸಿದ್ದೇನೆ. ಇಬ್ಬರೂ ಒಂದೇಕಾಲದಲ್ಲಿ ಹಂದಿಗೆ ಬಾಣ ಪ್ರಯೋಗ ಮಾಡಿರುವುದರಿಂದ ಯಾರು ಕೊಂದ

---

93. ಕಿರಾತನ ಮಾತು: ಕಿರಾ. XIII 37–68. ಪಂ.ಭಾ. VIII 17-18.
ಅರ್ಜುನನ ಉತ್ತರ: ಕಿರಾ. XIV 3-25. ಪಂ.ಭಾ. VIII 19-20.

ರೆಂಬುದಕ್ಕೆ ಗುರುತಿಲ್ಲ. ಪರಾಕ್ರಮಿಯಾದವನು ಶಸ್ತ್ರವನ್ನು ಬೇಡಿಕೊಳ್ಳುವುದಿಲ್ಲ; ನಾನು ಕೂಡ ಪರಾಕ್ರಮದಿಂದ ತೆಗೆದುಕೊಳ್ಳುತ್ತೇನೆ. ನನ್ನ ಮತ್ತು ನಿಮ್ಮ ಒಡೆಯನ ಸ್ನೇಹ ಸಾಧ್ಯವಿಲ್ಲ. ನಾನು ಕ್ಷತ್ರಿಯ, ಅವನು ಪ್ರಾಣಿಗಳನ್ನು ಕೊಲ್ಲುವ ಜಾತಿಯವನು. ನಾನು ಅವನನ್ನು ಕ್ಷಮಿಸಿದ್ದೇನೆ. ಬಲಾತ್ಕಾರದಿಂದ ಬಾಣವನ್ನು ತೆಗೆದುಕೊಳ್ಳಲು ಬಂದರೆ ಸರ್ಪದ ಹೆಡೆಯಲ್ಲಿರುವ ಮಣಿಯನ್ನು ತೆಗೆದುಕೊಳ್ಳುವವನ ಸಾಹಸವಾಗುತ್ತದೆ." ಇದು 'ಕಿರಾತಾರ್ಜುನೀಯ'ದ ಕಥಾಸರಣಿ. ಪಂಪಭಾರತದಲ್ಲಿ ಬರುವ ಕಿರಾತ-ಅರ್ಜುನರ ಸಂವಾದಕ್ಕೆ ಒಂದೊಂದು ನಿದರ್ಶನವನ್ನು ತೆಗೆದುಕೊಳ್ಳೋಣ :

> ಗೊರವರೆ ಬೂದಿಯುಂ ಜಡೆಯುಂ+ಅಕ್ಕೆತಪಕ್ಕೆ, ತನುತ್ರಂ+ಈ ಭಯಂ।
> ಕರ ಧನು ಖಟ್ಗ್ಗಂ+ಅತ್ತಪರಂ+ಇಂತೆರಡುಂ ದೊಣೆ ತೀವಿದಂಬುಮೊಂ।
> ದಿರವು ತಪಕ್ಕಿದೆಂತುಟೊ, ತಪಂಗಳುಮಿಲ್ಲಗಡ,+ಉಳ್ಳೊಡೀಗಳೆ।
> ಮ್ಮರಸರ ನಚ್ಚಿನೆಚ್ಚ ಶರಮುಂ ಸೆರಗಿಲ್ಲದೆ ಕೊಂಡು ಬರ್ಪರೇ?[94]

ಅದಕ್ಕೆ ಅರ್ಜುನ ಕೊಡುವ ಉತ್ತರ :

> ದಸಿಕೊಂದಕ್ಕುಂ ಬೇಡಂ
> ಗಿಸಲ್ಕೆ ದೊರೆ ಮೃಗಮುನ್,+ಈ ಜಗಂಗಳನಳ್ಳಾ।
> ಡಿಸುವ ಮದೀಯೋಗ್ರಾಸ್ತ್ರಂ
> ಪೆಸಗೊಳಲೇಂ ತನಗೆ ದೊರೆಯೆ, ಖಳನಳವಱಿಯಂ ॥ [95]

ಮುಂದೆ 'ಕಿರಾತಾರ್ಜುನೀಯ' ದಲ್ಲಿ ಅರ್ಜುನನು ಕಿರಾತ ಸೈನ್ಯದ ಮೇಲೆ ಮಾಡುವ ಯುದ್ಧವನ್ನು ಹದಿನಾಲ್ಕನೆಯ ಸರ್ಗದಲ್ಲಿ ಸುಮಾರು ನಲವತ್ತು ಪದ್ಯಗಳಲ್ಲಿ ವರ್ಣಿಸಿದ್ದಾನೆ. ಇದನ್ನು ಪಂಪ ಒಂದು ಪದ್ಯದಲ್ಲಿ ಪರಿಹರಿಸಿದ್ದಾನೆ.[96] ಶಿವಾರ್ಜುನರ ಯುದ್ಧವನ್ನು ಭಾರವಿ ನಾಲ್ಕು ಸರ್ಗಗಳಲ್ಲಿ[97] ಬಿತ್ತರಿಸಿದ್ದಾನೆ, ಪಂಪ ಈ ಕೆಳಗಿನ ಒಂದು ಕಂದ ಪದ್ಯದಲ್ಲಿ ಮುಗಿಸಿದ್ದಾನೆ.

---

94. ಪಂ. ಭಾ. VIII-17

95. ಪಂ. ಭಾ. VIII-19 96. ಕಿರಾ. XIV 26-65 ಪಂ. ಭಾ. VIII-21

97. ಕಿರಾ. XV 34 ನೆಯ ಪದ್ಯದಿಂದ XVIII 13 ನೆಯ ಪದ್ಯದವರೆಗೆ ಶಿವಾರ್ಜುನರ ಯುದ್ಧದ ವರ್ಣನೆ ಬರುತ್ತದೆ. ಹದಿನೈದನೆಯ ಸರ್ಗದ ಆದಿಯಲ್ಲಿ ಅರ್ಜುನನಿಂದ ಸೋತ ಗಣಗಳು ಷಣ್ಮುಖನಿಗೆ ಹೇಳಿಕೊಳ್ಳುವುದೂ, ಷಣ್ಮುಖ ಶಿವನಿಗೆ ಆಗಿನ ಸ್ಥಿತಿಯನ್ನು ವರ್ಣಿಸುವುದೂ, ಅದನ್ನು ಕೇಳಿ ಶಿವನು ಪಲಾಯನ ಮಾಡುತ್ತಿರುವ ಸೈನಕ್ಕೆ ಧೈರ್ಯ ಹೇಳಿ ಯುದ್ಧಕ್ಕೆ ಸಿದ್ಧನಾಗುವುದೂ ನಿರೂಪಿತವಾಗಿವೆ.

ಇಕ್ಕಿದನಭವಂ ಪಾರ್ಥನ
ನಿಕ್ಕಿದನಾ ತ್ರಿಪುರಹರನನರ್ಜುನನೆನೆ ಗೆ ।
ಲ್ಲಕ್ಕೆ ಮುಡಿಗಿಕ್ಕುವಂತೆವೊ
ಲಿಕ್ಕಿದನವಯವದೆ ನೆಲದೊಳರಿಗಂ ಹರನಂ ॥ 98

ಮುಂದಿನ ಮೂರು ಪದ್ಯಗಳಲ್ಲಿ ಶಿವನ ಪ್ರತ್ಯಕ್ಷನಾಗುವಿಕೆಯೂ ಪಾಶುಪತಾಸ್ತ್ರ ವನ್ನು ಮೆಚ್ಚಿಕೊಟ್ಟುದೂ ವರ್ಣಿತವಾಗಿವೆ.

ಭಾರವಿ ಯುದ್ಧ ವರ್ಣನೆಯನ್ನು ವಿಪುಲವಾಗಿ ಮಾಡಿದ್ದಾನೆ. ತನ್ನ ಜಾಣ್ಮೆ ಮತ್ತು ವಿದ್ವತ್ತು ಎಷ್ಟಿದೆಯೋ ಅಷ್ಟನ್ನೂ ಶಕ್ತಿಮೀರಿ ಪ್ರಕಟಿಸಲು ಶ್ರಮಿಸಿದ್ದಾನೆ. ಏಕಾಕ್ಷರ, ದ್ವ್ಯಕ್ಷರ, ತ್ರ್ಯಕ್ಷರ ಮೊದಲಾದುವನ್ನೂ ವಿವಿಧ ಬಂಧಗಳನ್ನೂ ಇತರ ಅನೇಕ ಕಾವ್ಯದ ಕಸರತ್ತುಗಳನ್ನೂ ಹದಿನೈದನೆಯ ಸರ್ಗದಲ್ಲಿ ಮಾಡಿ ತೋರಿ ಸಿದ್ದಾನೆ. ಪಂಪ ಬರೆಯುತ್ತಿರುವುದು 'ವಿಕ್ರಮಾರ್ಜುನ ವಿಜಯ' ಕಾವ್ಯವನ್ನು. ಅದರಲ್ಲಿ ಮುಂದೆ ಭಾರತಯುದ್ಧ ಬಂದೇ ಬರುತ್ತದೆ. ಅಲ್ಲಿ ಯುದ್ಧ ವರ್ಣನೆಯನ್ನು ಪಂಪ ಬಹು ಅಚ್ಚುಕಟ್ಟಾಗಿ ಮಾಡಿದ್ದಾನೆ. ಈ ಕಿರಾತಾರ್ಜುನ ಲೀಲಾಪ್ರಸಂಗದ ಭಾಗವು ಭಾರತದ ಒಂದು ಅಂಗ ಕಥೆಯಾಗಿರುವುದರಿಂದ ಎಲ್ಲವನ್ನೂ ಸಂಗ್ರಹವಾಗಿ ಸಾಗಿಸಿಕೊಂಡು ಹೋಗುವುದು ಅವನ ಕರ್ತವ್ಯ. ಆದರೆ ಕಾವ್ಯದ ಕಸರತ್ತು ಮಾತ್ರ ಪಂಪನಲ್ಲಿಲ್ಲ. ಪಾಂಡಿತ್ಯವನ್ನೇ ಪ್ರದರ್ಶಿಸಲು ಪಂಪ ಕಾವ್ಯರಚನೆಮಾಡಿಲ್ಲ. ರಸಪೋಷಣೆಯೇ ಅವನ ಮುಖ್ಯಗುರಿ.

ಇದುವರೆವಿಗೆ 'ಕಿರಾತಾರ್ಜುನೀಯ' ಮತ್ತು ಪಂಪಭಾರತಗಳ ಕಥಾಸರಣಿ, ಸಂವಿಧಾನ, ಪಾತ್ರಚಿತ್ರಣ, ಸಂವಾದ ರಚನಾ ಕೌಶಲ್ಯ ಮತ್ತು ವರ್ಣನಾಕ್ರಮಗಳನ್ನು ಕುರಿತು ವಿಚಾರಮಾಡಿದ್ದಾಗಿದೆ. ಪಂಪ 'ಕಿರಾತಾರ್ಜುನೀಯ'ದ ಭಾವಗಳನ್ನು ಅಲ್ಲಲ್ಲಿ ಅನುವಾದಮಾಡಿಯೋ, ವಿಸ್ತರಿಸಿಯೋ, ಮೊಟಕುಮಾಡಿಯೋ ಇಲ್ಲವೆ ಹೊಸತನವನ್ನು ಅದಕ್ಕೆ ಕೊಡುವುದರ ಮೂಲಕ ತನ್ನತನವನ್ನು ತೋರಿಸಿಯೋ ಈ ಭಾಗದ ಕಾವ್ಯರಚನೆ ಮಾಡಿದ್ದಾನೆಂಬುದಕ್ಕೆ ಹಲವು ನಿದರ್ಶನಗಳನ್ನು ಈಗಾಗಲೇ ನೋಡಿದ್ದಾಗಿದೆ. ಇಲ್ಲಿ ಎರಡು ನಿದರ್ಶನಗಳ ಮೂಲಕ ಅವನ ಅನುವಾದದ ವೈಶಿಷ್ಟ್ಯವನ್ನು ಪರಿಶೀಲಿಸುವುದು ಅನುಚಿತವಾಗಲಾರದು. ದುರ್ಯೋಧನನ ರಾಜ್ಯ ವನ್ನು ವೀಕ್ಷಿಸಿಕೊಂಡು ಬಂದ ಗುಪ್ತಚಾರನಾದ ವನೇಚರನು ಧರ್ಮರಾಜನಿಗೆ ಅರ್ಜುನನ ಪರಾಕ್ರಮದ ವಿಷಯ ದುರ್ಯೋಧನನ ಮೇಲೆ ಎಂಥ ಪರಿಣಾಮವನ್ನು ಮಾಡಿದೆ ಎಂಬುದನ್ನು ಹೀಗೆ ಹೇಳಿದ್ದಾನೆ:

---

98. ಪಂ. ಭಾ. VIII 22

ಕಥಾಪ್ರಸಂಗೇನ ಜನೈರುದಾಹೃತಾ
ದನುಸ್ಮೃತಾಖಂಡಲಸೂನು ವಿಕ್ರಮಃ ।
ತವಾಭಿಧಾನಾದ್ವ್ಯಥತೇ ನತಾನನಃ
ಸದುಃಸಹಾನ್ಮಂತ್ರಪದಾದಿವೋರಗಃ ॥ 99

[ಗೋಷ್ಠಿಯಲ್ಲಿ ಜನಗಳು ಮಾತನಾಡುತ್ತಿರುವಾಗ ಪ್ರಸಂಗವಶಾತ್ ನಿನ್ನ ಹೆಸರನ್ನು ಉಚ್ಚರಿಸಿದಾಗ ಅರ್ಜುನನ ಪರಾಕ್ರಮವು ಜ್ಞಾಪಕಕ್ಕೆ ಬಂದು ಮಂತ್ರಪದಗಳನ್ನು ಹೇಳಿಹೇಳಿದಂತೆ ಹಾವಿನ ತಲೆಯು ಎರಗುವಂತೆ ದುರ್ಯೋಧನನ ತಲೆ ತಗ್ಗಿ ಅವನಿಗೆ ವ್ಯಥೆಯನ್ನುಂಟು ಮಾಡುತ್ತಿದ್ದಿತು.]

ಇದೇ ಭಾವ ಪಂಪಭಾರತದಲ್ಲಿ ಹೀಗೆ ಬಂದಿದೆ:

ನೆಗಟ್ದರಿಗನ ಸಾಹಸಮೊ
ರ್ಮೆಗೊರ್ಮೆ ಕೆಲದವರ ಪಾತಿನೊಳ್ ತನ್ನಮನಂ ।
ಬುಗೆ ಮಂತ್ರಪದಕ್ಕುರಗಂ
ಸುಗಿವಂತೆವೊಲಗಿದು ಸುಗಿದು ತಲೆಗರೆದಿರ್ಪಂ ॥ 100

ಇದಕ್ಕಿಂತ ಸರಸವಾದ ಅನುವಾದ ಸಾಧ್ಯವಿಲ್ಲವೆಂದು ತೋರುತ್ತದೆ. ಒಂದು ಪದವೂ ಅನುಪಯುಕ್ತವಾಗದಂತೆ ಒಂದು ಕಂದ ಪದ್ಯದಲ್ಲಿ ಭಾರವಿಯ ವಂಶಸ್ಥವೃತ್ತದ ಭಾವವು ಮೂಡುವಂತೆ ಕಾವ್ಯ ರಚನೆಮಾಡಿದ್ದಾನೆ ಪಂಪ. ಮೂಲದ ಸೌಂದರ್ಯವು ಸ್ವಲ್ಪವೂ ಕುಂದಿಲ್ಲದೆ ಅನುವಾದದಲ್ಲಿ ಬಂದಿದೆ. 'ಮಂತ್ರ ಪದಾದಿವೋರಗಃ' ಎಂಬುದಕ್ಕೆ 'ಮಂತ್ರಪದಕ್ಕುರಗಂ ಸುಗಿವಂತೆವೊಲ್' ಎಂಬ ಮೂಲದ ಪದಗಳನ್ನೇ ಉಪಯೋಗಿಸಿರುವುದನ್ನು ಕಾಣಬಹುದು. ಭಾರವಿಯ ಪದ್ಯದಲ್ಲಿ ಮೇಲಿನ ಸ್ಪಷ್ಟಾರ್ಥದ ಜೊತೆಗೆ 'ಮಂತ್ರಪದಾದಿವ್ರೋರಗ:' ಎಂಬುದರ ಅರ್ಥ ಅನ್ವಯವಾಗುವಂತೆ ಶ್ಲೇಷೆಯಿಂದ ವಿಶೇಷಾರ್ಥವನ್ನೂ ಇಟ್ಟು ತನ್ನ ಪಾಂಡಿತ್ಯವನ್ನು ಮೆರೆದಿದ್ದಾನೆ. ಇದು ಸಂಸ್ಕೃತದಲ್ಲಿ ಸುಲಭಸಾಧ್ಯವಾದರೆ, ಕನ್ನಡದಲ್ಲಿ ಕಷ್ಟಸಾಧ್ಯ. ಅನುವಾದದಲ್ಲಿ ದುಃಸಾಧ್ಯವೆಂದರೂ ಸಲ್ಲುತ್ತದೆ. ಆದುದರಿಂದ ಪಂಪ ಮುಖ್ಯಾರ್ಥಕ್ಕೆ ಮಾತ್ರ ರಸದ ದೃಷ್ಟಿಯಿಂದ ಗಮನಕೊಟ್ಟಿದ್ದಾನೆ.

ಮೇಲಿನದು ಒಂದು ಉತ್ತಮವಾದ ಆದರ್ಶ ಅನುವಾದವಾಗಿದೆ. ಅನುವಾದ ಪೂರ್ಣವಾಗಿದ್ದರೂ ಪಂಪ ಉಪಯೋಗಿಸಿಕೊಂಡ ಛಂದಸ್ಸಿನಿಂದ ಪದ್ಯದಲ್ಲಿ ಸಡಿಲತೆ ಬಂದಿರುವುದನ್ನು ಇನ್ನೊಂದು ನಿದರ್ಶನದ ಮೂಲಕ ಪರಿಶೀಲಿಸೋಣ. ಗುಪ್ತಚಾರನ ಹೇಳಿಕೆಯಿಂದ ದುರ್ಯೋಧನನ ರಾಜ್ಯ ಸ್ಥಿತಿಯನ್ನು ತಿಳಿದ ದ್ರೌಪದಿ ಧರ್ಮರಾಜನನ್ನು ಕುರಿತು ಹೇಳುತ್ತಾಳೆ:

ಭವಾದೃಶೇಷು ಪ್ರಮದಾಜನೋದಿತಂ
ಭವತ್ಯಧಿಕ್ಷೇಪ ಇವಾನುಶಾಸನಂ ।
ತಥಾಪಿ ವಕ್ತುಂ ವ್ಯವಸಾಯಯಂತಿ ಮಾ
ನ್ನಿರಸ್ತನಾರೀ ಸಮಯಾ ದುರಾಧಯಃ ॥ 101

99 ಕಿರಾ. I-24. 100. ಪಂ.ಭಾ. VII.43. 101. ಕಿರಾ. I-28.

[ನಿಮ್ಮಂಥವರ ವಿಷಯದಲ್ಲಿ ಸ್ತ್ರೀಯರು ಆಡುವ ಮಾತು ವಿಧಿರೂಪಕವಾದರೆ ತಿರಸ್ಕರಣೀಯವಾಗುತ್ತದೆ. (ಅಲ್ಲದೆ ಪ್ರಾರ್ಥನಾರೂಪದಲ್ಲಿದ್ದರೆ ತಿರಸ್ಕರಣೀಯವಲ್ಲ ಎಂದು ಅರ್ಥ) ಆದಾಗ್ಯೂ ನಾರಿಯ ಶಪಥವು ಈಡೇರದೆ ಹೋಗಿರುವುದರಿಂದ ಉಂಟಾದ ಮನೋವ್ಯಥೆಗಳು (ವಸ್ತ್ರಾಪಹರಣವೇ ಮೊದಲಾದ ಅಪಮಾನಗಳ ಸ್ಮರಣೆಯಿಂದ) ನನ್ನನ್ನು ಮಾತಾಡುವಂತೆ ಪ್ರೇರಿಸುತ್ತವೆ.]

ಪಂಪ ಈ ಮೂಲವನ್ನು ಮನಸ್ಸಿನಲ್ಲಿಟ್ಟುಕೊಂಡು ಕೆಳಗಿನ ವೃತ್ತವನ್ನು ಕಟ್ಟಿದ್ದಾನೆ :

ನುಡಿವೊಡೆ ರಾಜಕಾರ್ಯನಯಮೆತ್ತಬಲಾಜನದೊಂದು ಬುದ್ಧಿಯೆ ।
ತ್ತುಡುಪತಿವಂಶ ನೋಡವೊಡಿದೊಂದಘಟಂ ಬಗೆವಾಗಳೆಂತು ಕೇಳ್ ।
ನುಡಿಯದೆ ಕೆಮ್ಮಗಿರ್ದೊಡಮಿರಲ್ಕಣಮೀಯದೆ ನಿಮ್ಮೊಳೆನ್ನುಮಂ ।
ನುಡಿಯಿಸಿದಪ್ಪುವಾ ಕುರುಕುಳರ್ಕಳ ಗೆಯ್ದಪರಾಧಕೋಟಿಗಳ್ ॥ 102

ಚಿಕ್ಕದಾದ ವಂಶಸ್ಥವೃತ್ತವನ್ನು ಚಂಪಕಮಾಲಾವೃತ್ತವಾಗಿ ಹಿಗ್ಗಿಸಿರುವುದರಿಂದ ಪಂಪ ಕೆಲವು ಮಾತುಗಳನ್ನು ಅಧಿಕವಾಗಿ ಉಪಯೋಗಿಸಬೇಕಾಗಿ ಬಂದಿರುವುದಲ್ಲದೆ ಒಂದೆರಡು ಭಾವಗಳನ್ನೂ ವಿಸ್ತರಿಸಬೇಕಾಗಿ ಬಂದಿದೆ. 'ನುಡಿವೊಡೆ ರಾಜಕಾರ್ಯನಯ ಮೆತ್ತ, ಅಬಲಾಜನದೊಂದು ಬುದ್ಧಿಯೆತ್ತ' ಎಂಬುದನ್ನು 'ಕಿರಾತಾರ್ಜುನೀಯ'ದ ಪದ್ಯದ ಪೂರ್ವಾರ್ಧಕ್ಕೆ ಬದಲಾಗಿ ತಂದಿದ್ದಾನೆ; 'ನುಡಿಯದೆ ಕೆಮ್ಮಗಿರ್ದೊಡಂ ಇರಲ್ಕೆ ಅಣಂ ಈಯದೆ ನಿಮ್ಮೊಳ್ ಎನ್ನುಮಂ ನುಡಿಯಿಸಿದಪ್ಪುವು ಆ ಕುರುಕುಳರ್ಕಳ ಗೆಯ್ದ ಅಪರಾಧ ಕೋಟಿಗಳ್'ಎಂದು ಉತ್ತರಾರ್ಧದ ಭಾವವನ್ನು ಸ್ಪಷ್ಟಪಡಿಸಿದ್ದಾನೆ. 'ಉಡುಪತಿವಂಶ! ನೋಡುವೊಡಿದೊಂದಘಟಂ ಬಗೆವಾಗಳ್ ಎಂತುಕೇಳ್' ಎಂಬ ಷ್ಟನ್ನು ವೃತ್ತಪೂರಣಕ್ಕಾಗಿ ಭರ್ತಿಮಾಡಿಕೊಳ್ಳಬೇಕಾಗಿ ಬಂದಿದೆ. ಒಂದನೆಯ ಪಾದದೊಡನೆ ಮೂರು ನಾಲ್ಕನೆಯ ಪಾದಗಳನ್ನು ಮಧ್ಯದ ಒಂದು ಅಶಕ್ತ ಕೊಂಡಿ ಯಿಂದ ಗಂಟುಹಾಕಬೇಕಾಗಿ ಬಂದಿದೆ. ಇಲ್ಲಿ ಸಣ್ಣದೊಂದು ವೃತ್ತವನ್ನು ಆರಿಸಿ ಕೊಂಡಿದ್ದಿದ್ದರೆ ಉತ್ತಮವಾಗುತ್ತಿದ್ದಿತೆಂದು ತೋರುತ್ತದೆ. ಭಾರವಿಯ ಭಾವವೊಂ ದನ್ನು ತೆಗೆದುಕೊಂಡು ಅನುವಾದಿಸಿದರೂ ಅದರಲ್ಲಿ ಒಂದು ಹೆಚ್ಚಿನ ಸೊಗಸನ್ನು ಕೆಲ ವೆಡೆಗಳಲ್ಲಿ ಪಂಪ ತಂದಿದ್ದಾನೆ.[103] ಭಾರವಿಯಲ್ಲಿಲ್ಲದ ಹೊಸದೊಂದು ಸೌಂದರ್ಯ ವನ್ನು ಒಂದೊಂದೆಡೆ ತಂದಿದ್ದಾನೆ.[104] ಭಾರವಿಯ ಪದ್ಯವೊಂದರಲ್ಲಿರುವ ಸೊಗ

---

102. ಪಂ. ಭಾ. VII–45 103. ಇದೇ ಲೇಖನ ಪು. ೧೮೯'ಎಮ್ಮಯ್ವರ ಬೇವಸಮಂ ' ನೋಡಿ. ಮತ್ತು ಪಂ.ಭಾ. VII-62 ಮತ್ತು ಕಿರಾ. III–15 ಹೋಲಿಸಿ.

104. ಇದೇ ಲೇಖನ ಪು. ೨೦೪ ' ಆಡದ ಮೆಯ್ಗಳಿಲ್ಲ ' ನೋಡಿ.

ಸೊಂದನ್ನು ಕೈಬಿಟ್ಟಿದ್ದರೆ ಅದರೆಡೆಯಲ್ಲಿ ತನ್ನದೇ ಆದ ವೈಶಿಷ್ಟ್ಯವನ್ನು ತಂದಿರುವುದನ್ನೂ ಕಾಣಬಹುದು.[105] ಕೆಲವೆಡೆಗಳಲ್ಲಿ 'ಕಿರಾತಾರ್ಜುನೀಯ' ದ ಎರಡು ಪದ್ಯಗಳ ಭಾವವನ್ನು ಒಂದು ಪದ್ಯದಲ್ಲಿ ಸಂಗ್ರಹಿಸಿದ್ದಾನೆ.[106] ಭಾರವಿ ಹಲವು ಪದ್ಯಗಳಲ್ಲಿ ವಿಸ್ತಾರವಾಗಿ ವರ್ಣಿಸಿರುವುದನ್ನು ಒಂದು ವೃತ್ತದಲ್ಲಿ ಪಂಪ ಸಂಗ್ರಹಿಸಿದ್ದಾನೆ.[107] 'ಹಿತಂಮನೋಹಾರಿಚ ದುರ್ಲಭಂ ವಚಃ', 'ಕಿವಿಗಿನಿದುಂ ನೃಪಂಗೆ ಹಿತಮುಂ ನುಡಿಯುಂ'; 'ಶಮೇನಸಿದ್ಧಿಂ ಮುನಯೋ ನ ಭೂಭೃತ:', 'ಶಮದಿಂ ಮುನಿಗಾಯ್ತು ಸಿದ್ಧಿ ಭೂಪತಿಗಾಯ್ತೆ'–ಈ ವಾಕ್ಯಗಳನ್ನು ಜತೆಜತೆಯಲ್ಲಿಟ್ಟು ನೋಡಿದರೆ ಪಂಪ ಕೆಲವು ರಸವತ್ತಾದ ವಾಕ್ಯಗಳನ್ನು ಅಲ್ಲಿಯ ಪದಗಳನ್ನೇ ಉಪಯೋಗಿಸಿಕೊಂಡು ಅರ್ಥ ಕೆಡದಂತೆ ಸರಳವಾಗಿ ಅನುವದಿಸಿರುವುದನ್ನು ಕಾಣಬಹುದು. ಈ ಎಲ್ಲ ವಿಷಯಗಳನ್ನು ಪರಿಶೀಲಿಸಿದರೆ ಒಂದಂಶ ಸಿದ್ಧವಾಗುತ್ತದೆ. ಪಂಪನಿಗೆ ಭಾರವಿಯ ಕಾವ್ಯ ಹೃದ್ಗತವಾಗಿದ್ದಿತು ಆ ಕಾವ್ಯಕ್ಕೆ ಪಂಪ ಮಾರುಹೋಗಿದ್ದನು. ತಾನೂ ತನ್ನ ಕಾವ್ಯದಲ್ಲಿ ಅದೇ ಕಥಾ ಭಾಗವನ್ನು ವರ್ಣಿಸಲು ತೊಡಗಿದಾಗ ಭಾರವಿಯ ಪದ್ಯಗಳೂ ವಾಕ್ಯಗಳೂ ಆಯಾ ಸಂದರ್ಭಕ್ಕೆ ತಕ್ಕಂತೆ ಕಣ್ಣಮುಂದೆ ಸುಳಿದು ಅವುಗಳು ಅಲ್ಲಲ್ಲಿ ಪಂಪನ ಕಾವ್ಯರಚನೆಯಲ್ಲಿ ಸೇರಿಹೋದುವು. ಆದುದರಿಂದಲೇ ಎಲ್ಲ ಕಡೆಯಲ್ಲೂ ಭಾರವಿಯ ಪದ್ಯಗಳ ಪೂರ್ಣಾನುವಾದವನ್ನು ನಾವು ಕಾಣದೆ ಇರುವುದು. ಆದರೆ ಅನುವಾದ ಮಾಡಿರುವ ಕಡೆಗಳಲ್ಲೆಲ್ಲ ಭಾರವಿಯ ಹೆಸರನ್ನೂ ಕೆಡಿಸದೆ ತನ್ನ ಹೆಸರಿಗೂ ಕಳಂಕ ಬರದಂತೆ ಪಂಪ ನಡೆದುಕೊಂಡಿರುವುದು ಅವನ ಪ್ರತಿಭಾ ವಿಶೇಷವೇ ಸರಿ.

ಇದುವರೆಗೆ ನೋಡಿದುದರಲ್ಲಿ ಪಂಪಭಾರವಿಯರು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಪ್ರತಿಭಾಶಾಲಿಗಳಾದ ಕವಿಗಳು ಎಂಬುದು ಸಿದ್ಧವಾಗಿದೆ. ಭಾರವಿ ತನ್ನ ಕಾವ್ಯದಲ್ಲಿ ವಿಪುಲವಾಗಿ ವರ್ಣನೆ ಮಾಡಿರುವುದರ ಮೂಲಕ ತನ್ನ ವಿದ್ವತ್ತನ್ನೂ ಕಾವ್ಯ ಪ್ರೌಢಿಯನ್ನೂ ಮೆರೆದಿದ್ದಾನೆಂದು ಹಿಂದೆಯೇ ಗಮನಿಸಿದ್ದೇವೆ. ಪಂಪನೂ ವರ್ಣನೆಯನ್ನು ಮಾಡುವುದರಲ್ಲಿ ತನ್ನ ಶ್ರೇಷ್ಠತೆಯನ್ನು ಎತ್ತಿ ತೋರಿಸದೆ ಇಲ್ಲ. ಆದಿಪುರಾಣವನ್ನು ಪಠಿಸಿದವರಿಗೆ ಈ ಸತ್ಯವೇದ್ಯವಾಗುತ್ತದೆ. ಇಂಥ ಹಿರಿಯ ಕವಿಗಳ ವರ್ಣನಾ ಕೌಶಲವನ್ನು ಕೆಲವೊಂದು ನಿದರ್ಶನಗಳ ಮೂಲಕ ಪರಿಚಯ ಮಾಡಿಕೊಳ್ಳುವ ಕುತೂಹಲವನ್ನು ಬದಿಗೊತ್ತುವುದು ಅಸಾಧ್ಯವೇ ಸರಿ. ಬೇರೆ ಬೇರೆ ಕಡೆಯಿಂದ

---

105. ಇದೇ ಲೇಖನ ಪು. ೧೯೧

106. ಇದೇ ಲೇಖನ ಪು. ೧೮೬ ಮತ್ತು ಪಂ.ಭಾ. VII–51 ಕಿರಾ I-42 ಮತ್ತು 44

107. ಪಂ.ಭಾ. VII–65. ಕಿರಾ. III18-21

108. ಪಂ.ಭಾ. VII–55-58

ಆಯ್ದುಕೊಂಡ ಮೂರು ಉದಾಹರಣೆಗಳ ಮೂಲಕ ಈ ಕವಿಪುಂಗವರ ವರ್ಣನಾ ಕೌಶಲವನ್ನು ಸವಿಯುವುದರಿಂದ ಈ ಲೇಖನದ ವ್ಯಾಪ್ತಿಯನ್ನು ಮೀರಿದಂತಾಗುವುದಿಲ್ಲವೆಂದು ಭಾವಿಸಬಹುದಲ್ಲವೆ? ಮೊದಲು ಕಿರಾತಾರ್ಜುನಲೀಲಾಪ್ರಸಂಗದ ಸಂದರ್ಭದಲ್ಲಿ ಬಂದಿರುವ ಎರಡು ವರ್ಣನೆಗಳನ್ನು ವೀಕ್ಷಿಸೋಣ.

ಭಾರವಿಯು ಇಂದ್ರಕೀಲದ ಪ್ರಾಕೃತ ಸೊಬಗನ್ನು ಮನದಣಿಯೆ ವರ್ಣಿಸಿದ್ದಾನೆ. ಅಲ್ಲಿ ಬರುವ ಹೂಗಿಡ ಮರಬಳ್ಳಿಗಳ ಚಿತ್ರ ಹೃದಯಂಗಮವಾಗಿದೆ. ಈ ಸಂದರ್ಭದಲ್ಲಿ ಬರುವ ಒಂದು ವರ್ಣನೆಯನ್ನು ಅವಲೋಕಿಸೋಣ:

ಪತಂತಿ ನಾಸ್ಮಿನ್ವಿಶದಾಃ ಪತತ್ರಿಣೋ ಧೃತೇಂದ್ರಚಾಪಾ ನ ಪಯೋದ ಪಂಕ್ತಯಃ ।
ತಥಾಪಿ ಪುಷ್ಣಾತಿ ನಭಃ ಶ್ರಿಯಂ ಪರಾಂ ನ ರಮ್ಯಮಾಹಾರ್ಯಮಪೇಕ್ಷತೇಗುಣಮ್ ॥[109]

(ಬೆಳ್ಳಕ್ಕಿಗಳು ಹಾರಾಡುವುದಿಲ್ಲ, ಕಾಮನಬಿಲ್ಲು ಕಟ್ಟಿದ ಮೋಡವು ಮೂಡುವುದಿಲ್ಲ. ಆದರೂ ಈ ಅಂತರಿಕ್ಷವು ಒಂದು ನವೀನ ಶೋಭೆಯನ್ನು ಪಡೆದಿದೆ. ಸ್ವಾಭಾವಿಕವಾಗಿ ರಮ್ಯವಾದುದು ಬೇರೆ ಅಲಂಕಾರವಾವುದನ್ನೂ ಅಪೇಕ್ಷಿಸುವುದಿಲ್ಲ.) ಇದು ಶರತ್ಕಾಲದ ಗಗನದ ವರ್ಣನೆ.

ಈಗ ಪಂಪನ ವರ್ಣನೆಯನ್ನು ನೋಡೋಣ:

ಪುಳಿಯೊಳ್ ಕರ್ಚಿದ ಬಾಳ ಬಣ್ಣಮನೆ ಪೋಲ್ತಾಕಾಶಮಾಕಾಶಮುಂ ।
ಡಳಮುಂ ಪರ್ವಿದ ಬೆಳ್ಮುಗಿಲ್ ಮುಗಿಲ ಬೆಳ್ಪೊಳ್ಪೊಕ್ಕು ತಳ್ಪೊಯ್ಯೆ ಬ ।
ಳ್ವಳ ನೀಳ್ದಿರ್ದ ದಿಶಾಳಿ ಶಾಳಿವನ ಗಂಧಾಂಧದ್ವಿರೇಫಾಳಿ ಕ ।
ಣ್ಗೊಳಿಸಿತ್ತೊರ್ಮೆಯೆ ಬಂದುದಂದು ಶರದಂ ಲೋಕಕ್ಕೆ ಕಣ್ ಬರ್ಪಿನಂ ॥ 110

ಈ ಎರಡು ಪದ್ಯಗಳಲ್ಲಿಯೂ ಶರತ್ಕಾಲದ ಗಗನದ ವರ್ಣನೆ ಇದೆ. ಭಾರವಿಯ ದೃಷ್ಟಿಗಿಂತಲೂ ಪಂಪನದೃಷ್ಟಿ ಇಲ್ಲಿ ಸೂಕ್ಷ್ಮವಾದುದೆಂದು ತೋರುತ್ತದೆ. ಹುಣಿಸೆ ಹಣ್ಣಿನಲ್ಲಿ ಕತ್ತಿಯನ್ನು ತೊಳೆದ ಮೇಲೆ ಅದರ ಬಣ್ಣ ಅಲ್ಪವಾದ ನೀಲಿಯ ಛಾಯೆಯಿಂದ ಕೂಡಿರುತ್ತದೆ. ಇದನ್ನು ಶರತ್ಕಾಲದ ಗಗನದ ಬಣ್ಣಕ್ಕೆ ಹೋಲಿಸಿರುವುದನ್ನು ನೋಡಿದರೆ ಪಂಪನ ಪ್ರಕೃತಿವೀಕ್ಷಣೆಯ ಸೂಕ್ಷ್ಮತೆಯು ವ್ಯಕ್ತಪಡುತ್ತದೆ. ಲೋಕಕ್ಕೆ ಕಣ್ಣುಬರುವಂತೆ ಶರತ್ಕಾಲ ಬಂದಿತೆಂದು ವರ್ಣಿಸಿರುವುದು ಈ ಪದ್ಯಕ್ಕೆ ಒಂದು ಹೆಚ್ಚಿನ ಮೆರುಗನ್ನು ಕೊಟ್ಟಿದೆ. ಭಾರವಿ ಅರ್ಥಾಂತರನ್ಯಾಸ ಅಲಂಕಾರವನ್ನು ತನ್ನ ಪದ್ಯದಲ್ಲಿ ತಂದಿದ್ದರೆ ಪಂಪ ಏಕಾವಳಿಯನ್ನು ತಂದಿದ್ದಾನೆ.

'ಕಿರಾತಾರ್ಜುನೀಯ'ದಲ್ಲಿನ ಕೈಲಾಸ ವರ್ಣನೆಯ ಒಂದು ಚಿತ್ರವನ್ನು ಈ ಕೆಳಗಿನ ಪದ್ಯದಲ್ಲಿ ಕಾಣಬಹುದು:

---

109. ಕಿರಾ. IV-23. ಇದರೊಡನೆ ಕಿರಾ. IV-29 ನ್ನೂ ನೋಡಬಹುದು.
110. ಪಂ. ಭಾ. VII-71.

ಅವಿರತೋಜ್ಝಿತವಾರಿವಿಪಾಂಡುಭಿರ್ವಿರಹಿತೈರಚಿರದ್ಯುತಿ ತೇಜಸಾ ।
ಉದಿತಪಕ್ಷಮಿವಾರತನಿಃಸ್ವನೈಃ ಪೃಥನಿತಂಬವಿಲಂಬಿಭಿರಂಬುದೈಃ ॥ 111

[ಮಿಂಚಿನ ಹೊಳಪಿನಿಂದ ವಿರಹಿತವಾದ, ಒಂದೇ ಸಮನಾಗಿ ಮಳೆಯನ್ನು ಸುರಿಸಿ ನೀರನ್ನು ಕಳೆದುಕೊಂಡ ಬಿಳಿಯ ಮೋಡಗಳು ಪ್ರಶಾಂತವಾಗಿ ಗುಡುಗುತ್ತ ಮಹಾ ಪರ್ವತದ ಅಕ್ಕಪಕ್ಕಗಳಲ್ಲಿರುವುದರಿಂದ ಆ ಪರ್ವತಕ್ಕೆ ರೆಕ್ಕೆ ಮೂಡಿಬಂದಂತಾಗಿದೆ.]

ಪಂಪ ಭಾರತದಲ್ಲಿ ಬಂದಿರುವ ಕೈಲಾಸವರ್ಣನೆಯನ್ನು ನೋಡೋಣ:

ವಿದಳತ್ಕುಂದ ಶಶಾಂಕ ಶಂಖ ಧವಳಂ ಗಂಧೇಭ ದಾನಾಂಬು ಪೂ ।
ರ್ಣದರೀ ಸುಂದರ ಕಂದರಂ, ಮೃಗಪತಿ ಪ್ರಧ್ವಾನಗರ್ಜದ್ಗುಹಂ ।
ಮದಿರೋನ್ಮತ್ತ ನಿಳಿಂಪ ಕಿಂಪುರುಷ ಕಾಂತಾರಬ್ಧ ಸಂಗೀತನುೌ+ಬ ।
ಪ್ಪಿದುದಲ್ತೇ ಸುರಸಿದ್ಧ ದಂಪತಿ ರತಿಶ್ರೀ ರಮ್ಯ ಹೈಮಾಚಳಂ ॥112

ಹಿಮವತ್ ಪರ್ವತಕ್ಕೆ ಇಕ್ಕೆಲಗಳಲ್ಲೂ ಬಿಳಿಯ ಮೋಡಗಳ ಸಂಬಂಧವು ಉಂಟಾದುದರಿಂದ ಹಿಂದೆ ರೆಕ್ಕೆಯನ್ನು ಇಂದ್ರನಿಂದ ಕಳೆದುಕೊಂಡಿದ್ದರೂ ಈಗ ಪುನಃ ರೆಕ್ಕೆಯನ್ನು ಪಡೆದಂತೆ ಉತ್ಪ್ರೇಕ್ಷೆಮಾಡಿ ಭಾರವಿ ವರ್ಣಿಸಿದ್ದಾನೆ. ಇಲ್ಲಿ ಭಾರವಿಯ ಕಲ್ಪನಾಲೋಕದಿಂದ ಒಂದು ಸೃಷ್ಟಿ ಚಿತ್ರ ಎದ್ದು ಬಂದಿದೆ. ಪಂಪ ಕೈಲಾಸ ಪರ್ವತದ ಸಂಬಂಧದಲ್ಲಿ ನಾವು ಏನೇನನ್ನು ಆಲೋಚಿಸಬಹುದೊ, ಏನೇನನ್ನು ಕಲ್ಪಿಸಿಕೊಳ್ಳ ಬಹುದೋ ಅದಕ್ಕೆಲ್ಲ ಸಹಾಯವಾಗುವಂಥ ಒಂದು ಶಬ್ದ ಚಿತ್ರವನ್ನು ನಮ್ಮ ಮುಂದೆ ಇಟ್ಟಿದ್ದಾನೆ. ಮದಿರೆಯನ್ನು ಕುಡಿದು ಉನ್ಮತ್ತರಾದ ಕಿಂಪುರುಷರು ಹಾಡಿದ ಹಾಡು ಹಿಮಾಲಯದ ಕಾಡುಗಳಲ್ಲಿ ಅಲೆಯುತ್ತಿದೆ ಎಂದು ಕೇಳಿದಾಗ ಯಾವುದೋ ಒಂದು ಮೌನದೇವಗಾನ ನಮ್ಮ ಕಿವಿಗಳಲ್ಲಿ ಸುಳಿದಂತೆ ಆಗುವುದರಲ್ಲಿ ಆಶ್ಚರ್ಯವಿಲ್ಲ.

ಪಂಪಭಾರವಿಯರ ಸ್ವತಂತ್ರವಾದ ಸುಂದರವಾದ ಒಂದೊಂದು ವರ್ಣನೆಯ ಸೊಗಸನ್ನು ಈಗ ಕಾಣೋಣ. ಗಂಗಾನದಿಯ ದಂಡೆಯ ಮರಳಿನ ವರ್ಣನೆಯಿದು:

ಕೃತೋರ್ಮಿರೇಖಂ ಶಿಥಿಲತ್ವಮಾಯತಾ ಶನೈಃ ಶನೈಃ ಶಾಂತರಯೇಣ ವಾರಿಣಾ ।
ನಿರೀಕ್ಷ್ಯ ರೇಮೇ ಸ ಸಮುದ್ರಯೋಷಿತಾಂ ತರಂಗಿತ ಕ್ಷೌಮವಿಪಾಂಡು ಸೈಕತಂ ॥ 113

[ದಿನೇದಿನೇ ಇಳಿಯುತ್ತ ನಿಧಾನವಾಗಿ ಶಾಂತವಾಗುತ್ತಿರುವ ಪ್ರವಾಹದ ನೀರಿನ ಅಲೆಗಳ ತಗುಲುವಿಕೆಯಿಂದುಂಟಾದ ರೇಖೆಗಳು ಮೂಡಿ ತರಂಗದಂತೆ ಕಾಣುವ, ಶುಭ್ರವಾದ ಬಿಳಿಯ ದುಕೂಲದಂತೆ ಬೆಳ್ಳಗಿರುವ ಗಂಗಾನದಿಯ ದಡದ ಮರಳನ್ನು ಅರ್ಜುನನು ವೀಕ್ಷಿಸಿ ಆನಂದಿಸಿದನು.]

---

111. ಕಿರಾ. V-6.

112. ಪಂ. ಭಾ. VII-72.

113. ಕಿರಾ. IV-6.

ಇದರೊಡನೆ ಪಂಪನ ಪದ್ಯದ ಸೌಂದರ್ಯವನ್ನು ಸವಿಯೋಣ:

ತಡಿವಿಡಿದು ಪೂತಲತೆಗಳ
ನೊಡನೊಡನೆಲರಲೆಯೆ ಬಿಡದೆ ಸುರಿವಲರ್ಗಳನಂ।
ದೆಡೆಗುಡದೆ ನೂಂಕಿ ಮೆಲ್ಲನೆ
ತಡಿಯಂ ಸಾರ್ಚಿದಪವಿದೞ ಬಂಬಲ್ದೆರೆಗಳ್ ॥

ಪಂಪಭಾರವಿಯರ ಈ ಪದ್ಯಗಳು ರಸಭಾವಗಳಿಂದ ತುಂಬಿಯೂ ಶಬ್ದಮಾಧುರ್ಯಯುತವಾಗಿಯೂ ಇವೆ ಎಂಬುದರಲ್ಲಿ ಎರಡಿಲ್ಲ. ಈ ಎರಡು ಕವನಗಳ ವಿಷಯಗಳೂ ಬೇರೆಬೇರೆ ನಿಜ. ಆದರೆ ಆಯಾ ಕವಿಗಳ ಕಾವ್ಯರಚನಾ ಸಾಮರ್ಥ್ಯವನ್ನು ಇವು ಸ್ಪಷ್ಟವಾಗಿ ತಿಳಿಸುತ್ತವೆಯೆಂಬುದರಲ್ಲಿ ಸಂದೇಹವಿಲ್ಲ ನದಿಯು ಇಳಿಮುಖವಾಗುತ್ತಿದೆ, ಪ್ರವಾಹ ಇಳಿಯುತ್ತಿದೆ. ಪ್ರವಾಹ ಇಳಿದಂತೆಲ್ಲ ದಡದ ಶುಭ್ರವಾದ ಮರಳಿನ ಮೇಲೆ ಅಲೆಗಳ ತಗಲುವಿಕೆಯಿಂದುಂಟಾದ ರೇಖೆಗಳು ತೆರೆತೆರೆಯಾಗಿ ಕಾಣಿಸುತ್ತವೆ. ಯಾವರೀತಿ ಅಲೆಗಳು ನಿಧಾನವಾಗಿ ಬಂದು ಮರಳಿನ ಮೇಲೆ ಗೆರೆಯನ್ನು ಮೂಡಿಸಿ ಹಿಂದಕ್ಕೆ ಹೋಗುತ್ತವೆಯೋ ಅದೇರೀತಿ ಶಬ್ದಗಳ ಓಟವೂ ಇರುವುದನ್ನು ಕಾಣಬಹುದು. ‘ಶನ್ಯೈ: ಶನ್ಯೈ: ಶಾಂತರಯೇಣವಾರಿಣಾ’ ಎಂದಾಗ ನೀರಿನ ಅಲೆಯೇ ನಮ್ಮ ಕಣ್ಣಿನೆದುರಿಗೆ ಬಂದಂತೆ ಕಾಣುವುದು ಪಂಪನ ಕವನದಲ್ಲಿ ಕೂಡ ಇದೇ ಸೌಂದರ್ಯವನ್ನು ಕಾಣುತ್ತೇವೆ. ದಡದಲ್ಲಿರುವ ಹೂವು ಬಿಟ್ಟಿರುವ ಬಳ್ಳಿಗಳನ್ನೂ, ಗಾಳಿ ಮಂದವಾಗಿ ಬೀಸುವುದರಿಂದ ನೀರಿನ ಮೇಲೆ ಬೀಳುವ ಹೂವುಗಳನ್ನೂ ನದಿಯ ತರಂಗಾವಳಿಗಳು ಮೆಲ್ಲನೆ ದಡಕ್ಕೆ ತಳ್ಳುತ್ತಿವೆಯಂತೆ. ವನದಲ್ಲಿ ಸುಂದರತಮವಾದ ಪ್ರಕೃತಿದೃಶ್ಯದ ನಡುವೆ ಹರಿಯುವ ನದಿಯ ದಡವನ್ನು ವೀಕ್ಷಿಸಿದವರಿಗೆ ಈ ಪದ್ಯದ ಭಾವ ತಕ್ಷಣ ಮನದಟ್ಟಾಗುವುದು. ಸಾಲುಸಾಲಾಗಿ ಅಲೆಯಂತೆ ನದಿಯ ದಡದಲ್ಲಿ ಒತ್ತಲ್ಪಟ್ಟಿರುವ ಹೂವುಗಳನ್ನು ಪಂಪ ಇಲ್ಲಿ ವರ್ಣಿಸಿದ್ದಾನೆ. ಇಲ್ಲಿಯ ಶಬ್ದ ಜೋಡಣೆಯು ವರ್ಣಿತವಾಗಿರುವ ಭಾವಕ್ಕೆ ತಕ್ಕಂತೆ ಮಧುರವಾಗಿದೆ. ಶಬ್ದಗಳು ಕಿವಿಯ ಮೇಲೆ ಬೀಳುತ್ತಿದ್ದಂತೆ ಆಯಾ ಶಬ್ದಗಳ ಮೂಲಕ ಹೊರಪಡಬೇಕಾದ ಭಾವವು ಅರ್ಥಜ್ಞಾನವಾಗುವುದಕ್ಕೆ ಮೊದಲೇ ಅದರ ಧ್ವನಿಯಿಂದ ನಮಗೆ ವೇದ್ಯವಾಗುತ್ತದೆ. ಈ ಕವಿಶ್ರೇಷ್ಠರ ಇಂಥ ಹಲವಾರು ನಿದರ್ಶನಗಳನ್ನು ಕೊಡಬಹುದು. ಅವರ ಕಾವ್ಯ ವಿಹಾರ ಮಾಡಲಿಚ್ಛಿಸುವ ರಸಿಕರ ಮನಸ್ಸನ್ನು ಆಕರ್ಷಿಸುವುದಕ್ಕೆ ಈ ಒಂದೆರಡು ನಿದರ್ಶನಗಳೇ ಸಾಕು.

ಭಾರವಿಯ ಕಾವ್ಯದ ಗುಣ ‘ ಅರ್ಥಗೌರವ ’ವೆಂದು ಹೇಳಿರುವ ಪ್ರಸಿದ್ಧವಾಕ್ಯ ಸರ್ವವಿದಿತವಾಗಿದೆ. ‘ಸೂರ್ಯನ ತೇಜಸ್ಸಿನಂತೆ ವಿಶೇಷವಾಗಿ ಪ್ರಕಾಶಿಸುವುದು ಭಾರವಿಯ ಶೈಲಿ ’ಯೆಂದು ಇನ್ನೊಂದು ಉಕ್ತಿಯಿದೆ ಮಲ್ಲಿನಾಥ ಭಾರವಿಯ ಶೈಲಿಯನ್ನು ಕುರಿತು ಹೇಳಿರುವ ಮಾತು ಸತ್ಯವಾಗಿ ಕಾಣುತ್ತದೆ:

ನಾರಿಕೇಲಫಲಸಂಮಿತಂ ವಚೋ ಭಾರವೇಃ ಸಪದಿ ತದ್ವಿಭಜ್ಯತೇ ।
ಸ್ವಾದಯಂತು ರಸಗರ್ಭನಿರ್ಭರಂ ಸಾರಮಸ್ಯ ರಸಿಕಾ ಯಥೇಪ್ಸಿತಂ ॥

ಕರಟದ ಒಳಗೆ ಅಡಗಿರುವ ಎಳನೀರಿನ ಹಾಗೆ ಸ್ವಾದು, ಒಳಗಿನ ತೆಂಗಿನ ಕಾಯಿಯಂತೆ ಸಿಹಿ ತಿರುಳುಳ್ಳದ್ದು ಭಾರವಿಯ ಕಾವ್ಯ. ಸ್ವಲ್ಪ ಕಷ್ಟಪಟ್ಟು ಜುಂಗನ್ನು ಬಿಡಿಸಿ ಕರಟವನ್ನು ಒಡೆದು ನೋಡುವವರಿಗೇ ಅದರ ಫಲ. ಆದರೆ ಪಂಪನ ಶೈಲಿ ಸಿಹಿಮಾವಿನ ಹಣ್ಣಿನಂತೆ, ಕೈಗೆ ತೆಗೆದುಕೊಳ್ಳುವುದೇ ತಡ ಮೃದು ಮಧುರ, ಬಾಯ್‌ಸವಿ.

ಕೆ. ಎಸ್. ಕೃಷ್ಣಮೂರ್ತಿ

# ಯಕ್ಷಗಾನ ಕೃತಿಗಳ ಛಂದಸ್ಸು

ಪ್ರೊಫೆಸರ್ ಎ. ಆರ್. ಕೃಷ್ಣಶಾಸ್ತ್ರಿಗಳಿಗರ್ಪಿಸುವ ಸಂಭಾವನೆಯ ಗ್ರಂಥಕ್ಕೆ ಲೇಖನ ಬರೆಯಲು ವಿಷಯವೊಂದನ್ನು ಆರಿಸುವ ಸಮಸ್ಯೆಯನ್ನು ಬಿಡಿಸುವಾಗ ಕನ್ನಡ ಯಕ್ಷಗಾನಗಳ ವಿಷಯವಾಗಿ ಬರೆಯಬಹುದೆಂಬ ಆಲೋಚನೆ ಬಂದಿತು. ಇದಕ್ಕೊಂದು ಕಾರಣವುಂಟು. ನಾನು ಯಕ್ಷಗಾನಕೃತಿಗಳ ಬಗ್ಗೆ ಸಂಶೋಧನೆ, ವ್ಯಾಸಂಗ ಮಾಡಲು ಬಹು ಮಟ್ಟಿಗೆ ಕಾರಣರು ಶ್ರೀಮಾನ್ ಕೃಷ್ಣಶಾಸ್ತ್ರಿಗಳು. ಕನ್ನಡ ಎಂ.ಎ. ಪದವೀ ಪರೀಕ್ಷೆಗೆ ಪಠ್ಯವಿಷಯವಾಗಿ "ಕನ್ನಡ ಸಾಹಿತ್ಯದಲ್ಲಿ ಯಕ್ಷಗಾನಗಳು" ಎಂಬ ವಿಷಯವನ್ನು ಆರಿಸಿ ಅಮೂಲ್ಯವಾದ ಅನೇಕ ಸಲಹೆಗಳನ್ನಿತ್ತು ನನ್ನ ವ್ಯಾಸಂಗ ಮುಂದುವರಿದಂತೆಲ್ಲಾ, ಅದನ್ನು ಪರಿಶೀಲಿಸಿ ತಿದ್ದಿ ಪ್ರೋತ್ಸಾಹಕೊಟ್ಟು ಈ ವಿಷಯವಾಗಿ ಕನ್ನಡದಲ್ಲಿ ಒಂದು ಒಳ್ಳೆಯ ಗ್ರಂಥವನ್ನು ನಾನು ಬರೆಯಬೇಕೆಂದು ಹೇಳಿ ಬೆನ್ನು ತಟ್ಟಿದವರು ಪ್ರೊ ಎ.ಆರ್. ಕೃಷ್ಣಶಾಸ್ತ್ರಿಗಳು ಮತ್ತು ಪ್ರೊ. ಕೆ.ವಿ. ಪುಟ್ಟಪ್ಪನವರು. ಪರೀಕ್ಷೆಮುಗಿದ ಮೇಲೆ ವ್ಯಾಸಂಗವೂ ನಿಂತು ಕೆಲಕಾಲ ಜೀವನದ ಹೋರಾಟಕ್ಕೆ ಪ್ರಾರಂಭವಾಯಿತು. ಕೆಲವು ವರ್ಷಗಳ ಅನಂತರ, ವಿಶ್ವವಿದ್ಯಾನಿಲಯದಲ್ಲೇ ಇದ್ದು ವ್ಯಾಸಂಗ, ಸಂಶೋಧನೆಗಳಿಗೆ ಅನುಕೂಲವಾಗುವಂತಹ ಜೀವನ ಮಾರ್ಗ ಒಂದನ್ನು ಪ್ರಯಾಸದಿಂದ ದೊರಕಿಸಿಕೊಂಡಮೇಲೆ ಈ ವ್ಯಾಸಂಗವೂ ಮುಂದುವರಿಯುವ ಸದವಕಾಶ ಸಿಕ್ಕಿತು.[1]

ಹೀಗೆ ಪ್ರೊ. ಕೃಷ್ಣಶಾಸ್ತ್ರಿಗಳಿಗೂ ನನ್ನ ಈ ವಿಷಯ ವ್ಯಾಸಂಗಕ್ಕೂ ಇಂತಹ ಸಂಬಂಧವೊಂದಿರುವುದರಿಂದ ಅವರಿಗರ್ಪಿಸುವ ಗ್ರಂಥಕ್ಕೆ ಯಕ್ಷಗಾನಗಳ ವ್ಯಾಸಂಗಕ್ಕೆ ಸಂಬಂಧಿಸಿದ ಯಾವುದಾದರೂ ಒಂದು ವಿಷಯವನ್ನು ಕುರಿತು, ವ್ಯವಸ್ಥಾಪಕರ ಪುಟ ಸಂಖ್ಯೆಯ ನಿಯಮವನ್ನು ಮೀರದಂತೆ ಒಂದು ಸಣ್ಣ ಲೇಖನವನ್ನು ಕೊಡಬಹುದೆಂದು ಯೋಚಿಸಿದೆನು.

ಪ್ರೊ. ಕೃಷ್ಣಶಾಸ್ತ್ರಿಗಳ ಸಂಸ್ಕೃತ, ಕನ್ನಡ, ಇಂಗ್ಲಿಷ್ ಭಾಷೆಗಳ ಪಾಂಡಿತ್ಯ ಅಸಾಧಾರಣವಾದುದು. ಅವರ ಅಲಂಕಾರ ಶಾಸ್ತ್ರ, ಕಾವ್ಯಮೀಮಾಂಸೆ, ರಸಪ್ರಕರಣಗಳನ್ನು ಕುರಿತ ತರಗತಿಯ ಉಪನ್ಯಾಸಗಳನ್ನು ಅವರ ವಿದ್ಯಾರ್ಥಿಗಳು ಎಂದೂ ಮರೆಯಲಾರರು. ಅವರ ಪಾಠ ಒಂದು 'ಚೂಯಿಂಗ್ ಗಂ' (Chewing gum) ಇದ್ದಂತೆ ಸದಾ ಸಿಹಿಯನ್ನೀಯುತ್ತಾ ಬಹುಕಾಲ ಸ್ಮರಣೆಯಲ್ಲಿ ನಿಲ್ಲತಕ್ಕದ್ದು. ಅವರ

---

1 "ಯಕ್ಷಗಾನ ಸಾಹಿತ್ಯ" ಎಂಬ ಹೆಸರಿನ ನನ್ನ ಪುಸ್ತಕವೊಂದು ಧಾರವಾಡದ 'ಮಿಂಚಿನ ಬಳ್ಳಿ ಪ್ರಕಟನ ಮಾಲೆ'ಯ ಮಿತ್ರರಿಂದ ಸದ್ಯದಲ್ಲೇ ಹೊರಬೀಳಲಿದೆ.

ಕನ್ನಡ ನುಡಿ ಸೇವೆ ಅಪಾರವಾದುದು, ಅಮೂಲ್ಯವಾದುದು. ಅಂತಹ ಹಿರಿಯ ಸಾಹಿತ್ಯ ಭಕ್ತರಿಗೆ ಕಿರಿಯ ಕಾಣಿಕೆಯಾಗಿ ಈ ಕಿರುಲೇಖನವನ್ನು ವಿನಯ ಗೌರವ ಪೂರ್ವಕವಾಗಿ ಅರ್ಪಿಸುತ್ತಿದ್ದೇನೆ.

ಯಕ್ಷಗಾನ ಎಂಬುದು ಮೂಲದಲ್ಲಿ ನೃತ್ಯಪ್ರಧಾನವಾದುದು. ಕಾಲ ಕ್ರಮದಲ್ಲಿ ಸಾಹಿತ್ಯವೂ ಅದಕ್ಕೆ ಸೇರಿತು. ಗದ್ಯಪದ್ಯಗಳ ಯಾವ ಸಹಾಯವೂ ಇಲ್ಲದೆ ಕೇವಲ ಕುಣಿತವೊಂದರಿಂದಲೇ ವಿವಿಧಭಾವಗಳನ್ನು ಸ್ಪಷ್ಟವಾಗಿ ಪ್ರದರ್ಶಿಸಿ, ನೋಟಕರ ಮೇಲೆ ಪ್ರಭಾವ ಬೀರುವುದನ್ನು ಇಂದೂ ಯಕ್ಷಗಾನ ಪ್ರದರ್ಶನಗಳಲ್ಲಿ ನೋಡ ಬಹುದು. ಸಾಹಿತ್ಯ ಸೇರಿದಾಗ ಮೊದಲು ಪದ್ಯ, ಅನಂತರ ಗದ್ಯ ಬಂದಿತು. ಗದ್ಯಪದ್ಯ ಮಿಶ್ರಿತವಾದ ಯಕ್ಷಗಾನ ಕೃತಿಗಳೂ ಇವೆ

ಪದ್ಯ ಎಂದಕೂಡಲೇ ಅದರೊಂದಿಗೇ ಬರುವುದು ಛಂದಸ್ಸು. ಮಾತುಗಳ ಬಗೆ ಬಗೆಯ ಕುಣಿತವೇ ಛಂದಸ್ಸು. ಅನಾದಿಕಾಲದಿಂದಲೂ ಈ ಛಂದಸ್ಸಿನ ನಿಯಮಗಳಿ ಗೊಳಪಟ್ಟೇ ಸಾಹಿತ್ಯ ರಚಿತವಾಗಿದೆ. ನಿಯಮವಿಲ್ಲದುದು ಯಾವುದು? ನಿಸರ್ಗದಲ್ಲೇ ಒಂದು ನಿಯಮವಿಲ್ಲವೆ? ಚೇತನಲೋಕ ಮಾಡುವ ಎಲ್ಲ ಕೆಲಸಗಳ ತಳಹದಿಯಾಗಿ ಒಂದು ನಿಯಮವಿದ್ದೇ ಇದೆಯಲ್ಲವೆ? ಹಾಗೆಯೇ ಪದ್ಯ ಸಾಹಿತ್ಯ ಒಂದು ನಿಯಮ ವನ್ನನುಸರಿಸುತ್ತದೆ. ಅದಕ್ಕೆ ಛಂದಸ್ಸು ಎನ್ನುತ್ತಾರೆ.

ಭಾಷೆಗೆ ವ್ಯಾಕರಣದಂತೆ ಛಂದಸ್ಸೂ ಸಾಧಕ. ವ್ಯಾಕರಣ ಗದ್ಯಪದ್ಯಗಳೆರ ಡಕ್ಕೂ ಅಗತ್ಯವಾಗಿದ್ದರೆ, ಛಂದಸ್ಸು ಪದ್ಯ ಒಂದಕ್ಕೆ ಮಾತ್ರ ಆವಶ್ಯಕ. ಕವನ ರಚ ನೆಯ ನಿಯಮವನ್ನು ಛಂದಸ್ ಶಾಸ್ತ್ರ ತಿಳಿಸುತ್ತದೆ. "ಛದ್" ಎಂದರೆ ಕುಣಿ ಎಂದರ್ಥ. ಮಾತುಗಳ ವಿವಿಧ ಬಗೆಯ ಕುಣಿತ ಕಾವ್ಯಕ್ಕೆ ಕಳೆಕೊಡುತ್ತದೆ.

ಯಕ್ಷಗಾನ ಕೃತಿಗಳಲ್ಲಿ ಕಾಣುವ ಕಾವ್ಯಭಾಗಗಳು ಛಂದಸ್ಸಿನ ನಿಯಮಗಳನ್ನು ಅನುಸರಿಸಿವೆ. ಆ ಕೃತಿಗಳಲ್ಲಿ ಕಂಡುಬರುವ ಛಂದಸ್ಸು, ಅದರ ವೈವಿಧ್ಯ ಗಮನಾರ್ಹ ವಾದುದು. ಛಂದಸ್ಸಿನ ನಿಯಮಗಳನ್ನು ಚಾಚೂತಪ್ಪದೆ ಶಾಸ್ತ್ರೀಯವಾಗಿ ಅನುಸರಿ ಸುವುದು ಯಕ್ಷಗಾನ ಕೃತಿಗಳಲ್ಲಿ ಕಂಡು ಬರುವುದು ಕಷ್ಟವಾದರೂ, ಕನ್ನಡ ಯಕ್ಷಗಾನ ಕೃತಿಗಳ ವಿಷಯದಲ್ಲಿ ಹೀಗೆ ಹೇಳಲಾಗದು. ಹಾಡಲನುಕೂಲವಾಗುವ ಮಾತ್ರಾಛಂದ ಸ್ಸಿನ ನಿಯಮಗಳನ್ನು ಚೆನ್ನಾಗಿ ಅಳವಡಿಸಿ ಅನುಸರಿಸಿ ಜೋಡಿಸಿರುವುದರಿಂದ— ಎಂದು ವಿದ್ವಾಂಸರು ಹೇಳಿದ್ದಾರೆ.[2] ಇದು ಕನ್ನಡ ಯಕ್ಷಗಾನ ಕವಿಗಳ ಒಂದು ಹೆಮ್ಮೆ.

---

2. "Yakshagana is poetry written rather to suit an air, rather than according to the strict rules of Prosody"–

—Mr. S. V. B.

"But such licence is not to take place in Canarese, as it includes all the metres that are fit for being changed. Kandas, Ragales and Shatpadis, e. g Sitakalyana Yakshagana"—

—F. Kittel: intorduction to Nagavarma's prosody

೧೨ ನೆಯ ಶತಮಾನದ ಹಿಂದಿನ ಕನ್ನಡ ಸಾಹಿತ್ಯಕೃತಿಗಳಲ್ಲಿ ಬಳಸಿರುವ ಛಂದಸ್ಸು ಕೂಡ ಸಂಸ್ಕೃತದ ಪ್ರಭಾವವನ್ನು ಎತ್ತಿ ತೋರಿಸುತ್ತದೆ. ಅಲ್ಲಲ್ಲೇ ಕೆಲವು ಶುದ್ಧ ಕನ್ನಡ ಛಂದಸ್ಸಿನ ಪ್ರಯೋಗಗಳಿದ್ದರೂ ಹೆಚ್ಚು ಭಾಗ ಸಂಸ್ಕೃತ ಛಂದಸ್ಸನ್ನೇ ಅನುಸರಿಸಿವೆ. ಹರಿಹರ, ರಾಘವಾಂಕ ಮತ್ತು ಶಿವಶರಣರ ಕೃತಿಗಳಿಂದಲೇ ದೇಶೀಯ ಛಂದಸ್ಸು ಹೆಚ್ಚು ಬಳಕೆಯ ಬೆಳಕನ್ನು ಕಂಡಿತು.

ಜಾನಪದ ಕಲೆಯಾದ ಯಕ್ಷಗಾನಕೃತಿಗಳಲ್ಲಿಯೂ ಈ ವಿಧವಾದ ದೇಶೀಯ ಛಂದಸ್ಸಿನ ವಿವಿಧ ಪ್ರಯೋಗಗಳನ್ನು ಕಾಣಬಹುದು. ಸಂಸ್ಕೃತದಿಂದ ತೆಗೆದುಕೊಂಡ ಕಂದವೃತ್ತಗಳ ಬಳಕೆ ಅಷ್ಟಾಗಿ ಇಲ್ಲಿ ಕಂಡುಬಾರದು.[3] 'ದ್ರಾವಿಡಸತ್ವ' ಇವುಗಳಲ್ಲಿ ತುಂಬಿದೆ.

ಕನ್ನಡ ಯಕ್ಷಗಾನ ಕೃತಿಗಳಲ್ಲಿ ಕಂಡುಬರುವ ಛಂದಸ್ಸಿನ ವಿವಿಧ ರೀತಿಗಳು ಹೀಗಿವೆ.

ವೆಂಕಟೇಶಮಹಾತ್ಮೆಯೆಂಬ 'ಭಾಗಾನಗರದ ಕಥೆ' ಯಕ್ಷಗಾನ ಗ್ರಂಥದಿಂದ–

೧. ಕಟಕ—(ಪುಟ ೩)

ಶ್ರೀನಿವಾಸನೆ ಭಕ್ತರ ಬಂಧು। ನಂಬಿದೆ ರಕ್ಷಿಸುಯೆಂದು। ಶ್ರೀನಿವಾಸ ॥ಪ॥
ಮಾನಿನಿ ದ್ರೌಪದಿ ಮಾನವ ಕಾಯ್ದನೆ। ಹೀನರ ಮನಗರ್ವವನ್ನೆಲ್ಲಿಳಿಸಿ।
ದನೆ ಸಾನುರಾಗದಿ ಪ್ರಲ್ಹಾದನ ಕಾಯ್ದನೆ। ಧ್ಯಾನಿಸಿದಾ ಗಜರಾ।
ಜನ ಪೊರೆದನೆ। ಮುಂನಿಸಿಮುಕರಿಗೆ ಮುಕ್ತಿಯನಿತ್ತನೆ ॥

೨. ಕಂದ—(ಪುಟ ೩)

ಶೇಷ ಗಿರೀಶನೆ ನಿಂನಯ
ವಾಸಿಯ ಪೊಗಳುವುದಕಾದಿಶೇಷನಿಗೊಳವೆ।
ದಾಸಳ ಪೋಷಿಸಿ ಶ್ರೀಶನೆ
ಕೂಸಿನ ನೀನಿತ್ತು ಕಾಯೊ ಪೆಂಗಳಪ್ರೇಮ ॥

೩. ಲಾವಣಿ—(ಪುಟ ೩)

ಸತಿಪತಿ ಮಾಡಿದ ಕ್ಷಿತಿಯೊಳ್ ಹರಕೆಯ।
ರತಿಪತಿ ಪಿತನಂ ಸ್ತುತಿಸುತಲಿ।
ಸುತನ ನೀನಿತ್ತರೆ ಸುರಮುನಿಪ್ರಿಯಗೆ।
ಪ್ರತಿಮೆಯ ಮಾಳ್ಪೆ ಸುವರ್ಣದಲಿ ॥
ಅತ್ತೆಯು ಮಾಡಿದಳತಿವೇಗದಲಿ। ಇತ್ತರೆ ಕೂಸನು ಸೊಸೆಗೆನುತ ಚಿತ್ತಜ।
ಪಿತನಿಗೆ ಭಂಗಾರದ ತೊಟ್ಲಕಟ್ಟು ಬರುವೆ ತಾನೆಂದೆನುತ ॥

೪. ಯಾಲಪದ—(ಪುಟ-೫)

---

೩. ಯಕ್ಷಗಾನಗಳ ಉಗಮದ ಕಾಲವನ್ನು ನಿಷ್ಕರ್ಷಿಸುವುದಕ್ಕೆ ಇದರಿಂದಲೂ ಸಹಾಯವಾಗಬಹುದು.

ಪನ್ನೆರಡನೇ ದಿನವು ಭೂಸುರರೆಲ್ಲರ ಕರಸಿ । ಧನ್ಯಳು ಪಡದ ಕೂಸಿಗೆ
ನಾಮಕರಣವ ಘನವಾಗಿ ಮಾಡಿಸಿದರು । ತುಪ್ಪ ಭಕ್ಷ್ಯಂನಗಳುಂಡು
ವಿಪ್ರರು ಸಂಭ್ರಮುಗೊಂಡು । ತಪ್ಪದೆ ತಾಂಬೂಲ ತಕ್ಕೊಂಡು ದೇಶಾವರ
ಸಹಿತ ಒಪ್ಪದಿಂದ ಮನೆಗೆ ನಡೆದರು ॥

೫. ದ್ವಿಪದಿ—(ಪುಟ ೬)

ಕನಕ ನವರತ್ನಮಯ ಪಾದವಸ್ತ್ರವಷ್ಟು । ಮನಕೆ ಬೇಕಾದಷ್ಟು ಮಗನಿಗೆಯಿಟ್ಟು॥
ದಿನದಿನಕೆ ಕೂಸುಮಾಡುವ ಚರ್ಯವಷ್ಟು। ಮನೆಯವರೆಲ್ಲರು ನೋಡಿ ಸಂತೋಷಪಟ್ಟು॥

## 'ಅಭಿಮನ್ಯು ಕಾಳಗ' ಯಕ್ಷಗಾನ ಕೃತಿಯಿಂದ

೬. ವಾರ್ಧಕ ಷಟ್ಪದಿ—(ಪುಟ ೧೪)

ಅಭಿಮನ್ಯು ಬಿಟ್ಟ ಪ್ರತಿಕೂಲಶರಜಾಲಮಂ ರಿ
ಪುಭಟನ ಶಸ್ತ್ರಾಸ್ತ್ರದಿಂದ ತಡೆಗಡಿದೆಸೆದು ಬಡಿದು
ಸುಭಟನ ಕರಿರಥತುರಂಗ ಕಾಲಾಳ್ಗಳಂ ಸವರಿ ಬಲುಸೈನಿಕರನೂ ।
ರಭಸದಿಂದೆದ್ದಾಗ ಕೊಚ್ಚಿದವು ಮುಚ್ಚಿದವು
ಅಭಿನವೋದ್ಭಾಸದಿಂ ಚೀರಿದವು ಬೀರಿದವು
ನಭಕಡರುವಂದದಿ ವರೂಥಗಳ ಯೂಥಗಳನಾಶ್ಚರಿಯನೇನೆಂಬೆನೂ ॥

೭. ಭಾಮಿನೀ ಷಟ್ಪದಿ—(ಪುಟ ೧೪)

ರಾಯ ಕೇಳಭಿಮನ್ಯು ಬಾಣನಿ
ಕಾಯವನು ಸದೆಬಡಿದು ಬ್ರಹ್ಮೇತರ
ಸಾಯಕನ ಬಿಡಲದನು ಖಂಡಿಸಿ ಪಾರ್ಥಸುತನೆಂದಾ ।
ತಾಯಿಗವಮಾನವನು ಮಾಡಿದ
ನಾಯಿ ನಿನ್ನ ಕೊ[ಲ್ವೆ]ನೆಂದರೆ
ವಾಯುಪುತ್ರನ ಭಾಷೆಗಂಜುವೆನೆಂದನಭಿಮನ್ಯು ॥

## ಸುರಾಭಾಂಡೇಶ್ವರೋಪಾಖ್ಯಾನದಿಂದ

೮. ಸಾಂಗತ್ಯ—(ಪುಟ ೧೯)

ಹಲವು ಗಜವೊಂದಾಗಿ ಸಿಹ್ಮದ ಮರಿಯನು । ಕೊಲಿಸಿದಂತಾಯಿತೆಂದಿಂದಾ ।
ಕಳುಹಿದಾಪ್ತಸ್ತ್ರೀಯರನತಿಬೇಗದಿ । ಹೊಳೆವ ನೀರನ ಕರತರಲು ॥

೯. ಗೀತಿಕೆ.

ಮಾನಹರನೆತ್ತಿಕರವನುಮಾನವರಿಗೆ । ಪೋಗದಿರಿಪಾಪಕೃತ್ಯಕೆಪೋಗದಿರಿರೋ ।
ಎಂದು ಸಾರುವನೋ ಯೆಂಬ ಛಂದದಿಂದ । ಬೆಳೆದವನ ಬಾಳೆ ಸುಳಿಗಳು
ಬಳುಕುತಿರಲು ॥

೧೦. ಸೀಸ ಪದ್ಯ.

ಕಸ್ತೂರಿಪನ್ನೀರ ಕರ್ಪೂರಕುಂಕುಮ ಜವಾದಿಗಳಮೂರ್ವಜಾತಿಯವರು ।
ಕಂಚುಗಾರಪೌಢ್ರ । ಕಂಮಾರಚಿನಿವರರ್ ಗುಜರಾತಿದೇವಾಂಗಕುಲಗಳವರು ।
ಮಾಲೆಗಾರರ್ಮತ್ತುಮೇಲಾದ ಚಿಪ್ಪಿಗರ್ ಜೇನ ಚಾರ್ವಕಬುದ್ಧ ಚಿಟಕಿನವರು॥

ಇವುಗಳಲ್ಲದೆ ಅಕ್ಕರ, ತ್ರಿಪದಿ, ಚೌಪದಿ, ರಗಳೆ, ತ್ರಿವುಡೆ, ತ್ಯಾಗವಾನ, ಆರ್ಯ, ಚೂರ್ಣಿಕೆಗಳೂ ಯಕ್ಷಗಾನಗಳಲ್ಲುಂಟು.

ಯಕ್ಷಗಾನ ಕೃತಿಗಳ ಹಲವು ವೈಶಿಷ್ಟ್ಯಗಳಲ್ಲಿ ಛಂದಸ್ಸಿನ ವೈವಿಧ್ಯವೂ ಒಂದು. ಯಕ್ಷಗಾನಗಳಲ್ಲೆಲ್ಲಾ ಹಾಡಲನುಕೂಲವಾಗುವಂತಹ ಛಂದಸ್ಸುಗಳನ್ನೇ ಹೆಚ್ಚಾಗಿ ಆರಿಸಿಕೊಂಡಿರುವುದನ್ನು ಗಮನಿಸಬಹುದು. ಗದ್ಯ ಬಹಳ ಕಡಿಮೆ. ಕೆಲವು ಕಡೆ ಪದ್ಯಗಳು ಛಂದಸ್ಸಿನ ದೃಷ್ಟಿಯಿಂದ ದೋಷಯುಕ್ತವೂ ಆಗಿರುವುದು ಕಂಡು ಬಾರದಿರದು. ಈವರೆಗೂ ಹೆಚ್ಚಾಗಿ ಪರಿಚಯ, ಪ್ರಚಾರಗಳಿಲ್ಲದ ಒಂದೊಂದು ಬಗೆಯ ಹೊಸ ಪ್ರಯೋಗವೂ ಯಕ್ಷಗಾನಕೃತಿಗಳಲ್ಲಿರುವುದು ಕಂಡು ಬರುತ್ತದೆ.[4] ಇದರ ಹೆಚ್ಚಿನ ಸಂಶೋಧನೆ ಆಗಬೇಕಾಗಿದೆ.

ಯಕ್ಷಗಾನ ಕೃತಿಗಳಲ್ಲಿ ಬಳಸಿರುವ ಕಂದಪದ್ಯಗಳಲ್ಲಿ ಅನೇಕ ಕಡೆ ಎರಡು ಮತ್ತು ನಾಲ್ಕನೇ ಪಾದಗಳ ಕೊನೆಯಲ್ಲಿ ದೀರ್ಘಕ್ಕೆ ಬದಲಾಗಿ ಹ್ರಸ್ವವೇ ಬರುತ್ತದೆ. ಅದನ್ನು ಅನ್ನುವಾಗ ದೀರ್ಘಮಾಡಿ ಹಾಡುವುದು ರೂಢಿ. ವಚನ ಎಂದು ಹೇಳಿದ್ದರೂ ಅನೇಕವೇಳೆ ತಾಳಲಯ ಬದ್ಧವಾಗಿಯೇ ಇರುವುದೂ ಕಂಡು ಬರುತ್ತದೆ.

ಬೊಮ್ಮಣ್ಣಕವಿಯ 'ಆದಿಪುರಾಣ' ಯಕ್ಷಗಾನ ಕೃತಿಯಲ್ಲಿ[5] ಬರುವ ಅನೇಕ ವೃತ್ತಗಳೂ, ಕಂದಗಳೂ ಶಿಥಿಲವಾಗಿವೆ. ವೃತ್ತಗಳ ಕೊನೆಯಲ್ಲೂ ಲಘು ಬರುತ್ತದೆ. ಹೊಸಗನ್ನಡಕ್ಕೆ ವೃತ್ತಕಂದಗಳು ಹೊಂದುವುದಿಲ್ಲವೆಂಬುದಕ್ಕೆ ಇದೂ ಒಂದು ಉದಾಹರಣೆ ಎಂಬಂತಿದೆ. ಅನೇಕ ವೇಳೆ ಒಂದು ಛಂದಸ್ಸಿನ ಹೆಸರನ್ನು ಸೂಚಿಸಿದ್ದರೂ ಅದನ್ನು ಪರಿಶೀಲಿಸಿದಾಗ ಅಲ್ಲಿ ಹೇಳಿರುವ ಛಂದಸ್ಸಿನ ಜಾತಿ ಅದಾಗಿರುವುದಿಲ್ಲ! ಇದಕ್ಕೆ ಬಹುಮಟ್ಟಿಗೆ ಹೇಳುವವರ—ಮುದ್ರಿಸುವವರ ಅಜ್ಞಾನವೂ ಕಾರಣವಾಗಿರಬಹುದು. ಪರಿಷ್ಕೃತವಾದ ಶುದ್ಧ ಯಕ್ಷಗಾನ ಕೃತಿಯ ಮುದ್ರಣ ಸಿಗುವುದುವುದೇ ಅಪೂರ್ವ—ದುರ್ಲಭವೇ ಎನ್ನಬಹುದು. 'ಸುರಾಭಾಂಡೇಶ್ವರೋಪಾಖ್ಯಾನ'ವೆಂಬ ಕೃತಿಯಲ್ಲಿ ಒಂದುಕಡೆ ಚಂಪಕಮಾಲೆ ಎಂದು ಸೂಚಿತವಾಗಿದ್ದರೂ 'ಕಂಡೆನನಾಥರಕ್ಷಕನನು' ಎಂದು ಪ್ರಾರಂಭವಾಗುತ್ತದೆ!

---

4 'ಕರೀಬಂಟನ ಕತೆ' ಯಕ್ಷಗಾನದಲ್ಲಿ ನಾಲ್ಕು ಮಾತ್ರೆಯ ಗಣಗಳೂ ಮತ್ತು ಐದು ಪಾದಗಳುಳ್ಳ ಅದೊಂದು ಅಪೂರ್ವ ಛಂದಸ್ಸು ಸಿಕ್ಕುತ್ತದೆ.

5 ಈ ಗ್ರಂಥ ಯಕ್ಷಗಾನ ಕೃತಿಗಳ ಪರಸ್ಪರ ಹೋಲಿಕೆಯಿಂದ, ಪ್ರೌಢವಾದುದು.

ಛಂದಸ್ಸಿನ ಒಂದು ಚೌಕಟ್ಟಿನಲ್ಲಿ ಮಧ್ಯೆ ಕೆಲವು ಸಣ್ಣ ವ್ಯತ್ಯಾಸಗಳನ್ನು ಮಾಡಿಕೊಳ್ಳುವ ಸ್ವಾತಂತ್ರ್ಯವನ್ನು ಯಕ್ಷಗಾನ ಕವಿಗಳು ವಹಿಸಿರುವುದು ಸ್ಪಷ್ಟವಾಗಿ ತಿಳಿಯುತ್ತದೆ. ಇಂತಹ ಸ್ವಾತಂತ್ರ್ಯ ಸಾಮಾನ್ಯವಾಗಿ ಆಧುನಿಕ ಹೊಸಗನ್ನಡ ಕವನಗಳಲ್ಲಿ ಕಂಡುಬರುವ ಒಂದು ವಿಶೇಷ. ಇದನ್ನು ಇಂಗ್ಲಿಷ್ ಕವಿತೆಗಳಿಂದ ಅನುಕರಿಸಿ ಅನುಸರಿಸಿದ್ದು ಎಂದು ಹೇಳುವುದು ರೂಢಿ. ಆದರೆ ಇಂತಹ ಸ್ವಾತಂತ್ರ್ಯ ಯಕ್ಷಗಾನಗಳಲ್ಲಿ, ಹರಿದಾಸರ ಹಾಡುಗಳಲ್ಲಿ ಆಧುನಿಕ, ಕಾಲಕ್ಕಿಂತ—ನಮ್ಮ ಇಂಗ್ಲಿಷ್ ಅನುಕರಣೆಯ ಕಾಲ—ಎಷ್ಟೋ ಹಿಂದೆಯೇ ಇತ್ತು ಎಂಬುದನ್ನು ಗಮನಿಸಬಹುದು. ಹೊರದೇಶದಿಂದಲೇ ಇದು ಬಂದುದೆಂದೇನೂ ಹೇಳಬೇಕಾಗಿಲ್ಲ. ಅಂತಹ ಪ್ರಯೋಗಗಳನ್ನು ಮಾಡಿರುವ ಇಂದಿನ ಕವಿಗಳು ಪಾಶ್ಚಾತ್ಯ ಸಾಹಿತ್ಯ ಪರಿಚಯದಿಂದ ಅದನ್ನು ತೆಗೆದುಕೊಂಡಿರಬಹುದು ಅಷ್ಟೆ. ಆದರೆ ಈ ಸ್ವತಂತ್ರ ಮನೋಭಾವ, ವೈವಿಧ್ಯ ನಮ್ಮಲ್ಲಿಲ್ಲದೇ ಇಲ್ಲ.

ಮೂರು ಮಾತ್ರೆಗಳ ಗಣಗಳಿದ್ದರೂ ಓದುವಾಗ, ಹಾಡುವಾಗ ಒಟ್ಟಿಗೇ ಎರಡೆರಡರಂತೆ ಭಾಸವಾಗಿ ಮಧ್ಯೆ ಮಧ್ಯೆ ಒಂದು ಕೊಂಕು ಬಂದು ಹೊಸ ಛಂದಸ್ಸಿನ ವಿನ್ಯಾಸ ಗೋಚರವಾಗುತ್ತದೆ—ವೈವಿಧ್ಯ ಏರ್ಪಡುತ್ತದೆ.

ಉದಾ :—ಹಲವು । ಗಜವೊಂದಾ । ಗಿಸಿಹ್ಮನ । ಮರಿಯನು
ಕೊಲಿಸಿದಂತಾಯಿತೆಂದಿಂದಾ[6]

3 : 4, 3 : 4 : 5 ಗಣಗಳಂತೆ ಕಂಡರೂ ಸಹ.

ಸೀಸಾರ್ಧಗಳು ಎಂದು ಹೇಳಿ ೫ ಮಾತ್ರೆಗಳ ನಾಲ್ಕು ಗಣ, ೫ ಮಾತ್ರೆ ಮೂರು ಗಣ, ಕೊನೆಯಲ್ಲಿ ಒಂದು ಗುರು ಇರುವುದನ್ನು ನೋಡಬಹುದು. ಇದರಲ್ಲಿಯೂ, ನಾಲ್ಕು ಸಾಲುಗಳು ಸರಿಯಾಗಿ ಈ ನಿಯಮದ ಪ್ರಕಾರ ಬಂದು ಮುಂದೆ ಭಾವಕ್ಕೆ ತಕ್ಕಂತೆ ವೈವಿಧ್ಯ ಗೋಚರವಾಗುತ್ತದೆ. ೫×೨+೨ ಲಘು.

ಉದಾ:— ಪರಮಾಯುರಾರೋಗ್ಯ ಸರಸಭೂಷಣಶೌರ್ಯ ।
ಸಂಪದಭ್ಯುದಯ ದಾನ ಸಕಲಪುಣ್ಯ
...............................................
...............................................
ಶ್ರೀಶೈಲಧೀಶನಿವನು[7]

---

6. ‘ ಸುರಾಭಾಂಡೇಶ್ವರೋಪಾಖ್ಯಾನ ’—ಪುಟ ೧೯.
7 ಅದೇ.

—UUUU — — U — UUU U U U
ಕಣ್ಮನಕೆ । ಕಂಡಂತೆ । ತಾ । ಕರವ ಮುಗಿ। ವ।

— — U —U— ——U UU U UUU
ಕ ಣ್ಮುಚ್ಚಿ । ಬೆಚ್ಚಿಬಿ । ಚ್ಚುತ್ತ ಕರೆ । ವ ಹಿರಿಯ ।[8]

ಸೀಸಾರ್ಧದಲ್ಲಿ ಹೀಗೆ ವ್ಯತ್ಯಾಸಗಳೂ ಇವೆ. ಆದಿಯಲ್ಲಿ ಒಂದು ಗುರು ಮೂರು ಮಾತ್ರೆ ಹೆಚ್ಚಾಗಿ ಬಂದಿರುವುದನ್ನೂ ಇಲ್ಲಿ ಗಮನಿಸಬಹುದು. ಆದಿಯಲ್ಲಿ ಅಥವಾ ಅಂತ್ಯದಲ್ಲಿ ಒಂದು ಕೊಸರನ್ನಿಡಬಹುದು. ಇದರಿಂದ ೫ ಮಾತ್ರೆಗಣಗಳ ಶಯ್ಯೆಗೆ ತೊಂದರೆಯೇನೂ ಬಾರದು.

ಉದಾ:—ಮರುದಿನದೊಳು ಸುರನದಿಯೊಳಗಿರದೆ ಮಿಾಯುತಂದು ಕಮಲ

UU U— — —U U U U U UU— U — U — U
ವರನಿಗರ್ಘ್ಯವಿತ್ತು ವಿಮಲ ತರತಪಕ್ಕೆ ನಿಂದನಾಗ[9]

ಇದು ಸೊಗಸಾಗಿಯೇ ಇದೆ.

UUU UUU UUU U UU U UU U — U UU U U U
ಧರಿಸಿ । ಭಸಿತ । ವೆರಸಿ । ಗಳದಿ । ಯಿರಿಶಿ । ಶಿವಾ । ಕ್ಷಗಳ । ಮುದದಿ ।[10]
—

ಇಲ್ಲಿ ಒಂದು ಛಂದಸ್ಸಿನ ಚೌಕಟ್ಟಿನಲ್ಲಿ ಒಳವಿನ್ಯಾಸವನ್ನು ಗುರುತಿಸಬಹುದು. ಈ ಒಳವಿನ್ಯಾಸ ಸ್ವತಂತ್ರಮನೋಭಾವನೆಗೆ ಮತ್ತೊಂದು ಸೊಗಸಾದ ಉದಾಹರಣೆ—

UUUU U U— U UUUU
ಜಲಧಿಶ । ಯನನಾ । ಗಿ। ಇರುತಿಹ । ೪ × ೨ + ೧ ಲಘು ೪ ಮಾತ್ರೆಯ

ಜಲಜಾ । ಕ್ಷನ ತೋ । ರೋ । ೪ × ೨ + ೧ ಗುರು. ಒಂದು ಚೂರು.
—

.... .. ........................

U U U — UUU U — U—
ಹರಿಯ । ತೋರಿವೆನ । ಗೆ। ಸಾಧ್ಯವೇ ೩ × ೫ + ೧ ಲಘು ೫ ಮಾತ್ರೆಯ

UUU U — U U —
ತರಳನೆ । ಕೇಳ್ನಿನ । ಗೇ[11] ೪ × ೨ + ೧ ಗುರು. ಒಂದು ಚೂರು.

ಇಂದು ನಾವು ಯಾವುದನ್ನು ಆಧುನಿಕ, ಹೊಸಹಾದಿ, ಕ್ರಾಂತಿಕಾರಕ ಎಂದು ಕರೆಯುತ್ತಿದ್ದೇವೆಯೋ ಅದು ಗ್ರಾಮಾಂತರಗಳಲ್ಲಿ ಹುಟ್ಟಿದ ಯಕ್ಷಗಾನ ಕೃತಿಗಳಲ್ಲಿ ಆಗಲೇ ಮಾಡಿರುವುದನ್ನು ಗಮನಿಸಿದರೆ ಅದು ಹೊಸದೂ ಅಲ್ಲ, ಕ್ರಾಂತಿಕಾರಕವೂ ಅಲ್ಲ, ನಮ್ಮಲ್ಲಿಲ್ಲದುದೂ ಅಲ್ಲ ಎಂದು ಹೇಳಬಹುದಲ್ಲವೆ ? ಈ ವೈವಿಧ್ಯ ಹಾಡುವಾಗ ಲಯವನ್ನನುಸರಿಸಿ ತನ್ನಷ್ಟಿಗೇ ತಾನೇ ಸ್ವಾಭಾವಿಕವಾಗಿ ಬರುತ್ತದೆಂದು ಹೇಳಬಹುದಲ್ಲವೆ ?

---

8 ನಂಜುಂಡಭಾಗವತರ ‘ ಪ್ರಲ್ಹಾದ ಚರಿತ್ರೆ’ ಯಿಂದ.

9 ಲಿಂಗೇಂದ್ರನ ‘ ಇಂದ್ರಕೀಲ ’ ಯಕ್ಷಗಾನ ಕೃತಿಯಿಂದ.

10 ಅದೇ.

11 ಅಳಿಯ ಲಿಂಗರಾಜನ ‘ ಬಭ್ರುವಾಹನ ಕಾಳಗ ’ದಿಂದ.

ಮತ್ತೆ ಕೆಲವು ಕಡೆ ವೃತ್ತಗಳೆಂದು ಅವುಗಳ ಹೆಸರೂ ಹೇಳಿ ವೃತ್ತಗಳನ್ನು ಬರೆದಿದ್ದರೂ, ಅಕ್ಷರಗಣವೊಂದು, ಮಾತ್ರಾಗಣಕ್ಕೆ ಎಷ್ಟು ಸೊಗಸಾಗಿ ಹೊಂದಿಕೊಳ್ಳುತ್ತದೆ ಎಂಬುದನ್ನೂ ಉಳಿದ ಸಾಹಿತ್ಯಕೃತಿಗಳಲ್ಲಿ ಕಂಡಂತೆ ಯಕ್ಷಗಾನ ಸಾಹಿತ್ಯಕೃತಿಗಳಲ್ಲಿಯೂ ಕಾಣಬಹುದಾಗಿದೆ.

ಹೀಗೆ ಯಕ್ಷಗಾನ ಕೃತಿಗಳ ಛಂದಸ್ಸಿನಲ್ಲಿ ನಿಯಮ ವೈವಿಧ್ಯಗಳ ಸಮನ್ವಯವನ್ನು ಸ್ವಲ್ಪಮಟ್ಟಿಗಾದರೂ ಕಾಣಬಹುದಾಗಿದೆ. ಅಷ್ಟರ ಮಟ್ಟಿನ ಯಶಸ್ಸು ಯಕ್ಷಗಾನ ಸಾಹಿತ್ಯಕ್ಕಿದೆ.

ಕೆ. ಎಮ್. ಕೃಷ್ಣರಾವ್

# ಸಾಹಿತ್ಯ-ಸಂಬೋಧನೆ ಹಾಗೂ ಕನ್ನಡ ಸಾಹಿತ್ಯ

ಸಾಹಿತ್ಯವು ಮಾಡಬೇಕಾದ ಕಾರ್ಯಗಳಲ್ಲಿ ಸಂಬೋಧನೆಯೂ (Persuasion) ಒಂದು. ಸಾಹಿತ್ಯಕೃತಿಯ 'ಧ್ವನಿ'ಯಲ್ಲಿ ಸೂಕ್ಷ್ಮವಾಗಿ ವಾಸಿಸುವ ಸ್ಫೂರ್ತಿಯು 'ಉನ್ನಯನ'ವನ್ನು ಸಾಧಿಸುತ್ತದೆ. 'ರಸ'ದಲ್ಲಿ ಅಡಕವಾಗಿದ್ದ ಸಾಹಿತಿಯ ಲೋಕಧರ್ಮಾನುಕೃತಿಯು ಸಮ್ಯಕ್‌ದೃಷ್ಟಿಯನ್ನು ಸಂವರ್ಧಿಸಲು ಸಹಾಯಕವಾಗುತ್ತದೆ. ಕೃತಿಯ ಭಾವದಲ್ಲಿ ಅಡಕವಾದ ಸಾಹಿತಿಯ ಅಭಿವ್ಯಕ್ತಿಯ ಆನಂದವೂ ರಸಿಕನ ಭಾವಶುಚಿಗೆ ಕಾರಣವಾಗುತ್ತವೆ. ಕೃತಿಯ 'ಅಲಂಕಾರ'ದಲ್ಲಿ ಸ್ಫುಟವಾದ ಸಾಹಿತಿಯ ನಿರೂಪಣಾಭಿಲಾಷೆ ಹಾಗೂ ಸೌಂದರ್ಯೋಪಾಸನೆಯು ರಸಿಕನಿಗೆ 'ರಂಜನ'ದ ಅನುಭವವನ್ನು ಒದಗಿಸಿಕೊಡುತ್ತವೆ. ಹೀಗೆಯೇ ಕೃತಿಯ 'ಅರ್ಥ'ದಲ್ಲಿ ಅಡಕವಾಗಿದ್ದ ಸಾಹಿತಿಯ 'ತತ್ವ'ವು ರಸಿಕನ ಸಂಬೋಧನೆಯನ್ನು ಸಾಧಿಸಬೇಕು; ಇಲ್ಲವೆ ಸಾಧಿಸುತ್ತದೆ.

'ಕೇವಲ ದುಃಖವೊಂದೇ ಅಲ್ಲ, ನಮ್ಮ ಅನೇಕ ಹೃದಯ ಭಾವಗಳಿಗೂ ಈ ಎರಡೂ ದಿಕ್ಕುಗಳೂ ಇವೆ—ತನಗಾಗಿ, ಮತ್ತೊಂದು ಅನ್ಯರಿಗಾಗಿ. ನಮ್ಮ ಹೃದಯದ ಭಾವವನ್ನು ಜನಸಾಮಾನ್ಯದ ಹೃದಯಭಾವವನ್ನಾಗಿ ಮಾಡುವದಕ್ಕೆ. ಆದರೆ ಅದರಿಂದ ಒಂದು ಸಮಾಧಾನ, ಒಂದು ಗೌರವ ಉಂಟಾಗುತ್ತದೆ. × × × × ನಮ್ಮ ಹೃದಯ ವೇದನೆಯಲ್ಲಿ ಜಗತ್ತಿನ ಎಷ್ಟು ಹೆಚ್ಚು ಜನರು ಸಮವೇದನೆಯನ್ನು ಅನುಭವಿಸುತ್ತಾರೋ ಅಷ್ಟು ಹೆಚ್ಚಾಗಿ ಅದರ ಸತ್ಯತೆಯು ಪ್ರತಿಷ್ಠಿತವಾಗುತ್ತದೆ. ನಾನು ಯಾವುದನ್ನು ಏಕಾಂತವಾಗಿ ಅನುಭವಮಾಡುತ್ತೇನೋ ಅದು ನನ್ನ ದುರ್ಬಲತೆ, ವ್ಯಾಧಿ, ಅಥವಾ ಹುಚ್ಚು ಅಲ್ಲ—ಅದು ಸತ್ಯವೆಂಬುದನ್ನು ಸರ್ವಸಾಧಾರಣದ ಹೃದಯದಲ್ಲಿ ನಿಜವೆಂದು ತೋರಿಸಿ ನಾನು ವಿಶೇಷಸಮಾಧಾನವನ್ನೂ ಸುಖವನ್ನೂ ಹೊಂದುತ್ತೇನೆ. ಯಾವುದು ನೀಲವೋ ಅದನ್ನು ಹತ್ತು ಜನರಲ್ಲಿ ನೀಲವೆಂದು ಪ್ರಚಾರ ಮಾಡುವದು ಕಷ್ಟವಲ್ಲ. ಆದರೆ ಯಾವದು ನಮಗೆ ಸುಖ ಅಥವಾ ದುಃಖ, ಪ್ರಿಯ ಅಥವಾ ಅಪ್ರಿಯ, ಅದನ್ನು ಹತ್ತು ಜನರಲ್ಲಿ ಸುಖ ಅಥವಾ ದುಃಖ, ಪ್ರಿಯ ಅಥವಾ ಅಪ್ರಿಯವೆಂದು ಪ್ರಚಾರಮಾಡುವದು ಕಷ್ಟ.

ಈ ಸ್ಥಿತಿಯಲ್ಲಿ ಕೇವಲ ತನ್ನ ಮನೋಭಾವವನ್ನು ಮಾತ್ರ ಪ್ರಕಾಶಪಡಿಸಿದರೆ ಮುಗಿಯುವದಿಲ್ಲ. ತನ್ನ ಮನೋಭಾವವನ್ನು ಇತರರೂ ಯಥಾರ್ಥವೆಂದು ಅನುಭವಿಸುವಂತೆ ಪ್ರಕಾಶಮಾಡಬೇಕು.' (ಸಾಹಿತ್ಯ, ಶ್ರೀ ರವೀಂದ್ರರು. ಅನು; ಎ. ಎನ್. ನರಸಿಂಹಯ್ಯ. ಪುಟ, ೧೬)

ಈ ಅನುವಾದದಲ್ಲಿಯ ಕನ್ನಡವು ಬಂಗಾಲಿಯ ಕೆಲವೊಂದು ಸುಳಿಯಲ್ಲಿ

ಸಿಕ್ಕಂತೆ ಭಾಸವಾದರೂ, ರವೀಂದ್ರರ ಅರ್ಥವು ನಿಚ್ಚಳವಾಗಿ ಅದರಲ್ಲಿ ಮೂಡಿದೆ. ರವೀಂದ್ರರ ಈ ಮಾತುಗಳಿಂದ ಕಲೆಯಲ್ಲಿ ಅಭಿವ್ಯಕ್ತಿ ಹಾಗೂ ನಿರೂಪಣೆಯಲ್ಲದೆ ಚಿತ್ತ ಪರಿವರ್ತನೆ ಇಲ್ಲವೆ ಸಂಬೋಧನೆಯ (**Persuasion**) ಒಂದು ಅಂಗವೂ ಇದೆ ಯೆಂದು ಸ್ಪಷ್ಟವಾಗುತ್ತದೆ. ರ್‍ಹಿಟರಿಕ್ (**Rhetoric**) ಇಲ್ಲವೆ ಅಲಂಕಾರ ಶಾಸ್ತ್ರವು ನಿರೂಪಣೆಯ ವಾಸ್ತುಶಿಲ್ಪದ ಶಾಸ್ತ್ರ, ಆಡಿದ ಮಾತಿನಲ್ಲಿಯಾಗಲೀ ಬರೆದ ನುಡಿ ಯಲ್ಲಿಯಾಗಲೀ ಓಜಸ್ಸನ್ನೂ, ಸೌಂದರ್ಯವನ್ನೂ ಹೇಗೆ ಬರಬೇಕೆಂಬುದನ್ನು ತೋರಿ ಸುವ ವಿಧಾನ. ಅಲಂಕಾರ ಶಾಸ್ತ್ರಕ್ಕೆ ಎರಡು ಮುಖಗಳಿವೆ: ಒಂದು ಅರ್ಥ ಹಾಗೂ ವಾಕ್,—ಇವುಗಳ ನಡುವೆ ಇರಬೇಕಾದ ಏಕತೆ ಇಲ್ಲವೆ ಹೊಂದಿಕೆ, ಅರ್ಥಕ್ಕೆ ತಕ್ಕಂತೆ ಶಬ್ದದ ಇಲ್ಲವೆ ವಾಹಕದ ಹೊಂದಿಕೆ ಇರಬೇಕಾಗುತ್ತದೆ.

ಸಹಜ, ಅಲಂಕೃತ, ಪ್ರೌಢ, ಸರಳ, ಗಂಭೀರ,—ಶೈಲಿಯು ಯಾವುದೇ ತರಹದ್ದಿರಲಿ— ಅರ್ಥಕ್ಕೆ ಅನುರೂಪವಾಗಿ ಶೈಲಿ ರೂಪಗೊಂಡಿದ್ದರೆ ಮಾತ್ರ ನಿರೂ ಪಣೆಯು ಯಶಸ್ವಿಯಾದಂತೆ. ಈ ದೃಷ್ಟಿಯಿಂದ ಕವಿಗಳಿದ್ದಷ್ಟು ಭಿನ್ನಶೈಲಿ ಗಳಿದ್ದರೂ ಈ ಎಲ್ಲ ಶೈಲಿಗಳೂ ಪಡೆದ ಯಶಸ್ಸು ಒಂದೇ ಮಾದರಿಯದು: ವಾಗರ್ಥ ಗಳ ಸಮ್ಮಿಲನದಿಂದ ದೊರಕಿಸಿದ ಕಲಾಸಿದ್ಧಿ.

ಎರಡನೆಯದಾಗಿ ಶಿಲ್ಪಿಯು ರಚಿಸಿದ ಕೃತಿಯು ಸಾಮಾಜಿಕನ, ಹೃದಯ ವನ್ನೂ ಬುದ್ಧಿಯನ್ನೂ ನಿಲುಕಿರಬೇಕು. ಹೃದಯ ಸ್ಪರ್ಶಿಯಾಗಿ ಬುದ್ಧಿಗ್ರಾಹ್ಯ ವಾಗಿ ಸಾಮಾಜಿಕನ ಚಿತ್ತವೃತ್ತಿಯನ್ನು ಸೆರೆಹಿಡಿಯಬೇಕು. ಈ ಎರಡು ಕಾರ್ಯ ಗಳನ್ನು ಸಾಧಿಸಿದಾಗ ಮಾತ್ರ ಒಂದು ಕೃತಿಯು ಕಲಾಸಿದ್ಧಿಯನ್ನು ಸಾಧಿಸಿದೆಯೆಂದು ಹೇಳಬಹುದು

ಕಲೆಯೂ, ಅಲಂಕಾರವೂ ಜಗತ್ತಿನಲ್ಲಿಯ ಎಲ್ಲ ಸಾಧನೆಗಳಂತೆ ಸದುಪ ಯೋಗಕ್ಕೂ ದುರುಪಯೋಗಕ್ಕೂ ಕೂಡಿಯೇ ಬಳಕೆಯಾಗುವಂತಿವೆ. ಉಪಮೆ ಗಳನ್ನೂ, ರೂಪಕಗಳನ್ನೂ ಉಪಯೋಗಿಸಿ ದ್ವೇಷವನ್ನು ಹೆಚ್ಚಿಸುವುದು ಸಾಧ್ಯ; ಪ್ರೀತಿಯನ್ನು ವರ್ಧಿಸುವದೂ ಸಾಧ್ಯ. ಅಸ್ಪಷ್ಟ ಮೀಮಾಂಸೆಯಿಂದ, ಕುತರ್ಕದಿಂದ, ಚಾಣಕ್ಯತಂತ್ರದಿಂದ, ಬುದ್ಧಿಯನ್ನು ಮಂಕುಗೊಳಿಸುವುದು ಸಾಧ್ಯವಿದೆ. ಆದರೆ ದುರುಪಯೋಗವು ಕಲೆಯ ಇಲ್ಲವೆ ಅಲಂಕಾರಶಾಸ್ತ್ರದ ತಪ್ಪಲ್ಲ; ಯೋಜಕನ ತಪ್ಪು. ಇಂಥ ದುರುಪಯೋಗವನ್ನು ಕಂಡು, ಪ್ಲೇಟೋ ವಕ್ತೃತ್ವವೇ ಬೇಡವೆಂದು ತನ್ನ ಕೆಲವೊಂದು ಸಂವಾದಗಳಲ್ಲಿ ಸಾರಿದನು. ವಕ್ತೃತ್ವಕ್ಕಿಂತ ಸಂವಾದವು ಸತ್ಯಕ್ಕೆ ನೇರವಾದ ದಾರಿಯೆಂದು ಅವನಿಗೆ ಹೊಳೆಯಿತು. ಸಮರ್ಪಕ ಪ್ರಶ್ನೋತ್ತರಗಳು, ಮೀಮಾಂಸಾತ್ಮಕ ಚರ್ಚೆ— ಇವು ಸತ್ಯದ ಮುಖವನ್ನು ಮರೆಯಾಗಿಸುವುದಿಲ್ಲವೆಂದು ಅವನಿಗೆನಿಸಿತು. ಆದರೆ ಸತ್ಯಶೋಧನೆಯನ್ನು ಹೀಗೆ ಪುರಸ್ಕರಿಸುವಾಗ ಸೌಂದರ್ಯ ವನ್ನೂ, ಆನಂದವನ್ನೂ ಅಲಕ್ಷಿಸಬೇಕಾಗಿಲ್ಲ. ಆನಂದವು ಸತ್ಯವನ್ನು ಮರೆಯಾಗಿ ಸುವದೆಂಬ ಭೀತಿಯಿಂದ, ಅಭಿವ್ಯಕ್ತಿಯ ಇಲ್ಲವೆ ನಿರೂಪಣೆಯ ಸ್ವಾತಂತ್ರ್ಯವನ್ನು

ಅಲ್ಲಗಳೆಯಲಾರವು. ಸಂವಾದ ಹಾಗೂ ಮೀಮಾಂಸೆಗಿಂತ ಅಲಂಕಾರದ ವಿಧಾನ ದಲ್ಲಿ ಬುದ್ಧಿವಂಚನೆಗೆ ಹೆಚ್ಚು ಆಸ್ಪದವಿರುವುದು ನಿಜ. ಮೀಮಾಂಸೆಯು ತರ್ಕ ಬುದ್ಧಿಯನ್ನೂ ನಿರ್ಣಯಬುದ್ಧಿಯನ್ನೂ ಅವಲಂಬಿಸಿದರೆ ಅಲಂಕಾರವು ಕಲ್ಪಕತೆ ಯನ್ನು ಅವಲಂಬಿಸಿರುತ್ತದೆ. ಅಲಂಕೃತ ಭಾಷೆಯಲ್ಲಿ ಅತಿಶಯೋಕ್ತಿಗಿದ್ದ ಸ್ಥಾನ ವನ್ನು ಒಮ್ಮೊಮ್ಮೆ ಅಸತ್ಯವು ಆಕ್ರಮಿಸಬಹುದು.

ಸಾಮಾನ್ಯವಾಗಿ ಸಾಮಾಜಿಕನು ತನ್ನ ಬುದ್ಧಿಯನ್ನು ಅಷ್ಟೊಂದಾಗಿ ದಂಡಿಸು ವದಿಲ್ಲ. ಕಲ್ಪಕತೆಯನ್ನು ಅವನು ಹೆಚ್ಚಾಗಿ ಹರಿಬಿಡುತ್ತಾನೆ. ಆದಕಾರಣ ಮೀಮಾಂಸೆಗಿಂತ ಸಾಹಿತ್ಯಕ್ಕೆ ಸಂಬೋಧನೆ ಸುಲಭವಾಗಿದೆ. ಹೀಗಾಗಿ ಯಾವ ತತ್ತ್ವಗಳನ್ನೂ ವಿಚಾರಗಳನ್ನೂ ಸಾಹಿತ್ಯವು ಪ್ರಚಲಿತಗೊಳಿಸುವುದೋ ಅವುಗಳ ಬಗೆಗೆ ನಾವು ಎಚ್ಚರದಿಂದಿರಬೇಕಾಗುತ್ತದೆ.

ಹೃದಯದ ಮೀಮಾಂಸೆಯೊಂದು ಬೇರೆಯಿದೆ. ಅನುಭವವೇ ಅದಕ್ಕೆ ಪ್ರಮಾಣ. ಕವಿಯ ಸಮಾನಧರ್ಮಿಯಾದ ರಸಿಕನು ಅದನ್ನು ಕಾವ್ಯದಿಂದ ಗ್ರಹಿಸು ತ್ತಾನೆ. ಅದರ ಪ್ರಸ್ಥಾಪನೆಗೆ ಬೇರೆ ಯಾವ ವಿಧಾನದ ಅವಶ್ಯಕತೆಯೂ ಇಲ್ಲ. ಉಚಿತ ಅಭಿವ್ಯಕ್ತಿ, ನಿರೂಪಣೆಗಳು ಆ ಅನುಭವಕ್ಕೆ ದೊರಕಿದರೆ ತೀರಿತು. ಅದು ನೇರವಾಗಿ ಸಾಮಾಜಿಕ ಹೃದಯವನ್ನು ಮುಟ್ಟುತ್ತದೆ. ರಸಧರ್ಮವನ್ನರಿಯದವನಿಗೆ ಅದು ಏನು ಮಾಡಿದರೂ ಅವಗತವಾಗುವದಿಲ್ಲ. ರಸಸಂಸ್ಕಾರವನ್ನು ಹೊಂದಿದ ಮೇಲೆ ಮಾತ್ರ ಅವನಿಗೆ ರಸಗ್ರಹಣದ ಅಧಿಕಾರ ಬರುತ್ತದೆ. ಬರಿ ಮೀಮಾಂಸೆ ಯೊಂದನ್ನು ಒಪ್ಪಿ ಅಲಂಕಾರವನ್ನು ನಾವು ತಳ್ಳಿಹಾಕಲಾರೆವು. ಮನುಷ್ಯನ ಆಂತರಿಕ ಜೀವನಕ್ಕೆ ಅನೇಕ ಮುಖಗಳಿವೆ. ಭಾವನಾಮಯತೆ, ಕಲ್ಪಕತೆ ಇವೂ ಅವನ ವ್ಯಕ್ತಿತ್ವದ ಅಂಶಗಳಾಗಿವೆ. ಇವುಗಳಿಂದ ಉಗಮಹೊಂದಿದ ಕಲೆಯನ್ನೂ ಅಲಂಕಾರವನ್ನೂ ಅಸತ್ಯಗಾಮಿಯೆಂದು ನಾವು ತ್ಯಜಿಸಿಬಿಡುವುದು ಹೇಗೆ? ಆನಂದಕ್ಕೆ ಸತ್ಯವೂ ಸೌಂದರ್ಯವಾಗಿ ತೋರುತ್ತದೆ. ಸೌಂದರ್ಯವೂ ಸತ್ಯದ ಇಲ್ಲವೆ ಸಚ್ಚಿ ದಾನಂದದ ಆವಿರ್ಭಾವ. ಅದನ್ನು ಅಲ್ಲಗಳೆದರೆ ಅಷ್ಟರಮಟ್ಟಿಗೆ ನಮ್ಮ ಜೀವನವು ಅಪೂರ್ಣವಾದಂತೆ.

ಆದರೆ ಚಿತ್ತಪರಿವರ್ತನೆಯೆಂದರೆ ಬರಿ ಅನುಭವ, ಆನಂದ ಇಲ್ಲವೆ ಸೌಂದರ್ಯ ನಿರೂಪಣೆಯೆಂದಿಷ್ಟೇ ಅರ್ಥವಾಗುವದಿಲ್ಲ. ಸಾಹಿತ್ಯವು ಭಾಷೆಯನ್ನೇ ಅವಲಂಬಿಸಿದ ಕಾರಣ ಅಭಿಪ್ರಾಯಗಳೂ ಅದರಲ್ಲಿ ವ್ಯಕ್ತವಾಗದೇ ಗತಿಯಿಲ್ಲ 'ರಸ' ದಂತೆ ಅರ್ಥವೂ ಸಾಹಿತ್ಯಕೃತಿಯ ಅಂಗವಾಗಿದೆ. ಆ್ಯಡಿಸನ್‌ನು (Addison) ಅಸೂಯಾ ಪರನೆಂದು ನಮ್ಮ ಮನವೊಲಿಸಲು ಪೋಪನು ತನ್ನ (Atticus) ಆ್ಯಟಿಕಸ್ ಎಂಬ ಕವನದಲ್ಲಿ ಹವಣಿಸಿದನು. ಶ್ಯಾಪ್ಟ್‌ಬರಿ ಎಂಬ ರಾಜಕಾರಣಿಯು ಭಿನ್ನಾಭಿಪ್ರಾಯ ಗಳನ್ನು ತಳೆದದ್ದರಿಂದ ಅವನು ನೀಚನೆಂದು ಜನತೆಯು ನಂಬುವಂತೆ ಮಾಡಲು ಡ್ರಾಯ್‌ಡನ್‌ನು ತನ್ನ ಒಂದೆರಡು ಕವನಗಳಲ್ಲಿ ಪ್ರಯತ್ನಿಸಿದ. ತಾನು ಸ್ವೀಕರಿಸಿದ

ಕ್ರಿಸ್ತಧರ್ಮದ ಪ್ಯುರಿಟನ್ ಮತವು ಶ್ರೇಷ್ಠವೆಂದು ಮಿಲ್ಟನ್‌ನು ತನ್ನ ಮಹಾಕಾವ್ಯದಲ್ಲಿ ಸಿದ್ಧಮಾಡಲೆಳಿಸಿದರೆ, ಫ್ರೆಂಚ್ ಕ್ರಾಂತಿಯ ಕಾಲದಲ್ಲಿ ಬೆಳೆದ ಶೆಲ್ಲಿಯು ಆ ಕ್ರಾಂತಿಯ ತತ್ವಗಳೇ ಜಗನ್ಮಾನ್ಯವಾಗಬೇಕೆಂದು, ತನ್ನ ಕಾವ್ಯದಲ್ಲೆಲ್ಲ ಅವುಗಳನ್ನು ಬಣ್ಣಿಸಿದ. ತನ್ನ ತಾತ್ವಿಕ ಕಾವ್ಯದಲ್ಲಿ ಒಂದು ವಿಶಿಷ್ಟದರ್ಶನವನ್ನು ಮಾತ್ರ ಲ್ಯೂಕ್ರಿಶಿಯಸ್‌ನು ಸಾರಿದ. ಈ ಕವಿಗಳು ತಮ್ಮ ತತ್ವಗಳನ್ನೂ ಅಭಿಪ್ರಾಯಗಳನ್ನೂ, ಸಹ ವ್ಯಕ್ತಗೊಳಿಸಲು, ತಮಗೆ ಅಲಂಕಾರಿಕ ಭಾಷೆಯ ಮೇಲಿದ್ದ ಪ್ರಭುತ್ವವನ್ನೂ ಉಪಯೋಗಿಸಿದರು.

ಆದರೆ ಬರಿ ಸಾಹಿತಿಗಳಷ್ಟೇ ಏಕೆ? ಪ್ರತಿಯೊಬ್ಬ ಸಾಮಾಜಿಕನೂ ಭಾಷೆಯನ್ನು ಈ ರೀತಿಯಲ್ಲಿ ಉಪಯೋಗಿಸುತ್ತಾನೆ. ಪ್ರತಿಯೊಬ್ಬನೂ ಜಗತ್ತು ತನ್ನ ಅಭಿಪ್ರಾಯಗಳನ್ನು ಸ್ವೀಕರಿಸಬೇಕೆಂದು ಹವಣಿಸುತ್ತಾನೆ. ತನಗೆ ಭಾಷೆಯ ಮೇಲಿದ್ದ ಪ್ರಭುತ್ವವನ್ನೆಲ್ಲಾ ಈ ಉದ್ದೇಶಕ್ಕಾಗಿ ಬಳಸುತ್ತಾನೆ.

ಅಲಂಕಾರಶಾಸ್ತ್ರವು ಭಾಷೆಯ ಮೇಲೆ ಹೇಗೆ ಪ್ರಭುತ್ವವನ್ನು ಗಳಿಸಬೇಕೆಂಬುದನ್ನು ಮಾತ್ರ ತಿಳಿಸಿಕೊಡುತ್ತದೆ. ಆ ಪ್ರಭುತ್ವವನ್ನು ಏತರ ಸಲುವಾಗಿ ಬಳಸಬೇಕೆಂಬುದನ್ನು ಅದು ಹೇಳಿಕೊಡಲಾರದು. ಇಲ್ಲಿ ನಾವೆಲ್ಲ ಒಂದೇ ಕಟ್ಟನ್ನು ಸ್ವೀಕರಿಸಬಹುದು. ಡೆಮಾಸ್ಥನಿಸ್, ಸಿಸಿರೋ, ಬರ್ಕ್ ಮೊದಲಾದವರು ಮಾಡಿದ ಭಾಷಣಗಳು ಇನ್ನೂ ಇವೆ. ಅವರ ಎಲ್ಲ ಅಭಿಪ್ರಾಯಗಳನ್ನೂ ಒಪ್ಪುವದು ನನುಗೆ ಸಾಧ್ಯವಿಲ್ಲ. ಆದರೂ ಆ ಭಾಷಣಗಳನ್ನು ನಾವು ಇಂದಿಗೂ ಓದಿ ಆನಂದಪಡುತ್ತೇವೆ. ಆ ಭಾಷಣಗಳ ಉದ್ದಕ್ಕೂ ಕಂಡುಬರುವ ಅನುಭವ, ಪ್ರಪಂಚಜ್ಞಾನ, ವ್ಯಕ್ತಿತ್ವ ದರ್ಶನ, ಭಾಷಾಪ್ರಭುತ್ವವು ನಮಗೆ ಬೇಕು. ಸಾಹಿತಿಯ ಅಭಿಪ್ರಾಯಗಳು ಏನೇ ಇರಲಿ. ಅವನು ಸಾಮ್ಯವಾದಿಯಾಗಿರಬಹುದು ; ಪ್ರಜಾಪ್ರಭುತ್ವವಾದಿಯಾಗಬಹುದು. ತನ್ನ ಸ್ವಂತದ ಅಭಿಪ್ರಾಯಗಳಲ್ಲಿ ಅಚಲ ಶ್ರದ್ಧೆಯಿದ್ದರೆ ಒಂದು ಮಾತು ಸಾಧಿಸಿದಂತಾಯಿತು. ಅಭಿಪ್ರಾಯಗಳು ಇನ್ನೊಬ್ಬರ ಅಂತಃಕರಣವನ್ನು ಭೇದಿಸಿದ್ದಾದರೆ ಇನ್ನೊಂದು ಮಾತು ಸಾಧಿಸಿದ್ದಾಯಿತು. ಕಾಲಕ್ಕೆ, ಅನಂತದ ಹಿನ್ನೆಲೆ, ಯುಗಕ್ಕೆ ಕಾಲದ ಹಿನ್ನಲೆ, ಒಂದು ವಿಶಿಷ್ಟ ಸಂದರ್ಭಕ್ಕೆ ಯುಗದ ಹಿನ್ನಲೆಯನ್ನು ಒದಗಿಸಿ ಕೊಟ್ಟು, ಸಾಹಿತಿಯು ಕಾಲದ ಹೃದಯದಲ್ಲಿಯೇ ಅನಂತವನ್ನರಳಿಸಿ ತೋರಿಸುತ್ತಾನೆ. ಅವನ ಅಭಿಪ್ರಾಯಗಳು ನಮಗೆ ಸರಿಹೋಗದಿದ್ದರೂ ಈ ಅನಂತತೆಯ ನಿರೂಪಣೆಯಿಂದ ಬರುವ ಆನಂದಕ್ಕಾಗಿ ಅವನ ಕಲೆಗಳನ್ನು ನಾವು ಪರಿಶೀಲಿಸುತ್ತೇವೆ. ಅವನ ಅಭಿಪ್ರಾಯಗಳು, ಅಸೂಯೆ, ಸಂಕುಚಿತಮನೋವ್ಯಕ್ತಿ, ಬುದ್ಧಿಸ್ವಾತಂತ್ರ್ಯದ ಅಭಾವ, ಅಂಧಶ್ರದ್ಧೆ ಇವುಗಳ ಮೇಲೆ ನಿಂತಿದ್ದರೆ ಅವನ ಕೃತಿಯ ವರ್ಚಸ್ಸು ಅಷ್ಟರ ಮಟ್ಟಿಗೆ ಕಡಿಮೆಯಾಗುತ್ತದೆ. ಕೃತಿಯ ತಾತ್ವಿಕ ಶರೀರದಲ್ಲಿ ಸತ್ವವಿಲ್ಲದಿದ್ದರೆ ಒಂದಂಗದಿಂದ ಕೃತಿಯು ಊನವಾಗುತ್ತದೆ. ಆದರೆ ಉಳಿದ ಅಂಶಗಳಲ್ಲಿ ಪ್ರತಿಭೆ ಕಂಡುಬಂದರೆ ಅವುಗಳಿಂದಾದರೂ ಪ್ರೇರಿತವಾಗಿ ರಸಗ್ರಹಣಕ್ಕೆ ನಾವು ಉದ್ಯುಕ್ತರಾಗುತ್ತೇವೆ.

ಅಲಂಕಾರವನ್ನು ಬಳಿಸಲು ಒಂದು ಆಯ್ಕೆ, ಒಂದು ಶಿಸ್ತು ಇಲ್ಲವೆ ಒಂದು ವಿಚಾರಕ್ರಮವು ನಮಗೆ ಬೇಕು. ಕಲಾವಸ್ತುವನ್ನು ಯಾವ ಮಾದರಿಯ ಅಲಂಕಾರ ಅಥವಾ ನಿರೂಪಣೆಯು ಉತ್ತಮವಾಗಿ ರೂಪಿಸಿ ತೋರಿಸಬಹುದೋ ಅಂಥ ನಿರೂಪಣೆಯನ್ನು ಅದಕ್ಕೆ ಹೊಂದಿಸುವ ಜಾಣ್ಮೆಯು ನಮಗೆ ಬೇಕು. ಅಭಿಪ್ರಾಯವನ್ನು ಮುಖ್ಯತಃ ಸಮರ್ಥಿಸುವ ಶಾಸ್ತ್ರೀಯ ವಾಙ್ಮಯಕ್ಕೂ ಭಾವನೆಯನ್ನು ಮುಖ್ಯತಃ ನಿರೂಪಿಸುವ ಸಾಹಿತ್ಯಕ್ಕೂ ಕೂಡಿಯೇ ಇಂಥ ಕ್ರಮವು ಬೇಕಾಗುತ್ತದೆ. ಎಲ್ಲಕ್ಕೂ ಮೊದಲು ಲೇಖಕನು ಸಾಮಾಜಿಕನ ಚಿತ್ತವನ್ನು ಆಕರ್ಷಿಸಬೇಕಾಗುತ್ತದೆ. ತನ್ನ ಅಭಿಪ್ರಾಯಗಳ ವರ್ಚಸ್ಸನ್ನು ಕೆಡಹುವ ಇಲ್ಲವೆ ಮನವೊಲಿಸುವ ಕಾರ್ಯವು ಇದಾದ ಮೇಲೆ ಮಾತ್ರ ಸಾಧ್ಯವಾದೀತು. ಹೀಗಾಗಿ ಅಲಂಕಾರಶಾಸ್ತ್ರವು ನಾವು ಮೊತ್ತ ಮೊದಲು ನಿರೂಪಣೆಯ ವಾಸ್ತುಶಿಲ್ಪವಾಗಿದೆ, ಅಲ್ಲದೆ ಅಲಂಕಾರವು ಹೊರಗಿನಿಂದ ಅರ್ಥದ ಮೇಲೆ ಆರೋಪಿಸುವ ಒಂದು ವಿಧಾನವಲ್ಲ. ಅದು ಒಳಗಿನಿಂದ ಅರ್ಥದೊಡನೆಯೇ ಬೆಳೆದು ಬರಬೇಕು, ಮನುಷ್ಯನ ಆತ್ಮದೊಡನೆ ಅವನ ದೇಹವು ಬೆಳೆದು ಬರುವಂತೆ. ಅಸ್ಥಿಪಂಜರವು ದೇಹದೊಳಗಿರುವಂತೆ ಅಲಂಕಾರವು ಎಲ್ಲ ಭಾಷಾಭಿವ್ಯಕ್ತಿಯಲ್ಲಿಯೂ ಹುದುಗಿಕೊಂಡಿದೆ. ಎಲ್ಲ ವಿಚಾರದ ಪರಿಣಾಮಕಾರಕತೆಯು ಅದರ ಮೇಲೆ ಕಟ್ಟುವ ರಚನೆಯಿಂದ ಮಾತ್ರ ಸಿದ್ಧವಾಗುತ್ತದೆ. ಶಾಸ್ತ್ರ, ವಿಜ್ಞಾನ, ಇತಿಹಾಸತತ್ವ, ಕಾವ್ಯ ಇವೆಲ್ಲವುಗಳ ನಿರೂಪಣೆಗೆ ತಕ್ಕುದಾದ ರೂಪವು ಒಳಗೆ ಹುದುಗಿದ್ದ ಈ ಅಲಂಕಾರದ ತಿರುಳಿನಿಂದಲೇ ಬರುತ್ತದೆ.

ಆನಂದದ ಆವೇಶದಲ್ಲಿ ರಚಿಸಿದಾಗ ಅಭಿಪ್ರಾಯಗಳೂ ಭಾಷೆಯಲ್ಲಿ ಬಂದೇ ಬರುತ್ತವೆ. ಆದರೆ ಸಾಮಾನ್ಯವಾಗಿ ಅವು ವಾಚಕನನ್ನು ರೇಗಿಸುವದಿಲ್ಲ. ಮೊದಲು ಆನಂದ, ಆ ಮೇಲೆ ಸಾಧ್ಯವಾದಲ್ಲಿ ಹಾಗೂ ಯುಕ್ತವಾದಲ್ಲಿ ತಾತ್ವಿಕ ವಿವೇಚನೆಯ ದೃಷ್ಟಿಯಿಂದ ಮಾಡುವ ಸಂಬೋಧನೆಯು ಎಲ್ಲ ಸಾಹಿತ್ಯವು ಅನುಸರಿಸಬೇಕಾದ ವಿಧಾನವಾಗಿದೆ.

ಸಾಹಿತಿಗಳಲ್ಲಿ ಎರಡು ಮಾದರಿಗಳು ಕಂಡುಬರುತ್ತವೆ. ಒಂದು ಶೇಕ್ಸ್ಪಿಯರ್ ಹಾಗೂ ಕೀಟ್ಸರ ಜಾತಿಗೆ ಸೇರಿದುದು. ಇನ್ನೊಂದು ಮಿಲ್ಟನ್ ಹಾಗೂ ಶೆಲ್ಲಿಯ ಮನೋಧರ್ಮದ್ದು. ಮೊದಲನೆಯ ಮಾದರಿಯಲ್ಲಿ ಸೌಂದರ್ಯಾನುಭವದ ಆತ್ಮಪ್ರತ್ಯಯವನ್ನು ಸಾಮಾಜಿಕನಿಗೆ ಕೊಡುವುದು ಹೊರತಾಗಿ ಬೇರೆ ಯಾವ ವಿಷಯವೂ ಕಂಡುಬರುವುದಿಲ್ಲ. ಬುದ್ಧಿಜನ್ಯ ಸಿದ್ಧಾಂತಗಳು ಇಂತವರ ಕಾವ್ಯದಲ್ಲಿದ್ದರೆ ಅವು ಸಾಮಾನ್ಯವಾಗಿ ಸ್ವಾಗತಾರ್ಹವಿರುತ್ತವೆ. ಅರಸೊತ್ತಿಗೆಯಲ್ಲಿ ಶೇಕ್ಸ್ಪಿಯರನು ವಿಶ್ವಾಸವಿಟ್ಟಂತೆ, ಕಾಲಾಂತರದ ಪ್ರಭಾವದಿಂದ ಹಳೆಯ ವಿಚಾರಗಳು ಅಲ್ಲಲ್ಲಿ ಕಂಡು ಬಂದರೆ ಅವುಗಳನ್ನು ಬರಿ ಐತಿಹಾಸಿಕವಾಗಿ ನೋಡಿ ಅಂಥ ಕಾವ್ಯದ ಸೌಂದರ್ಯಾನುಭವವನ್ನು ಪಡೆಯುವುದು ಸಾಧ್ಯವಿರುತ್ತದೆ.

ಮಿಲ್ಟನ್ ಹಾಗೂ ಶೆಲ್ಲಿಯ ಮಾದರಿಯ ಕಾವ್ಯದಲ್ಲಿ, ತತ್ವಪ್ರತಿಪಾದನೆಯೂ,

ಕಾವ್ಯವೂ ಅವಿರಳವಾಗಿ ಬೆರೆತುಕೊಂಡಿರುತ್ತವೆ. ಇಂಥ ಕವಿಯು ತನ್ನ ತತ್ವಗಳನ್ನು ತನ್ನ ಜೀವನದ ಸರ್ವಸ್ವವೆಂದು ತಿಳಿದಿರುತ್ತಾನೆ. ಅವನ ಕವಿತಾಸ್ಫೂರ್ತಿಯೂ ಅನೇಕ ಸಲ ಅವನ ತತ್ವಗಳಿಂದ ಪ್ರಚೋದಿತವಾಗಿರುತ್ತದೆ. ಇಂಥ ಕವಿಯ ತತ್ವಗಳೊಡನೆ ಸಮರಸ ಹೊಂದಿದ ಸಾಮಾಜಿಕನು ಆ ಕವಿಗಿಂತ ಮೇಲ್ತರಗತಿಯ ಕವಿಯೇ ಇಲ್ಲವೆಂದು ಹೇಳಿದರೆ, ಆ ತತ್ವಗಳನ್ನು ಬರ್ಜಣವೆಂದು ತಿಳಿದ ಸಾಮಾಜಿಕನು ಅವುಗಳ ಪುರಸ್ಕರ್ತನಾದ ಕವಿಯನ್ನು ಅಲ್ಲಗಳೆಯುತ್ತಾನೆ. ಇಂಥ ಸೂಕ್ಷ್ಮಕಾವ್ಯ ವ್ಯಾಪಾರದಲ್ಲಿ ಯಶಸ್ವಿಯಾಗುವದು ಕವಿಯನ್ನೇ ಕೂಡಿದೆ. ಅವನು ತನ್ನ ತತ್ವಗಳನ್ನು ಬರಿ ಬೌದ್ಧಿಕವಾಗಿ ಗ್ರಹಿಸದೆ ಕಲ್ಪಕತೆಯ ಸೂಕ್ಷ್ಮದೃಷ್ಟಿಯಿಂದ ಅವುಗಳನ್ನು ಭೇದಿಸಿ ನೋಡಿದರೆ ಆ ತತ್ವಗಳೂ ರಸಾನುಭವದ ಉಚಿತವಾಹನಗಳಾಗುತ್ತವೆ. ಕಥಾನಕ, ರಸನಿಮಿಷಮಾಲೆ, ಪಾತ್ರಸೃಷ್ಟಿ, ತತ್ವನಿರೂಪಣೆ, ಸಾಮಾಜಿಕ ಜೀವನದ ನಿರೂಪಣೆ—ಇವೆಲ್ಲ ಕಾವ್ಯವಸ್ತುವಾಗಿ, ಕವಿಯ ವ್ಯಕ್ತಿತ್ವವನ್ನೂ ಅನುಭವವನ್ನೂ ನೇರವಾಗಿ ಪ್ರತಿಬಿಂಬಿಸಬಲ್ಲವು. ಪ್ರತಿಬಿಂಬದಲ್ಲಿ ಮಾತ್ರ ಯಾವ ಮುಸುಕೂ, ಆತಂಕವೂ ಇಲ್ಲವೆ ವಿಕಲ್ಪಕತೆಯೂ ಕಂಡು ಬರಬಾರದು. ತತ್ವ ಪ್ರತಿಪಾದನೆಯಲ್ಲಿಯೂ ಈ ಇಂದ್ರಗನ್ನಡಿಯ ಪರಿವರ್ತನೆಬೇಕು. ಕವಿಯ ತತ್ವಗಳೇನೇಯಿರಲಿ, ನಮ್ಮ ಸಂಬಂಧವಿರುವುದು ಅವನ ತತ್ವಗಳೊಡನೆ ಅಲ್ಲ; ಧ್ವನಿತವಾಗುವ ವ್ಯಕ್ತಿತ್ವ ಹಾಗೂ ಅನುಭವಮೊಡನೆ. ಡ್ರಾಯಡನ್, ಶ್ಯಾಡವೆಲ್ಲನನ್ನು ಟೀಕಿಸಿದಷ್ಟೇನೂ ಶ್ಯಾಡ್‌ವೆಲ್ಲನು ಕೀಳುಕವಿಯಲ್ಲ. ಶ್ಯಾಡ್‌ವೆಲ್ಲನ ಬಗೆಗೆ ಡ್ರಾಯಿಡನ್‌ನ್ನಿಗಿದ್ದ ಅಭಿಪ್ರಾಯಗಳನ್ನು ನಾವು ಸ್ವೀಕರಿಸುವದಿಲ್ಲ. ಆದರೆ ಕೀಳುಕವಿಗಳ ಬಗೆಗೆ ಇದ್ದ ಡ್ರಾಯಿಡನ್‌ನ ವಿನೋದಮಯ ತಿರಸ್ಕಾರವನ್ನೂ ತನ್ನ ಪ್ರತಿಭೆಯ ಬಗೆಗೆ ಆತನಿಗಿದ್ದ ಯಥೋಚಿತ ಆತ್ಮವಿಶ್ವಾಸವನ್ನೂ ತಿಳಿದುಕೊಂಡು ನಾವು ಆನಂದಿಸುತ್ತೇವೆ. ಹೀಗೆ ಕಲ್ಪಕತೆಯು ಜಾಗ್ರತವಾಗಿದ್ದರೆ, ತತ್ವವಾಗಲಿ ಅಭಿಪ್ರಾಯವಾಗಲಿ, ಆ ಕಲ್ಪಕತೆಯ ಸಹಾಯದಿಂದ ಒಂದು ಚಿರಂತನ ಸತ್ಯ ಇಲ್ಲವೆ ಅನುಭವದ ಪ್ರತೀಕವಾಗಲು ಸಮರ್ಥವಾಗುತ್ತದೆ.

ಶಾಃ ಮೊದಲಾದ ಸಾಹಿತಿಗಳು ಪ್ರಚಾರವೇ ಕಲೆಯ ಸಾರಸರ್ವಸ್ವವೆಂದು ತಿಳಿಯುತ್ತಾರೆ. ಕಲೆಯೆಂದರೆ ಅವರ ಅರ್ಥದಲ್ಲಿ ಪ್ರಚಾರವಾಗಿದೆ. ಇದೂ ಒಂದು ರೀತಿಯಿಂದ ಸಾಧುವೆಂದೇ ಹೇಳಬೇಕು. ಕವಿಯು ಆಳವಾಗಿ ತನ್ನ ತತ್ವಗಳನ್ನೆಲ್ಲಾ ನಂಬದ-ಹೊರತು ಪ್ರತಿಭಾಪೂರ್ಣವಾಗಿ, ಅವನು ಆ ತತ್ವಗಳನ್ನು ನಿರೂಪಿಸಲಾರ. ಹೀಗೆ ನಂಬಿ ಕಲ್ಪನಾಪೂರ್ಣವಾಗಿ ಆತನು ರಚಿಸಿದ ಸಾಹಿತ್ಯದಲ್ಲಿಯ ಅನುಭವ—ವ್ಯಕ್ತಿತ್ವಗಳನ್ನು ನಾವು ಸಂತೋಷದಿಂದ ಸ್ವೀಕರಿಸುತ್ತೇವೆ. ಆ ವ್ಯಕ್ತಿತ್ವಕ್ಕೆ ಮನಸೋತ ಕೆಲವರು ಆ ಅಭಿಪ್ರಾಯಗಳಿಗೂ ಮನಸೋಲಬಹುದು. ಆ ಅಭಿಪ್ರಾಯಗಳು ಬೇಡವಾದಾಗ ಆ ವ್ಯಕ್ತಿತ್ವವು ಕೊಡಲಿರುವ ಆನಂದಕ್ಕೆ ಹೊರತಾಗಬಹುದು. ಆದರೆ ಸಂಸ್ಕಾರವಂತನಾದ ಸಾಮಾಜಿಕನು ಇಂಥ ಕಾವ್ಯವನ್ನೋದಿದಾಗ

ವ್ಯಕ್ತಿತ್ವ ಮತ್ತು ಅನುಭವದ ನಿರೂಪಣೆಯನ್ನು ಆನಂದದಿಂದ ಗ್ರಹಿಸುವನು.

ಈ ವಿಮರ್ಶಾತತ್ವಗಳು ಗ್ರಾಹ್ಯವೆಂದು ನಾವು ತಿಳಿದಪಕ್ಷದಲ್ಲಿ ಕನ್ನಡ ಸಾಹಿತ್ಯಕ್ಕೆ ಅವುಗಳನ್ನು ಅನ್ವಯಿಸಿ ನೋಡಿದರೆ ಹೊಸಬೆಳಕೊಂದು ಆ ಸಾಹಿತ್ಯದ ಮೇಲೆ ಬಿದ್ದಂತಾಗುವದೆಂದು ನನಗೆನಿಸುತ್ತದೆ. ಪಂಪನು ನಿಜವಾಗಿ ಏನನ್ನು ನಂಬಿದ? ಧರ್ಮವನ್ನೋ ಕಾವ್ಯಧರ್ಮವನ್ನೋ? ಅವನ **ಆದಿಪುರಾಣ**ದಲ್ಲಿ ನಿರೂಪಿತವಾದ ಧರ್ಮಬೋಧನೆಯು ಬರಿ ಬಂದು ಮತದ ತತ್ವಪುರಾಣಗಳನ್ನು ನಿರೂಪಿಸುವದೆ? ಇಲ್ಲವೆ ತ್ಯಾಗ—ಭೋಗದಂತಹ ಜೀವನದ ಒಂದು ಚಿರಂತನ ತತ್ವದ ಅನುಭವವನ್ನು ಪ್ರತಿಭಾವಂತವಾಗಿ ಅರಳಿಸಿ ತೋರಿಸುವದೆ? ಶರಣರ ವಚನಗಳಲ್ಲಿ ಅನುಭವ-ಕಲ್ಪಕತೆಗಳಿಂದ ಅರಳಿದ ದರ್ಶನ ಪ್ರತಿಭೆಯ ಸಹಾಯದಿಂದ ಪ್ರತೀಕ ಸಾಮರ್ಥ್ಯನನ್ನು ಪಡೆದ ತತ್ವ ಹಾಗೆ ಮಾರ್ಪಡದ ತತ್ವ ಇಲ್ಲವೆ ಅಭಿಪ್ರಾಯ—ಇವುಗಳ ಪ್ರಮಾಣವಾವುದು? ಧರ್ಮವನ್ನು ಹಿಂಜಿ ಹಿಂಜಿ, ಅದನ್ನು ಕಾವ್ಯಮಯವಾಗಿಸಿದ ರತ್ನಾಕರವರ್ಣಿಯ ಕೃತಿಯಲ್ಲಿ **ಪಚನವಾಗ**ದಿದ್ದ ತತ್ವ ಎಷ್ಟರ ಮಟ್ಟಿಗೆ ಉಳಿದುಕೊಂಡಿದೆ? ಕುಮಾರವ್ಯಾಸನ ಭಾರತದಲ್ಲಿ ಅವನ ಪ್ರತಿಭೆಯ ಕಣ್ಣಿಗೆ ಬೀಳದಿದ್ದ ತಾತ್ವಿಕಭಾಗಗಳು ಅದೆಷ್ಟು ಉಳಿದುಕೊಂಡಿವೆ? ಮತಪ್ರಧಾನವಾಗಿ ನಮ್ಮ ಹಿಂದಿನ ಕಾವ್ಯವು ಬೆಳೆದು ಬಂದಿದ್ದರೂ, ಅದರಲ್ಲಿಯ ಶ್ರೇಷ್ಠಕೃತಿಗಳಲ್ಲಿ ಮತವು ಜೀವನದ ಪ್ರತೀಕವಾಗಿ ಬಂದಿದೆಯೆಂಬದನ್ನು ನಾವು ಮರೆಯಲಾರೆವು. ಈ ದೃಷ್ಟಿಯಿಂದ ನೋಡಿದಾಗ ಕವಿಗಳನ್ನು 'ಜೈನರು', 'ವೀರಶೈವರು', 'ಬ್ರಾಹ್ಮಣರು' ಎಂದು ಕೋಮುವಾರು ವರ್ಗೀಕರಿಸುವ ವಿಚಾರವನ್ನು ಬಿಟ್ಟು, ತತ್ವವನ್ನು ಜೀವನಾನುಭವದ ಪ್ರತೀಕವಾಗಿಸಬಲ್ಲ ಅವರ ಪ್ರತಿಭೆಗನುಸಾರವಾಗಿ ಅವರನ್ನು ವರ್ಗೀಕರಿಸುವ ಕಾಲ ಬಂದೀತು. ಅಲ್ಲದೆ ನಮ್ಮ ಹಿಂದಿನ ಸಾಹಿತ್ಯ ಬರಿ ಮತಪ್ರಧಾನವೆಂಬ ಭ್ರಾಂತಿ, ಭ್ರಾಂತಿಯೂ ತೊಲಗೀತು. ಇಂದಿನ ಸಾಹಿತ್ಯಕ್ಕಿಂತ ಹಿಂದಿನ ಸಾಹಿತ್ಯವೇನೂ ಹೆಚ್ಚಾಗಿ ಮತಪ್ರಧಾನವಾಗಿರಲಿಲ್ಲ. ಇಂದಿನ ತಾತ್ವಿಕ ದೃಷ್ಟಿಗಳು ಬೇರೆ. ಅಂದಿನವು ಬೇರೆ. ಇಂದಿನ ಸಾಹಿತ್ಯದಲ್ಲಿ ಮೂಡಿದ ತಾತ್ವಿಕ ದೃಷ್ಟಿ **ಇಂದಿನ**ದಾಗಿರುವದರಿಂದ, ಅದು ತೀರ ಸಮೀಪ, ತೀರ ನಿಕಟವಾಗಿರುತ್ತದೆ. ಅಂತಹದೊಂದು ದೃಷ್ಟಿ ಆ ಸಾಹಿತ್ಯದಲ್ಲಿದೆಯೆಂಬುದನ್ನು ಸಹ ನಾವು ಮರೆಯುತ್ತೇವೆ. ಆದರೆ ಹಿಂದಿನ ಸಾಹಿತ್ಯವನ್ನೋದಿದಾಗ ಆಗಿನ ತಾತ್ವಿಕ ದೃಷ್ಟಿ ಭಿನ್ನವಾಗಿರುವದರಿಂದ ಅದು ನಮಗೆ ಎದ್ದು ಕಾಣುತ್ತದೆ. ಪ್ರಜಾಪ್ರಭುತ್ವವಾದ, ಸಮತಾವಾದ, ಮಾನವತಾವಾದ, ಮಾರ್ಕ್ಸವಾದ, ಅನುಭಾವವಾದ,—ಇವೇ ಮೊದಲಾದವು ಇಂದಿನ ಮತಗಳಾಗಿವೆ. ಇವು ಬರಿ ರಾಜಕೀಯ ಮತಗಳಲ್ಲವೆಂಬುದನ್ನು ನೆನೆಯಬೇಕು. ಇವುಗಳಿಗೂ ಒಂದು ತಾತ್ವಿಕ ಹಿನ್ನೆಲೆಯಿದೆ. ವ್ಯಕ್ತಿಯ ಮಾರ್ಪಾಟು, ಹಾಗೂ ಸಮಾಜದ ಪುನರ್ವ್ಯವಸ್ಥೆ,—ಈ ಎರಡೂ ಸಮಸ್ಯೆಗಳನ್ನು ಮೇಲೆ ಕಾಣಿಸಿದ ಮತಗಳು ಗಣನೆಯಲ್ಲಿ ತೆಗೆದುಕೊಂಡಿವೆ.

ಜೈನ, ಶೈವ, ವೀರಶೈವ, ವೈಷ್ಣವ, ಶ್ರೀವೈಷ್ಣವ, ಇವು ಆ ಕಾಲದಲ್ಲಿ ತಲೆ ಎತ್ತಿದ ಮತಗಳಾಗಿ, ಮೇಲೆ ಕಾಣಿಸಿದ ಸಮಸ್ಯೆಗಳನ್ನೇ ಬಿಡಿಸಲು ಹವಣಿಸಿದವು. ಪ್ರತಿಯೊಂದು ಯುಗದ ಕಾವ್ಯದಲ್ಲಿಯೂ ಆ ಯುಗದ ತತ್ವಪ್ರವೇಶ ಅನಿವಾರ್ಯ. ಆ ಕಾಲದ ಕವಿಗಳು ಆ ಕಾಲದ ಮತದಿಂದ ಒಂದು ಹೆಚ್ಚಿನ ಪ್ರಚೋದನೆಯನ್ನು ಪಡೆಯುತ್ತಾರೆ. ತಮತಮಗೆ ಒಗ್ಗಿದ ಮತವನ್ನು ಆಯ್ದುಕೊಳ್ಳುತ್ತಾರೆ. ಕನಕದಾಸನು ವೈಷ್ಣವ ಸಂಪ್ರದಾಯಕ್ಕೊಲಿದರೆ ಬಸವೇಶ್ವರನು ಶರಣರ ಮಾರ್ಗಕ್ಕೊಲಿದು ಅದನ್ನು ಮುಂದುವರಿಸುತ್ತಾನೆ. ಆಗ ಮತದ ಆಯ್ಕೆಯು ಬಹುಶಃ ವಂಶಿಕವಾಗಿದ್ದಿತು. ಈಗ ಅದು ಹೆಚ್ಚಾಗಿ ವೈಯಕ್ತಿಕವಾಗಿದೆ. ಆದರೆ ಇದು ಮುಖ್ಯ ವಿಷಯವಲ್ಲ. ಒಂದಿಲ್ಲೊಂದು ತತ್ವ, ಇಲ್ಲವೆ ಮತಕಾವ್ಯದಲ್ಲಿ ಅಲ್ಪವಾದ ಅಂಶವಾದರೂ ಕಾಣಿಸಿಕೊಳ್ಳದೆ ಗತ್ಯಂತರವಿಲ್ಲ. ಯಾವದಾದರೊಂದು ವೃಕ್ಷವನ್ನು ಆಶ್ರಯಿಸಿ ಬಳ್ಳಿಯು ಹಬ್ಬುತ್ತದೆ. ಒಂದು ತತ್ವ ಇಲ್ಲವೆ ಮತವನ್ನಾಶ್ರಯಿಸಿ ಕವಿಯ ದೃಷ್ಟಿಯು ಚಲ್ಲವರಿಯುತ್ತದೆ. ಮುಖ್ಯ ವಿಷಯವಿದು. ಪ್ರವರ್ಧಮಾನನಾದ ಕವಿಯ ಜೀವನ ದೃಷ್ಟಿ, ಕವಿಯ ಅನುಭವ ಪ್ರತಿಭೆಗಳ ಬಲದಿಂದ, ಜೀವನದ ಪ್ರತೀಕವಾಗಿ ಪರಿವರ್ತನಗೊಂಡ ತತ್ವ.

ಇಂದಿನ ಸಾಮಾಜಿಕರು ಹಿಂದಿನ ಮತಗಳನ್ನು ಆನುವಂಶಿಕವಾಗಿ ಪಡೆದುಕೊಂಡಿದ್ದಾರೆ. ವೈಯಕ್ತಿಕವಾಗಿ ಅವರ ಮನೋಧರ್ಮ ಇಂದಿನ ಯಾವುದಾದರೊಂದು ಮತದೆಡೆಗೆ ಧಾವಿಸುತ್ತಿರುತ್ತದೆ. ಹಲವುಸಲ ಆನುವಂಶಿಕ ಮತವನ್ನು ಧರ್ಮವೆಂದೂ, ಇಂದಿನ ಮತವನ್ನು ತನ್ನ ರಾಜಕೀಯ ತತ್ವವೆಂದೂ ವ್ಯಕ್ತಿಯು ಗ್ರಹಿಸುತ್ತಾನೆ. ನಿಲುಮೆ ಯಾವುದೇ ಇರಲಿ,—ಅನುಭವ—ಜೀವನ ದೃಷ್ಟಿಯಾಗಿ ತತ್ವವನ್ನು ಪರಿವರ್ತಿಸಿದ ಪ್ರತಿಭೆಯಿಂದ ಮಾತ್ರ ನಾವು ಸಾಹಿತ್ಯವನ್ನು ಅಳೆಯಬೇಕಾಗಿದೆ. ಒಂದು ತತ್ವದ ನಿಲುಮೆಯಲ್ಲಿ ನಿಂತ ಕವಿ, ಮೊದಲೂ ಕೊನೆಗೂ ಮಾನವ, ಬರಿ ಮತಾವಲಂಬಿಯಲ್ಲವೆಂಬುದನ್ನು ನಾವು ನೆನೆಯಬೇಕಾಗಿದೆ. ಆಗ ಸಾಹಿತ್ಯದ ನೈಜ ಅಭ್ಯಾಸ ಸ್ಫೂರ್ತಿಗೊಳ್ಳುವುದು; ಹೀಗೆ ಅಭ್ಯಸಿಸಿದ ಸಾಹಿತ್ಯ ಜೀವನವನ್ನು ಸುಸಂಸ್ಕೃತಗೊಳಿಸಲು ಸಮರ್ಥವಾಗುವದು.

ಒಂದು ಮತದ ಪಾರಿಭಾಷಿಕ ಶಬ್ದಗಳನ್ನು ತಿಳಿದುಕೊಳ್ಳುವದು ಅನ್ಯಮತೀಯರಿಗೆ ಕಠಿಣವಾಗುತ್ತದೆ. ಅಂತೇ ಒಂದೊಂದು ಮತೀಯ ಸಾಹಿತ್ಯವನ್ನು ಆಯಾ ಮತೀಯರು ಮಾತ್ರ ತಿಳಿದುಕೊಳ್ಳಲು ಕಾಲವೊಂದಿತ್ತು. ಮಾರ್ಕ್ಸವಾದಿಯು ಅನುಭವ ಸಾಹಿತ್ಯದ ಸವಿಯನ್ನು ಆಳವಾದ ಅಭ್ಯಾಸವಿಲ್ಲದೆ ಸಹಜವಾಗಿ ಗ್ರಹಿಸಲಾರ. ಅನುಭಾವಿಯು ಮಾರ್ಕ್ಸವಾದದ ಪರಿಭಾಷೆಯನ್ನು ತಿಳಿಯಲಾರದೆ ಆ ಸಾಹಿತ್ಯದ ರಸಾನುಭವವನ್ನು ಪಡೆಯಲಾರ. ಜೈನ, ಶೈವ, ವೀರಶೈವ, ವೈಷ್ಣವ, ಶ್ರೀವೈಷ್ಣವ, ಮೊದಲಾದ ಎಲ್ಲ ಮತಗಳನ್ನೂ ಅವಲಂಬಿಸಿದ ಸಾಹಿತ್ಯದ ವಿಷಯವೂ ಹೀಗೆಯೇ.

ತನಗೆ ಪ್ರಿಯವಾದ ಮತವನ್ನವಲಂಬಿದ ಸಾಹಿತ್ಯದ ರಸಾನುಭವವು ಸುಲಭವಾಗಿದೆ, ನಿಜ. ಆದರೆ ಭಿನ್ನಮತಗಳನ್ನಾಶ್ರಯಿಸಿ ಬೆಳೆದ ಸಾಹಿತ್ಯವನ್ನು ಅಭ್ಯಸಿಸಿ ಅಲ್ಲಿಯ ತತ್ವ ಹೇಗೆ ಅನುಭವ–ಜೀವನದೃಷ್ಟಿಗಳ ಪ್ರತೀಕವಾಗಿದೆಯೆಂಬುದನ್ನು ತಿಳಿಯುವುದಲ್ಲಿ ಒಂದು ಹೆಚ್ಚಿನ ಸಫಲತೆಯಿದೆ. ಇಂತಹ ಮೂರ್ಪಾಟಿನ ಪವಾಡವನ್ನು ಜರುಗಿಸಬಲ್ಲ ಪ್ರತಿಭೆಯ ರೂಪ ಆಗ ರಸಿಕನ ಕಣ್ಣಿಗೆ ಇನ್ನಷ್ಟು ನಿಚ್ಚಳವಾಗಿ ಗೋಚರವಾಗುತ್ತದೆ. ವಿಶ್ವಮಾನವನ ತಿರುಳಾದ ದರ್ಶನವೂ,ಅನುಭವವೂ ಆಗ ಇನ್ನಿಷ್ಟು ಉತ್ಕಟವಾಗಿ ನಮ್ಮದಾಗುತ್ತದೆ. ಒಂದು ಮತದ ದೃಷ್ಟಿ ಆಗ ನಿಜವಾಗಿ ಕನ್ನಡದ ಕಣ್ಣಿನ ದೃಷ್ಟಿಯಾಗುತ್ತದೆ. ಕನ್ನಡದ ದೃಷ್ಟಿ ಭಾರತೀಯ, ಮಾನವೀಯ ದೃಷ್ಟಿಯಾಗುತ್ತದೆ. ಈ ಹಾದಿಯ ಮೇಲೆ ಶುಭಚಿನ್ಹೆಗಳು ಕಾಣಿಸಿಕೊಂಡಿವೆ. ಈ ಪರಂಪರೆ ನಮ್ಮಲ್ಲಿ ಬೆಳೆಯಬೇಕು.

ವಿ. ಕೃ. ಗೋಕಾಕ

## ವಿಶಾಖದತ್ತನ ಮುದ್ರಾರಾಕ್ಷಸ ನಾಟಕದಲ್ಲಿಯ ವೃಷಲ ಎಂಬ ಶಬ್ದ

ವಿಶಾಖದತ್ತನ ಸಂಸ್ಕೃತ ಮುದ್ರಾರಾಕ್ಷಸ ನಾಟಕದಲ್ಲಿ ಬ್ರಾಹ್ಮಣನಾದ ಚಾಣಕ್ಯನು ತಾನೇ ನಂದರ ಸಿಂಹಾಸನದಲ್ಲಿ ಕುಳ್ಳಿರಿಸಿದ ರಾಜಾಧಿರಾಜನಾದ (ಅಂಕ III ೧೫ನೆಯ ಪದ್ಯದ ಹಿಂದಣ ಗದ್ಯ) ಚಂದ್ರಗುಪ್ತನನ್ನು ಪರೋಕ್ಷವೂ ಅಪರೋಕ್ಷವೂ ಆಗಿ ಪುನಃ ಪುನಃ ವೃಷಲ ಎಂದೇ ಕರೆಯುತ್ತಾನೆ ; ಉದಾ:

**ಅಂಕ I**

(೧) ವೃಷಲಮಭಿಯೋಕ್ತುಮುದ್ಯತ ಇತಿ,
(೨) ವೃಷಲಸ್ಯ ಸಾಚಿವ್ಯಂ, (೩) ವೃಷಲಮನುರಕ್ತಾಃ ಪ್ರಕೃತಯಃ (೪) ಸಾಧು ವೃಷಲ, (೫) ವೃಷಲಃ ಸಮಾಜ್ಞಾಪಯತಿ;

**ಅಂಕ II**

(೧) ವೃಷಲೋ ಮಾಂ ದ್ರಷ್ಟುಮಿಚ್ಛತಿ,
(೨) ಸಿಂಹಾಸನಮಧ್ಯಾಸ್ತೇ ವೃಷಲಃ, (೩) ವಿಜಯತಾಂ ವೃಷಲಃ, (೪) ವೃಷಲ ಶ್ರೂಯತಾಂ, (೫) ಭೋ ವೃಷಲ ತೇನ ಕಿಂ ಕೃತಮ್ ?

**ಅಂಕ VII**

(೧) ಚಿರಮಾಯಾಸಿತಾ ಸೇನಾ ವೃಷಲಸ್ಯ ಮತಿಶ್ಚ, ಮೇ ॥೮॥ (೨) ವೃಷಲಸ್ಯ ವೀರ ಭವತಾಂ ಸಂಯೋಗಮಿಚ್ಛೋರ್ನಯಃ ॥೯॥ (೩) ವೃಷಲಸ್ತ್ವಾಂ ದ್ರಷ್ಟುಮಿಚ್ಛತಿ,
ಇ ಇ

ಚಾಣಕ್ಯನು ಚಂದ್ರಗುಪ್ತನ ಹಿಂದೆಯೂ ಮುಂದೆಯೂ ಆತನನ್ನು ಒಮ್ಮೊಮ್ಮೆ ಏನೋ ಚಂದ್ರಗುಪ್ತ ಎಂದೂ ಕರೆಯುತ್ತಾನೆ ಎಂಬುದು ನೇರೇ, ಉದಾ. I ಅಂಕದಲ್ಲಿ

(೧) ಚಂದ್ರಗುಪ್ತರಾಜ್ಯಮಿದಂ ನ ನಂದರಾಜ್ಯಮ್,
(೨) ಚಂದ್ರಗುಪ್ತಸ್ಯ ತು ಭವತಾಮುಪರಿಕ್ಲೇಶ ಏವ,
(೩) ಚಂದ್ರಗುಪ್ತ ನೃಪತೇಃ (ಪದ್ಯ ೨೩) ಇ.

ಆದರೆ ಅಂಥಾ ಸಂದರ್ಭಗಳು ತೀರ ವಿರಳ, ಉದಾ. III ಅಂಕದಲ್ಲಿ ಆತನು ಚಂದ್ರಗುಪ್ತನನ್ನು ಹೆಚ್ಚು ಕಡಿಮೆ ೨೨ ಬಾರಿ ವೃಷಲ ಎನ್ನುವಲ್ಲಿ, ಚಂದ್ರಗುಪ್ತನೆಂದು ಕರೆವನೆಂದರೆ ಒಂದೇ ಒಂದು ಬಾರಿ, ೧೨ ನೆಯ ಪದ್ಯದಲ್ಲಿ—

ನಂದೋಽಸೌ ನ ಭವತಿ ಚಂದ್ರಗುಪ್ತ ಏಷಃ !

ಸಂಸ್ಕೃತ ಕೋಶಗಳಲ್ಲಿ ವೃಷಲ ಎಂಬ ಪದವನ್ನು ಹೀಗೆ ಅರ್ಥವಿಸಿದೆ—

(೧) ಶೂದ್ರಾಶ್ಚಾವರ ವರ್ಣಾಶ್ಚ ವೃಷಲಾಶ್ಚ ಜಘನ್ಯಜಾಃ ॥೧॥
( ಅಮರಕೋಶ, II ಶೂದ್ರವರ್ಗ)

(೨) ಶೂದ್ರಾಂತ್ಯವರ್ಣೌ ವೃಷಲಃ ಪದ್ಯಃ ಪಜ್ಜೋ ಜಘನ್ಯಜಃ॥ ೮೯೪॥
(ಹೇಮಚಂದ್ರನ ಅಭಿಧಾನ ಚಿಂತಾಮಣಿ)

(೩) ವೃಷಲಸ್ತುರಗೇ ಶೂದ್ರೇ ।೧೨೪೪।
(ಹೇಮಚಂದ್ರನ ಅನೇಕಾರ್ಥ ಸಂಗ್ರಹ)

(೪) ಶೂದ್ರೋಽಂತ್ಯವರ್ಣೋ ವೃಷಲೋ ಪದ್ಯಃ ॥೪೩೨॥
(ಹಲಾಯುಧನ ಅಭಿಧಾನರತ್ನಮಾಲೆ)

ಮುದ್ರಾರಾಕ್ಷಸ ನಾಟಕಕ್ಕೆ ವ್ಯಾಖ್ಯೆಯನ್ನು ಬರೆದ ಢುಂಢಿರಾಜನೂ (ಮುಂಬಯಿಯ ನಿರ್ಣಯಸಾಗರ ಛಾಪಖಾನೆಯ ಮುದ್ರಣ, ೧೯೧೮) ವೃಷಲವನ್ನು ಅದೇ ಶೂದ್ರಾರ್ಥದಲ್ಲಿ ಗ್ರಹಿಸಿರುತ್ತಾನೆಂದು, ಆ ನಾಟಕದ ಮೊದಲಿಂದ ಮೊದಲಾಗಿ ಚಂದ್ರಗುಪ್ತನನ್ನು ವೃಷಲ ಎಂದು ಕರೆದು ಬಂದಿದ್ದ ಚಾಣಕ್ಯನು ಅದರ ಕೊನೆಯ (VII) ಅಂಕದಲ್ಲಿ ಆತನನ್ನು ' ಭೋ ರಾಜನ್, ಚಂದ್ರಗುಪ್ತ ' ಎಂದು ಸಂಬೋಧಿಸಿದುದನ್ನು ಟೀಕಿಸುವಲ್ಲಿ, ಆತನು

ಇದಾನೀಂ ಚಂದ್ರಗುಪ್ತಸ್ಯ ರಾಜ್ಯಲಕ್ಷ್ಮೀ—
ಸ್ಥಿರೀಕರಣಾಧ್ಯವಸಾಯಾದ್ವೃಷಲ ಶಬ್ದಮಪ—
ಹಾಯ ರಾಜನ್ನಿತಿ ಸಂಬೋಧನಮ್

ಎಂದು ತನ್ನ ವ್ಯಾಖ್ಯೆಯಲ್ಲಿ ಹೇಳಿರುವಲ್ಲಿ ವ್ಯಕ್ತವಾಗುತ್ತದೆ.

ಈಗ ನಮ್ಮನ್ನೇ ನಾವು ಕೇಳಿಕೊಳ್ಳೋಣ, ಚಂದ್ರಗುಪ್ತನು ಜನ್ಮತಃ ಶೂದ್ರನೇ ಆಗಿದ್ದರೂ ಚಾಣಕ್ಯನು ಆತನ ಹಿಂದೂ ಮುಂದೂ ಆತನನ್ನು ಶೂದ್ರ ಎಂದು ಕರೆದಾನೆ? ನನಗೆನಿಸುವುದಿಲ್ಲ. ಏಕೆಂದರೆ ಯಾವನೊಬ್ಬನು ತಾನು ಮೇಲಣ ಜಾತಿಯ ಬ್ರಾಹ್ಮಣನಾಗಿದ್ದು ತಾನು ಕರೆವಾತನೊ ಕುರಿವಾತನೊ ಹುಟ್ಟುಶೂದ್ರನಾಗಿದ್ದರೂ ಆತನು ಉಚ್ಚಪದವಿಯಲ್ಲಿರುವವನಾದರೆ, ಅದರಲ್ಲೂ ಆತನು ಪಟ್ಟಾಭಿಷಿಕ್ತನಾದ ರಾಜನೊ ಮಹಾರಾಜನೊ ಆಗಿದ್ದರೆ, ಆತನ ಹಿಂದೂ ಮುಂದೂ ಅಡಿಗಡಿಗೂ ಆತನನ್ನು ಶೂದ್ರ ಎನ್ನುವುದಾದರೊ ತೀರ ಅಸಭ್ಯತೆಯ ಪರಾಕಾಷ್ಠೆಯೇ ವಿನಾ

ಅದಕ್ಕಿಂತ ಕಡಮೆಯಲ್ಲ. ಆದರೆ ಈ ನಾಟಕದಲ್ಲಿ ಚಿತ್ರಿಸಿದಂತೆ ಮಹಾಮೇಧಾವಿಯೂ ಪರಮ ನೀತಿಜ್ಞನೂ ಲೋಕಜ್ಞನೂ ಎನಿಸತಕ್ಕ ಚಾಣಕ್ಯನು ಅಷ್ಟು ತಿಳಿಗೇಡಿಯಾದಾನೇ? ತನ್ನನ್ನು ಅಂಥಾ ದುರ್ನಯಕ್ಕೆ ಈಡುಮಾಡಿಕೊಂಡಾನೇ? ನಾನು ಸಂಬಲಾರೆ.

ಇಲ್ಲಿ ಆಶ್ಚರ್ಯವೇನೆಂದರೆ, ಚಂದ್ರಗುಪ್ತನ ಏಳು ಜನ್ಮದ ಕಡುಹಗೆಗಾರನಂತಿದ್ದು ಆತನನ್ನು ಗೃಹದಾಹ, ವಿಷಕನ್ಯಾದಿ ಪ್ರಯೋಗದ (ಅಂಕ II) ದ್ವಾರಾ ಕೊಲ್ಲಲಿಕ್ಕೆ ಪ್ರಯತ್ನಿಸಿದ್ದ, ಹಾಗೂ ಆ ನಾಟಕದ ಕೊನೆಯನಕಾ ಚಂದ್ರಗುಪ್ತನನ್ನು 'ದುರಾತ್ಮಾ ಚಂದ್ರಗುಪ್ತಃ' (II) ಎಂದು ಬಗೆದಿದ್ದ ಬ್ರಾಹ್ಮಣನಾದ—ಚಾಣಕ್ಯನಂತೆಯೇ ಬ್ರಾಹ್ಮಣನಾಗಿದ್ದ—ಅಮಾತ್ಯ ರಾಕ್ಷಸನಾದರೂ ಚಂದ್ರಗುಪ್ತನ ಹೆಸರನ್ನು ಆತನ ಪರೋಕ್ಷದಲ್ಲಿ ಎಷ್ಟೋ ಬಾರಿ ಎತ್ತಿರುವಲ್ಲಿ ಒಂದೇ ಒಂದು ಬಾರಿ ವಿನಾ ಬೇರೆ ಎಂದೂ ಆತನನ್ನು ವೃಷಲ ಎನ್ನುವುದಿಲ್ಲ. ಆದೊಂದು ಬಾರಿಯಾದರೂ (ಅಂಕ VI)

ಗತಾ ಛಿದ್ರೇಣ ಶ್ರೀರ್ವೃಷಲಮವಿನೀತೇವ ವೃಷಲೀ ।೬।

ಆತನು ಶ್ರೀ (= ಭಾಗ್ಯಶ್ರೀ) ಅಂದರೆ ಭಾಗ್ಯಲಕ್ಷ್ಮಿಯನ್ನು ವೃಷಲೀ ಎಂದಿರುವಲ್ಲಿ, ಆ ಶಬ್ದವನ್ನು ಶೂದ್ರಿ ಎಂಬ ಅರ್ಥದಲ್ಲಿ ಪ್ರಯೋಗಿಸಿಲ್ಲ. ಆಕೆ ನೀಚಳು, ಕುತ್ಸಿತಳು, ಜಘನ್ಯಳು, ನಿಕೃಷ್ಟಳು ಎಂಬ ಭಾವನೆಯಿಂದ ತಾನೆ ಅದನ್ನು ಬಳಸಿರುವುದರಿಂದ, ಅದರ ವೃಷಲ ಎಂಬ ಪುಲ್ಲಿಂಗವೂ ಅದೇ ಅರ್ಥದ ಪದವಾಗಿರಬೇಕು ಮಾತ್ರವಲ್ಲ, ಚಾಣಕ್ಯನು ಚಂದ್ರಗುಪ್ತನನ್ನು ಪದೇ ಪದೇ ವೃಷಲ ಎಂದು ಕರೆವುದನ್ನು ಕೇಳಿ ಕೇಳಿ ಪ್ರಾಯಶಃ ಕೆಣಕಿರಬೇಕಾದ ರಾಕ್ಷಸನು ಆತನ ಮಾತಿನಲ್ಲೇ ಆತನನ್ನು ಅಣಕಿಸಲೆಂದು ತಾನೆ ಅದನ್ನು ಆಡಿರಬೇಕೆಂದು ಹೆಚ್ಚುಕಡಿಮೆ ಕಂಡಿತವೆನಿಸುವುದರಿಂದ, ರಾಕ್ಷಸನ ಪ್ರಯೋಗದಲ್ಲಿ ಆ ಮಾತಿಗೆ ಸರ್ವಥಾ ಶೂದ್ರಾರ್ಥವಿಲ್ಲ ಎಂದು ಬೇರೆ ಹೇಳಬೇಕೆಂದಿಲ್ಲ. ಅದಲ್ಲದೆ ಚಂದ್ರಗುಪ್ತನು ನಿಜವಾಗಿಯೂ ಶೂದ್ರನಾಗಿದ್ದ ಪಕ್ಷದಲ್ಲಿ, ಸ್ವಯಂ ಬ್ರಾಹ್ಮಣನಾಗಿದ್ದ ರಾಕ್ಷಸನು, ತನಗೆ ತೀರ 'ದುರಾತ್ಮಾ' 'ಹತಕ' (II)ನಾಗಿದ್ದ ಆತನಲ್ಲಿ ತನ್ನ ಹಗೆ ತೀರಿಸಲಿಕ್ಕೆ ಆತನ ಹೆಸರೆತ್ತುವಾಗಲೆಲ್ಲ ಆತನನ್ನು ಶೂದ್ರಾರ್ಥದಲ್ಲಿ ವೃಷಲ ಎಂದು ಕರೆಯಲಿಕ್ಕೆ ಹಿಂಜರಿಯುತ್ತಿರಲಿಲ್ಲ ಹೀಗಾಗಿ ಚಂದ್ರಗುಪ್ತನು ಶೂದ್ರನಲ್ಲ ಎಂದು ನಿಸ್ಸಂದೇಹವಾಗಿ ತಿಳಿಯುತ್ತದೆ, ಹಾಗೂ ಚಂದ್ರಗುಪ್ತನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿದಾತನು ಬ್ರಾಹ್ಮಣರಲ್ಲಿ ಬ್ರಾಹ್ಮಣನಾದ ಚಾಣಕ್ಯನು, ಚಂದ್ರಗುಪ್ತನು ಶೂದ್ರನಾಗಿದ್ದನೇ ಆದರೆ ಆತನೂ ಆ ಬಗ್ಗೆ ಸರ್ವಥಾ ಶ್ರಮಿಸುತ್ತಿರಲಿಲ್ಲ ಎಂಬ ನಿಜಸ್ಥಿತಿಯಿಂದ ಆ ಅನುಮಾನವು ಬಲವತ್ತರವಾಗುತ್ತದೆ. ಇವೆಲ್ಲ ಕಾರಣಗಳಿಂದ, ಮುಖ್ಯತಃ ಚಾಣಕ್ಯನು ಚಂದ್ರಗುಪ್ತನನ್ನು ಪದೇ ಪದೇ ವೃಷಲ ಎಂದು ಕರೆವುದರಿಂದ, ಹಾಗೂ ಈರ್ಷೆಯಿಂದಲೊ ತಿರಸ್ಕಾರದಿಂದಲೊ ರಾಕ್ಷಸನು ಆ ಮಾತನ್ನು ಎತ್ತದೆ ಇರುವುದರಿಂದ, ಈ ನಾಟಕದಲ್ಲಿ ವೃಷಲ ಶಬ್ದಕ್ಕೆ

ಎಂದಿಗೂ ಶೂದ್ರಾರ್ಥವೂ ಅಲ್ಲ, ಯಾವ ತರದ ನಿಕೃಷ್ಟಾರ್ಥವೂ ಅಲ್ಲವಷ್ಟೇ, ಪರಂತು ಅದಕ್ಕೆ ಯಾವುದೊಂದು ತುಂಬ ಉತ್ಕೃಷ್ಟವಾದ ಅರ್ಥವದೆ ಎಂದು ಕಂಡಿತ ವಾಗಿ ಸಿದ್ಧವಾಗುತ್ತದೆ.

ಆ ಅನುಮಾನಕ್ಕೆ ನೆರವಾಗುವ ಈ ಕೆಲವು ಉದಾಹರಣೆಗಳು ಈ ನಾಟಕ ದಲ್ಲಿವೆ--

(೧) ನೃಪತಿಮಕರೋನ್ಮೌರ್ಯವೃಷಲಮ್ ॥ (III ೧೧).

ಈ ಮಾತನ್ನು ಆಡುವವನು ಚಾಣಕ್ಯನು ಆತನು ರಾಕ್ಷಸನು ಬಗೆಯಬಹು ದಾದ ಭಾವನೆಗಳನ್ನು, ರಾಕ್ಷಸನು ಆಡಬಹುದಾದ ಮಾತುಗಳನ್ನು ತನ್ನ ಮನಸ್ಸಿನಲ್ಲಿ ನೆವರಿಕೊಳ್ಳುವಲ್ಲಿ ಈ ಮಾತು ಒದಗುತ್ತದೆ. ಇದರ ಅರ್ಥ—ಚಾಣಕ್ಯನು 'ಮೌರ್ಯ ವೃಷಲನನ್ನು,' ಅಂದರೆ ಚಂದ್ರಗುಪ್ತನನ್ನು ಅರಸನಾಗಿಸಿರುತ್ತಾನೆ—ಎಂದು. ಇಲ್ಲಿ ಹೇಗೂ ವೃಷಲ ಎಂದರೆ ಶೂದ್ರ ಎಂದು ಅರ್ಥವಾಗದು, ಏಕೆಂದರೆ ಮೌರ್ಯಶೂದ್ರ ಎಂದರೆ ಅರ್ಥವಿಲ್ಲದ, ಅರ್ಥವಾಗದ ಪದವಷ್ಟೇ. ಅದಲ್ಲದೆ ಅದೇ ಪದ್ಯದ ಮುಂದ ಣದೇ ಪಂಕ್ತಿಯಲ್ಲೂ ಅದರ ಮುಂದಣ ೧೩ ನೆಯ ಪದ್ಯದಲ್ಲೂ ಚಾಣಕ್ಯನು ಚಂದ್ರ ಗುಪ್ತನನ್ನು ಕುರಿತು ಪ್ರಯೋಗಿಸಿರುವ 'ಮೌರ್ಯೇಂದು' = ಮೌರ್ಯಕುಲದ ಚಂದ್ರ ಎಂಬ ಆ ಉತ್ಕೃಷ್ಟವಾದ ಉಪಾಧಿಯ ಬೆಳಕಿನಲ್ಲಿ ಪರಿಭಾವಿಸಿದರೆ, ಅದರ ಜತೆಯ ಉಪಾಧಿಯಾದ 'ಮೌರ್ಯವೃಷಲ'ವೂ ಅದರಷ್ಟೇ ಉತ್ಕೃಷ್ಟವಾದ ಉಪಾಧಿ ಯಾಗಿರಲೂ ಬೇಕು, ಹಾಗೂ 'ಮೌರ್ಯೇಂದು' ಹೇಗೋ ಹಾಗೆಯೇ 'ಮೌರ್ಯ ವೃಷಲ'ವೂ ಚಂದ್ರಗುಪ್ತನು ಆಗ್ಗೆ ಮಂಡಿಸಿದ್ದ ಚಕ್ರವರ್ತಿ ಪದವಿಯ ದ್ಯೋತಕ ವಾಗಿರಲೂ ಬೇಕು ಎಂದು ಸ್ವಯಮೇವ ಸಿದ್ಧವಾಗುತ್ತದೆ.

(೧) ತತ್ಸ್ಥಾನೇ ಖಲ್ವಸ್ಯ ವೃಷಲೋದೃಶ್ಚಂದ್ರಗುಪ್ತ ಇತಿ ।

(III—೧೫ ಮತ್ತು ೧೬ ನೆಯಾ ಪದ್ಯಗಳ ನಡುವಣ ಗದ್ಯ)

ಇದು ಚಂದ್ರಗುಪ್ತನು ಚಾಣಕ್ಯನನ್ನು ಕರೆಯಲಟ್ಟಿದ ಕಂಚುಕಿಯ ಮಾತು. ಆ ಕಂಚುಕಿ ಚಾಣಕ್ಯನ ಮನೆಗೆ ಮುಟ್ಟಿ ಅದರ ಬಟ್ಟಬಡತನವನ್ನು ಕಂಡು ತುಂಬ ವಿಸ್ಮಿತನಾಗಿ ಹೀಗೆ ಉದ್ಗಾರವೆತ್ತುತ್ತಾನೆ -

ಅಹೋ ರಾಜಾಧಿರಾಜ ಮಂತ್ರಿಣೋ ವಿಭೂತಿಃ ।

(III. ೧೪ ಮತ್ತು ೧೫ ನೆಯ ಪದ್ಯಗಳ ನಡುವಣ ಗದ್ಯ)

= ಅಹಹಾ, ರಾಜಾಧಿರಾಜನಾದ ಚಂದ್ರಗುಪ್ತನ ಮಂತ್ರಿಯ ವೈಭವವೇ! ಆ ಮುಂದೆ ಆತನು ಚಾಣಕ್ಯನ ಗುಡಸಲನ್ನು ಯಥಾತಥವಾಗಿ ಬಣ್ಣಿಸುತ್ತ, ಅಲ್ಲೇ 'ತತ್ಸ್ಥಾನೇ ಖಲ್ವಸ್ಯ, ಇ' = ಈಗಲಾದರೂ ಆತನಿಗೆ, ಅಂದರೆ ಚಾಣಕ್ಯನಿಗೆ, ಚಂದ್ರಗುಪ್ತನು ವೃಷಲನಾಗಬೇಕು ಎನ್ನುತ್ತಾನೆ. ಅತ ಏವ ಕಂಚುಕಿಯ ಈ ಮಾತು ಆತನು ಚಂದ್ರಗುಪ್ತನನ್ನು ಈಗಲೀಗ 'ರಾಜಾಧಿರಾಜ' ಎಂದಿರುವ ಆ ಭಾವನೆಯ, ಆ ಮಾತಿನ ಪುನರುಕ್ತಿತಾನೆ ವಿನಾ ಬೇರೆಯಲ್ಲ ಎಂದು ಸ್ಪಷ್ಟವಿದೆ. ಹಾಗೂ ಒಂದೇ

ಮಾತುಕಥೆಯಲ್ಲಿ ಒದಗುವ ಅದೊಂದೇ ಭಾವನೆಯನ್ನು ಯಥಾಸಾಧ್ಯವಾಗಿ ಏಕಾರ್ಥದ ಬೇರೆ ಬೇರೆ ಶಬ್ದಗಳಿಂದ ವ್ಯಕ್ತೀಕರಿಸುವುದು ಮನುಷ್ಯಜಾತಿಗೆ ಸ್ವಾಭಾವಿಕ ಎಂಬು 'ದನ್ನು ಇಲ್ಲಿ ನೆನವರಿಸಿಕೊಳ್ಳಬಹುದು.

(೩) ಅಧ್ಯಾಸಿತಂ ಚ ವೃಷಲೇನ ವೃಷೇಣ[1]ರಾಜ್ಞಾವ್ ॥ (III. ೧೮)

ಇದೂ ಚಾಣಕ್ಯನ ಮಾತು. ಇದರ ಅರ್ಥ, 'ರಾಜರಲ್ಲಿ ಶ್ರೇಷ್ಠನಾದ ವೃಷಲನು ಸಿಂಹಾಸನದಲ್ಲಿ ಮಂಡಿಸಿರುತ್ತಾನೆ' ವೃಷಲವು ಎಂದು. ಇಲ್ಲಿ ಹೇಗೂ ವೃಷಲವು ರಾಜರಲ್ಲಿ ಶ್ರೇಷ್ಠನಾದವನು ಎಂಬ ಅರ್ಥದಲ್ಲೇ ಪ್ರಯೋಗಿಸಲ್ಪಟ್ಟಿರಬೇಕು ಎಂದು ಸ್ಪಷ್ಟವದೆ, ಏಕೆಂದರೆ ಈ ಸಂದರ್ಭದಲ್ಲಿ ಅದಕ್ಕೆ ಶೂದ್ರ ಎಂಬ ಅರ್ಥ ಸಲ್ಲದು.

ಅತ ಏವ ಈ ನಾಟಕದಲ್ಲಿ ಚಾಣಕ್ಯನು ಚಂದ್ರಗುಪ್ತನನ್ನು ಕುರಿತು ಎಷ್ಟೋ ಸಲ ಬಳಸುವ ವೃಷಲ ಎಂಬ ಶಬ್ದದ ಅರ್ಥವಾದರೊ ಶೂದ್ರ ಎಂದಲ್ಲ, ಪ್ರತ್ಯುತ ರಾಜಶ್ರೇಷ್ಠನೆಂದು, ರಾಜಾಧಿರಾಜನೆಂದು ಚಾಣಕ್ಯನಿಂದಲೇ ನಾವು ತಿಳಕೊಂಡಂತಾಯಿತು. 'ವೃಷಲೇನ ವೃಷೇಣ ರಾಜ್ಞಾಮ್' ಎಂಬ ಕೊನೆಯ ಉದಾಹರಣೆಯಲ್ಲಿ ವೃಷಲದ ವ್ಯುತ್ಪತ್ತಿಯನ್ನು ಸೂಚಿಸಿದಂತಿದೆ. ನನಗಾದರೆ ಆ ಶಬ್ದದ ಮೂಲವನ್ನು ಕುರಿತು ಇತರತ್ರ ಸೋಸಬೇಕೆನಿಸುತ್ತದೆ.

## II

ಮಕೆದೋನ್ಯದ (Macedonia) ಅರಸನಾದ ದೊಡ್ಡ ಅಲೆಕ್ಸಂದರ್‌ನು (Alexander the Great) ಕಾಲವಾಗುತ್ತಲೆ (ಕ್ರಿಸ್ತಪೂರ್ವ ೩೨೩) ಆದ ತ್ರಿಪರದೀಸದ ರಾಜ್ಯವಿಭಾಗಾನಂತರ (Partition of Triparadisus, ಕ್ರಿ. ಪೂ. ೩೨೧) ಬಾಬಿಲೋನ್ (Babylon) ಎಂಬ ದೇಶ I ಸೆಲ್ಯೂಕನ (Seleucus I) ಪಾಲಿಗೆ ಬಂದು, ಆತನು ಸುರಿಯದ (Syria) ಅರಸನಾದನು (ಕ್ರಿ ಪೂ. ೩೧೨ ೨೮೦). ಸುಮಾರು (ಸು.) ೩೦೫ ರಲ್ಲಿ ಅವನು ನಮ್ಮ ಭಾರತ ದೇಶದ ಮೇಲೆ ದಾಡೆತ್ತಿಕೊಂಡು ಬಂದು, ಇಲ್ಲಿಯ ಮೌರ್ಯಚಕ್ರವರ್ತಿಯಾದ ಚಂದ್ರಗುಪ್ತನಿಂದ ಸೋಲಿಸಲ್ಪಟ್ಟು, ಅದರ ಪರಿಹಾರಾರ್ಥವಾಗಿ ಈಗಣ ಅಫಘಾನಿಸ್ತಾನದ ತೆಂಕಣ ಅರ್ಧವನ್ನೂ ಇಡೀ ಬಲೂಚಿಸ್ತಾನವನ್ನು ಚಂದ್ರಗುಪ್ತನಿಗೆ ಬಿಟ್ಟುಕೊಟ್ಟನು. ಅಲೆಕ್ಸಂದರನ ಕಾಲದಿಂದ ಗ್ರೀಕರು (Greeks) ದಪ್ಪಾನೆ ನೆಲಸಿದ್ದ ಬಾಕ್ತ್ರಿಯಾ (Bactria)[2] ಎಂಬ ಉತ್ತರ

---

1. ಶ್ರೇಷ್ಠೇ . . . . . ವೃಷಃ (ಅಮರಕೋಶದ ನಾನಾರ್ಥವರ್ಗ, ಶ್ಲೋಕ ೨೨೦); ವೃಷೋ. . . . . ಶ್ರೇಷ್ಠೇ ಸ್ಯಾತ್ । (ಹೇಮಚಂದ್ರನ ಅನೇಕಾರ್ಥಸಂಗ್ರಹ, ಶ್ಲೋಕ ೫೭೫-೭೬)

2. ಬಾಕ್ತ್ರಿಯ ದೇಶವನ್ನು ಅಥರ್ವವೇದಲ್ಲಿ (V. 5. ೫, ೭, ೯) ಬಲ್ಹಿಕ ಎಂದೂ, ರಾಮಾಯಣದಲ್ಲೂ (ಕಿಷ್ಕಿಂಧಕಾಂಡ, 42-೬) ಮಹಾಭಾರತದಲ್ಲೂ (ಭೀಷ್ಮಪರ್ವ, 9. ೪೭) ಬಹ್ಲಿಕ ಎಂದೂ ಉಲ್ಲೇಖಿಸಿದೆ, ಅಲ್ಲಿಯ ಉತ್ಪತ್ತಿಯನ್ನು ಬಾಹ್ಲವೇಯ ಎಂದು ಅರ್ಥಶಾಸ್ತ್ರದಲ್ಲಿ (ಪುಟ ೭೯: ಮೈಸೂರು, ೧೯೧೯) ಹೆಸರಿಸಿದೆ.

ಅಫಘಾನಿಸ್ತಾನವಾದರೆ ಸೆಲ್ಯೂಕನಿಗೆ ಉಳಿಯಿತು. ಆತನ ಮೊಮ್ಮಗನಾದ II ಅಂತಿಯೊಕನ (Antiochus II) ಆಳಿಕೆಯಲ್ಲಿ (ಕ್ರಿ. ಪೂ. ೨೬೧-೨೪೬) ಆತನ ಕೆಯ್ಕೆಳಗೆ ಬಾಕ್ತ್ರಿಯದ ಮೇಲಧಿಕಾರಿಯಾಗಿದ್ದ ದಿಯೊದೋತನು (Diodotus) ಆತನ ಮೇಲೆ ದಂಗೆ ಎದ್ದು ತಾನು ಅಲ್ಲಿಯ ಸ್ವತಂತ್ರ ಅರಸನಾದನು. (ಕ್ರಿ.ಪೂ. ಸು. ೨೫೦). ಕ್ರಿ.ಪೂ. ಸು. ೨೩೦ ರಲ್ಲಿ ಎವುಥಿದೇಮನು (Euthydemus)ಬಾಕ್ತ್ರಿಯ ದಲ್ಲಿ ಆಳುತ್ತಿದ್ದನು, ಸು. ೧೯೦ರಲ್ಲಿ ಆತನ ಮಗನಾದ ದೆಮೆತ್ರಿ (Demetrius) ಪಟ್ಟಕ್ಕೆ ಬಂದನು. ಕ್ರಿ·ಪೂ. ೧೭೫ ರಲ್ಲಿ ಆತನು ಭಾರತದಲ್ಲಿ ಕಾದಾಡುತಿದ್ದಾಗ, ಎವುಕ್ರತಿದ (Eucratides) ಎಂಬ ಮತ್ತೊಬ್ಬ ಗ್ರೀಕನು ಆತನ ಸಿಂಹಾಸನವನ್ನು ಸೆಳಕೊಂಡು ತಾನು ಬಾಕ್ತ್ರಿಯದ ಅರಸನಾದನು. ಸು. ೧೫೫ ರಲ್ಲಿ ಶಕರೆಂಬ (Sakas ಅಂದರೆ Indo-Scythians) ಬೇರೊಂದು ಜನಾಂಗದವರು ಬಾಕ್ತ್ರಿಯದಲ್ಲಿ ಒಳನುಗ್ಗಿ ಗ್ರೀಕ ರನ್ನು ಅಲ್ಲಿಂದ ಹೊರಗಟ್ಟುತ್ತಲೆ ಆವರೆಗೆ ಅಲ್ಲಿದ್ದ ಗ್ರೀಕರ ಅಧಿಕಾರ ಕುಗ್ಗಿತು, ಹಾಗೂ ಅಲ್ಲಿಂದ ಮುಂದೆ ಹಿಂದುಕುಶ (Hindukush) ಪರ್ವತದ ತೆಂಕಣ ದಿಕ್ಕಿನಲ್ಲಿ ಮಾತ್ರ ಅವರ ನೆಲೆವೀಡುಗಳಿದ್ದು, ಅವರು ಎರಡು ಪಾಲಾಗಿ ಒಂಗಡಿಸಿ, ಎವುಕ್ರತಿದನ ಉತ್ತರಾಧಿಕಾರಿಗಳು ಕಾಬೂಲಿನ ತಗ್ಗಿನಲ್ಲೂ ವಾಯವ್ಯ ಭಾರತದಲ್ಲೂ, ಎವುಥಿದೇ ಮನ ಉತ್ತರಾಧಿಕಾರಿಗಳು ಪಂಜಾಬಿನ ಮೂಡಣ ಪ್ರಾಂತಗಳಲ್ಲೂ ಆಳುತ್ತಲಿದ್ದರು.

ಆ ಗ್ರೀಕ ಅರಸರ ನಾಣ್ಯಗಳಲ್ಲಿಯ ಅಂಕನಗಳು (*legends*) ಮುಂಗಡೆಯಲ್ಲಿ (*obverse*) ಗ್ರೀಕ ಭಾಷೆಯಲ್ಲೂ ಗ್ರೀಕ ಬರೆಹದಲ್ಲೂ ಹಿಂಗಡೆಯಲ್ಲಿ (*reverse*) ಪ್ರಾಕೃತ ಭಾಷೆಯಲ್ಲೂ ಖರೋಷ್ಠೀ[3] ಬರೆಹದಲ್ಲೂ ಇವೆ. ಎರಡೂ ಕಡೆಯ ಅಂಕ ನಗಳು ಷಷ್ಠೀ ವಿಭಕ್ತಿಯಲ್ಲಿವೆ, ಇಂಥಿಂಥಾ ಅರಸನ (ನಾಣ್ಯವಿದು) ಎಂದು ಸೂಚಿಸ ತಕ್ಕಂತೆ. ಈ ಕೆಳಗಡೆ ಕಾಣಿಸಿರುವ ಕೆಲವು ನಾಣ್ಯಗಳ ಮುಂಗಡೆಯ ಅಂಕನಗಳಲ್ಲಿ ಇರುವ *Basileos* ಎಂಬ ಶಬ್ದ *Basileus* ಎಂಬ ಗ್ರೀಕ ಶಬ್ದದ ಷಷ್ಠೀ ವಿಭಕ್ತಿಯ ಏಕವಚನ ; *Basileus* ಎಂದರೆ ರಾಜ, ಮಹಾರಾಜ ಎಂದು ಅರ್ಥ, ಅದನ್ನು ಹಿಂಗ ಡೆಯ ಅಂಕನಗಳ ಪ್ರಾಕೃತ ಭಾಷೆಯಲ್ಲಿ 'ಮಹಾರಾಜ,' 'ಮಹರಜ' (ಅಂದರೆ ಸಂಸ್ಕೃತದಲ್ಲಿ 'ಮಹಾರಾಜ') ಎಂದು ಭಾಷಾಂತರಿಸಿದೆ. ಆಯಾ ಅರಸರ ಮಿಕ್ಕ ಬಿರುದುಗಳಲ್ಲಿ ಮುಂಗಡೆಯ *nikephorou* ಎಂಬುದು ಗ್ರೀಕ *nikephoros* ಅಂದರೆ (ಹಿಂಗಡೆ) ಜಯಧರ (=ಜಯವನ್ನು ಹೊತ್ತಿರುವವನು) ಎಂದಿರುವುದರ ಷಷ್ಠಿ ವಿಭ ಕ್ತಿಯ ಏಕವಚನ; *soteros* ಎಂಬುದು *soter* ಅಂದರೆ (ಹಿಂಗಡೆ) ತ್ರಾತಾರ

---

3 ಸಂಸ್ಕೃತ—ಪ್ರಾಕೃತ ಲೇಖಗಳನ್ನು ಬರೆಯಲಿಕ್ಕೆ ಭಾರತದ ಪಶ್ಚಿಮೋತ್ತರದಲ್ಲಿ ಬಳಸುತ್ತಿದ್ದ ಬರೆಹದ ಹೆಸರು ಖರೋಷ್ಠೀ ಎಂದು, ಅದನ್ನು ಬರೆವುದು ಬಲದಿಂದ ಎಡಕ್ಕೆ.

( = ರಕ್ಷಕ) ಎಂದಿರುವುದರ ಷಷ್ಠಿಯ ಏಕವಚನ, ಹಾಗೂ *aniketou* ಎಂಬುದು *aniketos* ಅಂದರ (ಹಿಂಗಡೆ) ಅಪರಾಜಿತ (=ಸೋಲಿಸಲ್ಪಡದವನು)ಎಂದಿರುವುದರ ಷಷ್ಠಿಯ ಏಕವಚನ, ಇ ಇ.

| ಅರಸನ ಹೆಸರು | | ಅಂಕನಗಳು |
|---|---|---|
| 1. Antimachus[4] | (ಮುಂಗಡೆ) | *Basileos nikephorou Antimachou* |
| (ಅಂತಿಮುಖ) | (ಹಿಂಗಡೆ) | ಮಹಾರಜಸ ಜಯಧರಸ ಅಂತಿಮುಖಸ |
| 2. Menander[5] | (ಮುಂ) | *Basileos soteros Menandrou* |
| (ಮಿನಂದ್ರ) | (ಹಿಂ) | ಮಹಾರಜಸ ತ್ರಾತಾರಸ ಮಿನಂದ್ರಸ |
| 3. Demetrius[6] | (ಮುಂ) | *Basileos amiketou Demetriou* |
| (ದೆಮೆತ್ರಿ) | (ಹಿಂ) | ಮಹರಜಸ ಅಪರಜಿತಸ ದೆಮೆತ್ರಿಯುಸ |

ಗ್ರೀಕರನ್ನು ಅವರಿದ್ದ ಕಾಬೂಲಿನ ತಗ್ಗಿನಿಂದಲೂ ಪಂಜಾಬದ ಮೂಡಣ ಪ್ರಾಂತಗಳಿಂದಲೂ ಶಕರು ಹೊರದಬ್ಬಿದರು, ಶಕರನ್ನು ಪಹ್ಲವರೂ (Parthians), ಪಹ್ಲವರನ್ನು ಕುಷಾಣರೂ (Kushanas) ಹೊರಗೆ ಹಾಕಿದರು. ಆ ಮೂರೂ ಜನಾಂಗದ ಅರಸರೂ ತಮ್ಮ ಹಿಂದಣ ಗ್ರೀಕ ಅರಸರು ಅಂತುಕೊಂಡ ಗ್ರೀಕ ಬಿರುದುಗಳನ್ನೇ ತಾವೂ ತಾಳಿದರು. ಹಾಗೆ ತಾಳಿದ ಇಲ್ಲಿಯ ಕೊನೆಯ ಗ್ರೀಕ ಅರಸನೆಂದರೆ ಹೆರ್ಮಯುಸ್ (Hermaeus) ಎಂಬಾತನು. ಆತನು ತನ್ನ ಜತೆಯರಸನಾಗಿದ್ದ ಕುಷಾಣ ಜಾತಿಯ ಕುಜುಲ ಕಡ್ಫೀಶ (Kujula Kadphises) ಎಂಬವನಿಂದ ಕ್ರಿ. ಶ. ಸು. ೫೦-೫೫ ರೊಳಗೆ ಮಡುಹಲ್ಪಟ್ಟನೆಂದು ನಾನು ಅನ್ಯತ್ರ ತೋರಿಸಿರುತ್ತೇನೆ.[7]

| ಅರಸನ ಹೆಸರು | | ಅಂಕನಗಳು |
|---|---|---|
| 4. Hermaeus[8] | (ಮುಂ) | *Basileos soteros Ermaiou* |
| (ಹೆರ್ಮಯುಸ್) | (ಹಿಂ) | ಮಹರಜಸ ತ್ರತರಸ ಹೆರ್ಮಯುಅಸ |

ಹೆರ್ಮಯುಸನ ಬಳಿಕ ಇಲ್ಲಿ ಗ್ರೀಕ ಅರಸರು ಇದ್ದಿಲ್ಲವಾದರೂ, ಅವರ ತರುವಾಯ ಆಳಿದ ಗ್ರೀಕೇತರ ಅರಸರೂ ಅವರ *Basileus* ಎಂಬ ಬಿರುದನ್ನು ಮಾತ್ರವಲ್ಲ, ಅದನ್ನು *Basileus Basileon*, ಅಂದರೆ ರಾಜರ ರಾಜ = ರಾಜಾಧಿರಾಜ, ಮಹಾರಾಜ ಎಂದು ಹಿಗ್ಗಿಸಿ ತಾಳಿಕೊಳ್ಳುತಿದ್ದು, ಅದೇ ರೀತಿಯಾಗಿ ಇಲ್ಲಿ ಕನಿಷ್ಕ

4. Cambridge History of India (*CHI*), vol. I, ಪು. ೫೪೬.
5. ಅದೇ ಪು. ೫೪೪.
6. Rapson's Indian Coins : Plate I, ನಂ. ೧೦.
7. New Indian Antiquary, I. 4 (July 1934) ಪು. ೨೭೩.
8. *CHI*, vol. ಪು. ೫೯೧.

ಪಕ್ಷಕ್ಕೆ ಕುಷಾಣ ಅರಸನಾದ ಕನಿಷ್ಕನ (Kanishka) ಹಿಂದೆ ಆಳಿದ್ದ ವಿಮಕತ್ಫೀಷನ (Wima Kadphises) ವರೆಗಾದರೂ ನಡೆಯಿತು. ಈಗ ಕನಿಷ್ಕನು ಪಟ್ಟವೇರಿದುದು ಕ್ರಿ.ಶ. ೧೩೬ರಲ್ಲಿ ಎಂದು ನಾನು ಅನ್ಯತ್ರ ನಿರ್ಣಯಿಸಿರುತ್ತೇನೆ.[9] ಆತ ಏವ ವಿಮಕತ್ಫೀಷನು ಹೆಚ್ಚುಕಡಿಮೆ ಆವರೆಗೆ ಆಳಿರಬಹುದು.

ಹೀಗೆ ಅಲೆಕ್ಸಂದರನು ಕಾಲವಾದ ಕ್ರಿ. ಪೂ. ೩೨೩ ರಿಂದ ಕನಿಷ್ಕ ಪಕ್ಷಕ್ಕೆ ವಿಮಕತ್ಫೀಷನ ಆಳ್ವಿಕೆಯ ಕೊನೆಗಾಲದ ಕ್ರಿ. ಶ. ೧೩೬ ರ ವರೆಗಾದರೂ ಹೆಚ್ಚು ಕಡಿಮೆ ೫೦೦ ವರ್ಷಗಳ ತನಕ, ಹಾಗೂ ಮುದ್ರಾರಾಕ್ಷಸದ ರಚಕನಾದ ವಿಶಾಖ ದತ್ತನ ಕಾಲ ಕ್ರಿ.ಶ. ಸು. ೪೫೦[10] ಎಂಬ ಊಹೆ ನೇರಾದರೆ, ಆತನಿಗೆ ಹೆಚ್ಚು ಕಡಿಮೆ ೩೦೦ ವರ್ಷಗಳ ಹಿಂದಿನ ತನಕ, ಭಾರತದ ಬಡಗಣ ಹಾಗೂ ವಾಯವ್ಯ ಪ್ರಾಂತ ಗಳಲ್ಲಿ ಬಳಕೆಯಲ್ಲಿದ್ದ ಮಹಾರಾಜ = ಚಕ್ರವರ್ತಿ ಎಂಬ ಅರ್ಥದ ಗ್ರೀಕ *Basileus* ಎಂಬ ಬಿರುದು ಆ ಬಳಿಕ ಲೋಗರ ನೆನವಿನಿಂದ ಬೇಗನೆ ಬಿದ್ದು ಹೋದೀತೆಂದು ಬಗೆಯಲಾಗುವುದಿಲ್ಲ. ಪ್ರತ್ಯುತ ಅದು ಲೋಗರ ಧಾರಣೆಯಲ್ಲಿ ಮತ್ತೂ ಬಹುಕಾಲ ಬಾಳದಿರದು, ಅವರ ಬಳಕೆಯ ದೈನಂದಿನದ ಶಬ್ದಕೋಶದಲ್ಲಿ ಸೇರಿಕೊಂಡು ಅವರ ವ್ಯವಹಾರದಲ್ಲಿ ಬಹುಕಾಲ ತಾಳದಿರದು. ಆದರೆ ಹಾಗೆ ಬಾಳುವಲ್ಲಿ ಅದು ಲೋಗರ ಬಾಯಿಯಲ್ಲಿ ತನ್ನ ಮೂಲ ಗ್ರೀಕರೂಪದಲ್ಲಿ *Basileus* ಎಂದು ಸರ್ವಥಾ ಇದ್ದಿರದೆ, ತನ್ನ ಪ್ರಥಮಾವಿಭಕ್ತಿಯ ಏಕವಚನದ ಪ್ರತ್ಯಯವಾದ '—*us*' ನ್ನು ಅವಶ್ಯವಾಗಿ ಕಳಚಿಬಿಟ್ಟು ಮೊದಮೊದಲು *Basil* (ಬಸಿಲ್)—*Basal* (ಬಸಲ್) ಎಂದೂ, ಅದೇ ಮತ್ತೆ ಭಾರತೀಯ ಶಬ್ದರೂಪಕ್ಕೂ ಉಚ್ಚಾರಕ್ಕೂ ಸರಿಯಾಗುವಂತೆ *Basila* (ಬಸಿಲ)—*Basala* (ಬಸಲ) ಎಂದೂ ರೂಪಾಂತರಿಸಿ, ಇವಲ್ಲಿ ಕೊನೆಯ ರೂಪಕ್ಕೆ ತಕ್ಕಷ್ಟು ಭಾರತೀಯ ಆಭಾಸವಿರುವುದರಿಂದ, ಪ್ರಾಯಶಃ ಆ ರೂಪದಲ್ಲಿ ಇಲ್ಲಿಯ ಲೋಕೋಕ್ತಿಯಲ್ಲಿ ರೂಢಿಯಾಗಿ ನೆಲಸೀತು.

## III

ಪಂಜಾಬದಲ್ಲೂ ಅದರ ವಾಯವ್ಯದಲ್ಲೂ ಶಕರು ನೆಲೆಗೊಂಡಿದ್ದ ಪ್ರಾಂತ ಗಳಿಂದ ಅವರು ಹೊರಗೆ ಅಟ್ಟಲ್ಪಟ್ಟಾಗ, ಅವರು ತೆಂಕಮುಖವಾಗಿ ವಲಸೆ ತೆಗೆದು ಮಥುರೆಯ ಹಾಗೂ ಉಜ್ಜಯಿನಿಯ ಮೂಡಣ ಸೀಮೆಗಳಲ್ಲಿ ಮನೆಮಾಡಿ ನಿಂತರು. ಅವರು ಮಥುರೆಯಲ್ಲಿ ಕಟ್ಟಿಕೊಂಡಿದ್ದ ರಾಜ್ಯದ ಈವರೆಗೆ ದೊರಕಿರುವ ದಾಖಲೆಗಳಲ್ಲಿ

---

9. Journal of the Oriental Institute M. S. University of Baroda (1951) : Year 1 of the Kanishka Era, I. 2 : pp. 165-169.

10. ಶ್ರೀ ಎ. ಆರ್. ಕೃಷ್ಣಶಾಸ್ತ್ರೀ, ಎಂ. ಎ.—ಸಂಸ್ಕೃತ ನಾಟಕ (ಮೈಸೂರ ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆ—೧೦, ಮೊದಲ ಮುದ್ರಣ), ಪು. ೧೫೦.

ಮೊತ್ತಮೊದಲನೆಯದೆಂದರೆ, ಮಥುರೆಯ ಸಿಂಹಗಳ ಬೋದಿಗೆಯಲ್ಲಿ (*Lion Capital of Mathura*) ಖರೋಷ್ಠೀ ಬರಿಹದಲ್ಲಿ ಕೊರೆಯಲ್ಪಟ್ಟಿರುವ ಪ್ರಾಕೃತ ಭಾಷೆಯ ಶಿಲಾಲೇಖ.[11] ಆ ಲೇಖದಲ್ಲಿ ಮಥುರೆಯ ಮಹಾಕ್ಷತ್ರಪನಾದ, ಅಂದರೆ ಶ್ರೇಷ್ಠಾಧಿಕಾರಿಯಾದ, ರಾಜುಲನ (*Rajula*) ಅಗ್ರಮಹಿಷಿ ತನ್ನ ಕೆಲಮಂದಿ ನಂಟರನ್ನು ಒಡಗೂಡಿ ಬುದ್ಧನದೊಂದು ಅವಶಿಷ್ಟವನ್ನು (relic) ಪ್ರತಿಷ್ಠಿಸಿದುದನ್ನು ಕುರಿತಿದೆ. ಆ ಬೋದಿಗೆಯ ಸ್ಥಾಪನೆ, ಅಂದರೆ ಆ ಶಿಲಾಲೇಖನದ ಕಾಲ, ಕ್ರಿ. ಪೂ. ಸು. ೩೦ ರಲ್ಲಿ ಆಗಿರಬೇಕೆಂದು ನಾನು ನಿರ್ಣಯಿಸಿರುತ್ತೇನೆ.

ಆ ಬೋದಿಗೆಯ ಲೇಖದಲ್ಲಿಯ ಪ್ರಾಕೃತ ಶಬ್ದಗಳ ಅಕ್ಷರಿಕೆಯ (*spelling*) ಕೌತುಕವಾದೊಂದು ವೈಶಿಷ್ಟ್ಯವೆಂದರೆ, ಅನೇಕ ಶಬ್ದಗಳಲ್ಲಿಯ ಒಂದೊ ಹೆಚ್ಚೊ ವ್ಯಂಜನಗಳಿಗೆ ನಿರರ್ಥಕವಾಗಿ, ಅಂದರೆ ಅಕ್ಷರಿಕೆಯಲ್ಲಿ ಮಾತ್ರ ಒಂದು ವ್ಯಂಜನ ಹೆಚ್ಚಿಗೆ ಆಗುವಂತೆ ವಿನಾ ಇತರಥಾ ಅರ್ಥಕ್ಕೆ ತೀರ ನಿರುಪಯೋಗವಾಗಿ, ಹಚ್ಚಿದ ರ ಕಾರದ ಒತ್ತು; ಉದಾ.

(೧) ಅಗ್ರ-ಮಹೆಸ್ರಿ = (ಸಂಸ್ಕೃತ) ಅಗ್ರಮಹಿಷೀ ( = ಪಟ್ಟದ ರಾಣಿ)

(೨) ಧಿತ್ರ = (ಸಂ) ದುಹಿತಾ ( = ಮಗಳು)

(೩) ಪ್ರಥ್ರವಿ ಪ್ರತ್ರೆಶ್ರೆ = (ಸಂ) ಪೃಥಿವೀ-ಪ್ರದೇಶೇ ( =ಭೂಮಿಯಲ್ಲಿ, ನೆಲದಲ್ಲಿ)

(೪) ಮತ್ರ = (ಸಂ) ಮಾತಾ ( = ತಾಯಿ)

(೫) ಪಿತ್ರಮಹಿ = (ಸಂ) ಪಿತಾಮಹಿ ( = ತಂದೆಯ ತಾಯಿ)

(೬) ಪ್ರತ್ರಿಠವಿತ್ರೊ = (ಸಂ) ಪ್ರತಿಷ್ಠಾಪಿತೋ( = ಪ್ರತಿಷ್ಠಸಲ್ಪಟ್ಟ)

(೭) ಭಕ್ರವತ್ರೊ = (ಸಂ) ಭಗವತೋ ( = ಭಗವಂತನ)

(೮) ಬುಧ-ತ್ರೆವ = (ಸಂ) ಬುದ್ಧ-ದೇವ

(೯) ಉತ್ರಏನ = (ಸಂ) ಉದಕೇನ ( = ನೀರಿನಿಂದ)

(೧೦) ಶಕ್ರಸ್ತನಸ = (ಸಂ) ಶಕಸ್ಥಾನಸ್ಯ ( = ಶಕಸ್ಥಾನದ)[12]

ಈ ಉದಾಹರಣೆಗಳು ಲೋಗರ ಮಾತಾಟದಲ್ಲಿ ಸಾಮಾನ್ಯವಾದ ಅನೇಕ ಗ್ರಾಮ್ಯ ಅಭ್ಯಾಸಗಳಲ್ಲಿ ಒಂದಾದ ರ-ಒತ್ತಿನ ನಿರರ್ಥಕ ಬಳಕೆಯ ಬಗ್ಗೆ ತುಂಬ ಸಾಕೂತವಾಗಿವೆ. ಈ ಬಗೆಯ ಅಭ್ಯಾಸವಾದರೊ ವೈದೇಶಿಕ ಶಬ್ದಗಳನ್ನು ಬಳಸುವ

11. Kharosthi Inscriptions, edited by Sten Konow, ಪು.೪೮.

12. ಶಕಸ್ಥಾನ ಎಂದರೆ ಶಕರೆಂಬ ಜನಾಂಗದವರ ಮೂಲಸ್ಥಾನ. ಅದು ಈಗಣ ಇರಾಣ (Iran) ಎಂಬ ಪಾರಸಿಸ್ತಾನದಲ್ಲಿ (Persia) ಒಳಪಟ್ಟಿರುವ Seistan (ಸೆಇಸ್ತಾನ) ಎಂಬ ಪ್ರಾಂತ.

ಸಂದರ್ಭಗಳಲ್ಲಿ ಮತ್ತೂ ಹೆಚ್ಚಿಗೆ ವ್ಯಕ್ತವಾಗುತ್ತದೆ. ಹಾಗೂ ಅದು ಹೆಚ್ಚು ಕಡಿಮೆ ಸಾರ್ವತ್ರಿಕವಾಗಿರುವುದರಿಂದ, ಇಲ್ಲಿ ಶಕರ ರಾಜ್ಯವು ಕೊನೆಗಾಣುವೊಂದಿಗೆ ಅದು ತಾನೂ ಕೊನೆಗಾಣದು, ಪ್ರತ್ಯುತ ಮಂದಿಯ ಮಾತಿನಲ್ಲಿ ಬಹುಕಾಲ ಉಳಕೊಂಡೀತು. ಉತ್ತರ ದೇಶದಲ್ಲಿ ಈ ಚಟ ಇನ್ನೂ ಬಿಟ್ಟು ಹೋಗಿಲ್ಲ, ಈಗಲೂ ಇದೆ; ಉದಾ. ಶಾಪ (curse) ಎಂಬ ಶಬ್ದವನ್ನು ನುಡಿವುದು ಬರೆವುದೂ 'ಶ್ರಾಪ' ಎಂದೇ.

ಆದಕಾರಣ *Basileus* = ಮಹಾರಾಜ ಎಂಬ ಗ್ರೀಕ ಶಬ್ದವು ಇಲ್ಲಿಯ ಲೋಕೋಕ್ತಿಯಲ್ಲಿ ಕಾಲಕ್ರಮೇಣ ತಳೆದೀತೆಂದು ಮೇಲೆ ನಿಶ್ಚಯಿಸಿರುವ ***(Basila-) Basala*** ಎಂಬ ರೂಪವೂ ಮಂದಿಯ ಮಾತಿನಲ್ಲಿ ನಿರರ್ಥಕ ರ-ಒತ್ತನ್ನು ಆಂತು ***(Brasila-) Brasala;*** (ಬ್ರಸಿಲ-) ಬ್ರಸಲ ಎಂದಾಗುತ್ತದೆ. ಬ್ರಸಲವು ವೃಷಲ ಎಂದು ಸಂಸ್ಕೃತಿಸಲ್ಪಡಲಿಕ್ಕಾದರೂ ಒಂದು ಹೆಜ್ಜೆ ತಾನೆ. ನನಗಾದರೊ ವೃಷಲದ ನಿಷ್ಪತ್ತಿ ಹೀಗೆನಿಸುತ್ತದೆ. ಅತಏವ ಈ ನಾಟಕದಲ್ಲಿ ಚಂದ್ರಗುಪ್ತನನ್ನು ಕುರಿತು ಚಾಣಕ್ಯನು ಪುನಃ ಪುನಃ ಬಳಸುವ ವೃಷಲ ಎಂಬುದರ ಅರ್ಥವೆಂದರೆ, ಮೇಲೆ ಕಂಡಿರುವಂತೆ ಚಂದ್ರಗುಪ್ತನನ್ನು ಕುರಿತು ಆತನೇ 'ವೃಷಲೇನ ವೃಷೇಣ ರಾಜ್ಞಾಮ್' (III-೧೮) ಎಂದಿರುವ ಮಾತಿನಿಂದಲೂ, ಆತನನ್ನು ಚಂದ್ರಗುಪ್ತನ ಮಂತ್ರಿ ಎಂಬಲ್ಲಿ 'ರಾಜಾಧಿರಾಜ ಮಂತ್ರಿಣೋ' (III) ಎಂದ ಕಂಚುಕಿಯ ಮಾತಿನಿಂದಲೂ ಸುಸ್ಪಷ್ಟವಾಗಿ ತಿಳಿನಂತೆ ರಾಜವೃಷನೆಂದು, ರಾಜಾಧಿರಾಜನೆಂದು, ಅಥವಾ ಅಥವಾ ಅದನ್ನೇ ಗ್ರೀಕರ ಮಾತಿನಲ್ಲಿ ಹೇಳುವುದಾದರೆ *Basileus* ಎಂದು, ಆ *Basileus* ಎಂಬ ಗ್ರೀಕ ಶಬ್ದವೇ ಇಲ್ಲಿಯ ಲೋಗರ ಮಾತಿನಲ್ಲಿ ಮೇಲೆ ಕಂಡಿರುವ ರೀತಿಯಲ್ಲಿ ಬ್ರಸಲ ಎಂದಾಗಿ, ಆ ಬ್ರಸಲವೇ ಸಂಸ್ಕೃತಿಸಲ್ಪಟ್ಟು ವೃಷಲ ಎಂದಾಯಿತು.

ಸುರಿಯದ ಅರಸನಾದ ಸೆಲ್ಯೂಕನು ಭಾರತ ಚಕ್ರವರ್ತಿಯಾದ ಚಂದ್ರಗುಪ್ತ ಕೈಯ್ಯಲ್ಲಿ ಸೋತು ಹೋಗುತ್ತಲೆ ಆತನು ಚಂದ್ರಗುಪ್ತನೊಡನೆ ಒಪ್ಪಂದ ಮಾಡಿ ಮೆಗಸ್ತೆನ (Megasthenes) ಎಂಬ ತನ್ನ ರಾಯಭಾರಿಯನ್ನು ಚಂದ್ರಗುಪ್ತನ ಆಸ್ಥಾನಕ್ಕೆ ಕಳುಹಿದನೆಂದು ನಾವು ಬಲ್ಲೆವು. ಆ ರಾಯಭಾರಿಯ ಕಾರ್ಯಾಲಯದಲ್ಲಿ ಇಲ್ಲಿ ಇದ್ದ ಗ್ರೀಕರೂ, ಸುರಿಯದ ಗ್ರೀಕ ಅರಸನಿಗೂ ಚಂದ್ರಗುಪ್ತನಿಗೂ (ಆತನ ಬಳಿಕ ಆತನ ಉತ್ತರಾಧಿಕಾರಿಗಳಿಗೂ) ಇದ್ದ ಮೈತ್ರಿಯ ದೆಸೆಯಿಂದ ಅಲ್ಲಿಂದ ಇಲ್ಲಿಗೆ ಬಂದು ಹೋಗುತ್ತಿದ್ದ ವ್ಯಾಪಾರಿಗಳೂ ಮೊದಲಾದ ಇತರ ಅನೇಕ ಗ್ರೀಕರೂ ಆತನ ಚಂದ್ರಗುಪ್ತ ಎಂಬ ಹೆಸರನ್ನು ಸರ್ವಥಾ ನೇರಾಗಿ ಸುಲಭವಾಗಿ ಉಚ್ಚರಿಸಲಾರದ ಕಾರಣ ಅವರೆಲ್ಲರು ಚಂದ್ರಗುಪ್ತನನ್ನು ಕುರಿತು ಬಳಸುವ ಹೆಸರಾದರೊ ಅವರ ಭಾಷೆಯಲ್ಲಿ *Basileus* ಎಂದೇ ವಿನಾ ಬೇರೆಯಲ್ಲ. ಅಗ್ಗೆ ಅವರ ಜತೆಯಲ್ಲಿ ಅಲ್ಲಲ್ಲಿಯ ಇಲ್ಲಿಯ ಮಂದಿಯೂ ಆತನ ಬಗ್ಗೆ ಅದೇ ಹೆಸರನ್ನು ಉಪಯೋಗಿಸದೆ ಇರಲಾರರರು. ಹಾಗೆಯೇ ಪರಂಪರಾಗತವಾಗಿ ಆ ಹೆಸರೇ ಮುಂದಮುಂದಕ್ಕೆ ಸಾಗಿಬರುತ್ತ ಕ್ರಮೇಣ

ಚಂದ್ರಗುಪ್ತನೆಂದರೂ *Basileus* (ಬಸಿಲೆಉಸ್) — *Basila* (ಬಸಿಲ) *Basala* (ಬಸಲ) ಎಂದರೂ ಲೋಗರ ಬಾಯಿಯಲ್ಲಿ ಏಕಾರ್ಥದ ಹೆಸರುಗಳಾಗದಿರವು.

ಹೀಗೆ ವೃಷಲ ಎಂಬುದು *Basileus* ಎಂಬ ಗ್ರೀಕ ಶಬ್ದದ ಸಂಸ್ಕೃತಿಸಲ್ಪಟ್ಟ ರೂಪ ತಾನೆ. ಅತ ಏವ ಚಾಣಕ್ಯನು ಪುನಃ ಪುನಃ ಆ ಹೆಸರಿನಿಂದ ಕರೆಯುತ್ತಿರುವುದಾದರೊ ಚಂದ್ರಗುಪ್ತನು ರಾಜಾಧಿರಾಜನು, ಮಹಾರಾಜನು ಎಂಬ ಅರ್ಥದಲ್ಲಿ ಯಥಾರ್ಥವಾಗಿ ವೃಷಲನಾಗಿದ್ದ ವಸ್ತುಸ್ಥಿತಿಗೆ ಅಚ್ಚುಕಟ್ಟಾಗಿ ಒಪ್ಪುತ್ತಿದೆ ಮಾತ್ರವಲ್ಲ, ಗ್ರೀಕ ಅರಸನಾದ ಸೆಲ್ಯೂಕನನ್ನು ಸೋಲಿಸುವೊಂದಿಗೆ ಚಂದ್ರಗುಪ್ತನು ಆತನ *Basileus* ಎಂಬ ಬಿರುದನ್ನೂ ಆತನಿಂದ ಕಿತ್ತುಕೊಂಡಿರಬೇಕು ಎಂಬ ಸಂಭಾವ್ಯತೆಯನ್ನೂ ಸೂಚಿಸುವಂತಿದೆ. ಆದರೆ ವೃಷಲ ಎಂಬ ಆ ಶಬ್ದವನ್ನು ಅಷ್ಟು ಅನೇಕ ಬಾರಿ ಈ ನಾಟಕದಲ್ಲಿ ಪುನರುಕ್ತಿಸಿರುವ ವಿಶಾಖದತ್ತನಿಗೆ ಅದು ಸಂಸ್ಕೃತ ಸೋಗಿನ ವಿದೇಶೀಯ ಶಬ್ದವೆಂದು ತಿಳಿದಿತ್ತೇ? ಪ್ರಾಯಶಃ ತಿಳಿದಿರಲಾರದು. ಏಕೆಂದರೆ ಆತನು 'ವೃಷಲೇನ ವೃಷೇಣ ರಾಜ್ಞಾಮ್' (III ೧೮) ಎಂದಿರುವಲ್ಲಿ, ಗ್ರೀಕಮೂಲದಿಂದ ಸಂಸ್ಕೃತಿಸಲ್ಪಟ್ಟದೆಂದು ನಾವು ಕಂಡುಕೊಂಡಿರುವ ಆ ವೃಷಲಕ್ಕೂ ಅಚ್ಚ ಸಂಸ್ಕೃತವಾದ ವೃಷಕ್ಕೂ ಗಂಟು ಹಾಕಲಿಕ್ಕೆ ಇಲ್ಲವೆ ಆ ವೃಷಲವನ್ನು ಈ ವೃಷದಿಂದ ಉತ್ಪಾದಿಸಲಿಕ್ಕೆ ಆತನು ಪ್ರಯತ್ನಿಸಿರುವಂತೆ ತೋರುವುದರಿಂದ, ತನ್ನ ಮಹಾರಾಜಾರ್ಥದ ವೃಷಲವು ಸಂಸ್ಕೃತೇತರ ಶಬ್ದವೆಂದು ಆತನು ಅರಿತಿರಲಾರನು. ಅತ ಏವ ಆ ಶಬ್ದವು ಆತನಿಗಿಂತ ಶಾನೆ ಹಿಂದೆಯೇ ಮಂದಿಯ ಮಾತುಗಳಲ್ಲಿ ಸಂಸ್ಕೃತ ಶಬ್ದವೆಂದೇ ಬೆರತು ಹೋಗಿರಬೇಕು. ಅಂಥಾ ಬಗ್ಗೆ ಇವೆರಡು ಸಾಕೂತವಾದ ಉದಾಹರಣೆಗಳನ್ನು ಕೊಡಬಹುದು—

(೧) ಕರ್ಣಾಟಕದ ವಿಜಯನಗರ ಸಾಮ್ರಾಜ್ಯದ ಅರಸರ ಅನೇಕ ಬಿರುದುಗಳಲ್ಲಿ 'ಹಿಂದುರಾಯ ಸುರತ್ರಾಣ' ಎಂಬುದೂ ಒಂದೆಂದು ಅವರ ಎಷ್ಟೋ ಶಾಸನಗಳಿಂದ ತಿಳಿಯುತ್ತದೆ. ಈ ಬಿರುದಿನಲ್ಲಿ 'ಸುರತ್ರಾಣ'[13] ಎಂಬುದು ಸಂಸ್ಕೃತ ಸಮಾಸಪದವೆಂದು ಮೊದಲ ದೃಷ್ಟಿಗೆ ತೋರಿದರೂ, ಅದು ನಿಜವಾಗಿ ರಾಜ, ಮಹಾರಾಜ, ಚಕ್ರವರ್ತಿ ಎಂಬ ಅರ್ಥದ 'ಸುಲ್ತಾನ್' ಎಂಬ ಅಚ್ಚ ಅರಬೀ ಭಾಷೆಯ ಶಬ್ದದ ಸಂಸ್ಕೃತಿಸಿದ ರೂಪವಷ್ಟೇ ವಿನಾ ಸರ್ವಥಾ ಶುದ್ಧ ಸಂಸ್ಕೃತ ಶಬ್ದವಲ್ಲ. ಆದರೆ ಹೇಗೂ ಆ ಸಾಮ್ರಾಜ್ಯದ ಅಸ್ತಿತ್ವದ ಕಾಲದಲ್ಲೂ ಹಾಗೆಯೇ ಆಮೇಲೂ, ಪ್ರಾಯಶಃ ಇಂದಿಗೂ ಕೂಡ ಮಂದಿಯ ತಿಳುವಳಿಕೆಯಾದರೊ ಅದು ಶುದ್ಧ ಸಂಸ್ಕೃತ ಶಬ್ದವೆಂದೇ.

(೨) ಪೋರ್ತುಗೀಸ್ (Portuguese) ಜನಾಂಗದ ವಾಸ್ಕೊ ದ ಗಾಮನು (Vasco da Gama) ಕ್ರಿ. ಶ. ೧೪೯೮ ರಲ್ಲಿ ಮಲಬಾರ ಜಿಲ್ಲೆಯ ಕಲ್ಲೀಕೋಟೆಯಲ್ಲಿ

13. Epigraphia Carnatica, Vol. V; ಬೇಲೂರು ೧೫೮, ೩೩.

(Calicut ಅಂದರೆ ಈಗಣ Kozhikkode) ಬಂದು ಇಳಿಯುವ ತನಕ ಅಲ್ಲಿಯ ಹಿಂದು ಅರಸನು ತನ್ನ ರಾಜ್ಯದ ಒಳಗೂ ಹೊರಗೂ ಆ ದೇಶದ ಮಲೆಯಾಳಿ ಭಾಷೆಯಲ್ಲಿ 'ತಮೂತಿರಿ' (*Tamātiri*) ಅಥವಾ 'ತಾಮೂರಿ' (*Tāmūri*) ಎಂದು ವಿದಿತನಾಗಿದ್ದನು. ಈ ಹೆಸರುಗಳು ಸಮುದ್ರದ ಅರಸನು (*Sea King*) ಎಂಬ ಅರ್ಥ ಉಳ್ಳ 'ಸಾಮುದ್ರಿ(ನ್)' ಎಂಬ ಆತನ ಸಂಸ್ಕೃತ ಭಾಷೆಯ ಬಿರುದಿನ ಪ್ರಾಂತಿಕ ಭಾಷೆಯ ವಿಕಾರಗಳಷ್ಟೆ.[14] ಪೋರ್ತುಗೀಸರು ಆತನ ಮೂಲ ಸಂಸ್ಕೃತ ಬಿರುದನ್ನು ಸ್ಪಷ್ಟವಾಗಿ ಉಚ್ಚರಿಸಲಾರದೆ, ಅವರು ಅದರ ಮಲೆಯಾಳಿ ರೂಪಭೇದಗಳಲ್ಲಿ ಒಂದಾದ 'ತಾಮೂರಿ' ಎಂಬುದುದನ್ನು ರೂಪಾಂತರಿಸಿ *Zamorin* (ಜಾಮೋರಿನ್) ಎಂದು ಮಾಡಿಕೊಂಡರು. ಅಲ್ಲಿಂದ ಮುಂದೆ ಆ ಬಿರುದಿನ ಸಂಸ್ಕೃತವೂ ಮಲೆಯಾಳಿಯೂ ರೂಪಗಳು ಬಿದ್ದುಹೋಗಿ, ಭಾರತದ ಒಳಗೂ ಹೊರಗೂ ಆತನ ವಂಶದ ಅರಸರು ಮಾತಿನಲ್ಲೂ ಬರೆಹದಲ್ಲೂ *Zamorin* ಎಂದೇ ಕರೆಯಲ್ಪಡುತ್ತಾರೆ. ಕಾರಣವಿಷ್ಟೇ, ಅನ್ಯದೇಶೀಯ ಶಬ್ದಗಳು ಒಮ್ಮೆ ಒಳನುಗ್ಗಿದುವೆಂದರೆ, ಅವು ಮತ್ತೆ ತಲೆಮರಸಿ ಒಳಗೆಯೇ ಸುಳಿದಿರುವವಲ್ಲದೆ ಬೇಗನೆ ಬಿಟ್ಟು ಹೋಗವು.

**ಗೋವಿಂದ ಪೈ**

---

14. Morse Stephens; *Allbuquerque* ('Rulers of India Series') ಪು. ೨೪, ಅಡಿಬರೆಹ ೧.

# ಪಂಡಿತ ಕುಕ್ಕೆ ಸುಬ್ರಹ್ಮಣ್ಯಶಾಸ್ತ್ರಿಗಳು

ಪಂಡಿತ ಕುಕ್ಕೆ ಸುಬ್ರಹ್ಮಣ್ಯಶಾಸ್ತ್ರಿಗಳನ್ನು ಅವರ ಜೀವಿತ ಕಾಲದಲ್ಲಿ ಅರಿಯದಿದ್ದ ಕನ್ನಡಿಗರಿರಲಿಲ್ಲ. ಅವರ ಕೀರ್ತಿ ಕನ್ನಡನಾಡಿನ ಆಚೆಗೂ ಹಲವು ವಿದ್ವದ್ಗೋಷ್ಠಿಗಳಲ್ಲಿ ಹರಡಿತ್ತೆಂದು ನನ್ನ ನಂಬಿಕೆ. ಆ ಕೀರ್ತಿಗೆ ಮೂಲಾಧಾರವಾಗಿದ್ದದ್ದು ಅವರ ಕನ್ನಡ–ಸಂಸ್ಕೃತ ಭಾಷಾ ಪಾಂಡಿತ್ಯ; ಮತ್ತು ಆ ಪಾಂಡಿತ್ಯಕ್ಕೆ ಮೆರುಗು ಕೊಡುತ್ತಿದ್ದ ಉದಾರವಾದ ಲೌಕಿಕ ಪ್ರಜ್ಞೆ.

ನಾನು ಶಾಸ್ತ್ರಿಗಳನ್ನು ಮೊದಲು ನೋಡಿದ್ದು ಶಿವಮೊಗ್ಗೆಯಲ್ಲಿ,–ಶಿವಮೊಗ್ಗೆಯ ಹೈಸ್ಕೂಲನ್ನು ನಾನು ವಿದ್ಯಾರ್ಥಿಯಾಗಿ ಪ್ರವೇಶಿಸಿದಾಗ. ಆ ವೇಳೆಗೆ ಅವರು ಐವತ್ತರ ವಯಸ್ಸನ್ನು ಮೀರಿದ್ದರು. ಎತ್ತರವಲ್ಲದ, ಕುಳ್ಳೂ ಅಲ್ಲದ, ಮಧ್ಯಸ್ಥವಾದ ಎತ್ತರದ ಆಳು ಅವರು. ದೃಢವಾದ ಕಾಲುಗಳ ಮೇಲೆ ನಿಂತ ಪುಷ್ಟವಾದ ಕಾಯ ಅವರದು; ಯಾವ ಆಘಾತಕ್ಕೂ ಜಗ್ಗುವುದಿಲ್ಲವೆಂಬಂತಿದ್ದ ವಿಶಾಲವಾದ ವಕ್ಷಃಸ್ಥಲ; ಅಕಂಪಿತವಾದ ಅಂಸದಮೇಲೆ ಸುಸ್ಥಿರವಾಗಿ, ಧೀರವಾಗಿ, ಕುಳಿತ ಉತ್ತಮಾಂಗ. ಅವರು ತಲೆಬಾಗಿದ್ದನ್ನು ನಾನು ಕಾಣೆ. ನಿಂತು ಆಚೆ ಈಚೆ ಒಮ್ಮೆ ಕತ್ತು ತಿರುಗಿಸಿದರೆಂದರೆ ಸಿಂಹಾವಲೋಕನದ ಗಾಂಭೀರ್ಯದ ನೆನಪಾಗುತ್ತಿತ್ತು. ಅವರ ಮುಖದಲ್ಲಿ ತೋರುತ್ತಿದ್ದ ಭಾವ–ಧೀರತೆ, ಮತ್ತು ಘನತೆಯಿಂದ ಕೂಡಿದ ಪ್ರಸನ್ನತೆ. ಅವರ ಕೆಳದುಟಿ ದಪ್ಪನಾಗಿದ್ದು ಹಟವನ್ನೂ ಸಾಮರ್ಥ್ಯವನ್ನೂ ಸೂಚಿಸುತ್ತಿತ್ತು. ಮಾತಿನಲ್ಲಿ, ವಾದದಲ್ಲಿ, ಅವರು ಸೋಲನ್ನರಿತವರಲ್ಲ. ಒಟ್ಟಿನಲ್ಲಿ, ಶಾಸ್ತ್ರಿಗಳು ಪ್ರಭಾವಶಾಲಿಯಾದ ಧೀರ ವ್ಯಕ್ತಿ.

ಅವರ ವಿದ್ಯಾರ್ಥಿಯಾಗಿದ್ದ ನನ್ನ ಸ್ನೇಹಿತರೊಬ್ಬರು–ಶಾಸ್ತ್ರಿಗಳನ್ನು ನೆನೆದಾಗಲೆಲ್ಲ ಅವರನ್ನು ಸೊಗಸಾದ ಸರ್ಜುಸೂಟು–ಜೋಡುಗುಂಡಿಯ ಕವಚಗಳನ್ನು ತೊಟ್ಟ ಘನವಾದ ವೇಷದಲ್ಲಿ ಚಿತ್ರಿಸಿಕೊಳ್ಳುತ್ತೇನೆಂದು ಹೇಳುತ್ತಿರುತ್ತಾರೆ. ಪ್ರಾಯಶಃ ಆ ವೇಷದಲ್ಲಿ ಶಾಸ್ತ್ರಿಗಳು ಯೋಧಶ್ರೇಷ್ಠನಂತೆ ಕಾಣುತ್ತಿದ್ದರೇನೋ. ವಾದದಲ್ಲಿ ಅವರು ಯೋಧರೇ. ಎದುರಾಳಿಯ ಮೇಲೆ ಅವರದು ಯಾವಾಗಲೂ ಗದಾಪ್ರಹಾರವೇ. ಶಾಸ್ತ್ರಿಗಳು ಪಂಡಿತರು;–ಅವರೆಂದೂ ಸೂಟುಗೀಟು ಧರಿಸಿದವರಲ್ಲ. ಅವರ ಧೀರ ವ್ಯಕ್ತಿ ಪ್ರಭಾವವನ್ನರಿಯಲು ಅವರನ್ನು ಪಾಶ್ಚಾತ್ಯ ವೇಷದಲ್ಲಿ ಚಿತ್ರಿಸಿಕೊಳ್ಳಬೇಕಾದ ಅವಶ್ಯಕತೆಯಿಲ್ಲ. ತಮ್ಮ ನಿತ್ಯದ ಪಂಚೆ ಅಂಗಿ ರುಮಾಲುಗಳ ಉಡುಪಿನಲ್ಲಿ ಅವರು ಗಂಭೀರವಾದ ಆಕರ್ಷಕವ್ಯಕ್ತಿಯಾಗಿ ತೋರುತ್ತಿದ್ದರು. ಜರಿಯ ಶಾಲು ಹೊದ್ದು ಜರಿಯ ಶಾಲಿನ ಪೇಟವನ್ನು ಧರಿಸಿದಾಗ ಘನತೆವೆತ್ತ ವಿದ್ವತ್ ಪ್ರಭಾವಶಾಲಿಯಂತೆ ಕಂಗೊಳಿಸುತ್ತಿದ್ದರು. ಮಡಿಯುಟ್ಟು, ಭಸ್ಮವನ್ನು ಧರಿಸಿ, ಪದ್ಮಾಸನಸ್ಥರಾಗಿ ಸಂಧ್ಯಾ

ಜಪಗಳಲ್ಲಿ ತೊಡಗಿದಾಗ ಯೋಗಪ್ರವಿಷ್ಟನಂತೆ ಗಂಭೀರವಾದ ಅವರ ಮುಖ ಮುದ್ರೆಯ ವರ್ಚಸ್ಸು ನೋಡುವವರ ಮನಸ್ಸನ್ನು ಸೆಳೆಯುತ್ತಿತ್ತು. ಘನವಾದ ವ್ಯಕ್ತಿ ಯಾವ ವೇಷವನ್ನು ತೊಟ್ಟರೇನು ? ಆಂತರಿಕವಾದ ಆತನ ತೇಜಸ್ಸಿನ ಪ್ರಕಾಶಕ್ಕೆ ಬಾಹ್ಯವೇಷಗಳ ಅವಲಂಬನೆ ಅಗತ್ಯವಾದ ಸಾಧನವಲ್ಲ.

ಶಾಸ್ತ್ರಿಗಳ ಪಾಂಡಿತ್ಯ ಭಾಷಣ ಸಾಮರ್ಥ್ಯಗಳನ್ನು ಮನಸಾರ ಮೆಚ್ಚಿ ಮಾತ ನಾಡಿಕೊಳ್ಳುತ್ತಿದ್ದರು-ಅವರ ವಿದ್ಯಾರ್ಥಿಗಳು. ಅವರ ಕನ್ನಡ ತರಗತಿಗೆ-ಅದು ದಿನದ ಕಡೆಯ ಪಾಠವಾದರೂ-ಯಾವ ವಿದ್ಯಾರ್ಥಿಯೂ ಚಕ್ಕರು ಹೊಡೆಯುತ್ತಿರ ಲಿಲ್ಲವಂತೆ. ನನ್ನ ಸಹಪಾಠಿಗಳು ಬಗೆಬಗೆಯಾಗಿ ವಿವರಿಸುತ್ತಿದ್ದ ಶಾಸ್ತ್ರಿಗಳ ಭಾಷಣ ಗಳ ಸೊಗಸಿನ ವರ್ಣನೆಗಳನ್ನು ಕೇಳಿ ಕೇಳಿ ನನ್ನ ಬಾಯಲ್ಲಿ ನೀರೂರಿತ್ತು. ಶಾಸ್ತ್ರಿ ಗಳ ಪಾಠಗಳನ್ನು ಕೇಳಲು ನನ್ನ ಮನಸ್ಸು ಹಾತೊರೆಯುತ್ತಿತ್ತು. ಆದರೆ, ಅವರು ಯಾವ ಶಾಲೆಯಲ್ಲಿ ಉಪಾಧ್ಯಾಯರಾಗಿದ್ದರೊ ಅದೇ ಶಾಲೆಯಲ್ಲಿ ನಾನು ವಿದ್ಯಾರ್ಥಿ ಯಾಗಿದ್ದರೂ ಅವರ ಉಪನ್ಯಾಸಗಳನ್ನು ಕೇಳುವ ಭಾಗ್ಯ ನನ್ನದಾಗಿರಲಿಲ್ಲ. ಅವರು ಕನ್ನಡ ಪಂಡಿತರು; ನಾನು ಸಂಸ್ಕೃತ ವಿದ್ಯಾರ್ಥಿ. ಹೀಗಿರುವಾಗ ಅವರ ತರಗತಿಗೆ ಹೋಗಲು ನನಗವಕಾಶವೆಲ್ಲಿ? ನಮ್ಮ ಸಂಸ್ಕೃತ ಪಂಡಿತರೊಂದು ಬಾರಿ ಎರಡು ಮೂರು ದಿನಗಳು ರಜಾ ಹೋದರು. ಅಂಥ ಸಮಯವನ್ನೆ ಕಾಯುತ್ತಿದ್ದ ನಾನೂ ನನ್ನ ಜೊತೆಯ ಒಬ್ಬಿಬ್ಬರು ವಿದ್ಯಾರ್ಥಿಗಳೂ ಕನ್ನಡ ತರಗತಿಗೆ ನುಗ್ಗಿ ವಿದ್ಯಾರ್ಥಿಗಳ ಮಧ್ಯೆ ಹುದುಗಿ ಕುಳಿತೆವು. ಆ ದಿನ ಶಾಸ್ತ್ರಿಗಳು ಯಾವ ಪುಸ್ತಕವನ್ನು ಕುರಿತು ಪಾಠ ಹೇಳುತ್ತಿದ್ದರೋ ಈಗ ಜ್ಞಾಪಕವಿಲ್ಲ. ಶಾಸ್ತ್ರಿಗಳು ಪಠ್ಯ ವಿಷಯಕ್ಕೆ ಕಟ್ಟು ಬಿದ್ದ ನೀರಸ ಪಂಡಿತರಲ್ಲ. ಪ್ರಪಂಚದ ವಿಷಯವೆಲ್ಲ ಅವರ ಪಾಠದ ಪಥದಲ್ಲಿ ಸುಳಿಯುತ್ತಿದ್ದವು. ಅಂದು ಕುದುರೆ ಗಳ ಪ್ರಸ್ತಾವ ಬಂತು. ಶಾಸ್ತ್ರಿಗಳ ಬಾಯಿಂದ ಮಾತಿನ ಬುಗ್ಗೆ ಅವ್ಯಾಹತವಾಗಿ ಚಿಮ್ಮಿ ಹರಿಯಿತು. ಕುದುರೆ : 'ಆಚಾರ್‍ರ ತಟ್ಟು,' 'ಶೇಕದಾರ್‍ರ ಟಾಕಣ,' 'ಅಮಲ್ದಾರರ ಕುದುರೆ,' ಡೆಪ್ಯುಟಿ ಕಮಿಷನರ 'ಸವಾರಿ ಕುದುರೆ,' ಜಟಕಾ ಕುದುರೆ, ಸಾರೋಟಿನ ಕುದುರೆ,-ಕಡೆಗೆ ಪಟ್ಟದ ಕುದುರೆ-ಹೀಗೆ ನಾನಾ ಬಗೆಯ ನಾನಾ ಅಂತಸ್ತಿನ ಕುದುರೆಗಳ ಸಾಮಾನ್ಯ ಚಹರೆ, ನಡವಳಿಕೆ, ಜಾತಿಗುಣ, ಅವುಗಳ ಬೆಳವಣಿಗೆ, ಕಷ್ಟ ಸುಖಗಳು-ಇವೇ ಮುಂತಾದ ವಿಷಯಗಳನ್ನೆಲ್ಲ ಕುರಿತು-ತಾವು ಆ ಪ್ರಾಣಿಗಳನ್ನು ಸ್ವತಃ ಸಾಕಿ ಅನುಭವ ಪಡೆದಿರುವವರಂತೆ-ವಿವರ ನಿಷ್ಠವಾಗಿ ವರ್ಣಿಸಿದರು. ನಾವೆಲ್ಲ ಅವರ ವ್ಯಾಖ್ಯಾನವನ್ನು ಸದ್ದಿಲ್ಲದೆ ನಿಬ್ಬೆರಗಾಗಿ ಕೇಳಿದೆವು. ಕನ್ನಡ ಪಾಠ ಹೇಳಿಕೊಂಡಿರುವ ಈ ಪಂಡಿತರಿಗೆ ಇಷ್ಟೆಲ್ಲ ವಿಷಯ ಹೇಗೆ ತಿಳಿಯಿತೆಂದು ಅಚ್ಚರಿಪಟ್ಟೆವು. ಶಾಸ್ತ್ರಿಗಳ ಲೋಕ ಪರಿಚಯ ಅಪಾರವಾಗಿತ್ತು. ಇನ್ನೊಂದು ದಿನ ಅವರು ಊಟದ, ಉಪಚಾರದ, ನಾನಾ ಬಗೆಗಳನ್ನು ವಿವರಿಸಿದರು. ಉತ್ತರ ಸೀಮೆಯಲ್ಲಿ, ದಕ್ಷಿಣ ದೇಶದಲ್ಲಿ, ಮಾಡುವ ಅಡುಗೆಯ ವೈವಿಧ್ಯವನ್ನೂ ಭಕ್ಷ್ಯಗಳ ಬಗೆಗಳನ್ನೂ ಕುರಿತು ಬೇಸರವಾಗದಂತೆ ಮಾತನಾಡ ಬಲ್ಲವರಾಗಿದ್ದರು. ವಿಶೇಷ

ವಾದ ಪ್ರಕೃತಿಪರಿಶೀಲನಾ ಸಾಮರ್ಥ್ಯವೂ ಅದ್ಭುತವಾದ ವಿಷಯ ಗ್ರಹಣ ಶಕ್ತಿಯೂ ಅವರಲ್ಲಿದ್ದವು. ಅವರ ಲೋಕಾನುಭವ ಹೀಗೆ ವಿಸ್ತಾರವಾದದ್ದಾದ್ದ ರಿಂದ ಅವರು ವಿದ್ಯಾರ್ಥಿಗಳನ್ನು ಪುಸ್ತಕ ಪ್ರಪಂಚದಿಂದ ವಿಶಾಲವಾದ ಜೀವನ ಪ್ರಪಂಚಕ್ಕೂ ಆ ವಿಶಾಲ ಪ್ರಪಂಚದಿಂದ ರಸಪ್ರಪಂಚಕ್ಕೂ ಒಯ್ಯ ಬಲ್ಲವರಾಗಿದ್ದರು.

ಶಾಸ್ತ್ರಿಗಳ ಸಾಹಿತ್ಯ ಪಾಂಡಿತ್ಯ ವಿಪುಲವಾದದ್ದಾಗಿತ್ತು. ಪಠ್ಯ ಕಾವ್ಯದಲ್ಲಿ ಯಾವ ವರ್ಣನೆ ಸನ್ನಿವೇಶ ಸಂದರ್ಭಗಳು ಬರಲಿ, ಅವುಗಳಿಗೆ ಸದೃಶವಾದ ವರ್ಣನೆ ನಿದರ್ಶನಗಳನ್ನು ಇತರ ಕನ್ನಡ ಕಾವ್ಯಗಳಿಂದ, ವ್ಯಾಸ ವಾಲ್ಮೀಕಿ ಕಾಳಿದಾಸ ದಂಡಿ ಬಾಣ ಭವಭೂತಿ ಭಾರವಿ ಮೊದಲಾದ ಸಂಸ್ಕೃತ ಕವಿಗಳಿಂದ, ಉದಾಹರಿಸಿ ವಿಷಯ ವಿವರಣೆ ಮಾಡುತ್ತಿದ್ದರು. ಇದರಿಂದ ಬೇರೆ ಬೇರೆ ಕವಿಗಳ ಶಕ್ತಿ ಸಾಮರ್ಥ್ಯ ಗುಣ ವಿಶೇಷಗಳು ವಿದ್ಯಾರ್ಥಿಗಳಿಗೆ ಮನದಟ್ಟಾಗುತ್ತಿತ್ತು. ಇತರ ಕಾವ್ಯಗಳ ವಿಷಯಗಳೂ ಅನೇಕ ವೇಳೆ ತಿಳಿದಂತಾಗುತ್ತಿತ್ತು. ದಂಡಿಯ ದಶಕುಮಾರ ಚರಿತೆಯ ಸ್ವಾರಸ್ಯವಾದ ಒಂದು ಕಥಾ ಭಾಗವನ್ನು ನಾನು ಮೊದಲ ಬಾರಿಗೆ ಅವರ ಕನ್ನಡ ತರಗತಿಯಲ್ಲಿ ಕೇಳಿದೆ. ಸಂಸ್ಕೃತದ ಎಷ್ಟೋ ಅನ್ಯೋಕ್ತಿಗಳನ್ನು, ಕವಿತೆಗಳನ್ನು ವಿದ್ಯಾರ್ಥಿಗಳು ಶಾಸ್ತ್ರಿಗಳ ಕನ್ನಡ ತರಗತಿಗಳಲ್ಲಿ ನಿತ್ಯವೂ ಕೇಳಬಹುದಾಗಿತ್ತು. ಸಂಸ್ಕೃತದ, ಕನ್ನಡದ, ಉದ್ದಾಮ ಕವಿಗಳ ಕಾವ್ಯ ಭಾಗಗಳನೇಕ ಅವರಿಗೆ ಮುಖಸ್ಥವಾಗಿತ್ತು. ಪಾಠದ ವೇಳೆಯಲ್ಲಿ ವಿಷಯದ ನಿರೂಪಣೆಗಾಗಿ, ವಿಶದೀಕರಣಕ್ಕಾಗಿ, ಸಮರ್ಥನೆಗಾಗಿ, ಸಾದೃಶ್ಯಕ್ಕಾಗಿ, ಖಂಡನೆ ಗಾಗಿ, ಅವರು ಕೊಡುತ್ತಿದ್ದ ನಿದರ್ಶನಗಳಿಗೆ ಲೆಕ್ಕವಿರಲಿಲ್ಲ. ಅವರು ಓದಿದ ಕಾವ್ಯ ವಿಷಯಗಳು, ಕಂಡು ಕೇಳಿದ ಸಂಗತಿಗಳು, ಸಣ್ಣ ಪುಟ್ಟ ದೊಡ್ಡ ಕಥೆಗಳು, ಹಾಸ್ಯೋಕ್ತಿ ಕಟೂಕ್ತಿ ವಿಡಂಬನೆಗಳು, ಅನ್ಯೋಕ್ತಿಗಳು, ವೇದಾಂತ ವಿಚಾರಗಳು, ಧರ್ಮಸೂಕ್ಷ್ಮವಿವೇಚನೆಗಳು, ದೇಶ ವಿದೇಶಗಳ ಆಚಾರ ವ್ಯವಹಾರ ಗಳು,—ಹೀಗೆ ನಾನಾ ವಿಷಯಗಳು ಅವರ ಪಾಠೋಪನ್ಯಾಸದ ಹಾಸುಹೊಕ್ಕಾಗಿ ಸೇರಿ ಅವರ ತರಗತಿಗಳು ವಿವಿಧ ವಿಷಯ ವರ್ಣರಂಜಿತಗಳಾಗಿ ರಸಭರಿತವಾಗಿರು ತ್ತಿದ್ದುವು. ಅವರ ಮಾತುಗಳು ಜೀವಕಳೆಯಿಂದ ತುಂಬಿ ಪರ್ವತಾಗ್ರದಿಂದ ಬೀಳುವ ನಿರ್ಝರಿಣಿಯಂತೆ ಅವ್ಯಾಹತವಾಗಿ ವಿಜೃಂಭಿಸಿ ಬಾಯಿಂದ ಹೊರಬೀಳು ತ್ತಿದ್ದುವು. ಪಾಂಡಿತ್ಯ, ರಸಿಕತೆ, ಲೋಕವಿಜ್ಞಾನ, ಔದಾರ್ಯ ಇವು ಅವರಲ್ಲಿ ಮೇಳವಿಸಿದ್ದವು.

ಶಾಸ್ತ್ರಿಗಳು ವಾದದಲ್ಲಿ, ಯುಕ್ತಿವಾದದಲ್ಲಿ, ಗಟ್ಟಿಗರು, ಚತುರರು. ರಾಜತಂತ್ರದ ದೃಷ್ಟಿಯಿಂದ ದುರ್ಯೋಧನನ ನಡೆವಳಿಕೆಗಳು ಸಮರ್ಥನೀಯವೆಂದು ಒಮ್ಮೆ ಸಮಂಜ ಸವಾಗಿ ವಾದಿಸುವರು. ಮರುದಿನ, ಧರ್ಮಸೂಕ್ಷ್ಮಗಳನ್ನು ವಿವೇಚನೆಮಾಡಿ ಜಗದ್ಧಿತ ದೃಷ್ಟಿಯನ್ನು ವಿವರಿಸಿ ಅವನ ನೀತಿಯನ್ನು ಖಂಡಿಸಿ ವ್ಯಾಸರ ಧರ್ಮಾಭಿಮಾನವನ್ನು ಕೊಂಡಾಡುವರು. ಹೀಗೆ ಅವರ ಪಾಠಗಳು ವಿದ್ಯಾರ್ಥಿಗಳಿಗೆ ಬೋಧಪ್ರದವಾಗಿಯೂ

ಅವರ ಬುದ್ಧಿಗೆ ಒಂದು ವ್ಯಾಯಾಮದಂತೆಯೂ ಇರುತ್ತಿದ್ದವು. ಬುದ್ಧಿಯ ಕಸರತ್ತಿನಲ್ಲಿ ಅವರಿಗೆ ವಿಶೇಷವಾದ ಆಸಕ್ತಿ. ಆದ್ದರಿಂದಲೇ ಅವರು "ಮುದ್ರಾಮಂಜೂಷ" ಗ್ರಂಥವನ್ನು ಹೈಸ್ಕೂಲು ಹತ್ತಿದ ವಿದ್ಯಾರ್ಥಿಗಳಿಗೆಲ್ಲ ಪಾಠ ಹೇಳಲೇಬೇಕು, ಹೇಳುತ್ತಿದ್ದರು. ಪಾಠಹೇಳಲು ಅದನ್ನು ಸರಕಾರದವರು ಪಠ್ಯ ಪುಸ್ತಕವನ್ನಾಗಿ ನಿಯಮಿಸಬೇಕೆಂಬ ಕಟ್ಟಿಗೆ ಅವರು ಒಳಗಾದವರೇ ಅಲ್ಲ. ಚ. ವಾಸುದೇವಯ್ಯನವರ "ಆರ್ಯಕೀರ್ತಿ," "ಛತ್ರಪತಿ ಶಿವಾಜಿ" ಈ ಗ್ರಂಥಗಳೂ ಅವರಿಗೆ ಬಹು ಪ್ರಿಯವಾಗಿದ್ದು ಅವುಗಳನ್ನು ವಿದ್ಯಾರ್ಥಿಗಳಿಗೆ ಕಡ್ಡಾಯನಾಗಿ ಪಾಠ ಹೇಳುತ್ತಿದ್ದರು ಅವರ ಧರ್ಮಾಭಿಮಾನ ದೇಶಾಭಿಮಾನಗಳು ಎಷ್ಟು ತೀಕ್ಷ್ಣವಾಗಿದ್ದುವೆಂಬುದನ್ನು ವಿದ್ಯಾರ್ಥಿಗಳು ಆ ಸಮಯದಲ್ಲಿ ಮನಗಾಣಬಹುದಾಗಿತ್ತು.

೨

ಶಾಸ್ತ್ರಿಗಳ ಜೀವನ ವಿಚಾರಗಳನ್ನು ಅವರ ಒಡನಾಡಿಗಳಾಗಿದ್ದವರು ಯಾರಾದರೂ ಗುರುತಿಸಿ ಇಟ್ಟಿದ್ದರೆ ಚೆನ್ನಾಗಿತ್ತು; ಎಷ್ಟೋ ಸ್ವಾರಸ್ಯವಾದ ಸಂಗತಿಗಳು ತಿಳಿದುಬರುತ್ತಿದ್ದವು. ಏಕೆಂದರೆ, ಶಾಸ್ತ್ರಿಗಳದು ರಸ-ಜೀವನ. ಅವರು ರಸಿಕರು. ಅವರ ಬದುಕು ರಸಮಯವಾದ ಸನ್ನಿವೇಶಗಳಿಂದ ಕೂಡಿದ್ದಾಗಿತ್ತು. ಆದರೆ, ನಮ್ಮ ದೇಶದ ಎಂದಿನ ಪದ್ಧತಿಯಂತೆ ಅವರ ಜೀವನ ವೃತ್ತವನ್ನು ಸಂಗ್ರಹಿಸುವ ಕೆಲಸವನ್ನು ಯಾರೂ ಮಾಡಲಿಲ್ಲ.

ಶಾಸ್ತ್ರಿಗಳ ತೈಲಚಿತ್ರವೊಂದನ್ನು ಅವರ ಮಕ್ಕಳಾದ ಶ್ರೀ ಎಸ್. ಎಸ್. ಕುಕ್ಕೆಯವರು ಬರೆದು ಶಿವಮೊಗ್ಗೆಯ ಕರ್ಣಾಟಕ ಸಂಘಕ್ಕೆ ದಯಪಾಲಿಸಿದರು. ಚಿತ್ರದ ಅನಾವರಣೋತ್ಸವ ಸಮಯದಲ್ಲಿ ಶಾಸ್ತ್ರಿಗಳನ್ನು ಕುರಿತು ನಾಲ್ಕು ಮಾತನಾಡಬೇಕಾದ ಕರ್ತವ್ಯ—ನಾನು ಅವರಲ್ಲಿ ಬಳಕೆಯಾಗಿದ್ದುದರಿಂದ—ನನ್ನ ಪಾಲಿಗೆ ಬಿತ್ತು. ಆ ಸಂದರ್ಭದಲ್ಲಿ, ಅವರ ಜೀವನಕ್ಕೆ ಸಂಬಂಧಪಟ್ಟ ಕೆಲವು ಸ್ಥೂಲಾಂಶಗಳನ್ನು ಅವರಿಂದಲೆ ಸಂಗ್ರಹಿಸಿದೆ.

ಕುಕ್ಕೆ ಸುಬ್ರಹ್ಮಣ್ಯಶಾಸ್ತ್ರಿಗಳು ಕ್ರೋಧನ ಸಂವತ್ಸರದ ಆಷಾಢ ಶುದ್ಧ ತೃತೀಯೆ ಸೋಮವಾರದ ದಿನದಲ್ಲಿ ಎಂದರೆ, ತಾ|| ೨೬-೬-೧೮೬೫ ರಲ್ಲಿ, ಈಗ ನರಸಿಂಹರಾಜಪುರವೆಂದು ಕರೆಯಲ್ಪಡುವ ಎಡೇಹಳ್ಳಿಯಲ್ಲಿ ಹುಟ್ಟಿದರು. ಎಡೇಹಳ್ಳಿ ಮಲೆನಾಡು ಪ್ರದೇಶ. ಮಲೆನಾಡು ಪ್ರಕೃತಿ ಸೌಂದರ್ಯದ ಬೀಡು. ಶಾಸ್ತ್ರಿಗಳು ಬಾಲ್ಯದಿಂದಲೂ ಪ್ರಕೃತಿ ಸೌಂದರ್ಯವನ್ನು ಸವಿದವರು. ಆ ಸೌಂದರ್ಯಾನುಭವದ ಫಲವನ್ನು ಅವರ "ಜೋಗದ ಜಲಪಾತ," "ಕೆಮ್ಮಣ್ಣ ಗುಂಡಿ," "ಬೃಂದಾವನ," "ನಮ್ಮ ಮಲೆನಾಡು," "ವಿಜಯನಗರ" ಮೊದಲಾದ ಕನ್ನಡ ಸಂಸ್ಕೃತ ಕೃತಿಗಳಲ್ಲಿ ಕಾಣಬಹುದು.

ಶಾಸ್ತ್ರಿಗಳ ಬಾಲ್ಯ ವಿದ್ಯಾಭ್ಯಾಸ ಶಿವಮೊಗ್ಗೆಯಲ್ಲಿ ನಾಡಿಗರ ಪಂತರ ಮಠದಲ್ಲಿ ನಡೆಯಿತು. ಶಿಷ್ಟಾಚಾರ ಸಂಪನ್ನರಾದ ಅವರ ತಂದೆ ತಾಯಿಗಳು ಮಗನ

ಮೇಧಾಶಕ್ತಿಯನ್ನು ಕಂಡುಕೊಂಡು ಗರ್ಭಾಷ್ಟಮದಲ್ಲಿ ಉಪನಯನೋತ್ಸವವನ್ನು ನಡಸಿ, ನರಸಿಂಹರಾಜಪುರದಲ್ಲಿ ವೇದಾಧ್ಯಯನಾದಿ ವಿದ್ಯಾಭ್ಯಾಸಕ್ಕೆ ಏರ್ಪಾಡು ಮಾಡಿದರು. ಸಾಹಿತ್ಯ ವ್ಯಾಸಂಗವೂ ಅದರ ಜೊತೆಯಲ್ಲಿ ನಡೆಯಿತು.

ವಯಸ್ಸಿನಲ್ಲಿ ಚಿಕ್ಕವರಾದರೂ ಶಾಸ್ತ್ರಿಗಳು ಬುದ್ಧಿಯಲ್ಲಿ ಚುರುಕಾಗಿದ್ದರು. ದಿನವೂ ಬೆಳಗಿನ ಜಾವ ನಾಲ್ಕುವರೆ ಗಂಟೆಗೆ ಎದ್ದು ದಿನಕ್ಕೆ ಏಳೆಂಟು ಗಂಟೆಗಳಿಗೆ ಕಡಿಮೆಯಿಲ್ಲದಂತೆ ವ್ಯಾಸಂಗಮಾಡುತ್ತಿದ್ದರು. ಹೇಳಿಕೊಟ್ಟ ವಿಷಯವನ್ನು ಬಹು ಶೀಘ್ರವಾಗಿ ಗ್ರಹಿಸುತ್ತಿದ್ದರು. ಇವರ ಕುಶಾಗ್ರ ಬುದ್ಧಿಯನ್ನರಿತ ತಂದೆ ಇವರನ್ನು ಹನ್ನೊಂದನೆಯ ವಯಸ್ಸಿನಲ್ಲಿಯೆ ವೇದಾಂತ ವ್ಯಾಸಂಗಕ್ಕಾಗಿ ಶ್ರೀ ಶಾರದಾಪೀಠ ವೆನಿಸಿದ ಶೃಂಗೇರಿಗೆ ಕಳಿಸಿದರು. ಮುಕ್ತರಾದ ಜಗದ್ಗುರು ಶ್ರೀ ಶಿವಾಭಿನವ ಸಚ್ಚಿದಾನಂದ ನೃಸಿಂಹಭಾರತೀ ಸ್ವಾಮಿಗಳವರು ಆಗ್ಗೆ ಗುರುಪೀಠವನ್ನಲಂಕರಿಸಿದ್ದರು. ಶಾಸ್ತ್ರಿಗಳು ಗುರುಗಳಲ್ಲಿಗೆ ನಡೆದು ಭಕ್ತಿಯಿಂದ ಅಭಿವಂದಿಸಿ, ಛಾತ್ರ ಸಹಜವಾದ ನಮ್ರತೆಯಿಂದ ತಮ್ಮನ್ನು ವಿದ್ಯಾರ್ಥಿಯನ್ನಾಗಿ ಸ್ವೀಕರಿಸಬೇಕೆಂದು ಗುರುಗಳನ್ನು ಪ್ರಾರ್ಥಿಸಿಕೊಂಡರು. ಶಿಷ್ಯೇಂಗಿತ ಗ್ರಹಣಶೀಲರಾದ ಗುರುಗಳು ಈ ಕಿರಿಯ ಬಾಲಕನ ಮನೋದಾರ್ಢ್ಯವನ್ನು ಪರೀಕ್ಷಿಸಲೆಳಸಿ–“ ನೀನಿನ್ನೂ ಚಿಕ್ಕವನು; ಇದು ಮಳೆನಾಡು; ಈ ಮಳೆನಾಡಿನಲ್ಲಿ ಇದ್ದು ವ್ಯಾಸಂಗಮಾಡುವುದು ನಿನಗೆ ದುಸ್ತರ ” ಎಂದು ನುಡಿದರು. ಉತ್ಸಾಹದಿಂದ ತುಂಬಿದ್ದ ಶಾಸ್ತ್ರಿಗಳು–“ ಈ ವಯಸ್ಸೂ ಈ ವಿದ್ಯಾಸಕ್ತಿಯೂ ಈ ಸದಾಶ್ರಯವೂ ನನಗೆ ಮುಂದೆ ದೊರೆಯಲಾರವು; ಆದ್ದರಿಂದ ಬಂದಿದ್ದೇನೆ. ಗುರುಗಳ ಅನುಗ್ರಹ ದೊರೆತರೆ ಮಳೆನಾಡು ಬಯಲುಸೀಮೆಗಿಂತಲೂ ಸುಖಕರವಾಗಿ ತೋರೀತು ”—ಎಂದು ಹೇಳಿ ಅಡ್ಡಬಿದ್ದರು. ಬಾಲಕನ ಚಟುವಟಿಕೆಯನ್ನೂ ಬುದ್ಧಿಸ್ಥೈರ್ಯವನ್ನೂ ಗುರುಗಳು ಕಂಡುಕೊಂಡರು. ಶಾಸ್ತ್ರಿಗಳ ಪೂರ್ವ ಪುಣ್ಯ ಪರಿಪಾಕ ವಿಶೇಷದಿಂದ ಗುರುಗಳು ಅವರನ್ನು ವಿದ್ಯಾರ್ಥಿಯನ್ನಾಗಿ ಸ್ವೀಕರಿಸಿ ತಾವೇ ಹದಿಮೂರು ವರ್ಷಗಳ ಕಾಲ ನ್ಯಾಯವೇದಾಂತಾದಿ ಶಾಸ್ತ್ರಗಳನ್ನು ಪಾಠ ಹೇಳಿ ಅನುಗ್ರಹಿಸಿದರು.

ಗುರುಗಳು ಶಿಷ್ಯವಾತ್ಸಲ್ಯ ಪರಿಪೂರ್ಣರು; ದಯಾಮಯರು. ಅನನ್ಯ ಸದೃಶರಾದ ಆ ಗುರುಗಳ ಮಹಿಮೆಯನ್ನು ಶಾಸ್ತ್ರಿಗಳು ‘ ಗುರುಸ್ತುತಿ ’ ಯಲ್ಲಿ ಕೊಂಡಾಡಿಡಿದ್ದಾರೆ. ಗುರುಗಳನ್ನು ಕುರಿತ ಒಂದು ಚಿಕ್ಕ ‘ ಗುರುಚರಿತ ’ವನ್ನು ಕನ್ನಡದಲ್ಲಿ ಬರೆದಿದ್ದಾರೆ. ಅಸಾಮಾನ್ಯರಾದ ಆ ಗುರುಗಳ ದಯಾಗುಣವನ್ನೂ ಶಾಸ್ತ್ರಿಗಳ ಗುರುಭಕ್ತಿಯನ್ನೂ ಅವರ ಬಂಧುರ ಕವಿತಾ ಮಾರ್ಗವನ್ನೂ ‘ ಗುರುಸ್ತುತಿ ’ ಯಿಂದ ಉದ್ಧೃತವಾದ ಈ ಕೆಳಗಿನ ಸುಂದರಕವನ ನಿದರ್ಶನಕ್ಕೆ ತರುತ್ತದೆ.

> ನಿಸ್ಸ್ವಾಯ ಪುಸ್ತಕಮದಾತ್ ಕ್ಷುಧಿತಾಯ ಚಾನ್ನಂ
> ರುಗ್ಣಾಯ ಭೇಷಜಮಹೀಪಲದಾದರೇಣ ।
> ಯೋ ಮಾಮನನ್ಯಶರಣಂ ಸುತನಿರ್ವಿಶೇಷಂ
> ಸೋsಯಂ ದಯಾರ್ದ್ರ ಹೃದಯೋ ಗುರುರೇವ ವಂದ್ಯಃ ॥

ಗುರುಗಳು ವಾರಕ್ಕೊಮ್ಮೆ ಶಿಷ್ಯರನ್ನು ಪರೀಕ್ಷಿಸುತ್ತಿದ್ದರಂತೆ. ಒಂದೊಂದು ವಾರ ಒಬ್ಬೊಬ್ಬ ವಿದ್ಯಾರ್ಥಿ ರಾಮಾಯಣ ಭಾರತ ಮೊದಲಾದ ಯಾವುದಾದರೂ ಧರ್ಮಗ್ರಂಥವೊಂದರಿಂದ ವಿಷಯವನ್ನು ಆರಿಸಿಕೊಂಡು ವ್ಯಾಖ್ಯಾನ ಮಾಡಬೇಕಾಗಿತ್ತು. ಶಾಸ್ತ್ರಿಗಳು ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಗುರುಗಳ ಮೆಚ್ಚುಗೆಯನ್ನು ಪಡೆದರು. ತಮ್ಮ ಸರದಿ ಬರುವುದಕ್ಕೆ ಮೊದಲು ಅವರು ಊರ ಹೊರಗೆ ಕಾಡಿನ ಪ್ರದೇಶಕ್ಕೆ ನಡೆದು ಗಿಡ ಮರಗಳ ಮುಂದೆ ನಿಂತು ಭಾಷಣದ ವಿಷಯವನ್ನು ಒಂದೆರಡು ಬಾರಿ ಪುನರಾವರ್ತನೆ ಮಾಡಿಕೊಳ್ಳುತ್ತಿದ್ದರಂತೆ. ಈ ವಿಧವಾದ ಅಭ್ಯಾಸದಿಂದ ಅವರು ತಡೆ ಬಿಡುವಿಲ್ಲದೆ ಪ್ರವಾಹ ರೂಪವಾಗಿ ಮುಂಬರಿವ ವಾಕ್ಸರಣಿಯಲ್ಲಿ ಮಾತನಾಡುವುದನ್ನು ಕಲಿತುಕೊಂಡರು. ಸಭೆಗಳಲ್ಲಿ ಧೈರ್ಯವಾಗಿ ನಿಂತು ಮಾತನಾಡುವುದನ್ನೂ ಪೂರ್ವಪಕ್ಷ ಸಿದ್ಧಾಂತ ಮಾಡುವುದನ್ನೂ ಅಭ್ಯಾಸ ಮಾಡಿಕೊಂಡರು. ಶಾಸ್ತ್ರಿಗಳ ಗಂಭೀರವಾದ ಮುಖ ಮುದ್ರೆ ಅವರ ಭಾಷಣಗಳಿಗೊಂದು ಘನತೆಯನ್ನು ತಂದುಕೊಡುತ್ತಿತ್ತು ; ಅವರ ಅವ್ಯಾಹತವಾದ ವಾಕ್ಪ್ರವಾಹ ಮನಸ್ಸನ್ನು ಸೆಳೆಯುತ್ತಿತ್ತು ; ವಿಷಯದ ಸರಳ ನಿರೂಪಣೆಯ ರೀತಿ ಸ್ವಾರಸ್ಯವನ್ನುಂಟು ಮಾಡುತ್ತಿತ್ತು.

ಹದಿಮೂರು ವರ್ಷಗಳ ಕಾಲ ಶ್ರೀ ಶಾರದಾ ಸನ್ನಿಧಿಯಲ್ಲಿ ವಿದ್ಯಾಭ್ಯಾಸದ ತಪಸ್ಸನ್ನು ಆಚರಿಸಿ ಶಾಸ್ತ್ರಿಗಳು ದೇಶ ಸಂಚಾರವನ್ನು ಕೈಕೊಂಡರು. ಪುಸ್ತಕ ವಿದ್ಯೆಗೆ ಜೀವಕಳೆಯನ್ನು ತಂದುಕೊಡತಕ್ಕದ್ದು ಲೋಕವ್ಯವಹಾರಜ್ಞಾನ ಲೋಕ ಪರಿಜ್ಞಾನದ ಸಂಪಾದನೆಗೆ ವಿಶೇಷ ಸಹಕಾರಿಯಾದದ್ದು ದೇಶ ಪರ್ಯಟನ. ಸುಮಾರು ಒಂದು ವರುಷ ಕಾಲ ಶಾಸ್ತ್ರಿಗಳು ಉತ್ತರ ದಕ್ಷಿಣ ಸೀಮೆಗಳಲ್ಲಿ ಸಂಚಾರ ಮಾಡಿ ಉಡುಪಿ ಗೋಕರ್ಣ ಅನಂತಶಯನ ಹುಬ್ಬಳ್ಳಿ ಧಾರವಾಡ ಮೊದಲಾದ ಸ್ಥಳಗಳಲ್ಲಿನ ಹಲವು ವಿದ್ವಾಂಸರ ಪರಿಚಯಮಾಡಿಕೊಂಡರು. ಉತ್ತರ ಸೀಮೆಯಲ್ಲೂ ಇವರಿಗೆ ಹಲವರು ಸ್ನೇಹಿತರಿದ್ದರು ಹೋದೆಡೆಯಲ್ಲೆಲ್ಲ ತೆರೆದ ಕಣ್ಣು ಕಿವಿಗಳಿಂದ ಜನರನ್ನೂ ಅವರ ಮಾತುಗಳನ್ನೂ ನಡವಳಿಕೆಗಳನ್ನೂ ಪರಿಶೀಲಿಸುತ್ತಿದ್ದರು. ನಾನಾ ಪ್ರಾಂತಗಳ ಜನರ ಆಚಾರ ವ್ಯವಹಾರಗಳನ್ನು ಕುರಿತು ಗಂಟೆಗಟ್ಟಲೆ ಸ್ವಾರಸ್ಯವಾಗಿ ಮಾತಾಡಬಲ್ಲವರಾಗಿದ್ದರು. ಕನ್ನಡಭಾಷೆಯ ಪ್ರಭೇದಗಳನ್ನು ಕುರಿತು ಆಯಾ ಪ್ರಾಂತದ ಜನರ ಧ್ವನಿಯ ರೀತಿಯನ್ನನುಕರಿಸಿ ಒಳ್ಳೇ ರುಚಿಕಟ್ಟಾಗಿ ವ್ಯಾಖ್ಯಾನ ಮಾಡುವ ಶಕ್ತಿಯಿತ್ತು. ಅವರ ಪಾಂಡಿತ್ಯಕ್ಕೆ ಲೌಕಿಕ ಜ್ಞಾನ ಬೆರೆತದ್ದು ಸುವರ್ಣಕ್ಕೆ ಮೆರುಗು ಬಂದಂತಾಗಿತ್ತು.

ದೇಶ ಪರ್ಯಟನವನ್ನು ಮುಗಿಸಿಕೊಂಡು ಶಿವಮೊಗ್ಗೆಗೆ ಹಿಂದಿರುಗಿ, ಇವರ ಬರವನ್ನೇ ನಿರೀಕ್ಷಿಸುತ್ತಿದ್ದ ತಂದೆತಾಯಿಗಳ ಮತ್ತು ಪಿತಾಮಹ ಪಿತಾಮಹಿಯರ ದರ್ಶನಾಶೀರ್ವಾದಗಳನ್ನು ಪಡೆದು ಅವರ ಸೇವೆಯಲ್ಲಿ ನಿರತರಾದರು.

ಆ ಸಮಯದಲ್ಲಿ ದೇಶಿಕಾಚಾರ್ಯರೆಂಬವರು ಶಿವಮೊಗ್ಗೆಯಲ್ಲಿ ಜಿಲ್ಲಾಧಿಕಾರಿ

ಗಳಾಗಿದ್ದರು. ಶಾಸ್ತ್ರಿಗಳ ವಿದ್ವತ್ತನ್ನರಿತ ಅವರ ಪ್ರೋತ್ಸಾಹದಿಂದ ಇವರು ಶಿವಮೊಗ್ಗೆಯ ಕಾಲೇಜಿನಲ್ಲಿ ಸಂಸ್ಕೃತ ಪಂಡಿತರಾಗಿ ನೇಮಕವಾದರು. ಕಾಲಾನಂತರದಲ್ಲಿ, ಶಿವಮೊಗ್ಗೆಯಿಂದ ಕಾಲೇಜನ್ನು ತೆಗೆದಮೇಲೆ ಶಾಸ್ತ್ರಿಗಳು ಅದೇ ಸ್ಥಳದ ಹೈಸ್ಕೂಲಿನಲ್ಲಿ ಕನ್ನಡ ಪಂಡಿತರಾದರು. ಅವರ ಕನ್ನಡದ ವ್ಯಾಸಂಗಕ್ಕೆ ಅದೇ ಮೊದಲಾಯಿತು. ಅಂದಿನಿಂದ, ಕೆಲಸದಿಂದ ನಿವೃತ್ತರಾಗುವವರೆಗೂ ಅವರು ಕನ್ನಡ ಪಂಡಿತರಾಗಿ ಕೆಲಸಮಾಡಿದರು. ಒಟ್ಟಿನಲ್ಲಿ ಮುವ್ವತ್ತೇಳು ವರ್ಷಗಳ ಕಾಲ ಸರಕಾರದಲ್ಲಿ ಶಿಕ್ಷಣವೃತ್ತಿಯ ಸೇವೆಯನ್ನು ಸಲ್ಲಿಸಿದರು. ಉದ್ಯೋಗಾವಧಿಯಲ್ಲಿ ಶಿವಮೊಗ್ಗೆಯಿಂದ ಬೇರೆ ಕಡೆಗೆ ಹಲವು ಬಾರಿ ವರ್ಗವಾಗಿತ್ತು ಆದರೆ ಅವರು ಶಿವಮೊಗ್ಗೆಯನ್ನು ಬಿಟ್ಟು ಕದಲಲಿಲ್ಲ ಅವರ ಇಷ್ಟಕ್ಕೆ ವಿರೋಧವಾಗಿ ಅವರನ್ನು ವರ್ಗಾಯಿಸಲು ಶಿಕ್ಷಣಾಧಿಕಾರಿಗಳು ಸಮರ್ಥರಾಗಿರಲಿಲ್ಲ. ಉದ್ಯೋಗದಿಂದ ನಿವೃತ್ತರಾದ ಮೇಲೆ ಸುಮಾರು ಹದಿನೈದು ಇಪ್ಪತ್ತು ವರ್ಷಗಳ ಕಾಲ ಶಾಸ್ತ್ರಿಗಳು ಜೀವಿಸಿದ್ದರೆಂದು ತೋರುತ್ತದೆ.

ಪಂಡಿತ ಪರೀಕ್ಷೆ ಮೊದಲಾದ ಪರೀಕ್ಷಾ ಸಮಿತಿಗಳ ಸದಸ್ಯರಾಗಿ ಅವರು ಕೆಲಸಮಾಡಿದರು ಸರಕಾರದವರು ಇವರ ಪಾಂಡಿತ್ಯವನ್ನು ಗಮನಿಸಿ ಕಂಚಿ ತಿರುವಾಡಿ ಕುಂಭಕೋಣ ಮೊದಲಾದ ಸ್ಥಳಗಳಲ್ಲಿ ನಡೆದ ವಿದ್ವತ್ ಸಭೆಗಳಿಗೆ ಇವರನ್ನು–ನೌಕರಿಯಲ್ಲಿದ್ದಾಗಲೆ–ಸರಕಾರದ ಪ್ರತಿನಿಧಿಯನ್ನಾಗಿ ಕಳುಹಿಸಿ ಮನ್ನಣೆ ಮಾಡಿದರು.

ಉದ್ಯೋಗದಿಂದ ವಿಶ್ರಾಂತರಾದ ಮೇಲೆ ಶಾಸ್ತ್ರಿಗಳು ಸುಮ್ಮನೆ ಕಾಲ ಕಳೆಯಲಿಲ್ಲ. ಸಂಸ್ಕೃತದಿಂದ 'ಮೇಘ ಸಂದೇಶ' 'ಕಿರಾತಾರ್ಜುನೀಯ' ಮೊದಲಾದ ಕೆಲವು ಕೃತಿಗಳನ್ನು ಕನ್ನಡಕ್ಕೆ ಅನುವಾದ ಮಾಡಿದರು. ಸಂಸ್ಕೃತ ಕನ್ನಡ ಭಾಷೆಗಳಲ್ಲಿ ಕೆಲವು ಕೃತಿಗಳನ್ನು ಸ್ವತಂತ್ರವಾಗಿಯೂ ರಚಿಸಿದರು. ಉತ್ತರ ದೇಶದ ಹಲವು ಮಿತ್ರರ ಇಷ್ಟವನ್ನನುಸರಿಸಿ ಧರ್ಮವೇದಾಂತಾದಿ ವಿಚಾರಗಳಿಗೆ ಸಂಬಂಧಪಟ್ಟಂತೆ ಕೆಲವು ನಿಬಂಧಗಳನ್ನು ಸಂಸ್ಕೃತದಲ್ಲಿ ರಚನೆಮಾಡಿದರಾಗಿ ತಿಳಿದುಬರುತ್ತದೆ. "ಪುರುಷಾರ್ಥ ಮೀಮಾಂಸಾ" ಎಂಬ ಪ್ರಬಂಧ ದರ್ಭಾಂಗ ಸಂಸ್ಥಾನದಲ್ಲಿ ಮುದ್ರಿತವಾಗಿರಬೇಕು. ಮಂಗಳೂರಿನಲ್ಲಿ ನಡೆದ ಉಲ್ಲಾಳಾದ್ವೈತ ಸಭೆಯ ಅಧ್ಯಕ್ಷರಾಗಿ ಕೊಟ್ಟ "ಅದ್ವೈತ ಶಾಸ್ತ್ರತತ್ವ" ಎಂಬ ವ್ಯಾಖ್ಯಾನವೂ ಮುದ್ರಿತವಾಗಿದೆಯಂತೆ.

'ಶಾಕುಂತಲ'ವನ್ನು ಕುರಿತ ಶಾಸ್ತ್ರಿಗಳ ಭಾಷಣ 'ಪ್ರಬುದ್ಧ ಕರ್ಣಾಟಕ'ದಲ್ಲಿ ಪ್ರಕಟವಾಯಿತು 'ವಿಜಯನಗರ', 'ನಮ್ಮ ಮಲೆನಾಡು' ಮೊದಲಾದ ಕೆಲವು ಲೇಖನಗಳು 'ಜಯ ಕರ್ಣಾಟಕ'ದ ಮೊದಮೊದಲ ಸಂಚಿಕೆಗಳಲ್ಲಿ ಅಚ್ಚಾದುವು. ಕಾಳಿದಾಸನನ್ನು ಕುರಿತ ಲೇಖನ ಶಿವಮೊಗ್ಗೆಯ ಹೈಸ್ಕೂಲಿನ ಪತ್ರಿಕೆಯಲ್ಲೂ ರನ್ನ ನಾರಣಪ್ಪ ಇವರನ್ನು ಕುರಿತ ವಿಮರ್ಶೆಯ ಲೇಖನಗಳು 'ರನ್ನ ಕವಿ ಪ್ರಶಸ್ತಿ' 'ಕುಮಾರವ್ಯಾಸ ಪ್ರಶಸ್ತಿ' ಇವುಗಳಲ್ಲಿಯೂ ಕ್ರಮವಾಗಿ ಬೆಳಕನ್ನು ಕಂಡವು.

೩

ಶಾಸ್ತ್ರಿಗಳ ಪೂರ್ವ ವಯಸ್ಸಿನ ಬಹುಭಾಗ ವೈದಿಕ ವಾತಾವರಣದಲ್ಲಿಯೇ ಕಳೆಯಿತಾದರೂ ಅದರಿಂದ ಅವರ ಲೌಕಿಕವಾದ ತಿಳಿವಳಿಕೆಗೆ ಕುಂದುಂಟಾಗಲಿಲ್ಲ. ಲೌಕಿಕಜ್ಞಾನ ಅವರಲ್ಲಿ ಸ್ಫುಟವಾಗಿತ್ತು. ಅವರ ಲೌಕಿಕ ಪ್ರಜ್ಞೆ ಉದಾರ ಸ್ವರೂಪದ್ದಾದ್ದರಿಂದ ಸಮಾಜದ ಪುರೋಗತಿಯನ್ನವರು ಸುಲಭವಾಗಿ ಗ್ರಹಿಸಬಲ್ಲವರಾಗಿದ್ದರು. ಇದಕ್ಕೆ ನಿದರ್ಶನವಾಗಿ, ಈಗ್ಗೆ ಸುಮಾರು ಮುವತ್ತಾರು ವರ್ಷಗಳ ಕೆಳಗೆ ನಡೆದ ಒಂದು ಸಂಗತಿಯನ್ನು ಇಲ್ಲಿ ತಿಳಿಸಬಹುದು. ಸೀಮೆಗೆ ಹೋಗಿಬಂದ ವೈದ್ಯರೊಬ್ಬರು, ಆಗ, ಶಿವಮೊಗ್ಗೆಗೆ ಜಿಲ್ಲಾ ವೈದ್ಯಾಧಿಕಾರಿಗಳಾಗಿ ಬಂದರು. ಅವರು ಶಾಸ್ತ್ರಿಗಳ ಜನವೇ. ಅವರ ಮನೆಯಲ್ಲಿ ಮಗನ ಉಪನಯನ ನಡೆಯಬೇಕಾಯಿತು. ಊರಿನ ವೈದಿಕರು ಯಾರೂ ಶುಭಕರ್ಮದಲ್ಲಿ ಸಹಕರಿಸುವ ಸೂಚನೆ ಕಂಡು ಬರಲಿಲ್ಲ. ಡಾಕ್ಟರಿಗೆ ಯೋಚನೆಗಿಟ್ಟುಕೊಂಡಿತು, ಶಾಸ್ತ್ರಿಗಳನ್ನು ಶರಣುಹೊಕ್ಕರು. ಶಾಸ್ತ್ರಿಗಳಾಗ ಹೈಸ್ಕೂಲಿನಲ್ಲಿ ಪಂಡಿತರಾಗಿದ್ದರು. ಇತರರು ಸಹಕರಿಸದಿದ್ದಲ್ಲಿ ಉಪನಯನ ವಿಧಿಗಳನ್ನು ತಾವು ನಿಂತು ನಡಸಿಕೊಡುವುದಾಗಿ ಶಾಸ್ತ್ರಿಗಳು ಭರವಸೆಯಿತ್ತರು. ಶಾಸ್ತ್ರಿಗಳ ಮುಂದೆ ನಿಂತು ತಮ್ಮ ಅಸಹಕಾರವಾದವನ್ನು ಸಮರ್ಥಿಸಿ ಅವರನ್ನು ಎದುರಿಸಬಲ್ಲ ಶಕ್ತರು ವೈದಿಕರ ಗುಂಪಿನಲ್ಲಿ ಯಾರೂ ಇರಲಿಲ್ಲ. ಶಾಸ್ತ್ರಿಗಳು ವಾದದಲ್ಲಿ ಅರಿಕೇಸರಿ, ಎದುರಾಳಿಗಳನ್ನು ಸಿಗಿದುಹಾಕುವಂಥ ವಿದ್ವದ್ಬಲ ವಾಗ್ಬಲವುಳ್ಳವರು. ಕ್ರಮೇಣ ಎಲ್ಲರೂ ಶಾಸ್ತ್ರಿಗಳನ್ನು ಅನುಸರಿಸಿ ಉತ್ಸವದಲ್ಲಿ ಸಹಕರಿಸಿದರು. ಪ್ರಾಯಶಃ ಈ ಸಂದರ್ಭದಲ್ಲಿಯೇ ಶಾಸ್ತ್ರಿಗಳು "ಸಿಂಧುಯಾನ ಸಮರ್ಥನ" ವೆಂಬ ಸಂಸ್ಕೃತನಿಬಂಧವನ್ನು ರಚಿಸಿರಬೇಕು. ಧರ್ಮದ ಹೆಸರಿನಲ್ಲಿ ಅವರು ಜನವನ್ನು ದೂರವಿಡಲಾರರು. ಅವರಿಗೆ ಜನಬೇಕು, ಧರ್ಮಬೇಡವೆಂದಲ್ಲ.

ವೈದಿಕರಲ್ಲೂ ಲೌಕಿಕರಲ್ಲೂ ಒಂದೇ ಸಮನಾಗಿ ಸಲೀಸಾಗಿ ಬೆರೆಯಲು ಸಮರ್ಥರಾಗಿದ್ದವರು ಶಾಸ್ತ್ರಿಗಳು. ಶಂಕರ ಜಯಂತಿಯ ಸಮಯದಲ್ಲ ಎಷ್ಟು ಸುಲಭವಾಗಿ ಉತ್ಸವದ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಪುರಾಣ ಹೇಳಲು ಸಮರ್ಥರಾಗಿದ್ದರೋ ಅಷ್ಟೇ ಸಲೀಸಾಗಿ ಕ್ಲಬ್ಬಿಗೆ ನಡೆದು ಅಧಿಕಾರಿಗಳೊಡನೆ ಬೆರೆತು ಇಸ್ಪೀಟು ಬಡಿಯಲು ಶಕ್ತರಾಗಿದ್ದರು.

ನನಗೆ ಶಾಸ್ತ್ರಿಗಳ ಹೆಚ್ಚಿನ ಪರಿಚಯವಾದದ್ದು ನನ್ನ ವಿದ್ಯಾರ್ಥಿದಸೆ ಮುಗಿದು ನಾನು ಶಿವಮೊಗ್ಗೆಯಲ್ಲಿ ನಿಂತಾಗ; ಅವರು ಶಿವಮೊಗ್ಗೆಯ ಕರ್ಣಾಟಕ ಸಂಘದ ಅಧ್ಯಕ್ಷರಾದಾಗ. ಕನ್ನಡದ ಪುನರುತ್ಥಾನದ ಚಳವಳಿಯ ಸಂಕೇತವಾದ ಕರ್ಣಾಟಕ ಸಂಘಕ್ಕೆ ಹಳೆಯ ಕಾಲದ ಪಂಡಿತರನ್ನು ಅಧ್ಯಕ್ಷರನ್ನಾಗಿ ಆರಿಸಿಕೊಳ್ಳುವುದೆ? —ಸಂಘ ಹೇಗೆ ಮುಂದುವರಿದೀತು ಅವರ ನೇತೃತ್ವದಲ್ಲಿ?— ಎಂಬ ಸಂದೇಹ ಬಹು ಮಂದಿಗೆ. ಶಾಸ್ತ್ರಿಗಳ ಭಾಷಾಭಿಮಾನವನ್ನೂ ಲೌಕಿಕ ಪ್ರಜ್ಞೆಯನ್ನೂ ಅರಿತವರಿಗೆ ಆ ಬಗೆಯ ಸಂಶಯಕ್ಕೆ ಕಾರಣವಿಲ್ಲ. ಆಧುನಿಕ ಕವಿತೆ

ಅವರಿಗೆ ಒಟ್ಟಿನಲ್ಲಿ, ರುಚಿಸಿತ್ತೆಂದು ಹೇಳಲಾರೆ. ಆದರೆ, ಕಳೆದ ಹದಿನೈದು ಇಪ್ಪತ್ತು ವರ್ಷಗಳಿಂದ ಬರೆಯುತ್ತಿರುವ ಲೇಖಕರೆಷ್ಟು ಮಂದಿ ಈಗಿನ ನವ ತರುಣರ ಕವಿತೆಗಳನ್ನು ಒಪ್ಪಿಕೊಂಡಿದ್ದಾರೆ?— ಅದು ಹಾಗಿರಲಿ. ಶಾಸ್ತ್ರಿಗಳ ಕನ್ನಡದ ಅಭಿಮಾನ ಸಣ್ಣ ಪುಟ್ಟ ಕುಂದುಕೊರತೆಗ್ಗಳನ್ನು ಮೀರಿ ನಿಲ್ಲುವಷ್ಟು ಶಕ್ತವಾಗಿತ್ತು. ಕನ್ನಡದ ವಿಷಯದಲ್ಲಿ ಜನ ಇಷ್ಟು ಉತ್ಸಾಹದಿಂದ ನಡೆದು ಕೊಳ್ಳುತ್ತಿದ್ದಾರಲ್ಲಾ, ಅದೇ ನನಗೊಂದು ಸಂತೋಷ – ಎನ್ನುತ್ತಿದ್ದರು. ವಯಃ ಪರಿಣತಿಯಿಂದಾಗುವ ದೇಹಶ್ರಮವನ್ನು ಲೆಕ್ಕಿಸದೆ ಸಾಮಾನ್ಯವಾಗಿ ಸಂಘದ ಎಲ್ಲ ಸಭೆಗಳಿಗೂ ಬರುತ್ತಿದ್ದರು ಕನ್ನಡ ಗದ್ಯದ ಪ್ರಕಾರಗಳನ್ನು ಅವರು ಬಹು ಮಟ್ಟಿಗೆ ಒಪ್ಪಿಕೊಂಡಿದ್ದರು. 'ಮುದ್ರಾ ಮಂಜೂಷ' 'ಆರ್ಯ ಕೀರ್ತಿ' ಮೊದ ಲಾದ ಗ್ರಂಥಗಳನ್ನು ಎಷ್ಟು ಉತ್ಸಾಹದಿಂದ ಪಾಠ ಹೇಳುತ್ತಿದ್ದರೆಂಬುದನ್ನು ವಿವರಿ ಸಿದ್ದೇನೆ. ಬಂಕಿಂಚಂದ್ರರ ಕಾದಂಬರಿಗಳನ್ನೂ ಗಳಗನಾಥರ ಸುರಸ ಕಾದಂಬರಿ ಗಳನ್ನೂ ಕುರಿತು ಬಹು ಸೊಗಸಾಗಿ, ವಿಮರ್ಶ ಪೂರ್ಣವಾಗಿ ಉಪನ್ಯಾಸಮಾಡುತ್ತಿದ್ದ ರಂತೆ. ಇಂಗ್ಲಿಷಿನ ಪರಿಚಯ ಅವರಿಗಿಲ್ಲದಿದ್ದರೂ ಷೇಕ್ಸ್‌ಪಿಯರಿನ ಪ್ರಮುಖ ನಾಟಕಗಳ ಕಥೆಗಳನ್ನೂ ಅವುಗಳಲ್ಲಿನ ಮುಖ್ಯ ಸನ್ನಿವೇಶಗಳನ್ನೂ ತಿಳಿದುಕೊಂಡಿ ದ್ದರು. ಕರ್ಣಾಟಕ ಸಂಘದಿಂದ 'ರಕ್ತಾಕ್ಷಿ' ನಾಟಕ ಪ್ರಕಟವಾದಾಗ 'ಹ್ಯಾಮ್ಲೆಟ್' ನಾಟಕದೊಡನೆ ಅದನ್ನು ಹೋಲಿಸಿ ಅದರ ಗುಣಾವಗುಣಗಳನ್ನು ಕುರಿತು ನನ್ನೊಡನೆ ಹೇಳಿದರು.

ದೇಹಾರೋಗ್ಯ ಸರಿಯಾಗಿ ಇರುವವರೆಗೂ ಕರ್ಣಾಟಕ ಸಂಘದ ಕಾರ್ಯಗಳಲ್ಲಿ ಉತ್ಸಾಹದಿಂದ ಭಾಗವಹಿಸಿ, ಸಂಘಕ್ಕೆ ದಯಮಾಡಿಸಿದ ಅತಿಥಿಗಳನ್ನು ಆದರ ವಿಶ್ವಾಸ ಗಳಿಂದ ಬರಮಾಡಿಕೊಂಡು ಮಾತು ಕಥೆಗಳಿಂದ ಸಂತೋಷಪಡಿಸುತ್ತಿದ್ದರು. ಆಧುನಿಕ ಕಾವ್ಯದ ಕುಂದು ಕೊರತೆಗಳನ್ನು ದೊಡ್ಡದು ಮಾಡಿ ಮಾತನಾಡಿ ಅತಿಥಿಗಳ ಮನಸ್ಸನ್ನು ಎಂದೂ ನೋಯಿಸಿದವರಲ್ಲ. ಅತಿಥಿಗಳನ್ನು ಊಟ ಉಪಚಾರಗಳಿಂದ ತೃಪ್ತಿಪಡಿಸಿ ಬೀಳ್ಕೊಳ್ಳುತ್ತಿದ್ದರು. ಶಾಸ್ತ್ರಿಗಳು ಊಟ ತಿಂಡಿಗಳ ವಿಷಯದಲ್ಲಿಯೂ ಒಳ್ಳೆಯ ರಸಜ್ಞರು. ಅಡಿಗೆಯ ರುಚಿಕಟ್ಟನ್ನು ಕೆಡಿಸಿದವರು ಶಾಸ್ತ್ರಿಗಳ ಮುಂದೆ ಧೈರ್ಯವಾಗಿ ನಿಲ್ಲಲಾರರು. ಅವರ ಶಾಪದ ಮುಂದೆ ತಲೆಯೆತ್ತುವುದು ಕಷ್ಟ ವಾಗುತ್ತಿತ್ತು.

ಕಾವ್ಯ ವಿಷಯದಲ್ಲಿ ಸಹೃದಯತೆಯೂ ಜನರ ವಿಚಾರದಲ್ಲಿ ಸೌಹಾರ್ದವೂ ಅವರ ಮುಖ್ಯ ಗುಣಗಳಾಗಿದ್ದವು. ನನ್ನಲ್ಲಿ ಅವರು ತೋರುತ್ತಿದ್ದ ವಿಶ್ವಾಸವನ್ನು ನಾನೆಂದಿಗೂ ಮರೆಯಲಾರೆ ಇರುವವರೆಗೂ ವ್ಯವಸ್ಥಾ ಬದ್ಧರಾದ ಅಧ್ಯಕ್ಷರಾಗಿದ್ದು ಕೊಂಡು, ಕೆಲಸ ಮಾಡುವವರಿಗೆ ಉತ್ತೇಜಕರಾಗಿದ್ದು, ತಮ್ಮ ವಿದ್ವತ್ತಿನಿಂದಲೂ ಉದಾರ ನೀತಿಯಿಂದಲೂ ಕರ್ಣಾಟಕ ಸಂಘಕ್ಕೆ ಅವರೊಂದು ಭೂಷಣವಾಗಿ ಶೋಭಿಸಿದರು.

ಉದ್ದಾಮ ಪಂಡಿತರಾದರೂ ಅವರ ಒಲವು–ಸರಳತೆ ಲಾಲಿತ್ಯ ಮಾಧುರ್ಯ ಇತ್ಯಾದಿ ರಂಜಕ ಗುಣಗಳ ಕಡೆಗೆ ಹೆಚ್ಚಾಗಿತ್ತು. ೧೯೩೧ರಲ್ಲಿ ಪ್ರಕಟವಾದ ಅವರ "ಕನ್ನಡ ಮೇಘ ಸಂದೇಶ" ಇದಕ್ಕೆ ಸಾಕ್ಷಿಯಾಗಿದೆ ಆ ಕೃತಿ ಪ್ರಕಟವಾದ ಕೆಲವು ತಿಂಗಳುಗಳಲ್ಲಿಯೇ ಅದು ಆಳಿದ ಮಹಾಸ್ವಾಮಿಯವರಾದ ಶ್ರೀಕೃಷ್ಣರಾಜ ಒಡೆಯ ರವರ ಗಮನಕ್ಕೆ ಬಂತು. ೧೯೩೩ರ ಬೇಸಗೆಯಲ್ಲಿ ಪ್ರಭುಗಳು ಕೆಮ್ಮಣ್ಣು ಗುಂಡಿಗೆ ವಿಹಾರಾರ್ಥವಾಗಿ ಬಂದಾಗ ಶಾಸ್ತ್ರಿಗಳನ್ನು ಬರಮಾಡಿಕೊಂಡರು. ಶಾಸ್ತ್ರಿಗಳಿಗದು ಅನಿರೀಕ್ಷಿತವಾದ ಕರೆಯಾಗಿತ್ತು. ಅವರಿಗೆ ಅವರು ಪ್ರಭುಗಳನ್ನು ಭೇಟಿ ಮಾಡಿರ ಲಿಲ್ಲ. ಸಾಹಿತ್ಯ ಧರ್ಮ ವೇದಾಂತ ಮೊದಲಾದ ವಿಷಯಗಳಿಗೆ ಸಂಬಂಧಪಟ್ಟಂತೆ ಪ್ರಭುಗಳು ಪ್ರಶ್ನೆಗಳನ್ನು ಎತ್ತಿ ಶಾಸ್ತ್ರಿಗಳ ವ್ಯಾಖ್ಯಾನಗಳನ್ನು ಕೇಳಿ ಮೆಚ್ಚಿ ಕೊಂಡರು. ಅದೇ ವರ್ಷದ ನವರಾತ್ರಿಯಲ್ಲಿ ಮೈಸೂರಿಗೆ ದರ್ಬಾರಿಗೆ ಬರಮಾಡಿ ಕೊಂಡು 'ಆಸ್ಥಾನ ಮಹಾ ವಿದ್ವಾನ್' ಎಂಬ ಬಿರುದನ್ನೂ ಖಿಲ್ಲತ್ತುಗಳನ್ನೂ ಕೊಟ್ಟು ಶಾಸ್ತ್ರಿಗಳನ್ನು ಗೌರವಿಸಿದರು. ಮಹಾವಿದ್ವದ್ವೇತನವನ್ನೂ ಮಾಸಾಶನ ವನ್ನೂ ದಯಪಾಲಿಸಿದರು.

ಈ ಕಾಲದಲ್ಲಿಯೆ ಶಾಸ್ತ್ರಿಗಳು "ಕೆಮ್ಮಣ್ಣು ಗುಂಡಿ" ಮತ್ತು "ಬೃಂದಾವನ" ಗಳನ್ನು ಕುರಿತು ಸಂಸ್ಕೃತದಲ್ಲಿ ಕವಿತೆಗಳನ್ನು ರಚಿಸಿದರೆಂದು ತೋರುತ್ತದೆ. ಅವು ಪ್ರಾಯಶಃ ಸಂಸ್ಕೃತ ಮಹಾ ಪಾಠಶಾಲೆಯ ಸಂಸ್ಕೃತ ಪತ್ರಿಕೆಯ ಸಂಚಿಕೆಗಳಲ್ಲಿ ಪ್ರಕಟವಾಗಿರಬೇಕು.

ಕೆಮ್ಮಣ್ಣುಗುಂಡಿಯ ಬಿಡಾರದ ಸಮಯದಲ್ಲಿ, ತಾವು ರಚಿಸಿದ 'ಕಿರಾತಾರ್ಜು ನೀಯ'ದಿಂದಲೂ ಕೆಲವು ಭಾಗಗಳನ್ನು ಪ್ರಭುಗಳಿಗೆ ಓದಿ ಹೇಳಿದರಂತೆ. ಶಾಸ್ತ್ರಿ ಗಳ 'ಕಿರಾತಾರ್ಜುನೀಯ' ಭಾರವಿಯ ಸಂಸ್ಕೃತ ಕಾವ್ಯವನ್ನನುಸರಿಸಿ ಬರೆದ ಕನ್ನಡ ಗದ್ಯಕಥಾಪ್ರಬಂಧ. ಆ ಕೃತಿಯನ್ನು ಓದಿ ನೋಡುವ ಅವಕಾಶ ನನಗೆ ದೊರೆಯಲಿಲ್ಲ. ಅದು ಪ್ರಕಟವಾಗಿಯೂ ಇಲ್ಲ ಅದರ ಈಷದವಲೋಕನದಿಂದ ಅದರ ಗದ್ಯ ಬಂಧ ಬಿಗಿಯಾಗಿ ಪ್ರೌಢವಾಗಿರುವುದಾಗಿ ನನ್ನ ಮನವರಿಕೆ ಅದರಲ್ಲಿನ ವಾಕ್ಯವೃಂದ ದೀರ್ಘೋರ್ಮಿ ಮಾಲಾಕುಲದಂತೆ ಎದ್ದುಬಿದ್ದು ನಾದ ಗುಂಫನದಿಂದ ಮುಂದುವರಿಯುತ್ತದೆಯೆಂದು ನನ್ನ ಭಾವನೆ.

ಆಳಿದ ಮಹಾಸ್ವಾಮಿಯವರು ಶಾಸ್ತ್ರಿಗಳನ್ನು ಮತ್ತೊಮ್ಮೆ ಮೈಸೂರಿಗೆ ಬರಮಾಡಿಕೊಂಡು "ಪಂಡಿತರತ್ನಂ" ಎಂಬ ಬಿರುದನ್ನು ದಯಪಾಲಿಸಿ ಗೌರವಿಸಿ ದರು. "ಶ್ರೀಕೃಷ್ಣರಾಜಾಭ್ಯುದಯ ಚಂಪೂ"ವನ್ನು ಈ ಸುಮಾರಿನಲ್ಲಿ ಶಾಸ್ತ್ರಿಗಳು ರಚಿಸಿದ್ದಿರಬಹುದು. "ರಜತೋತ್ಸವ" ಕವಿತೆಯನ್ನು ಇದಕ್ಕೆ ಬಹು ಹಿಂದೆಯೇ ಬರೆದಿರಬೇಕು.

ಶಾಸ್ತ್ರಿಗಳು ಮೈಸೂರಿಗೆ ಹೋದಾಗ ಅಲ್ಲಿನ ಪಂಡಿತರೊಡನೆ ಧರ್ಮಶಾಸ್ತ್ರ ವಿಚಾರಗಳಲ್ಲಿ ನಡೆದ ವಾಗ್ವಾದಗಳನ್ನು ನನಗೆ ವಿವರಿಸಿದ್ದರು. ಆ ವಾದಗಳಲ್ಲಿ

ಅವರು ತಮ್ಮ ನಿಲುವನ್ನು ಸಮರ್ಥಿಸಿಕೊಂಡಿದ್ದರು. ವಿದ್ವಾಂಸರುಗಳು ಸಾಮಾನ್ಯವಾಗಿ ಅಸೂಯಾಪರರು. ಆದರೆ ಶಾಸ್ತ್ರಿಗಳು ವಿದ್ಯಾಪಕ್ಷಪಾತಿಗಳಾಗಿ ಸಹೃದಯರಾಗಿದ್ದರು. ಮೇಲುಕೋಟೆಯ ಯತಿರಾಜಮಠದ ಪೀಠಾಧಿಪತಿಗಳಾಗಿ ಮುಂದೆ ವಿರಾಜಿಸಿದ ಆನಂದಾಳ್ವಾರ್ ಅವರ ಪಾಂಡಿತ್ಯವನ್ನೂ ಸಹೃದಯತೆಯನ್ನೂ ಶಾಸ್ತ್ರಿಗಳು ಮುಕ್ತಕಂಠದಿಂದ ಹೊಗಳುತ್ತಿದ್ದರು. ಇಬ್ಬರಿಗೂ ಪರಸ್ಪರ ಪತ್ರವ್ಯವಹಾರ ನಡೆಯುತ್ತಿತ್ತೆಂದು ತೋರುತ್ತದೆ. ತಾವು ಬರೆದ ಕಾಗದಕ್ಕೆ ಪ್ರತಿಯಾಗಿ ಆನಂದಾಳ್ವಾರರು, ಎಷ್ಟು ಚಮತ್ಕಾರವಾಗಿ ಉತ್ತರ ಬರೆದಿದ್ದಾರೆಂಬುದನ್ನು ಅವರ ಕಾಗದ ಓದಿ ಹೇಳಿ ಅದರ ಹಿಂದಿರುವ ಪಾಂಡಿತ್ಯದ ಬಗೆಯನ್ನೂ ನನಗೆ ವಿವರಿಸಿದ್ದರು. ಪರಗುಣೋತ್ಕರ್ಷದಲ್ಲಿ ಶಾಸ್ತ್ರಿಗಳಿಗಿದ್ದ ಅನಸೂಯಾಭಾವವನ್ನು ಪ್ರಕಟಿಸುವ ಹೃದಯಸ್ಪರ್ಶಿಯಾದ ಇನ್ನೊಂದು ಸಂಗತಿಯನ್ನು ಇಲ್ಲಿ ತಿಳಿಸಬಹುದು. ಪ್ರಾಕ್ತನ ವಿಮರ್ಶನ ವಿಚಕ್ಷಣ ರಾವ್ ಬಹದ್ದೂರ್ ಆರ್. ನರಸಿಂಹಾಚಾರ್ಯರು ೧೯೩೬ರಲ್ಲಿ ಕಾಲವಾದ ಸಂದರ್ಭದಲ್ಲಿ ಶಿವಮೊಗ್ಗೆಯ ಸಂಘದಲ್ಲಿ ಸಂತಾಪಸೂಚಕ ಸಭೆಯೊಂದು ಏರ್ಪಾಡಾಗಿತ್ತು. ಸಭಾಧ್ಯಕ್ಷತೆ ವಹಿಸಿದ್ದ ಶಾಸ್ತ್ರಿಗಳು ನರಸಿಂಹಾಚಾರ್ಯರ ವಿದ್ವತ್ಪ್ರಭಾವವನ್ನೂ ಗುಣಗಳನ್ನೂ ಸ್ಮರಿಸಿಕೊಂಡು ಮಾತನಾಡುತ್ತ ಅಂಥ ವಿದ್ವಾಂಸರು ನಮಗಿನ್ನೆಲ್ಲಿ ದೊರೆಯುತ್ತಾರೆಂದು ಅವರ ನಿಧನಕ್ಕೆ ಸಂಕಟಪಡುತ್ತ ದುಃಖ ಉಕ್ಕಿ ಬಂದು ಗಂಟಲು ಕಟ್ಟಿ ಕಣ್ಣಲ್ಲಿ ನೀರು ಹಾಕಿಬಿಟ್ಟರು. ಶಾಸ್ತ್ರಿಗಳ ವಿಶ್ವಾಸಮಮತಾಭಿಮಾನಗಳು ಅಷ್ಟು ಆಳವೂ ತೀವ್ರವೂ ಆಗಿದ್ದಿರಬಹುದೆಂಬುದನ್ನು ಸಭೆಯಲ್ಲಿದ್ದವರಾರೂ ಊಹಿಸಿರಲಿಲ್ಲ.

ನರಸಿಂಹಾಚಾರ್ಯರು ತಮ್ಮ ಅಧಿಕಾರಾವಧಿಯಲ್ಲಿ ಶಿವಮೊಗ್ಗೆಯಲ್ಲಿ ಕೆಲವು ಕಾಲ ಇದ್ದರಂತೆ. ಆಗ ಶಾಸ್ತ್ರಿಗಳಲ್ಲಿ ಬಂದು ಹೋಗಿ ಅವರಿಂದ ಸಂಸ್ಕೃತದ ವಿಷಯಗಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದರಂತೆ. ಶಾಸ್ತ್ರಿಗಳು ಕನ್ನಡಕ್ಕೆ ಸಂಬಂಧಪಟ್ಟ ಎಷ್ಟೋ ವಿಷಯಗಳನ್ನು ನರಸಿಂಹಾಚಾರ್ಯರಿಂದ ಕಲಿತುಕೊಂಡರಂತೆ ಈ ವಿಷಯವನ್ನು ತಿಳಿಸಲು ಶಾಸ್ತ್ರಿಗಳು ಸಂಕೋಚಪಡಲಿಲ್ಲ ಅವರ ಉದಾರವಾದ ಗುಣ ಇಂಥ ಸಂದರ್ಭಗಳಲ್ಲಿ ವ್ಯಕ್ತವಾಗುತ್ತಿತ್ತು.

ತರ್ಕ ವೇದಾಂತ ಸಾಹಿತ್ಯ ವ್ಯಾಕರಣಾದಿ ಶಾಸ್ತ್ರಗಳಲ್ಲದೆ ಜ್ಯೋತಿಷ ನೀತಿ ಧರ್ಮಶಾಸ್ತ್ರಗಳಲ್ಲಿಯೂ ಶಾಸ್ತ್ರಿಗಳಿಗೆ ಪರಿಶ್ರಮವಿತ್ತು. ಜ್ಯೋತಿಷ ಸಮ್ಮೇಳನವೊಂದಕ್ಕೆ ಅವರು ಅಧ್ಯಕ್ಷರಾಗಿದ್ದರು. "ಜ್ಯೋತಿಷವೃತ್ತಂ" ಎಂಬ ಕೃತಿಯೊಂದನ್ನೂ ರಚಿಸಿರುವಂತೆ ತೋರುತ್ತದೆ. ರಾಜಧರ್ಮಕ್ಕೆ ಸಂಬಂಧಪಟ್ಟ ಎಷ್ಟೋ ಆಕರ ಪದ್ಯಗಳನ್ನು ಅವರು ಮಾತಿನ ಸಂದರ್ಭದಲ್ಲಿ ಉದ್ಧರಿಸುತ್ತಿದ್ದರು ಅವರಿಗೆ ಕಂಠಸ್ಥವಾದ ನೀತಿ ಶ್ಲೋಕಗಳಿಗೂ ಪದ್ಯಗಳಿಗೂ ಲೆಕ್ಕವಿರಲಿಲ್ಲವೆಂದು ತೋರುತ್ತದೆ. ಯಾವ ವಿಷಯವನ್ನು ಕುರಿತು ಅವರೊಡನೆ ಮಾತನಾಡಲಿ ತಮ್ಮ ನಿಲುವಿಗೆ ಆಧಾರವಾಗಿ ಸಂಸ್ಕೃತದಿಂದ ಪದ್ಯಗಳನ್ನು ಉದ್ಧರಿಸುತ್ತಿದ್ದರು. ಮಾತಿನಲ್ಲಿ, ವಾದದಲ್ಲಿ ಅವರು

ಸೋಲನ್ನು ಕಂಡವರಲ್ಲ. ಪೂರ್ವಿಕರ ನಿಲುವನ್ನು ಸಾಮಾನ್ಯವಾಗಿ ಬಿಟ್ಟು ಕೊಡುತ್ತಿರಲಿಲ್ಲ. ಆಧಾರ ಭೂತವಾದ ಶ್ಲೋಕ ಸಮಯದಲ್ಲಿ ನೆನಪಿಗೆ ಬಾರದಿದ್ದರೆ ಕೂಡಲೇ ತಾವೇ ಒಂದನ್ನು ರಚಿಸಿ ಹೇಳುವ ಆಶುಕವಿತಾ ಸಾಮರ್ಥ್ಯ ಅವರಿಗಿತ್ತು. ಒಂದು ಬಾರಿ ಅವರೊಡನೆ ಮಾತನಾಡುತ್ತಿದ್ದಾಗ Socialism, Anarchism ಇವುಗಳ ಪ್ರಸ್ತಾಪ ಬಂತು. ನಮ್ಮ ಪೂರ್ವಿಕರಿಗೆ ಈ ರಾಜ್ಯ ತತ್ತ್ವಗಳೇನೂ ಹೊಸತಲ್ಲವೆಂದು ಹೇಳಿ ಆಧಾರವಾಗಿ ಸಮಂಜಸವಾದ ಪದ್ಯಗಳನ್ನು ಹೇಳಿ ಅರ್ಥವನ್ನು ವಿವರಿಸಿದರು. ಹೀಗೆ ಮನದಲ್ಲಿ ಸಕಲ ಜ್ಞಾನವನ್ನೂ ಎದೆಯಲ್ಲಿ ಲೋಕಾನುಭವವನ್ನೂ ತುಂಬಿಕೊಂಡಿರುವ ಪಂಡಿತರ ಒಂದು ಯುಗವೇ ಅವರ ನಿಧನದಿಂದ ಮರೆಯಾದಂತಾಯಿತು.

ಲೇಖನದಲ್ಲಿ ವಿವರಿಸಿರುವ ಕೃತಿಗಳಲ್ಲದೆ ಕೆಳಗಿನವುಗಳನ್ನೂ ಅವರು ಬರೆದಿರುವಂತೆ ತಿಳಿದು ಬರುತ್ತದೆ. ಸಂಸ್ಕೃತ: ಶಾರದಾ ಸ್ತುತಿ; ಮುಖ ಮುಖರಂ; ಚಾರುಚರ್ಯಾ; ಜಗದ್ಗುರು ಚಂಪೂ, ರಮಣೀ ರಾಜಹಂಸ. ಕನ್ನಡ: ಮದಾಲಸೆ; ಕಾದಂಬರೀ; ನಗರ ವೃತ್ತಂ.

ಕೂಡಲಿ ಚಿದಂಬರಂ

# ರಾಜಶೇಖರ ವಿಲಾಸ

'ರಾಜಶೇಖರ ವಿಲಾಸ' ಹುಟ್ಟಿ ಮುನ್ನೂರೊಂದು ವರ್ಷಗಳಾದುವು ಅಷ್ಟೆ. ಒಂದು ನಾಡಿನ ಇತಿಹಾಸದಲ್ಲಿ ಮೂರು ಶತಮಾನಗಳು ಮೂರು ದಿನವಿದ್ದಂತೆ. ಇಷ್ಟೇ ಅಲ್ಪಾವಧಿಯಲ್ಲಿ, ಮೈಸೂರು ಸೀಮೆಯ ಒಂದು ಹಳ್ಳಿಯಲ್ಲಿ ಹುಟ್ಟಿದ ಮಹಾಕಾವ್ಯವೊಂದು ಕನ್ನಡನಾಡಿನಲ್ಲೆಲ್ಲ ತನ್ನ ಪ್ರಭಾವವನ್ನು ಬೀರಿತು. ಇದರ ಹಸ್ತಪ್ರತಿಗಳು ದೇಶದ ಮೂಲೆಮೂಲೆಯಲ್ಲಿ ಇಂದಿಗೂ ದೊರೆಯುತ್ತಿವೆ. ಅಂದು ಅಚ್ಚು ಕೂಟವಿರಲಿಲ್ಲ. ಕಾಗದವಿರಲಿಲ್ಲ. ಪ್ರತಿಯೆತ್ತಿಕೊಡಬಲ್ಲ ವಿದ್ಯಾವಂತರ ಸಂಖ್ಯೆಯೂ ಕಡಿಮೆಯಾಗಿತ್ತು. ಸುವ್ಯಸ್ಥಿತ ಸಾಹಿತ್ಯ ಪ್ರಚಾರವೂ ನಡೆಯುತ್ತಿರಲಿಲ್ಲ. ಆದರೂ ಈ ಕಾವ್ಯವಾಚನಕ್ಕಾಗಿ ಎಷ್ಟು ಊರುಗಳಲ್ಲಿ, ಎಷ್ಟು ದೀಪಗಳು ಬೆಳಗಿವೆಯೋ ಊಹಿಸುವುದೂ ಕಷ್ಟ. ಇದೇ ಕುರುಹು, ಈ ಕೃತಿಯನ್ನು ರಚಿಸಿದ ಕವಿ ನಿಜವಾಗಿಯೂ ಪುಣ್ಯವಂತ ಎಂಬುದಕ್ಕೆ. ಇವನು 'ಸುಕವಿವೃಂದ ಸ್ತೋತ್ರಪಾತ್ರ,' 'ಉತ್ತಮ ಜನಾನಂದಾಬ್ಧಿರಾಕಾಸುಧಾಕರ' 'ಸರಸ ಪ್ರಬಂಧ ಸುಭಗಾಂಭೋಜವಲ್ಲಭ,' 'ಸರಸ ಜನಮಾನಿತ'— ಎಂದು ಹೇಳಿಕೊಂಡಿದ್ದರೆ ಆಶ್ಚರ್ಯವೂ ಅಲ್ಲ; ಅನುಚಿತವೂ ಅಲ್ಲ.

ಚಂಪೂ(ಪ್ರಬಂಧ)ಯುಗವು ಎಂದೋ ಮುಗಿದು ಹೋಗಿ ಷಟ್ಪದಿ ಸಾಂಗತ್ಯಗಳ ಸುಗ್ಗಿಯೂ ಕೊನೆಗಂಡು ಸಾಹಿತ್ಯ ಲೋಕಕ್ಕೆ ಬರಗಾರ ಕಾಲಿಕ್ಕಿದಾಗ, ನೀರಸ ಗದ್ಯ ಕಾವ್ಯಗಳು ಕಾಣಿಸಿಕೊಳ್ಳಲು ಮೊದಲಾದಾಗ ಈ ಹದಿನಾಲ್ಕು ಆಶ್ವಾಸಗಳ, ಅಲ್ಲಲ್ಲಿ ದೀರ್ಘವಾದ ಗದ್ಯಭಾಗಗಳಿರುವ, ಸಾವಿರದೆಂಟುನೂರ ಅರುವತ್ತೊಂಬತ್ತು ಕಂದವೃತ್ತಗಳ ಸುದೀರ್ಘ, ನವರಸಭರಿತ ಚಂಪೂಕಾವ್ಯವನ್ನು ಒಂದೇ ವರ್ಷದಲ್ಲಿ ರಚಿಸುವುದು ಸಾಮಾನ್ಯ ಕವಿಗೆ ಸಾಧ್ಯವೇ? ಅಂದಿನ ಮಹಾವಿದ್ವಾಂಸರು, ರಸಿಕರು ಈ ಕಾವ್ಯವನ್ನು ಓದಿಸಿ ಕೇಳಿ ಮೆಚ್ಚಿ,

> ಜಿಹ್ವಾಂತರ್ನಟದಂಬುಜಾಸನ ವಧೂಪಾದ ಪ್ರವಾಳ ಸ್ಫುರ
> ನ್ಮಂಜೀರದ್ವಯ ಮಂಜುನಾದ ವಿಭವ ಶ್ರೀಗರ್ವಸರ್ವಂಕಷಾಃ
> ಜೀಯಾಸುರ್ಭವತಷ್ಷಡಕ್ಷರವಿಭೋ ಕುಂದಾರ ವಿಂದಾವಳೀ
> ಮಂದಾರದ್ರುಮ ಮಂಜರೀ ಮಧುಝರೀ ಮಾಧುರ್ಯ ಧುರ್ಯಾಗಿರಃ

ಎಂದು ಪ್ರಶಸ್ತಿ ಪತ್ರವನ್ನು ಕೊಟ್ಟರಂತೆ! ಬಹುಕಾಲದಿಂದಲೂ ಈ ಒಂದು ಐತಿಹ್ಯ ಜನಜನಿತವಾಗಿ ಬಂದಿರುತ್ತದೆ. ಇಲ್ಲಿ ಇಂದಿನವರ ದೃಷ್ಟಿಯಿಂದ ಈ ಕಾವ್ಯವನ್ನು ಪರೀಕ್ಷಿಸುವ ಸಾಹಸಕ್ಕೆ ಕೈಹಾಕಿದೆ.

ಬಹುಕಾಲದಿಂದಲೂ ಜನಮನದ ಒಲವನ್ನು ಸೂರೆಗೊಂಡು ಅದರ ನಯನಡೆ ನುಡಿಗಳನ್ನು ನೇರ್ಪುಗೊಳಿಸಿದ ಪುಣ್ಯಕಥೆಗಳನ್ನು ಆರಿಸಿಕೊಂಡು ಅವುಗಳಿಗೆ ಬೇರೊಂದು ರೂಪುಕೊಟ್ಟು, ಮರುಜೀವಣಿಯಿತ್ತು, ಮೆರುಗುಹಾಕಿ ಹೊಸತೊಂದು

ಧಾತುವನ್ನು ಸೇರಿಸಿ ಮಹಾಕೃತಿಗಳನ್ನಾಗಿ ಮಾಡಿದ ಮಹಾಕವಿಗಳು ಅನೇಕರಿದ್ದಾರೆ. ಮಿಲ್ಟನ್, ಷೇಕ್ಸ್‌ಪಿಯರ್, ಷೆಲ್ಲಿ, ಮಹಾಶಯರೂ ಪ್ರಾಚೀನ ಕಲಾ ವಸ್ತುಸಂಗ್ರಹಾಲಯದಲ್ಲಿ ಕಳವು ಮಾಡಿದವರೇ! ಭಾಸ ಕಾಳಿದಾಸರೂ ಕನ್ನಡದ ಕವಿಕುಲದೀಪಕರಾದ ಪಂಪ ರನ್ನ ನಾರಣಪ್ಪ ಹರಿಹರರೂ ಜೇಬುಗಳ್ಳರೇ! ಈ ಕಳ್ಳತನದ ಮಾಲನ್ನು ಇದ್ದುದನ್ನು ಇದ್ದಂತೆಯೇ ತೆಗೆದುಕೊಂಡು ಮಾರಹೊರಟರೆ ಯಾವ ರಸಜ್ಞಶ್ರೇಷ್ಠಿಯೂ ಕೊಂಡುಕೊಳ್ಳುವುದಿಲ್ಲ. ಕದ್ದಮಾಲನ್ನು ಇವರು ವಿರೂಪಗೊಳಿಸಬೇಕು; ಇಲ್ಲವೆ ಸುರೂಪುಗೊಳಿಸಬೇಕು. ಆಗ ಮಾತ್ರ ಆ ಮಾಲಿನ ಮಾರಾಟ ಆದೀತು. ವಿರೂಪಗೊಂಡ 'ಮಾಲು' ಮಾರುಕಟ್ಟೆಯಲ್ಲಿ ಕಡಿಮೆಬೆಲೆಯನ್ನು ತರಬಹುದು. ಉತ್ತಮಗೊಂಡ ಕೃತಿ ಹೆಚ್ಚು ಬೆಲೆಯನ್ನು ತರಬಲ್ಲುದು. ಆದರೆ ಅದು ಕದ್ದು ತಂದ 'ದ್ರವ್ಯ' ಎಂಬುದರ ಸುಳಿವೂ ಹತ್ತಬಾರದು ವಿಬುಧ ವಣಿಕನಿಗೆ ಷಡಕ್ಷರದೇವ ತನ್ನೆಲ್ಲ ಚಾತುರ್ಯವನ್ನೂ ಬುದ್ಧಿಶಕ್ತಿಯನ್ನೂ ವಿನಿಯೋಗಿಸಿ ಹಳೆಯ ಸಾಮಗ್ರಿಯಲ್ಲಿ ನೂತನ ಕಥಾಕಲ್ಪವನ್ನು ರಚಿಸಿದ್ದಾನೆ. ಅವನು ಕಥಾವಸ್ತುವನ್ನು ಆರಿಸಿಕೊಂಡಿರುವುದು ಷಟ್ಪದೀ ಕಾವ್ಯಗಳಿಂದ-ಭಾವ ಚಿಂತಾರತ್ನ, ಬಸವ ಪುರಾಣ, ಮತ್ತು ಗದುಗಿನ ಭಾರತಗಳಿಂದ. ವರ್ಣಕದ ನಾಡುಡುಗೆಯುಟ್ಟಿದ್ದ ಕಾವ್ಯಕನ್ನಿಕೆಯರಿಗೆ ವಸ್ತುಕದ 'ದೇಶಾವರಿ' ವೇಷ ಭೂಷಣಗಳನ್ನು ತೊಡಿಸಿದ್ದಾನೆ. ಇದು ಈ ಕವಿ ಬೀಸಿರುವ ಮೊದಲನೆಯ ಮಹೇಂದ್ರಜಾಲ. ವ್ಯಕ್ತಿಯನ್ನು ಗಮನಿಸದೆ ವೇಷಕ್ಕೆ ಮಾರು ಹೋಗುವ ರಸಿಕ-ಶ್ರೇಷ್ಠಿ ಒಂದೆ ಪಟ್ಟಿಗೆ ಮುಗ್ಗರಿಸಬಹುದು. ಈ ಅಂಶವನ್ನು ಲಕ್ಷ್ಯದಲ್ಲಿಟ್ಟುಕೊಂಡು ರಾಜಶೇಖರ ವಿಲಾಸವನ್ನು ವಿಮರ್ಶಿಸಲು ಪ್ರಯತ್ನಮಾಡಿದೆ.

ಗುಬ್ಬಿಯ ಮಲ್ಲಣಾರ್ಯನ 'ಭಾವ ಚಿಂತಾರತ್ನ' ಷಡಕ್ಷರ ದೇವನ ರಾಜಶೇಖರವಿಳಾಸ ವಿಪುಳ ಪ್ರಬಂಧದ ಮೂಲವಸ್ತು. ಆದುದರಿಂದ 'ಚಿಂತಾರತ್ನ'ದ ಕಥೆಯನ್ನು ಮೊದಲು ಗಮನಿಸಬೇಕು.

ಚೋಳ ದೇಶದಲ್ಲಿ ಧರ್ಮವತಿಯೆಂಬ ಪಟ್ಟಣ. ಅಲ್ಲಿಯ ದೊರೆ ಸತ್ಯೇಂದ್ರ ಚೋಳ ಮಹಾರಾಜ. ಅವನ ಸಹಧರ್ಮಿಣಿ ಅಮೃತವತೀ ದೇವಿ. ದಂಪತಿಗಳು ಪರಮ ಶಿವನಿಷ್ಠರು. ಅವರಿಗೆ ಮಕ್ಕಳಿರಲಿಲ್ಲವಾದುದರಿಂದ ಮಂತ್ರಿ ಪತಿವ್ರೋಹಿಯ ಮಗ ಮಿತವಚನನನ್ನು ಸಾಕಿಕೊಂಡರು. ಕೆಲವು ದಿನಗಳ ಮೇಲೆ ಅವರ ಕುಲಗುರುಗಳಾದ ಚಿದ್ಘನ ಶಿವಾಚಾರ್ಯರ ಕೃಪಾಪ್ರಸಾದದಿಂದ ಪುತ್ರಸಂತಾನವಾಯಿತು. ಸಾಕುಮಗ ಮಿತವಚನನೂ ಔರಸಪುತ್ರ ಮಂತ್ರಲಕ್ಷನೂ ಒಡನುಂಡು ಒಡನಾಡಿ ಒಡನೆ ಬೆಳೆದವರು. ವಸಂತಾಗಮನವಾಯಿತು. ರಾಜ ರಾಣಿಯರ ಜಲಕೇಳಿ, ವನಕೇಳಿಗಳೂ ಸಾಂಗವಾಗಿ ಬಳೆದುವು. ವಸಂತೋತ್ಸವವನ್ನು ಮುಗಿಸಿಕೊಂಡು ರಾಜಧಾನಿಗೆ ಹಿಂತಿರುಗಿದಾಗ ಅನಿರೀಕ್ಷಿತ ಸಮಾಚಾರ ಇವರನ್ನು ಎದುರುಗೊಂಡಿತು. ಸಿಂಹಳೇಂದ್ರನು ಸತ್ಯೇಂದ್ರ ಚೋಳನ ಸಾಮಂತ ಕಾಳಮೇಘನೊಂದಿಗೆ ಸೆಣಸಿ

ಕಾಳಗ ಮಾಡುತ್ತಿರುವನು. ಮಹಾರಾಜನೇ ರಣರಂಗಕ್ಕೆ ಹೊರಡಲು ಸಿದ್ಧತೆ ಗಳಾಗಲೆಂದು ನಿಯಮಿಸುತ್ತಿರಲು ಸ್ವಾಮಿನಿಷ್ಠ ಪತಿವ್ರೋಹಿ ಮಂತ್ರಿ 'ಪಕ್ಷಿಗೇತಕೆ ಪಾಶುಪತ' ಎಂದು ದೊರೆಯನ್ನು ರಾಜಧಾನಿಯಲ್ಲಿಯೇ ನಿಲ್ಲಿಸಿ ತಾನು ಯುದ್ಧರಂಗಕ್ಕೆ ಹೋಗಿ ಸಿಂಹಳೇಂದ್ರನನ್ನು ಸೋಲಿಸುವನು. ಅದೇ ಸಿಂಹಳೇಂದ್ರನ ಹೆಮ್ಮಕ್ಕಳಿಬ್ಬ ರನ್ನು ತಂದು ಒಬ್ಬಳನ್ನು ಮಿತವಚನನಿಗೂ ಇನ್ನೊಬ್ಬಳನ್ನು ಮಂತ್ರಲಕ್ಷನಿಗೂ ಮದುವೆ ಮಾಡುವನು. ಒಂದು ದಿನ, ಮಂತ್ರಲಕ್ಷನು ಮಿತವಚನನ ಹಿತವಚನಕ್ಕೆ ಲಕ್ಷ್ಯಕೊಡದೆ, ಹೊಸ ತೇಜಿಗಳನ್ನೇರಿ ವೈಹಾಳಿಗೆ ಹೋಗಿರುತ್ತಾನೆ. ವೈಹಾಳಿ ಮುಗಿದನಂತರ ಚತುರಂಗ ಬಲದೊಡನೆ ಹಿಂದಿರುಗಿ ಬರುವಾಗ, ತಿರುಕೊಳವಿನಾಚಿ ಯೆಂಬ ಶಿವಭಕ್ತೆಯ ಮಗು ಶಂಕರ ಬಾಲಕನು ಮಿತವಚನನು ಏರಿದ್ದ ಕುದುರೆಯ ಕಾಲತುಳಿತಕ್ಕೆ ಸಿಕ್ಕಿ ಮೃತಪಟ್ಟನು. ನಾಚಿ ದೊರೆಯತನಕ ದೂರು ಹೊತ್ತಳು. ರಾಜಕುಮಾರನ ದೆಸೆಯಿಂದ ಶಿವಭಕ್ತ ಬಾಲಕನ ದುರ್ಮರಣ ಸಂಭವಿಸಿತೆಂದು ಗೊತ್ತಾಗುತ್ತದೆ. ವೈಹಾಳಿಗೆ ಬರಲೊಲ್ಲದ ಮಿತವಚನನನ್ನು, 'ನಿನ್ನಿಂದಾದ ತಪ್ಪು ನನ್ನದು' ಎಂದು ಭರವಸೆಯಿತ್ತು ಎಳೆದುಕೊಂಡು ಹೋಗಿದ್ದ ಮಂತ್ರಲಕ್ಷನು ತಾನೇ ತಂದೆಯ ಸನ್ನಿಧಿಗೆ ಬಂದು, ತಪ್ಪು ತನ್ನದೇ ಎಂದೂ ತಲೆಗೆ ತಲೆ ಕೊಡುವುದಕ್ಕೆ ತಾನು ಸಿದ್ಧನಿರುವೆನೆಂದೂ ಅರುಹಿದನು. ಮಂತ್ರಲಕ್ಷನ ತಲೆ ಹೊಡೆಯಬೇಕೆಂದು ದೊರೆ ತನಗೆ ಮಾಡಿದ ಆಜ್ಞೆ ಪತಿವ್ರೋಹಿಮಂತ್ರಿಯನ್ನು ಧರ್ಮಸಂಕಟದಲ್ಲಿ ಸಿಲುಕಿ ಸಿತು. ತಾನೇ ತನ್ನ ತಲೆಯನ್ನು ಕಡಿದುಕೊಂಡು ಆ 'ಸಂಕಟ'ದಿಂದ ತಪ್ಪಿಸಿ ಕೊಳ್ಳುವನು. ಈ ಸಮಾಚಾರವನ್ನು ಕೇಳಿದ ಸತ್ಯೇಂದ್ರಮಹಾರಾಜ ಸಂದಾಯಿ ಯೆಂಬ ಭೃತ್ಯನನ್ನು ಕರೆದು ಮಂತ್ರಲಕ್ಷನನ್ನು ಸಂಹರಿಸಬೇಕೆಂದು ಆಣತಿಯಿತ್ತನು. ರಾಜಾಜ್ಞೆ ನೆರವೇರಿತು. ಆದರೆ ಮಂತ್ರಲಕ್ಷನ ರುಂಡ ಪಂಚಾಕ್ಷರೀ ಮಂತ್ರವನ್ನು ಉಚ್ಚರಿಸುತ್ತಲೇ ಇತ್ತು. ಬಾಳುದಲೆ ಸಹಿತ ರಾಜಾಸ್ಥಾನಕ್ಕೆ ಬಂದ ಸಂದಾಯಿ ಯನ್ನು ಸತ್ಯೇಂದ್ರನು, ಪಂಚಾಕ್ಷರಿಯನ್ನು ಜಪಿಸುತ್ತಿದ್ದ ಇವನ ತಲೆಗಡೆದ ಬಗೆ ಹೇಗೆ ? ಎಂದು ಪ್ರಶ್ನಿಸಲು ಅವನು ತನ್ನ ತಲೆಯನ್ನು ಕಡಿದುಕೊಂಡು ಎಡಗೈಯಲ್ಲಿ ಹಿಡಿದಿರಲು ಆ ಶಿರವೂ ಪಂಚಾಕ್ಷರೀಮಂತ್ರವನ್ನು ಘೋಷಿಸುತ್ತಿತ್ತು. ಆ ಎರಡು ತಲೆಗಳ ನಡುವೆ ಇರಿಸಿದ್ದ ಶಂಕರನ ತಲೆಗೂ ಪ್ರಾಣಬಂದು ಅದರ ಬಾಯಲ್ಲಿಯೂ ಪಂಚಾಕ್ಷರೀಮಂತ್ರ ! ತಿರುಕೊಳವಿನಾಚಿ ಆ ಭೃತ್ಯನ ತಲೆಗೆ ಪ್ರತಿಯಾಗಿ ತನ್ನ ತಲೆಯನ್ನೂ ಕಡಿದಿಡಲು ಆ ತಲೆಯ ಬಾಯಲ್ಲಿಯೂ ಪಂಚಾಕ್ಷರೀಮಂತ್ರ !! ಅದೇ ಸಮಯದಲ್ಲಿ ತಂದಿರಿಸಿದ ಮಂತ್ರಿಯ ತಲೆಯೂ ಪ್ರಣವಮಂತ್ರವನ್ನು ಜಪಿಸಲು ಮೊದಲುಮಾಡಿತು. ಶಂಕರನ ಶಿರಸ್ಸು ಗುರುಕುಲಶದಂತೆ ಕಂಗೊಳಿಸುತ್ತಿರಲು ಅದರ ನಾಲ್ಕು ಮೂಲೆಯಲ್ಲಿಯೂ ಇದ್ದ ನಾಲ್ಕು ರುಂಡಗಳು ಕಲಶಗಳಂತೆ ಬೆಳಗಿದವು. ಆ ಗುರುಕಲಶಕ್ಕೆ ಕಾಣಿಕೆಯೆಂದು ಸತ್ಯೇಂದ್ರಮಹಾರಾಜನು ತನ್ನ ಶಿರವನ್ನರಿದು ಅರ್ಪಿಸಲು ಆ ಶಿರವೂ ಶಿವಮಂತ್ರವನ್ನು ಜಪಿಸಲು ಪ್ರಾರಂಭಿಸಿತು. ಅದನ್ನು

ನೋಡುತ್ತ ನಿಂತಿದ್ದ ಮಿತವಚನನು ಈ ಎಲ್ಲ ಅನಾಹುತವೂ ತನ್ನಿಂದಲೇ ಎಂದುಕೊಂಡು ತನ್ನ ತಲೆಯನ್ನೂ ಕಡದಿಡುವನು ಆ ತಲೆಯ ಬಾಯಲ್ಲಿಯೂ ಪಂಚಾಕ್ಷರೀ ಮಂತ್ರ ! ಈ ಸುದ್ದಿಯನ್ನು ಕೇಳಿದ ರಾಣಿ ಅಮೃತವತೀದೇವಿ ತಾನೂ ಕತ್ತಿಗೆ ಕೊರಳೊಡ್ಡುವುದರಲ್ಲಿದ್ದಳು. ಅಷ್ಟುಹೊತ್ತಿಗೆ ಶಿವಪಾರ್ವತಿಯರು ಪ್ರತ್ಯಕ್ಷರಾದರು. ಪುಷ್ಪವೃಷ್ಟಿಯಾಯಿತು; ದೇವದುಂದುಭಿ ಮೊಳಗಿದುವು. ಶಿವಕೃಪೆಯಿಂದ ಎಲ್ಲರೂ ಬದುಕಿಕೊಂಡರು. ಧರ್ಮವತೀನಗರದ ಈ ಶಿವನಿಷ್ಠರೆಲ್ಲ ಮಣಿಖಚಿತವಾದ ಪುಷ್ಪಕ ವಿಮಾನದಲ್ಲಿ ಕೈಲಾಸಕ್ಕೆ ನೆಗೆದರು.

ಈ ಕಥೆಯೇ ರಾಜಶೇಖರವಿಲಾಸದ ಮೂಲವಸ್ತು. ಮಲ್ಲಣಾರ್ಯನು ತಮಿಳು ಮೂಲದಿಂದ ಇದನ್ನು ಇದ್ದುದಿದ್ದಂತೆಯೆ ಭಾಷಾಂತರಿಸಿರಬಹುದು, ಇಲ್ಲವೆ ಅಲ್ಲಲ್ಲಿ ಮಾರ್ಪಾಟುಗಳನ್ನು ಮಾಡಿಕೊಂಡಿರಬಹುದು.* ಏನೇ ಆಗಲಿ ಈ ಕಥೆಯಲ್ಲಿ, ಅಂದರೆ 'ಭಾವಚಿಂತಾರತ್ನ'ದಲ್ಲಿ ಕಥಾನಾಯಕರಾರೆಂಬುದನ್ನು ನಿರ್ಧರಿಸುವುದು ಕಷ್ಟ. ಶಿವಾಚಾರ ನಿಷ್ಠನೂ ನ್ಯಾಯನಿಷ್ಠನೂ ಆದ ಸತ್ಯೇಂದ್ರಚೋಳನೆ? ಸಿಂಹಳೇಂದ್ರನನ್ನು ಸೋಲಿಸಿ ಅವನ ಕುವರಿಯರನ್ನು ತಂದು ಅಕ್ಕತಂಗಿಯರನ್ನು 'ಅಣ್ಣತಮ್ಮ'ರಿಗೆ

---

* ಮಲ್ಲಣಾರ್ಯನು ಪೆರಿಯಪುರಾಣದ ಅಥವಾ ಅಂಥದೇ ಇನ್ನೊಂದು ತಮಿಳು ಪುರಾಣದ ಮನುನೀತಿಚೋಳನ ಕತೆಯನ್ನೂ ಚೋಳಭೂಪಾಲನೊಬ್ಬನ 'ಸಿಂಹಳ ವಿಜಯ'ವನ್ನೂ ತಿರುಕೊಳವಿನಾಚಿಯ ಕರುಣಾಜನಕ ಕತೆಯನ್ನೂ ಬೆಸೆದು ಅದಕ್ಕೆ ಪಂಚಾಕ್ಷರೀಮಂತ್ರ ಮಹಾತ್ಮ್ಯದ ಒಪ್ಪಹಾಕಿರಬೇಕೆಂದು ಊಹಿಸಬಹುದು. ಆದರೆ ಸತ್ತಕರುವಿನ ತಾಯಿ ಮನುಚೋಳನ ಅರಮನೆಯ ಮುಂದೆ ಬಂದು ನಿಂತು ಗಂಟೆಯನ್ನು ಬಾರಿಸಿ, ಕೊಂದವರ ಕೊಲೆಯಾಗಬೇಕೆಂದು ಕೇಳಿದ ಸಂದರ್ಭ ಭಾವಚಿಂತಾರತ್ನದಲ್ಲಿ ಬೇರೊಂದು ರೀತಿಯಲ್ಲಿ ನಿರೂಪಿತವಾಗಿರುವುದರಿಂದಲೂ ಕತೆಯ ತಿರುಳಿನಂತಿರುವ ತಿರುಕೊಳವಿನಾಚಿಯ ವೃತ್ತಾಂತವೂ ಪಂಚಾಕ್ಷರೀಮಂತ್ರದ ಪ್ರಸಂಗವೂ ಮನುನೀತಿಯ ಕತೆಯಲ್ಲಿ ಇಲ್ಲವಾದುದರಿಂದಲೂ ಮಲ್ಲಣಾರ್ಯನು ನಮಗೆ ಸದ್ಯದಲ್ಲಿ ಉಪಲಬ್ಧವಿಲ್ಲದಿರುವ ಯಾವುದೋ ತಮಿಳು ಕತೆಯನ್ನು ಅನುಸರಿಸಿರಬೇಕೆಂದು ಊಹಿಸಬಹುದು. 'ಕೊಂದವನಿಗೆ ಕೊಲೆ ತಪ್ಪದು' ಎಂಬ ಗಾದೆ ಮಾತು ಬಹಳ ಹಳೆಯದು. ಮಾನವನಿಗೆ ನ್ಯಾಯ ದೊರಕಿಸಿಕೊಡುವ ಧರ್ಮ ಅತ್ಯಂತ ಹಳೆಯಧರ್ಮ; ಪ್ರಾಣಿಗಳಿಗೂ ನ್ಯಾಯ ದೊರಕಬೇಕೆಂದು ಹೇಳುವ ಧರ್ಮ ಪ್ರಗತಿಪರವಾದುದು; ಆದರೂ ಆಮೇಲೆ ಹುಟ್ಟಿದುದು. ಅನ್ಯಾಯಮಾಡಿದ ಪ್ರಾಣಿಗಳಿಗೂ, ಶಿಕ್ಷೆಯಾಗಬೇಕೆಂದು 'ಪರವಸ್ತುವನೊಯ್ದುಡಗಿದ ನರಿಯಂ ಪಿಡಿತರಿಸಿ ಶಾಸ್ತಿಯಂ ಮಾಡಿಸಿದ' ಶಿವಪ್ಪನಾಯಕನ ನ್ಯಾಯ ಇನ್ನೂ ಪ್ರಗತಿಪರವಾದುದು. ಆದುದರಿಂದ ಸತ್ಯೇಂದ್ರ ಚೋಳನ ಕತೆ ಹುಟ್ಟಿದ ಮೇಲೆ ಮನುನೀತಿಯ ಕತೆ ಹುಟ್ಟಿರಬೇಕು. ಸತ್ಯೇಂದ್ರ ಚೋಳನ ಕಥೆಯನ್ನು ಹೇಳಬೇಕೆಂದು ಚೇರಮಾಂಕನೇ ತನ್ನ ಗುರುಮಲ್ಲಣಾರ್ಯನನ್ನು ಕೇಳಿಕೊಂಡಿದ್ದಾನೆ. ಅಲ್ಲದೆ 'ಚಿಂತಾರತ್ನ'ದಲ್ಲಿಯೇ ಮನುನೀತಿಯ ಪ್ರಸ್ತಾಪವಿದೆ. ಆದೇ ಕತೆಯನ್ನೇ ಸತ್ಯೇಂದ್ರ ಚೋಳನ ಕತೆಯನ್ನಾಗಿ ಮಾರ್ಪಡಿಸಿದ ಕವಿ ಮನುಚೋಳನ ನ್ಯಾಯದ ಮಾತನ್ನೂ ಅವನ ಕತೆಯನ್ನೂ ಎತ್ತಿ ಹೇಳುತ್ತಿರಲಿಲ್ಲ. 'ದ್ರಾವಿಡದೊಳೊರೆದುದಂ ಕನ್ನಡದಿ' ಹೇಳುವೆನೆಂದು ಕವಿಯೇ ತಿಳಿಸಿರುತ್ತಾನೆ.

ಮದುವೆಮಾಡಿದ ಸ್ವಾಮಿನಿಷ್ಠ ಪತಿವ್ರೋಹಿಯೇ? ಪಂಚಾಕ್ಷರೀಮಹಾಮಂತ್ರಪ್ರಭಾವ ವನ್ನು ಜಗತ್ತಿಗೆ ತೋರಿಸಿಕೊಟ್ಟ ಮಹಾನುಭಾವ ಮಂತ್ರಸಿದ್ಧನೆ? ಕಾವ್ಯದ ಒಂದೊಂದು ಘಟ್ಟದಲ್ಲಿ ಒಬ್ಬೊಬ್ಬ ನಾಯಕ! ರಾಜಶೇಖರ ವಿಲಾಸದಲ್ಲಿ ಈ ಸಂದಿಗ್ಧಕ್ಕೆ ಎಡೆಯಿಲ್ಲ. ಸತ್ಯೇಂದ್ರಚೋಳ, ಪತಿವ್ರೋಹಿ–ಈ ಎರಡು ಪಾತ್ರಗಳೂ ಹಿನ್ನೆಲೆಗೆ ಜರುಗಿ ರಾಜಶೇಖರ (ಮಂತ್ರಲಕ್ಷ)ನ ಪಾತ್ರಕ್ಕೆ ಎಡೆಗೊಟ್ಟಿವೆ. ಮಲ್ಲಣಾರ್ಯನು ತನ್ನ ಕೃತಿಗೆ 'ಭಾವಚಿಂತಾರತ್ನ' ಎಂದು ಹೆಸರಿಟ್ಟ. ಹಾಗೆ ಹೆಸರಿಡುವುದಕ್ಕೆ ಕಾರಣವನ್ನೇನೋ ಸೂಚಿಸಿದ್ದಾನೆ. ಕಾವ್ಯದ ನಾಯಕನಾರೆಂಬುದು ಈ ಹೆಸರಿ ನಿಂದಲೂ ಸ್ಪಷ್ಟಪಡುವುದಿಲ್ಲ. ಷಡಕ್ಷರಿಯಾದರೆ ತನ್ನ ಕೃತಿಗೆ 'ರಾಜಶೇಖ ವಿಲಾಸ' ಎಂದು ಕರೆದು ಕಾವ್ಯದ ಕೇಂದ್ರವ್ಯಕ್ತಿ ಯಾರೆಂಬುದನ್ನು ಬಿಚ್ಚಿ ಹೇಳಿರುವನು. ಜಲ ಕೇಳಿ, ವನಕೇಳಿ, ವಸಂತೋತ್ಸವಗಳು 'ಭಾವಚಿಂತಾರತ್ನ' ದಲ್ಲಿ ಸತ್ಯೇಂದ್ರ ಮಹಾ ರಾಜನ ಪಾಲಿಗೆ; 'ಷಡಕ್ಷರಿ 'ಯಲ್ಲಿ ರಾಜಶೇಖರ (ಮಂತ್ರಲಕ್ಷ)ನ ಪಾಲಿಗೆ. ಸಿಂಹ ಳೇಂದ್ರನನ್ನು ಸೋಲಿಸುವವನೂ, ಸೋಲಿಸಿ ಅದೇ ದೊರೆಯ ಮಗಳಿಗೆ ತಾನು ಸೋತು ತಾನಾಗಿಯೇ ಆಕೆಯನ್ನು ವರಿಸುವವನೂ ರಾಜಶೇಖರನೇ. ಮಂತ್ರಿಯೊಬ್ಬನು ಅರಿ ರಾಯರನ್ನು ಬಗ್ಗು ಬಡಿದು ಅವರ ಹೆಣ್ಣುಗಳನ್ನು ತಂದು ರಾಜಕುಮಾರನಿಗೂ ತನ್ನ ಪುತ್ರನಿಗೂ ಗಂಟುಹಾಕಿದರೆ ಮಂತ್ರಿಯ ಸ್ವಾಮಿನಿಷ್ಠೆ ಪ್ರಕಾಶಕ್ಕೆ ಬಂದತಾಯಿತು. ಸ್ವಕಾರ್ಯವೂ ಆಯಿತು; ಸ್ವಾಮಿ ಕಾರ್ಯವೂ ಆಯಿತು. ರಾಜಕುಮಾರನಿಗೆ ಬಂದ ಹಿರಿಮೆಯೇನು? ಅವನು ತಾನಾಗಿ ಒಲಿದ ಹೆಣ್ಣನ್ನು ವರಿಸಿದಂತಾಯಿತೊ? ಅಪ್ರತಿಮವೀರನೂ ಕಲಾಕೋವಿದನೂ ಪರಮತೇಜಸ್ವಿಯೂ ಅನುಪಮ ಸುಂದರನೂ ಆದ ರಾಜಶೇಖರನು ಗುಣರೂಪಶೀಲ ಸೌಭಾಗ್ಯಗಳಿಂದೊಪ್ಪುವ ರಾಜಕುಮಾರಿಗೆ ಮನಸೋಲುವುದೂ, ಸಿಂಹಳದ ಸೊಬಗಿ ಸರ್ವಮಂಗಳೆ, ಅಂತಹ ವೀರರಾಜಪುತ್ರ ನನ್ನು ಆಸೆಪಡುವುದೂ ಸಹಜ, ಸುಂದರ, ಸಂಭವನೀಯ. ಇಲ್ಲಿ ಸೋತವರಾರು ಗೆದ್ದವರಾರು? ಚೋಳರಾಜಕುಮಾರನೊ? ಸಿಂಹಳ ರಾಜಪುತ್ರಿಯೊ ?ಎಂಬುದೇ ಸಮಸ್ಯೆಯಾಗಿ ಕಾವ್ಯದ ಸೊಗಸು ಇನ್ನಷ್ಟು ಹಿರಿದಾಗುತ್ತದೆ. ಮಂತ್ರಿಕುಮಾರ ಮಿತವಚನನಿಗೆ ಆ ಮೊದಲೇ ವಿವಾಹವಾಗಿತ್ತೆಂದು ಕವಿ ಹೇಳಿರುವುದರಿಂದ ಓದುಗರ ಲಕ್ಷ್ಯ ರಾಜಶೇಖರ ಸರ್ವಮಂಗಳೆಯರ ಪ್ರೇಮಕಲ್ಯಾಣಗಳ ವರ್ಣನೆಯಲ್ಲಿ ಕೇಂದ್ರೀಕೃತವಾಗಿರುತ್ತದೆ. ರಾಜಕುಮಾರನು ಪ್ರಾಪ್ತವಯಸ್ಕನಾದ ಕೂಡಲೆ ಅವ ನಿಗೆ ಆನಂದೋತ್ಸಾಹದಿಂದ ಪಟ್ಟಗಟ್ಟಿದ ಸತ್ಯೇಂದ್ರಚೋಳನು ಶಿವಪೂಜೆ ಶಿವ ಪುರಾಣಶ್ರವಣ ಮಹೇಶ್ವರಸೇವೆಗಳಲ್ಲಿ ಮಗ್ನನಾದನೆಂದು ಹೇಳಿರುವುದರಿಂದ ರಾಜಶೇಖರ–ಪಾತ್ರವು ನಾಯಕಪಟ್ಟಕೇರುವುದಕ್ಕೆ ಸಂಪೂರ್ಣ ಅರ್ಹತೆಯನ್ನು ಪಡೆದಂತಾಯಿತು.

ಷಡಕ್ಷರಿಯ ಅಮೃತವತಿ ಮಂತ್ರಿಕುಮಾರನಾದ ಮಿತವಚನನನ್ನು 'ತನ್ನ ಮಗನೆಂದೆ ಬಗೆದು' ಸಾಕಿಕೊಂಡಿರುವುದಿಲ್ಲ. ಹೀಗೆ ಭಾವಿಸಿದರೆ ರಾಜಶೇಖರನ

ಪಾತ್ರಕ್ಕೂ ಕುಂದಾಗಬಹುದೆಂದು ಷಡಕ್ಷರಿಯ ಮನವರಿಕೆ. ಆದುದರಿಂದಲೇ ಆಕೆಗೆ ಚೋಳಕುಲಲಲಾಮನೆನಿಸುವ ಕುಲದೀಪಕನನ್ನು ಪಡೆಯುವ ಉತ್ಕಟ ಬಯಕೆ. ಅಂತಹ ಬಲ್ಬಯಕೆಯನ್ನೂ ಹದ್ದಿನಲ್ಲಿಟ್ಟುಕೊಂಡಿರುತ್ತಾಳೆ ಆ ಮಾನಿನಿ. ಆದರೆ ಭಕ್ತರ ಮನದಭೀಷ್ಟವನ್ನು ಶ್ರೀ ಗುರುಗಳೇ ಅರಿತರು. 'ಶರಣರ ಮಹಿಮೆ ಮಹಿಗೆ ಸಾಧಾರಣಮೆ ?' ತಾವೆ ಕರುಣಪ್ರಸಾದವಿತ್ತು ಪುತ್ರವತಿಯಾಗೆಂದು ಹರಸಿದರು. 'ಭಾವಚಿಂತಾರತ್ನ' ದಲ್ಲಿ 'ಕುವರನನಿತ್ತು ರಕ್ಷಿಸು' ಎಂದು ಕೇಳಿದಳೆಂದು ಹೇಳಿರುವುದು ಷಡಕ್ಷರಿಗೆ ಹಿಡಿಸಲಿಲ್ಲ. ಇವನು ಲೋಕಾನುಭವವುಳ್ಳವನು, ವ್ಯಕ್ತಿಗತ ಮನೋವ್ಯಾಪಾರಗಳನ್ನು ಅರಿತವನು. ಸ್ತ್ರೀ ಸ್ವಭಾವ ಎಂತಹುದೆಂಬುದನ್ನು ಊಹಿಸಬಲ್ಲ.

ಪಾತ್ರಗಳಿಗೆ ಹೆಸರಿಡುವಲ್ಲಿಯೂ ಷಡಕ್ಷರಿಯದು ತನ್ನದೇ ಆದ ಒಂದು ವೈಶಿಷ್ಟ್ಯ. ಕಥಾನಾಯಕನಿಗೆ ಮಂತ್ರಲಕ್ಷ, ರಾಜಶೇಖರ—ಈ ಎರಡು ಹೆಸರುಗಳು ಇವೆ. ನಾಮಕರಣ ಮಾಡಿದ ಗುರುಗಳ ಬಾಯಿಂದಲೇ ಎರಡು ಹೆಸರುಗಳಿರುವುದಕ್ಕೆ ಕಾರಣವೂ ಹೊರಟಿದೆ: 'ಹರಮಂತ್ರೋದ್ಭವನೀತನಿನ್ನುಮದನೇ ಸಂಲಕ್ಷಿಪಂ', ಆದುದರಿಂದ ಮಂತ್ರಲಕ್ಷ; 'ಭೂಕಾಂತ ಸಂತಾನದೊಳ್ ದೊರೆವೆತ್ತಗ್ಗದ ಕೀರ್ತಿವೆತ್ತೆಸೆವನೆಂದು' ರಾಜಶೇಖರ. ಮಿತವಚನನ ಮಡದಿ ಕಮಲೆಯಲ್ಲ, ಕಮಲಲೋಚನೆ. ಕಮಲೆ ಎಂದರೆ ಲಕ್ಷ್ಮಿ ಅಲ್ಲವೇ? ರಾಜಶೇಖರ (ಮಂತ್ರಲಕ್ಷ)ನ ಪತ್ನಿ, ಮಲ್ಲಣಾರ್ಯನು ಹೇಳಿರುವಂತೆ ಕುಮುದಿನಿಯಲ್ಲ; ಸರ್ವಮಂಗಳೆ. ಸಿಂಹಳೇಂದ್ರನು ಶರಣಾಗತನಾದ ಮೇಲೆ, ಅವನಲ್ಲಿಗೆ ರಾಜಶೇಖರನು ಸರ್ವಮಂಗಳೆಯನ್ನು ಬೇಡಿ ಕಳುಹಿದ ಪತಿವ್ರೋಹಿ ಮಂತ್ರಿ ಸಿಂಹಳೇಶನ ಬಳಿಗೆ ಬಂದು,

> ವರರಾಜಶೇಖರಂಗಾ
> ಗಿರಿವರನಿತ್ತಂತೆ ಸರ್ವಮಂಗಳೆಯಂ ಭೂ
> ವರ ರಾಜಶೇಖರಂಗೆಲೆ
> ನರೇಂದ್ರ ಕುಡು ಸರ್ವಮಂಗಳೆಯನನುನಯದಿಂ VIII ೯ಅ

ಎನ್ನುವನು. ಈ ಮಾತು ಷಡಕ್ಷರಿಯವು, ಮಂತ್ರಿಯ ಬಾಯಿಂದ ಬಂದಿವೆ. ಹರಮಂತ್ರೋದ್ಭವನಾದ 'ಮಂತ್ರಲಕ್ಷ' ಹರನ ಸಮಾನ ಅವನ ಸತಿ ಸರ್ವಮಂಗಳೆಗೆ ಸಮಾನಳಾದ ಆಕೆ 'ಶಿವೆಯ ವರದಿಂದ' ಹುಟ್ಟಿದವಳಲ್ಲವೇನು ?

ಪತಿವ್ರೋಹಿ ಮಂತ್ರಿ ತನ್ನ ಏಕೈಕಪುತ್ರ ಮಿತವಚನನನ್ನು ತನ್ನ ಸ್ವಾಮಿಯಾದ ಸತ್ಯೇಂದ್ರ ಚೋಳನಿಗೆ ಒಪ್ಪಿಸಿ ಕೊಡುವುದೂ ದತ್ತು ಪುತ್ರನೊಬ್ಬನಿದ್ದಾಗಲೂ ಪುತ್ರಸಂತಾನವಾಗಲಿಲ್ಲವಲ್ಲಾ ಎಂದು ಆ ರಾಜದಂಪತಿಗಳು ಕೊರಗುವುದೂ ಷಡಕ್ಷರಿಗೆ ಸಮ್ಮತವಿಲ್ಲ. ಆದುದರಿಂದ

ಸಮುಚರಿತರ್ಸಮ ವಿನಯ
ರ್ಸಮಾನವಯರ್ಸಮಪ್ರಭರ್ಸಮವಿದ್ಯರ್
ಸಮರೂಪರ್ಸಮಗುಣರು
ತ್ತಮ ನೃಪಸುತ ಮಂತ್ರಿಪುತ್ರರಿರ್ವರ್ ಬಳೆದರ್
ಅವರಿರ್ವ್ವರಿರವನುರ್ವರೆ
ಯವರೀಕ್ಷಿಸುತಂ ಸಹೋದರರ್ನಿಜಮೆಂಬರ್
ವಿವಿಧ ವಿಳಾಸದಿನಾ ನೃಪ
ಯುವತಿಯುಮಾನ್ನಪಸುಮಳ್ಕರಿಂ ಸರಿಗಾಣ್ಬರ್

ಎಂದು ಅವರಿಬ್ಬರನ್ನೂ ವರ್ಣಿಸಿದ್ದಾನೆ. ಅವರು ಹುಟ್ಟಿನಿಂದ ಅಣ್ಣ ತಮ್ಮಂದಿರಲ್ಲ ಗುಣ ರೂಪ ವಿದ್ಯೆ ವಿನಯ ಮುಂತಾದ ಮಂಗಳಕರ ಗುಣಗಳಿಂದ, ಅನಂತ ಅಪಾರ ಅಗಾಧ ಸ್ನೇಹದಿಂದ ಅಣ್ಣತಮ್ಮಂದಿರಾದರು. ಮುಂದೆ ರಾಜಶೇಖರನು 'ತಲೆದಂಡ' ಕೊಡಬೇಕಾಗಿ ಬಂದಾಗ ತಾಯಿಯ ಬಳಿಗೆ ಹೋಗಿ 'ಮಿತವಚನನನಿಂಬರಿದೆನ್ನಂತೆ ಕಾಣ್ಬದಿಂತಿದೆ ಕಜ್ಜಂ' ಎಂದು ಬೇಡಿಕೊಳ್ಳುವನು. ಆಗ ಮಂತ್ರಿಕುಮಾರ ಅಮೃತ ವತಿಯ ಸಾಕು ಮಗನಾದ.

'ಭಾವಚಿಂತಾರತ್ನ', 'ರಾಜಶೇಖರ ವಿಲಾಸ' ಎರಡು ಕಾವ್ಯಗಳ ಅಂತಿಮ ಗುರಿ ಪಂಚಾಕ್ಷರೀ(ಷಡಕ್ಷರೀ)ಮಂತ್ರ ಮಹತ್ವವನ್ನು ಬಿತ್ತರಿಸುವುದು. ಆದರೆ ಮಲ್ಲಣಾರ್ಯನು ಈ ಅಂಶವನ್ನು ಕಾವ್ಯದ ಮೊದಮೊದಲಲ್ಲಿ ಅಷ್ಟಾಗಿ ಗಮನಿಸಿರು ವುದಿಲ್ಲ. ಅಮೃತವತಿ 'ಕುವರನನಿತ್ತು ರಕ್ಷಿಸೆನೆ' ದೇಶಿಕರು 'ಮಗಳೆ ಕೊಳ್ ಎನುತ ತಾಂಬೂಲ ಪ್ರಸಾದದೊಡನೆ ಇಷ್ಟಸಿದ್ಧಿಯನಿತ್ತರು.' ಎಂದೂ ಪುತ್ರೋತ್ಸವ ವಾದ ಸಂದರ್ಭದಲ್ಲಿ 'ಸತ್ಪ್ರಣವದಿಂ ಮೂಲಮಂತ್ರ ತಾನೊಗೆದಂದದಿಂದ ಉದಯ ವಾದನಾ ವನಿತೆಯುದರದಿನಮಲ ಸುಕುಮಾರನು' ಎಂದೂ ಸತ್ಯೇಂದ್ರನು ಮಗನನ್ನು ಅಮಿತ ವಾತ್ಸಲ್ಯದಿಂದ ಮುದ್ದಿಸುವುದನ್ನು ಕುರಿತು 'ಪುತ್ರನಂ ತಂದೆ ಮುದ್ದಿಸುವ ಬಗೆ ಮೊದಲ್ ಪಂಚಾಕ್ಷರಿಯ ಮೋಹವಲ್ಲದೀ ಲೋಕವರ್ತನೆಯಪ್ಪುದೆ' ಎಂದೂ ಸೂಚ್ಯವಾಗಿ ಹೇಳಿರುವನು. ಕಥೆಯ ಪ್ರಮುಖಪಾತ್ರವೂ ಜೀವನಾಡಿಯೂ ಆದ ಆ ಮಂತ್ರಕ್ಕೆ ಹೆಚ್ಚು ಅವಕಾಶ ಕೊಡಬೇಕೆಂದು ಷಡಕ್ಷರದೇವನು ಅರಿತಿದ್ದಾನೆ. ಭಕ್ತಳ ಬಯಕೆಯೇನೆಂಬುದನ್ನು ತಾವೇ ಅರಿತ ಚಿದ್ಘನ ಶಿವಾಚಾರ್ಯರು 'ತರಳೆಗೆ ಪಂಚಾಕ್ಷರೋಪದೇಶಂ ಗೆಯ್ದು' ಈ ಪರಮಸೌಭಾಗ್ಯದಾಯಕವಾದ ಹರಮಂತ್ರವನ್ನು ಸತತವೂ ಜಪಿಸುತ್ತಿರು, ನಿನ್ನ ಬಯಕೆ ಈಡೇರುವುದು ಎಂದು ಭರವಸೆಯೀಯುವರು. ಅಮೃತವತೀದೇವಿ ಗುರೂಪದೇಶ ಪಡೆದವಳು, ಸರ್ವದಾ ಅದೇ ಮಂತ್ರವನ್ನು 'ಚಿತ್ತಾಂತದೊಳ್ ಜಾನಿಸುತ್ತಿ'ರುವಳು. ಪತಿಗಂತೂ ಅದೇಮಂತ್ರವೇ ಉಸಿರು. ಕುಮಾರೋದಯವಾದ ಕೂಡಲೆ ಬಂದು ಶೈವಮಂತ್ರವನ್ನು ಉಚ್ಚರಿಸುತ್ತ 'ಪರಿಶುದ್ಧಪ್ರಭಲಿಂಗಮುಂ ಧರಿಸಿ' ನಾಮಕರಣಮಾಡಿ ಹೋಗುವರು.

ಮತ್ತೆ, ರಾಜಶೇಖರನು 'ಶೈಶವದೆಸೆಯಂ ವಿಸರ್ಜಿಸಲುಪಕ್ರಮಿಸಿ' ಬಾಲ್ಯಾವಸ್ಥೆಯನ್ನು ಪಡೆದಾಗ ಚಿಧ್ಘನಶಿವಾಚಾರ್ಯರೇ ಬಂದು ಅವನಿಗೆ ಮಹಾಶಿವದೀಕ್ಷೆಯ ನೊಲ್ದುಮಾಡಿ' ಪಂಚಾಕ್ಷರೀಮಂತ್ರದ ಮಹಿಮೆಯನ್ನು ವಿಶದವಾಗಿ ಬೋಧಿಸಿ ಹೋಗುವರು. ರಾಜಶೇಖರನೊಡನೆ ಮಿತವಚನನಿಗೂ ಗುರುಕಾರುಣ್ಯ ಪ್ರಾಪ್ತವಾಗುತ್ತದೆ ಅವರಿಬ್ಬರೂ ಮಂತ್ರಪ್ರವೀಣರಾಗುತ್ತಾರೆ. ಸಿಂಹಳೇಂದ್ರನಿಗೂ ರಾಜಶೇಖರನಿಗೋ ಘೋರಸಂಗ್ರಮ ನಡೆಯುತ್ತಿರಲು, ರಾಜಶೇಖರನೇ ವಿಜಯಶಾಲಿಯಾಗುವನೆಂಬುವನ್ನು ಅರಿತ ನೀತಿನಿಪುಣನೆಂಬ ಮಂತ್ರಿ ತನ್ನ ಸ್ವಾಮಿಯಿಂದ ಸಿಂಹಳೇಂದ್ರನಿಗೆ 'ಶಿವಮಂತ್ರಭವನೂ' ಮಹಾ ಪ್ರಭಾವವಿದಿತ ಕಾರ್ಯನೂ ಆದ ರಾಜಶೇಖರನು ಅಜೇಯನೆಂದೂ ಸಂಧಿಕಾರ್ಯವೇ ಉಚಿತವೆಂದು ಅರಿಕೆಮಾಡಿಕೊಳ್ಳುವನು. ಈ ಸಂದರ್ಭವನ್ನು ನಿರೂಪಿಸುವಲ್ಲಿ ಕವಿಯ ಉದ್ದೇಶ ಪಂಚಾಕ್ಷರೀ ಮಂತ್ರದ ಅತ್ಯದ್ಭುತ ಶಕ್ತಿಯನ್ನು ಕೊಂಡಾಡುವುದು. ಕಾವ್ಯದ ಅಂತ್ಯಭಾಗದಲ್ಲಿಯಂತೂ ಈ ದಿವ್ಯಮಂತ್ರ ತನ್ನ ಅನುಪಮ ದೈವೀಶಕ್ತಿಯನ್ನು ಮೆರೆದು ಕಥೆಯ ಉದ್ದಕ್ಕೂ ಗುಪ್ತಗಾಮಿಯಾಗಿ ಹರಿಯುತ್ತಿರುವ ಪರಮಪಾವನಶಕ್ತಿ ತಾನೇ ಎಂಬುದನ್ನೂ ತನ್ನ ವ್ಯಕ್ತಸ್ವರೂಪವೇ ರಾಜಶೇಖರ ಎಂಬುದನ್ನೂ ಪ್ರಕಟಗೊಳಿಸುತ್ತದೆ.

'ರಾಜಶೇಖರ'ದ ವಸ್ತು ವಿನ್ಯಾಸದಲ್ಲಿ ಅನೌಚಿತ್ಯಗಳೂ ಉಂಟು. ರಾಜಶೇಖರನು ಒಡ್ಡೋಲಗದಲ್ಲಿ ಸಿಂಹಾಸನಾಸೀನನಾಗಿ ವಿರಾಜಿಸುತ್ತಿದ್ದಾಗ ಒಬ್ಬ ಕಿರಾತದೂತನು ಆಗಮಿಸುವನು ಚೋಳ ಮಹಾರಾಜನ ಸಾಮಂತನಾದ ಪುಳಿಂದ ಪುರದ ಕಾಳಮೇಘನು ಕಳುಹಿಸಿಕೊಟ್ಟ ದೂತ ಅವನು ಕಾಳಮೇಘನಿಗೂ ಸಿಂಹಳೇಂದ್ರನ ಕಡೆಯವರಿಗೂ ಘನಘೋರ ಸಂಗ್ರಾಮ ನಡೆಯುತ್ತಿರುವುದೆಂಬ ಸಮಾಚಾರವನ್ನು ತಿಳಿಸಲೆಂದು ಬಂದವನು ಮೃಗಯಾ ವಿಹಾರವನ್ನೂ ಬೇಡ ಬೇಡಿತಿಯರ ಬೇಟವನ್ನೂ ತುಂಬಿದ ರಾಜಸಭೆಯಲ್ಲಿ ವರ್ಣಿಸುತ್ತ ಹೊತ್ತುಗಳೆಯುವನು. ಅತ್ತ ರಣರಂಗದಲ್ಲಿ ಹೆಣಗಳ ಬಡಾವೆ ಏರುತ್ತಿದೆ! ಆಮೇಲೆ ನಿದಾನವಾಗಿ ಆ ಯುದ್ಧ ಸಮಾಚಾರವನ್ನು ತಿಳಿಸುತ್ತಾನೆ. ಸಿಂಹಳ ರಾಜಕುಮಾರಿಯನ್ನು ರಾಜಶೇಖರನಿಗೆ ತಂದುಕೊಳ್ಳಲು ಅರಿಕೆಮಾಡಿಕೊಳ್ಳುವುದಕ್ಕೆ ಬಂದ ಮುದಿಮಂತ್ರಿ ತನ್ನ ಸ್ವಾಮಿ ಸತ್ಯೇಂದ್ರ ಚೋಳನೆದುರಿಗೆ ಸರ್ವಮಂಗಳೆಯ ರೂಪಾತಿಶಯವನ್ನೂ 'ಅಂಗಾಂಗಳ ಚೆಲುವನ್ನೂ 'ಬಿತ್ತರಿಸು'ತ್ತಾನೆ. ರಾಜಶೇಖರ ಸರ್ವಮಂಗಳೆಯರ ವಿವಾಹೋತ್ಸವವಾದ ಮೇಲೆ ವರ್ಷಋತು ಹೇಮಂತ ಋತಗಳ ವರ್ಣನೆ ಬಂದಿದೆ—ಶಿವಪೂಜೆಯಲ್ಲಿ ಕರಡಿ ಬಿಟ್ಟಹಾಗೆ.

ಕಥಾಭಣಿತಿಯಲ್ಲಿ ಅನೇಕ ಸಣ್ಣಪುಟ್ಟ ಬದಲಾವಣೆಗಳಿವೆ. ಸತ್ಯೇಂದ್ರ ಚೋಳನು, ತಾನು ವಾರಣಾಶಿಗೆ ಹೋಗಿ ಈಶ್ವರನಿಗೆ ಪವಿತ್ರಗಂಗೋದಕದಿಂದ 'ಅಗ್ಗಣಿಯೆರೆ'ಯಬೇಕೆಂದು ಮಂತ್ರಿಯೊಂದಿಗೆ ಹೇಳಿದಾಗ ಮಂತ್ರಿ, 'ಜೀಯ, ನೀವಿರ್ದಮಂದಿರವಲಾ ಕಾಶಿ, ಆ ತೀರ್ಥವೆಯ್ತಪ್ಪುದು' ಎಂದು ಅರಿಕೆ ಮಾಡಿ

ಕೊಂಡನು. ಧರ್ಮವತಿಗೆ ಏಳ್ನೂರುಗಾವುದ ದೂರದಲ್ಲಿದ್ದ ಭಾಗೀರಥಿಯವರೆಗೆ ಮಕುಟವರ್ಧನರನ್ನು ಸಾಲಾಗಿ ನಿಲ್ಲಿಸಿ ಪರಮಜಲವನ್ನು ಕನಕಘಟಗಳಲ್ಲಿ ತರಿಸಿದನು. ಸತ್ಯೇಂದ್ರಚೋಳನು ಆ ಪಾವನೋದಕದಿಂದ ಶಂಕರನನ್ನು ಪೂಜಿಸಿದನು—ಇದು 'ಭಾವಚಿಂತಾರತ್ನ'ದ ಹೇಳಿಕೆ ಷಡಕ್ಷರಿಯ ಪತಿವ್ರೋಹಿ

... .... ......ಜೀಯ ನಿಮ್ಮೊ
ಳ್ಮೃಡನೆಂದುಂ ನೆಲಸಿ ನಿಂದನದರಿಂ ನೀವಿ
ರ್ದೆಡೆ ಕಾಶಿಯಲ್ತೆ ಬೇರಿ
ನ್ನೆಡೆಯಾಡಲದೇಕೆ ತರಿಪೆನ್ ನದಿಯುದಮಂ ॥

ಎಂದು ನುಡಿಯುವನು. 'ನಿಮ್ಮೊಳ್ಮೃಡನೆಂದುಂನೆಲಸಿರುವನು' ಎಂಬ, ಹೊಸದಾಗಿ ಸೇರಿಸಿರುವ ಮಾತು ಅರ್ಥಪೂರ್ಣವಾಗಿದೆಯಲ್ಲದೆ ಸತ್ಯೇಂದ್ರ ಚೋಳನ ದೃಢನಿಷ್ಠೆಯನ್ನೂ ಸೂಚಿಸುತ್ತದೆ 'ಪೂಜಾಗೃಹಂ ಬೊಕ್ಕು' ಅಗ್ಗಣಿಯೆರೆದದ್ದು ಶಂಕರನಿಗಲ್ಲ, 'ಮಂಗಳಲಿಂಗ'ಕ್ಕೆ.

'ಭಾವ ಚಿಂತಾರತ್ನ 'ದ ಅಮೃತವತಿ ಚಿದ್ಘನ ಶಿವಾಚಾರ್ಯರು ಆಗಮಿಸುವವರೆಗೆ ಪುತ್ರಸಂತಾನದ ಬಯಕೆಯನ್ನು ತಳೆದವಳೇ ಅಲ್ಲ. ಗುರುಸಂದರ್ಶನವಾದ ಮೇಲೆ ಆ ಬಯಕೆ ಒಂದೇ ಪಟ್ಟಿಗೆ ಮೂಡುತ್ತದೆ. ಸತ್ಯೇಂದ್ರಚೋಳನಿಗಂತು ಇದರ ಅರಿವೇ ಇರುವುದಿಲ್ಲ. ರಾಣಿ ಕುಲಗುರುಗಳ ಕೃಪಾಪ್ರಸಾದವನ್ನು ಪಡೆದ ಮೇಲೆಯೂ ಆ ಬಗ್ಗೆ ಅವನಿಗೆ ಸಂತೋಷವೂ ಇಲ್ಲ ವ್ಯಸನವೂ ಇಲ್ಲ; ಗುರುಗಳನ್ನು ಬೀಳ್ಕೊಂಡು ಶಿವಪೂಜೆ, ಶಿವಶರಣಗೋಷ್ಠಿ, 'ಮಾರ್ಕಂಡೇಯ ಪೌರಾಣ ಪ್ರಸಂಗದೊಳಗೋಲಾಡುತ್ತ ರಾಜ್ಯವಾಳುತ್ತಿರ್ದನು.' ಷಡಕ್ಷರಿಯ ಪ್ರತಿಭೆಯ ಕೈವಾಡದಿಂದ ಈ ಸನ್ನಿವೇಶ ಇನ್ನಷ್ಟು ಚಂದಗೊಂಡಿದೆ: ಅಮೃತವತಿ 'ಮೃಕಂಡುಜೋಪಾಖ್ಯಾನ ನ್ಯಸ್ತ ಮೃಕಂಡುಜ ಲೀಲಾವಿಸ್ತಾರಮನೆಲ್ಲಮಂ ಕೇಳ್ದು' ತನಗೆ ತನಯರಿಲ್ಲವಲ್ಲಾ ಎಂದು ಕೊರಗುತ್ತಿರುವಳು. ಸಖಿಯರ ಮೂಲಕ ಈ ಸಂಗತಿ ದೊರೆಗೂ ಗೊತ್ತಾಗುತ್ತದೆ. ಅವನಲ್ಲಿಯೂ ಅದೇ ಬಯಕೆ ಒಡಮೂಡುತ್ತದೆ. ಹೀಗೆ, ಸತ್ಯೇಂದ್ರನು ಮಾರ್ಕಂಡೇಯ ಪುರಾಣಶ್ರವಣ ಮಾಡುತ್ತಿದ್ದನೆಂದು ಹೇಳುವುದರ ಬದಲು ಅಮೃತವತಿ ಆ ಪುರಾಣವನ್ನು ಕೇಳುತ್ತಿದ್ದಳೆಂದೂ ಅದರ ಫಲವಾಗಿ ಆಕೆಯಲ್ಲಿ ಪುತ್ರಸಂತಾನದ ಬಯಕೆ ಅಂಕುರಿಸಿತೆಂದೂ ನಿರೂಪಿಸಿರುವುದು ಷಡಕ್ಷರಿಯ ಜಾಣ್ಮೆಗೆ ಹೆಗ್ಗುರುತು. ಅಮೃತವತಿಯ ಪುತ್ರಮೋಹದ ಬಣ್ಣನೆಯದಂತೂ ಅಸ್ವಾದ್ಯವಶವಾಗಿದೆ. ಈ ಭಾಗ ಭಾವಚಿಂತಾರತ್ನದಲ್ಲಿಲ್ಲವೆಂದೇ ಹೇಳಬಹುದು.

ಷಡಕ್ಷರಿಯ ಗುಹನು ಪೂಜ್ಯ ಪಿತನನ್ನು ಕುರಿತು 'ಗದ್ದುಗೆಯನಿಳಿ ತಂದೆ' ಎನ್ನುವ ಧೂರ್ತನಲ್ಲ. ಈಶ್ವರನು 'ಹದಿನಾರು ಸಾವಿರ ಜನ್ಮದಲ್ಲಿ ಹುಟ್ಟೆಂದು' ತನ್ನ ಮಗನನ್ನೇ ಶಪಿಸುವಷ್ಟು ಕಠಿನ ಹೃದಯನೂ ಅಲ್ಲ. ತಂದೆಯೇ ಮಗನ ಜ್ಞಾನ ಸಂಪತ್ತಿಗೆ ಮೆಚ್ಚಿ ಪ್ರೀತಿಯಿಂದ 'ಚೋಳ ಮಂಡಲದ ಶೈವ ಸಮೂಹಕೆ ಮಂತ್ರ

ದರ್ಥಮಂ ಕುಂದದೆ ಬೋಧಿಸು' ಎಂದು ಬೀಳ್ಕೊಡುತ್ತಾನೆ. ರಾಜಕುಮಾರನ ತಲೆ ಹೊಡೆಯುವ ಸನ್ನಿವೇಶವನ್ನು ಹೇಳುವೆಡೆಯಲ್ಲಿ ತಕ್ಕ ಮಾರ್ಪಾಟುಗಳನ್ನು ಮಾಡಿ ಮೂಲ ಕತೆಯನ್ನು ಇನ್ನಷ್ಟು ಚೆಲುವು ಮಾಡಿದ್ದಾನೆ ಷಡಕ್ಷರಿ. ಸಂದಾಯಿಗೆ ರಾಜ ಕುಮಾರನ ಶಿರಚ್ಛೇದನಮಾಡಬೇಕೆಂದು ಸತ್ಯೇಂದ್ರಚೋಳ ಮಹಾರಾಜನೇ ಅಪ್ಪಣೆ ಮಾಡುತ್ತಾನೆ. ಈ ಸಂದಾಯಿ ರಾಜಕುಮಾರನ ರಟ್ಟೆ ಹಿಡಿದು ರಾಜಬೀದಿಯಲ್ಲಿ ಎಳೆದುಕೊಂಡು ಹೋಗುವವನಲ್ಲ. ಕುಮಾರನ ತಲೆಹೊಡೆದ ಮೇಲೆ ಖಡ್ಗವನ್ನು ಹಿಡಿದು ಬೊಬ್ಬಿರಿಯುವ, ಬಯಲಾಟದ ಭೀಮನೂ ಅಲ್ಲ ರಾಜಾಜ್ಞೆಯನ್ನು ತಲೆಯ ಮೇಲೆ ಹೊತ್ತು ನಡೆಸಲು ಬರುತ್ತಿರುವಾಗ ನಡುದಾರಿಯಲ್ಲಿ, ತಂದೆಯನ್ನು ಕಾಣ ಹೋಗುತ್ತಿರುವ ರಾಜಶೇಖರನನ್ನು ಸಂಧಿಸುತ್ತಾನೆ. ರಾಜಕುಮಾರನೇ ತನ್ನ ಕತ್ತಿಯಿಂದ ಕೊರಳು ಕಡಿದುಕೊಳ್ಳುತ್ತಾನೆ. ಭಾವಚಿಂತಾರತ್ನದಲ್ಲಿ, ಅಮೃತವತಿ ಯೊಬ್ಬಳು ಮಾತ್ರ ಮಿತವಚನನ ತಲೆಗೆ ಪಡಿಕೊಡುವೆನೆಂದು ತನ್ನ ತಲೆಯನ್ನು ಕತ್ತರಿಸಿಕೊಳ್ಳಲು ಅನುವಾಗುತ್ತಾಳೆ. ಇನ್ನುಳಿದ ಸ್ತ್ರೀಯರು ಏನು ಮಾಡಬೇಕು ? ಷಡಕ್ಷರಿಯ ಪ್ರಕಾರ ಮಿತವಚನನ ಮಾತೆ, ಮಡದಿಯರು, ಸರ್ವಮಂಗಳೆ—ಇಷ್ಟು ಜನರೂ ಸಾಯಲು ಸಿದ್ಧರಾಗುವರು. ಇದೀಗ ಪಟ್ಟ ಪರಿಪೂರ್ಣವಾದಂತಾಯಿತು. ರಾಜಶೇಖರ-ಸರ್ವಮಂಗಳೆಯರಲ್ಲಿ ಪರಸ್ಪರ ಅನುರಾಗ ಹುಟ್ಟಿ ಅನಂತರ ಅವರ ಕಲ್ಯಾಣವು ನೆರವೇರಿತೆಂದು ಹೇಳಿ ಮೂಲಕಥೆಯಲ್ಲಿ ಮಾರ್ಪಾಟು ಮಾಡಿರುವು ದೇನೋ ಮೆಚ್ಚತಕ್ಕ ವಿಷಯವೇ. ಆದರೆ ಸಿಂಹಳೇಂದ್ರನು ತನ್ನ ಮಗಳನ್ನು ಚೋಳ ರಾಜಕುಮಾರನಿಗೆ ಕೊಟ್ಟು ಮದುವೆ ಮಾಡಬಾರದೇಕೆ ? ಎಂದು ತನ್ನ ಪತ್ನಿಯೊಡನೆ ಆಲೋಚನೆಮಾಡುತ್ತಿರುವ ಸಮಯದಲ್ಲಿಯೇ ಸರ್ವಮಂಗಳೆಯ ಕೆಳದಿ ಬಂದು ಸರ್ವಮಂಗಳೆ ರಾಜಶೇಖರನ ಕಾದಲೆ ಎಂದು ತಿಳಿಸುವುದು ಈ ವಿಷಯವನ್ನು ಕುರಿತು ಇನ್ನಷ್ಟು ಚಿಂತಿಸುತ್ತಿರುವಾಗಲೇ ರಾಜಶೇಖರನ ಕಡೆಯಿಂದ ಬಂದ ಪತಿಮೋಹಿ ರಾಜ ಶೇಖರನಿಗೆ ಸರ್ವಮಂಗಳೆಯನ್ನು ಕೊಡಬೇಕೆಂದು ಕೇಳುವುದು, ಅನಂತರ ಪತಿಮೋಹಿ ವಿಮಾನದಲ್ಲಿ ಹೋಗುವನಂತೆ, ಪವನ ವೇಗದಿಂದ ಸತ್ಯೇಂದ್ರ ಚೋಳ ಮಹಾರಾಯನ ಸಮ್ಮತಿಯನ್ನು ಪಡೆದುಕೊಂಡು ಬರುವುದು-ಈ ಸಂದರ್ಭ ತೀರ ಕೃತಕವೂ ನೀರಸವೂ ಆಗಿದೆ.

ಷಡಕ್ಷರದೇವ ಅವನ ಕಾಲದ ಜನರ ರುಚಿಗೆ ಅನುಗುಣವಾಗಿ, ಹಿಂದಿನ ಕಬ್ಬ ಗಳಿಗೆ ತನ್ನ ಕೃತಿಯೂ ಸರಿದೂಗಬೇಕೆಂಬ ಹುರುಡಿನಿಂದ, ಈಗಿನವರ ದೃಷ್ಟಿಯಿಂದ ಅನಾವಶ್ಯಕವೆಂದು ತೋರಬಹುದಾದ ಕೆಲವು ವರ್ಣನೆಗಳನ್ನು 'ರಾಜಶೇಖರ'ದಲ್ಲಿ ತುಂಬಿರುವನು. ಚಂಪೂ ಕಾವ್ಯದಲ್ಲಿ ಇಂತಹ ವರ್ಣನೆಗಳು, ಒಂದೂ ಬಿಡದೆ ಬರ ಬೇಕೆಂಬ ನಂಬಿಕೆ ಅಂದಿನವರಿಗಿದ್ದಿತು. ಷಡಕ್ಷರಿಯೂ ಸಂದರ್ಭ ಸನ್ನಿವೇಶಗಳ ಶಿಶು. ಆ ಆ ವರ್ಣನೆಗಳು, ಋತುಗಳ ವರ್ಣನೆಯಿರಲಿ, ಮೃಗಯಾ, ವೇಶ್ಯಾವಾಟಿ, ಯುದ್ಧ, ಯಾವುದರ ವರ್ಣನೆಯೇ ಇರಲಿ ತುಂಬ ರಸವತ್ತಾಗಿರುತ್ತವೆ. ಆದರೆ

ಕತೆಯ ಕಟ್ಟಡದಲ್ಲಿ ಅವಕ್ಕೆ ಸ್ಥಾನವಿಲ್ಲ. ಹದಿನೆಂಟು ವರ್ಣನೆ ಚಂಪೂ ಕಾವ್ಯದಲ್ಲಂತೂ ಇರಲೇಬೇಕೆಂಬ ನಂಬುಗೆ ಪ್ರಾಯಶಃ ಎಲ್ಲ ಚಂಪೂ ಕವಿಗಳಿಗೂ ಇದ್ದುದೆ. ಅವರಲ್ಲಿ ಷಡಕ್ಷರಿಯೊಬ್ಬ; ಅಷ್ಟೆ.

ಆದರೆ ಷಡಕ್ಷರಿಯಂಥ ರಸಿಕನೂ ಉದ್ದಾಮ ಪಂಡಿತನೂ, ಉಭಯ ಭಾಷಾ ವಿಶಾರದನೂ ಅವನ ಕಾಲಕ್ಕೆ ಇನ್ನೊಬ್ಬನಿರಲಿಲ್ಲವೆಂದು ಸದ್ಯಕ್ಕೆ ದೊರಕಿರುವ ಸಾಹಿತ್ಯದ ಆಧಾರದಿಂದ ಹೇಳಬಹುದು. ಇವನು ಪ್ರಾಚೀನ ಕಾವ್ಯಗಳನ್ನು ಓದಿ ರಸಾನುಭವ ಪಡೆದವನು; ಅವುಗಳ ಸಾರಸರ್ವಸ್ವವನ್ನೆಲ್ಲ ಹೀರಿ ಅರಗಿಸಿಕೊಂಡವನು. ಆ ಸುಪ್ರಸಿದ್ಧ ಮಹಾ ಕಾವ್ಯಗಳ ಭಾವ, ಭಾಷೆ ಶೈಲಿಗಳನ್ನು ತನ್ನವನ್ನಾಗಿ ಮಾಡಿಕೊಳ್ಳುವಷ್ಟು ಮನನ ಮಾಡಿದವನು; ಮತ್ತೆ ಮತ್ತೆ ತಿರುಗು ಮೆಲುಕು ಹಾಕಿದವನು. ದೇವಚಂದ್ರನು 'ರಾಜಾವಳೀ ಕತೆ'ಯಲ್ಲಿ ಹೇಳಿರುವಂತೆ 'ಕಾದಂಬರಿ' 'ಲೀಲಾವತಿ'ಗಳಂತು ಇವನಿಗೆ ಕರತಲಾಮಲಕ! ಅದೇ ಶಯ್ಯೆ, ಅದೇ ವಾಗ್ಗುಂಫನ, ಅದೇ ಹೋಲಿಕೆಗಳು, ಅದೇ ಉದ್ಗಾರಗಳು! ಹರಿಹರ ರಾಘವಾಂಕರಂತೂ ಇವನವರ ತಾನೆ. ಕೆಲವು ಉದಾಹರಣೆಗಳನ್ನು ನೋಡಿ : ಹರಿಹರದೇವನ

> ಎರಗದ ಭೂಪರಿಲ್ಲ, ಬೆಸಕೆಯ್ಯದ ರಾಜಕುಮಾರರಿಲ್ಲ ಕೂ
> ರ್ತರಿಯದ ಪೆಣ್ಗಳಿಲ್ಲ ತಲೆವಾಗದ ಚಾಗಿಗಳಿಲ್ಲ ತಳ್ತು ಕು
> ಕ್ಕುರಿಸದ ವೀರರಿಲ್ಲ ನತರಾಗದ ಬಲ್ಲಿದರಿಲ್ಲ ಕೀರ್ತಿಯಿಂ
> ತುರುಗದ ದಿಕ್ತಟಾನಮುಣಮಿಲ್ಲೆನೆ ಬಾಳ್ವನಗಾಧಿ ನಾಯಕಂ
>
> II ೧೦೪ ಗಿರಿಜಾಕಲ್ಯಾಣ

ಈ ಪದ್ಯವು ರಾಜಶೇಖರ ವಿಲಾಸದಲ್ಲಿ

> ಮಣಿಯದ ಮಾನ್ಯರಿಲ್ಲ ತಲೆವಾಗದ ವಾದಿಗಳಿಲ್ಲ ಬಂದು ಸಂ
> ದಣಿಸದ ಸಂತರಿಲ್ಲ ನಡೆನೋಳ್ಪೊಡೆ ಬಾರದ ರಾಜರಿಲ್ಲ ಕೂ
> ರ್ತೆಣಿಸಿದ ಧೀರರಿಲ್ಲ ನುತಿಗೆಯ್ಯದ ಕಬ್ಬಿಗರಿಲ್ಲ ಸಾರಸ
> ದ್ಗುಣಮನೆನಲರ್ಥಾತಳದೊಳೊಪ್ಪಿದನಾ ಚಿಕವೀರ ದೇಶಿಕಂ I ೬೫

ಎಂದು ರೂಪಾಂತರವನ್ನು ಪಡೆದಿದೆಯೆಂದು ಸ್ಥೂಲವಾಗಿ ಹೇಳಬಹುದು. ನಗಾಧಿನಾಯಕನನ್ನು 'ಕೂರ್ತರಿಯದ ಪೆಣ್ಗಳಿಲ್ಲ'–ಈ ಮಾತು ಉಚಿತವೋ ಅನುಚಿತವೋ ಆ ಮಾತು ಬೇರೆ. ಇದೇ ಮಾತು 'ರಾಜಶೇಖರ'ದಲ್ಲಿ ಕೂರ್ತೆಣಿಸದ ಧೀರರಿಲ್ಲ–ಎಂದಾಗಿರುವುದು ಸೂಕ್ತವೆ.

ನಾಗವರ್ಮನ 'ಕಾದಂಬರಿ'ಯಲ್ಲಿ, ಶೂದ್ರಕನೃಪತಿಯ ದಿನಚರಿಯನ್ನು ಕುರಿತು ಹೇಳುವ ವೃತ್ತವಿದು :

> ಅದೊರ್ಮೆ ನವಕಾವ್ಯ ಬಂಧರಚನಾ ವಿಶೇಷಂಗಳಿಂ
> ದದೊರ್ಮೆ ವರವೀರ ವಿಶ್ರುತ ಕಥಾ ಪುರಾಣಂಗಳಿಂ
> ದದೊರ್ಮೆ ಮುನಿಮಂಡಳೀಪದ ಪಯೋಜ ಶುಶ್ರೂಷೆಯಿಂ
> ವಿದಗ್ಧಜನ ವಲ್ಲಭಂ ಕಳೆವನಿಂತು ಪೊಳ್ತಂ ನೃಪಂ
>
> I–೧೧ ಕಾ ಸಂ.

ಷಡಕ್ಷರಿಯ ರಚನೆಯಿದು :

ಶಿವಲಿಂಗಾಂಘ್ರಿ ಸಮರ್ಚನೈಕ ಸುಖದಿಂದೋರೊರ್ವರ್ ವಿಖ್ಯಾತ ಶಾಂ
ಭವ ಲೀಲಾಕಥನ ಪ್ರಸಂಗರಸದಿಂದೋರೊರ್ವರ್ ಮಾಹೇಶ್ವರ
ಪ್ರವಿರಾಜತ್ಪದ ಪದ್ಮ ಸೇವನದಿನಂದೋರೊರ್ವರ್ ಸತ್ಯೇಂದ್ರ ಭೂ
ಧವ ಬೃಂದಾರಕನಿಂತುಪೊಳ್ತುಗಳೆವಂ ಸನ್ಮಾರ್ಗ ಸಾರೋದಯಂ

ವಾಕ್ಯ ಬಂಧ ಒಂದನ್ನೊಂದು ಹೋಲುತ್ತಿವೆ. ಶೂದ್ರಕ ಸತ್ಯೇಂದ್ರ ಇಬ್ಬರೂ ಹೊತ್ತು ಗಳೆದವರೇ-ಎರಡು ಪದ್ಯಗಳಲ್ಲಿಯೂ ಒರ್ವರ್ 'ಮೂಮೆ'ಯಾಗಿದೆ. ಇದಿಷ್ಟೂ ಎರಡು ಪದ್ಯಗಳಿಗೂ ಇರುವ ಸಾಮ್ಯ. ಷಡಕ್ಷರಿ ನಾಗವರ್ಮನನ್ನು ಭಾವ ಬಂಧಗಳಲ್ಲಿ ಅನು ಕರಿಸಿದ್ದಾನೆ, ತಾತ್ಪರ್ಯದಲ್ಲಲ್ಲ. 'ನವಕಾವ್ಯ ಬಂಧ ರಚನಾವಿಶೇಷ'ವೆಲ್ಲಿ 'ಶಿವ ಲಿಂಗಾಂಘ್ರಿ ಸಮರ್ಚನೈಕಸುಖ'ವೆಲ್ಲಿ? 'ವರವೀರ ವಿಶ್ರುತ ಕಥಾ ಪುರಾಣಗ'ಳೆಲ್ಲಿ 'ವಿಖ್ಯಾತ ಶಾಂಭವಲೀಲಾ ಕಥನ ಪ್ರಸಂಗರಸ'ವೆಲ್ಲಿ? 'ಮುನಿ ಮಂಡಳೀ ಪದ ಪಯೋಜ ಶುಶ್ರೂಷೆ' 'ಮಾಹೇಶ್ವರ ಪ್ರವಿರಾಜತ್ಪದಪದ್ಮ ಸೇವನ'–ಎರಡೂ ಸಮನೆ, ನಮ್ಮ ದೃಷ್ಟಿಯಿಂದ. ಇಲ್ಲಿ ಷಡಕ್ಷರಿಯ ವೈಶಿಷ್ಟ್ಯ ಎದ್ದು ಕಾಣುತ್ತದೆ.

ಹೀಗೆಯೇ, ಹರಿಶ್ಚಂದ್ರ ಕಾವ್ಯದ 'ಚಂದ್ರಮತೀ ಪ್ರಲಾಪ'ದ ಕೆಲವು ಭಾಗಗಳು 'ತಿರುಕೊಳವಿನಾಚಿ ಪ್ರಲಾಪ'ದಲ್ಲಿಯೂ ನೇಮಿಚಂದ್ರನ 'ಲೀಲಾವತಿ'ಯ ಶೃಂಗಾರವರ್ಣನಾ ಭಾಗಗಳು ರಾಜಶೇಖರ ವಿಲಾಸದಲ್ಲಿಯೂ ಮತ್ತೆ ಮೈದಳೆದಿವೆ ಯೆಂದು ಮೇಲು ನೋಟಕ್ಕೆ ಕಾಣಬಹುದು. ಒಳಹೊಕ್ಕು ನೋಡಿದರೆ ಅಲ್ಲಿಯೂ 'ಷಡಕ್ಷರಿ' ಯನ್ನು ಕಾಣುವುದು ಸಾಧ್ಯ.

ಕೆಲವು ವೇಳೆ ಷಡಕ್ಷರಿ ಹಿಂದಿನ ಮಹಾಕವಿಗಳು ಹೇಳಿರುವುದನ್ನು ಬಳಸಿ ಕೊಂಡು ಹೊಸ ಪದ್ಯವನ್ನು ರಚಿಸಹೋಗಿ ವಿಫಲನಾಗಿರುವುದೂ ಉಂಟು. ರನ್ನ ಮಹಾಕವಿಯ 'ಗದಾಯುದ್ಧ'ದಲ್ಲಿ ಬರುವ ಒಂದು ಪ್ರಸಂಗ: ದುರ್ಯೋಧನನು ಮಕ್ಕಳನ್ನೂ ತಮ್ಮಂದಿರನ್ನೂ ಬಂಧು ಬಾಂಧವರನ್ನೂ ರಣದುರ್ಗಿಗೆ ಬಲಿಕೊಟ್ಟು, ತಾನೊಬ್ಬನೆ ಇನ್ನೂ ಉಳಿದು, ಸಮರಭೂಮಿಯಲ್ಲಿ ತಿರುಗಾಡುತ್ತಿರುತ್ತಾನೆ. ತಾಯಿತಂದೆ ಇಬ್ಬರೂ ತನ್ನಲ್ಲಿಗೆ ಬರುತ್ತಿರುವರೆಂಬ ಸಂಗತಿ ಗೊತ್ತಾಗುತ್ತದೆ. ಆಗ,

ಕಂದ ನಿಜಾನುಜರೆಲ್ಲಿದ
ರೆಂದೆನ್ನಂ ಜನನಿ ಬಂದು ಬೆಸಗೊಂಡೊಡದೇ
ನೆಂದು ಮರುಮಾತುಗುಡುವೆಂ
ಕೊಂದರ್ ಕೌಂತೇಯರೆಂದು ಬಿನ್ನೈಸುವನೋ III ೭೬

ಎಂದು ಕೊರಗುತ್ತಾನೆ. ಹಡೆದ ತಾಯಿಯೇ ಬಂದು ಮಾತೃವಾತ್ಸಲ್ಯ ತುಂಬಿದ ದನಿಯಲ್ಲಿ, ಮಾತೃವಾತ್ಸಲ್ಯವೇ ತುಂಬಿ ತೊರೆಯುತ್ತಿರುವ 'ಕಂದ' ಎಂಬ ಇನಿವಾತಿ ನಿಂದ ಸಂಬೋಧಿಸಿ 'ನಿನ್ನ ತಮ್ಮಂದಿರೆಲ್ಲಿ' ಎಂದು ಎಲ್ಲಿ ಕೇಳಿಯಾಳೋ? ಈ ಬೆದರಿಕೆ ದುರ್ಯೋಧನನಿಗೆ. 'ಕೊಂದರ್ ಕೌಂತೇಯರ್ ಎಂದು ಬಿನ್ನೈಸುವೆನೋ'

—ಈ ಮಾತೂ ಅಷ್ಟೆ. ಓರಗಿತ್ತಿಯಾದ ಕುಂತಿಯ ಮಕ್ಕಳಿಂದ ತನ್ನ ಮಕ್ಕಳು ಹತರಾದರೆಂಬ ನಿಜ ಸಂಗತಿಯ ಅರಿವಾದರೆ ತಾಯಿಯ ಅಳಲು ಇನ್ನೆಷ್ಟು ಮಡಿ ಹೆಚ್ಚಾಗುವುದೋ ಎಂಬ ಕಡು ಕೊರಗು. ಈ ಪದ್ಯವನ್ನು ಕುರಿತು ಧ್ಯಾನಿಸಿದಷ್ಟು ಉತ್ತಮೋತ್ತಮ ರಸಾನುಭವ ಆಗುವುದು.

ಇದೇ ಕಂದ ರಾಜಶೇಖರ ವಿಲಾಸದಲ್ಲಿ ಮತ್ತೆ ಕಾಣಿಸಿಕೊಂಡಿದೆ. ತಿರುಕೊಳವಿನಾಚಿ ಕುದುರೆಯ ಕಾಲಿಗೆ ಸಿಕ್ಕಿ ಮೃತಿಹೊಂದಿದ ತನ್ನ ಕುಮಾರನ ಶವವನ್ನು ಕಂಡು ಶೋಕದಿಂದ ಅಳಲುತ್ತ,

ಸರಿವರೆಯದ ಮಕ್ಕಳ್ ಶಂ
ಕರನೆಲ್ಲಿದನಾಡಲೆಂದು ಬೆಸಗೊಳಲೇನೆಂ
ದಿರದೆ ಮರುಮಾತುಗೊಟ್ಟಪೆ
ನರಸನ ಹಯದಿಂದೆ ಮಡಿದನೆಂಬೆನೆ ಮಗನೇ XIII ೧೧೫

ಎಂದು ಪ್ರಲಾಪಿಸುತ್ತಾಳೆ ತಾಯಿಯೇನೋ ಇದ್ದ ಒಬ್ಬ ಮಗನೂ ದುರ್ಮರಣಕ್ಕೀಡಾದನಲ್ಲಾ ಎಂದು ದುಃಖವಿಹ್ವಲಳಾಗುವುದು ಸಹಜ. ಅಷ್ಟು ಹೊತ್ತಿಗಾಗಲೇ ಆರು ಮಕ್ಕಳನ್ನು ಮಣ್ಣುಮಾಡಿ ಬಂದು ಕಡುಬಡವೆಯಾದ ವಿಧವೆ ಆಕೆ. ಶಂಕರ ಬಾಲಕನ ಓರಗೆಯ ಮಕ್ಕಳು ತಮ್ಮ ಒಡನಾಡಿಯಾದ ಶಂಕರನು ಹೀಗೆ ಸತ್ತು ಹೋದನಲ್ಲಾ ಎಂದು ಒಂದೆರಡುಗಳಿಗೆ ಕಣ್ಣೀರಿಟ್ಟು ಅನಂತರ ತಮ್ಮ ಆಟಪಾಟಗಳಿಗೆ ಹೋಗಬಹುದು ಅರಸನ ಹಯಕ್ಕೂ ಆ 'ಸರಿವರೆಯದ' ಮಕ್ಕಳಿಗೂ—ಬಹುಶಃ ಗಾಂಧಾರಿ ಕುಂತಿಯರಿಗಿದ್ದಂತೆ—ದ್ವೇಷವಿಲ್ಲ, ಮಾತ್ಸರ್ಯವಿಲ್ಲ. ಈ 'ಕಂದ' ವನ್ನು ಎಷ್ಟು ಹಿಂಡಿದರೂ ರನ್ನನ ಕಂದದ ಅರೆಪಾಲು ರಸವೂ ದೊರೆಯಲಾರದು. ಆದುದರಿಂದ ಷಡಕ್ಷರಿ ಇಲ್ಲಿ ಜಯಶೀಲನಾಗಲಿಲ್ಲ.

ನೇಮಿಚಂದ್ರ 'ಲೀಲಾವತಿ'ಯಲ್ಲಿ ಬೆಳುದಿಂಗಳ ಬೆಳಕಿನಲ್ಲಿ ಉಯ್ಯಾಲೆಯಾಡುತ್ತಿರುವ ಪಣ್ಯಾಂಗನೆಯನ್ನು ಹೀಗೆ ವರ್ಣಿಸಿದ್ದಾನೆ :

ನೆರೆದಳಿ ಪಾರುವಂತಿರೆ ಕುರುಳ್, ಮೊಲೆಗಳ್ ಪೊಣರ್ವಕ್ಕಿ ಪಾರುವಂ
ತಿರೆ, ಪೊಳೆವಕ್ಷಿಗಳ್ ಚಳಚಕೋರಯುಗಂಗಳೆ ತಳ್ತು ಪಾರುವಂ
ತಿರೆ, ಶಿಖಿ ಪಾರುವಂತಿರೆ ಬಳಲ್ಮುಡಿ, ತಾನಲರಂಬು ಪಾರುವಂ
ತಿರೆ ಮಿಗೆ ಕೀರಿ ಪಾರಿ ಗಗನೇಚರಿಯಂತೊಲೆದುಯ್ಯಲಾಡಿದಳ್

ಷಡಕ್ಷರಿ ಈ ಪದ್ಯವನ್ನು ನೋಡಿರುವನೆಂಬುದಂತು ನಿರ್ವಿವಾದ. ಆದರೆ ಇವನ ಕಲಾಚಾತುರ್ಯದ ಫಲವಾಗಿ ಹೊಸತೊಂದು ಸುಂದರ ಚಿತ್ರವೇ ಮೂಡಿ ಬಂದಿದೆ. 'ನೇಮಿಚಂದ್ರ'ದಲ್ಲಿ ಆ ಚೆಲುವೆ 'ಅಲರಂಬು ಪಾರುವಂತೆ ಪಾರುವ ಗಗನೇಚರಿ'—ಇಷ್ಟು ಬಿಟ್ಟು ಉಳಿದುದೆಲ್ಲ ಕವಿಸಮಯಮಯ. ಷಡಕ್ಷರ ದೇವ ಆ ಲಾವಣ್ಯವತಿಯಿದ್ದ ಸನ್ನಿವೇಶ, ಏರಿದ ಉಯ್ಯಾಲೆ, ಚಂದ್ರಿಕೆಗೂ ಆಕೆಗೂ ಇರುವ ಸಂಬಂಧ ಎಲ್ಲವನ್ನು ಬಿಡಿಸಿ ಬಿಡಿಸಿ ಹೇಳಿ ತನ್ನ ಕಲಾಚಾತುರ್ಯವನ್ನು ತೋರಿದ್ದಾನೆ.

ವಚನ : ಮತ್ತಮೊರ್ವಳಪೂರ್ವ ಸೌಂದರ್ಯವತಿ ತನ್ನ ಪೊನ್ನ ಕನ್ನೆ ಮಾಡದ ಕೆಲದ ರಾಜಾಂಗಣದ ಪಚ್ಚೆಯ ಕುಟ್ಟಿಮಸ್ಥಳದೊಳಳವಟ್ಟರನ್ನದುಯ್ಯಲನೇರಿ ಚಂದ್ರಿಕಾಸಾಂದ್ರಪೀಯೂಷವಾರ್ಧಿಯೊಳೋಲಾಡುತೊಗೆತರ್ಪ ಕಮಳೆಯಂತೆ ಕಮನೀಯತೆಯನಪ್ಪುಕೈದು,

ಗಗನ ಸರೋಜಮಿಲ್ಲೆನಿಪ ವಾಕ್ಯಮನಿಲ್ಲೆನಿಪಂತೆ ನುಣ್ಮೊಗಂ
ಬಗೆಗೊಳೆ ಬಾನೊಳಾಗಳದರೊಳ್ಮರಿದುಂಬಿಗಳಾಡುವಂತೆ ಮೆ
ಲ್ಲಗೆ ನೆಗೆದಾಡೆ ಮುಂಗುರುಳ ಸಾಲ್ಗಿರಿಗಳ್ಹರಿಯೊಳ್ಪಳಂಚಲೆಂ
ದಗಿಯದೆ ಪಾರುವಂತೆಸೆಯೆ ಪೆರ್ಮೊಲೆಗಳ್ ಪದೆದುಯ್ಯಲಾಡಿದಳ್

ಹೊನ್ನಿನ ಕನ್ನೆಮಾಡ, ಪಚ್ಚೆಯ ಕುಟ್ಟಿಮ ಸ್ಥಳ, ಅಲ್ಲಿ ರನ್ನದುಯ್ಯಾಲೆ. ಹಾಲ್ಗಡಲಿನಿಂದ ಒಗೆತಂದ ಲಕ್ಷ್ಮಿಯಂತೆ ಕಮನೀಯಳು ಆ ವಿಲಾಸವತಿ–ಈ ಸುಂದರ ಚೌಕಟ್ಟು ಲೀಲಾವತಿಯಲ್ಲಿಲ್ಲ. 'ಲೀಲಾವತಿ'ಯ 'ಚಳಚಕೋರ ಯುಗ', 'ಶಿಖಿ' –ಈ ಎರಡು 'ರಾಜಶೇಖರ'ದಲ್ಲಿಲ್ಲ. ಆದರೆ ನೇಮಿಚಂದ್ರ 'ನುಣ್ಮೊಗ'ವನ್ನು ಮರೆತ. ನೇಮಿಚಂದ್ರನ ಪದ್ಯದಲ್ಲಿ ಆ ಅಂಗಾಂಗಗಳು ಬೇರೆ ಬೇರೆಯೋ ಎಂಬಂತೆ ವರ್ಣಿಸಲ್ಪಟ್ಟಿವೆ. ಒಂದು ಇನ್ನೊಂದರ ಚೆಲುವನ್ನು ಇನ್ನಷ್ಟು ಹೆಚ್ಚಿಸುತ್ತಿತ್ತು ಎಂಬ ಕಲ್ಪನೆ ಅಲ್ಲಿಲ್ಲ. ಷಡಕ್ಷರಿ 'ಅಲರಂಬು ಪಾರುವಂತಿರೆ ಗಗನೇಚರಿಯಂತೊಲೆದುಯ್ಯಾಲಾಡಿದಳ್'- ಎಂಬ ಹೇಳಿಕೆಯನ್ನೇ ಬಳಸಿಕೊಂಡು, ಮುಖವನ್ನು ಸರೋಜಕ್ಕೆ ಹೋಲಿಸಿ, ಆ ಸರೋಜವು ಸಾಮಾನ್ಯ ಸರೋಜವಲ್ಲ, ಗಗನ ಸರೋಜ ಎಂದು ಹೇಳಿ 'ಗಗನ ಸರೋಜ ಇಲ್ಲ ಎಂಬ ವಾಕ್ಯವನ್ನು ಸುಳ್ಳುಮಾಡುವಂತೆ' ಎಂದು ಉತ್ಪ್ರೇಕ್ಷಿಸಿದ್ದಾನೆ. ಮುಂಗುರುಳ ಸಾಲು ಮರಿದುಂಬಿಗಳಂತೆ ಆ 'ಗಗನ ಸರೋಜ'ದಲ್ಲಿ ಆಡುತ್ತಿದ್ದುವಂತೆ. 'ಮೊಲೆಗಳ್ ಪೂರ್ಣವರ್ಕ್ಕೆ ಪಾರುವಂತಿರೆ'–ಎಂಬುದು 'ಗಿರಿಗಳ್ಹರಿಯೊಳ್ ಪಳಂಚಲೆಂದಗಿಯದೆ ಪಾರುವಂತೆಸೆಯೆ ಪೆರ್ಮೊಲೆಗಳ್' ಎಂದು ಮಾರ್ಪಾಡಾಗಿದೆ. ಇಷ್ಟೆಲ್ಲಾ ಮಾಡುವುದಕ್ಕೆ ಲೆಕ್ಕಾಚಾರದ ಸೂಕ್ಷ್ಮಮತಿಯಷ್ಟೇ ಸಾಲದು; ಅಸಾಧಾರಣವಾದ ಪ್ರತಿಭೆಯೇ ಬೇಕು. ಲೆಕ್ಕಾಚಾರ ಹಾಕುತ್ತ ಯೋಚನೆ ಮಾಡುತ್ತ ಬರೆಯುವುದಾದರೆ ಒಂದೊಂದು ಪದ್ಯಕ್ಕೆ ಒಂದೊಂದು ದಿನವಾದರೂ ಸಾಕಾಗಲಾರದು. ಷಡಕ್ಷರಿ ಈ ಕೃತಿಯನ್ನು ಒಂದೇ ಒಂದು ವರ್ಷದಲ್ಲಿ ಬರೆದು ಮುಗಿಸಿದ್ದಾನೆ.

ಕವಿತಾವೇಶಕ್ಕಿಂತ ಹೆಚ್ಚಾಗಿ ಅನನ್ಯ ಸಾಧಾರಣವಾದ ಬುದ್ಧಿಶಕ್ತಿಯೂ ಕಲ್ಪನಾ ಚಾತುರ್ಯವೂ ಕಂಡುಬರುವ ಕೆಲವು ಪ್ರಸಂಗಗಳನ್ನಿಲ್ಲಿ ಉಲ್ಲೇಖಿಸಬಹುದು.

ತುದಿಗೇರಿದೊಂದು ಕೀರಂ ಮರಕತಕಲಶಂ ಸತ್ಫಲಂ ದರ್ಪಣಂ ಪ
ರ್ಬಿದ ಮಲ್ಲೀವಲ್ಲಿಯೇ ಬಲ್ಪೊರಜೆ ನಿಚಿತಭೃಂಗವ್ರಜಂ ನೀಲಶೋಭಾ
ಸ್ಪದಮಾಲ್ಯಂ ಪುಷ್ಪಗುಚ್ಛಂ ಚಮರಮುರುಪಟಂ ಪಲ್ಲವಂ ಕೋಕಿಲವ್ರಾ
ತದ ನಾದಂ ವಾದ್ಯಮಾಗಲ್ಕುಸುಮಶರನ ತೇರಂತೆ ಚೆಲ್ವಾಯ್ತು ಚೂತಂ

ಈ ಪದ್ಯ ಬರೆಯುವುದಕ್ಕೆ ಷಡಕ್ಷರಿಯೆ ಬರಬೇಕೆ? ಕಮಳಾಪ್ತನ ಕದಿರೂ ಕತ್ತಲೆಯೂ ಕಾಳಗವಾಡಿ ಮಡಿದುವಂತೆ; ಮತ್ತೆ ಒಂದು ಸಂಪಗೆಯಾಗಿಯೂ ಇನ್ನೊಂದು ದುಂಬಿಯಾಗಿಯೂ ಹುಟ್ಟಿದುವಂತೆ; ಆದುದರಿಂದಲೇ ಅವೆರಡಕ್ಕೂ ಹಗೆತನವಂತೆ. ಸುಜನರು ಬದುಕಿದ್ದಾಗಲೂ ದುರ್ಜನರೂ ಸತ್ತಾಗಲೂ ಜನರು ಸಂತೋಷಪಡುವರು; ಸುಜನರು ಸತ್ತಾಗಲೂ ದುರ್ಜನರು ಬದುಕಿವಾಗಲೂ ಜನರು ಮರುಗುವರು; 'ಕ್ಷಿತಿಯೊಳ್ಪರಿಕಿಪೊಡಿರ್ವರುಂ ಸರಿಯಲ್ತೆ'. ಜಲಧಿ ತನ್ನಲ್ಲಿದ್ದ ಜಲವನ್ನು ಮೇಘಮಂಡಲಕ್ಕೆ ಕೊಟ್ಟಿತು; ಇತ್ತ, ನದಿಯ ನೀರು ಬಂದು ತನ್ನನ್ನು ಸೇರಿತು; 'ಕೊಟ್ಟಂಗೆ ಬಡತನಂ ಬಂದಪುದೆ?' ಇಂದ್ರನು ಅರಿಗಿರಿಯನ್ನು ತರಲು ಮೇಘವನ್ನು ಸಮುದ್ರದ ಬಳಿ ಕಳುಹಿಸಿದನು; ಸಮುದ್ರ 'ಅರಿಗಿರಿ'ಯನ್ನು ಬಿಟ್ಟುಕೊಡುವುದರ ಬದಲು ತನ್ನ ಜೀವನ(ನೀರು)ವನ್ನೇ ಬಿಟ್ಟುಕೊಟ್ಟಿತು; 'ಸತ್ತ್ವಶಾಲಿ ಪಗೆಗೇಂ ಮರೆವೊಕ್ಕನನೀಯಲಾರ್ಪನೆ?'—ಇವೆಲ್ಲ ಉಕ್ತಿಚಮತ್ಕಾರಗಳು. ಬೆಟ್ಟದ ನೆಲ್ಲಿಕಾಯಿಗೂ ಸಮುದ್ರದ ಉಪ್ಪಿಗೂ ಗಂಟುಹಾಕುವ ಮಾತುಗಳು. ಇಂಥವುಗಳಲ್ಲದೆ, ಶ್ಲೇಷೆ, ವಿರೋಧಾಭಾಸ, ಸಂದೇಹಾಲಂಕಾರ ಮುಂತಾದ ಅಲಂಕಾರಗಳು ತುಟಿಕೊಡಿಸದೆ ಅನ್ನಬಹುದಾದ ಪದ್ಯಗಳು, 'ಮುಕ್ತಪದಗ್ರಹಣ' ಓದಿದರೆ ಕಿವಿಯೊಳಗೆ 'ಕೂರ್ದಸಿಯ ಬಡಿದಂತೆ' ಅನುಭವವಾಗುವ ಅನುಪ್ರಾಸಾದಿ ಶಬ್ದಾಲಂಕಾರಗಳು—ಇವಕ್ಕೂ ರಾಜಶೇಖರ ವಿಲಾಸದಲ್ಲಿ ಕೊರತೆಯಿಲ್ಲ. ಹಾಗಾದರೆ ಈ ಕವಿಯಲ್ಲಿ ವ್ಯಕ್ತಿತ್ವವೇ ಇಲ್ಲವೆ? ಸ್ವೋಪಜ್ಞತೆ ಶೂನ್ಯವೆ? ಎಂಬ ಪ್ರಶ್ನೆ ಏಳುವುದು ಸಹಜ. ಆದರೆ ಅಷ್ಟು ನಿರಾಶರಾಗಬೇಕಿಲ್ಲ.

ನಮ್ಮ ನಾಡಿನ ಜೀವನಾಡಿಯಿರುವ ಕಾವೇರಿಯ ಬಣ್ಣನೆಯನ್ನು ನೋಡಿ:

> ಶರನಿಧಿಯೊಳೊಗೆದ ವಿಷಮುಂ
> ಧರಿಯಿಸಿ ಸುರರಂ ಸಮಂತು ಪೊರೆದಭವಂಗೀ
> ಧರೆ ಪಾಸಿದ ನಡೆಮುಡಿಯೆನೆ
> ಕರಮೆಸೆದುದು ವಿಮುಳಗುಣದಿನಾ ನದಿ ಪದಪಿಂ

ತುಂಬಿ ತೊರೆಯುತ್ತ ಹರಿಯುತ್ತಿರುವ ಕಾವೇರಿಯ ಪ್ರವಾಹವನ್ನು ಎತ್ತರವಾದ ಸ್ಥಳದಲ್ಲಿ ನಿಂತು ನೋಡಿದರೆ, ಅದುವೆ ಬಿಸಿಲು ಕಾಲದಲ್ಲಿ ನೋಡಿದರೆ, ಈ ನದಿಯ ಸುರಮ್ಯ ಸೌಂದರ್ಯ ತಾನೆತಾನಾಗಿ ವ್ಯಕ್ತವಾಗುವುದು. ಈ ನದಿ ಕಾಮಧೇನುವಂತೆ!

> ಚಾರುಪಯೋಧರೆ ಮಹಿಮಾ
> ಧಾರೆ ಸದಾನಿಮಿಷಸೇವ್ಯರಸಯುತೆ ವರಶೃಂ
> ಗಾರಾಜಿತೆಯೆನಿಸುವಕಾ
> ವೇರಿಧರಾಕಾಮಧೇನುವೆನಿಪುದು ಪುಸಿಯೇಂ?

ಪುಸಿಯೆ! ಪುಸಿಯಲ್ಲ. ಈ ಮಾತು ಅಂದು ಕವಿಕಲ್ಪನೆಯಾಗಿತ್ತು. ಆ ಕವಿಯ ಭವಿಷ್ಯವಾಣಿಯೋ ಎಂಬಂತೆ, ಇಂದು 'ಕಾವೇರಿ, ಧರಾಕಾಮಧೇನು'ವೇ ಆಗಿರುವುದು.

ಬೆಳೆದು ಬಂದ ಬತ್ತದ ಗದ್ದೆಗಳನ್ನು, ಧರಾಲಲನೆ ವಿಲಾಸದಿಂದ ತಳೆದ ಪಚ್ಚೆಯ ಸೇಲೆಯನ್ನು ಕುರಿತು :

ತೂಗುತೆ ತೊನೆಯುತೆ ಬಳ್ಕುತೆ
ಬಾಗುತೆ ಕಂಪಿಡುತೆ ಕನಕರುಚಿದಾಳುತ್ತುಂ
ರಾಗಿಸುತೆ ರಂಜಿಸುತೆ ಸೊಂ
ಪಾಗಿರ್ದುವು ಕಣ್ಗೆ ಗಂಧಶಾಲಿ ವನಂಗಳ್ II ೧೨

ಪ್ರಶಾಂತ ಸರೋವರದ ಮೇಲೆ ಸುಳಿಗಾಳಿ ಬೀಸಿದಾಗ ನುಣ್ಣನೆಯ ಸಣ್ಣ ಸಣ್ಣ ಅಲೆಗಳು ಎದ್ದು ಬಿದ್ದು, ಸರಸ್ಸು ಇನ್ನಷ್ಟು ಚೆಲುವಾಗಿ ಕಾಣುವಂತೆ ಬಾಗುತ್ತ ಬಳುಕುತ್ತ ಸೆಡೆಯುತ್ತ ಸಸಿಯುತ್ತ ತೂಗಿ ತೊನೆಯುವ ಹೊಂಬಣ್ಣದ ಬತ್ತದ ಬೆಳಸು, 'ರತ್ನ ಚೂಡಿ' 'ಬಂಗಾರು ಸಣ್ಣ'! ಅದೇ ಬಾಗು ಬಳಕುಗಳನ್ನೇ ಸೂಚಿಸುವ ಪದ ಜೋಡಣೆ, ಗುರು ಲಘುನ್ಯಾಸವನ್ನು ಕಾಣಬಹುದು.

ಸೂರ್ಯಾಸ್ತಮಯಕ್ಕೆ,

ಶರಧಿಗತ ಪ್ರತಿಬಿಂಬಂ
ಸರಿಸದೊಳಿರೆ ಬದ್ಧರಶ್ಮಿಯುರುತರಬಿಂಬಂ
ಹರನಾಟ್ಯಕೆ ಕಾಲನಟಂ
ಕರವೆತ್ತಿದ ಪೊನ್ನತಾಳವೆನೆ ಕಣ್ಗೊಳಿಕುಂ XI ೫

ತಾಂಡವ ನೃತ್ಯ, ಆ ನೃತ್ಯಕ್ಕೆ ಕಾಲನಟ ತಾಳಗಳೆರಡನ್ನು ಹಿಡಿದಿದ್ದಾನೆ. ಉಜ್ವಲವಾಗಿ ಬೆಳಗುತ್ತಿರುವ ಸಂಧ್ಯಾಸೂರ್ಯ, ಕಡಲಿನಲ್ಲಿ ಪಡಿಮೂಡಿರುವ ಇನ್ನೊಬ್ಬ ಸೂರ್ಯನಾರಾಯಣ ಇವೆರಡೂ ಎರಡು ತಾಳಗಳು. ಎಂತಹ ಭವ್ಯ ಕಲ್ಪನೆ!

ಪತಿದೇವನೆಡೆಗೆ ಸಾಲಂಕೃತಳಾಗಿ ಬಂದಿರುವ ಅಮೃತವತೀ ದೇವಿ :

ವಿಳಸತ್ಕರ್ಪೂರ ಸಮ್ಮಿಶ್ರಿತ ಮಳಯಜಲಿಪ್ತಾಂಗಿ ಮುಕ್ತಾವಳೀ ಮಂ
ಜುಳ ಭೂಷಾಭೂಷ್ಯೆ ಮಲ್ಲೀಕುಸುಮಮಿಳಿತ ಧಮ್ಮಿಲ್ಲೆ ಶುಭ್ರಾಂಬರ ಶ್ರೀ
ಕಲಿತಶ್ರೋಣೀತಟ ಪ್ರೋಜ್ವಳೆ ಭಸಿತಲಲಾಮಾಭಿರಾಮಾರ್ಧ ಚಂದ್ರಾ
ಭ ಲಲಾಟಸ್ಥಾನೆ ಚಂದ್ರೋಪಳದ ಪರಿಜಿದೆಂಬಂತೆ ಕಣ್ಗೊಪ್ಪುತಿರ್ದಳ್
IV ೧೨

ಸುಗಂಧ ಸಲಿಲದಲ್ಲಿ ಮಂಗಳ ಮಜ್ಜನಮಾಡಿ ಧವಳಾಂಬರವನ್ನು ಧರಿಸಿರುವಳು; 'ವಿಳಸತ್ ಕರ್ಪೂರ ಮಿಶ್ರಿತ ಮಳಯಜ'ವನ್ನು ಲೇಪಿಸಿಕೊಂಡಿರುವಳು ; ಬೆಳ್ಳಂ ಬೆಳ್ಳನೆಯ ಮುಕ್ತಾವಳಿಗಳ ಮಂಜುಳ ಭೂಷಣಗಳು, ತೋರದುರುಬಿಗೆ ಮಲ್ಲಿಗೆಯ ಹೂದಂಡೆ, ಹಣೆಯಲ್ಲಿ ವಿಭೂತಿ ಅರ್ಧಚಂದ್ರಾಕಾರದಲ್ಲಿ ಕಂಗೊಳಿಸುತ್ತಿದೆ. ಆಕೆ ಶುಭ್ರಶ್ವೇತ ವರ್ಣದ ಚಂದ್ರಶಿಲೆಯ ಬೊಂಬೆಯೆ!

ಕರುಣಾರಸವೇ ಮೈವೆತ್ತಂತಿದ್ದ ತಿರುಕೊಳವಿನಾಚಿ, ಮಡಿಲಲ್ಲಿ ಮಗನ ರುಂಡವನ್ನಿಟ್ಟುಕೊಂಡು ಸತ್ಯೇಂದ್ರ ಮಹಾರಾಜನಲ್ಲಿ ನ್ಯಾಯಪರಿಪಾಲನೆಗಾಗಿ ಮೊರೆಯಿಡುತ್ತಿದ್ದಾಳೆ :

ಕರತಳದಲ್ಲಿ ತಾಳ್ದತಲೆ ಸೋಗಿಲೊಳಿಟ್ಟ ಕಬಂಧಮೆತ್ತಲುಂ
ಪರೆದಳಕಾಳಿ ಧೂಳಿಪುದಿದಂಗ ಮಡಂಗಿದ ಬಲ್ಪು ನೆತ್ತರೊಳ್
ಪೊರೆದ ಸೆರಂಗು ಪಾಯ್ದುಗುವ ಕಣ್ಬನಿ ಬತ್ತುವ ಬಾಯ್ ಪೊದಳ್ದ ಸುಯ್
ಕೊರಗಿದ ವಕ್ತ್ರಮುಚ್ಚಳಿತ ಹಾರಮುಮೊಪ್ಪಿರೆ ಬಂದಳಾರ್ತದಿಂ

ಸಹಜ ಸುಂದರ ಶಬ್ದಚಿತ್ರ.

ಶೃಂಗಾರರಸನಿರೂಪಣೆಯಲ್ಲಿ ಷಡಕ್ಷರಿಯನ್ನು ಮೀರಿಸಬಲ್ಲ ಕನ್ನಡಕವಿಗಳು ಕೇವಲ ಒಬ್ಬಿಬ್ಬರು ಅಷ್ಟೆ. ವಸಂತಾಗಮನ ಚಂದ್ರೋದಯ ವನವಿಹಾರ ಜಲಕೇಳಿಗಳೆ? ಅತ್ಯಂತ ಹೃದಯಂಗಮವಾಗಿವೆ. ನಾಯಕನಾಯಿಕಾಪ್ರಭೇದಗಳೆ? ಅವನಂತೆ ಮಾರ್ಮಿಕವಾಗಿ ಚಿತ್ರಿಸಬಲ್ಲ ಇನ್ನೊರ್ವ ಕವಿಯಿಲ್ಲ. ಪಣ್ಯಾಂಗನೆಯರ ಜಾರಸ್ತ್ರೀಯರ ಬೆಡಗು ಬಿನ್ನಾಣ ಒನಪು ಒಯ್ಯಾರ ಆಮೋದಪ್ರಮೋದಗಳ ಅತಿರುಚಿರ ಬಣ್ಣನೆಯೆ? ರಾಜಶೇಖರ ವಿಲಾಸದಲ್ಲುಂಟು. ಓದುಗನು ಮೈಮರೆಯುವಂತೆ ಮಾಡಬಲ್ಲ ಶೃಂಗಾರ ಸನ್ನಿವೇಶಗಳೆ? ಷಡಕ್ಷರಿಯಲ್ಲುಂಟು. ಒಂದೆರಡು ಪದ್ಯಗಳ ರುಚಿ ನೋಡಿ

ನೋಡಿದೊಡಾಗಳಂತೆ ತಲೆವಾಗುವ ನೋಡದೊಡೊಲ್ದು ನೋಳ್ಪ ಮಾ
ತಾಡಿಸೆ ಸುಮ್ಮನಿರ್ಪ ನುಡಿಗುಂದಿರೆ ಮೆಲ್ಲನೆ ಸೊಲ್ಲಿಪಿಚ್ಛೆಯಿಂ
ಕೂಡಲೊಡರ್ಚೆ ಮೈದೆಗೆವಗಲ್ದಿರಲೊಯ್ಯನೆ ಸಾರ್ವ ಮುಗ್ಧೆಯೀಂ
ಮಾಡಳೆ ಮೆಚ್ಚಿದೋಪನ ಮನಕ್ಕೆ ಮನೋಜ ಮಹೋತ್ಸವಂಗಳಂ

XI ೯೯

ಕದ್ದಿಂಗಳಿನಲ್ಲಿ ಕದ್ದುಹೋಗುತ್ತಿರುವ ಕಡುನೀರೆ,

ಮಾರನೃಪಂ ಕಾರೊರೆಯೊ
ಳ್ಕೂರಸಿಯಂ ಪುಗಿಸುವಂತೆ ವೀಧಿಯ ತಮದೊಳ್
ಜಾರೆ ಘನಧಾರೆ ತನುರುಚಿ
ಸಾರಾಂಗೆ ಪೊದಳ್ದುಪೊಕ್ಕು ಬರ್ಪವಳೆಸೆದಳ್ XI ೨೬

'ಜಾರುವ ದಾರಿಯಲ್ಲಿ'ರುವ ಜಾರೆಯೊಬ್ಬಳು

ಜಾರೆ ನಿರಿ ಜಾರೆ ಸೋರ್ಮುಡಿ
ಜಾರೆ ಬೆಮರ್ಜಾರೆ ಮೇಲುದದು ಮುಡಿದಲರ್ಗಳ್
ಜಾರೆ ಮುದಂ ಜಾರೆ ಮದಂ
ಜಾರೆ ಪದಂ ಜಾರೆ ಜಾರೆ ಜಾರಿದಳೊರ್ವಳ್ IIX ೯

ಆ ಜಾರತನವೆಲ್ಲ 'ಜಾರೆ, ಜಾರೆ' ಎಂಬ ಮಾತುಗಳಲ್ಲಿಯೆ ಅಡಗಿದೆ. ಕವಿ ಎಂಥ ಹದಿರಿನ ಮಾತಾಡುತ್ತಾನೆ, ಮಾತುಗಳನ್ನು ಹೇಗೆ ಕುಣಿಸಬಲ್ಲ ಎನ್ನುವುದಕ್ಕೆ

ಎಳೆಯಳೆ? ಕಟಾಕ್ಷಪಾಶದಿ
ನೆಳೆಯೆಳೆಯುವ ಮೃಗಮನಂದದೊಳ್ ಶಶಿಕಳೆವೋಲ್
ಪೊಳೆಯಳೆ ಶೃಂಗಾರರಸದ
ಪೊಳೆ ಎಳೆಯದರಾರೊ ಪೊನ್ನನಿವಳ್ಗತಿಧನಿಕರ್ XI ೧೧೩

ಇಲ್ಲಿ ಎಳೆ ಪೊಳೆ-ಎಂಬ ಮಾತುಗಳನ್ನು ಎಷ್ಟು ಅರ್ಥಪೂರ್ಣವಾಗಿ ಬಳಸಿದ್ದಾನೆ !

'ಷಡಕ್ಷರಿ ಹುಟ್ಟನಿಂದ ಶೃಂಗಾರಕವಿ' ಎನ್ನುವುದನ್ನು ಯಾರೂ ಒಪ್ಪಿಕೊಳ್ಳಲೇಬೇಕು. ಕಾವ್ಯದ ಅರ್ಧಭಾಗವಂತು ಶೃಂಗಾರರಸಪ್ರತಿಪಾದನೆಗೇ ಮೀಸಲಾಗಿದೆ. ಓದುಗರಿಗೆ ಶೃಂಗಾರರಸದ ಲಂಚಕೊಟ್ಟು ಅವರನ್ನು ಶಾಂತರಸದ ಮಂಗಳಕರ ಮಂಚಕ್ಕೆ ಕೊಂಡೊಯ್ಯಬೇಕೆಂಬುದು ಕವಿಯ ಉದ್ದೇಶವಾಗಿರಬೇಕು. ಆದರೆ 'ಎರಡಾಣಿಮೆ' ವರ್ಗಕ್ಕೆ ನೀಡಿರುವ 'ಬಡವರ ಬಾದಾಮಿ' ಹೆಚ್ಚಾಗಿ ಆ ಬೃಹದ್ರಾಶಿಯಲ್ಲಿ ಎಲ್ಲೋ ಅಲ್ಲೊಂದು ಇಲ್ಲೊಂದು 'ಸಕ್ಕರೆ ಬಾದಾಮಿ' ಕಾಣಿಸಿಕೊಳ್ಳುತ್ತದೆ. ಒಂದೆರಡು ತೆಗೆದುಕೊಳ್ಳಿ. ಪ್ರಣವಮಂತ್ರದ ಮೇಲೆ ಕಟ್ಟಿರುವ ಕಂದಗಳಿವು.

ಘನಮುಕ್ತಿಕಾಂತೆಗಿದು ತಾಂ
ಜನನಿ ಲಸದ್ಭಕ್ತಿಯುವತಿಗಿದು ತಿಳಿದ ಪುರಾ
ತನರ ಮತದಿಂದೆ ಶರಣಾಂ
ಗನೆಗಭವನನೆಳೆದು ತಪ್ಪ ದೂದವಿ ಪೆರತೇಂ III ೯೧

ಅಯ್ಯೋ, ಇಲ್ಲೂ ಹೀಗೇನೇ ? ಎಲ್ಲಿ ಬಿಟ್ಟರೂ ಅದೇ ಮನೆಗೆ ಬರುತ್ತಾನೆ ಈ 'ಯತಿವರ !' ಪ್ರಣವಮಂತ್ರ ಶರಣೆಯ ಬಳಿಗೆ ಶಿವನನ್ನು ಎಳೆದುಕೊಂಡು ಬರುವ ದೂತಿ !-ಹೀಗೆನ್ನಿಸಬಹುದು. ಆದರೆ ಮುಂದಿನ ಪದ್ಯದಲ್ಲಿ ನಮ್ಮ ಭ್ರಮನಿರಸನವಾಗುತ್ತದೆ. ಆಧ್ಯಾತ್ಮಿಕ ನಿಲುವಿನಿಂದ ಈ ಮಾತುಗಳಿಗೆ ಬೇರೆ ಅರ್ಥ ಉಂಟಷ್ಟೆ.

ತನುವಿಲ್ಲದತನು ವಿಧ್ವಂ
ಸನಂಗೆ ತನು, ಪೇಳಲೊಂದು ಪೆಸರಿಲ್ಲದ ಚಿ
ದ್ಘನ ಲಿಂಗಕ್ಕಿದು ಪೆಸರೆಂ
ದೆನೆ ಬಣ್ಣಿಪರಾರೊ ಪಂಚವರ್ಣದ ಘನಮಂ ! IV ೯೫
ಹೃದಯಪಯೋಜದ ಪರಿಮಳ
ಮಿದು ಚೇತಸ್ತಂಭದಗ್ರ ಮಣಿದೀಪಿಕೆ ಮೋ
ಣಿದು ಮಾನಸಮುಕರದ ಪೊಳ
ಪಿದು ತಾನೆನಿಸಿದುದು ಗುರುನಿರೂಪಿತ ಮಂತ್ರಂ IV ೯೭

ಷಡಕ್ಷರದೇವನ ಕವಿತಾವೇಶದ ಪರಿಪಕ್ವಫಲಗಳಿವು. ಇದರಂತೆಯೆ ಮಳೆಗಾಲ ಹೇಮಂತಋತು, ವಸಂತಋತುಗಳ ವರ್ಣನೆಗಳು ಅಲೌಕಿಕವಾದ ರಸಾನಂದವೀಯುತ್ತಿವೆ. ಶ್ರೀಕೈಲಾಸವರ್ಣನೆ, ಶಿವಪುರಗಳವರ್ಣನೆ, ಪಂಚವಿಂಶತಿಲೀಲೆಗಳು, ಶಿವಸಾಕ್ಷಾತ್ಕಾರ, ಶಿವಪೂಜೆ—ಮದುವೆ—ಈ ಎಲ್ಲಕಡೆಯಲ್ಲಿಯೂ ಕವಿಯ ಶೈವ ಸಂಸ್ಕೃತಿಯೂ ಉನ್ನತಮಟ್ಟದ ಕವಿತಾಶಕ್ತಿಯೂ ವ್ಯಕ್ತವಾಗುವುದು. ಅಮೃತವತೀದೇವಿಯ ಪುತ್ರದೋಹದವೂ ರಾಜಶೇಖರನ ಶೈಶವಲೀಲೆಯೂ ತಿರುಕೊಳವಿ

ನಾಚಿಯಪ್ರಲಾಪ (ಹರಿಶ್ಚಂದ್ರಕಾವ್ಯದಿಂದ ತಂದುಹೊಂದಿಸಿಕೊಂಡಿರುವ ಭಾಗವನ್ನು ಬಿಟ್ಟರೂ)ವೂ ಕವಿ ಲಲಿತಭಾವಗಳನ್ನು ಅತಿ ರಮಣೀಯವಾಗಿ ಚಿತ್ರಿಸಬಲ್ಲನೆಂಬುದಕ್ಕೆ ಉತ್ತಮನಿದರ್ಶನಗಳು.

ಈತನ ಶೈಲಿಯ ಮುಖ್ಯಗುಣ 'ಓಜಸ್ವಿತೆ' ಎಂದು ಹಿರಿಯ ವಿಮರ್ಶಕರು ಒಪ್ಪಿಕೊಂಡಿದ್ದಾರೆ. ಅಚ್ಚಗನ್ನಡದಲ್ಲಿ ಬರೆಯಬೇಕೆಂದರೆ ಅದಕ್ಕೂ ಸಿದ್ಧ, ಸಂಸ್ಕೃತ ಪದಗಳನ್ನೇ ತಂದೊಟ್ಟಬೇಕೆಂದರೆ ಅದಕ್ಕೂ ಸಿದ್ಧ. ಕನ್ನಡ ಸಂಸ್ಕೃತ ಪದಗಳ ಹಿತಮಿತ ಮಿಶ್ರಣವಂತೂ ಇವನ ಕಾವ್ಯದುದ್ದಕ್ಕೂ ಕಾಣುವುದು. ಕಂದವಿರಲಿ, ವೃತ್ತವಿರಲಿ, ವಚನವಿರಲಿ, ಶುಚಿಯಾದ ಆನಂದದಾಯಕವಾದ ಅಚ್ಚುಕಟ್ಟಾದ ನುಡಿಗಟ್ಟಿನಲ್ಲಿ ವ್ಯಾಕರಣ ಬದ್ಧವಾಗಿ ರಚಿಸಬಲ್ಲನು ಈ ನಮ್ಮ ಕವಿ. ಸಂದರ್ಭೋಚಿತವಾದ ಮಟ್ಟಿನಲ್ಲಿ ಪದ್ಯಗಳನ್ನು ಕಟ್ಟಬಲ್ಲ ಶಕ್ತಿ ಇವನಲ್ಲಿದೆ. ಇವನು ಬಳಸಿರುವಷ್ಟು ಮಟ್ಟುಗಳನ್ನು ಬಹುಶಃ ಇನ್ನಾವ ಕನ್ನಡ ಕವಿಯೂ ಬಳಸಿಲ್ಲ. ಇವನ ಕಂದಗಳ ಸೊಗಸೇ ಸೊಗಸು.

ಈ ಕಾವ್ಯದಲ್ಲಿ ಚಿತ್ರವಾಗಿರುವ ವ್ಯಕ್ತಿಗಳೆಲ್ಲ ಸುಸಂಸ್ಕೃತರು, ವಿದ್ಯಾ ವಿನಯ ಸಂಪನ್ನರು, ಶಿವಭಕ್ತಿ ಸಂಪನ್ನರು. ನ್ಯಾಯಪರಿಪಾಲನೆಗಾಗಿ ಏಕೈಕ ಪುತ್ರನನ್ನು ಬಲಿಗೊಡಲು ಸಿದ್ಧನಾದ ಸತ್ಯೇಂದ್ರಚೋಳ, 'ಪತಿವೋಹಿ'ಮಂತ್ರಿ, ಪತಿಯ ಶಿವ ಭಕ್ತಿಗೆ ಶಕ್ತಿಯಂತಿದ್ದ ಅಮೃತವತೀ ದೇವಿ, ಅದ್ವಿತೀಯ ಪರಾಕ್ರಮಿಯಾಗಿದ್ದರೂ ಧರ್ಮಶಾಸನಕ್ಕೆ ನಮ್ರತೆಯಿಂದ ಒಪ್ಪಿಕೊಂಡು ತಾನೆ ಮನವೊಲಿದು ಮದುವೆಯಾದ ಮನದನ್ನೆಯನ್ನು ಬಿಟ್ಟು ಶಿರಹರಿದು ಕೊಂಡ 'ಮಂತ್ರಲಕ್ಷ' ರಾಜಶೇಖರ, ತನಗಾಗಿ ಪ್ರಾಣವನ್ನು ನೀಡಲು ಸಿದ್ಧನಾದ ಮಿತವಚನ, ಕಾಳಮೇಘ, ಸಿಂಹಳೇಂದ್ರ ಎಲ್ಲ ಆದರ್ಶವ್ಯಕ್ತಿಗಳು. ಆದರೆ ಇವರಾರಲ್ಲಿಯೂ ಮಾನವ ಸಹಜವಾದ ದೌರ್ಬಲ್ಯವಾಗಲಿ, ದೋಷವಾಗಲಿ, ನ್ಯೂನತೆಯಾಗಲಿ ಲವಲೇಶವೂ ಇಲ್ಲ; ದೌರ್ಜನ್ಯದ ಮಾತಿರಲಿ. ಆದುದರಿಂದಲೆ, ಇವರೆಲ್ಲ ಕಾವ್ಯ ಲೋಕದಲ್ಲಿ ಮಾತ್ರ ಇರಬಹುದಾದ ವ್ಯಕ್ತಿಗಳು. ನಮ್ಮ ಸಂಬಂಧ ಸಂಪರ್ಕ ಇವರಿಗಿಲ್ಲ. ಇವರೇ ಬೇರೆ ನಾವೇ ಬೇರೆ ಎನ್ನಿಸುತ್ತದೆ. ಅಮೃತವತೀ ದೇವಿ, ಆಕೆಗಿಂತ ಹೆಚ್ಚಾಗಿ ತಿರುಕೊಳವಿನಾಚಿ, ಈ ಇಬ್ಬರೇ ಒಂದೊಂದು ಸಲ ಈ ಲೋಕದವರಂತೆ ಕಾಣುವವರು.

ಈ ಕವಿ ಯಾವ ಪಾತ್ರವನ್ನು ರಸಿಕರ ಹೃದಯದಲ್ಲಿ ಕಡೆದು ನಿಲ್ಲಿಸಿದ್ದಾನೆ? ಯಾವ ಪಾತ್ರದ ನೆನಪು ನಮ್ಮನ್ನು ಸದಾ ಪಾವನಗೊಳಿಸುತ್ತಿರುತ್ತದೆ? ರಾಮಾಯಣ ಮಹಾಭಾರತದ ಮಹಾ ವ್ಯಕ್ತಿಗಳಂತೆ, ಶಾಕುಂತಲದ ಶಕುಂತಲೆ ದುಷ್ಯಂತರಂತೆ, ಭರತ ಬಾಹುಬಲಿ ಕರ್ಣ ದುರ್ಯೋಧನರಂತೆ, ಹರಿಶ್ಚಂದ್ರನಂತೆ, ಗಿರಿಜೆಯಂತೆ, ರಾವಣನಂತೆ, ಬಸವಣ್ಣ ನಂಬಿ ಮಹಾದೇವಿ ಕಣ್ಣಪ್ಪರುಗಳಂತೆ ಈ ಕಾವ್ಯದ ಯಾವ ಉದಾತ್ತ ಭಾವ, ಯಾವ ಜೀವನ ದರ್ಶನದಲ್ಲಿ ನಮ್ಮಮನ ಮೈದೊಳೆಯಿತು? ಇಲ್ಲಿ ಷಡಕ್ಷರದೇವ ನಮ್ಮನ್ನು ಸಂಪೂರ್ಣವಾಗಿ ನಿರಾಶೆಗೊಳಿಸುತ್ತಾನೆ.

ಷಡಕ್ಷರಿಗೆ ಅವಕಾಶವಿತ್ತು. ಅದನ್ನು ಅವನು ಉಪಯೋಗಿಸಿಕೊಳಲಿಲ್ಲ, ಅಷ್ಟೆ. ತಿರುಕೊಳವಿನಾಚಿ ಕಡುಬಡವೆ. ಹೊಟ್ಟೆಗೆ ಹಿಟ್ಟಿಗೂ ಗತಿಯಿಲ್ಲದೆ ಹೆರರ ಮನೆಯಲ್ಲಿ ನೀರಡಕಿಯಾಗಿ ಸೇವೆಗಯ್ದು ಹೊನ್ನು ಗಳಿಸಿ ಮಗನನ್ನು ಸಾಕುತ್ತಿದ್ದವಳು. ಮಗನನ್ನು ಹೇಗಾದರೂ, ಎಂಥ ಕಷ್ಟ ಬಂದೊಂದಗಿದರೂ ಕಾಪಾಡಬೇಕು, ಅವನನ್ನು ಬಾಳಿಸಬೇಕು ಎಂಬ ಹಿರಿಯ ಹಂಬಲ ಆಕೆಗೆ. ಅಂಥ ಬಡವಿ.. ಇದ್ದ ಒಬ್ಬ ಮಗನೂ ಅಳಿದನಲ್ಲಾ ಎಂದು, ಮಾತಿನಲ್ಲಿ ಹೇಳಿ ಮುಗಿಸಲಾರದಷ್ಟು ಅಳಲಿನಿಂದ ಗೋಳಾಡುತ್ತಿದ್ದಾಳೆ. ಆಕೆಯ ಸಂಕಟಕ್ಕೆ ಅಂತವಿಲ್ಲ, ಪಾರವಿಲ್ಲ. ಅಂತಹ ದೃಶ್ಯವನ್ನು ಕಣ್ಣಾರೆ ಕಂಡಿದ್ದಾರೆ ಸತ್ಯೇಂದ್ರ ಮತ್ತು ಅಮೃತವತಿ. ಆಕೆಯ ಮಗನ ಪ್ರಾಣಕ್ಕೆ ಪ್ರತಿಪ್ರಾಣವನ್ನು 'ತಲೆಗೆ ತಲೆ'ಯನ್ನು ಕೊಡಬೇಕಾಗಿ ಬಂದಾಗ ಇವರ ಮನಸ್ಸು ಸ್ವಲ್ಪವಾದರೂ ಅಳುಕಲಿಲ್ಲವೆ? ತಾವೇ ಮಾಡಿದ ಧರ್ಮಶಾಸನಕ್ಕೆ ತಮ್ಮ ಮಗನೇ ಬಲಿಯಾಗಬೇಕಾಯಿತಲ್ಲಾ ಎಂದು ಸ್ವಲ್ಪವೂ ಮಿಡುಕಲಿಲ್ಲವೆ? ನ್ಯಾಯ ನಿಷ್ಠುರತೆಗೂ ಪುತ್ರಪ್ರೇಮಕ್ಕೂ ಕದನ ನಡೆಯಲೇ ಇಲ್ಲವೆ ಅವರ ಮನೋಭೂಮಿಕೆಯಲ್ಲಿ. ತಾಯಿ ತಂದೆ ಇಬ್ಬರ ಅಂತರಂಗದಲ್ಲಿಯೂ ಯಾವ ಹೊಯ್ದಾಟವೂ ಇಲ್ಲ, ಯಾವ ತೋಟಿ, ತಾಕಲಾಟವೂ ಇಲ್ಲ. ಕವಿ, ಕೊನೆಯಲ್ಲಿ, ಪಂಚಾಕ್ಷರೀ ಪ್ರಭಾವದಿಂದ ಎಲ್ಲರೂ ಬದುಕಿದರೆಂದು ಹೇಳಲಿ. ಆದರೆ ಇಲ್ಲಿ ಈ ಮಾತಾಪಿತೃಗಳನ್ನು ಪಾಷಾಣ ಹೃದಯದ ಪಾಷಾಣ ಮೂರ್ತಿಗಳಾಗಿಯೇ ಮಾಡಬೇಕೇ? ಸಾಯಲಿರುವ ಮಗ ಬಂದು ತಾಯಿಯ ಕಾಲಿಗೆರಗಿ 'ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ ನನ್ನ ಚಿಂತೆಯನ್ನು ಬಿಟ್ಟುಬಿಡು' ಎಂದನಂತೆ. ತಾಯಿ, 'ತಾನತ್ಯಂತ ಶಿವನಿಷ್ಠೆಯಪ್ಪುದರಿಂ ಮನಃಕ್ಷತಾಂಕುರಮಂ ಧೃತಿನಖಾಗ್ರದಿಂ ಚಿವುಂಟಿ ಮುಗುಳ್ದು ಬರಸೆಳೆದು ಮೊಲೆತೊರೆಯೆ ಬಿಗಿದಪ್ಪಿ ಮೊಗಮಂ ನೋಡಿ ಮುದ್ದುಗೆಯ್ದು'

ಎನ್ನಾಳ್ದನ ಸತ್ಯಂ ಗೆಲೆ
ನಿನ್ನಸುವಂ ಭಕ್ತಿಶಿಸುಗೆ ಕುಡು ಚಿಂತೆಯಿದೇ
ಕೆನ್ನಸುವೆ ಪಾರ್ವತೀಪತಿ
ಪನ್ನಳಿನ ಭ್ರಮರಲೀಲೆದಳೆ ತಳರೆಂದಳ್

ಹಾಗೆಂದವಳು ಸುಮ್ಮನಾಗಲಿಲ್ಲ ಮಗನನ್ನು ಕಳುಹಿಕೊಟ್ಟು, ಅವನ ಸತ್ಯವಚನ, ನಯ, ಸದ್ಗುಣ, ವಿವೇಕ, ಸಕಳಕಳೋದ್ಭಾಸತೆ, ಧೃತಿಗಳನ್ನು ಕೆಳದಿಯರ ಮುಂದೆ ಪೊಗಳುವಳು. ತಂದೆಗಂತು ತಿರುಕೊಳವಿನಾಚಿಯ ಮೇಲೆ ಕರುಣೆ, ಮಗನ ಮೇಲೆ 'ಕಾಯ್ಪು'. ರಾಜಶೇಖರನ ಪಟ್ಟದ ರಾಣಿ ಸರ್ವಮಂಗಳೆಯನ್ನು ಕವಿ, ಮರೆತು ಬಿಟ್ಟಿದ್ದಾನೆ. ಆಕೆ ಮಾಡಿದ ಪಾಪವೇನು?

ಸರ್ವಮಂಗಳೆಯಂತು ಅಳೆಯಲಾಗದ ಅಳಲಿನಿಂದ ಬೇಯುತ್ತಿದ್ದಿರಬೇಕು. ಆಕೆಯ ಸಂಕಟ ಅನಂತವೂ ಅಗಾಧವೂ ಆದುದು. ಪತಿಯೇ 'ಗತಿ ಮತಿ' ಎಂದುಕೊಂಡು ಸೀಮೆಯಿಂದ ಸೀಮೆಗೆ ಬಂದವಳು! ಈ ವ್ಯಕ್ತಿ ಕವಿಯ ಕಣ್ಣಿಗೆ ಬೀಳಲೇ

ಇಲ್ಲ! ಅಮೃತವತಿ, ಸತ್ಯಚೋಳರ ಎದೆಪ್ರೊಲಗಳಲ್ಲಿ ನಡೆದಿರಲೇ ಬೇಕಾದ ಒಳ ತೋಟಿಯೂ ಮಹಾಕವಿ ಷಡಕ್ಷರದೇವನ ಗಮನವನ್ನು ಸೆಳೆಯಲಿಲ್ಲ. ಆದರೆ ಕವಿಗೆ ಇನ್ನೊಂದು 'ತುರ್ತುಕೆಲಸ'ವಿದೆ ಯೆಂಬುದನ್ನು ನಾವು ಮರೆಯುವಂತಿಲ್ಲ. ಅವನು ಪಂಚಾಕ್ಷರೀಮಂತ್ರಮಹತ್ವವನ್ನು ತೋರಿಸಬೇಕಾಗಿದೆ. ಹಾಗೆಯೇ ಮಾಡಲಿ, ಸಂತೋಷ. ಆದರೆ ಶೃಂಗಾರರಸ ಪ್ರತಿಪಾದನೆಯಲ್ಲಿ ಇವನಿಗಿರುವ ಪ್ರಾವೀಣ್ಯ ಭಕ್ತಿ ರಸ ಪ್ರತಿಪಾದನೆಯಲ್ಲಿ ಇಲ್ಲ. ಈ ಕೆಲಸವನ್ನು ಸಾಧಿಸಬಲ್ಲವನು ಆ ಶರಣಕವಿ ಹರಿಹರ ದೇವ. ಅವನು ಮುರುಘರ ರಗಳೆಯಲ್ಲಿ ಏನು ಹೇಳಿದ್ದಾನೆ!

ಲೋಗರೇನನೆಂದೊಡಂ ನಮಃ ಶಿವಾಯವಾಗೆ ತನಗೆ
ಆಗಳೇನನೆಂದೊಡಂ ನಮಃ ಶಿವಾಯವಾಗೆ ತನಗೆ
ಉಲಿವ ಹಕ್ಕಿಯುಲಿವು ಪಂಚವರ್ಣದಂತೆ ತಾಗೆ ಕಿವಿಗೆ
ಕೆಲೆವ ವೃಷಭನಾದಮುಂ ನಮಃ ಶಿವಾಯವಾಗೆ ತನಗೆ
ಕಣ್ಣೊಳಂ ನಮಃಶಿವಾಯವೆಂಬ ಲಿಖಿತವಿರ್ದ ತೆರದೆ
ಕಣ್ಣ ಮೊದಲ ರೂಪು ಪಂಚವರ್ಣವಾಗಿ ತೋರಲುರದೆ

ಮುರುಘರೇ ಮಂತ್ರ, ಮಂತ್ರವೇ ಮುರುಘರು. ಆದುದರಿಂದಲೇ ಇವರು ನಮ ಶ್ಶಿವಾಯ ಮುರಘರು. ಇವರಂತೆ ರಾಜಶೇಖರನೂ ಶಿವಾನಂದ ಸಾಗರದಲ್ಲಿ ಲೀನ ನಾಗಿ ತಾನೆ ಇಲ್ಲವಾಗಿ, ತಾನೇ ಆ ಮಹಾ ಮಂತ್ರವಾಗಬೇಕಿತ್ತು. ಕವಿ, ರಾಜ ಶೇಖರನನ್ನು ಅಂತಹ ಆನಂದಗಿರಿಯ ತುದಿ ನೆತ್ತಿಗೇರಿಸಿ, ರಸಜ್ಞರನ್ನೂ ಆ ಮಟ್ಟಕ್ಕೆ ಕರೆದೊಯ್ದು ಯಾವ 'ಪವಾಡ'ವನ್ನಾದರೂ ವರ್ಣಿಸಲಿ ಓದುಗರು 'ಸಮ್ಮತ' ಹೊಡೆಯಲೇ ಬೇಕು. ಏಳುತಲೆಗಳು ಬೀಳುವುದರ ಬದಲು ಏಳ್ನೂರು ತಲೆಗಳು ಬೀಳಲಿ, ಮಂತ್ರ ಪ್ರಭಾವದಿಂದ ಏಳಲಿ ಶಿವಾನಂದ ರಸಗಂಗೆಯನ್ನು ಕುಡಿದು ಮತ್ತ ರಾದ ರಸಿಕರು, ಏನು ಹೇಳಿದರೂ ತಲೆದೂಗುತಿದ್ದರು.

ಇಲ್ಲಿ ಹಾಗಾಗಿಲ್ಲ. ಮುಂಡದಿಂದ ಬೇರೆಯಾದ ಏಳುಜನ ಭಕ್ತರ ರುಂಡಗಳೂ ಪಂಚಾಕ್ಷರೀ ಮಂತ್ರವನ್ನು ಉಚ್ಚರಿಸುವುದೂ ಅನಂತರ ಅದೇ ಮಂತ್ರದ ಶಕ್ತಿಯಿಂದ, ಶಿವನ ಕರುಣೆಯಿಂದ ಎಲ್ಲರೂ ಬದುಕುವುದು ಸುಪ್ರಸಿದ್ಧ ಮಂತ್ರಗಾರ ಪ್ರೊ. ಸರ್ಕಾರ್ ಅವರನ್ನೂ ಬೆರಗುಗೊಳಿಸೀತು. ಆದರೆ ಈ ಆಕ್ಷೇಪಣೆಗೆ ಕವಿ

ಆದರಿಂದೆ ನಂಬಿ ಜಪಿಸಿದೊ
ಡಿದರಿಂ ದೊರೆಕೊಳ್ಗುಮಮಳ ಶಿವಪದಮಿಂತ
ಲ್ಲದೆ ಪೆರತು ಮಾರ್ಗದಿಂದ
ಪ್ಪುದು ತಾನೆಂಬುದು ನಭಃಪಯೋಜಪ್ರಾಯಂ IV ೯೫

ಎಂದು ಸಮಾಧಾನ ಹೇಳಿ ನುಸುಳಿಕೊಂಡು ತಲೆ ಮರೆಸಿಕೊಂಡ.

ಆದರೂ ಯಾವ ಕನ್ನಡ ಕುಲರಸಿಕನೂ ಈ ಮಹಾಕವಿಗೆ ಮಣಿಯಲೇಬೇಕು. ವಸ್ತುರಚನಾಚಾತುರ್ಯ, ವರ್ಣನಾಕೌಶಲ, ಹಿಂದಿನವರು ಹೇಳಿದುದನ್ನೆ ಓರೆಕೋರೆ

ಗಳನ್ನು ತಿದ್ದಿ ಅಂದಗೊಳಿಸಿ ಹೊಸಹೊಳಪುಕೊಡುವ ಜಾಣ್ಮೆ, ಪಾಂಡಿತ್ಯ ಪ್ರತಿಭೆ, ಕವಿತಾಶಕ್ತಿ, ಲೋಕಾನುಭವ, ಸೂಕ್ಷ್ಮಬುದ್ಧಿ, ಉಕ್ತಿಚಮತ್ಕಾರ—ಈ ಎಲ್ಲ ಗುಣಗಳೂ ಒಂದೇ ಕಡೆ ದೊರೆಯಬೇಕೆಂದರೆ ಕನ್ನಡ ಕವಿಗಳಲ್ಲಿ ಎಷ್ಟು ಜನ ಸಿಕ್ಕಾರು ? ಕೇವಲ ನಾಲ್ಕೋ ಆರೋ ? ಬೆರಳ ತುದಿಯಲ್ಲಿ ಎಣಿಸಬಹುದು. ಅಂಥವರಲ್ಲಿ ಇವನೊಬ್ಬನೆಂದು ಧಾರಾಳವಾಗಿ ಹೇಳಬಹುದು. ನೀರಸವಾದ ಬಡಕಲು ಬಡಕಲಾದ 'ಭಾವ ಚಿಂತಾರತ್ನ' ಈ ಮಹಾಕವಿಯ ಪರುಷ ಹಸ್ತಪ್ರಭಾವದಿಂದ ಒಂದು ಅತ್ಯುತ್ತಮಕಾವ್ಯವಾಗಿ ಅರಳಿ ನೂರಾರು ವರುಷಗಳಿಂದ ನರುಗಂಪನ್ನು ಬೀರುತ್ತಿದೆ.

ಎಚ್. ದೇವೀರಪ್ಪ

# ಹೆಣ್ಣು ಮಕ್ಕಳ ಕೋಲಾಟದ ಪದಗಳು

ಒಂದು ನಾಡಿನ ಜನರ ಬದುಕು, ಸಂಸ್ಕೃತಿ, ಆಶೆನಿರಾಶೆ, ಸುಖ ದುಃಖ, ರೀತಿ ನೀತಿಗಳನ್ನು ವಿಶದವಾಗಿ ಚಿತ್ರಿಸಿ 'ಸಾಹಿತ್ಯ, ಜನಜೀವನದ ಕನ್ನಡಿ' ಎನಿಸಿಕೊಂಡಿದೆ. ಈ ಧ್ಯೇಯದಿಂದಲೇ ರಚಿತವಾದ ಜನಪದ ಸಾಹಿತ್ಯದಲ್ಲಿ ಪಾಂಡಿತ್ಯವಾಗಲೀ ಪ್ರತಿಭೆಯಾಗಲೀ ವಿಶೇಷವಾಗಿಲ್ಲ. ಇದರಲ್ಲಿ ಜಾತಿ ಮತಗಳ ಪಕ್ಷಪಾತವಿಲ್ಲ, ಸ್ತ್ರೀ ಪುರುಷರೆಂಬ ಭೇದವಿಲ್ಲ. ಕೀಳು ಮೇಲೆಂಬ ಭಾವನೆಯೂ ಇಲ್ಲ. ವ್ಯಕ್ತಿಯ ಮನಸ್ಸಿನಲ್ಲಿ ಉಂಟಾಗುವ ಉದ್ರೇಕಗಳಿಗೆ, ಭಾವಾವೇಶಗಳಿಗೆ ಸರಿಯಾದ ಸನ್ನಿವೇಶವೊದಗಿದಾಗ ಜನಪದ ಸಾಹಿತ್ಯವು ತಾನೇ ತಾನಾಗಿ ಹುಟ್ಟುವುದು. ಈ ಸಾಹಿತ್ಯದಲ್ಲಿ ಶಬ್ದಗಳ ಆಡಂಬರವಿಲ್ಲ. ರಾಗಗಳ ಕೋಟಲೆಯಿಲ್ಲ. ಅನಾವಶ್ಯಕವಾದ ವ್ಯಾಕರಣದ ನಿರ್ಬಂಧವೂ ಇಲ್ಲ. ಸರಳವಾದ, ಭಾವಪೂರ್ಣವಾದ ಮುತ್ತಿನಂತಹ ಮಾತುಗಳ ಲಯಬದ್ಧವಾದ ಜೋಡಣೆಯಿಂದ ಜನಪದ ಸಾಹಿತ್ಯದ ಕವಿತೆ ಯಾರು ಬೇಕಾದರೂ ಬೇಕಾದ ಮಟ್ಟನಲ್ಲಿ ಹಾಡಿಕೊಳ್ಳಲು ಅನುಕೂಲವಾಗಿರುವುದು. ತ್ರಿಪದಿ, ಚೌಪದಿ, ಸಾಂಗತ್ಯ ಮೊದಲಾದ ದೇಶೀಯ ಛಂದಸ್ಸುಗಳ ಥಾಟ, ಭಾಷೆಯ ಬಳಕೆಗೆ ಹೊಂದಿಕೊಳ್ಳುವುದು. ಈ ಬಗೆಯ ಜಾನಪದ ಗೀತಗಳ ವಿಪುಲತೆಗೆ ಹೆಚ್ಚಾಗಿ ಸ್ತ್ರೀಯರೇ ಕಾರಣರು. ಕಾನನದ ಮಲ್ಲಿಗೆಯಂತೆ ಜನರ ದೃಷ್ಟಿಗೆ ಬೀಳದೆ ತಮಗೆ ಭಾವೋದ್ರೇಕವಾದಾಗ ಭಕ್ತಿಗೀತ, ಭಾವಗೀತಗಳನ್ನು ಹಾಡಿಕೊಂಡು ಜನಪದ ಸಾಹಿತ್ಯವನ್ನು ಸೃಷ್ಟಿಸಿ ಮಾಯವಾದ ಸ್ತ್ರೀ ಸಾಹಿತಿಗಳು ಸಾಹಿತ್ಯದೇವಿಯ ಮಂದಿರಕ್ಕೆ ತಳಹದಿ ಹಾಕಿದರು. ಅವರು ತಮ್ಮ ಅಂತರಂಗವನ್ನು ಪ್ರತಿಬಿಂಬಿಸಿದರು. ಸತ್ವಪೂರ್ಣವಾದ ಆ ಗೀತಗಳು ನಮ್ಮ ನಾಡಿನ ಜನರ ನಾಲಗೆಗಳಲ್ಲಿ ನಲಿದಾಡುವಂತೆ ಮಾಡಿ, ಸ್ತ್ರೀ ಸಾಹಿತ್ಯದ ಬೆಲೆಯನ್ನು ಜನರಿಗೆ ಅರಿವು ಮಾಡಿಕೊಟ್ಟರು. ಗರತಿಯ ಹಾಡಿನಂತೆಯೇ ಜನಪದ ಸಾಹಿತ್ಯ ಜಾತಿಗೆ ಸೇರಿದ ಹೆಣ್ಣುಮಕ್ಕಳ ಕೋಲಾಟದ ಪದಗಳೂ ಕೂಡ ಸ್ತ್ರೀಯರ ಪ್ರಪಂಚಕ್ಕೇ ಸೇರಿವೆ. ಇವುಗಳ ರಚನೆ, ವೈವಿಧ್ಯ, ಸ್ವಾರಸ್ಯಗಳನ್ನು ತಿಳಿಯಬೇಕಾದರೆ ಹಳ್ಳಿಗಾಡಿನ ಜನರ ಬಾಯಿಂದಲೇ ಅವುಗಳನ್ನು ಕೇಳಬೇಕು.

ಭಾರತೀಯರಿಗೆ, ಅದರಲ್ಲೂ ಕನ್ನಡಿಗರಿಗೆ ವರ್ಷದ ಮುನ್ನೂರು ಅರವತ್ತೈದು ದಿನಗಳೂ ಹಬ್ಬ. ಈ ಹಬ್ಬಗಳಿಗೆ ನಮ್ಮ ಪುರಾಣ ಇತಿಹಾಸಗಳಲ್ಲಿ ಆಧಾರ ಸಿಕ್ಕುತ್ತದೆ. ಹಬ್ಬಗಳಿಗೆಲ್ಲಾ ಒಂದೊಂದು ವ್ರತವಿದೆ. ಒಂದೊಂದು ಕತೆಯಿದೆ ಮಹಾಭಾರತದ ಆರಣ್ಯಪರ್ವ ಇಂತಹ ಕತೆಗಳ ಸಂಕಲನ. ಧರ್ಮರಾಯನು ತನ್ನ ಸಕಲೈಶ್ವರ್ಯವನ್ನೂ ಜೂಜಿನಲ್ಲಿ ಸೋತು ತನ್ನ ತಮ್ಮಂದಿರೊಡನೆಯೂ, ಪತ್ನಿಯಾದ ದ್ರೌಪದಿಯೊಡನೆಯೂ ಹನ್ನೆರಡು ವರ್ಷಗಳು ವನವಾಸಮಾಡಬೇಕಾಗಿ ಬಂದ ಸಂದರ್ಭದಲ್ಲಿ ಅವನ ಜೊತೆಯಲ್ಲಿದ್ದ ಋಷಿಗಳು ಅವನಿಗೆ ಹೊತ್ತು ಕಳೆಯಲು

ಅನೇಕ ಕತೆಗಳನ್ನೂ ಹೇಳುತ್ತಾ ಅವನ ಕ್ಲೇಶವನ್ನು ದೂರಮಾಡುತ್ತಿದ್ದರು. 'ಬರದೇ ಇದ್ದ ಕತೆಗಳನ್ನು ಭಾರತದಲ್ಲಿ ಕೇಳು' ಎಂಬ ಮಾತಿನಂತೆ ಋಷಿಗಳು ದಿನಕ್ಕೊಂದು ವ್ರತ, ಆ ವ್ರತಗಳನ್ನು ಆಚರಿಸಿ ಸುಖವನ್ನು ಹೊಂದಿದವರ ವಿಚಾರ ಗಳನ್ನು ಕುರಿತು ಪಾಂಡವರಿಗೆ ಹೇಳುತ್ತಿದ್ದರು. ಋಷಿಗಳ ಉಪದೇಶದಂತೆ ಈ ಹಬ್ಬ ಹರಿದಿನಗಳು ಧರ್ಮರಾಯನಂತಹ ನಿಷ್ಠಾವಂತರಿಂದ ಆಚರಣೆಗೆ ಬಂದುದರಿಂದ ಅವು ಇಹಪರಗತಿಗಳಿಗೆ ಸಾಧಕವಾಗಿವೆಯೆಂಬ ನಂಬಿಕೆ ನಮ್ಮಲ್ಲಿ ಇಂದಿಗೂ ಉಳಿದಿದೆ. ಧರ್ಮರಾಯನು ಆಚರಿಸಿದನೆಂದು ಹೇಳುವ ವ್ರತಗಳಲ್ಲಿ ಕೆಲವು ಪುರುಷರು ಆಚರಿಸ ತಕ್ಕವು—ಇನ್ನು ಕೆಲವು ಸ್ತ್ರೀಯರಿಗೇ ಮೀಸಲಾದ ವ್ರತಗಳು—ಅವಕ್ಕೆ ದ್ರೌಪದಿಯ ಪರಂಪರೆಯಿದೆ. ಭೀಮನ ಅಮಾವಾಸ್ಯೆ ವ್ರತ, ಮಂಗಳ ಗೌರೀವ್ರತ, ಸ್ವರ್ಣಗೌರೀ ವ್ರತ—ಮೊದಲಾದುವು ಪತಿಯ ಶ್ರೇಯಸ್ಸಿಗಾಗಿ ಪತಿಯರು ಮುಖ್ಯವಾಗಿ ಆಚರಿಸ ಬೇಕಾದ ವ್ರತಗಳು. ಇವಲ್ಲದೆ ಸೀಗೆ ಗೌರೀಪೂಜೆ, ಕೊಂತಿಪೂಜೆ, ಆನೆಗೌರೀಪೂಜೆ, ಬಸವನಪೂಜೆ ಮುಂತಾದುವನ್ನು ಹೆಂಗಸರು ಆಚರಿಸುತ್ತಾರೆ. ಅದರಲ್ಲೂ ಬಸವನ ಪೂಜೆಯನ್ನು ಮದುವೆಯಾಗದೆ ಇರುವ ಹೆಣ್ಣುಮಕ್ಕಳು ಅನುರೂಪನಾದ ಪತಿಯನ್ನು ಪಡೆಯುವುದಕ್ಕಾಗಿ ಆಚರಿಸುವ ಒಂದು ಒಳ್ಳೆಯ ವ್ರತವೆಂದು ಅಜ್ಜಿಯರು ಹೇಳು ತ್ತಾರೆ. ಇದನ್ನುಹಬ್ಬಗಳ ನಾಯಕಮಣಿಯಂತಿರುವ ದೀವಳಿಗೆಯಲ್ಲಿ ಪಾಡ್ಯಮಿ ಯಿಂದ ಹಿಡಿದು ಹತ್ತು ಹದಿನೈದು ದಿನಗಳವರಗೆ ಆಚರಿಸುತ್ತಾರೆ. ಇದರ ವೈಶಿಷ್ಟ್ಯ ವನ್ನು ಕಾಣಬೇಕಾದರೆ ಆ ಕಾಲದಲ್ಲಿ ಹಳ್ಳಿಗಳಿಗೆ ಹೋಗಿ ನೋಡಬೇಕು. ನವರಾತ್ರಿ ಹಳ್ಳಿಯವರಿಗೆ 'ನಾಡಹಬ್ಬ.' ಆಗ ಗಂಡು ಹುಡುಗರು ಮಾನೋ್ಮಿ ಪದಗಳನ್ನು ಹಾಡಿಕೊಂಡು ಬಲು ಹೆಮ್ಮೆಪಡುವರು. ಅಂತೆಯೇ ಹೆಣ್ಣುಮಕ್ಕಳು ದೀವಳಿಗೆ ಹಬ್ಬ ದಲ್ಲಿ ಕೋಲಾಟದ ಪದಗಳನ್ನು ಕಟ್ಟಿ ಹಾಡಿ ನಲಿಯುವರು.

ಹಳ್ಳಿಗಾಡಿನಲ್ಲಿ 'ನಾಡಹಬ್ಬ'ವಾದ ನವರಾತ್ರಿಯಿಂದ ಹಿಡಿದು ದೀವಳಿಗೆ ಹಬ್ಬದವರೆಗೆ ಬಹಳ 'ಸೌರಣೆ' ನಡೆಯುತ್ತದೆ. ಹೆಣ್ಣುಮಕ್ಕಳಿದ್ದ ಮನೆಯಲ್ಲಂತೂ ಆ ಸಂಭ್ರಮ ಹೇಳತೀರದು. ಮದುವೆಯಾದ ಹೆಣ್ಣುಮಕ್ಕಳಿಗೆ ಗಂಡ ಬರುವ ಸಂಭ್ರಮ. ಮದುವೆ ಆಗದೇ ಇರುವವರಿಗೆ ಕೋಲಾಟದ ಸಂಭ್ರಮ ಅಂತೂ ಒಟ್ಟಿನಲ್ಲಿ ಅವರಿ ಗೆಲ್ಲಾ ಕೈತುಂಬ ಕೆಲಸ. ಬಸವನನ್ನು ಕೂಡಿಸುವ ಪದ್ಧತಿ ಇರುವ ಮನೆಯಲ್ಲಿ ಅದ ಕ್ಕಾಗಿಯೇ ಗೋಡೆಯಲ್ಲಿ ಒಂದು ಗೂಡನ್ನು ಕಟ್ಟಿರುತ್ತಾರೆ. ಹಬ್ಬಕ್ಕೆ ಎರಡು ಮೂರು ದಿನಗಳಿವೆಯೆನ್ನುವಾಗಲೇ ಹೆಣ್ಣುಮಕ್ಕಳು ಆ ಗೂಡಿಗೆ ಸುಣ್ಣ ಬಣ್ಣಗಳನ್ನು ತೊಡೆದು ಕಾರಣೆಯನ್ನು ಎಳೆದು ಅಲಂಕರಿಸುವರು. ಹಳೆಯ ಕಾಲದ ಪೆಠಾರಿಯಲ್ಲಿ ಅಜ್ಜಿಯ ಕಾಲದಿಂದ ಅವಳ ಆಸ್ತಿಯೆಂದು ಬಹಳ ಜತನದಿಂದ ಕಾಪಾಡಿಕೊಂಡು ಬಂದ ಬಳ ಪದ ಬಸವಣ್ಣನಿಗೆ ಎಣ್ಣೆಯನ್ನು ತಿಕ್ಕಿ ತೀಡಿ ಹೊಳಪನ್ನುಂಟುಮಾಡುವರು. ಕಂಚಿನ ಕಳಶದ ತಟ್ಟೆತಾಲಿಗಳ ಕಿಲುಬನ್ನು ಹೋಗಲಾಡಿಸಲು ಸಣ್ಣ ಮರಳಿನಿಂದ ಉಜ್ಜಿ ಉಜ್ಜಿ ತೊಳೆದು ಬೆಳ್ಳಗೆಮಾಡುವರು. ಹಿಂದಿದ ಕಾಲದಿಂದ ಬಂದ ರಸಹೋದ

ಕನ್ನಡಿಯನ್ನೇ ಪೆಠಾರಿಯಿಂದ ಹೊರತೆಗೆಯುವರು. ಒಂದು ಸಣ್ಣ ಚೀಲದಲ್ಲಿ ಬಂದೋಬಸ್ತಾಗಿ ಕಟ್ಟಿಟ್ಟಿರುವ ಬಣ್ಣದ ನಾಲ್ಕು ಜೊತೆ ಕೋಲುಗಳನ್ನು ಈಚೆಗೆ ತೆಗೆಯುವರು. ಒಟ್ಟಿನಲ್ಲಿ ಬಸವನ ಪೂಜೆಗೆ ಬೇಕಾದ ನಿಲಾಂಜನವೇ ಮೊದಲಾದ ಸಲಕರಣೆಗಳನ್ನು ಬಹಳ ಮುತುವರ್ಜಿಯಿಂದ ಒದಗಿಸಿಕೊಳ್ಳುವರು. ಪಾಡ್ಯಮಿಯ ದಿವಸ ಕೋಲಾಟದ ಗುಂಪಿಗೆ ಸೇರಿದ ಹೆಣ್ಣು ಮಕ್ಕಳು ಮಿಂದು ಹೊಸಸೀರೆಗಳನ್ನುಟ್ಟು ಬಸವನನ್ನು ತರಲು ಸಿದ್ಧರಾಗುವರು. ಬಸವನನ್ನು ಸಾಮಾನ್ಯವಾಗಿ ಕೆರೆಕಾಲುವೆಗಳಿಂದಲೇ ತರುವುದು ಪದ್ಧತಿ. ಇಲ್ಲದಿದ್ದರೆ ಹಿತ್ತಿಲಕಡೆಯಿರುವ ಬಾವಿಯಿಂದಲಾದರೂ ತರಬೇಕು. ಕೆರೆ ಕಾಲುವೆಗಳಿಂದ ಬಸವನನ್ನು ತರುವುದಾದರೆ ಹುಡುಗಿಯರು ಅರಿಶಿನ ಕುಂಕುಮದ ತಟ್ಟೆ ಕಳಶ ಕನ್ನಡಿ ತಟ್ಟೆಗಳನ್ನು ಅಣಿಮಾಡಿಕೊಂಡು ಸಣ್ಣ ಮೇಳದೊಡನೆ ಮೆರವಣಿಗೆ ಹೊರಡುವರು. ಮೆರವಣಿಗೆ ಊರ ಬಾಗಿಲ ಬಳಿಗೆ ಬಂದ ಕೂಡಲೇ ಊರಿಗೆ ಬಾಗಿಲಿರಲಿ, ಇಲ್ಲದೇ ಇರಲಿ, ಕೋಟೆ ಬಾಗಿಲನ್ನು ತೆಗೆಯುವಂತೆ ತಳವಾರನನ್ನು ಕುರಿತು ಹಾಡನ್ನು ಹೇಳುವರು.

**1. ಕೋಟೆಬಾಗಿಲು ತೆಗೆಯಿಸುವ ಹಾಡು—**

ದಿಡ್ಡಿಯ ತೆಗೆಯಲೊ । ದೊಡ್ಡ ತಳವಾರಾ ।
ಚಿಬ್ಲಲ್ಲಿ ಅಡಕೇ । ಬಿಳಿಯೆಲೇ ।
ಚಿಬ್ಲಲ್ಲಿ ಅಡಕೇ । ಬಿಳಿಯೆಲೆ ತಕ್ಕೊಂಡು ।
ದಿಡ್ಡಿಯ ತೆಗೆಯೋ । ತಳಾವಾರಾ ॥ ೧ ॥
ಊರುಬಾಗಿಲು ತೆಗೆಯಲೊ । ಜಾಣ ತಳಾವಾರಾ ।
ಶಾರೇಲಿ ಅಡಕೆ । ಬಿಳೀಯೇಲೇ
ಶಾರೇಲಿ ಅಡಕೆ ಬಿಳಿ । ಯೆಲೆ ತಕ್ಕೊಂಡು
ಊರು ಬಾಗಿಲ ತೆಗೆಯೊ । ತಳಾವಾರಾ ॥ ೨ ॥
ಹೆಬ್ಬಾಗಿಲ ತೆಗೆಯಲೊ । ದೊಡ್ಡ ತಳಾವಾರಾ ।
ಚಿಬ್ಲಲ್ಲಿ ಅಡಕೇ । ಬಿಳೀಯೆಲೆ
ಚಿಬ್ಲಲ್ಲಿ ಅಡಕೆ ಬಿಳಿ । ಯೆಲೆ ತಕ್ಕೊಂಡು ।
ಹೆಬ್ಬಾಗಿಲ ತೆಗೆಯೊ । ತಳಾವಾರಾ ॥ ೩ ॥

ಎಲ್ಲರೂ ಒಟ್ಟಾಗಿ ( ಮೇಳ )

ಕೋಲು ಸುರ್ವನನೆ । ಭೂಲೋಕಕಧಿಕ್ಯನೆ ।
ಕೋಲು ಶ್ರೀರಾಮಾ । ರಘುರಾಮಾ ॥ ಪ ॥

ಈ ಹಾಡು ಮುಗಿಯುವವರೆಗೂ ಎಲ್ಲರೂ ನಿಂತಿದ್ದು, ಮುಗಿದ ಮೇಲೆ ದಿಡ್ಡಿ ಬಾಗಿಲಿಗೆ ಪೂಜೆಮಾಡಿ ಎಲೆ ಅಡಿಕೆ ಬಾಳೆ ಹಣ್ಣುಗಳನ್ನಿಟ್ಟು ಮುಂದಕ್ಕೆ ಹೊರಟು ಕೆರೆ ಅಥವಾ ಕೊಳವನ್ನು ಸೇರುವರು. ಅಲ್ಲಿ ನೀರಿಗಿಳಿದು ಬಸವನ ಮೈತೊಳೆದು, ಒಂದು ಮಣೆಯ ಮೇಲೆ ಎಳೆಯ ಗರಿಕೆ ಹುಲ್ಲನ್ನು ಹರಡಿ ಅದರ ಮೇಲೆ ಬಸವನನ್ನು ಕೂಡಿಸಿ ಈ ಹಾಡನ್ನು ಹೇಳುವರು.

### 2. ಬಸವನಿಗೆ ಪೂಜೆ ಮಾಡಿದ್ದು:—

ಆಕಾಶದ ಮೇಲಿನ । ಧೂಪದ ಹೊಗೆಯೇನೇ !
ಆತ ಬಸವಯ್ಯನಾ । ಶಿವಾಽ ಪೂಜೆ ।
ಆತ ಬಸವಯ್ಯನಾ । ಶಿವಪೂಜೆ ಮಾಡ್ವಾಗ ।
ಆಕಾಶದ ಘಂಟೀ ಥಣೀರೆನ್ನೆ ॥
ಅಂಬಾರದ ಮೇಲಿನ । ಗಂಧದ ಹೊಗೆಯೇನೇ ।
ತಂದೆ ಬಸವಯ್ಯನಾ । ಶಿವಾಽಪೂಜೆ ।
ತಂದೆ ಬಸವಯ್ಯನಾ । ಶಿವಪೂಜೆ ಮಾಡ್ವಾಗ ।
ಅಂಬಾರದ ಘಂಟೀ । ಥಣೀರೆನ್ನೆ ॥

ಮೇಳ:— ಕೋಲು ಸುವರ್ನನೆ । ಭೂಲೋಕಕಧಿಕ್ಯನೇ ।
ಕೋಲು ಶ್ರೀರಾಮಾ । ರಘೂರಾಮಾ ॥ ಪ ॥

ಈ ಹಾಡುಗಳನ್ನು ಗರತಿ ಹಾಡುಗಳ ಧಾಟಿಯಲ್ಲಿ ಹಾಡುವರು. ಬಸವನಿಗೆ ಪೂಜೆಮಾಡಿದಮೇಲೆ ಕಳಶವನ್ನು ತೊಳೆದು ನೀರು ತುಂಬಿ ನಾಲ್ಕು ವೀಳೆಯದೆಲೆಗಳನ್ನು ಜೋಡಿಸಿ ಕುತ್ತಿಗೆಗೆ ಹೂವನ್ನು ಸುತ್ತಿ ಅಕ್ಕಿಯನ್ನು ಹರಡಿಟ್ಟಿರುವ ಕಳಶದ ತಟ್ಟೆಯಲ್ಲಿ ಅದನ್ನು ಇಡುವರು. ಮತ್ತೆ ಹಾಡು.

### 3. ಕಳಶವನ್ನು ತುಂಬುವಾಗ

ನಿಂಬೆಹಣ್ಣಿನ ಮೇಲೆ । ತುಂಬಿ ಬಂದಳೆ ಗಂಗೇ ।
ತುಂಬಿಲ್ಲವೆಂದೂ । ಮುನೀಽದಾರೇ ।
ತುಂಬಿಲ್ಲವೆಂದೂ । ಮುನಿದರೆ ಪಟ್ಣದ ।
ರಂಗನ ಗುಡಿಸುತ್ತಾ । ಹರೀಽದಾಽಳೂ ॥
ಬಾಳೆ ಹಣ್ಣಿನ ಮೇಲೆ । ಬಾಗಿ ಬಂದಳೆ ಗಂಗೇ ।
ಬಾಗಿಲ್ಲವೆಂದೂ ಮುನೀಽದಾರೇ
ಬಾಗಿಲ್ಲವೆಂದೂ । ಮುನಿದರೆ ಪಟ್ಣದ ।
ರಂಗನ ಗುಡಿಸುತ್ತಾ । ಹರೀಽದಾಳೂ ॥

ಮೇಳ:— ಕೋಲು ಸುವರ್ನನೆ । ಭೂಲೋಕಕಧಿಕ್ಯನೇ ।
ಕೋಲು ಶ್ರೀರಾಮಾ । ರಘೂರಾಮಾ॥

ಕಳಶದ ಪೂಜೆಯಾದ ಮೇಲೆ ನಾಲ್ಕು ಜನ ಹುಡುಗಿಯರು ಒಂದೊಂದು ಜೊತೆ ಬಣ್ಣದ ಕೋಲುಗಳನ್ನು ತೆಗೆದುಕೊಂಡು ಹಾಡುಹೇಳುತ್ತಾ ಕೋಲುಗಳನ್ನು ತೊಳೆಯುವರು.

### 4. ಕೋಲು ತೊಳೆಯುವಾಗ—

ಹಲಗೆ ಮೇಲೆ ಹಲಗೆ ಹಾಕಿ ನಡೆದಳೆ ಸೀತೇ ।
ಸೀತೇ ಕಾಲಲ್ಲಿ ಪದ್ಮರೇಖೆ ನೋಡೇ ।
ಪದ್ಮರೇಖೆಯೊಳಗೇ ದಪ್ಪ ಮರಳ ನೋಡೇ ।

ದಪ್ಪಮರಳ ಒಳಗೇ ಸಣ್ಣಮರಳ ನೋಡೆ ।
ಸಣ್ಣಮರಳ ಒಳಗೇ ತಿಳಿನೀರ್ನೋಡೇ ।
ತಿಳಿನೀರ್ಕುಡಿಯೋಕ್ಬಂದ ಆನೇ ನೋಡೇ ।
ಆನೆ ಮೇಲೇ ಅಂಬಾರಿ ನೋಡೇ ।
ಅಂಬಾರಿಯೊಳಗೇ ಅರಸ್ಮಕ್ಕ ನೋಡೇ ।
ಅರಸ್ಮಕ್ಕ ಕೈಲೀ ಬೆಳ್ಳಿಬಟ್ಲ ನೋಡೇ ।
ಬೆಳ್ಳಿಬಟ್ಲ ಒಳಗೇ ಹಾಲುತುಪ್ಪನೋಡೇ ।
ಹಾಲು ತುಪ್ಪ ಕುಡಿಯೋಕ್ಬಂದ ನ್ಯಾಳ್ ಬೆಕ್ನ ನೋಡೇ ।
ನ್ಯಾಳ್ ಬೆಕ್ನ ಹೊಡೆಯೊಕ್ಬಂದ ಬ್ಯಾಟಗಾರ್ನ ನೋಡೇ ।
ಬ್ಯಾಟ್‌ಗಾರ್ನ ಕೈಲೀ ಚೋಟ್ ಚೋಟ್ ಕುಡುಗೋಲು ।
ಚೋಟ್ ಚೋಟ್ ಕುಡುಗೋಲ್ಗೇ ಮಾರ್ಮಾರ್ ಹುಲ್ಲೂ ।
ಮಾರ್ಮಾರ್‌ಹುಲ್ಲೀಗೆ ಮುದ್ದಾನೆಯಂಥ ಎಮ್ಮೇ ।
ಮುದ್ದಾನೆಯಂಥಾ ಎಮ್ಮೆಗೇ ಗೆಜ್ಜೆಕಟ್ಟಿದ ತಂಬಿಗೇ ।
ಗೆಜ್ಜೆಕಟ್ಟಿದ ತಂಬೀಗ್ಗೇ ಜೀಬೋರ್‌ಹಾಲೂ ।
ಜೀಬೋರ್‌ಹಾಲಿಗೇ ಹೆಂಟಿಹೆಂಟಿ ಮೊಸರೂ ।
ಹೆಂಟಿಹೆಂಟಿ ಮೊಸರ್ಗೇ ಬೆಣಚ್ಕಲ್ಲಂತ ಬೆಣ್ಣೆ ।
ಬೆಣಚ್ಕಲ್ಲಂತ ಬೆಣ್ಣೆಗೇ ಮರಳಮರಳತುಪ್ಪ ।
ಮರಳ ಮರಳ ತುಪ್ಪಕ್ಕೇ ಹೂವಿನಂಥ ಹುಯ್ಗಡಬೂ ।
ಉಣ್ಣಬಾರೊ ಬಸವಯ್ಯಾ । ತಿನ್ನಬಾರೊ ಬಸವಯ್ಯಾ ॥

ಮೇಳ :—

ಕೋಲೂ ಕೋಲೂ ಮುತ್ತಿನ ಕೋಲು ।
ಕೋಲೂ ಕೋಲೂ ರನ್ನದ ಕೋಲು ।
ಕೋಲೂ ಕೋಲೂ ಚಿನ್ನದ ಕೋಲೂ ॥

ಕೋಲು ತೊಳೆದು ಗಂಗೆ ಪೂಜೆ ಮಾಡಿದ ಮೇಲೆ ಕಳಶವನ್ನು ಕಳಶಗಿತ್ತಿಯ ತಲೆಯ ಮೇಲಿಟ್ಟು ನಾಲ್ಕುಮಂದಿ ಬಸವನನ್ನು ಕೂಡಿಸಿರುವ ಮಣೆಯನ್ನು ಹೊತ್ತು ಕೊಂಡು ನಡೆಮುಡಿಯ ಮೇಲೆ ನಡೆದುಕೊಂಡು ಮನೆಯ ಬಾಗಿಲಿಗೆ ಬರುವರು. ಮನೆಯ ಬಾಗಿಲಿಗೆ ಬರುವುದೇ ತಡ, ಕಳಶಗಿತ್ತಿ ಮತ್ತು ಬಸವನನ್ನು ಹೊತ್ತವರು–ಇವರನ್ನು ಬಿಟ್ಟು ಉಳಿದವರೆಲ್ಲಾ ಓಡಿ ಬಂದು ಬಾಗಿಲಿಗೆ ಅಡ್ಡವಾಗಿ ನಿಲ್ಲುವರು—

**5. ಬಸವನಿಗೆ ಬಾಗಿಲು ತಡೆದಾಗ ಹೇಳುವ ಹಾಡು—**

ಕಳಶಗಿತ್ತಿ ಬಾಗಿಲುತಡೆದವರ ಸವಾಲಿಗೆ ಉತ್ತರ ಕೊಡುವಳು—

ಹುಡುಗಿಯರು—ಒಂದೆಂಬೋದು ಚಂದ್ರಮಾಲೇ ಸರ ।
ಎರಡೆಂಬೊದೇನೇ ಹೆಸರ್ಲೇಳೇ ॥

ಕಳಶಗಿತ್ತಿ—ಎರಡೆಂಬೋದು ಗರುಡಮಾಲಿ ಸರ ।
ಹುಡುಗಿಯರು—ಮೂರೆಂಬೊದೇನೆ ಹೆಸರ್ಹೇಳೇ ॥
ಕಳಶಗಿತ್ತಿ—ಮೂರೆಂಬೋದು ಮುತ್ತಿನ ಸರ ಕಣೆ ।

ಹೀಗೆಯೇ ನಾಲ್ಕು, ಐದು, ಆರು, ಏಳು, ಎಂಟು, ಒಂಭತ್ತು, ಹತ್ತರ ವರೆಗಿನ ಸಂಖ್ಯೆಗಳನ್ನು ಕೇಳಿ, ಅವಳಿಂದ ಉತ್ತರವನ್ನು ಪಡೆದು ಹನ್ನೊಂದನೇ ಸಂಖ್ಯೆಗೆ

ಹುಡುಗಿಯರು—ಹನ್ನೊಂದೆಂಬೊದೇನೇ ಹೆಸರ್ಹೇಳೆ ॥
ಕಳಶಗಿತ್ತಿ—ಹನ್ನೊಂದೆಂಬೋದು ಹೊನ್ನಿನ ಉಂಗುರ ।
ಹುಡುಗಿಯರು—ಇನ್ನೊಂದ್ಹೇಳೆ ಗಂಡನ್ಹೆಸರ ॥

ಎಂದು ಅವಳನ್ನು ಪೀಡಿಸುವರು. ಅವರ ಕಾಟವನ್ನು ತಡೆಯಲಾರದೆ 'ಬಸವ' ಎಂದು ಕೂಡಲೇ ಹೇಳಿಬಿಡುವಳು. ಅನಂತರ ಎಲ್ಲರೂ ಒಳಗೆ ಬಂದು, ಸುಣ್ಣಬಣ್ಣ ತಳಿರು ತೋರಣಗಳಿಂದ ಅಲಂಕೃತವಾಗಿರುವ ಗೂಡಿನಲ್ಲಿ ಬಸವನನ್ನು ಇಟ್ಟು, ಕಳಶಗಿತ್ತಿಯನ್ನು ಹಸಮಣೆಯ ಮೇಲೆ ಕುಳ್ಳಿರಿಸಿ, ಅವಳ ಸುತ್ತಲೂ ಚಪ್ಪಾಳೆ ತಟ್ಟಿಕೊಂಡು ಹಾಡು ಹೇಳುತ್ತಾ ಕುಣಿಯುವರು—

**6. ಬಸವ ಮೈತುಂಬುವುದು—**

ಅಕ್ಕವ್ವೊ ಚಿಕ್ಕವ್ವೊ
ಚಿಕ್ಕ ಬಸವಯ್ಯನಿಗೆ
ಅಕ್ಕಿ ಮೈದುಂಬಿಲೀ
ಹಾಗೆ ಮೈದುಂಬಲೀ
ಧೂಳಿಸ್ಕೊ ದುಂಬ್ಲಿಸ್ಕೊ
ಆನೇಮೇಲಾಡುತ ಬಾ
ಒಂಟೆಮೇಲಾಡುತ ಬಾ
ಕುದುರೆ ಮೇಲ್ಕುಣಿಯುತ ಬಾ ॥

ಈ ಹಾಡುಗಳಲ್ಲಿ ಏನೂ ಅರ್ಥವಿಲ್ಲದಿದ್ದರೂ ಅದರಿಂದ ಉಂಟಾಗುವ ಗದ್ದಲದ ಪರಿಣಾಮವಾಗಿ ಕಳಶಗಿತ್ತಿಗೆ ಸ್ವಲ್ಪ ಮಟ್ಟಿಗಾದರೂ ತಬ್ಬಿಬ್ಬಾಗುವುದು. ಆಗ ಹುಡುಗಿಯರು 'ಬಸವ ಮೈ ತುಂಬಿಕೊಂಡಿತು' ಎಂಬುದನ್ನು ತಿಳಿಯಲು ಅವಳಿಗೆ ಹುಲ್ಲು ತಿನ್ನಿಸಿ ನೀರು ಕುಡಿಸುವರು. ನಿರ್ಧರವಾದ ಮೇಲೆ ನಾಲ್ಕು ಮಂದಿ ಹುಡುಗಿಯರು ಬಸವನ ಮುಂದೆ ಕೋಲಾಟವಾಡುವರು. ಹಾಡಿನ ಲಯಕ್ಕೆ ತಕ್ಕ ಹೆಜ್ಜೆಯ ಕುಣಿತ, ಕುಣಿತಕ್ಕೆ ತಕ್ಕ ಕೋಲಿನ ಹೊಡೆತ ಇವು ಬಹಳ ಸೊಗಸಾಗಿರುವುದು. ಅವರು ಕೋಲಾಟವಾಡುವಾಗ ಹೇಳುವ ಹಾಡೆಲ್ಲಾ ಸಾಧಾರಣವಾಗಿ ಕೃಷ್ಣಲೀಲೆಗೆ ಸಂಬಂಧಿಸಿದ ಹಾಡುಗಳೇ ಹೆಚ್ಚು. ಮುಕ್ಕಾಲು ಪಾಲು ಪದಗಳೆಲ್ಲಾ ಕೃಷ್ಣ-ಗೊಲ್ಲತಿಯರ ಸಂವಾದಗಳು. ಅವುಗಳಲ್ಲಿ ಒಂದೆರಡು ಉದಾಹರಣೆಗಳನ್ನು ನೋಡಬಹುದು

**7. ಕೋಲಾಟದ ಪದಗಳು—ಕೃಷ್ಣ ಪಾರಿಜಾತ.**

ಯದುಕುಲೇಶನೇ । ಸ್ವಾಮಿ । ಪದುಮನಾಭನೇ ।
ಮುದದಿ ನೆನೆವೆನೇ । ಕೃಷ್ಣರ । ಪದನ ಪಾಡ್ವೆನೇ ॥

ದ್ವಾರವತಿಯಲ್ಲೀ । ಹದಿ । ನಾರು ಸಾವಿರಾ ।
ನೂರುಹೆಂಡಿರೂ । ಸ್ತ್ರೀಯು । ರಾಳುತಿರ್ಪನೂ ॥
ಸುಜನರೆಲ್ಲರೂ । ಕೃಷ್ಣಗೆ । ಅಜನಪಿತನೆಂದೂ ।
ಭಜನೆಮಾಡಲೂ । ಅಲ್ಲಿಗೆ । ದ್ವಿಜನು ಬಂದನೂ ॥
ಬಂದ ದ್ವಿಜನಿಗೇ । ಅಜಿನ । ತಂದುಹಾಸಿದಾ ।
ವಂದನೆ ಮಾಡಿದಾ । ಸುಖವೆ । ಎಂದು ಕೇಳಿದಾ ॥
ದೇವಲೋಕದಾ । ಪಾರಿ । ಜಾತಪುಷ್ಪವೂ ।
ನಾರಿರುಕ್ಮಿಣೀ । ಗಲ್ಲದೆ । ಬೇರೆ ಸಲ್ಲದೂ ॥
ನಾರಿರುಕ್ಮಿಣೀ । ಹೀಗೆ । ಬಾರೆಎನುತಲೀ ।
ವಾರೆತುರುಬಿಗೇ । ಪಾರಿ । ಜಾತಮುಡಿಸಿದಾ ॥
ಪಾರಿಜಾತದಾ । ಪರಿಮ । ಊರು ತುಂಬಿತೂ ।
ಮೂರುಲೋಕಕೇ । ಹರುಷ । ಮೀರಿಹೋಯಿತೂ ॥
ಯೋಗಿನಾರಂದಾ । ಸಾಗಿ । ಸತ್ಯಭಾಮೆಗೇ ।
ಇಲ್ಲಾದ ಸುದ್ದಿಯಾ । ಹೋಗಿ । ಬೇಗ ಹೇಳಿದಾ ॥
ಕೇಳಿದಾಕ್ಷಣಾ । ಭಾಮೆ । ಭಾಳಕೋಪದೀ ।
ತಾಳಲಾರದೇ । ಮನವ । ಗಾಳುಕೊಂಡಳೂ ॥
ವಾಲೆ ಸರಿಗೆಯೂ । ವಂಕಿ । ತೋಳಬಾಪುರೀ ।
ಕೀಲುಕಂಕಣಾ । ಭೂಮಿ । ಮೇಲೆ ಒಗೆದಳೂ ॥
ಸರಿಯ ಸವತಿಯೂ । ಆಕೆ । ಮೆರೆವ ಭಾಗ್ಯವೂ ।
ಗಿಡವನ್ನಾಯಲೋ । ದೊಡ್ಡ । ಮಡುವ ಧುಮುಕಲೊ ॥
ಏಳು ಪರ್ವತಾ । ಹತ್ತಿ । ಹಾರಿ ಬೀಳಲೋ ।
ಯಾರಿಗೇಳಲೋ । ಮನದ । ಘೋರತಾಪವಾ ॥
ಒಂದು ಹೂವಿಗೇ । ಭಾಮೆ । ಇಂದು ಮುನಿವರೇ ।
ಇಂದ್ರಲೋಕದಾ । ಮರವ । ತಂದು ಇಳುಹುವೇ ॥

ಮೇಳ :— ಕೋಲು ಕೋಲಣ್ಣಾ । ಮುತ್ತಿನ । ಕೋಲುಕೋಲಣ್ಣಾ ।
ಕೋಲನ್ನುಯ್ದು । ಪಾಡಿರಮ್ಮ । ಆದಿವರಹನಾ ॥

## 8. ಕೃಷ್ಣಗೊಲ್ಲತಿಯ ಸಂವಾದ—

ಚಂದ್ರಗಾವಿಯನುಟ್ಟು । ಸರದ ಮುತ್ತನು ಕಟ್ಟೀ ।
ಚಂದದಾಭರಣವಿಟ್ಟೂ ।
ಹಾಲಿನ ಹರವಿಯ ತಲೆಯ ಮೇಲಿಟ್ಟುಕೊಂಡು ।
ಬಂದಾಳೆ ಕೇರಿಗಾಗಾ ॥
ಹಾಲುಮಾರುವ ಧ್ವನಿ ಆಲೈಸಿ ರಂಗ ತಾ ।
ಮೇಲಿನ ಕೇರಿಗ್ಹೋಗೀ ।

ನಾಳೆ ನಮ್ಮನೆಯಲ್ಲಿ | ವೀಳ್ಯಪ್ರಸ್ತಗಳುಂಟು
ಹಾಲು ನಿಲ್ಲಿಸು ಎಂದನೂ ॥
ಕೊಂಬೋನು ನೀನಲ್ಲ । ಕೊಡುವ್ಹೋಳು ನಾನಲ್ಲಾ |
ಡಂಬಾಚಾರದ ಮಾತೇಕೋ ।
ಭೂಮಂಡಲವಾಳುವ | ಅರಸೀನ ಕೂಡ್ಹೇಳೀ ।
ದಂಡಾನ ತೆಗೆಸೂವೇನೂ ॥
ಅಣ್ಣ ಸೆರಗ ಬಿಡೋ । ತಮ್ಮ ಸೆರಗ ಬಿಡೊ
ಅಣ್ಣಯ್ಯ ಸೆರಗ ಬಿಡೋ |
ಅಣ್ಣನು ನಾನಲ್ಲ | ತಮ್ಮನೂ ನಾನಲ್ಲ |
ನಿನ್ನ ಅಣ್ಣನ ವೈರಿ ಕಣೇ ॥
ಭಾವ ಸೆರಗ ಬಿಡೊ | ಮಾವ ಸೆರಗ ಬಿಡೊ ।
ಭಾವಯ್ಯ ಸೆರಗ ಬೀಡೋ |
ಭಾವನು ನಾನಲ್ಲ ಮಾವನು ನಾನಲ್ಲ |
ನಿನ್ನ ಮಾವನ ಮಗನು ಕಣೇ ॥
ತಂದೆ ಸೆರಗಬಿಡೊ | ಕಂದ ಸೆರಗ ಬಿಡೊ |
ಕಂದಯ್ಯ ಸೆರಗಬೀಡೋ |
ತಂದೆಯು ನಾನಲ್ಲ । ಕಂದಾನು ನಾನಲ್ಲ
ನಿನ್ನ ಕಂದಾನ ತಂದೆ ಕಣೇ ॥

ಮೇಳ :—

ಕೋಲು ಕೋಲೆನ್ನ ಕೋಲೇ | ಕೋಲು ಕೋಲೆನ್ನ ಕೋಲೇ |
ಕೋಲು ಕೋಲೆನ್ನ ಕೋಲೇ |
ಸ್ವಾಮಿಸರ್ವೋತ್ತಮ । ಲೀಲೆಲಾಡಿದ ಕೋಲೇ |
ನಿತ್ಯಪ್ರಕಾಶಕೋಲೆ ॥

## 9. ಮತ್ತೊಂದು ಕೋಲಾಟದ ಹಾಡು—

ಕೆಂಪು ಚೀಪು | ಅರಶಿನಗಂಧ |
ಇಂಪಾದ | ಹರಿನಾಮದ | ಬೊಟ್ಟು |
ಸೊಂಪುಳ್ಳಾ | ತಿಗುಳಾ | ಹುಡುಗೀ ಬಾರೆ |
ಕೋಲನ್ನಾಡೋಣಾ ॥

ಮೇಳ : —

ಕೋಲನ್ನಾಕೋಣ ಬನ್ನಿ
ಜಾಣೆಯರೆಲ್ಲಾ | ಮುದ್ದು
ಬಾಲೆಯರೆಲ್ಲಾ |

ಕೋಮಲಾಂಗಿ ಶ್ರೀನಿವಾಸ ರಂಗಾನ ಮುಂದೇ ॥
ಪಟ್ಟೆ ಅಂಚಿನ | ಸೀರೆಯುನ್ನುಟ್ಟು |
ಬೆಟ್ಟೀನಗಲ | ಕುಂಕುಮವಿಟ್ಟು |
ಕಟ್ಟಾಣೀ | ಕೊರಳೊಳೀ ಬಾರೆ |
ಉತ್ರಾಜಿರ | ಹುಡುಗೀ ॥

ಮೇಳ :—

. ಕೋಲನಾಡೋಣ ಬಾರೆ ..........
ಸಣ್ಣಅಂಚ್ಚಿನ | ಸೀರೆಯುನುಟ್ಟು |
ಬಿನ್ನಾಣದಲಿ | ಕುಪ್ಪುಸತೊಟ್ಟು |
ಚೆನ್ನಪಟ್ಣದ | ಹೆಣ್ಣೆ ಬಾರೇ |
ಕರ್ಣಾಟಿಗ | ಹುಡುಗೀ ॥

ಮೇಳ :—

ಕೋಲನ್ನಾಡೋಣ ಬಾರೆ . . .. ..
ಹಾಗದ ಅಡಿಕೆ | ಹಣವಿನ ಸಿಸ್ತು |
ಸಾದಿನ ಬಟ್ಟು | ಸಮುಕಟ್ಟಿನ ಸೆರಗು |
ಬೀದೀಳ್ಹೋಗೋಳೆ | ಬಾರೆ |
ಸೊಗಸೀನಾ | ಹುಡುಗಿ ॥

ಮೇಳ :— ಕೋಲನ್ನಾಡೋಣ ಬನ್ನಿ .. ... ..... .
ಕೋಮಲಾಂಗಿ ಶ್ರೀನಿವಾಸರಂಗನಾ ಮುಂದೇ ॥

### 10. ಹರಕೆಯ ಹಾಡುಗಳು—

ಒಂದು ಸಾವಿರವಾಗು | ನಂದನವನವಾಗೂ |
ತಂಗೇರಿಗೆ ತವ್ರೂ | ಮನೇಽಯಾಗು |
ತಂಗೇರಿಗೆ ತವ್ರೂ ಮನೆಯಾಗು | ಅಣ್ಣಯ್ಯಾ |
ಒಂದು ಸಾವಿರ ರಾಜ್ಯಕ್ಕೆ | ದೊರೇಽಯಾಗು ॥
ಆರುಸಾವಿರವಾಗು | ಬಾಳೆಯ ವನವಾಗು |
ಭಾಮೇರಿಗೆ ತವ್ರೂ | ಮನೇಽಯಾಗು |
ಭಾಮೇರಿಗೆ ತವ್ರೂ ಮನೆಯಾಗು | ಅಣ್ಣಯ್ಯಾ |
ಆರು ಸಾವಿರ ರಾಜ್ಯಕ್ಕೇ | ಅರಾಸಾಽಗೂ ॥೨॥
ಹತ್ತು ಸಾವಿರವಾಗು | ಕಿತ್ತಲೆ ವನವಾಗು |
ಅಕ್ಕ ತಂಗೇರಿಗೆ ತವ್ರೂ | ಮನೇಯಾಽಗೂ |
ಅಕ್ಕತಂಗೇರಿಗೆ ತವ್ರೂ | ಮನೆಯಾಗು | ಅಣ್ಣಯ್ಯ |
ಹತ್ತು ಸಾವಿರ ರಾಜ್ಯಕೇ | ದೊರೇಯಾಽಗು ॥೩॥

**ಮತ್ತೊಂದು ಹರಕೆಯ ಹಾಡು—**

ಉದ್ದಿನ ಕಾಯಾಗು | ಉದ್ದಿನ ಹೂವಾಗು |
ಉದ್ದಿದಲ್ಲೇಳೂ | ಗೊನೇಯಾಽಗು |
ಉದ್ದಿನಲ್ಲೇಳೂ ಗೊನೆಯಾಗು | ಅಣ್ಣಯ್ಯ |
ಮುದ್ದಾಡುವಂಥಾ | ಮಗನಾಽಗ್ಲೀ ॥೧॥
ಕಡಲೆಯ ಕಾಯಾಗು | ಕಡಲೆಯ ಹೂವಾಗು |
ಕಡಲೆಯಲ್ಲೇಳೂ | ಗೊನೆಯಾಽಗು |
ಕಡಲೆಯಲ್ಲೇಳೂ ಗೊನೆಯಾಗು | ಅಣ್ಣಯ್ಯಾ |
ಕರೆದು ಮುದ್ದಿಸುವಂಥಾ | ಮಗನಾಽಗ್ಲೀ ॥೨॥

**11. ಕಾಸು ಕೊಡದ ಲೋಭಿಯನ್ನು ಕುರಿತು—**

ಕೊಟ್ಟೆ ಕೊಟ್ಟೇನೆಂದೂ | ವಸ್ತ್ರವ ಬಿಚ್ಚಿದಾ |
ವಸ್ತ್ರದೊಳಗೊಂದೂ | ಹಣಾವಿಲ್ಲ |
ವಸ್ತ್ರದೊಳಗೊಂದೂ | ಹಣವಿಲ್ಲದಿದ್ದರೆ |
ಬಚ್ಚಲ ಕಂಡೀಲಿ | ನುಸೀದಾಽನೂ ॥೧॥
ತಾಳು ತಾಳೂ ಎಂದು | ಪಾಗನು ಬೀಚ್ಚಿದಾ |
ಪಾಗೀನೊಳಗೊಂಡೂ | ಹಣಾವಿಲ್ಲಾ |
ಪಾಗಿನೊಳಗೊಂಡೂ | ಹಣವಿಲ್ಲದಿದ್ದರೆ |
ಬಾಗಿಲ ಕಂಡೀಲೀ | ನುಸೀದಾಽನೂ ॥ ೨ ॥
ನಿಲ್ಲು ನಿಲ್ಲು ಎಂದೂ | ಶಾಲನು ಬಿಚ್ಚಿದಾ |
ಶಾಲಿನೊಳಗೊಂಡೂ | ಹಣವಿಲ್ಲದಿದ್ದರೆ |
ಹೊಸ್ತಿಲಕಂಡೀಲಿ | ನುಸೀದಾಽನು ॥

**12 ಮೂರುಕಾಸು ಆರುಕಾಸು ಕೊಟ್ಟವರನ್ನು ಕುರಿತು—**

ಅಡ್ಡದಕಾಸನು | ದೊಡ್ಡ ತಿಪ್ಪೆಗೆ ಹಾಕೀ |
ದೊಡ್ಡಮಳೆಬಂದೂ | ಚಿಗುರೀತೂ |
ದೊಡ್ಡಮಳೆಬಂದೂ ಚಿಗುರಲು | ಅಣ್ಣಯ್ಯಾ |
ನಿನ್ನ ಅಡ್ಡದ ಕಾಸೀಗೇ | ಬೆಲೇಯಿಲ್ಲಾ ॥ ೧ ॥
ಹಾಗದ ಕಾಸನು | ಬಾಗಿಲ ಮುಂದ್ಹಾಕೀ |
ಸೋರೋ ಮಳೆಬಂದೂ | ಚಿಗೂರೀತೂ |
ಸೋರೋಮಳೆಬಂದೂ ಚಿಗುರಲು | ಅಣ್ಣಯ್ಯ |
ನಿನ್ನ ಹಾಗಾದ ಕಾಸ್ಗೇಽ | ಬೆಲೇಯಿಲ್ಲಾ ॥

ಇವಿಷ್ಟು ಮಾದರಿಗಾಗಿ ಆರಿಸಿಕೊಂಡ ದಿನಚರಿಯ ಹಾಡುಗಳಲ್ಲಿ ಕೆಲವು ಸರಕು ಇನ್ನೆಷ್ಟಿವೆಯೋ ದೇವರಿಗೇ ಗೊತ್ತು. ಕೋಲಾಟದ ಹುಡುಗಿಯರು ಬೆಳಗ್ಗೆ

ಮತ್ತು ಮಧ್ಯಾಹ್ನ ಮನೆಮನೆಗೂ ಹೋಗಿ ಕೋಲಾಟವಾಡುವರು. ಮನೆಯವರು ಆ ಮಕ್ಕಳಿಗೆ ಅರಶಿನ ಕುಂಕುಮ ಕಣಗಳನ್ನೋ ದುಡ್ಡನ್ನೋ ಯಥಾಶಕ್ತಿ ಕೊಟ್ಟು ಕಳುಹಿಸುವರು. ಒಂದು ಮನೆಯಲ್ಲಿ ಹೇಳಿದ ಹಾಡುಗಳನ್ನೇ ಹೆಚ್ಚಾಗಿ ಇನ್ನೊಂದು ಮನೆಯಲ್ಲಿ ಹಾಡಕೂಡದೆಂದು ನಿಬಂಧನೆಯೂ ಉಂಟು. ಈ ಕೋಲಾಟದ ಪದಗಳನ್ನು ಅಜ್ಜಿ, ಮುತ್ತಜ್ಜಿ, ಕೋಲಜ್ಜಿಯರ ಪರಂಪರೆಯಿಂದ ಕಲಿತುಕೊಂಡುದಾಗಿ ಹೇಳುವರು. ಅದಲ್ಲದೆ ಮಾರ್ನೋಮಿ ಪದಗಳಂತೆ, ಬೀಗರ ಹಾಡುಗಳಂತೆ ಸಂದರ್ಭಕ್ಕೆ ತಕ್ಕಂತೆ ಹುರುಡಿನಿಂದ ಹಾಡುಗಳನ್ನು ಅಲ್ಲೇ ಕಟ್ಟಿಕೊಂಡು ಹಾಡುವರು. ವಿರಾಮದಿಂದ ಕುಳಿತಿರುವ ಹಳ್ಳಿಯವರಿಗೆ ಕೋಲಾಟದ ಹುಡುಗಿಯರು ಬಂದರೆ ಅವರ ಆಶುಕವಿತೆಗಳನ್ನು ಕೇಳಲು ಬಹಳ ಆನಂದ ಮತ್ತು ಆದರ.

ಈ ರೀತಿಯಾಗಿ ಹೆಣ್ಣು ಮಕ್ಕಳು ಹತ್ತು ಹದಿನೈದು ದಿನಗಳವರೆಗೆ ಬೆಳಗ್ಗೆ ಮತ್ತು ಸಂಜೆ ಬಸವನ ಪೂಜೆಮಾಡಿ, ಅನಂತರ ಮನೆಮನೆಗೂ ಹೋಗಿ ಕೋಲಾಟವಾಡಿ ಹಣವನ್ನು ಕೂಡಿಡುವರು. ಕೊನೆಯ ದಿನ ಹಳ್ಳಿಗಾಡಿನ ಅಭಿರುಚಿ ಮತ್ತು ಶಕ್ತಿಗೆ ತಕ್ಕಂತೆ ಬಸವನ ಸಮಾರಾಧನೆಯನ್ನು ಯಶಸ್ವಿಯಾಗಿ ನೆರವೇರಿಸಿ ಬಸವನನ್ನು ಯಾವುದಾದರೂ ಹೊಲಗದ್ದೆಗಳಿಗೋ ತೋಪಿಗೋ ತೆಗೆದುಕೊಂಡು ಹೋಗಿ ಬಿಟ್ಟು ಬರುವರು. ಉಳಿದಿರುವ ಹಣವನ್ನು ಅದರಲ್ಲಿ ಭಾಗವಹಿಸಿದವರೆಲ್ಲಾ ಹಂಚಿಕೊಳ್ಳುವರು.

ಈಗ್ಗೆ ಸುಮಾರು ಮೂವತ್ತು ನಲವತ್ತು ವರ್ಷಗಳ ಹಿಂದೆ ಬಸವನ ಪೂಜೆ, ಕೋಲಾಟಗಳು ಬಹಳ ಆಸ್ಥೆ, ಅಕ್ಕರೆಗಳಿಂದ ನಡೆಯುತ್ತಿದ್ದಂತೆ ಕಾಣುತ್ತದೆ. ಈಗ ಆ ಹಳ್ಳಿಗಳಲ್ಲೂ ನವ ನಾಗರಿಕತೆ ಗಾಳಿಯ ಸೋಂಕಿನಿಂದ ಹಿಂದಿನ ಶ್ರದ್ಧಾ ಭಕ್ತಿಗಳು ಮಾಯವಾಗಿ ಪದ್ಧತಿಯಿರುವ ಮನೆಗಳಲ್ಲಿ ಅದರ ಛಾಯೆ ಮಾತ್ರ ಕಂಡು ಬರುತ್ತಿದೆ. ಈ ಕೋಲಾಟದ ಪದಗಳಲ್ಲಿ ಗರತಿ ಹಾಡಿನಂತೆ ಉತ್ತಮ ಸಾಹಿತ್ಯ, ಛಂದಸ್ಸಿನ ವೈವಿಧ್ಯತೆ, ಸಂಸ್ಕೃತಿಯ ಹೊಳಪು ಜನರ ಮನಸ್ಸನ್ನು ಆಕರ್ಷಿಸಬಲ್ಲವೆಂದು ಧಾರಾಳವಾಗಿ ಹೇಳಬಹುದು. ಇಲ್ಲಿ ಸಂಗ್ರಹಿಸಿರುವ ಕೆಲವು ಹಾಡುಗಳು ಮದ್ದೂರು ತಾಲ್ಲೋಕಿನ ಯಾವುದೋ ಒಂದು ಸಣ್ಣ ಹಳ್ಳಿಯವು. ಬೇರೆ ಬೇರೆ ಪ್ರಾಂತಗಳವರು ಹಾಡುವ ಈ ಪದಗಳನ್ನು ಅಲ್ಲಿನವರು ಆಚರಿಸುವ ಪದ್ಧತಿಯನ್ನು ಸಂಗ್ರಹಿಸಿ ಬೆಳಕಿಗೆ ತಂದರೆ, ನಮ್ಮ ಪುರಾತನ ಸಂಸ್ಕೃತಿಯ ದ್ಯೋತಕವಾದ ಇಂತಹ ಉತ್ತಮ ಸಾಹಿತ್ಯ ಅಳಿಯದೆ ಉಳಿದುಕೊಳ್ಳಬಹುದು.

ಬಿ. ನರಸಮ್ಮ.

# ಪಂಚಾಂಗ ಸುಧಾರಣೆ

ಭಾರತದಲ್ಲಿ ಈಗ ಬಳಕೆಯಲ್ಲಿರುವ ೩೦–೩೫ ಪಂಚಾಂಗ ಪದ್ಧತಿಗಳಲ್ಲಿ ಯಾವುದೂ ಸರ್ವಸಮರ್ಪಕವಾಗಿಲ್ಲವೆಂಬುದು ವಿಚಾರಪರರೆಲ್ಲರಿಗೂ ತಿಳಿದಿರುವ ಸಂಗತಿಯೇ ಆಗಿದೆ. ಭಾರತಕ್ಕೆ ಸ್ವಾತಂತ್ರ್ಯ ಬಂದ ಮೇಲೆ ಜನಗಳ ಹಿತದೃಷ್ಟಿಯನ್ನು ಗುರಿಯಾಗಿಟ್ಟುಕೊಂಡು ರಾಷ್ಟ್ರದ ಆಹಾರ ವ್ಯವಸ್ಥೆ, ವಸ್ತ್ರ ವ್ಯವಸ್ಥೆ, ವಾಣಿಜ್ಯ ವ್ಯವಸ್ಥೆ, ವಿದ್ಯಾ ವ್ಯವಸ್ಥೆ ಇತ್ಯಾದಿಗಳನ್ನು ಸುಧಾರಿಸುವ ಉದ್ಯಮಗಳಲ್ಲಿ ಕೇಂದ್ರ ಸರ್ಕಾರವು ತೊಡಗಿರುವಂತೆಯೇ ಪಂಚಾಂಗ ವ್ಯವಸ್ಥೆಯನ್ನು ಸುಧಾರಿಸುವ ಕಾರ್ಯಕ್ಕೂ ಕೈಹಾಕಿರುವುದು ಉಚಿತವಾಗಿದೆ ಈ ಉದ್ದೇಶ ಸಾಧನೆಗಾಗಿ ಭಾರತದ ಪ್ರಧಾನ ಮಂತ್ರಿ ನೆಹ್ರೂ ಮತ್ತು ವಿದ್ಯಾಮಂತ್ರಿ ಮೌಲಾನಾ ಆಸಾದ್ ರವರು ಭಾರತ ವಿಜ್ಞಾನೋದ್ಯಮ ಸಂಶೋಧನಾಲೋಚನ ಮಂಡಲಿಯನ್ನು[1] ಒಂದು ಪಂಚಾಂಗ ಸುಧಾರಣಾ ಸಮಿತಿಯನ್ನು[2] ನೇಮಕಮಾಡಲು ಪ್ರೇರಿಸಿದರು. ಮಂಡಲಿ ಕಲ್ಕತ್ತೆಯ ಮೇಘನಾದ ಸಹಾರವರ ಅಧ್ಯಕ್ಷತೆಯಲ್ಲಿ ಅಧ್ಯಕ್ಷರನ್ನು ಕೂಡಿ ಏಳು ವಿಜ್ಞಾನಿಸದಸ್ಯರ ಸಮಿತಿಯೊಂದನ್ನು ಗೊತ್ತು ಮಾಡಿತು. 'ಭಾರತದಲ್ಲಿ ಈಗ ಆಚರಣೆಯಲ್ಲಿರುವ ಎಲ್ಲ ಪಂಚಾಂಗಪದ್ಧತಿಗಳನ್ನೂ ಸಮಿತಿ ಶಾಸ್ತ್ರೀಯ ದೃಷ್ಟಿಯಿಂದ ಪರಿಶೀಲಿಸಿ, ಅನಂತರ ಸಮಗ್ರರಾಷ್ಟ್ರವೂ ಅನುಸರಿಸಲು ಯೋಗ್ಯವಾದ ನಿಷ್ಕೃಷ್ಟವಾದ, ಶಾಸ್ತ್ರೀಯವಾದ ಒಂದು ಪಂಚಾಗ ಪದ್ಧತಿಯನ್ನು ಸ್ಥಾಪಿಸುವುದಕ್ಕಾಗಿ ಕೈಕೊಳ್ಳಬೇಕಾದ ಕಾರ್ಯಕ್ರಮಗಳ ಬಗ್ಗೆ ಸೂಕ್ತ ಸಲಹೆಗಳನ್ನು ಒಪ್ಪಿಸತಕ್ಕದ್ದು' ಎಂಬುದೇ ಸಮಿತಿಯ ವಿಷಯವ್ಯಾಪ್ತಿಯಾಗಿತ್ತು. ಸಮಿತಿಯ ಆರಂಭೋತ್ಸವವು ೧೯೫೩ ಫೆಬ್ರುವರಿ ೨೧ರಲ್ಲಿ ದೆಹಲಿಯಲ್ಲಿ ನೇರವೇರಿತು. ಮುಂದಿನ ಎರಡು ದಿನಗಳಲ್ಲಿಯೂ ಸದಸ್ಯರು ಸೇರಿ ಹಲವು ಮೂಲಭೂತವಾದ ನಿರ್ಣಯಗಳನ್ನು ಒಮ್ಮತದಿಂದ ಸರ್ಕಾರದ ಮುಂದೆ ಇಟ್ಟಂತೆ ಅವರು ಪ್ರಕಟಿಸಿರುವ ಸಂಕ್ಷಿಪ್ತ ವರದಿಯಿಂದ[3] ತಿಳಿದು ಬರುತ್ತದೆ.

ಸುಧಾರಣಾ ಸಮಿತಿಯ ಪಂಚ ನಿರ್ಣಯಗಳು ಇವು :—

೧. ಪಂಚಾಂಗದ ತಯಾರಿಕೆಗಾಗಿ ೩೬೫·೨೪೨೨ ದಿನಗಳ ಋತು ಅಥವಾ ಸಾಯನ ವರ್ಷವನ್ನು[4] ಆಧಾರವಾಗಿಟ್ಟುಕೊಳ್ಳಬೇಕು.

---

1. Council of Scientific & Industrial Research
2. Calender Reform Committee
3. 'Nehru speaks up for India'–Proceedings of Calender Reform Committee in Delhi
4. Tropical year,

೨. ಪಂಚಾಂಗದ ತೇದಿಗಳ ನಿರ್ಣಯಕ್ಕಾಗಿ ವಸಂತವಿಷುವತ್ಪುಣ್ಯ ದಿನದ[5] ಮಾರನೆಯ ದಿನ (ಮಾರ್ಚಿ ೨೨)ವನ್ನು ವರ್ಷದ ಆರಂಭ ದಿನವನ್ನಾಗಿ ಗಣಿಸಿ, ಈ ಶಾಸ್ತ್ರೀಯ ವ್ಯಾವಹಾರಿಕ ಸೌರ ಪಂಚಾಂಗವನ್ನು[6] 'ರಾಷ್ಟ್ರೀಯ ಪಂಚಾಂಗ' ವೆಂದು[7] ಕರೆಯತಕ್ಕದ್ದು. (ಆದರೆ ಮತಾಚಾರವ್ರತಗಳ ದೃಷ್ಟಿಯಿಂದ ಹಂಗಾಮಿಯಾಗಾದರೂ ವರ್ಷವು ಮೇಷ ಸಂಕ್ರಮಣಾನಂತರವೇ–ಏಪ್ರಿಲ್ ೧೩-೧೪ರಲ್ಲಿ–ಆರಂಭವಾಗಬಹುದು. ಇದು ಈಗ ರೂಢಿಯಲ್ಲಿರುವ ಪದ್ಧತಿಗಳಿಗೆ ತೋರಿಸಬೇಕಾದ ರಿಯಾಯಿತಿ.)

೩. ದೇಶದ ಒಳವ್ಯವಹಾರಕ್ಕೆಲ್ಲ ಸಮಗ್ರ ಭಾರತದಲ್ಲಿಯೂ ಶಕವರ್ಷವನ್ನು ಬಳಕೆಗೆ ತರತಕ್ಕದ್ದು

೪. ಪಂಚಾಂಗದ ಎಲ್ಲ ಗುಣಿತಗಳೂ ಪೂರ್ವ ರೇಖಾಂಶ ೮೨°೩೦′, ಉತ್ತರ ಅಕ್ಷಾಂಶ ೨೩° ೧೧′ (ಉಜ್ಜಯಿನಿಯ ಅಕ್ಷಾಂಶ)ಕ್ಕೆ ಸರಿಯಾದ ಭಾರತದ ಒಂದು ಕೇಂದ್ರಸ್ಥಾನಕ್ಕೆ ಅನ್ವಯಿಸಬೇಕು.

೫. ಈ ಕೇಂದ್ರಸ್ಥಾನಕ್ಕೆ ಸರಿಯಾದ ಮಧ್ಯರಾತ್ರಿಯಿಂದ ಮಧ್ಯ ರಾತ್ರಿಯ ವರೆಗಿನ ಅವಧಿ ದೇಶದಾದ್ಯಂತವೂ ವ್ಯಾವಹಾರಿಕವಾಗಿ ಅಂದಿನ 'ದಿನ'ವೆಂದು ಗಣಿಸಲ್ಪಡತಕ್ಕದ್ದು. ಆದರೆ ಮತಧರ್ಮಗಳ ದೃಷ್ಟಿಯಿಂದ ಸ್ಥಳೀಯ ಸೂರ್ಯೋದಯಕಾಲದಿಂದ ದಿನದ ಆರಂಭವೆಂದು ಎಣಿಕೆಯಾಗಬಹುದು.

ಈ ನಿರ್ಣಯಗಳನ್ನು ಕಾರ್ಯರೂಪಕ್ಕೆ ತರುವ ಉದ್ದೇಶದಿಂದ ಸಮಿತಿ ಸರ್ಕಾರಕ್ಕೆ ಕೆಳಗೆ ಕಂಡ ಸಲಹೆಗಳನ್ನು ಕೊಟ್ಟಿತು.

೧. ಅಖಿಲ ಭಾರತಕ್ಕೆ ಅನ್ವಯಿಸುವಂಥ ಐದು ವರ್ಷಗಳ ಒಂದು ತಾತ್ಕಾಲಿಕ 'ರಾಷ್ಟ್ರೀಯ ಪಂಚಾಂಗವು' ಮುಂದಾಗಿಯೇ ತಯಾರಾಗಬೇಕು. ಈ ಪಂಚಾಂಗದಲ್ಲಿ (ಸೌರ)ತೇದಿ, ತಿಂಗಳು, ತಿಥಿ ಮತ್ತು ನಕ್ಷತ್ರಗಳು ನಿರ್ಣಯವಾಗಿರಬೇಕು.

೨. ಭಾರತದ ಸರ್ಕಾರವು ಒಂದು ಭಾರತೀಯ ವಾರ್ಷಿಕ ಗ್ರಹಗತಿ ಕೋಷ್ಟಕವನ್ನೂ[8] ಮತ್ತು ನೌಕಾ ಪಂಚಾಂಗವನ್ನೂ[9] ಸಿದ್ಧಪಡಿಸುವುದಕ್ಕೆ ಅವಶ್ಯವಾದ ಕಾರ್ಯಕ್ರಮಗಳನ್ನು ಕೈಕೊಳ್ಳಬೇಕು ಸೂರ್ಯನ, ಚಂದ್ರನ, ಗ್ರಹಗಳ ಮತ್ತು ಇತರ ಪ್ರಧಾನ ಆಕಾಶಕಾಯಗಳ ದೈನಂದಿನ ಸ್ಥಾನಗಳನ್ನು ಈ ಪಂಚಾಂಗಗಳಲ್ಲಿ ತೋರಿಸಬೇಕು.

೩. ಆಧುನಿಕ ಯಂತ್ರಸಾಧನಗಳಿಂದ ಸುಸಜ್ಜಿತವಾದ, ನಿಷ್ಕೃಷ್ಟಕಾಲ ಪ್ರಸಾರವನ್ನು ಮಾಡಬಲ್ಲ ಒಂದು ಕೇಂದ್ರ ಅವೇಕ್ಷಣಶಾಲೆ[10] ಅನುಕೂಲವಾದ ಸ್ಥಳದಲ್ಲಿ ಸ್ಥಾಪಿತವಾಗಬೇಕು.

---

5. Vernal equinox. 6. Civil Solar Calendar. 7. National Calender 8. Annual Ephemeris 9. Nautical almanac 10. Central Observatory.

ಮೂಲಭೂತವಾದ ಈ ನಿರ್ಣಯಗಳಿಗೂ, ಸಲಹೆಗಳಿಗೂ ಯಾರಿಂದಲೂ ಆಕ್ಷೇಪಣೆಗಳು ಬರಲಾರವು. ಸಮಿತಿ ಶೀಘ್ರದಲ್ಲಿಯೇ ಈ ನಿರ್ಧಾರಗಳನ್ನು ಸರ್ಕಾರದ ಮುಂದಿಟ್ಟು ಸರ್ಕಾರದಿಂದ ತಕ್ಕಷ್ಟು ಹಣವನ್ನು ಪಡೆದು, ನಿರ್ಣಯಗಳು ಬೇಗನೆ ಕಾರ್ಯರೂಪಕ್ಕೆ ಬರಲು ಸಹಕಾರಿಯಾಗುವಂತೆ ಗಣಕರ[11] ಪ್ರಥಮ ಸಿಬ್ಬಂದಿಯನ್ನು ಆಗಲೆ ನೇಮಿಸಿರುವುದು ಸ್ತುತ್ಯರ್ಹವಾದದ್ದೇ ಅಲ್ಲದೆ ಶುಭಸೂಚಕ ವಾದದ್ದು. ಭಾರತೀಯರೆಲ್ಲರೂ ಸಮಿತಿಗೂ, ಸಮಿತಿಯ ಅಧ್ಯಕ್ಷರಿಗೂ ಈ ಸನ್ನಿ ವೇಶದಲ್ಲಿ ಅತ್ಯಂತ ಕೃತಜ್ಞರಾಗಿರಬೇಕಾದದ್ದರಲ್ಲಿ ಸಂಶಯವೇ ಇಲ್ಲ.

ಈಗ ನಿರ್ಣಯಗಳಿಂದ ಅಂಕುರಿಸುವ ಕೆಲವು ಸಮಸ್ಯೆಗಳನ್ನು ಪರಿಹಾರ ಮಾಡುವ ವಿಧಾನಗಳನ್ನು ಪರಿಶೀಲಿಸುವುದು ಸೂಕ್ತ. ಈ ಸಮಸ್ಯೆಗಳು ಸಮಿತಿಗೆ ತೋರಿಲ್ಲವೆಂದಲ್ಲ ಆದರೆ ಮಹಾಪ್ರಧಾನಿ ನೆಹ್ರೂ ಅವರು ಸಮಿತಿಯ ಆರಂಭೋತ್ಸವ ಸಮಯದಲ್ಲಿ ಕಳುಹಿಸಿದ ಸಂದೇಶದಲ್ಲಿ ತಿಳಿಸಿರುವಂತೆ 'ಪಂಚಾಂಗ ಸುಧಾರಣೆಯ ರೀತಿಯನ್ನು ವಿಜ್ಞಾನಿಗಳು ತಿಳಿಸಬಲ್ಲರು. ಆದರೆ ಅಧಿಕಾರವರ್ಗದವರಿಂದ ಮಾತ್ರ ಅದು ಆಚರಣೆಗೆ ಬರಬಲ್ಲದು. ಪುರಾತನ ರೋಮನ್ ಪಂಚಾಂಗವನ್ನು ಜೂಲಿಯಸ್ ಸೀಸರನಂಥ ಸರ್ವಾಧಿಕಾರಿಯೂ, ಅನಂತರ ಕ್ರೈಸ್ತ ಧರ್ಮಾಧಿಕಾರಿಯಾದ ಪೋಪ್ ಹದಿಮೂರನೆಯ ಗ್ರೆಗೊರಿಯೂ ಸುಧಾರಿಸಬಲ್ಲವರಾಗಿದ್ದರು ಅರೇಬಿಯದ ಪುರಾತನ ಚಾಂದ್ರಸೌರ ಪಂಚಾಂಗದ[12] ಸ್ಥಾನದಲ್ಲಿ ಶುದ್ಧ ಚಾಂದ್ರಮಾನ ಪಂಚಾಂಗವನ್ನು ಸ್ಥಾಪಿಸುವುದು ಇಸ್ಲಾಂ ಪ್ರವಾದಿಯ ಪ್ರತಿಷ್ಠಾವಾಣಿಯಿಂದ ಮಾತ್ರ ಸಾಧ್ಯ ವಾಯಿತು. ಆದರೆ ನಾವು ಈಗ ಪ್ರಜಾಪ್ರಭುತ್ವದ ಆಳ್ವಿಕೆಗೆ ಒಳಪಟ್ಟಿದ್ದೇವೆ. ನೀವು ಏನು ಸಲಹೆಗಳನ್ನಿತ್ತರೂ ಅವನ್ನು ಪ್ರಜೆಗಳಿಗೆ ಅವರ ಅಭಿಪ್ರಾಯ ಪಡೆಯಲು ಒಪ್ಪಿಸಬೇಕಾಗಿದೆ. ಆದರೆ ನಮ್ಮ ಜನರು ಹೊಸದು ಎಂಬ ಕಾರಣದಿಂದ ವಿದ್ಯು ಚ್ಛಕ್ತಿಯನ್ನಾಗಲಿ, ಹೊಸ ಯಂತ್ರಗಳನ್ನಾಗಲಿ ಹೇಗೆ ತಿರಸ್ಕರಿಸಿಲ್ಲವೋ ಹಾಗೆಯೇ ಯಾವ ನೂತನ ಆಚರಣೆಯಾಗಲಿ ಹೊಸದು ಎಂಬ ಕಾರಣಮಾತ್ರದಿಂದ ತಳ್ಳಿ ಹಾಕುವುದಿಲ್ಲವೆಂಬ ದೃಢ ನಂಬುಗೆ ನನಗಿದೆ' ಈ ದೃಷ್ಟಿಯಿಂದ ಸಮಿತಿಯ ತಜ್ಞ ಸದಸ್ಯರು ಸಾರ್ವಜನಿಕರಿಂದ ವೈಜ್ಞಾನಿಕ ಸಲಹೆಗಳನ್ನು ಅಪೇಕ್ಷಿಸದಿದ್ದರೂ ವ್ಯಾವ ಹಾರಿಕ ಸಲಹೆಗಳನ್ನು ಅಪೇಕ್ಷಿಸಿಯಾರು. ಅದಕ್ಕಿಂತ ಮುಖ್ಯವಾಗಿ ಪಂಚಾಂಗ ಸುಧಾರಣೆಗೆ ಕೈಹಾಕಿದಾಗ ಹುಟ್ಟಿಕೊಳ್ಳುವ ಶಾಸ್ತ್ರೀಯ, ವ್ಯಾವಹಾರಿಕ ಸಮಸ್ಯೆಗಳ ಸ್ವಭಾವವೆಂಥದೆಂಬುದನ್ನು ದಕ್ಷಿಣಭಾರತದ ಜನರ ಮುಂದಿಡುವುದೇ ಈ ಲೇಖನದ ಉದ್ದೇಶ. ಉದಾಹರಣೆಗೆ ಎರಡನೆಯ ನಿರ್ಣಯದಲ್ಲಿ ಸಮಿತಿಯವರು ಮತಾಚಾರ ಗಳನ್ನು ನೆನಪಿನಲ್ಲಿಟ್ಟುಕೊಂಡು ವರ್ಷವು ಮೇಷಸಂಕ್ರಮಣದ ದಿನ ಆರಂಭವಾಗ ಬಹುದೆಂಬ ರಿಯಾಯಿತಿ ತೋರಿಸಿದ್ದಾರೆ. ಇಂಥ ಇತರ ರಿಯಾಯಿತಿಗಳನ್ನು

11. Calculators 12. Luni-Solar Calendar,

ತೋರಿಸಬೇಕಾದ ಸಂದರ್ಭ ಒದಗಿದರೆ ರಾಷ್ಟ್ರದ ವಿವಿಧ ಭಾಗಗಳಲ್ಲಿ ಈಗ ರೂಢಿಯಲ್ಲಿರುವ ಪಂಚಾಂಗಪದ್ಧತಿಗಳ ಸಾಮಾನ್ಯ ತತ್ತ್ವಗಳ ಅರಿವು ಸುಧಾರಕರಿಗಿರಬೇಕು. ಸಮಿತಿಯ ಸದಸ್ಯರಲ್ಲಿ ಇಬ್ಬರು ಬಂಗಾಳದವರು, ಇಬ್ಬರು ಉತ್ತರ ಪ್ರದೇಶದವರು, (ಈ ಇಬ್ಬರಲ್ಲೊಬ್ಬರು ಬಂಗಾಳಿಯವರು), ಇಬ್ಬರು ಮಹಾರಾಷ್ಟ್ರದವರು, ಒಬ್ಬರು ಮಧ್ಯಭಾರತದವರು ಆದ್ದರಿಂದ ದಕ್ಷಿಣಭಾರತದ ಆಂಧ್ರ–ಕರ್ಣಾಟಕ ಮತ್ತು ತಮಿಳು–ಮಲೆಯಾಳ ಪಂಚಾಂಗಗಳನ್ನು ಬಳಸುತ್ತಿರುವವರ ದೃಷ್ಟಿಕೋನವೇನೆಂಬುದನ್ನು ಅವರು ಗಮನಿಸುವುದು ಸೂಕ್ತ

ನಮ್ಮ ಹಬ್ಬಗಳನ್ನು ನಾವು ಅನೇಕವೇಳೆ ದೇಶದ ಒಂದೊಂದು ಭಾಗದಲ್ಲಿ ಒಂದೊಂದು ದಿನ ಆಚರಿಸುತ್ತೇವೆಂದೂ, ಉದಾಹರಣೆಗೆ ಬಂಗಾಳದಲ್ಲಿ ಜರುಗುವ ಜಗನ್ನಾಥ ರಥೋತ್ಸವಾಚರಣೆಯ ದಿನಕ್ಕೂ ಒರಿಸ್ಸಾದಲ್ಲಿ ನಡೆಯುವ ಅದೇ ಜಗನ್ನಾಥ ರಥೋತ್ಸವದ ದಿನಕ್ಕೂ ಒಂದೊಂದು ಸಲ ಒಂದು ತಿಂಗಳಷ್ಟು ಅಂತರವಿರುತ್ತದೆ ಎಂದೂ ಸಮಿತಿಯ ವರದಿಯಲ್ಲಿ ಹೇಳಿದೆ. ಇದು ಬಹಳ ಶೋಚನೀಯವಾದ ಸ್ಥಿತಿಯೇ ಸರಿ ದಕ್ಷಿಣಭಾರತದಲ್ಲಿಯೂ ಕೆಲವು ಹಬ್ಬಗಳನ್ನು ಕೆಲವರು ಒಂದು ದಿನ ಆಚರಿಸಿದರೆ ಮತ್ತೆ ಕೆಲವರು ಬೇರೊಂದು ದಿನ ಆಚರಿಸುವುದುಂಟು. ಆದರೆ ಈ ವ್ಯತ್ಯಾಸ ಒಂದು ದಿನಕ್ಕಿಂತ ಹೆಚ್ಚಾಗುವುದು ಅಸಂಭವ. ಅಲ್ಲದೆ ಈ ವ್ಯತ್ಯಾಸದ ದೋಷವನ್ನೆಲ್ಲ ನಮ್ಮ ಪಂಚಾಂಗಗಳ ತಪ್ಪು ಲೆಕ್ಕಾಚಾರಗಳ ಮೇಲೆಯೇ ಹೊರಿಸುವುದು ಸರಿಯಲ್ಲ, ವ್ಯತ್ಯಾಸಕ್ಕೆ ಮುಖ್ಯಕಾರಣ ವಿವಿಧ ಮಾತಾನುಯಾಯಿಗಳು ಅನುಸರಿಸುತ್ತಿರುವ ವಿವಿಧ ವ್ರತಸಂಪ್ರದಾಯಗಳು ಆದ್ದರಿಂದ ದೇಶದಲ್ಲೆಲ್ಲ ನಿಷ್ಕೃಷ್ಟವಾದ ಒಂದೇ ಪಂಚಾಂಗವು ಆಚರಣೆಗೆ ಬರುವುದು ಅತ್ಯವಶ್ಯವಾದರೂ, ಇಷ್ಟರಿಂದಲೇ—ಅಂದರೆ ಒಂದು ತಿಥಿ ಅಥವಾ ಒಂದು ನಕ್ಷತ್ರ ನಿಖರವಾಗಿ ಇಷ್ಟೇ ಹೊತ್ತಿಗೆ ಆರಂಭವಾಗುತ್ತದೆಂಬ ನಿರ್ಣಯವು ಸರ್ವಾಂಗೀಕೃತವಾದದ್ದರಿಂದಲೇ—ನಮ್ಮ ಜನಗಳು ಒಬ್ಬೊಬ್ಬರು ಒಂದೊಂದು ದಿನ ಒಂದೇ ಹಬ್ಬವನ್ನಾಚರಿಸುವುದು ತಪ್ಪುವುದಿಲ್ಲ. ಏಕೆಂದರೆ, ಒಂದು ಸಂಪ್ರದಾಯದವರು ಸೂರ್ಯೋದಯ ಕಾಲದಲ್ಲಿ ಒಂದು ತಿಥಿಯ ವ್ಯಾಪ್ತಿಯಿದ್ದರೆ ಹಬ್ಬವೆಂದು ಹೇಳಿದರೆ, ಬೇರೆ ಸಂಪ್ರದಾಯದವರು ಅದೇ ತಿಥಿ ಸೂರ್ಯಾಸ್ತಾನಂತರದಲ್ಲಿ ವ್ಯಾಪ್ತಿಯಿದ್ದರೆ ಮಾತ್ರ ಅಂದು ಹಬ್ಬವೆಂದು ಹೇಳುತ್ತಾರೆ, ಮೂರನೆಯವರು ತಿಥಿ ಮುಖ್ಯವಲ್ಲ, ನಕ್ಷತ್ರದ ವ್ಯಾಪ್ತಿ ಇರಬೇಕೆಂದು ಹೇಳುತ್ತಾರೆ. ಹೀಗಿದ್ದರೂ ಈ ವಿವಿಧ ಸಂಪ್ರದಾಯಗಳವರು ಕೂಡ ತಮ್ಮ ಬೇರೆ ಬೇರೆ ಸಂಪ್ರದಾಯಗಳನ್ನು ಸರಿಯಾಗಿ ಆಚರಿಸುವುದಕ್ಕೆ ಗ್ರಹಗತಿಗಳನ್ನು ನಿಷ್ಕೃಷ್ಟವಾಗಿ ಸೂಚಿಸಿರುವ **ಒಂದು** ನಿಖರವಾದ ಪಂಚಾಂಗವನ್ನಪೇಕ್ಷಿಸುತ್ತಾರೆಂಬುದು ನಿರ್ವಿವಾದವಾದದ್ದು.

ದಕ್ಷಿಣ ಭಾರತದಲ್ಲಿ ಈಗ ಪ್ರಚಾರದಲ್ಲಿರುವ ಪಂಚಾಂಗಗಳಲ್ಲಿ ಒಂದಕ್ಕೊಂದಕ್ಕೆ ತಿಥಿನಿರ್ಣಯಗಳಲ್ಲಿ ೧೦—೨೨ ನಿಮಿಷಗಳ ವ್ಯತ್ಯಾಸವೂ, ಸಂಕ್ರಮಣ ಅಥವಾ ಸೌರ

ತೇದಿಗಳ ನಿರ್ಣಯಗಳಲ್ಲಿ ೧-೨ ಘಂಟೆಗಳ ವ್ಯತ್ಯಾಸವೂ ಕಂಡುಬರುತ್ತದೆ. ದಿವಾನ್ ಬಹದ್ದೂರ್ ಸ್ವಾಮಿ ಕಣ್ಣು ಪಿಳ್ಳೆಯವರು ತಮ್ಮ ಉದ್ದಾಮ, ಅಧಿಕೃತ ಗ್ರಂಥವಾದ 'An Indian Ephemeris' ನ ಪ್ರಥಮ ಸಂಪುಟದಲ್ಲಿ ಕ್ರಿ. ಶ ೭೦೦ ರಿಂದ ಕ್ರಿ. ಶ. ೧೯೦೦ರ ವರೆಗಿನ ೧೨ ಶತಮಾನಗಳ ದೀರ್ಘಾವಧಿಯಲ್ಲಿ ಸೂರ್ಯಸಿದ್ಧಾಂತ, ಆರ್ಯಸಿದ್ಧಾಂತ, ಬ್ರಹ್ಮಸಿದ್ಧಾಂತ ಮತ್ತು ಸಿದ್ಧಾಂತ ಶಿರೋಮಣಿಗಳ ನಿಯತಾಂಕ, ನಿಯಮಗಳನ್ನನುಸರಿಸಿ ಲೆಕ್ಕಮಾಡಿದ ತಿಥಿ ಸಂಕ್ರಮಣ ಕಾಲಗಳಲ್ಲಿ ಕಂಡುಬಂದಿರುವ ಪರಸ್ಪರ ತೀವ್ರ ವ್ಯತ್ಯಾಸವು ಒಂದು ದಿನದ ಹತ್ತನೆಯ ಒಂದು ಭಾಗಕ್ಕಿಂತ (ಸುಮಾರು ೨॥ ಘಂಟೆಗಳಿಗಿಂತ) ಹೆಚ್ಚಾಗಿರುವುದು ಬಹಳ ಅಪರೂಪವೆಂದು ತಿಳಿಸಿದ್ದಾರೆ. ವ್ಯತ್ಯಾಸವು ಹೀಗೆ ಅಲ್ಪವಾಗಿ ಕಂಡರೂ ಅಮಾವಾಸ್ಯೆ-ಸಂಕ್ರಮಣಗಳ ಕೆಲವು ಸಂಧಿಕಾಲಗಳಲ್ಲಿ ಒಂದು ಸಿದ್ಧಾಂತದಂತೆ ಅಧಿಕ ಮಾಸ ಒದಗಿ, ಇನ್ನೊಂದರಂತೆ ಆ ಚಾಂದ್ರಮಾಸ ಅಧಿಕವಾಗಿ ಬರದಿರುವುದು ಸಾಧ್ಯ. ನಿಷ್ಕೃಷ್ಟವಾದ ರಾಷ್ಟ್ರೀಯ ಪಂಚಾಂಗದ ಸ್ಥಾಪನೆಯಾದರೆ ಈ ಅಶಾಸ್ತ್ರೀಯವಾದ ವ್ಯತ್ಯಾಸಗಳಿಗಿರುವ ಆಧಾರ ತಪ್ಪಿ ಸಮಗ್ರ ಭಾರತಕ್ಕೆ ಉಪಕಾರವಾಗುತ್ತದೆ.

ಇನ್ನು ರಾಷ್ಟ್ರೀಯ ಪಂಚಾಂಗದ ಸೌರ ಋತುವರ್ಷದ[13] ವ್ಯವಸ್ಥೆಯ ವಿಚಾರ ಮಾಡೋಣ. ಕಳೆದ ಸುಮಾರು ೧೫೦೦ ವರ್ಷಗಳಿಂದ ನಮ್ಮಲ್ಲಿ ನಿರಯನ ಅಥವಾ ನಕ್ಷತ್ರಮಾನ ವರ್ಷವು ಬಳಕೆಯಲ್ಲಿದ್ದರೂ ಸಾಯನ ಅಥವಾ ಋತುವರ್ಷದ ಕಲ್ಪನೆ ನಮಗೆ ಹೊಸದಲ್ಲ. ಉತ್ತರಾಯನ ಪುಣ್ಯಕಾಲ,[15] ವಸಂತ ವಿಷುವತ್ಪುಣ್ಯಕಾಲ[16] ಇತ್ಯಾದಿ ಹೆಸರುಗಳೇ ಇದಕ್ಕೆ ಸಾಕ್ಷಿಯಾಗಿವೆ. ಕ್ರಿ. ಶ. ೫ನೆಯ ಶತಮಾನದಲ್ಲಿ ಸಿದ್ಧಾಂತ ಪಂಚಾಂಗ ಪದ್ಧತಿ ಸ್ಥಾಪನೆಯಾದಾಗ ಸೂರ್ಯನು ರೇವತಿ ತಾರೆಯನ್ನು[17] ಸೇರಿದ ಕಾಲವೇ, ಅಂದರೆ ಮೇಷ ಸಂಕ್ರಮಣದ ಕ್ಷಣವೇ ವಸಂತ ವಿಷುವತ್ಪುಣ್ಯಕಾಲವೂ ಆಗಿತ್ತು. ವಿಷುವದ್ಬಿಂದುವಿನ ಅಪ್ರದಕ್ಷಿಣೆಯ[18] ಪರಿಣಾಮವಾಗಿ ವಸಂತ ವಿಷುವತ್ಪುಣ್ಯಕಾಲವು ಈಗ ಸೂರ್ಯನು ರೇವತೀತಾರೆಯನ್ನು ಸೇರಿದಾಗ ಆಗುವುದರ ಬದಲು ಅದಕ್ಕೂ ಮುಂಚೆ ಸೂರ್ಯನು ಉತ್ತರಾಭಾದ್ರೆಯ ೨ನೆಯ ಪಾದವನ್ನು ಸೇರಿದಾಗಲೇ ಆಗುತ್ತಿದೆ. ಹೀಗಿದ್ದರೂ ನಾವು ಮೇಷ ಸಂಕ್ರಮಣವನ್ನೇ ಈಗಲೂ ವಸಂತ ವಿಷುವತ್ಪುಣ್ಯದಿನವೆಂದು ಗಣಿಸಿ ಆ ದಿನವನ್ನು ಸೌರವರ್ಷಾದಿಯನ್ನಾಗಿ ಆಚರಿಸುತ್ತಿದ್ದೇವೆ. ಇದೇ ರೀತಿಯಲ್ಲಿ ಜನವರಿ ೧೪ನೆಯ ತಾರೀಖು ಮಕರಸಂಕ್ರಮಣವಾದರೂ ಉತ್ತರಾಯನ ಪುಣ್ಯಕಾಲವಲ್ಲ. ಪಂಚಾಂಗ ಸುಧಾರಣಾ ಸಮಿತಿಯವರ ಸಲಹೆಯಂತೆ ಋತುವರ್ಷವನ್ನು ಬಳಕೆಗೆ ತಂದುಕೊಂಡರೆ ವರ್ಷಾದಿ ನಿಜವಾಗಿ ವಸಂತ ವಿಷುವತ್ಪುಣ್ಯದಿನವೇ ಆಗುತ್ತದೆ, ಹಾಗೆಯೇ ಉತ್ತರಾಯನ, ದಕ್ಷಿಣಾಯನ ಪುಣ್ಯಕಾಲಗಳೂ[19] ಉತ್ತರಾಯನ, ದಕ್ಷಿಣಾಯನ ಪುಣ್ಯಕಾಲಗಳೇ ಆಗುತ್ತವೆ

13. Tropical solar year. 14. Sidereal Year. 15. Winter Solstice. 16. Vernal Equinox. 17. Zeta Piscium (?) 18. Precession of the Vernal Equinox. 19. Summer Solstice.

ಆದರೆ ಇಲ್ಲಿ ಮತ್ತೊಂದು ಪ್ರಶ್ನೆ ಏಳುತ್ತದೆ. ಸೌರವರ್ಷವನ್ನು ಬಳಕೆಯಲ್ಲಿಟ್ಟು ಕೊಂಡಿರುವ ಬಂಗಾಳದವರಲ್ಲಿ ಸಂಕ್ರಮಣ ಕಾಲವು ದಿನದ ಮಧ್ಯರಾತ್ರಿಯೊಳಗೆ ಸಂಧಿಸಿದರೆ, ಮಾರನೆಯ ದಿನವನ್ನು ಆ ಸಂಕ್ರಮಣ ಮಾಸದ ಆರಂಭ ದಿನವೆಂದೂ, ಮಧ್ಯರಾತ್ರಿಯಾಚೆ ಸಂಧಿಸಿದರೆ ಮಾರನೆಯ ದಿನದ ಮಾರನೆಯ ದಿನವನ್ನು ಆರಂಭ ದಿನವೆಂದೂ ಎಣಿಸುವ ರೂಢಿ ಇದೆ. ಅದೇ ಸೌರಮಾನ ಪಂಚಾಂಗವನ್ನೇ ಅನುಸರಿಸುತ್ತಿರುವ ತಮಿಳರಲ್ಲಿ ಸಂಕ್ರಮಣ ಕಾಲವು ಸೂರ್ಯಾಸ್ತದೊಳಗೆ ಸಂಧಿಸಿದರೆ ಅದೇ ದಿನವನ್ನೇ ಸಂಕ್ರಮಣ ಮಾಸಾದಿ ಎಂದೂ, ಸೂರ್ಯಾಸ್ತಾನಂತರ ಸಂಧಿಸಿದರೆ ಮಾರನೆಯ ದಿನವನ್ನು ಸಂಕ್ರಮಣ ಮಾಸಾದಿ ಎಂದೂ ಎಣಿಸುವ ರೂಢಿಯಿದೆ ಆದ್ದರಿಂದ ನಕ್ಷತ್ರಮಾನ ವರ್ಷದ ಸ್ಥಾನದಲ್ಲಿ ಋತುವರ್ಷದ ಸ್ಥಾಪನೆಯಾದ ಮೇಲೂ, ವಿಷುವತ್ಪುಣ್ಯಕಾಲವು ಸೂರ್ಯಾಸ್ತದೊಳಗೆ ಸಂಭವಿಸಿದಾಗ ವರ್ಷಾದಿ ವಿಷುವತ್ಪುಣ್ಯ ದಿನವೇ ಆಗಬೇಕೆಂದು ತಮಿಳರೂ, ಮಲೆಯಾಳರೂ ನಿರ್ಣಯಿಸಿದರೆ ಆಶ್ಚರ್ಯವಲ್ಲ. ಅಲ್ಲಿಗೆ ವ್ಯಾವಹಾರಿಕವಾಗಿ ಭಾರತದಲ್ಲೆಲ್ಲ ಸಮಿತಿಯ ಸಲಹೆಯಂತೆ ಒಂದು ದಿನ ವರ್ಷಾದಿಯಾದರೆ, ತಮಿಳುನಾಡಿನಲ್ಲಿ ಅದರ ಹಿಂದಿನ ದಿನ ವರ್ಷಾದಿಯಾಗಿರುತ್ತದೆ.

ಮುಂದಿನ ಪ್ರಶ್ನೆ ಭಾರತೀಯ ಸೌರಋತುವರ್ಷದ ತಿಂಗಳುಗಳಲ್ಲಿ ಇರಬೇಕಾದ ದಿನಗಳಿಗೆ ಸಂಬಂಧಿಸಿದ್ದು. ಈಗ ಆಚರಣೆಯಲ್ಲಿರುವ ನಿರಯನ ಪದ್ಧತಿಯಂತೆ ಸೂರ್ಯನು ರೇವತೀತಾರೆಯನ್ನು ಸೇರಿದ ದಿವಸ ಮೇಷ ಸಂಕ್ರಮಣ, ರೇವತೀ ತಾರೆಯಿಂದ ಸೂರ್ಯನು ೩೦ ಡಿಗ್ರಿಗಳು ಪೂರ್ವದ ಸ್ಥಾನವನ್ನು ಸೇರಿದ ದಿನ ವೃಷಭ ಸಂಕ್ರಮಣ, ೬೦ ಡಿಗ್ರಿಗಳು ಪೂರ್ವದ ಸ್ಥಾನವನ್ನು ಸೇರಿದ ದಿನ ಮಿಥುನ ಸಂಕ್ರಮಣ, ಇತ್ಯಾದಿಯಾಗಿ ೩೩೦ ಡಿಗ್ರಿಗಳು ಪೂರ್ವದ ಸ್ಥಾನವನ್ನು ತಲಪಿದ ದಿನ ಮೀನ ಸಂಕ್ರಮಣಗಳು ಆಗುತ್ತಿವೆ. ಈ ವ್ಯವಸ್ಥೆಯಂತೆ ಮೇಷದಿಂದ (ಬಂಗಾಳದಲ್ಲಿ ವೈಶಾಖದಿಂದ, ತಮಿಳುನಾಡಿನಲ್ಲಿ ಚಿತ್ತಿರೈ ಇಂದ) ಮೊದಲಾದ ಹನ್ನೆರಡು ಸೌರಮಾಸಗಳ ದಿನಗಳು ಸಾಮಾನ್ಯವಾಗಿ ೩೧, ೩೨, ೩೧, ೩೨, ೩೧, ೩೦, ೩೦, ೩೦, ೨೯, ೨೯, ೩೦ ಮತ್ತು ೩೦ ದಿನಗಳು—ಒಟ್ಟು ೩೬೫ ದಿನಗಳು. ಆದರೆ ಭಾರತೀಯ ನಕ್ಷತ್ರಮಾನ ಸೌರವರ್ಷ ಒಂದಕ್ಕೆ ೩೬೫·೨೫೬೩೬ ದಿನಗಳೆಂದು ನಿರ್ಣಯವಾಗಿರುವುದರಿಂದ ನಾಲ್ಕು ವರ್ಷಗಳಿಗೊಂದು ಸಲ ಈ ತಿಂಗಳುಗಳಲ್ಲೊಂದರ ದಿನಗಳು ಒಂದು ದಿನ ಹೆಚ್ಚಿ ವರ್ಷಕ್ಕೆ ೩೬೬ ದಿನಗಳಾಗುತ್ತದೆ. ಆದರೆ ಪಾಶ್ಚಾತ್ಯರಲ್ಲಿರುವಂತೆ ೪ ವರ್ಷಗಳಿಗೊಂದು ವರ್ಷ ಇಂಥ ತಿಂಗಳಿಗೇ ಒಂದು ದಿನ ಹೆಚ್ಚಾಗಿರಬೇಕೆಂಬ ನಿಯಮ ನಮ್ಮಲ್ಲಿಲ್ಲ. ಅದರ ಬದಲು ಸೂರ್ಯನ ರೇಖಾಂಶವು ೦°, ೩೦°, ೬೦° ಇತ್ಯಾದಿ ಆದಾಗಲೇ ಮೇಷ, ವೃಷಭ, ಮಿಥುನ ಇತ್ಯಾದಿ ಸಂಕ್ರಮಣಗಳು ಎಂದು ನಿಯಮ ಇರುವುದರಿಂದ ಸಂಕ್ರಮಣಕಾಲಾನುಗುಣವಾಗಿ ನಾಲ್ಕು ವರ್ಷಗಳಲ್ಲಿ ಒಂದು ವರ್ಷ ತಾನಾಗಿಯೇ ಯಾವುದಾದರೊಂದು ತಿಂಗಳಲ್ಲಿ ಒಂದು ದಿನ ಹೆಚ್ಚಾಗಿ ಕೂಡಿ ಬರುತ್ತದೆ.




**ವರ್ಷದ ನಾಲ್ಕು ಪಾದಗಳ ಅವಧಿಗಳು ಸಮವಾಗಿಲ್ಲದಿರುವುದಕ್ಕೆ ಕಾರಣವನ್ನು ತಿಳಿಸುವ ಚಿತ್ರ**

[೩೦೩ ನೆಯ ಪುಟದ ಎದುರು]

ಸಾವಿರಾರು ವರ್ಷಗಳಿಂದ ಬಂದಿರುವ ಸಂಪ್ರದಾಯವನ್ನು ಗುರುತರವಾದ ಕಾರಣವಿಲ್ಲದೆ ಬದಲಾಯಿಸುವುದು ಅನುಚಿತವಾದ ಕಾರಣ, ನಮ್ಮ ಋತುವರ್ಷದ ಪಂಚಾಂಗದಲ್ಲಿಯೂ ಮೇಲಿನ ವ್ಯವಸ್ಥೆಯನ್ನೇ ನಾವು ತಕ್ಕಮಟ್ಟಿಗೆ ಉಳಿಸಿಕೊಳ್ಳುವುದು ಸೂಕ್ತ. ವಿಷುವತ್ಪುಣ್ಯದಿನವನ್ನು (ಮಾರ್ಚಿ ೨೨–೨೩) ನಾವು ಸಾಯನ ಮೇಷಾದಿ (ಬಂಗಾಳದ ವೈಶಾಖಾದಿ) ಎಂದು ಕರೆದರೆ, ಸೂರ್ಯನ ಸಾಯನ ರೇಖಾಂಶವು ೩೦°, ೬೦°, ೯೦° ಇತ್ಯಾದಿಗಳಾದಾಗ ಸಾಯನ ವೃಷಭಾದಿ, ಮಿಥುನಾದಿ ಕಟಕಾದಿ ಇತ್ಯಾದಿಗಳು ಆಗುತ್ತವೆಂದು ಹೇಳಬೇಕಾಗುತ್ತದೆ. ಅಲ್ಲಿಗೆ ಋತುವರ್ಷದ ಮೇಷಾದಿ ಸೌರಮಾಸಗಳ ಅವಧಿಗಳು ಕ್ರಮವಾಗಿ ೩೦ದಿ. ೧೨ಘಂ., ೩೧ದಿ. ೦ಘಂ., ೩೧ದಿ. ೭ಘಂ., ೩೧ದಿ. ೧೧ಘಂ., ೩೧ದಿ ೬ಘಂ., ೩೦ದಿ. ೨೨ಘಂ., ೩೦ದಿ. ೧೧ಘಂ., ೨೯ದಿ. ೧೯ಘ. ೨೯ದಿ. ೧೪ಘಂ., ೨೯ದಿ. ೩ಘಂ., ೨೯ದಿ. ೧೫ಘಂ., ಮತ್ತು ೩೦ದಿ. ೬ಘಂ., ಒಟ್ಟು ೩೬೫ ದಿ. ೬ಘಂ ಗಳಾಗುತ್ತವೆ. ಈ ಅಂಕಿಗಳಿಗೆ ಬ್ರಿಟಿಷ್ ನೌಕಾಶಾಖೆಯವರ ೧೯೫೪ನೆ ವರ್ಷದ ನಾಟಿಕಲ್ ಆಲ್ಮನಕ್‌ನಲ್ಲಿ ಅಡಕವಾಗಿರುವ ಸೂರ್ಯನ ಮಧ್ಯಮ ವಿಷುವದ್ರೇಖಾಂಶಗಳ[20] ಪಟ್ಟಿಯಲ್ಲಿ ಕೊಟ್ಟಿರುವ ಅಂಕಿಗಳು ಆಧಾರ.

ಮೇಲಿನ ಅಂಕಿಗಳಿಂದ ನಮ್ಮ ಋತುವರ್ಷದ ಸಾಯನ ಮೇಷ ಮೊದಲಾದ ಮಾಸಗಳ ದಿನಗಳನ್ನು ವ್ಯಾವಹಾರಿಕವಾಗಿ ನಾವು ೩೧, ೩೧, ೩೧, ೩೧, ೩೧, ೩೧, ೩೦, ೩೦, ೩೦, ೨೯, ೩೦ ಮತ್ತು ೩೦, ಒಟ್ಟು ೩೬೫ ದಿನಗಳು ಎಂದು ಸಾಮಾನ್ಯವಾಗಿಟ್ಟುಕೊಳ್ಳಬಹುದು. ಹೀಗೆ ಮಾಡಿದರೆ, ಒಂದು ಋತುವರ್ಷಕ್ಕೆ ೩೬೫.೨೪೨೨ ದಿನಗಳಾದ್ದರಿಂದ ಸರಾಸರಿ ನಾಲ್ಕು ವರ್ಷಕ್ಕೊಂದು ವರ್ಷದಲ್ಲಿ ಒಂದು ತಿಂಗಳಿಗೆ ನಾವು ಅಧಿಕದಿನವನ್ನು ಸೇರಿಸಬೇಕಾಗುತ್ತದೆ. ಪಾಶ್ಚಾತ್ಯರ ಪದ್ಧತಿಯನ್ನನುಸರಿಸಿ ನಾಲ್ಕು ವರ್ಷಕ್ಕೊಂದು ವರ್ಷ ಒಂದು ಗೊತ್ತಾದ ತಿಂಗಳಿಗೆ ಒಂದು ಅಧಿಕದಿನವನ್ನು ಸೇರಿಸುವುದು ಭಾರತೀಯ ಸಂಪ್ರದಾಯಕ್ಕೆ ಒಗ್ಗುವುದಿಲ್ಲ ಸೌರವರ್ಷದ ಹನ್ನೆರಡು ತಿಂಗಳುಗಳ ಪ್ರಥಮ ದಿನಗಳಲ್ಲಿ ೪ ತಿಂಗಳುಗಳ ಪ್ರಥಮದಿನಗಳು ಪುರಾತನಕಾಲದಿಂದಲೂ ನಮ್ಮಲ್ಲಿ ಪರಮಪವಿತ್ರ ದಿನಗಳಾಗಿ ಎಣಿಕೆಯಾಗಿವೆ. ವಸಂತವಿಷುವತ್ಪುಣ್ಯಕಾಲ ಅಥವಾ ಸಾಯನ ಮೇಷಾದಿ, ದಕ್ಷಿಣಾಯನ ಪುಣ್ಯಕಾಲ ಅಥವಾ ಕಟಕಾದಿ, ಶರದ್ವಿಷುವತ್ಪುಣ್ಯಕಾಲ[21] ಅಥವಾ ತುಲಾದಿ ಮತ್ತು ಉತ್ತರಾಯನ ಪುಣ್ಯಕಾಲ ಅಥವಾ ಮಕರಾದಿಗಳೇ ಈ ನಾಲ್ಕು ಮಾಸಾದಿಗಳು. ಆದ್ದರಿಂದ ಈ ಸಾಯನ ಮೇಷ, ಕಟಕ, ತುಲಾ ಮತ್ತು ಮಕರಮಾಸಗಳು ಮೇಲೆ ತಿಳಿಸಿರುವ ನಾಲ್ಕು ಪುಣ್ಯಕಾಲಗಳು ಸಂಧಿಸುವ ದಿನಗಳಲ್ಲಿಯೇ ಆಗುವಂತೆ ನಮ್ಮ ರಾಷ್ಟ್ರೀಯ ಪಂಚಾಂಗವು ಏರ್ಪಡಬೇಕು. ಹೀಗೆ ಸಿದ್ಧಾಂತವಾಗಿ ಈ ಪುಣ್ಯಕಾಲಗಳ ನಡುವಣ ದಿನಗಳನ್ನು ದಿನ

---

20. Mean Equinoctial Longitude 21. Autumnal equinox.

ಕ್ಕೊಂದು ಸೌರತೇದಿಯಂತೆ ನಾವು ಎಣಿಸುತ್ತ ಬಂದರೆ, ವಸಂತಾದಿಯಿಂದ ದಕ್ಷಿಣಾಯನದ ವರೆಗೆ ೯೩ ದಿನಗಳು, ದಕ್ಷಿಣಾಯನಾದಿಯಿಂದ ಶರದಾದಿಗೆ ೯೩ ದಿನಗಳು, ಶರದಾದಿಯಿಂದ ಉತ್ತರಾಯನಕ್ಕೆ ೯೦ ದಿನಗಳು, ಉತ್ತರಾಯನದಿಂದ ವಸಂತಾದಿಗೆ ೮೯ ದಿನಗಳು ಸಾಮಾನ್ಯವಾಗಿ ಎಣಿಕೆಯಾಗುತ್ತವೆ. ನಾಲ್ಕು ವರ್ಷಗಳಿಗೊಂದು ಸಲ ಎರಡು ಅನುಕ್ರಮ ಪುಣ್ಯಕಾಲಗಳ ನಡುವಣ ದಿನಗಳು ೯೩ರ ಬದಲು ೯೪, ೯೦ರ ಬದಲು ೯೧, ಅಥವಾ ೮೯ರ ಬದಲು ೯೦ ತಾನಾಗಿಯೇ ಆಗುತ್ತದೆ. ದೀರ್ಘಕಾಲಿಕವಾಗಿ ವರ್ಷದ ಸರಾಸರಿ ದಿನಗಳು ೩೬೫.೨೪೨೨ ಆಗುತ್ತದೆ. ಈ ವ್ಯವಸ್ಥೆಯಲ್ಲಿ ಭಾರತೀಯ ಸಂಪ್ರದಾಯಕ್ಕೆ ಒಪ್ಪುವ ಶಾಸ್ತ್ರೀಯ ನಿಷ್ಕೃಷ್ಟತೆಯೊಂದಿಗೆ, ಸಾಕಾದಷ್ಟು ವ್ಯವಹಾರ ಸೌಕರ್ಯವೂ ಸೇರಿರುತ್ತದೆ

ಇಂಥ ಋತುವರ್ಷದ ರಾಷ್ಟ್ರೀಯ ಪಂಚಾಂಗದಲ್ಲಿಯೂ ನಾವು ಇನ್ನೂ ಹಲವು ವರ್ಷಗಳ ಕಾಲ ನಿರಯನ ಸಂಕ್ರಮಣಗಳನ್ನೂ ಮಹಾನಕ್ಷತ್ರಗಳನ್ನೂ ಗುರುತಿಸುತ್ತಿರಲೇ ಬೇಕಾಗುತ್ತದೆ. ಏಕೆಂದರೆ ದಕ್ಷಿಣ ಭಾರತದಲ್ಲಿ ನಮ್ಮ ಹಳ್ಳಿಗಳ ಜನಗಳೂ ಕೂಡ ಆರಂಬಕ್ಕೆ ಸಂಬಂಧಿಸಿದ ತಮ್ಮ ವಿವಿಧ ಚಟುವಟಿಕೆಗಳನ್ನು ಮಹಾನಕ್ಷತ್ರ ಅಥವಾ ಮಳೆಯ ನಕ್ಷತ್ರಗಳಿಗೆ ಹೊಂದಿಸಿಕೊಂಡಿದ್ದಾರೆ. ಉದಾಹರಣೆಗೆ ಆರ್ದ್ರೆ ಮಳೆಯಲ್ಲಿ (ಸೂರ್ಯನ ನಿರಯನ ರೇಖಾಂಶದ ೬೬ ೨/೩ ಡಿಗ್ರಿಯಿಂದ ೮೦ ಡಿಗ್ರಿಗಳ ವರೆಗಿನ ಅವಧಿಯಲ್ಲಿ) ಬಿತ್ತಿದರೆ ಬೆಳೆ ಬಹಳ ಹುಲುಸಾಗಿ ಬರುತ್ತದೆಂದು ಅವರ ಅನುಭವ ಸಿದ್ಧವಾದ ನಂಬುಗೆ. ಬೇಸಾಯದ ಕಾರ್ಯಕಲಾಪಗಳು ವಾಸ್ತವವಾಗಿ ಸಾಯನ ವರ್ಷವನ್ನು ಹೊಂದಿಕೊಂಡಿರಬೇಕು, ನಿರಯನ ವರ್ಷವನ್ನಲ್ಲ. ಆದರೂ ಸಾಯನ ನಿರಯನ ವರ್ಷಗಳಿಗಿರುವ ವ್ಯತ್ಯಾಸ ಅತ್ಯಲ್ಪವಾಗಿರುವುದರಿಂದ ಮಳೆಯ ನಕ್ಷತ್ರಗಳ ಆಧಾರದ ಮೇಲೆ ಕಟ್ಟಿರುವ ನಮ್ಮ ರೈತರ ಆರಂಬದ ಗಾದೆಗಳು ಹಲವು ತಲೆಮಾರುಗಳ ಕಾಲ ಸರಿಯಾಗಿ ನಡೆದು ಬರುತ್ತವೆ. ಆದರೆ ಹೊಸ ರಾಷ್ಟ್ರೀಯ ಪಂಚಾಂಗದಲ್ಲಿ ಈ ನಿರಯನ ಸಂಪ್ರದಾಯದ ಮಹಾ ನಕ್ಷತ್ರಗಳನ್ನು ಗುರುತಿಸುವಾಗ ಒಂದು ಅವಶ್ಯವಾದ ತಿದ್ದುಪಡಿ ಆಗಬೇಕಾಗಿದೆ. ಈಗ ನಾವು ಬಳಸುತ್ತಿರುವ ಪಂಚಾಂಗ ಪದ್ಧತಿಯಲ್ಲಿ ಒಂದು ನಿರಯನ ವರ್ಷಕ್ಕೆ ೩೬೫·೨೫೮೭೬ ದಿನಗಳು ಎಂದು ಎಣಿಕೆಯಾಗುತ್ತಿದೆ. ಆದರೆ ಒಂದು ನಿರಯನ ವರ್ಷದ ಸರಿಯಾದ ಅವಧಿ ೩೬೫.೨೫೬೩೬ ದಿನಗಳು. ಆದ್ದರಿಂದ ನಮ್ಮ ಮೂಲ ರೇಖಾಂಶವು[22] ಖಗೋಳದಲ್ಲಿ ಒಂದು ಸ್ಥಿರಬಿಂದು ಎಂದು ನಾವಂದುಕೊಂಡಿದ್ದೇವೆಯಾದರೂ, ನಮ್ಮ ಇಂದಿನ ಮೂಲರೇಖಾಂಶವು ವರಾಹಮಿಹಿರನ ಕಾಲದ ಮೂಲ ರೇಖಾಂಶದಿಂದ ಸುಮಾರು ೩ ಡಿಗ್ರಿಗಳಷ್ಟು ಪೂರ್ವಕ್ಕೆ ಸರಿದು ಬಂದಿದೆ. ನಾವು ನಕ್ಷತ್ರಮಾನವರ್ಷವನ್ನು ನಿಷ್ಕೃಷ್ಟವಾಗಿ ಆಚರಿಸುತ್ತಿದ್ದಿದ್ದರೆ ಸೌರವರ್ಷಾದಿ ಈಗ ಏಪ್ರಿಲ್ ೧೩-೧೪ರಲ್ಲಿ ಆಗುತ್ತಿರುವುದರ ಬದಲು ಏಪ್ರಿಲ್ ೧೦-೧೧ರಲ್ಲಿ ಆಗುತ್ತಿತ್ತು. ಇನ್ನು ಮುಂದೆ

22. Zero of longitude.

ಯಾದರೂ ನಾವು ಮಹಾನಕ್ಷತ್ರಗಳನ್ನೂ ನಿರಯನ ಸಂಕ್ರಮಣಗಳನ್ನೂ ೩೬೫ ೨೫೬೩೬ ದಿನಗಳ ವರ್ಷದ ಆಧಾರದ ಮೇಲೆ ಗುಣಿಸಬೇಕು.

ಇನ್ನೊಂದು ಮುಖ್ಯ ಸಮಸ್ಯೆ ಕಾದಿದೆ. ಭಾರತದ ಬಹುಭಾಗಗಳಲ್ಲಿ ಪ್ರಚಾರದಲ್ಲಿರುವುದು ಶುದ್ಧ ಸೌರಪಂಚಾಂಗವಲ್ಲ, ಚಾಂದ್ರ–ಸೌರ ಪಂಚಾಂಗ. ಈಗ ನಾವು ಚಾಂದ್ರವರ್ಷವನ್ನು ನಿರಯನ ಸೌರವರ್ಷಕ್ಕೆ ಹೆಣೆದಿರುವ ರೀತಿ ಇದು. ಮೀನ ಸಂಕ್ರಮಣ ಮೇಷ ಸಂಕ್ರಮಣಗಳ ಅವಧಿಯಲ್ಲಿ ಬರುವ ಅಮಾವಾಸ್ಯಾನಂತರ ಆರಂಭವಾಗುವ ಚಾಂದ್ರಮಾನ ತಿಂಗಳು ಚೈತ್ರ, ಮೇಷ–ವೃಷಭ ಸಂಕ್ರಮಣಗಳ ಮಧ್ಯೆ ಬರುವ ಅಮಾವಾಸ್ಯೆಯಿಂದ ಆರಂಭವಾಗುವ ತಿಂಗಳು ವೈಶಾಖ ಇತ್ಯಾದಿ. ಒಂದು ಚಾಂದ್ರಮಾಸಕ್ಕೆ ಸರಾಸರಿ ೨೯॥ ದಿನಗಳೂ ಒಂದು ಸೌರಮಾನಕ್ಕೆ ಸರಾಸರಿ ೩೦॥ ದಿನಗಳೂ ಆದ್ದರಿಂದ, ಈ ವ್ಯವಸ್ಥೆಯಲ್ಲಿ ಒಂದೊಂದು ಸಲ ಎರಡು ಸಂಕ್ರಮಣಗಳ ನಡುವೆ ಎರಡು ಅಮಾವಾಸ್ಯೆಗಳು ಬರುವುದು ಸಾಧ್ಯ. ಈ ಸಂದರ್ಭಗಳಲ್ಲಿ ಮೊದಲನೆಯ ಅಮಾವಾಸ್ಯಾನಂತರದ ತಿಂಗಳು ಅಧಿಕಮಾಸ, ಎರಡನೆಯದು ನಿಜಮಾಸವಾಗುತ್ತದೆ.

ನಿರಯನವರ್ಷದ ಸ್ಥಾನದಲ್ಲಿ ಸಾಯನವರ್ಷವನ್ನು ಆಚರಣೆಗೆ ತಂದರೂ ನಾವು ಇದೇ ನೀತಿಯನ್ನು ಅನುಸರಿಸುವುದು ಉಚಿತ. ಹೀಗೆ ಮಾಡಿದಲ್ಲಿ ಸಾಯನ ಮೀನಾದಿ, ಸಾಯನ ಮೇಷಾದಿ ದಿನಗಳ ಮಧ್ಯೆ ಬರುವ ಅಮಾವಾಸ್ಯಾನಂತರದ ದಿನವು ಚೈತ್ರ ಶುಕ್ಲ ಪಾಡ್ಯಮಿ ಅಂದರೆ ಚಾಂದ್ರವರ್ಷದ ಯುಗಾದಿ ಆಗಬೇಕಾಗುತ್ತದೆ; ಹಾಗೆಯೇ ಸಾಯನ ಮೇಷ ಮಾಸದಲ್ಲಿ ಬರುವ ಅಮಾವಾಸ್ಯಾನಂತರದ ಚಾಂದ್ರಮಾಸ ವೈಶಾಖ, ಸಾಯನ ವೃಷಭದಲ್ಲಿ ಬರುವ ಅಮಾವಾಸ್ಯಾನಂತರದ ಚಾಂದ್ರಮಾಸ ಜ್ಯೇಷ್ಠ ಇತ್ಯಾದಿಯಾಗಿ ಸಾಯನ ಕುಂಭದಲ್ಲಿ ಬರುವ ಅಮಾವಾಸ್ಯಾನಂತರದ ಚಾಂದ್ರಮಾಸ ಫಾಲ್ಗುನ ಆಗುತ್ತದೆ. ಎರಡು ಅನುಕ್ರಮದ ಸಾಯನ ಮಾಸಾದಿಗಳ ಮಧ್ಯೆ ಎರಡು ಅಮಾವಾಸ್ಯೆಗಳು ಸಂಭವಿಸಿದರೆ ಮೊದಲನೆಯದು ಅಧಿಕ, ಎರಡನೆಯದು ಅದೇ ಹೆಸರಿನ ನಿಜ ಮಾಸವಾಗುತ್ತದೆ. ಉದಾಹರಣೆಗೆ ಸಾಯನ ಮಿಥುನಾದಿ ಕಟಕಾದಿಗಳ ಮಧ್ಯೆ ಎರಡು ಅಮಾವಾಸ್ಯೆಗಳು ಬಂದರೆ, ಮೊದಲನೆಯ ಅಮಾವಾಸ್ಯಾನಂತರದ ತಿಂಗಳು ಅಧಿಕ ಆಷಾಢ, ಎರಡನೆಯದು ನಿಜ ಆಷಾಢ ಆಗುತ್ತವೆ. ಬಂಗಾಳದವರು ಸೌರಮೇಷವನ್ನು ವೈಶಾಖ, ವೃಷಭವನ್ನು ಜ್ಯೇಷ್ಠ ಇತ್ಯಾದಿ ಹೆಸರುಗಳಿಂದ ಕರೆಯುವುದರಿಂದ, ಬಂಗಾಳದ ಸೌರ ವೈಶಾಖದಲ್ಲಿ ಬರುವ ಅಮಾವಾಸ್ಯಾ ನಂತರದ ಚಾಂದ್ರಮಾಸದ ಹೆಸರೂ ವೈಶಾಖವೇ ಆಗುತ್ತದೆ. ಹಾಗೆಯೇ ಇತರ ತಿಂಗಳುಗಳೂ.

ಚಾಂದ್ರಮಾನ ವರ್ಷವನ್ನು ಹೀಗೆ ಸಾಯನ ಸೌರವರ್ಷಕ್ಕೆ ಹೆಣೆಯುವ ವಿಷಯವನ್ನು ಇಲ್ಲಿ ಇನ್ನೂ ವಿವರವಾಗಿ ವಿಚಾರ ಮಾಡುವುದು ಆವಶ್ಯ. ಈಗ ನಾವು ಚಾಂದ್ರವರ್ಷವನ್ನು ನಿರಯನ ಸೌರವರ್ಷದ ನೊಗಕ್ಕೆ ಕಟ್ಟಿದ್ದೇವೆಯಷ್ಟೆ.

ಇದರ ಫಲವಾಗಿ ನಿರಯನ ಮೀನ ಮಾಸದಲ್ಲಿ ಆರಂಭವಾಗುವ ಚಾಂದ್ರಮಾಸವು– ಅಂದರೆ ಮಾರ್ಚಿ ೧೫ರಿಂದ ಏಪ್ರಿಲ್ ೧೪ರೊಳಗೆ ಬರುವ ಶುಕ್ಲ ಪಾಡ್ಯಮಿ— ಚಾಂದ್ರವರ್ಷಾದಿಯಾಗುತ್ತಿದೆ. ಈ ಯುಗಾದಿ ವಸಂತಾರಂಭವನ್ನು ಸೂಚಿಸ ಬೇಕೆಂಬುದು ನಮ್ಮ ಪಂಚಾಂಗ ಪದ್ಧತಿಯ ಧ್ಯೇಯ. ಅದಕ್ಕೇ ನಾವು ಚೈತ್ರ– ವೈಶಾಖ ವಸಂತಋತು ಎಂದು ಕಂಠಪಾಠ ಮಾಡಿದ್ದೇವೆ, ಚೈತ್ರ ಶುಕ್ಲ ಪಾಡ್ಯಮಿ ಯಂದು ಬೇವಿನ ಚಿಗುರು ಮತ್ತು ಬೆಲ್ಲವನ್ನು ಸವಿಯಬೇಕೆಂಬ ವ್ರತ ಮಾಡಿಕೊಂಡಿ ದ್ದೇವೆ. ಆದರೆ ಅನೇಕ ವೇಳೆ, ಅದರಲ್ಲಿಯೂ ಅಮಾವಾಸ್ಯೆ ಏಪ್ರಿಲ್ ೧೧ರಿಂದ ಆಚೆಗೆ ಬಿದ್ದಾಗ, ಬೇವಿನ ಚಿಗುರು ನಮಗೆ ಸಿಗುವುದಿಲ್ಲ, ಬಲಿತ ಬೇವಿನ ಎಲೆಯನ್ನೇ ಚಿಗುರು ಎಂದುಕೊಳ್ಳಬೇಕಾಗುತ್ತದೆ. ಏಕೆಂದರೆ ಅಷ್ಟು ಹೊತ್ತಿಗೆ ವಸಂತಾರಂಭ ವಾಗಿ ಮೂರು ವಾರಗಳು ಕಳೆದಿರುತ್ತದೆ. ನಾವು ಅನುಸರಿಸುತ್ತಿರುವ ಪಂಚಾಂಗದ ಪ್ರಕಾರ ಈಗ ನಾವು ಫಾಲ್ಗುನ–ಚೈತ್ರ ವಸಂತಋತು, ವೈಶಾಖ-ಜ್ಯೇಷ್ಠ ಗ್ರೀಷ್ಮ ಋತು ಇತ್ಯಾದಿಯಾಗಿ ಹೇಳಿಕೊಂಡರೆ ಋತುಧರ್ಮಗಳು ತಿಂಗಳುಗಳಿಗೆ ಹೊಂದಿ ಕೊಳ್ಳುತ್ತವೆ.

ಸಾಯನ ಚಾಂದ್ರ–ಸೌರ ಪಂಚಾಂಗವನ್ನು[23] ಅನುಸರಿಸಿದರೆ ಫೆಬ್ರುವರಿ ೨೦ ರಿಂದ ಮಾರ್ಚಿ ೨೨ ರೊಳಗೆ ಸಂಭವಿಸುವ ಶುಕ್ಲ ಪಾಡ್ಯಮಿಯನ್ನು ಚೈತ್ರ ಶುಕ್ಲ ಪಾಡ್ಯಮಿ ಎಂದು ಕರೆಯಬೇಕಾಗುತ್ತದೆ. ಆಗ ನಿಜವಾಗಿಯೂ ಚೈತ್ರ–ವೈಶಾಖ ವಸಂತ ಋತುವಾಗುತ್ತದೆ, ಚಾಂದ್ರ ಯುಗಾದಿಯ ದಿನ ಬೇವಿನ ಚಿಗುರು ಕೊರತೆ ಇಲ್ಲದೆ ಸಿಗುತ್ತದೆ. ನಮ್ಮ ಪೂರ್ವಿಕರು ಹಾಕಿಕೊಟ್ಟಿರುವ ಧ್ಯೇಯವನ್ನೇ ನಾವೂ ಒಪ್ಪಿಕೊಂಡರೆ, ಈಗ ನಾವು ಫಾಲ್ಗುನವೆಂದು ಕರೆಯುತ್ತಿರುವ ತಿಂಗಳನ್ನು ಚೈತ್ರ ವೆಂದೂ, ಚೈತ್ರವನ್ನು ವೈಶಾಖವೆಂದೂ, ವೈಶಾಖವನ್ನು ಜ್ಯೇಷ್ಠವೆಂದೂ ಮುಂತಾಗಿ ಕರೆಯಬೇಕು. ಹಾಗಾದರೆ ಸಾಯನ ಚಾಂದ್ರ–ಸೌರ ಪಂಚಾಂಗ ಸ್ಥಾಪನೆಯಾದ ಕೂಡಲೆ ಒಂದು ಚಾಂದ್ರಮಾನ ತಿಂಗಳ ಹೆಸರನ್ನು ನಾವು ನುಂಗಿಬಿಡಬೇಕಾಗುತ್ತ ದೆಯೇ ಎಂಬ ಕಳವಳ ಹುಟ್ಟಬಹುದು. ಇಂಥ ಉಗ್ರ ಕಾರ್ಯಕ್ರಮ ಕೈಗೊಳ್ಳಬೇಕಾದ ಆವಶ್ಯಕತೆ ಇಲ್ಲ. ತಿಂಗಳುಗಳನ್ನು ಎಂದಿನಂತೆಯೇ ಕ್ರಮವಾಗಿ ಚೈತ್ರ, ವೈಶಾಖ, ಜ್ಯೇಷ್ಠ ಇತ್ಯಾದಿಯಾಗಿಯೇ ಕರೆಯುತ್ತಿದ್ದು, ಈಗಿನ ನಿರಯನ ನಿಯಮಾನುಸಾರ ವಾಗಿ ಒಂದು ಅಧಿಕಮಾಸ ಒದಗಿದಾಗ, ಅದನ್ನು ಅಧಿಕವೆಂದು ಎಣಿಸದಿದ್ದರಾ ಯಿತು. ಅಲ್ಲಿಂದ ಮುಂದಕ್ಕೆ ಚಾಂದ್ರಮಾನ ಮಾಸಗಳನ್ನು ಸಾಯನ ಸೌರಮಾಸ ಗಳಿಗೆ ಜೊತೆಗೂಡಿಸಿ, ಒಂದು ಸಾಯನ ಸೌರಮಾಸದ ಅವಧಿಯಲ್ಲಿ ಎರಡು ಅಮಾವಾ ಸ್ಯೆಗಳು ಬಂದಾಗ ಅಧಿಕಮಾಸವೆಂಬ ನಿಯಮ ಮಾಡಿಕೊಂಡರೆ ಸಾಕು.

ಒಟ್ಟಿನಲ್ಲಿ ೧೯೦೧ ನಿರಯನ ಸೌರವರ್ಷಗಳಲ್ಲಿ ೭೦೧ ಅಧಿಕಮಾಸಗಳು ಒದ ಗುತ್ತವೆ, ಆದರೆ ಅದೇ ೧೯೦೧ ಸಾಯನ ಸೌರವರ್ಷಗಳಲ್ಲಿ ೭೦೦ ಅಧಿಕಮಾಸಗಳು

23. Tropical Luni–Solar Calendar

ಮಾತ್ರ ಒದಗುತ್ತವೆ; ಭಾರತೀಯ ಸಿದ್ಧಾಂತ ಪಂಚಾಂಗ ಪದ್ಧತಿ ಸ್ಥಾಪಿತ ವಾಗಿ ಸುಮಾರು ೧೪೦೦ ವರ್ಷಗಳು ಈಗಾಗಲೆ ಕಳೆದಿವೆ, ಆದ್ದರಿಂದಲೇ ಋತು ವರ್ಷಕ್ಕೆ ಸಾಪೇಕ್ಷವಾಗಿ ನಾವು ಈ ಅವಧಿಯಲ್ಲಿ ಒಂದು ಅಧಿಕಮಾಸವನ್ನು ಹೆಚ್ಚಾಗಿ ಎಣಿಸಿದ್ದೇವೆ.

ಚಾಂದ್ರ-ಸೌರ ಪಂಚಾಂಗವನ್ನು ಅನುಸರಿಸುತ್ತಿರುವ ಭಾರತೀಯರು ದಿನಗಳನ್ನು ತಿಥಿಗಳಿಂದ ನಿರ್ದೇಶಿಸುವುದೇ ಅಲ್ಲದೇ ನಕ್ಷತ್ರಗಳಿಂದಲೂ ನಿರ್ದೇಶಿಸುವ ಪದ್ಧತಿಯನ್ನು ಇಟ್ಟುಕೊಂಡಿದ್ದಾರೆ. ದಕ್ಷಿಣಭಾರತದ ವಿದ್ಯಾವಂತರಿಗೆ ಹಾಗಿರಲಿ, ಅನಕ್ಷರಸ್ಥರಾದ ಗ್ರಾಮಸ್ಥರಿಗೂ ಕೂಡ ದಿನಗಳನ್ನು ನಕ್ಷತ್ರಗಳಿಂದ ಎಣಿಸುವ ವಿಧಾನ ಪರಿಚಿತವಾಗಿದೆ. ಆದ್ದರಿಂದ ಈ ವಿಧಾನ ಚಂದ್ರನ ನಿರಯನ ರೇಖಾಂಶವನ್ನು ನಕ್ಷತ್ರಗಳ ಹೆಸರುಗಳಿಂದ ತಿಳಿಸುವ ಪದ್ಧತಿಯಾದರೂ ನಮ್ಮ ರಾಷ್ಟ್ರೀಯ ಪಂಚಾಂಗದಲ್ಲಿ ಚಂದ್ರನ ತಿಥಿ ಮತ್ತು ಸಾಯನ ರೇಖಾಂಶಗಳನ್ನು ಪಟ್ಟಿಮಾಡುವುದರ ಜೊತೆಗೆ ಚಂದ್ರನ ದಿನ ದಿನದ ನಕ್ಷತ್ರಗಳ ಪಟ್ಟಿಮಾಡುವುದು ಅವಶ್ಯ.

ಸುಧಾರಣಾ ಸಮಿತಿಯ ಸಲಹೆಯಂತೆ ಋತುವರ್ಷದ ಪಂಚಾಂಗವು ದೇಶದಲ್ಲೆಲ್ಲ ಆಚರಣೆಗೆ ಬಂದ ಮೇಲೂ ಹಲವು ವರ್ಷಗಳ ಕಾಲ ಈಗಿನ ನಿರಯನ ಪಂಚಾಂಗಕ್ಕೂ ಮನ್ನಣೆ ಕೊಡಬೇಕಾಗುತ್ತದೆಂದು ಸಮಿತಿಯೇ ಒಪ್ಪಿದೆ. ಈ ಲೇಖನದಲ್ಲಿ ಋತುವರ್ಷದ ಸೌರಮಾಸಗಳನ್ನು ನಿರಯನ ಮಾಸಗಳೆಂದು ಭ್ರಮಿಸದಿರಲೆಂದು ಋತುಮಾಸಗಳನ್ನು ಸಾಯನ ಮೇಷ, ಸಾಯನ ವೃಷಭ ಎಂದು ಕರೆದಿದೆ. ಇಷ್ಟರಿಂದಲೇ ಸಾಯನ ನಿರಯನ ಮಾಸನಾಮಗಳ ಗೊಂದಲ ತಪ್ಪದೆ ಇರಬಹುದು. ಆದ್ದರಿಂದ ರಾಷ್ಟ್ರೀಯ ಪಂಚಾಂಗದ ಋತುವರ್ಷದ ಮಾಸಗಳಿಗೆ ವೇದರ್ಷಿಗಳ ಕಾಲದ ಮಧು, ಮಾಧವ, ಶುಕ್ರ, ಶುಚಿ, ನಭ, ನಭಸ್ಯ, ಈಶ, ಊರ್ಜ, ಸಹ, ಸಹಸ್ಯ, ತಪ ಮತ್ತು ತಪಸ್ಯ ಎಂಬ ಋತುಮಾಸಗಳ ಹೆಸರುಗಳನ್ನಿಡುವುದು ಚೆನ್ನ ಎಂದು ತೋರುತ್ತದೆ.

ಭಾರತೀಯ ರಾಷ್ಟ್ರೀಯ ಪಂಚಾಂಗ ಪದ್ಧತಿಯ ವಿಚಾರ ವಿವೇಚನೆಗಳನ್ನು ಸದ್ಯಕ್ಕೆ ಇಲ್ಲಿಗೆ ಮುಗಿಸಿದರೂ, ಪಂಚಾಂಗ ಸುಧಾರಣಾ ಸಮಿತಿಯು 'ಪ್ರಪಂಚ ಪಂಚಾಂಗ'ದ[24] ವಿಷಯವಾಗಿ ಕೊಟ್ಟಿರುವ ಸಲಹೆಗಳನ್ನು ಈ ಲೇಖನದಲ್ಲಿ ಸಂಕ್ಷೇಪವಾಗಿ ಪರಿಶೀಲಿಸುವುದು ಅಪ್ರಕೃತವಾಗಲಾರದು. ಈ ಸಲಹೆಗಳು ವರದಿಯಲ್ಲಿ ಅಚ್ಚಾಗಿಲ್ಲ ವೃತ್ತಪತ್ರಿಕೆಗಳ ಪರಿಶೀಲನೆಯಿಂದ ಸಲಹೆಗಳ ಪ್ರಧಾನ ಅಂಶಗಳು ಕೆಳಗೆ ಕಂಡಂತೆ ಎಂದು ನಂಬಲಾಗಿದೆ.

(೧) ಸಾಮಾನ್ಯ ವರ್ಷವನ್ನು ಜನವರಿ—ಫೆಬ್ರುವರಿ—ಮಾರ್ಚಿ, ಏಪ್ರಿಲ್-ಮೇ—ಜೂನ್, ಇತ್ಯಾದಿಯಾಗಿ ಮೂರು ಮೂರು ತಿಂಗಳ ನಾಲ್ಕು ಸಮಪಾದ

---

24. World Calendar.

ಗಳನ್ನಾಗಿ ವಿಭಾಗಿಸತಕ್ಕದ್ದು. ಒಂದೊಂದು ಪಾದದಲ್ಲಿಯೂ ೯೧ ದಿನಗಳು ಅಂದರೆ ಸರಿಯಾಗಿ ೧೪ ವಾರಗಳಿರಬೇಕು. ಪ್ರತಿಯೊಂದು ಪಾದದ ತಿಂಗಳುಗಳ ದಿನಗಳು ಕ್ರಮವಾಗಿ ೩೧,೩೦ ಮತ್ತು ೩೦ ಆಗಬೇಕು, ಮತ್ತು ಪಾದವು ಭಾನುವಾರದಿಂದ ಆರಂಭವಾಗಿ ಶನಿವಾರದಲ್ಲಿ ಮುಕ್ತಾಯವಾಗಬೇಕು.

(೨) ನಾಲ್ಕು ಪಾದಗಳಿಂದ ೩೬೪ ದಿನಗಳಾಗುತ್ತವೆಯಾದ್ದರಿಂದ ವರ್ಷದ ಕಡೆಯ ದಿನದ—ಅಂದರೆ ಡಿಸೆಂಬರ್ ೩೦, ಶನಿವಾರದ—ಮೂರನೆಯ ದಿನವನ್ನು 'ಪ್ರಪಂಚದ ದಿನ'[25] ವೆಂದು ಕರೆದು ಅದನ್ನು ವಾರ ನಾಮ ರಹಿತವಾದದ್ದೆಂದು ಗಣಿಸತಕ್ಕದ್ದು. ಅದರ ಮುಂದಿನ ಹೊಸವರ್ಷದ ಜನವರಿ ೧ ಭಾನುವಾರವಾಗುತ್ತದೆ. 'ಪ್ರಪಂಚದ ದಿನ' ರಜಾದಿನ.

(೩) ಋತುವರ್ಷದ ಅವಧಿಯು ೩೬೫·೨೪೨೨ ದಿನಗಳಾದ್ದರಿಂದ ನಾಲ್ಕು ವರ್ಷಗಳಿಗೊಂದು ಸಲ ವರ್ಷದ ೨ನೆಯ ಪಾದಾಂತ್ಯದಲ್ಲಿ–ಅಂದರೆ ಜೂನ್ ೩೦, ಶನಿವಾರ ಮತ್ತು ಜುಲೈ ೧ ಭಾನುವಾರಗಳ ಮಧ್ಯೆ–ಒಂದು ದಿನವನ್ನು ಸೇರಿಸಿ ಅದನ್ನು 'ಅಧಿಕ ವರ್ಷದಿನ[26] ' ವೆಂದು ಕರೆದು ಅದನ್ನೂ ವಾರನಾಮರಹಿತವಾದದ್ದೆಂದು ಎಣಿಸತಕ್ಕದ್ದು. ' ಅಧಿಕವರ್ಷದಿನ 'ವೂ ರಜಾ ದಿನ. ಅಲ್ಲಿಗೆ ವರ್ಷಕ್ಕೆ ಸರಾಸರಿ ೩೬೫.೨೫ ದಿನಗಳಾಗುತ್ತವೆ. ಇದು ಸಾಯನ ವರ್ಷಕ್ಕಿಂತ ೦·೦೦೭೮ ದಿನ ಹೆಚ್ಚಾದ್ದರಿಂದ ಶತಮಾನ ವರ್ಷಗಳಲ್ಲಿ ಶತಕಭಾಗವು ನಾಲ್ಕರಿಂದ ಭಾಗವಾಗಬಲ್ಲ ವರ್ಷಕ್ಕೆ ಮಾತ್ರ ' ಅಧಿಕ ವರ್ಷ ದಿನ ' ವನ್ನು ಸೇರಿಸತಕ್ಕದ್ದು. ಅಂದರೆ ಈ ನಿಯಮದಂತೆ ಕ್ರಿ. ಶ. ೨,೦೦೦ ಮತ್ತು ೨,೪೦೦ ಅಧಿಕದಿನದ ವರ್ಷಗಳಾದರೂ ೨೧೦೦,೨೨೦೦ ಮತ್ತು ೨೩೦೦ ಅಧಿಕದಿನದ ವರ್ಷಗಳಲ್ಲ. ಅಲ್ಲಿಗೆ ವರ್ಷಕ್ಕೆ ಸರಾಸರಿ ೩೬೫.೨೪೨೫ ದಿನಗಳೆಂದಾಗುತ್ತದೆ

(ಇದೂ ಸಾಯನ ವರ್ಷಕ್ಕಿಂತ ೦.೦೦೦೩ ದಿನಗಳು ಹೆಚ್ಚಾದ್ದರಿಂದ, ಪೂರ್ಣ ಸಾವಿರ ವರ್ಷಗಳಲ್ಲಿ ಸಹಸ್ರಭಾಗವು ೪ ರಿಂದ ಭಾಗವಾದಲ್ಲಿ ಮಾತ್ರ ಆ ವರ್ಷ ಅಧಿಕದಿನದ ವರ್ಷದ್ದಾಗುತ್ತದೆಂದು ನಿರ್ಣಯಿಸಬಹುದು. ಆಗ ಶತಕಗಳು ನಾಲ್ಕರಿಂದ ಭಾಗವಾದರೂ ಸಹಸ್ರಗಳು ಭಾಗವಾಗುವುದಿಲ್ಲವಾದ್ದರಿಂದ ೨,೦೦೦, ೬,೦೦೦ ಮತ್ತು ೧೦,೦೦೦ ಶಕವರ್ಷಗಳು ಅಧಿಕ ದಿನ ವರ್ಷಗಳಾಗುವುದಿಲ್ಲ. ಹೀಗೆ ೧೦,೦೦೦ ವರ್ಷಗಳಲ್ಲಿ ಮತ್ತೆ ೩ ದಿನಗಳು ಕಡಿಮೆ ಯಾಗುವುದರಿಂದ ವರ್ಷಕ್ಕೆ ಸರಾಸರಿ ೩೬೫. ೨೪೨೨ ದಿನಗಳಾಗುತ್ತವೆ.)

(೪) ಈ ಪದ್ಧತಿಯನ್ನು ಈಗಿನ ಗಣನೆಯಂತೆ ಯಾವ ವರ್ಷ ಜನವರಿ ೧ ಭಾನುವಾರ ಬೀಳುತ್ತದೆಯೋ ಆ ವರ್ಷದಿಂದ ಆಚರಣೆಗೆ ತರತಕ್ಕದ್ದು. ಉದಾಹರಣೆಗೆ ೧೯೫೬ ರ ಜನವರಿ ೧ ಭಾನುವಾರ ಆಗುತ್ತದೆಯಾದ್ದರಿಂದ ಅದು ಪ್ರಪಂಚದ ಪಂಚಾಂಗದ ಆರಂಭೋತ್ಸವಕ್ಕೆ ಅನುಕೂಲವಾದ ವರ್ಷ.

---

25. 'World Day' 26. 'Leap Year Day.'

ಪ್ರಪಂಚಪಂಚಾಂಗ ಸಂಸ್ಥೆ[25]ಯ ಅಭಿಪ್ರಾಯದಂತೆ ಈ ವ್ಯವಸ್ಥೆಯಿಂದ ಫಲಿಸುವ ಅನುಕೂಲಗಳು ಇವು. ಇಂದಿನ ಪಾಶ್ಚಾತ್ಯ ಪಂಚಾಂಗದಲ್ಲಿ ವರ್ಷದ ತಿಂಗಳುಗಳಿಗೆ ಗೊತ್ತಾಗಿರುವ ದಿನಗಳಲ್ಲಿ ಯಾವ ಕ್ರಮವೂ ಇಲ್ಲ. ಜನವರಿಗೆ ೩೧ ದಿನಗಳಿದ್ದು ಫೆಬ್ರುವರಿಗೆ ೨೮ ದಿನಗಳು, ಮಾರ್ಚಿಗೆ ಪುನಃ ೩೧ ದಿನಗಳು ಇತ್ಯಾದಿ ಏರ್ಪಾಟಿನಲ್ಲಿ ವ್ಯವಹಾರ ಸೌಕರ್ಯವೂ ಇಲ್ಲ, ವೈಜ್ಞಾನಿಕ ಆವಶ್ಯಕತೆಯೂ ಇಲ್ಲ, ಅವ್ಯವಸ್ಥೆಯೇನೋ ಇದೆ. ಒಂದು ವರ್ಷದ ತಿಂಗಳು, ತಾರೀಖು ಒಂದು ವಾರವಾದರೆ, ಇನ್ನೊಂದು ವರ್ಷದ ಅದೇ ತಿಂಗಳ ಅದೇ ತಾರೀಖು ಬೇರೆ ಯಾವ ವಾರವಾದರೂ ಆಗಬಹುದು. ಪ್ರಪಂಚ ಪಂಚಾಂಗದ ವ್ಯವಸ್ಥೆಯಂತೆ ಒಂದು ತಿಂಗಳು, ತಾರೀಖು ಈ ವರ್ಷ ಸೋಮವಾರವಾದರೆ, ಎಲ್ಲ ವರ್ಷಗಳಲ್ಲಿಯೂ ಆ ತಿಂಗಳು ಆ ತಾರೀಖು ಸೋಮವಾರವೇ ಆಗುತ್ತದೆ. ಅಲ್ಲದೆ ವರ್ಷದ ಒಂದು ಪಾದದ ತಾರೀಖುವಾರಗಳೇ ಇತರ ಮೂರು ಪಾದಗಳಲ್ಲಿಯೂ ಪುನರಾವರ್ತನೆಯಾಗುತ್ತವೆ.

ತಿಂಗಳುಗಳಿಗೆ ಗೊತ್ತುಮಾಡಿರುವ ದಿನಗಳಲ್ಲಿ ಕ್ರಮವಿರುವುದನ್ನು ಹೊಸ ಪದ್ಧತಿಯ ಒಂದು ಮುಖ್ಯ ಸೌಕರ್ಯವೆಂದು ಧಾರಾಳವಾಗಿ ಹೇಳಬಹುದು. ಆದರೆ ಪ್ರಪಂಚ ಪಂಚಾಂಗದ ವಾರ ವ್ಯವಸ್ಥೆಯನ್ನು ಜನಗಳು ಮೆಚ್ಚಿಕೊಳ್ಳಲಾರರು. ಸಾವಿರಾರು ವರ್ಷಗಳಿಂದ ಏಳು ದಿನಗಳ ವಾರದ ವ್ಯವಸ್ಥೆ ಪ್ರಪಂಚದಲ್ಲಿ ಕ್ರಮತಪ್ಪದೆ, ಅವ್ಯಾಹತವಾಗಿ ನಡೆದು ಬಂದಿವೆ. ಈಗ ಆಗೊಂದು ದಿನವನ್ನು ಈಗೊಂದು ದಿನವನ್ನು ವಾರವಿಲ್ಲದ ದಿನವೆಂದು ಕರೆದು ಅವಿಚ್ಛಿನ್ನವಾಗಿ ನಡೆದುಬಂದಿರುವ ಏಳು ದಿನಗಳ ವಾರ ಚಕ್ರವನ್ನು ಮುರಿಯುವ ಪ್ರಯತ್ನಕ್ಕೆ ಜನಗಳ ಪ್ರೋತ್ಸಾಹ ಸಿಕ್ಕುವುದು ಕಷ್ಟ. ಅಲ್ಲದೆ ಈ ಸುಧಾರಣೆಗೆ ಆವಶ್ಯಕತೆಯೂ ಕಾಣುವುದಿಲ್ಲ.

ಕ್ರೈಸ್ತ ಮತೀಯರಲ್ಲಿ ಈಸ್ಟರ್ ಹಬ್ಬವು ಸೋಮವಾರವೇ ಆಗಬೇಕು, ಮುಸ್ಲಿಮರಿಗೆ ಶುಕ್ರವಾರವು ನಮಾಜ್ ಮಾಡಬೇಕಾದ ದಿನ, ಯೆಹೂದಿಯರಿಗೆ ಶನಿವಾರವು ವಿಶೇಷಪ್ರಾರ್ಥನಾ ದಿನ, ಹಿಂದೂಗಳು ವರಮಹಾಲಕ್ಷ್ಮೀವ್ರತವನ್ನು ಶುಕ್ರವಾರವೇ ಆಚರಿಸುತ್ತಾರೆ. ಇದೇ ರೀತಿ ವಿವಿಧ ಮತೀಯರಲ್ಲಿ ವಾರವೇ ಪ್ರಧಾನವಾಗಿರುವ ಇನ್ನೂ ಎಷ್ಟೋ ವ್ರತಗಳೂ ಹಬ್ಬಗಳೂ ಇವೆ. ವ್ಯಾವಹಾರಿಕವಾಗಿ ಪ್ರಪಂಚ ಪಂಚಾಂಗದಲ್ಲಿ ವಾರರಹಿತ ದಿನಗಳನ್ನು ಸೇರಿಸಿದರೂ, ಅನೇಕ ಜನಗಳು ತಮ್ಮ ತಮ್ಮ ಮನೆಗಳಲ್ಲಿ ಅನೂಚಾನವಾಗಿ ಬಂದಿರುವ ಅವಿಚ್ಛಿನ್ನ ವಾರ ವ್ಯವಸ್ಥೆಯನ್ನೇ ನಡೆಸಿಕೊಂಡು ಬರುವುದರಲ್ಲಿ ಸಂದೇಹವಿಲ್ಲ. ಆಗ ಕಛೇರಿಯಲ್ಲಿ ಮಂಗಳವಾರ, ಮನೆಯಲ್ಲಿ ಗುರುವಾರವೆಂಬ ಪಂಚಾಂಗ ದ್ವಿಪ್ರಭುತ್ವಯುಗದ ಆರಂಭವಾಗುತ್ತದೆ.

ಅಲ್ಲದೆ ಇಂಥ ತಿಂಗಳು, ಇಂಥ ತಾರೀಖು ಎಂದರೆ ಇಂಥದೇ ವಾರ ಎಂಬ ವ್ಯವಸ್ಥೆಯಲ್ಲಿರುವ ಗುಣ ವಿಶೇಷ ತಾನೆ ಏನು? ಈ ವ್ಯವಸ್ಥೆಯಂತೆ ತಿಂಗಳು, ತಾರೀಖು ತಿಳಿಸಿದರಾಯಿತು, ವಾರ ತಿಳಿಸಬೇಕಾಗಿಯೇ ಇಲ್ಲ! ವಾರವು 'ತಲೆ

ಶಿರೋಭಾರ' ಎಂಬಂತೆ ಒಂದು ಅಪ್ರಯೋಜಕ ಅನುಬಂಧವಾಗುತ್ತದೆ. ಈಗಿನ ಪದ್ಧತಿಯಂತೆ ಒಂದು ಕಾಗದದಲ್ಲಿ ವರ್ಷ ತಿಳಿಸದೆ ತಿಂಗಳು, ತಾರೀಖು, ವಾರಗಳನ್ನು ಮಾತ್ರ ತಿಳಿಸಿದ್ದರೆ, ಆ ಕಾಗದವು ಐದಾರು ವರ್ಷಗಳಿಗಿಂತ ಹಳೆಯದಲ್ಲ ಎಂದು ನಮಗೆ ತಿಳಿದಿದ್ದರೆ, ಆ ವರ್ಷ ಯಾವುದು ಎಂಬುದನ್ನು ನಿರ್ಧರಿಸಬಹುದು. ಹೊಸ ವ್ಯವಸ್ಥೆ ಆಚರಣೆಗೆ ಬಂದರೆ ಇದು ಸಾಧ್ಯವಾಗುವುದಿಲ್ಲ. ಹೊಸ ವ್ಯವಸ್ಥೆಯನ್ನು ವಿರೋಧಿಸುವುದಕ್ಕೆ ಇದು ಗೌಣಕಾರಣವೆಂದು ಹೇಳಿದರೆ ಅದು ಒಪ್ಪತಕ್ಕದ್ದೇ ಸರಿ. ಆದರೆ ಹಿಂದೆ ತಿಳಿಸಿರುವಂತೆ ಪುರಾತನ ಸಂಪ್ರದಾಯಗಳನ್ನು ಗುರುತರವಾದ ಕಾರಣವಿಲ್ಲದೆ ತೊಡೆದು ಹಾಕುವುದು ಅನುಚಿತ. ವಾರ ಚಕ್ರವನ್ನು ಮುರಿಯಲು ಅಂಥ ಗುರುತರವಾದ ಕಾರಣ ಏನೂ ಕಾಣುತ್ತಿಲ್ಲ. ಜನವರಿ, ಫೆಬ್ರುವರಿ ಇತ್ಯಾದಿ ತಿಂಗಳುಗಳಿಗೆ ಒಂದು ಕ್ರಮದಲ್ಲಿ ದಿನಗಳನ್ನು ಗೊತ್ತುಮಾಡುವುದು, ತಾರೀಖಿಲ್ಲದ ಪ್ರಪಂಚ ದಿನ, ಅಧಿಕವರ್ಷ ದಿನಗಳನ್ನು ಸೇರಿಸುವುದು ಇವೇನೋ ಯುಕ್ತಸುಧಾರಣೆಗಳಾಗಿ ಕಂಡು ಬರುತ್ತವೆ. ಏಕೆಂದರೆ ಗ್ರೆಗೊರಿಯನ್ ಪಂಚಾಂಗ ವ್ಯವಸ್ಥೆಯಲ್ಲಿ ತಿಂಗಳುಗಳ ತಾರೀಖುಗಳಿಗೆ ಯಾವ ಖಗೋಳೀಯ ಅಥವಾ ಮತೀಯ ಸೂಚಕಾರ್ಥವೂ ಇಲ್ಲ; ದೀರ್ಘಕಾಲಿಕವಾಗಿ ವರ್ಷದ ಸರಾಸರಿ ಅವಧಿ ೩೬೫·೨೪೨೨ ದಿನಗಳಾಗಿರಬೇಕೆಂಬುದಷ್ಟು ಮಾತ್ರ ಆ ಪದ್ಧತಿಯ ಗುರಿ.

ಆರ್. ಎಲ್. ನರಸಿಂಹಯ್ಯ

# ರಪಣ>ರವಣ ಎಂಬುದರ ಅರ್ಥ ಮತ್ತು ನಿಷ್ಪತ್ತಿ

"ತನಗೆ ಸಾವಂ ಸಮಕಟ್ಟುವಂತೆ" ದುರ್ಯೋಧನನು ಶಕುನಿಯಿಂದ ಹೂಡಿಸಿದ ಪಗಡೆಯ ಜೂಜಿನಲ್ಲಿ ಅದರ ಸೊಕ್ಕು ತಲೆಗೇರಿದಾಗ ಯುಧಿಷ್ಠಿರನು "ಸಾಲದೆ ಜೂಜು ನಿಮ್ಮೊಳಗಿದೇಂ ಗಳ ಮಾಣಿಸಿಂ" ಎಂದು ಹೇಳಿದ ಹಿರಿಯರ ಮಾತನ್ನೂ ಕೇಳದೆ ಆನೆಗಳನ್ನೂ ಅನರ್ಘ್ಯ ವಸ್ತುವಾಹನಾದಿಗಳನ್ನೂ ಒಡ್ಡವಾಗಿಟ್ಟು ಸೋತಾಗ ದುರ್ಯೋಧನಾದಿಗಳು "**ರಪಣಮುಂ** ತೋಱಿಯುಮೊತ್ತೆಯನುಗ್ಗಡಿಸಿಯುಮಾಡಿಂ" ಎಂದು ಉತ್ತೇಜಿಸಿದರೆಂದು ಪಂಪನ ವರ್ಣನೆ (ಪಂಪಭಾರತ VII—೩೧). ಅದನ್ನು ಕೇಳಿ ಧರ್ಮರಾಜನು "ಪೆಱತೇನುಮುಪಾಯಮಿಲ್ಲದೆಮ್ಮಾಳ್ವ ನೆಲನನೊತ್ತೆ"ಯೆಂದು ಹೇಳಿದನಂತೆ. ಇಲ್ಲಿ ಬರುವ 'ರಪಣ'ವೆಂಬುದಕ್ಕೆ 'ರವಣ'ವೆಂಬ ಒಂದು ಪಾಠವೂ ಇದೆ. ಇದರ ಅರ್ಥವನ್ನು ಪಂಪ ಭಾರತದ 'ಕ್ಲಿಷ್ಟ ಪದಗಳ ನಿಘಂಟು' ವಿನಲ್ಲಿ ಸೂಚಿಸದೆ ಪ್ರಶ್ನ ಚಿಹ್ನೆಯನ್ನು ಹಾಕಿದೆ. ಧರ್ಮರಾಜನು ಎಲ್ಲವನ್ನೂ ಸೋತು ಏನನ್ನೂ ಜೂಜಿಗೆ ಒಡ್ಡಲು ಅಸಮರ್ಥನಾಗಿ ತನ್ನ ರಾಜ್ಯವನ್ನು ಒತ್ತೆಯಿಡ ಬೇಕಾಗಿ ಬಂದಿತೆಂಬ ಸಂದರ್ಭದಲ್ಲಿ '**ರಪಣ**' ಶಬ್ದಕ್ಕೆ ಏನೋ ಒಂದು ವಿಶಿಷ್ಟಾರ್ಥ ವಿರುವಂತೆ ಬೋಧೆಯಾಗುತ್ತದೆ.

ಕಿಟ್ಟೆಲ್ ಅವರು ತಮ್ಮ ಕೋಶದಲ್ಲಿ ಈ ಶಬ್ದವನ್ನು ಕಾಣಿಸಿ ಕುಮಾರವ್ಯಾಸ ಭಾರತದಿಂದ ಮೂರು ಪ್ರಯೋಗಗಳ ಸೂಚನೆಯನ್ನೂ ಮಾಡಿ "A kind of weapon" ಎಂದು ಅದಕ್ಕೆ ಅರ್ಥವಿಸಿದ್ದಾರೆ. ಆ ಪ್ರಯೋಗಗಳನ್ನೂ ಅವುಗಳ ಸಂದರ್ಭಗಳನ್ನೂ ಪರೀಕ್ಷಿಸಿ ನೋಡುವುದು ಆವಶ್ಯಕ. "ಮಹಾಸುರನ ಬಾಣಸದ ಬೀಯಕೆ **ರಪಣ**ವುಂಟಿಮಗೆ" (Bh 1, 10, 14) ಎಂಬುದು ಒಂದನೆಯ ಪ್ರಯೋಗ. ಬಕವಧೆಯ ಪ್ರಸಂಗದಲ್ಲಿ ದಿನ ದಿನದ ಸರದಿ ತನಗೆ ಬಂದಾಗ ತನ್ನ ಮನೆಯಲ್ಲಿ ಯಾರನ್ನು ಅಸುರನಿಗೆ ಆಹಾರವಾಗಿ ಕಳಿಸಬೇಕೆಂಬ ಚಿಂತೆಯಿಂದ ವ್ಯಾಕುಲಿತನಾದ ವಿಪ್ರನಿಗೆ ಕುಂತಿ ಹೇಳಿದ ಮಾತಿದು. ಮುಂದಕ್ಕೆ "ಏಸು ಕಂಡುಗದಕ್ಕಿಯೋಗರವೈಸ ನೀನಳವಡಿಸು ಮೇಲುಂಟೇಸು ಸಾಧನವನಿತುವನು ತೆಗೆಸೆಂದಳಾ ಕುಂತಿ" ಎಂದಿದೆ. ಇಲ್ಲಿ ಅಸುರನಿಗೆ ಎಷ್ಟು ಖಂಡುಗ ಅಕ್ಕಿಯ ಅನ್ನ ಬೇಕೋ ಅಷ್ಟನ್ನು ನೀನು ಸಿದ್ಧಪಡಿಸು ಎಂಬ ತಾತ್ಪರ್ಯಕ್ಕಿಂತ ನಿನ್ನಲ್ಲಿ ಎಷ್ಟು ಖಂಡುಗ ಅಕ್ಕಿಯಿದೆಯೋ ಅಷ್ಟು ಅನ್ನವನ್ನು ಸಿದ್ಧಗೊಳಿಸು ಎಂದು ಗ್ರಹಿಸುವುದು ಲೇಸು. ನಿನ್ನಲ್ಲಿ ಎಷ್ಟು 'ಸಾಧನ' ವಿದೆಯೋ ಅಷ್ಟನ್ನು ತೆಗಸು ಎಂಬ ಮುಂದಿನ ಅಭಿಪ್ರಾಯ ಇದಕ್ಕೆ ಪುಷ್ಟಿಕೊಡುತ್ತದೆ. ಸಾಲದೆ ಬಂದದ್ದಕ್ಕೆ ಕುಂತಿಯ ಬಳಿ 'ಸಾಧನ' ವಿದೆಯೆಂದು ತಿಳಿಯುತ್ತದೆ. ಆದ್ದರಿಂದ ಈ ಪ್ರಯೋಗ ದಲ್ಲಿನ 'ರಪಣ'ಕ್ಕೆ ಸಾಧನ, ಸಾಮಗ್ರಿ ಎಂಬರ್ಥವಿರುವಂತೆ ಹೇಳಬಹುದು.

ಒಂದು ಬಗೆಯ ಆಯುಧವೆಂಬ ಕಿಟ್ಟೆಲ್ಲರ ಅರ್ಥಕ್ಕೆ ಇಲ್ಲಿ ಅವಕಾಶವಿಲ್ಲ. ಎರಡನೆಯ ಪ್ರಯೋಗ "ಭಟರ ತಲೆಗಳು ಬೀಯವಾದುವು ಮತ್ತೆ **ರಪಣವ** ತೋಱಿಸಾ ರಣಕೆ" ಎಂಬುದು (Bh 3, 22, 30). ಜಯದ್ರಥನು ದ್ರೌಪದಿಯನ್ನು ಅಪಹರಿಸಿಕೊಂಡು ಮುಂದೆ ಮುಂದೆ ಓಡುತ್ತ ಹಿಂದೆ ಹಿಂದೆ ಅಟ್ಟಿಸಿಕೊಂಡು ಬರುವ ಭೀಮಾರ್ಜುನ ರನ್ನು ಅಡ್ಡಗಟ್ಟಿ ಕಾಪಾಡಬೇಕೆಂದು ತನ್ನ ಭಟರಿಗೆ ಹೇಳುತ್ತಾನೆ; ಭೀಮನು ಮರ ವನ್ನು ಮುರಿದು ಅವರನ್ನೆಲ್ಲ ಅದರಿಂದ ಸದೆಬಡಿದು ಮುಂದೆ ಓಡುವ ಜಯದ್ರಥನನ್ನು ಕೂಗಿ ಕರೆದು ಹೇಳುವ ಸಂದರ್ಭವಿದು. ನಿನ್ನ ಭಟರ ತಲೆಗಳೆಲ್ಲ ಮುಗಿದು ಹೋದುವು, ಎಂದರೆ ಎಲ್ಲರೂ ಸತ್ತರು, ಯುದ್ಧಕ್ಕೆ ರಪಣವನ್ನು ತೋರಿಸು ಎಂದರ ಬೇರೆ ಭಟರಾ ರಾದರೂ ಇದ್ದರೆ ಅವರನ್ನು ಕಾಣಿಸು, ಅವರನ್ನೂ ಕೊಂದುಬಿಡುತ್ತೇನೆ ಎಂಬ ಅಭಿ ಪ್ರಾಯ ಈ ವಾಕ್ಯದ್ದು. ಇಲ್ಲಿ ರಪಣಕ್ಕೆ ಇದು ಯುದ್ಧದ ಸಂದರ್ಭವಾಗಿರುವುದರಿಂದ ಕಿಟ್ಟೆಲ್ಲರು ಆಯುಧವೆಂದು ಅರ್ಥೈಸಿರುವಂತೆ ಕಾಣುತ್ತದೆ. ಆದರೆ ಬೇರೆ ಭಟರ 'ಸಾಧನ' ವೇನಾದರೂ ಇದ್ದರೆ ತೋರಿಸೆಂಬ ಅಭಿಪ್ರಾಯಕ್ಕೆ ಎಡೆಯಿಲ್ಲದಿಲ್ಲ. "ಹಿಡಿದ ಮುಷ್ಟಿಯ ನಿನ್ನ **ರಪಣವ** ಕೊಡಹಿ ನಿನ್ನೆದೆವೆರಳ ಕೊಳ್ಳದೆ ಬಿಡುವೆನೇ" ಎಂದು ಮೂರನೆಯ ಪ್ರಯೋಗ (Bh. 8, 24, 50). ಇದಕ್ಕೆ "ಮುಷ್ಟಿಗೆ ಸರ್ವ **ರಪ ಣವ** ಕೊಡಹಿ ನಿನ್ನೆದೆದಿರುಳ ಕೊಳ್ಳದೆ ಬಿಡುವೆನೇ" ಎಂದು ಪಾಠಾಂತರವೂ ಇರು ವುದರಿಂದ ಇಲ್ಲಿನ 'ರಪಣ' ದ ಅರ್ಥನಿರ್ಣಯ ಮೊದಲೆರಡು ಪ್ರಯೋಗಗಳಲ್ಲಿರು ವಷ್ಟು ಸುಲಭವಾಗಿಲ್ಲ ಕುರುಕ್ಷೇತ್ರದ ರಣಭೂಮಿಯಲ್ಲಿ ಒಮ್ಮೆ ಕರ್ಣಾರ್ಜುನರು ಒಬ್ಬರನ್ನೊಬ್ಬರು ಇದಿರಿಸಿ ಬಾಣಗಳನ್ನು ಸುರಿಸುತ್ತಿರುವಾಗ ಅರ್ಜುನನ ಬಾಣ ಕರ್ಣ ನೆದೆಯನ್ನುನಾಟಿ ಬೆನ್ನಿನಲ್ಲಿ ಮೂಡಿದ್ದರಿಂದ ರುಧಿರಧಾರೆಯನ್ನು ಸೂಸುತ್ತ ಕರ್ಣ ಕೈಗುಂದಿ ಕೆಳಗೆ ಬೀಳುವನು. ದಳಪತಿಯ ಸಾವಿನಲ್ಲಿ ಕೌರವನ ಸೈನ್ಯ ದಿಕ್ಕಾಪಾಲಾಗಿ ಓಡಿಹೋಗುತ್ತಿರಲು ಕೃಪಗುರುಸುತರು ಅರ್ಜುನನನು ಅಡ್ಡಗಟ್ಟಿ ಕಾಳಗವಾಡುತ್ತಾರೆ. ಇಷ್ಟರಲ್ಲಿ ಕರ್ಣ ಚೇತರಿಸಿಕೊಂಡು ಬಾಣವನ್ನು ಬೆರಳಲ್ಲಿ ತೂಗುತ್ತಅರ್ಜುನನನ್ನು ಮೂದಲಿಸುವ ಸಂದರ್ಭದಲ್ಲಿ ಮೇಲಿನ ವಾಕ್ಯ ಬರುತ್ತದೆ. ಎಲೋ ಅರ್ಜುನ, ಹಾರುವ ರೊಡನೆ ನಿನ್ನ ಶೌರ್ಯಾಧಿಕ್ಯವೇಕೆ, ಹೋಗಬೇಡ, ಇತ್ತ ಬಂದಿದಿರಾಗು,ನೀನು ಹಿಡಿದಿರುವ ಮುಷ್ಟಿಯ ಸರ್ವರವಣವನ್ನು ನಾನು ಕೊಡವಿ ನಿನ್ನೆದೆಯ ತಿರುಳನ್ನು ತೆಗೆಯದೆ ಬಿಡು ತ್ತೇನೆಯೇ ಎಂದು ಇಲ್ಲಿನ ತಾತ್ಪರ್ಯ. 'ರವಣ'ಕ್ಕೆ ಇಲ್ಲಿ ಸಾರ, ತಿರುಳು ಎಂಬಂತಹ ಅರ್ಥವು ಸಂಗತವಾಗಿರುವಂತೆ ತೋರುತ್ತದೆ. ಈ ಪ್ರಯೋಗಕ್ಕೆ ಕೊಂಚ ಹಿಂದೆ ೪೬ ನೆಯ ಪದ್ಯದಲ್ಲಿ ಅರ್ಜುನನು ಕೃಪಗುರುಸುತರನ್ನು ಕರೆದು 'ನಿವಗೆ ಹರಿಬದೊ ಳೊಂದು ಮುಷ್ಟಿಗೆ **ರವಣ**ವುಂಟೇ ಹಾಯ್ಕಿ ನಿಮ್ಮಾಟವನು ನೋಡುವೆನು" ಎಂದು ಮೂದಲಿಸುತ್ತಾನೆ. ನನ್ನಿಂದ ಕರ್ಣನು ಪಟ್ಟನೋವಿಗಾಗಿ ನೀವು ಪ್ರತಿಕ್ರಿಯೆ ಮಾಡುವಲ್ಲಿ ಒಂದು ಹಿಡಿ ರವಣವು ನಿಮ್ಮಲ್ಲಿರುವುದೇ ಆದರೆ ಅದನ್ನು ತೋರಿಸಿರಿ, ನಿಮ್ಮಾಟವನ್ನು ನೋಡುತ್ತೇನೆ ಎಂದು ಆ ಮೂದಲಿಕೆಯ ತಾತ್ಪರ್ಯ. ಇಲ್ಲಿಯೂ

'ರವಣಕ್ಕೆ' ಸಾರ, ಸತ್ವ ಎಂಬಂತಹ ಅರ್ಥವನ್ನು ಹೇಳಬಹುದು. ಇವೆರಡೂ ಯುದ್ಧದ ಸಂದರ್ಭಗಳಾಗಿರುವುದೂ ಎರಡರಲ್ಲೂ 'ರವಣ'ದ ಹಿಂದೆ ಮುಷ್ಟಿಗೆ ಶಬ್ದ ಕಾಣು ವುದೂ ಮುಷ್ಟಿಯಲ್ಲಿ ಹಿಡಿಯತಕ್ಕ ಒಂದು ಆಯುಧವೆಂದು ಕಿಟ್ಟೆಲ್ಲರು ಅರ್ಥ ಹೇಳಿ ದ್ದಕ್ಕೆ ಕಾರಣಗಳಾಗಿರಬಹುದು. ಅವರು ಸೂಚಿಸಿರುವ ಈ ಅರ್ಥ ತಪ್ಪೆಂದು ಈ ಪ್ರಯೋಗಗಳ ಬಲದಿಂದಲೇ ನಿರ್ಣಾಯಕವಾಗಿ ತೀರ್ಮಾನಿಸುವುದು ಸಾಧ್ಯವಿಲ್ಲ ದಿದ್ದರೂ ಅದರ ಸಮೀಚೀನತೆಯ ವಿಷಯದಲ್ಲಿ ಸಂದೇಹಕ್ಕೆಡೆಯಿದೆಯೆಂಬುದಂತೂ ಖಚಿತವಾಗುತ್ತದೆ. ಆದ್ದರಿಂದ ಈ ಸಮಸ್ಯೆಯನ್ನು ಕೂಲಂಕಷವಾಗಿ ವಿಚಾರಮಾಡ ಬೇಕಾಗಿದೆ.

ಇದಕ್ಕೆ ಪೂರ್ವಕವಿ ಪ್ರಯೋಗಗಳ ನೆರವು ಹೇರಳವಾಗಿ ಬೇಕು. ಕನ್ನಡದಲ್ಲಿ ನನಗೆ ದೊರೆತಿರುವ ಹಲವು ಪ್ರಯೋಗಗಳನ್ನು ಕಾಣಿಸಿ ಅವುಗಳ ಸಂದರ್ಭಾನುವಾದ ದೊಡನೆ ಶಬ್ದಾರ್ಥವೇನಿದ್ದಿರಬೇಕೆಂಬುದರ ನಿರೂಪಣೆಗೆ ಇಲ್ಲಿ ತೊಡಗಿದೆ :

(೧) ಈ ಕೆಳಗಿನ ಪದ್ಯ 'ಕಾವ್ಯಾವಲೋಕನ'ದಲ್ಲಿ ಉದ್ಧೃತವಾಗಿದೆ (ಪದ್ಯ ೧೧೮) :

> ಕವಡಿಕೆ ಬಂದುದೋವಳುಱಿದಟ್ಟಿದಳಾಳ್ದನ ನಂಟರತ್ತಣಿಂ
> ದವದಳಮಾಯ್ತು ಪೋಯ್ತು **ರವಣಂ** ಪೊಲೆವಾವುಗೆನಂಬನಾದನಿ |
> ನ್ನವಧರಿಸಲ್ಕಮಾಱಿನೆನುತುಂ ಮಗುೞ್ದಾಡುವೆನಿಲ್ಲಜಂಗೆ ತಾಂ
> ಕವಡಿಕೆ ಕೆಯ್ಯೊಳಿರ್ದುಮವು ಮುಂದಲೆಯೊಳ್ ನೆಲೆಸಿರ್ದುವಲ್ಲವೇ ॥

ಈ ಇಡಿಪದ್ಯದ ಪೂರ್ಣತಾತ್ಪರ್ಯವನ್ನು ತಿಳಿಯುವುದು ಅತಿ ಕಷ್ಟವಾಗಿದ್ದರೂ ಪ್ರಕೃತಕ್ಕೆ ಬೇಕಾದ ಭಾಗದ ಅರ್ಥ ಸುಮಾರಾಗಿ ಸ್ಪಷ್ಟವಾಗಿದೆ. ಇದು ಯಾವ ಸಂದರ್ಭದಲ್ಲಿ ಬರುತ್ತದೆಂಬುದನ್ನಾಗಲಿ ಯಾರ ರಚನೆಯೆಂಬುದನ್ನಾಗಲಿ ತಿಳಿಯಲು ಯಾವ ಆಧಾರವೂ ಇಲ್ಲ. ಒಂದು ಕಾಲದಲ್ಲಿ ಶ್ರೀಮಂತನಾಗಿದ್ದ ಯಾವನೋ ಒಬ್ಬನಿಗೆ ಏನೋ ಕಾರಣದಿಂದ ಬಡತನ ಬಂದಡಸಿದಾಗ ಅವನು ಹೇಳಿಕೊಂಡ ಮಾತುಗಳಿವೆಂದು ತೋರುತ್ತದೆ. ಕೈಗೆ ಕವಡೆ ಬಂತು; ಪ್ರಿಯಳು ನನ್ನನ್ನು ತೊರೆದು ಅಟ್ಟಿಬಿಟ್ಟಳು, ನನ್ನ ಸ್ವಾಮಿಯಿಂದ ನಂಟರಿಂದ ನನ್ನದೆಲ್ಲವೂ ಕೊಳ್ಳೆಯಾಯಿತು (ದವದಳ= ದಟಿದುಟಿ), ರವಣವು ಹೋಯಿತು–ಎಂದು ಪ್ರಕೃತಭಾಗದ ತಾತ್ಪರ್ಯ. ಇಲ್ಲಿ ರವಣವೆಂದರೆ ಐಶ್ವರ್ಯ ಮುಂತಾದ ಅರ್ಥವಿರುವಂತೆ ಊಹಿಸ ಬಹುದು.

(೨) ವ್ರತಗಳನ್ನೂ ಧರ್ಮವನ್ನೂ ಸರಿಯಾಗಿ ಆಚರಣೆ ಮಾಡುವವರಿಗೆ ಅವುಗಳಿಂದಾಗ ಬೇಕಾದ ಕಾರ್ಯಸಿದ್ಧಿ ಆಗಿಯೇ ಬಿಡುವುದೆಂಬಂಶವನ್ನು ಸ್ಥಾಪಿಸು ವುದಕ್ಕಾಗಿ ನಯಸೇನನು ತನ್ನದೇ ಆದ ಶೈಲಿಯಲ್ಲಿ ಹಲವು ಹೋಲಿಕೆಗಳನ್ನೂ ದೃಷ್ಟಾಂತಗಳನ್ನೂ ಕೊಡುತ್ತ "ಕೆಱೆಯಂ ಕಂಡು ಕಳವೆಯಂ ಬಿತ್ತುವಂತೆ, **ರಷಣಮಂ** ಕಂಡು ಕಡನಂ ಕುಡುವಂತೆ" ಎಂದು ಹೇಳಿದ್ದಾನೆ (ಧರ್ಮಾಮೃತ

XIV-೧೬೦). ಕೆರೆ ತುಂಬಿರುವುದನ್ನು ನೋಡಿ ಬತ್ತವನ್ನು ಬಿತ್ತಿದರೆ ಫಲ ಬರುವುದು ನಿಶ್ಚಯ. ಹಾಗೆಯೇ ಸಾಲ ಕೊಡುವವನು ಸಾಲಗುಳಿಯ ರಪಣವನ್ನು ನೋಡಿ ಕೊಟ್ಟರೆ ಅದು ವಸೂಲಾಗುವುದರಲ್ಲಿ ಅವನಿಗೆ ಸಂದೇಹವಿರುವುದಿಲ್ಲ. ಸಾಲಗುಳಿಗೆ ಅದನ್ನು ತೀರಿಸುವ ಯೋಗ್ಯತೆ ಇದೆಯೋ ಇಲ್ಲವೊ ಎಂಬಂಶವನ್ನು ಸಾಲಿಗನು ಪರೀಕ್ಷೆ ಮಾಡುವುದು ಲೋಕರೂಢಿ. ಸಾಲಗುಳಿಗೆ ಆ ಯೋಗ್ಯತೆ ಉಂಟಾಗುವುದು ಅವನ ಚರಸ್ಥಿರ ಆಸ್ತಿಯಿಂದ. ಆದ್ದರಿಂದ ಇಲ್ಲಿ 'ರಪಣ'ಕ್ಕೆ ಆಸ್ತಿ, ಭಾಗ್ಯ ಎಂಬಂಥ ಅರ್ಥ ತಕ್ಕುದಾಗಿದೆ. ನಯಸೇನನ ಈ ಪ್ರಯೋಗವು ಬಲುಮಟ್ಟಿಗೆ ಅರ್ಥ ನಿರ್ಣಾಯಕವಾದುದೆಂದು ಹೇಳಬಹುದು.

(೩) 'ಸೂಕ್ತಿ ಸುಧಾರ್ಣವ'ದಲ್ಲಿರುವ ಅಜ್ಞಾತ ಕರ್ತೃಕಗಳಾದ ಹಲವು ಪದ್ಯಗಳಲ್ಲಿ ಕೆಳಗಿನದು ಒಂದು (೮-೪೪೧);

> ನವನಖರೇಖೆಗಳ್ ಬರೆದ [ಗೆ]ಲ್ಲದ ರೇಖೆಗಳಂತೆ ತೋಱಿತೆ ಮೂ
> ಡುವ ಮೊಲೆಯಾಡುವಳ್ಳೈರ್ದೆಗಳೊಳ್ ಸೆಱಿಸಾರಿವೊಲಾಗೆ ನಾಡೆ ನೋ ॥
> ಡುವ [ಕ]ಡೆಗಣ್ಣ ಡಾಳದೊಳೆ ಹಾಸಗೆವಾಯೆ ಮನಂ ವಿಟರ್ಗೆ ಹೋ |
> ದುವು **ರವಣಂ** ಗುಣಕ್ಕವಳ ಜವ್ವನನೆತ್ತದೊಳಾರೊ ಸೋಲದರ್ ॥

ಇದೊಂದು ರೂಪಕೋಕ್ತಿ. ನೆತ್ತದಾಟಕ್ಕೂ ಯೌವನಕ್ಕೂ ಸಮೀಕರಣವಾಗಿ ಈ ಪದ್ಯ ರಚಿತವಾಗಿದೆ. ಜವ್ವನವೇ ಪಗಡೆಯಾಟ, ಅಲ್ಲಿ ವಿಟವಿಟಿಯರ ರವಣ ಹೋಯಿತು, ಎಂದರೆ ಅವರು ಆಟದಲ್ಲಿ ಸೋತು ತಾವು ಇಟ್ಟ ಒತ್ತೆಯ ಧನವನ್ನು ಕಳೆದುಕೊಂಡರು. ಅವಳ ಗುಣಕ್ಕೆ ಎಂದರೆ, ಗೆಲವನ್ನು ಕಾಣಿಸುವ ಗೆರೆಗಳ ಸಂಖ್ಯಾಧಿಕ್ಯಕ್ಕೆ ಸೋಲದವರು ಯಾರಿದ್ದಾರೆ—ಇದು ಪದ್ಯದ ತಾತ್ಪರ್ಯ. ಇಲ್ಲಿಯೂ ರವಣಕ್ಕೆ ಬೆಲೆ ಬಾಳುವ ವಸ್ತು, ಸಾರವಸ್ತು, ಜೂಜಿನಲ್ಲಿ ಒಡ್ಡುವುದಕ್ಕೆ ತಕ್ಕುದಾದ ವಸ್ತು ಎಂಬರ್ಥ ಹೊಂದಿಕೆಯಾಗುತ್ತದೆ. ಈ ಸಂದರ್ಭದಲ್ಲಿ "ಆ ನರೆಪಂ ನೆರೆವಂದು ಪೊಂಗಳಂ ಸುರಿವೊಡಮಾರೊ ಸೈರಿಸುವರಾತನ ಪಲ್ಲಿಲಿವಾಯ ನಾತಮಂ" ಎಂಬ ಪಂಪನ ರಸೋಕ್ತಿಯನ್ನು ನೆನೆಯಬಹುದು (ಪಂಪಭಾರತ IV-೧೦೦). ಮುದುಕನೊಬ್ಬನು ಸೂಳೆಯೊಡನೆ ಕೂಡುವಾಸೆಯಿಂದ ಹೋಗಿ ಹೊನ್ನುಗಳನ್ನು ಸುರಿದರೂ ಅವನ ಬಚ್ಚುಬಾಯ ನಾತಕ್ಕೆ ಅವಳು ಹೇಸಿಕೊಳ್ಳುತಾಳೆ; ಅವಳಿಗೆ ಅವನೂ ಬೇಡ, ಅವನ ಹೊನ್ನೂ ಬೇಡ. ಇಲ್ಲಿ ಮುದುಕ ನೆರೆಯಲು ಹೋಗಿ ಸುರಿದ ಹೊನ್ನೇ 'ರವಣ'ವೆಂದು ಗ್ರಹಿಕೆಯಾಗುತ್ತದೆ.

ಈ ಶಬ್ದವನ್ನು ಅದರ ಮುಖ್ಯಾರ್ಥಗೌಣಾರ್ಥಗಳೆರಡರಲ್ಲೂ ಕುಮಾರವ್ಯಾಸನಷ್ಟು ಧಾರಾಳವಾಗಿಯೂ ಶಕ್ತಿಮಯವಾಗಿಯೂ ಬಳಸಿರುವ ಕನ್ನಡ ಕವಿ ಬೇರೊಬ್ಬನಿಲ್ಲ. ಅವನ ಅದ್ಭುತವಾದ ಶಬ್ದ ಭಂಡಾರದಲ್ಲಿ ವಿವಿಧವರ್ಣಗಳಿಂದ ರಂಜಿಸುವ ರತ್ನಗಳಲ್ಲಿ ಇದೊಂದು. ಅವನ ವಿಶಾಲ ಕಾವ್ಯಪರಿಚಯದಲ್ಲಿ ಬಹುಶಃ ಮುಖ್ಯವಾಗಿದ್ದ 'ಪಂಪಭಾರತ' ದಲ್ಲಿ ಆ ಪದಪ್ರಯೋಗವನ್ನು ಮೊದಲ ಸಲಕ್ಕೆ ಕಂಡು ಅದನ್ನು ತನ್ನ ಕೃತಿಯಲ್ಲಿ ಮೆರೆಯಿಸಿದನೆಂದು ಕಾಣುತ್ತದೆ. ಅವನ ಭಾರತಕೃತಿಯ

ದ್ಯೂತ ಪ್ರಸಂಗವೊಂದರಲ್ಲೇ ಅದರ ಹಲವು ಪ್ರಯೋಗಗಳು ಕಾಣುತ್ತವೆ :

(ಳ) i. ಆಟಕ್ಕೆ ಪಣವೇನೆಂದು ಶಕುನಿ ಕೇಳಿದಾಗ ಧರ್ಮರಾಜನ ಮಾತು : "ಅರಸಿಯರ ಮೈಗಾಹುಗಳ ಕಿಂಕರರು ಸಾವಿರವಿದೆ **ರಪಣ** ನಿಮ್ಮರಸನಲಿ ಪಣ ವೇನು" (2,13,57)

ii. ಧರ್ಮರಾಯನು ತನ್ನ ರಥಸಂಕುಲವನ್ನೊಡ್ಡಿ "ಈ ರಥಕ್ಕೆ ನಾಲ್ವತ್ತು ಸಾವಿರ ವಾರುವಂಗಳ ಕೂಟವಾ ಪರಿವಾರವಿದೆಲಾ **ರಪಣ**" ಎಂದು ಸೌಬಲನಿಗೆ ಹೇಳಿದನು (2,13,60).

iii. "ಉಗುಳುತಿದೆ ನಿನ್ನನುಜರಿಂಗಿತ ರೋಷಪಾವಕನ, ಸೊಗಸು ಬೀಯದು **ರಪಣ**ವಿಲ್ಲದ ಬೆಗಡು ನೋಯದು . . . . . ನಿನಗೆನುತ ಗಹಗಹಿಸಿದನು ಶಕುನಿ" (2,14,2)

iv. ಮೇಲಿನ ಮೂರನೆಯದರಲ್ಲಿ ಶಕುನಿ ನಕ್ಕಾಗ ಉತ್ತರವಾಗಿ "ಎಲ್ಲವೊ ಸೌಬಲವಿತ್ತವೀಸಜಿಲಲಿವುದೇ ನೀ ನಗುವವೊಲು ನಮ್ಮೊಳಗು ಡಿಳ್ಳವೆ **ರಪಣ**ವಿದೆಲಾ ಬಹಳ ಭಂಡಾರ" ಎಂದು ಹೇಳಿದ ಧರ್ಮರಾಯ (2,14,3)

v. "ಮತ್ತೆನುಡಿ ಧನವ ಭೂರಮಣ" ಎಂದು ಶಕುನಿ ಹೇಳಿದಾಗ "ರೇಖೆಯ ಭಾರಿಯೊಡ್ಡಕೆ ಪದ್ಮಸಂಖ್ಯೆಯ ಭೂರಿಧನವಿದೆ **ರಪಣ**ವೆಂದನು ನಗುತ ಯಮಸೂನು" (2,14,7).

ಮೇಲಿನ ಎಲ್ಲ ಪ್ರಯೋಗಗಳನ್ನೂ ವಿವರವಾಗಿ ಪರಿಶೀಲಿಸುವುದು ಅಷ್ಟೇನೂ ಆವಶ್ಯಕವಾಗಿಲ್ಲ. ಒಟ್ಟಿನಲ್ಲಿ "ರಪಣ" ಶಬ್ದ ಧನ = ವಿತ್ತ = ಅಖಿಲಸಿರಿ = ಪಣ ಎಂಬರ್ಥದಲ್ಲಿ ಇಲ್ಲಿ ಕಾಣುತ್ತದೆ; ಒಡ್ಡ = ಪಣ ಎಂದೂ ಒಂದೆರಡು ಕಡೆ ಆಗ ಬಹುದು.

(ಆ) ನಿವಾತ ಕವಚ ಕಾಲಕೇಯರೊಡನೆ ಅರ್ಜುನ ಹೋರಾಡಿದ್ದನ್ನು ಧರ್ಮ ರಾಜನಿಗೆ ಅವನು ವರ್ಣಿಸುತ್ತ "ಅವರ ಕೈಮೆಗೆ ತನ್ನ ಕೈಮೆಯು ಹವಣು ಹಿರಿದು, ಅವರೆಸುಗೆಗೆನ್ನಲಿ **ರಪಣ** ನೂರ್ಮಡಿ" ಎಂದನಂತೆ (3,13,50). ಇಲ್ಲಿ ರಪಣಕ್ಕೆ ಸಾಮರ್ಥ್ಯ, ಶಕ್ತಿ ಎಂಬ ಗೌಣಾರ್ಥವಿರುವಂತೆ ಕಾಣುತ್ತದೆ.

(ಇ) ಕುರುಕ್ಷೇತ್ರದ ಯುದ್ಧವೆಲ್ಲ ಮುಗಿದ ತರುವಾಯ ವ್ಯಾಕುಲಿತನಾದ ಧೃತ ರಾಷ್ಟ್ರನಿಗೆ ಧರ್ಮರಾಜನನ್ನು ಕಾಣಿಸುತ್ತ ವೇದವ್ಯಾಸರು ಅವನನ್ನು ಸಮಾಧಾನ ಪಡಿಸುವಾಗ "ಧರ್ಮವೆ **ರಪಣ**ವಿಹಪರಲೋಕಕೆಲೆ ಧೃತರಾಷ್ಟ್ರ ಕೇಳೆಂದ್ರ" ಎಂದ ನಂತೆ (10,11,34). ಧರ್ಮವೇ ಇಹಕ್ಕೂ ಪರಕ್ಕೂ ಆಸ್ತಿ ಎಂಬುದು ಇಲ್ಲಿನ ಅಭಿ ಪ್ರಾಯವೆಂದು ಹೇಳಬಹುದು.

ಮೇಲಿನವು ನನ್ನ ದೃಷ್ಟಿಗೆ ಇದುವರೆಗೆ ಬಂದಿರುವ ಪ್ರಯೋಗಗಳು. ಇನ್ನೂ ಹಲವು ಇತರ ಕಾವ್ಯಗಳಲ್ಲೂ ಕುಮಾರವ್ಯಾಸ ಭಾರತದಲ್ಲೂ ದೊರೆಯಬಹುದು. ಸಿಕ್ಕಿರುವಷ್ಟು ಪ್ರಯೋಗಗಳಿಂದಲೇ ಈ ಶಬ್ದದ ಅರ್ಥವನ್ನು ತಿಳಿಯಲು ಅವಕಾಶ

ವುಂಟು. “ ಒಂದು ಬಗೆಯ ಆಯುಧ ” ಎಂಬ ಕಿಟ್ಟೆಲ್ಲರ ಅರ್ಥ ಈ ಎಲ್ಲ ಪ್ರಯೋಗ ಗಳಿಗೂ ಹೊಂದಿಕೆಯಾಗುವುದಿಲ್ಲವೆಂದು ಸ್ಪಷ್ಟವಾಗಿಯೇ ಇದೆ. ಒಬ್ಬ ವ್ಯಕ್ತಿಗೆ ಸೇರಿದ ಎಲ್ಲ ಬಗೆಯ ಬೆಲೆಬಾಳುವ ವಸ್ತುಸಮೂಹ, ಸಾರಧನ, ವಿತ್ತ ಎಂಬುದು ಅದರ ಮುಖ್ಯಾರ್ಥ : ಸಾರ, ಸಾಮರ್ಥ್ಯ, ತಿರುಳು ಅದರ ಗೌಣಾರ್ಥ. ಮನುಷ್ಯನಿಗೆ ವಿತ್ತವೇ ಎರಡನೆಯ ಜೀವವಾಗಿರುವುದರಿಂದ ಆದರ ಪ್ರಧಾನತೆಯನ್ನು ಗಮನಿಸಿ ಈ ಗೌಣಾರ್ಥಗಳು ಬಂದಿರುವಂತೆ ಊಹಿಸಬಹುದು. ಜೂಜಾಟದ ಪ್ರಸಂಗದಲ್ಲಿ ಒಡ್ಡ, ಒತ್ತೆ ಎಂಬ ಆರ್ಥವೂ ಉಂಟಾಗಿರಬಹುದು.

ಇನ್ನು ಈ ಶಬ್ದದ ನಿಷ್ಪತ್ತಿ. ‘ ರಪಣ ’ದಲ್ಲಿ ಎರಡು ಶಬ್ದಗಳಿರುವಂತೆ ತೋರುತ್ತದೆ. ಎರಡನೆಯದು ‘ ಪಣ ’; ಇದಕ್ಕೆ ಆಸ್ತಿ, ವಿತ್ತ ಇತ್ಯಾದಿ ಅರ್ಥಗಳಿವೆ. ಮೊದಲನೆಯದು ರೈ ಎಂಬ ಶಬ್ದ; ಇದಕ್ಕೂ ವಿತ್ತ, ಧನ ಇತ್ಯಾದಿ ಅರ್ಥವಿದೆ. “ ರೈವೃಷ್ಟಿ” ಎಂದು ಕನ್ನಡ ಕಾವ್ಯಗಳಲ್ಲಿ ಬರುವ ಶಬ್ದಕ್ಕೆ ವಸುಧಾರೆ, ಚಿನ್ನದ ಮಳೆ ಎಂಬರ್ಥ ಪ್ರಸಿದ್ಧವಾಗಿಯೇ ಇದೆ. ಇವೆರಡು ಪದಗಳೂ ಒಟ್ಟಾಗಿ ಸೇರಿ ‘ರೈಪಣ’ ವಾಗಿ, ಆದರಿಂದ ರಯ್ಪಣ> ರಪಣ> ರವಣ ಎಂಬ ವಿಕೃತರೂಪಗಳು ಸಂಜ ನಿಸಿರುವಂತೆ ಕಾಣುತ್ತದೆ. ಒಂದೇ ಭಾಷೆಗೆ ಸೇರಿದ ಸಮಾನಾರ್ಥಕವಾದ ಎರಡು ಶಬ್ದಗಳು ಕಲೆತು ಅದೇ ಅರ್ಥದಲ್ಲಿ ಬೇರೊಂದು ಶಬ್ದದಂತೆ ವ್ಯವಹೃತವಾಗುವುದು ಭಾಷಾಶಾಸ್ತ್ರಕ್ಕೆ ಪರಿಚಿತವಾದ ವಿಷಯ ಇಂಥ ಶಬ್ದಗಳನ್ನು ‘ ಯಮಳ ಶಬ್ದ ’ ಗಳೆಂದು ಕರೆಯಬಹುದು (Doublets) ‘ ಕೊಳೆ ’ ಎಂಬರ್ಥದಲ್ಲಿ ಪ್ರಾಕೃತಭಾಷೆ ಗಳಲ್ಲಿರುವ ‘ ಜಲ್ಲಮಲ ’ವೂ—(ಇದು ಕನ್ನಡ ಕಾವ್ಯಗಳಲ್ಲೂ ಪ್ರಯುಕ್ತವಾಗಿದೆ, ಅಗ್ಗಳನ ಚಂದ್ರಪ್ರಭ ಪುರಾಣ, XIII-೩೬)—, ಕರಡಿ ಎಂಬರ್ಥದಲ್ಲಿರುವ ಅಚ್ಛ ಭಲ್ಲವೂ <ಋಕ್ಷ+ಭಲ್ಲೂಕ ಇಂಥ ಶಬ್ದಗಳು. ಬಂಗಾಳಿಯಲ್ಲಿ ಘರ್ ಬಾಡಿ <ಗೃಹ+ ವಾಟಿಕ=ಮನೆ, ಗಾಛ್ ಪಾಲಾ <ಗಚ್ಛ+ಪಲ್ಲವ=ಚಿಗುರು ಎಂಬ ಯಮಳಶಬ್ದ ಗಳುಂಟು. ಸೊಪ್ಪುಸದೆ, ತೋಟತುಡಿಕೆ, ಹುಳಹುಪ್ಪಟೆ ಮುಂತಾದುವು ಕನ್ನಡ ದಲ್ಲಿ ಇಂಥ ಶಬ್ದಕ್ಕೆ ನಿದರ್ಶನಗಳು. ಎರಡು ಶಬ್ದಗಳೂ ಸಮಾನಾರ್ಥಕಗಳಾದುವೂ ಭಿನ್ನಭಾಷೆಗಳಿಗೆ ಸೇರಿದುವೂ ಆಗಿದ್ದು ಅವೆರಡೂ ಒಟ್ಟಿಗೆ ಸೇರಿ ಅದೇ ಅರ್ಥದಲ್ಲಿ ಬೇರೊಂದು ಶಬ್ದವಾಗುವುದೂ ಉಂಟು; ಇವಕ್ಕೆ Polyglot ಎಂಬ ಹೆಸರಿದೆ. ಕನ್ನಡದಲ್ಲಿರುವ ಹಣ್ಣು ಹಂಪಲ <ಪಣ್+ಪಣ್+ಫಲ (ಸಂಸ್ಕೃತ), ಕಸಕಡ್ಡಿ <ಕಸ+ಕಾಷ್ಠ (ಸಂಸ್ಕೃತ) ಎಂಬಿವು ಇಂಥ ಶಬ್ದಗಳಾಗಿವೆ. ದಂತವಾಲ, ಪಾಲ ಕಾಪ್ಯ, ಇಕ್ಷು ಗಂಡ ಮುಂತಾದ ಸಂಸ್ಕೃತ ಶಬ್ದಗಳು ಈ ತೆರನ ಶಬ್ದಗಳೆಂದು ವಿದ್ವಾಂಸರ ಅಭಿಪ್ರಾಯ[1]. ಆದ್ದರಿಂದ ರೈ ಮತ್ತು ಪಣ ಎಂಬೆರಡು ಶಬ್ದಗಳ ಸಮಾಹಾರದಿಂದ ‘ ರೈಪಣ ’ವಾಗಿ ಅನಂತರ ರಪಣವೆಂದು ಪರಿಣಮಿಸಿರುವುದರಲ್ಲಿ ಅಸಹಜತೆಯೇನೂ ಕಾಣುವುದಿಲ್ಲ. ‘ ಯಮಳಶಬ್ದ ’ದಲ್ಲಿರುವ ಪೃಥಕ್ಪದಗಳು ಒಂದರ ಅರ್ಥವನ್ನು

---

1 S. K. Chatterji : Polyglotism in Indo-Aryan; Proceedings of the VII All India Oriental Conference. P. 177-189.

ಇನ್ನೊಂದು ಸ್ಥಿರಗೊಳಿಸುತ್ತವೆ. ಹಂಪಲು <ಪಣ್ಪಲ (ಪಂಪಭಾರತ VII-೨೮, ೩೦) ಎಂಬುದರ ಅರ್ಥ ಕಾಲಕ್ರಮದಲ್ಲಿ ಅಸ್ಪಷ್ಟವಾದ್ದರಿಂದ ಆ ಅರ್ಥ ಸ್ಥಾಪನೆಗೆ ಈಚಿನ ಕನ್ನಡಿಗರು ಅದರ ಹಿಂದೆ ಹಣ್ಣು ಎಂಬುದನ್ನು ಸೇರಿಸಿರಬೇಕು. ಹೀಗೆಯೇ ವೈದಿಕ ಸಂಸ್ಕೃತದಲ್ಲಿ ಪ್ರಚುರವಾಗಿದ್ದ ರೈ ಶಬ್ದ ಅರ್ವಾಚೀನ ಸಂಸ್ಕೃತದ ಕಾಲದಲ್ಲಿ ತನ್ನ ಅರ್ಥಸ್ಫುಟತೆಯನ್ನು ನೀಗಿಕೊಂಡದ್ದರಿಂದ ಅದರ ನೆರವಿಗೆ ಸಮಾನಾರ್ಥಕ ವಾದ 'ಪಣ' ಶಬ್ದವು ಬಂದು 'ರಪಣ' ಶಬ್ದೋತ್ಪತ್ತಿಗೆ ಕಾರಣವಾಗಿರಬಹುದು. ಸಂಸ್ಕೃತದಲ್ಲಾಗಲಿ ಪ್ರಾಕೃತದಲ್ಲಾಗಲಿ ಇತರ ಭಾರತೀಯ ಭಾಷೆಗಳಲ್ಲಾಗಲಿ ನನಗೆ ತಿಳಿದ ಮಟ್ಟಿಗೆ ಈ ಶಬ್ದ ದೊರೆಯುಂತೆ ಕಾಣುವುದಿಲ್ಲ; ಅದು ಕನ್ನಡಕ್ಕೇ ವಿಶಿಷ್ಟವಾದ ಶಬ್ದ. ಬಹುಶಃ ಪಂಪನ ಕಾಲಕ್ಕಿಂತ ಹಿಂದೆಯೇ ಅದು ಕನ್ನಡಿಗರಿಗೆ ಪರಿಚಿತ ವಾಗಿತ್ತು. ಆದರೆ ಅದನ್ನು ಅವರೇ ಸೃಷ್ಟಿಸಿಕೊಂಡರೆಂದು ಹೇಳಲಾಗುವುದಿಲ್ಲ. ಜೈನ ಸಂಸ್ಕೃತದಿಂದಲೋ ಏನೋ ಕನ್ನಡ ಕವಿಗಳು ಅದನ್ನು ಎತ್ತಿಕೊಂಡಿರಬಹುದು.

ಡಿ. ಎಲ್. ನರಸಿಂಹಾಚಾರ್

# ಅಸಂಭಾವ್ಯತೆಯಿಂದ ಕಾವ್ಯಕ್ಕೆ ಬರುವ ರಮ್ಯತೆ.

ಮಹಾಕವಿಗಳ ವಿಚಾರದಲ್ಲಿ ಹೊಗಳುವವರೂ ಉಂಟು, ತೆಗಳುವವರೂ ಉಂಟು. ಅವರ ಕಾವ್ಯಗಳಲ್ಲಿ ಕಂಡುಬರುವ ಅಸಂಭಾವ್ಯ ಸಂದರ್ಭಗಳನ್ನು ಕುರಿತು ಈ ನಿಂದಾಸ್ತುತಿಗಳು ಸಾಮಾನ್ಯವಾಗಿ ಪ್ರವರ್ತಿಸುತ್ತವೆ. "ಕಲ್ಲಿನಿಂದ ಕಡಲಿಗೆ ಸೇತುವೆ ಕಟ್ಟಿ ಕಪಿಗಳಿಂದ ರಕ್ಕಸರನ್ನು ಸದೆಬಡಿದನಂತೆ ರಾಮ, ಕಣೆಗಳಿಂದ ಆಕಾಶಕ್ಕೆ ಬಲೆಗಟ್ಟಿ ಮಳೆಯನ್ನು ತಡೆದನಂತೆ ಅರ್ಜುನ, ಸಾಗರವನ್ನೇ ಹೀರಿದನಂತೆ ಅಗಸ್ತ್ಯ,- ಹೀಗೆ ದೊಡ್ಡಹೆಸರಿನವರು ಏನು ಹೇಳಿದರೂ ನಡೆಯುತ್ತದೆ; ನಾವೋ ಎಷ್ಟು ಶಾಸ್ತ್ರಗಳನ್ನು ಓದಿ ಎಷ್ಟು ತರ್ಕಬದ್ಧವಾಗಿ ಎಂಥ ಕಾವ್ಯವನ್ನು ರಚಿಸಿದರೂ ಕೇಳುವವರೇ ಇಲ್ಲ" ಎಂದು ಕವಿಶಾಸ್ತ್ರಿಯೊಬ್ಬನು ಕೊರಗುತ್ತಾನೆ. "ಕಟ್ಟುಗೆ ಕಟ್ಟಿದಿರ್ಕೆ ಕಡಲಂ ಕಪಿಸಂತತಿ ... ಏನಳವಗ್ಗಳವೋ ಕವೀಂದ್ರರಾ" ಎಂದು ಈ ಅಸಂಭಾವ್ಯ ಸಂದರ್ಭಗಳನ್ನೇ ಮುಗಿಲಿಗೇರಿಸಿ ಮುಕ್ತಕಂಠದಿಂದ ಹೊಗಳುತ್ತಾನೆ ನೇಮಿಚಂದ್ರ. ಒಬ್ಬನಿಗೆ ಯಾವುದು ಕವಿಯ ದೌರ್ಬಲ್ಯವೆಂದು ತೋರುತ್ತದೋ ಮತ್ತೊಬ್ಬ ರಸಿಕನಿಗೆ ಅದೇ ಅಗ್ಗಳದಳವೆಂದು ತೋರುತ್ತದೆ. ಏಕೆಂದರೆ ಕಾವ್ಯದ ವಿಷಯದಲ್ಲಿ ಇವರಿಬ್ಬರ ಅಳೆಗೋಲುಗಳೂ ಬೇರೆ ಬೇರೆ ತರದವು. ಒಬ್ಬ ಜಡಜೀವಪಾರಮ್ಯವಾದಿ; ಮತ್ತೊಬ್ಬ ಜಡಜೀವರಸಪಾರಮ್ಯವಾದಿ. ಕಾವ್ಯದಿಂದ ಭವದ ತೊಡಕುಗಳಲ್ಲಿ ರಮಿಸುವುದನ್ನು ಅಪೇಕ್ಷಿಸುತ್ತಾನೆ ಒಬ್ಬ; ಮತ್ತೊಬ್ಬ ಭವದ ತೊಡಕುಗಳಲ್ಲಿ ಬಲವಾಗಿ ತೊಡರಿಕೊಂಡಿದ್ದರೂ ಸ್ವಸಾಮರ್ಥ್ಯದಿಂದ ಬಿಡುಗಡೆಯನ್ನುಗಳಿಸಿಕೊಂಡು ಬೇರೊಂದು ನಿಲುವಿನ ಪ್ರಶಾಂತಾವರಣದಲ್ಲಿ ಆ ತೊಡಕುಗಳನ್ನೇ ತನ್ನ ಸಂತೋಷಕ್ಕಾಗಿ ಬಳಸಿಕೊಳ್ಳಲು ಹವಣಿಸುತ್ತಾನೆ.

ಕಾವ್ಯರಸಾಸ್ವಾದನೆಯ ವಿಷಯದಲ್ಲಿ ನೇಮಿಚಂದ್ರನ ಗುಂಪಿಗೆ ಸೇರತಕ್ಕವರು ನಾವು. ಈ ಪಕ್ಷಕ್ಕೆ ಸೇರುವುದರಿಂದ ನಮಗೆ ಪ್ರಯೋಜನವಿಲ್ಲದಿಲ್ಲ. ಏಕೆಂದರೆ ಕವಿಯ ಅಗ್ಗಳಿಕೆಯಿರುವುದು ತಾನು ಲೌಕಿಕಾಕರ್ಷಣದಿಂದ ತಪ್ಪಿಸಿಕೊಂಡು ಬೇರೊಂದು ಮೇಲಾದ ನಿಲುಗಡೆಯಲ್ಲಿ ನಿಂತು ಈ ಭವದ ಮರ್ಮಗಳನ್ನು ನಮಗೆ ತೋರುವುದರಲ್ಲಿ. ಇಂಥ ಅಸಂಭಾವ್ಯ ಸಂದರ್ಭಗಳು ಆತ ನಮಗಾಗಿ ಈ ಪೆಡಸುದಾರಿಯಲ್ಲಿ ನಿರ್ಮಿಸುವ ಕ್ಷೇಮಸ್ಥಾನಗಳು. ಈ ಸಂದರ್ಭಗಳು ಕವಿಲೋಕವನ್ನು ಭವಲೋಕದಿಂದ ಕ್ಷಣಮಾತ್ರದಲ್ಲಿ ಪ್ರತ್ಯೇಕಿಸಿ ನಮ್ಮನ್ನು ಬಿಡುಗಡೆಯ ನೆಲೆಗೇರಿಸುತ್ತವೆ. ಆ ನಿಲುವಿನಿಂದ ಕಾರ್ಯಕಾರಣಸಂಬದ್ಧವಾಗಿ ಪರಿಸರಪ್ರಚೋದಿತವಾದ ಇಹವ್ಯಾಪಾರಗಳೆಲ್ಲವೂ ನೋಡುವುದಕ್ಕೆ ಬಹಳ ಚೆನ್ನು. ಬೆನ್ನಟ್ಟಿ ಬರುವ ಹುಲಿಯನ್ನು ವಂಚಿಸಿ ಮರವನ್ನೇರಿ ನಿಂತು ಭಯವಿದೂರನಾಗಿ ಆ ಕ್ಷೇಮಸ್ಥಾನದಿಂದ ಆ ಹುಲಿಯನ್ನು ವೀಕ್ಷಿಸುತ್ತಾ 'ಎಂಥ ಸುಂದರವಾದ ಪ್ರಾಣಿ' ಎನ್ನುವ

ದಾರಿಗನಂತೆ, ಕವಿ ನಮಗಾಗಿ ನಿರ್ಮಿಸುವ ಇಂಥ ಶಿವಸ್ಥಾನಗಳಿಂದ ಜಗತ್ತು ನಮಗೆ ರಮ್ಯವಾಗಿ ತೋರುತ್ತದೆ.

ಅಸಂಭಾವ್ಯ ಸಂದರ್ಭಗಳಿಂದ ವಾಸ್ತವಕ್ಕೆ ದೊರೆಯುವ ಅಪೂರ್ವಸೌಂದರ್ಯಕ್ಕೆ ವಿಪುಲವಾದ ಉದಾಹರಣೆಗಳನ್ನು ಸತ್ಕಾವ್ಯಗಳಿಂದ ಎತ್ತಿ ಎತ್ತಿಕೊಡಬಹುದು. ಬಹು ಕಾಲದ ಹಿಂದೆ ಪ್ರಣೀತವಾಗಿ ಈಗಲೂ ನಮ್ಮಿಂದ ಆದರಿಸಲ್ಪಡುತ್ತಿರುವ ಕಾವ್ಯಗಳೆಲ್ಲವೂ ಈ ಅಲೌಕಿಕಾಲೋಕದಿಂದ ತುಂಬಿವೆ. ಆದುದರಿಂದಲೇ ಆದರಣೀಯವಾಗಿವೆ. ಉದಾಹರಣೆಗಾಗಿ ಕುಮಾರವ್ಯಾಸನು ವರ್ಣಿಸಿರುವ ಕರ್ಣಜನನ ಪ್ರಸಂಗವನ್ನು ನೋಡೋಣ. ಕುಂತಿ ಸೂರ್ಯನನ್ನು ಮಂತ್ರದಿಂದ ನೆನೆದಳು; ಸೂರ್ಯ ಪ್ರತ್ಯಕ್ಷನಾಗಿ ಬಂದು ಆ ಭೀರುವನ್ನು ಮುಟ್ಟಿದ; ಶಿಶು ಜನಿಸಿತು. ಕುಲ ಕೆಡುವುದೆಂಬ ಭಯದಿಂದ ಆಕೆ ಆ ಕೂಸನ್ನು ಗಂಗಾನದಿಯಲ್ಲಿ ಬಿಸುಟಳು. ಆ ನದಿ ತನ್ನ ಅಲೆಗೈಗಳಲ್ಲಿ ಆ ಕಂದನನ್ನು ದಡಕ್ಕೆ ತಳ್ಳಿತು. ಮರಳಿನ ಮೇಲೆ ಆ ಮಗು ಅಂತರಿಕ್ಷದಲ್ಲಿರುವ ಸೂರ್ಯನನ್ನು ನೋಡುತ್ತಾ ಅಳುತ್ತಿದೆ. ಆದರೆ ತನ್ನ ಸ್ವಂತ ಮಗನನ್ನು ಸಂರಕ್ಷಿಸುವುದಕ್ಕೆ ಮಹಾಮಹಿಮನಾಗಿ ಜಗತ್ತನ್ನೇ ಹೊರೆಯುತ್ತಿರುವ ಆ ಸೂರ್ಯನೂ ಅಸಮರ್ಥ. ಮಗು ತಂದೆಯನ್ನು ನೋಡಿ ಅಳುತ್ತಿದೆ; ತಂದೆ ನಿರುಪಾಯನಾಗಿ ಅದನ್ನು ಸುಮ್ಮನೆ ನಿಟ್ಟಿಸುತ್ತಿದ್ದಾನೆ.

ಕೆದರಿಕಾಲಲಿ ಮಳಲರಾಶಿಯ
ನೊದೆದು ಕೈಗಳ ಕೊಡಹಿ ಭೋಯೆಂ
ದೊದರುತಿರ್ದನು ಶಿಶುಗಳರಸನು ರವಿಯನೀಕ್ಷಿಸುತ ॥
ಇದನು ಕಂಡನು ಸೂತನೊಬ್ಬನು—

ಅನಾಥ ಶಿಶು ಕರುಣಾಸ್ಪದವೇ ಸರಿ. ಆದರೆ ಈ ಸಂದರ್ಭದಲ್ಲಿ ಮಗು ಸೂರ್ಯನಿಂದ ಜನಿಸಿದುದು ಎಂಬ ಅಸಂಭಾವ್ಯ ಸಂದರ್ಭದ ಹಿನ್ನೆಲೆಯಲ್ಲಿ ಈ ವರ್ಣನೆಗೆ ಎಷ್ಟೊಂದು ಕಳೆಬಂದಿದೆ ! ಆ ಮಗುವಿನ ಮೇಲೆ ನಮ್ಮ ಕರುಣೆ ಸೂರ್ಯಮಂಡಲದ ವರೆಗೂ ವ್ಯಾಪಿಸಿ ಎಷ್ಟು ಆಳವಾಗುತ್ತದೆ ! ಆ ಮಗುವಿನಂತೆ ಸೂರ್ಯನೂ ನಮ್ಮ ಮರುಕಕ್ಕೆ ಪಾತ್ರ. ಹೀಗೆಯೇ ಸೌಗಂಧಿಕಾ ಪುಷ್ಪಹರಣ ಪ್ರಸಂಗದಲ್ಲಿ ಮಂದಾನಿಲನು ಭೀಮನನ್ನು ಅಪ್ಪಿಕೊಳ್ಳುವ ಸಂದರ್ಭವೂ ಈಗ ನೆನೆದು ಸವಿಯಲು ಅರ್ಹವಾದುದು.

ಒಗುಮಿಗೆಯ ಪರಿಮಳದ ಕಂಪಿನ
ತಗಡತೆಕ್ಕೆಯ ಬೀದಿವರಿಗಳ
ಮುಗುಳಮೊಗ್ಗೆಯ ತಗೆವ ತುಂಬಿಯ ಲಳಿಯ ಲಗ್ಗಿಗಳ
ಹೊಗರಹೊರಳಿಯ ಕಿರುದೆರೆಯ ನೂ-
ಕುಗಳ ತಳಿತ ತುಷಾರ ಭಾರದ
ಸೊಗಸ ಸೇರಿಸಿ ಮಂದಮಾರುತನಪ್ಪಿದನು ಮಗನ ॥

ಇಲ್ಲಿ ಮಂದಮಾರುತ ಮೈಮೇಲೆ ಬೀಸಿದರೆ ಆಗುವ ಸುಖದ ವರ್ಣನೆಯಷ್ಟೇ ಇಲ್ಲ; ತಂದೆ ಮಗನನ್ನು ತಬ್ಬಿಕೊಂಡು ಮುದ್ದಿಸಿದ ಸುಖವಿದೆ. ಈ ಅಪ್ಪುಗೆಯಲ್ಲಿ ಎಷ್ಟು ಸಂಭ್ರಮ, ಎಷ್ಟು ಸಂತೋಷ, ಎಂಥ ತಂಪು! ಇಲ್ಲಿನ ಸೊಗಸಿಗೆ ಮಾತೃಕಾರೂಪ ವಾಗಿರುವುದು ಮಾರುತನ ಮಗ ಭೀಮ ಎಂಬ ಅಲೌಕಿಕ ಸಂದರ್ಭ.

ನಮ್ಮ ಪುರಾಣೇತಿಹಾಸಗಳಲ್ಲಿ ಇಂಥ ಅಸಂಭಾವ್ಯ ಸಂದರ್ಭಗಳೇ ತುಂಬಿವೆ. ದೇವಕುಮಾರರಾಗಿ ಹುಟ್ಟಿಯೂ ಪಾಂಡವರು ಪಟ್ಟ ಕಷ್ಟ ಎಂಥದು, ಧರ್ಮರಾಯನ ಸಹನೆ ಎಂಥದು—ಹೀಗೆ ನಮ್ಮ ಬುದ್ಧಿ ದೇವತೆಯ ನಿಲವಿನಲ್ಲಿ ಓಡಿ ಆ ಸಂದರ್ಭಗಳ ರಸವನ್ನು ಸವಿಯುತ್ತದೆ. ಹಾಗೆಯೇ ರಾಮಾಯಣದಲ್ಲೂ ಕೂಡ. ಅದರಲ್ಲೂ ಸುಂದರ ಕಾಂಡದಲ್ಲಿನ ಆಂಜನೇಯನನ್ನು ನೆನೆದುಕೊಂಡರೆ ಯಾರ ಮನಸ್ಸು ಪ್ರಫುಲ್ಲವಾಗದು? ರಸಋತದ ಪ್ರಭುತ್ವಕ್ಕೆ ಆತ ಅಳವಟ್ಟಂತೆ ಮತ್ತೊಂದು ವ್ಯಕ್ತಿ ಅಳವಟ್ಟಿಲ್ಲ ಆ ಕಾವ್ಯದಲ್ಲಿ. ವಾಲ್ಮೀಕಿಯಷ್ಟು ಕುಶಾಗ್ರಬುದ್ಧಿಗಳೂ ವಿಶಾಲಬುದ್ಧಿಗಳೂ ಕವಿ ಪ್ರಪಂಚದಲ್ಲಿ ಅಪೂರ್ವ. ಆದರೆ ಆ ಬುದ್ಧಿಯೂ ಕೂಡ ಆತನ ಹುಚ್ಚಿಗೆ ತಗ್ಗಿ ನಡೆಯು ತ್ತದೆ. ಈ ಹುಚ್ಚಿನ ಗೆಲುಗಂಬದಂತೆ ಆಂಜನೇಯ ನಮ್ಮ ಮನಸ್ಸಿನಲ್ಲಿ ಮೆರೆಯು ತ್ತಾನೆ. ಕವಿ ಕೇವಲ ತನ್ನ ಬುದ್ಧಿಗೇ ವಶನಾಗಿದ್ದರೆ ಹನುಮಂತ ಹ್ರಸ್ವನಾಗಿಯೇ ಉಳಿಯುತ್ತಿದ್ದ; ಆತನಿಗೆ ಈಗಿನ ಅಮರತ್ವ ದೊರೆಯುತ್ತಿತ್ತೋ ಇಲ್ಲವೋ. ಒಂದು ಸಂದರ್ಭವನ್ನು ವಿವೇಚಿಸೋಣ. ಕಪಿಗಳು ಕಡಲ ತಡಿಗೆ ಬಂದಿವೆ. ಲಂಕೆಗೆ ಹೋಗು ವುದು ಹೇಗೆ ಎಂಬ ಸಮಸ್ಯೆ ತಲೆದೋರಿದೆ. ಕವಿಗೆ ಕವಿಯೇ ರಾಜ; ಆತನ ಬುದ್ಧಿಯೇ ಮಂತ್ರಿ. ಆ ತೊಡಕಿನ ಸಂದರ್ಭದಲ್ಲಿ ಕಥೆಯನ್ನು ಮುಂದುವರಿಸುವುದು ಹೇಗೆ ಎಂಬ ಸಮಸ್ಯೆ ಸಹಜವಾಗಿ ತೋರಿ ಕವಿ ನಿಂತು ಬುದ್ಧಿಯನ್ನು ಕುರಿತು "ಅಯ್ಯ, ಈ ಕಪಿಗಳು ಈ ಮಹಾಸಾಗರವನ್ನು ಹೇಗೆ ದಾಟುತ್ತವಯ್ಯ" ಎನ್ನು ತ್ತಾನೆ. ಬುದ್ಧಿ ಎನ್ನುತ್ತದೆ: "ಇದು, ಹೇಗೆ, ಯಾರಿಂದ ಸಾಧ್ಯ?" ಕವಿ: "ಹನುಮಂತನಿದ್ದಾನಲ್ಲ" ಬುದ್ಧಿ: "ಓ, ಆ ಋಷ್ಯಮೂಕಪರ್ವತದಲ್ಲಿ ಸುಗ್ರೀವ ನೊಡನೆ ತಲೆಗೆ ಮುಸುಕುಹಾಕಿಕೊಂಡು ಓಡಾಡುತ್ತಿದ್ದ ಪರಿಜನ ಹನುಮಂತ ತಾನೆ?" ಕವಿ: "ಅಲ್ಲ ಅಲ್ಲ; ರಾಮದೂತ ಹನುಮಂತ, ಮಾರುತನ ಮಗ" ಬುದ್ಧಿ:. "ಹಾಗೆಯೇ?" "ಅಹುದು ಹಾಗೆಯೇ, ಅಲ್ಲಿ ನೋಡಿದೆಯಾ, ನೀನು ಕಣ್ಣುಮುಚ್ಚಿ ತೆಗೆಯುವುದರಲ್ಲಿ ಮಾರುತಿ ಹೇಗೆ ಬೆಳೆದು ನಿಂತಿದ್ದಾನೆ—ಈತನಿಗೆ ಈ ಕಡಲು ಅಸಾಧ್ಯವೇ?" ನೋಡಿ, ಬುದ್ಧಿಯ ಕಣ್ಣು ಕೋರೈಸಿ ಹೋಗುತ್ತದೆ; ಕವಿಯ ಅಪ್ರತಿಹತವಾದ ರಸಪ್ರಜ್ಞೆಯ ಈ ನಿರ್ಮಿತಿಗೆ ಮಣಿದು ನಿಲ್ಲುತ್ತದೆ; ಇಳೆಯಿಂದ ಮುಗಿಲಿಗೆ ಬೆಳೆದ ಆ ಮಹಾ ಮೂರ್ತಿಯನ್ನು ಸ್ಫುರದುಪಮೆಗಳಿಂದ ಅಲಂಕರಿಸ ತೊಡಗುತ್ತದೆ.

ಊರುವೇಗೋದ್ಧತಾವೃಕ್ಷಾ ಮುಹೂರ್ತಂ ಕಪಿಮನ್ವಯುಃ
ಪ್ರಸ್ಥಿತಂ ದೀರ್ಘಮಧ್ವಾನಂ ಸ್ವಬಂಧುಮಿವ ಬಾಂಧವಾಃ

ಸುಪುಷ್ಪಿತಾಗ್ರೈರ್ಬಹುಭಿಃ ಪಾದಪೈರನ್ವಿತಃ ಕಪಿಃ
ಹನೂಮಾನ್ ಪರ್ವತಾಕಾರೋ ಬಭೂವಾದ್ಭುತದರ್ಶನಃ
ಪ್ರವಿಶನ್ನಭ್ರಜಾಲಾನಿ ನಿಷ್ಪತಂಶ್ಚ ಪುನಃ ಪುನಃ
ಪ್ರಚ್ಛನ್ನಶ್ಚ ಪ್ರಕಾಶಶ್ಚ ಚಂದ್ರಮಾ ಇವ ಲಕ್ಷ್ಯತೇ

ಹೀಗೆ ಆ ಅದ್ಭುತ ವ್ಯಕ್ತಿಯನ್ನು ಬುದ್ಧಿ ಬಣ್ಣಿಸಿ ತೀರದು. ನಮ್ಮ ಮನಸ್ಸಿನಲ್ಲಿ ನಿಲ್ಲುವ ರಸಮೂರ್ತಿಯೂ ಇದೇ. ಸುಗ್ರೀವನೊಡನೆ ಸಾಮಾನ್ಯನಂತೆ ಭೀರುವಾಗಿ ಬಂಡೆಯಿಂದ ಬಂಡೆಗೆ ನೆಗೆದಾಡುತ್ತಿದ್ದ ವಾಸ್ತವಮೂರ್ತಿ ಇನ್ನು ನಮ್ಮ ಪಾಲಿಗೆ ಉಳಿಯುವುದಿಲ್ಲ. ಇಂತು ರಸದ ನೆಲೆಯಲ್ಲಿ ಕವಿಗೆ ಪ್ರಾಪ್ತವಾಗುವ ಅಲೌಕಿಕಾಲೋಕದಿಂದ ದೃಶ್ಯವಾದ ಮತ್ತು ಬುದ್ಧಿಯಿಂದ ಪ್ರಸಾದಿತವಾದ ವಸ್ತುವಿಗೆ ಸೌಂದರ್ಯವೊಂದೇ ಅಲ್ಲವೆ ಸತ್ಯವೆನ್ನಿಸಿಕೊಳ್ಳುವ ಪದವಿಯೂ ಪ್ರಾಪ್ತವಾಗುತ್ತದೆ. ಆ ಬೆಳಕಿನಿಂದಲೇ ವಾಸ್ತವಕ್ಕೂ ಕಳೆ. ಬುದ್ಧಿಯೋ ಜೀವ—ಜಡ ಧರ್ಮಾನುಯಾಯಿ; ಅದರ ಸಂತತಾನುಸರಣೆಯಿಂದ ರಸಸ್ಥಾನವನ್ನು ತಲಪುವುದು ಕಷ್ಟ. ಆ ನೆಲೆಯನ್ನು ತಲಪಬಯಸುವ ಕವಿ ಆಗಾಗ ತನ್ನ ಪ್ರಭುತ್ವವನ್ನು ಚಲಾಯಿಸಬೇಕಾಗುತ್ತದೆ, ಇಷ್ಟದಂತೆ ಪಾತ್ರಗಳನ್ನು ಕುಣಿಸಬೇಕಾಗುತ್ತದೆ, ಅವಿನೀತವೂ ಅಶಿಕ್ಷಿತವೂ ಆದ ಬುದ್ಧಿ ಇದೇನು ಹುಚ್ಚೆನ್ನುವ ಅಸಂಭಾವ್ಯ ಸಂದರ್ಭಗಳನ್ನೂ ನಿರ್ಮಿಸಬೇಕಾಗುತ್ತದೆ. ಪ್ರಭುವಿನ ಬೆಲೆಯನ್ನರಿತ ಬುದ್ಧಿ "ಹಸಾದ" ವೆಂದು ಆ ವಿಶೇಷಾಜ್ಞೆಗಳನ್ನು ಒಪ್ಪಿ ಕಾವ್ಯವನ್ನು ನಡೆಗೊಳಿಸುತ್ತದೆ—ಇಂಗ್ಲಿಷರ ರಾಜ್ಯಭಾರದಲ್ಲಿನ ಐ. ಸಿ. ಎಸ್. ಗುಂಪಿನಂತೆ. ರಸಖುತವನ್ನನುಸರಿಸಿ ಕಡಲನ್ನು ದಾಟುವಾಗ ಬೆಳೆದ ಕಪಿ, ಅಂತಃಪುರದಲ್ಲಿ ಓಡಾಡುವಾಗ ಕಿರಿದಾಗಲೂ ಬಲ್ಲುದು, ಹೀಗೆ ಕಿರಿದಾಗಿ ವಾಸ್ತವಕ್ಕೆ ಮರಳುವ ಪವಾಡವೂ ಮೋದಾವಹವೇ ಆಗುತ್ತದೆ. "ಆಸ್ಫೋಟಯಾಮಾಸ ಚುಚುಂಬ ಪುಚ್ಛಂ" ಕವಿಯ ಹುಚ್ಚಿನಿಂದ ನಿರ್ಮಿತವಾದ ಆ ಮಹಾಕಪಿಯ ಹಿನ್ನೆಲೆಯಲ್ಲಿ ಈ ವಾಸ್ತವವೂ ಎಷ್ಟು ಮುದ್ದಾಗಿದೆ ! ಹಾಗೆಯೇ ಬಕಮಹಾರಾಕ್ಷಸನ ಹಿನ್ನೆಲೆಯಲ್ಲಿ ಹಂಚಿಕಡ್ಡಿಯನ್ನು ಜಳಪಿಸುತ್ತಾ ಆ ರಕ್ಕಸನನ್ನು ಸದೆಬಡಿವೆನೆಂದು ಆಟೋಪಿಸುವ ಏಕಚಕ್ರನಗರದ ಬ್ರಾಹ್ಮಣ ದಂಪತಿಗಳ ಮಗು ಎಷ್ಟು ಮುದ್ದಾಗುತ್ತದೆ !

ಸತ್ಕಾವ್ಯಗಳಲ್ಲಿ ವಾಸ್ತವ ಚಿತ್ರಣಕ್ಕೆ ಬರುವ ಇನ್ನಿಲ್ಲದ ಕಾಂತಿಗೆ ಕಾರಣವನ್ನು ನಾವು ಅಲೌಕಿಕವೂ ಆಗಾಗ ಇಂಥ ಅಸಂಭಾವ್ಯ ಸಂದರ್ಭಗಳಲ್ಲಿ ಸ್ಪಷ್ಟವೂ ಆಗುತ್ತಿರುವ ಕವಿಯ ರಸನಿಷ್ಠೆಯಲ್ಲಿ ಅರಸಬೇಕು. ರಾಮಾಯಣ ಮಹಾಭಾರತ ಪುರಾಣಗಳು ಮುನಿಪ್ರಣೀತಗಳು ; ಅವನ್ನು ಬಿಟ್ಟರೂ ಮಹಾಕವಿ ಕಾಳಿದಾಸನ ಕಾವ್ಯ ನಾಟಕಗಳನ್ನೇ ತೆಗೆದುಕೊಳ್ಳೋಣ. ರಸಘಟ್ಟಿಯಾದ ಶಾಕುಂತಲದ ಅಸ್ತಿ—ವಾರ ದುಷ್ಯಂತನ ಶಾಪದ ಮೇಲೆ. ಶಾಪಕ್ಕೆಲ್ಲಾದರೂ ಇಷ್ಟು ಸತ್ವವುಂಟೇ ಎಂದರೆ ನಾಟಕವೇ ಮಾಯವಾಗಿ ಹೋಗುತ್ತದೆ! ಆಮೇಲೆ ಶಕುಂತಲೆಯನ್ನು

ಮೇನಕೆ ಮುಗಿಲಿನಿಂದಿಳಿದು, ಎತ್ತಿಕೊಂಡು ಹೋಗಿ ಮಾರೀಚಾಶ್ರಮದಲ್ಲಿ ಇಳಿಸದೇ ಹೋಗಿದ್ದರೆ ಕತೆಯ ಗತಿಯೇನು? ಆಶ್ರಿತನಾದ ರಾಜಪುರೋಹಿತನ ಮನೆಯಲ್ಲಿ ಕಣ್ಣಿಸರಾದ ದುಷ್ಯಂತನ ಅರಮನೆಯ ಸನಿಯದಲ್ಲೇ, ಆ ಕಲುಷಿತವಾತಾವರಣದಲ್ಲಿ, ಕೇವಲ ಅನಾಥೆಯಂತೆ ಕಣ್ವನ ಮಗಳು ಸದಾ ಕಣ್ಣೀರಿಡುತ್ತಾ ಬಾಳತಕ್ಕದ್ದೇ— (ಕವಿ ತನ್ನ ಬುದ್ಧಿಯನ್ನೇ ಅನುಸರಿಸಿದ್ದರೆ ಅದು ಆಕೆಯನ್ನು ಅಲ್ಲಿ ಕೆಡಹುತ್ತಿತ್ತು)— ಅಥವಾ (ಕವಿ ತನ್ನ ದಿವ್ಯದೃಷ್ಟಿಯನ್ನನ್ನುಸರಿಸಿ) ಸ್ವರ್ಗದ ಹತ್ತಿರ ದೇವಕನ್ಯೆಯಾದ ತಾಯಿಯ ಅಕ್ಕರೆಯಲ್ಲಿ, ಮಹರ್ಷಿಯ ಪವಿತ್ರ ಸಾನ್ನಿಧ್ಯದಲ್ಲಿ ನಿಶ್ಶೃಣನಾದ ಪತಿಯಿಂದಲೂ, ಕಠಿಣರೋ ಅನುಕಂಪಿಸುವವರೋ ಆದ ಬಂಧುಮಿತ್ರರಿಂದಲೂ ಸುದೂರಳೂ ಸ್ವತಂತ್ರಳೂ ಆಗಿ ಬಾಳತಕ್ಕದ್ದೇ—ಯಾವುದು ಮೇಲು? ಇಂಥ ಸಂದರ್ಭಗಳಲ್ಲಿ ತರ್ಕಕ್ಕೂ ಕಾರ್ಯಕಾರಣ ನಿಯತಿಭವನ್ನತ್ತಿಗೂ ರಸನಿಷ್ಠನಾದ ಕವಿ ಮನಗೊಡನು. ಅವನ್ನು ತಡೆದು ತನ್ನ ಪ್ರಭುತ್ವವನ್ನು ಚಲಾಯಿಸುತ್ತಾನೆ. ಆಗ ರಸಖುತ ಪ್ರವರ್ತನೆಗೆ ಸಂಭವಿಸುವ ಅಡಚಣೆಗಳು ಹೋಗುವಂತೆ, ಹೀಗೆ ಏರ್ಪಡುವುದು ಅನಿವಾರ್ಯವೆಂಬಂತೆ, ಅಸಂಭಾವ್ಯತೆಗಳು ಏರ್ಪಡುತ್ತವೆ; ಕಾವ್ಯ ಸುಗಮವಾಗಿ ನೆಲೆಯನ್ನು ಮುಟ್ಟಿ ಆ ನೆಲೆಯಲ್ಲಿ ತನ್ನ ದಿವ್ಯಕಾಂತಿಯಿಂದ ಭೂಮಿಯನ್ನೂ ಸ್ವರ್ಗವನ್ನೂ ಬೆಳಗುತ್ತಾ, ಒಂದು ಕಡೆ ಸೌಂದರ್ಯವನ್ನು ನಿರ್ಮಿಸುತ್ತಾ ಇನ್ನೊಂದು ಕಡೆ ಆನಂದವನ್ನು ದ್ಯೋತನಮಾಡುತ್ತಾ ಭುವನಮೋಹಕವಾಗುತ್ತದೆ.

> ಪಳಿಯುತೆ ನಿಜಭಾಗ್ಯವನಾ
> ಯೆಳೆಯಳ್ ತೋಳೆತ್ತಿ ಗೋಳಿಡಲ್ಕುಱ್ಱುಗಿಸಲ್
> ಬೆಳಗೊಂದು ಪೆಣ್ಣರೂಪಿಂ
> ದೆಳೆದೊಯ್ದತ್ತವಳನಪ್ಸರಸ್ಸರದೆಡೆಯೊಳ್

ಇದನ್ನು ಓದಿದ ಕ್ಷಣ ನಮ್ಮ ಮನಸ್ಸು ನೆಮ್ಮದಿ ಪಡೆಯುತ್ತದಲ್ಲದೆ, ಈ ಅಸಂಭಾವ್ಯ ಸಂದರ್ಭದಿಂದ ಸಪ್ತಮಾಂಕಕ್ಕೆದೊರೆಯುವ ಸೊಗಸನ್ನು ನೆನೆದು ಕವಿಯ ಹುಚ್ಚಿಗೆ ಕೃತಜ್ಞವೂ ಆಗುತ್ತದೆ, ಭಲೆ ಎಂದು ಮೆಚ್ಚುತ್ತದೆ—ತಾಳಕ್ಕೆ ನಡೆಯುತ್ತಿರುವ ಪಲ್ಲವಿಯ ನಡುವೆ ಇದ್ದಕ್ಕಿದ್ದ ಹಾಗೆ ಸುಳಿದು ಮನವನ್ನು ಕೋರೈಸುವ ರಾಗಾಲಾಪನೆಯ ಸುರುಳಿಯಂತಲ್ಲವೆ ಇಂಥ ಸಂದರ್ಭಗಳು?

ಹೀಗೆಯೇ ವಿಪುಲವಾಗಿ ಉದಾಹರಣೆಗಳನ್ನು ಕೊಡುತ್ತಾ ಈ ವಾದವನ್ನು ಸಮರ್ಥಿಸಬಹುದು. ಮೇಘದೂತದ ತುಂಬ ಚೆಚ್ಚರದ ಕುಟ್ಟಿಮದಲ್ಲಿ ಲಾಸ್ಯವಾಡುತ್ತಿರುವ ಕವಿಯ ಹುಚ್ಚಿನ ಅಲೌಕಿಕ ಕಾಂತಿ ತುಂಬಿದೆ; ಆದುದರಿಂದಲೇ ಆ ಬೆಳಕಿನಲ್ಲಿ ಕಾಣುವ ಜಗತ್ತು ಅಷ್ಟು ಸುಂದರ, ಅಷ್ಟು ಸತ್ಯ. ನಂಬಿಯಣ್ಣನ ರಗಳೆಯಲ್ಲಿನ ಸರಸ ಸಂದರ್ಭಗಳ ಮೂಲದಲ್ಲಿ ಈ ಶಿವದೃಷ್ಟಿಯಿದೆ. ಆ ಬಿಡುಗಡೆಯ ನೆಲೆಯಿಂದ ಅಲ್ಲಿನ ಕತೆಯಲ್ಲಿ ಕಾಣಬರುವ ಭವದ ತೊಡಕುಗಳು ಚೆಂದ. ಶಿವನು ವೃದ್ಧಬ್ರಾಹ್ಮಣನಾಗಿ ನಡೆಸಿದ ಅಚಾತುರ್ಯಗಳೆಲ್ಲವೂ ಎಂಥ ಕಳೆಪಡೆದಿವೆ!

ಈ ರಸದೃಷ್ಟಿಯಿಂದ, ಭವದ ತೊಡಕುಗಳಿಂದ ಸಂಪೂರ್ಣವಾಗಿ ಮುಕ್ತಿಯನ್ನು ಪಡೆದ ಹೊರತು ರಸದ ನೆಲೆ ದೊರೆಯದು ಕವಿಜನಕ್ಕೆ ಈ ನೆಲೆ ದೊರೆಯಬೇಕಾದರೆ ಒಂದು ತರದ ಹುಚ್ಚಿನಿಂದ ಮಾತ್ರ. ಆ ನೆಲೆಯನ್ನು ಮುಟ್ಟಿನಿಂತ ಕವಿಯ ಸೃಷ್ಟಿಗೆ ನಿಯತಿಕೃತನಿಯಮಗಳು ಪೂರ್ಣವಾಗಿ ಸಲ್ಲವು.

"ನತ್ವಹಂ ತೇಷು—ತೇ ಮಯಿ" "ಅವುಗಳಲ್ಲಿ ನಾನಿಲ್ಲ, ಅವು ನನ್ನಲ್ಲಿವೆ" ಎನ್ನುತ್ತದೆ ರಸಸ್ಥಿತಿ ಭವದ ಅವಸ್ಥೆಗಳಿಗೆ. ರಸದ ನೆಲೆಯನ್ನು ಮುಟ್ಟಬಲ್ಲ ಸತ್ಕವಿಯ ಕಾವ್ಯದಲ್ಲಿ ಕಂಡುಬರುವ ಅಸಂಭಾವ್ಯ ಸಂದರ್ಭಗಳು "ನತ್ವಹಂ ತೇಷು" ಎಂಬುದನ್ನು ನಮಗೆ ಜ್ಞಾಪಿಸಿದರೆ, ಅಲ್ಲೇ ಕಂಡುಬರುವ ಮುದ್ದಾದ ವಾಸ್ತವ ಚಿತ್ರಗಳೋ "ತೇ ಮಯಿ" ಎಂಬುದನ್ನು ನೆನಪಿಗೆ ತರುತ್ತವೆ. ರಸದ ನೆಲೆಯೋ ಬೇರೆ. ಆದರಿಂದ ವಾಸ್ತವಕ್ಕೆ ನೆಲೆ ಮತ್ತು ಬೆಲೆ.

ಪು. ತಿ. ನರಸಿಂಹಾಚಾರ್

# ಕಲ್ಪನಾ

ಷೇಕ್ಸ್‌ಪಿಯರ್‌ನ ಈ ಪಂಕ್ತಿಗಳು ಕಲ್ಪನಾಶಕ್ತಿಯನ್ನು ಅದ್ಭುತವಾಗಿ ವರ್ಣಿಸುತ್ತವೆ :

> " The poet's eye in a fine frenzy rolling
> Doth glance from heaven to earth, from earth to heaven ;
> And as imagination bodies forth
> The forms of things unknown, the poet's pen
> Turns them to shapes and gives to airy nothing
> A local habitation and a name."

ಕವಿ ದ್ರಷ್ಟಾರ, ವಕ್ತಾರ, ಸ್ರಷ್ಟಾರ. ಇದೇ ಅರ್ಥ ಬರುವಂತೆ ಪ್ಲೇಟೋ "ಅಯಾನ್" ಎಂಬ ಸಂಭಾಷಣೆಯಲ್ಲಿ ಕವಿಸ್ಫೂರ್ತಿಯನ್ನು ಪ್ರಶಂಸಿಸುತ್ತಾನೆ. ಗ್ರೀಕ್ ಜನರ ದೇವತೆಗಳ ಕಲ್ಪನೆ ಹೇಗೆ ಉಂಟಾಯಿತೆಂದು ತಯಾನದ ಅಪಾಲೋನಿಯಸ್ ಈ ವಿವರಣೆಯನ್ನು ಕೊಡುತ್ತಾನೆ: ' ಅನುಕರಣಕ್ಕಿಂತಲೂ ಕಲ್ಪನೆ ಹೆಚ್ಚು ಜಾಣ್ಮೆಯ ಕಲೆಗಾರ. ಕಂಡದುದನ್ನು ಮಾತ್ರ ಅನುಕರಣ ರೂಪಿಸಬಲ್ಲುದು; ಕಾಣದುದನ್ನೂ ಸಹ ಕಲ್ಪನೆ ಕಂಡದುದರ ಸಾದೃಶ್ಯದಿಂದ ರೂಪಿಸಬಲ್ಲುದು.' ರೋಮನ್‌ರು ತಮ್ಮ ಕವಿಗಳನ್ನು "Vates" ದಿವ್ಯಜ್ಞಾನಿಗಳು, ಎಂದು ಕರೆಯುತ್ತಿದ್ದರು. ಕಣಸುಗಾರ ಬ್ಲೇಕ್ ಹೀಗೆ ಬರೆದಿದ್ದಾನೆ:

> " We are led to believe a lie
> When we see with, not through, the eye."

ಪ್ರಾಚೀನ ಕವಿಗಳು ದೇವತಾಪ್ರಾರ್ಥನೆ ಮಾಡುವಂತೆ ವರ್ಡ್ಸ್‌ವರ್ತ್ ಭವಿಷ್ಯವೇದಿಯಾದ ಆತ್ಮಶಕ್ತಿಯನ್ನು ಆಹ್ವಾನಿಸುತ್ತಾನೆ:

> " Descend, prophetic spirit ! that inspir'st
> The human soul of universal earth
> Dreaming on things to come."

ಕಲ್ಪನೆಯ ಪ್ರಭಾವದಿಂದ ಸತ್ಯದರ್ಶನ ಲಭಿಸುವುದೆಂದು ಕೀಟ್ಸ್ ಮನಗಂಡಿದ್ದನು: "What the Imagination seizes as Beauty must be Truth." ಮನುಷ್ಯ ಪ್ರಪಂಚದಲ್ಲಿ, ಮನೋಲೋಕದಲ್ಲಿ, ದೇವತಾಶಕ್ತಿಯ ಅವತರಣಗಳ ಪುನಸ್ಸೃಷ್ಟಿ ಕಾವ್ಯದಲ್ಲಿ ಸಾಧಿಸಲ್ಪಡುತ್ತದೆಂದು ಷೆಲ್ಲಿ ಹೇಳುತ್ತಾನೆ. " ನಾನೃಷಿಃ ಕುರುತೇ ಕಾವ್ಯಂ " ಎಂಬ ಪ್ರಾಚೀನ ವಾಕ್ಯಕ್ಕೆ ಪೂರ್ವದೇಶಗಳಲ್ಲಿ ಹೇಗೋ ಪಶ್ಚಿಮ ದೇಶಗಳಲ್ಲಿಯೂ ಹಾಗೇ ಮಾನ್ಯತೆಯುಂಟು.

ಆರಂಭದಲ್ಲಿ ಕೊಟ್ಟಿರುವ ಷೇಕ್ಸ್‌ಪಿಯರ್‌ನ ಪಂಕ್ತಿಗಳು ಗಂಭೀರವಾಗಿ ಹೇಳಿರುವುವಲ್ಲ. ಕಲ್ಪನೆ ಸೃಷ್ಟಿಸುವ ಚಿತ್ರಗಳು ಕೇವಲ ಮಾಯೆಯೆಂದು ಪ್ರತಿ

ಪಾದಿಸುವ ಸಂದರ್ಭದಲ್ಲಿ ಅವು ಬರುತ್ತವೆ. ಪ್ರಪಂಚದಿಂದ ಮನಸ್ಸಿಗೆ ಒದಗದ ತೃಪ್ತಿಯ ಛಾಯೆಯನ್ನು ಕನಸಿನಲ್ಲಿ ಹೇಗೋ ಹಾಗೆ ಮನಸ್ಸಿನ ಮೇಲೆ ಸುಳಿಸುವ ಕಟ್ಟುಕತೆ (Feigned history) ಕಾವ್ಯವೆಂದು ಬೇಕನ್ ವಿವರಿಸುತ್ತಾನೆ. ಗಾಳಿ ಗೋಪುರಗಳನ್ನು ನಿರ್ಮಿಸುವ ಊಹಾಶಕ್ತಿಯನ್ನು ಹತ್ತೊಂಭತ್ತನೆ ಶತಮಾನದ ಇಂಗ್ಲಿಷ್ ವಿಮರ್ಶಕರು "Fancy" ಎಂದು ಕರೆದು "Imagination" ಅಥವಾ ಕಲ್ಪನೆಯಿಂದ ಅದನ್ನು ಬೇರ್ಪಡಿಸುತ್ತಾರೆ. ಸತ್ಯದೂರವೆಂದೆನಿಸಿದ ಸ್ತಬ್ಧ ಸೌಂದರ್ಯ ದೃಷ್ಟಿಯನ್ನು ವರ್ಡ್ಸ್‌ವರ್ತ್ ತ್ಯಜಿಸುತ್ತಾ ಅದನ್ನು ಹೀಗೆ ವರ್ಣಿಸುತ್ತಾನೆ :

> " The light that never was, on sea or land,
> The consecration and the poet's dream."

ಹೇಗೆ ಊಹೆ ಒಮ್ಮಗ್ಗುಲಿನಿಂದ ಜಾರುತ್ತದೋ ಹಾಗೆ ಅನುಕರಣ ಇನ್ನೊಂದು ಮಗ್ಗುಲಿನಿಂದ ಜಾರುತ್ತದೆ. ಅನುಕರಣ ಮನುಜ ಸಹಜ ವ್ಯಾಪಾರವೆಂದೂ ಆನಂದದಾಯಿಯೆಂದೂ ಕಾವ್ಯದ ಮೂಲವೆಂದೂ ಅರಿಸ್ಟಾಟಲ್ ಬರಿಯುತ್ತಾನೆ. ಆದರೆ ಅನುಕರಣ ಎಂಬ ಶಬ್ದಕ್ಕಿಂತಲೂ ಅವನು ಪ್ರಯೋಗಿಸುವ "Mimesis" ಎಂಬ ಶಬ್ದ ಹೆಚ್ಚು ಅರ್ಥಗರ್ಭಿತವಾಗಿದೆ. " ಚಿತ್ರಗಾರನಂತೆ ಕವಿಯೂ ಅನುಕರಣ ಮಾಡುತ್ತಾನೆ. ಅವನು ವಸ್ತುಗಳನ್ನು ಚಿತ್ರಿಸುವಾಗ ಮೂರುಬಗೆಗಳಲ್ಲಿ ಒಂದರಲ್ಲಿ ಚಿತ್ರಿಸುವುದು ಅವಶ್ಯಕ : (೧) ಅವುಗಳು ಇದ್ದಂತೆ ಅಥವಾ ಇರುವಂತೆ, (೨) ಅವುಗಳು ಹೀಗಿವೆ ಹೀಗಿದ್ದವು ಎಂದು ಹೇಳಲ್ಪಟ್ಟಿರುವಂತೆ, (೩) ಅವುಗಳು ಆದರ್ಶಸ್ಥಿತಿಯಲ್ಲಿ ಇರಬೇಕಾದಂತೆ," ಎಂದು ಅವನು ತನ್ನ ಅಭಿಪ್ರಾಯವನ್ನು ಸ್ಪಷ್ಟಪಡಿಸಿದ್ದಾನೆ. ನಡೆದ ಸಂಗತಿಗೆ ಚರಿತ್ರೆಯಲ್ಲಿ ಪ್ರಾಧಾನ್ಯ, ನಡೆಯಬಹುದಾದುದಕ್ಕೆ ಕಾವ್ಯದಲ್ಲಿ ಪ್ರಾಧಾನ್ಯ. ಕಾಲದೇಶವ್ಯಕ್ತಿವೈಚಿತ್ರ್ಯಗಳನ್ನು ಮೀರಿದ ಸರ್ವಕಾಲಸಂಭಾವ್ಯತೆಯುಳ್ಳ ಸತ್ಯವನ್ನು ಪ್ರತಿಕೃತಿಸುವ ಕಾವ್ಯ ಚರಿತ್ರೆಗಿಂತ ಹೆಚ್ಚು ತಾತ್ವಿಕ. ಅರಿಸ್ಟಾಟಲ್‌ನ ಈ ಮಾತನ್ನು " ಹೌದು, ಇದು ನಿಜ " ಎಂದು ವರ್ಡ್ಸ್‌ವರ್ತ್, ಹೇಳಿ, ಅನುಕರಣವೆಂದರೆ ಏನೆಂದು ವಿಶದಪಡಿಸುತ್ತಾನೆ: " an ability of conjuring up in himself passions which are indeed far from being the same as those provided by real events, yet . . . do more nearly resemble the passions produced by real events than anything which, from the motions of their own minds merely, other men are accustomed to feel in themselves." ಕವಿಯ ಕಣ್ಣು ಕಿವಿ ಅರ್ಧ ಕಾಣುತ್ತವೆ ಕೇಳುತ್ತವೆ, ಅರ್ಧ ಕಲ್ಪಿಸುತ್ತವೆ—" both what they half create and what perceive." ವರ್ಡ್ಸ್‌ವರ್ತ್‌ನ ಕಾವ್ಯದ ವಸ್ತು ಇದು :

> " How exquisitely the individual Mind
> (And the progressive powers perhaps no less
> Of the whole species) to the external World

Is fitted :—and how exquisitely, too—
Theme this but little heard of among men—
The external World is fitted to the Mind ;
And the creation (by no lower name
can it be called) which they with blended mlght
Accomplish :—this is our high argument."

ಒಮ್ಮೆ ವರ್ಡ್ಸ್‌ವರ್ತ್ ಲಂಡನ್ ನಗರದ ಬೀದಿಯಲ್ಲಿ ಕುರುಡ ತಿರುಪೆಯವನನ್ನು ನೋಡಿದನು. ಕೆಲವು ತಿಂಗಳುಗಳ ನಂತರ ಅವನು ಬರೆದ " Resolution and Independence " ಎಂಬ ಕವನದಲ್ಲಿ ಬೀದಿಯ ಭಿಕ್ಷುಕನಿಗೆ ಬದಲು ಆತ್ಮ ಗೌರವದ ಅದ್ಭುತ ಪ್ರತೀಕದಂತಿರುವ ಜಿಗಣಿ—ಆಯುವ ಮುದುಕ ಚಿತ್ರಿತನಾಗಿದ್ದಾನೆ.

ಅನುಕರಣಮಾತ್ರವಾದಿಗಳ ಸಾಲು ಶತಮಾನಗಳುದ್ದಕ್ಕೂ ಚಾಚಿದೆ. ಕ್ರಿಸ್ತಪೂರ್ವದಲ್ಲಿ ಡೆಮಾಕ್ರಿಟಸ್ ಎಪಿಕ್ಯೂರಸ್ ಎಂಬ ತಾತ್ವಿಕನೂ ಲುಕ್ರೀಷಿಯಸ್ ಎಂಬ ಮಹಾಕವಿಯೂ ಕಣ್ಣಿನ ಕಾಣ್ಕೆಯೇ ಸತ್ಯದ ಸಾಕ್ಷಿಯೆಂದು ನಂಬಿದ್ದರು. ಕ್ರಿಸ್ತಶಕ ಹದಿನೆಂಟನೆ ಶತಮಾನದಲ್ಲಿ, ಮನಶ್ಶಾಸ್ತ್ರದ ಮೊದಲ ಹೆಜ್ಜೆಗಳ ಕಾಲದಲ್ಲಿ, ಹಾಬ್ಸ್, ಲಾಕ್, ಹಾರ್ಟ್ಲೇ ಮುಂತಾದ ಆಂಗ್ಲ ತಾತ್ವಿಕರು ಇದೇ ವಿಚಾರಪಥ ವನ್ನು ಅನ್ವೇಷಿಸಿದರು. ಜನನಕಾಲದಲ್ಲಿ ನಮ್ಮ ಮನಸ್ಸು ಬಿಳಿಯ ಹಾಳೆಯಂತೆ ಬರಿದಾಗಿರುತ್ತದೆಂದೂ ಬಳಿಕ ಉದಿಸುವ ಎಲ್ಲ ಭಾವನೆ ಚಿಂತನೆಗಳೂ ಮೂಲತಃ ಇಂದ್ರಿಯಾನುಭವಜನ್ಯಗಳೆಂದೂ ಇವರು ಹೇಳುತ್ತಾರೆ. ಅನುಭವಕ್ಕೆ ಹೊರತಾದ ನಂಬಿಕೆಗಳೂ ಬರಿಯ ಭ್ರಮೆಯಾದುದರಿಂದ ಪ್ರೇತಗಳಲ್ಲಿಯೂ ಯಕ್ಷಯಕ್ಷಿಣಿಯ ರಲ್ಲಿಯೂ ಜನರ ನಂಬಿಕೆ ಅವಿವೇಕದ ಚಿಹ್ನೆಯೆಂದು ಹಾಬ್ಸ್ ಹೇಳುತ್ತಾನೆ. ನೆನಪಿನ ಮೊಲೆಗೂಸು ಕಾವ್ಯ ಎಂಬ ಗ್ರೀಕರ ವಚನ ಇವರ ತತ್ವದ ಪ್ರಕಾರ ಅಕ್ಷರಶಃ ನಿಜ ವಾಗಿ ಪರಿಣಮಿಸುತ್ತದೆ. ಕಲ್ಪನೆಯನ್ನು " Decaying sense " ಸ್ಮೃತಿಯಲ್ಲಿ ಪಟುತ್ವವನ್ನು ಕಳೆದುಕೊಂಡ ಇಂದ್ರಿಯಸಂವೇದನೆಯೆಂದು ಹಾಬ್ಸ್ ಕಡೆಗಣಿಸು ತ್ತಾನೆ. ಇಪ್ಪತ್ತನೆ ಶತಮಾನದಲ್ಲಿಯೂ ಟಿ. ಇ. ಹ್ಯೂಂ ಎಂಬ ವಿಮರ್ಶಕ ಹೀಗೇ ವಾದಿಸಿ ಕಾವ್ಯದ ಗುರಿ ಸ್ಪಷ್ಟ ಚಿತ್ರನಿರ್ಮಿತಿ ಎಂದು ಒತ್ತಿ ಹೇಳಿ " Imagism " ಎಂಬ ಕಾವ್ಯಪಂಥದ ಮೊದಲಿಗನಾದನು

ಹಾರ್ಟ್ಲೇಯ ಸಿದ್ಧಾಂತವನ್ನು ಕೋಲ್‌ರಿಡ್ಜ್ ಮೊದಮೊದಲು ಮೆಚ್ಚಿ ಕೊಂಡರೂ ಅವನು ಅದನ್ನು ಕಡೆಗೆ ತ್ಯಜಿಸಬೇಕಾಯಿತು. ಕಬ್ಬಿಣದ ಕಣಗಳನ್ನು ಒಂದು ಕ್ರಮದಲ್ಲಿ ವ್ಯವಸ್ಥಾಪಿಸುವ ಅಯಸ್ಕಾಂತದಂತೆ ಹಲವು ನೆನಪುಗಳನ್ನು ಸಾದೃಶ್ಯಮೋಹನ್ಯಾಯದಿಂದ ಒಗ್ಗೂಡಿಸುವುದು ಮಾತ್ರ ಕಲ್ಪನೆಯ ಕೆಲಸವಲ್ಲ. ಇಂಥ ಕೆಲಸದಲ್ಲಿ ಕವಿಯ ಮನಸ್ಸು ಅಕ್ರಿಯಾವಂತವಾದುದರಿಂದ ಇದು ಯಾಂತ್ರಿಕ, ನಿರ್ಜೀವ, ಮಿತಾರ್ಥಕ. ಇದನ್ನು " Fancy " ಎಂದು ಕರೆದು ಇದಕ್ಕೂ ಕಲ್ಪನೆಗೂ ಇರುವ ವ್ಯತ್ಯಾಸವನ್ನು ಕೋಲ್‌ರಿಡ್ಜ್ ಹೀಗೆ ವಿವರಿಸುತ್ತಾನೆ " Imagination

I consider either as primary or secondary. The primary Imagination I hold to be the living power and prime agent of all human perception, and as repetition in the finite mind of the eternal act of creation in the infinite I A M. The secondary Imagination I consider as an echo of the former, co-existing with the conscious will, yet still as identical with the primary in the kind of its agency and differing only in degree, and in the mode of its operation. It dissolves, diffuses, dissipates in order to recreate, or where this process is rendered impossible, yet still at all events it struggles to idealize and unify. It is essentially vital, even as all objects (as objects) are essentially fixed and dead. Fancy, on the contrary, has no other counters to play with but fixities and definites. The fancy is indeed no other than a mode of memory emancipated from the order of time and space "

ಪ್ರಪಂಚವನ್ನು ನಾವು ನೋಡುವಾಗಲೂ ಸಂಪೂರ್ಣವಾಗಿ ಅದರ ವಸ್ತುಸ್ಥಿತಿಯನ್ನು ನೋಡಲಾರದೆ ಅಥವಾ ಅದರ ವಸ್ತುಸ್ಥಿತಿಯನ್ನು ಮಾತ್ರವೇ ನೋಡದೆ ಅದನ್ನು ಸಾಂಕೇತಿಕವಾಗಿಯೇ ಗ್ರಹಿಸುತ್ತೇವೆ. ಈ ಗ್ರಹಣ ಶಕ್ತಿಯನ್ನು ಕೋಲ್‌ರಿಡ್ಜ್ "Primary Imagination" ಎಂದು ಕರೆಯುತ್ತಾನೆ. ಗುಲಾಬಿಯ ಕೆಂಪು ನಿಜವಾಗಿ ಮತ್ತು ಪೂರ್ತಿಯಾಗಿ ಗುಲಾಬಿಯದಲ್ಲ. ಇದನ್ನು ಭೌತಿಕಶಾಸ್ತ್ರದ ಎಳೆಯ ವಿದ್ಯಾರ್ಥಿಗಳೂ ಬಲ್ಲರು. ಅಂಗನೆಯೊಬ್ಬಳ ರೂಪಲಾವಣ್ಯ ಅವಳೊಬ್ಬಳದೇ ಸ್ವತ್ತಲ್ಲ; ರಸಿಕನೇತ್ರಗಳಿಗೂ ಅವಳು ಋಣಿ. ಒಂದೊಂದು ತಾತ್ವಿಕಪಂಥವೂ ಸತ್ಯದ ವಿಷಯವಾಗಿ ಎಷ್ಟು ದ್ಯೋತಕವೋ ಅದರ ಪ್ರತಿಪಾದಕನ ವ್ಯಕ್ತಿತ್ವದ ಮತ್ತು ಆ ಕಾಲಧರ್ಮದ ವಿಷಯವಾಗಿಯೂ ಅಷ್ಟೇ ದ್ಯೋತಕ. ನಮ್ಮ ನೋಟ, ಭಾವ, ವಿಚಾರ, ಕಲ್ಪನಾತ್ಮಕ. ಈ ಬಗೆಯ ಮನೋವೃತ್ತಿ ಪ್ರಬಲವೂ ಪ್ರಖರವೂ ಆದಾಗ ಕಲ್ಪನೆ ("Secondary Imagination") ಆವಿರ್ಭವಿಸುತ್ತದೆ. ಆದಷ್ಟು ಆದರ್ಶವಾಗುವಂತೆ ಆದಷ್ಟು ಏಕೀಭೂತವಾಗುವಂತೆ ಎಲ್ಲ ನೋಟ ಭಾವ ವಿಚಾರಗಳನ್ನೂ ಕಲ್ಪನೆ ಕೂಡಿಸಿ ಕರಗಿಸಿ ಮಾರ್ಪಡಿಸಿ ಪುನಸ್ಸೃಷ್ಟಿಸುತ್ತದೆ. ಸ್ವಪ್ರತಿಭೆಯಿಂದಲೂ ವರ್ಡ್ಸ್‌ವರ್ತ್‌ನ ಕಾವ್ಯದ ಅಧ್ಯಯನದಿಂದಲೂ ಜರ್ಮನ್ ತಾತ್ವಿಕರ ಸಹಾಯದಿಂದಲೂ ಕೋಲ್‌ರಿಡ್ಜ್ ತನ್ನ ಸಿದ್ಧಾಂತವನ್ನು ರೂಪಿಸುತ್ತಾನೆ. ವರ್ಡ್ಸ್‌ವರ್ತ್‌ನ "Resolution and Independence" ಎಂಬ ಕವನವನ್ನೇ ಮತ್ತೆ ಉದಾಹರಿಸಬಹುದು. ಬೀದಿಯ ಜನಜಂಗುಳಿಯಲ್ಲಿ ಭಿಕ್ಷೆಬೇಡುವ ಕುರುಡ ಮುದುಕ ಕವಿಸ್ಮೃತಿಯಲ್ಲಿ ರೂಪಾಂತರಿತನಾಗುತ್ತಾನೆ. ಬೆಂಗಾಡಿನಲ್ಲಿ ಅಲೆಯುತ್ತಾ ನೀರು ನಿಂತೆಡೆಗಳಲ್ಲಿ ಜಿಗಣೆಗಳನ್ನು ಆಯುವ ದುರ್ಬಲವೃದ್ಧ ಧೀರ ಸ್ವಾತಂತ್ರ್ಯ

ಪ್ರೇಮಿ ಕವಿಗೆ ತತ್ವಬೋಧೆಮಾಡಲು ಅವತರಿಸಿದ ದೇವದೂತನಂತೆ ತೋರುತ್ತಾನೆ:

" The old man still stood talking by my side ;
But now his voice to me was like a stream
Scarce heard ; nor word from word could I divide ;
And the whole Body of the Man did seem
Like one whom I had met with in a dream ;
Or like a man from some far region sent,
To give me human strength, by apt admonishment."

ಕೋಲ್‌ರಿಡ್ಜ್ ಷೇಕ್ಸ್‌ಪಿಯರ್‌ನಿಂದ ಒಂದು ಉತ್ತಮ ಉದಾಹರಣೆಯನ್ನು ಕೊಡುತ್ತಾನೆ. ಬೆಂಗಾಡಿನಲ್ಲಿ ಗುಡುಗು ಮಿಂಚು ಬಿರುಗಾಳಿ ಮಳೆಗಳ ಉಪಟಳಕ್ಕೆ ಸಿಲುಕಿದ ಲಿಯರ್ ದೊರೆ ಅವುಗಳು ದೀನಸೇವಕರಂತೆ ಅವನ ನಿಷ್ಕೃಣ ಪುತ್ರಿಯರ ಆಜ್ಞೆಯನ್ನು ಪಾಲಿಸುವುವೆಂದು ಭಾವಿಸುತ್ತಾನೆ. ಬಡ ಹುಚ್ಚನಂತೆ ಕಾಣುವ ಎಡ್ಗಾರ್‌ನನ್ನು ನೋಡಿದಾಗ, " ಏನು ! ಇವನ ಪುತ್ರಿಯರು ಇವನನ್ನು ಈ ದೆಸೆಗೆ ತಂದರೆ ? " ಎಂದು ಕೇಳುತ್ತಾನೆ. ಲೋಕದ ಎಲ್ಲ ಕ್ಲೇಶಗಳೂ ಪುತ್ರಿಯರ ಕೃತಘ್ನತೆಯಿಂದಲೇ ಉದ್ಭವಿಸುತ್ತವೆಯೆಂದು ಅವನ ದುಃಖೋನ್ಮಾದದಲ್ಲಿ ಅವನಿಗೆ ಎನಿಸುತ್ತದೆ. ಪ್ರಬಲ ಭಾವನೆಯಿಂದ ಪರವಶವಾದ ಮನಸ್ಸಿಗೆ ಭಿನ್ನತೆ ಮಾಯವಾಗಿ ಲೋಕ ಏಕವಾಗುತ್ತದೆ.

ಕವಿಯ ಅತ್ಯದ್ಭುತ ಮತ್ತು ವಿಶಿಷ್ಟಶಕ್ತಿಯು ರೂಪಕ ಸೃಷ್ಟಿಯಲ್ಲಿ ಕಾಣುತ್ತದೆಂದು ಅರಿಸ್ಟಾಟಲ್ ಹೇಳುತ್ತಾನೆ. ಇದನ್ನು ವಿವರಿಸುತ್ತಾ ಭಿನ್ನವಸ್ತುಗಳಲ್ಲಿ ಯಾವುದಾದರೂ ಸಾಮ್ಯವನ್ನು ಇದು ತೋರಿಸುತ್ತದೆಂದೂ ಹೇಳುತ್ತಾನೆ. ಹದಿನೇಳನೆ ಶತಮಾನದ ಇಂಗ್ಲೆಂಡಿನ " Metaphysical " ಕವಿಗಳಲ್ಲಿ ಅದಷ್ಟು ಭಿನ್ನವಾದ ವಸ್ತುಗಳಲ್ಲಿ ಸಾಮ್ಯವನ್ನು ಕಾಣುವ ಅಪೂರ್ವ ಪ್ರತಿಭೆಯಿದೆ. ಪ್ರಿಯೆಯನ್ನು ಬಿಟ್ಟು ಹೋಗುತ್ತಿರುವ ಪ್ರಿಯನ ಬಾಯಿಯಲ್ಲಿ ಡನ್ ಈ ಮಾತನ್ನು ನುಡಿಸುತ್ತಾನೆ :

" If they [our two souls] be two, they are two so
As stiff twin compasses are two,
Thy soul the fixt foot, makes no show
To move, but doth, if the other do.
And though it in the centre sit,
Yet when the other far doth roam,
It leans and hearkens after it,
And grows erect, as that comes home.
Such wilt thou be to me, who must,
Like the other foot, obliquely run ;
Thy firmness draws my circle just,
And makes me end, where I begun."

ಪ್ರಿಯರ ಆತ್ಮಗಳೆಲ್ಲಿ, Compasses ನ ಕಾಲುಗಳೆಲ್ಲಿ? ಆದರೆ ಕಲ್ಪನೆಯ ಪ್ರಭಾವ ದಿಂದ ಅವುಗಳ ಸಾದೃಶ್ಯವು ಭಾವದ ಸ್ಪಷ್ಟ ಅಭಿವ್ಯಕ್ತಿಗೆ ಪೋಷಕವಾಗಿದೆ. ಹದಿ ನೆಂಟು ಹತ್ತೊಂಭತ್ತನೆ ಶತಮಾನಗಳಲ್ಲಿ ಈ ಉಪಮಾನವು "Conceit" ಅಥವಾ "Fancy" ಎಂದು ಖಂಡಿಸಲ್ಪಡುತ್ತಿದ್ದುದನ್ನು ನೆನೆದರೆ "Fancy" ಎಂಬ ಶಬ್ದಕ್ಕೆ ಕೋಲ್‌ರಿಡ್ಜ್ ಕೊಡಲು ಯತ್ನಿಸುವ ನಿಷ್ಕೃಷ್ಟವಾದ ಅರ್ಥ ಕೊಡಲಾಗುವುದಿಲ್ಲ ವೆಂದು ತೋರದಿರದು. ಕೋಲ್‌ರಿಡ್ಜ್ "Fancy" ಎನ್ನುವುದನ್ನು ಕಲ್ಪನೆಯ ಅಭಾವ ವೆಂದು ಕರೆದರೆ ಸಾಕಾಗಿದೆ. ಇತ್ತೀಚಿನ ಕವಿಗಳೂ ವಿಮರ್ಶಕರೂ ಕೋಲ್‌ರಿಡ್ಜ್‌ನ ವಿಭೇದವನ್ನು ತ್ಯಜಿಸಿ ರೊಮ್ಯಾಂಟಿಕ್ ಕವಿಗಳಿಗಿಂತಲೂ ಹೆಚ್ಚಾಗಿ ಬುದ್ಧಿ ಚಾತುರ್ಯಕ್ಕೆ ಕಾವ್ಯದಲ್ಲಿ ಅವಕಾಶವನ್ನು ಕಲ್ಪಿಸಿಕೊಂಡಿದ್ದಾರೆ. ಪಶ್ಚಿಮಮಾರುತನಲ್ಲಿ ತೂರುತ್ತಿರುವ ಹಣ್ಣೆಲೆ ತರಗೆಲೆಗಳನ್ನು ಐಂದ್ರಜಾಲಿಕನ ದಂಡದಿಂದ ಪಲಾಯನವಾಗುತ್ತಿರುವ ಪ್ರೇತಗಳಿಗೆ ಷೆಲ್ಲಿ ಹೋಲಿಸಿದರೆ ಬದುಕಿದ್ದರೂ ಸತ್ತಿರುವ ಮಂದಿಯನ್ನು ಎಲಿಯಟ್ ಹೀಗೆ ವರ್ಣಿಸುತ್ತಾನೆ :

"Men and bits of paper, whirled by the cold wind
That blows before and after time."

ಕವಿಯ ಮನೋವೃತ್ತಿಯನ್ನು ವಿವರಿಸುತ್ತಾ ಎಲಿಯಟ್ 'ಸಾಮಾನ್ಯ ಮನುಷ್ಯ ನೊಬ್ಬನು ಒಂದು ಹೆಣ್ಣನ್ನು ಪ್ರೀತಿಸುತ್ತಾನೆ ಅಥವಾ ಸ್ಪಿನೋಜಾ ಎಂಬ ತಾತ್ವಿಕ ನನ್ನು ಓದುತ್ತಾನೆ. ಇವೆರಡು ಅನುಭವಗಳಿಗೂ ಪರಸ್ಪರ ಸಂಬಂಧವಿರುವುದಿಲ್ಲ. ಅಥವಾ ಟೈಪ್‌ರೈಟರ್‌ನ ಶಬ್ದ ಕೇಳುತ್ತಾನೆ ಅಥವಾ ಅಡಿಗೆಯ ವಾಸನೆ ಅವನ ಕಡೆ ಬರುತ್ತಿರುತ್ತದೆ. ಇವೆಲ್ಲ ಅನುಭವಗಳೂ ಬೇರೆಬೇರೆಯಾಗಿಯೇ ಉಳಿಯುತ್ತವೆ. ಆದರೆ ಕವಿಯಾದವನ ಮನಸ್ಸಿನಲ್ಲಿ ಈ ಅನುಭವಗಳು ಸದಾ ನೂತನ ಸಮಷ್ಟಿಗಳನ್ನು ರಚಿಸುತ್ತಿರುತ್ತವೆ." ಎಂದು ಹೇಳುತ್ತಾನೆ. ಡ್ಯಾಂಟೆಯ ವಿಷಯವಾಗಿ ಬರೆಯುತ್ತಾ ಇದೇ ಮಾತನ್ನೇ ಹೇಳುತ್ತಾನೆ : "It is the real right thing, the power of establishing relations between beauty of the most diverse sorts; it is the utmost power of the poet."

ಮನಶ್ಶಾಸ್ತ್ರ ಸಂಶೋಧನೆಗಳು ಈ ವಿಚಾರಸರಣಿಯನ್ನು ಸಮರ್ಥಿಸುತ್ತವೆ. ಹಿಂದಿನ ಇಂದ್ರಿಯಾನುಭವಗಳ ಸ್ಮೃತಿ ಮುಂದಿನ ಇಂದ್ರಿಯಾನುಭವಗಳೊಡನೆ ಮಿಳಿತವಾಗಿ ಇವನ್ನು ಅವೂ ಅವನ್ನು ಇವೂ ಮಾರ್ಪಡಿಸುತ್ತವೆ. ಹೀಗೆ ಸರಳ ಅನುಭವಗಳು ಕೂಡುತ್ತಾ ಸಂಯುಕ್ತ ಅನುಭವಗಳು ರಚಿತವಾಗುತ್ತಾ ಹೋಗು ತ್ತವೆ. ಕನಸುಗಳಲ್ಲಿ ಈ ಬಗೆಯ ಕ್ರಿಯೆಯನ್ನು ಕಾಣುತ್ತೇವೆ. ಫ್ರಾಯ್ಡ್ ಹೇಳು ತ್ತಾನೆ, "ಸ್ವಪ್ನಚಿತ್ರಗಳ ಕಲೆಗಾರರು ಇಬ್ಬರು—ಸಂಗ್ರಹಣ (Condensation) ಮತ್ತು ಸ್ಥಾನಪಲ್ಲಟ (Displacement)." ಷೇಕ್ಸ್‌ಪಿಯರ್‌ನ ನಾಟಕವೊಂದರಲ್ಲಿ ಬಾಟಂ ಎಂಬ ಗ್ರಾಮ್ಯನಟ ಗಾರ್ಧಭಶಿರನಾಗಿ ಪರಿವರ್ತಿತನಾಗುತ್ತಾನೆ. ಆ ನಾಟ ಕದ ಸ್ವಾಪ್ನಿಕ ಆವರಣಕ್ಕೆ ಉಚಿತವಾದ ಕ್ರಿಯೆಯಿದು. ಕವಿಯ ಮಾತಿಗೆ ಒಂದೇ

ಅರ್ಥವನ್ನು ಕೊಡಲಾಗುವುದಿಲ್ಲ. ಕಾವ್ಯದ ನಾನಾರ್ಥಸ್ಫುರಣ ಶಕ್ತಿಯನ್ನು ಎಂಸನ್ ಮುಂತಾದ ವಿಮರ್ಶಕರು ಈಚಿಗೆ ಅನ್ವೇಷಿಸುತ್ತಿದ್ದಾರೆ. ಮನಶ್ಶಾಸ್ತ್ರದ ಸಂಶೋಧನೆಗಳನ್ನು ಉಪಯೋಗಿಸಿಕೊಂಡು ಕಾವ್ಯರಚನೆಯ ರಹಸ್ಯದ ಮೇಲೆ ಸ್ವಲ್ಪವಾದರೂ ಬೆಳಕನ್ನು ಚೆಲ್ಲಿರುವ ಕೀರ್ತಿ ಲೌವಿಸ್ ಎಂಬ ವಿಮರ್ಶಕರಿಗೆ ಸಲ್ಲುತ್ತದೆ ಕೋಲ್ರಿಡ್ಜ್ ನೋಡಿದ ನೋಟಗಳೂ ಓದಿದ ಪುಸ್ತಕಗಳೂ ಅವನು 'The Ancient Mariner' ಎಂಬ ಕವನವನ್ನು ರಚಿಸಲು ಹೇಗೆ ವಸ್ತುವಿವರಗಳನ್ನೂ ಶಬ್ದಸಂಪತ್ತನ್ನೂ ಒದಗಿಸಿದವು ಎಂಬುದನ್ನು ಅವರು ತೋರಿಸಿಕೊಟ್ಟಿದ್ದಾರೆ. ಸದೃಶಭಾವನೆಗಳು ಒಂದನ್ನೊಂದು ಸೂಚಿಸುತ್ತಾ ಸಂಯುಕ್ತಭಾವನೆಗಳ ಉತ್ಪಾದನಾಕಾರ್ಯ ನಡೆಯುತ್ತದೆ. ಈಚಿನ ಪಾಶ್ಚಾತ್ಯ ಕಾವ್ಯದಲ್ಲಿ ತರ್ಕಬದ್ಧವಾದ ಅಥವಾ ಕಾಲಕ್ರಮೇಣ ಹೇಳುವ ಶೈಲಿಗೆ ಬದಲು ಸಾದೃಶ್ಯ–ವಿರೋಧಗಳ ಮೂಲಕ ಕಾವ್ಯವನ್ನು ಬೆಳೆಸಿಕೊಂಡು ಹೋಗುವ ಮಾರ್ಗ ಪ್ರಯೋಗದಲ್ಲಿದೆ. 'The Waste Land' ಎಂಬ ಪ್ರಸಿದ್ಧ ಕವನದಲ್ಲಿ ಶತಶತಮಾನಗಳ ಸಂಸ್ಕೃತಿಗಳು ಖಿಲವಾಗಿರುವುದರ ಘೋರಕರುಣ ಚಿತ್ರ ಈ ಶೈಲಿಯಲ್ಲಿ ರೂಪಿಸಲ್ಪಟ್ಟಿದೆ. ಹಿಂದಿನ ಕವಿಗಳ ಯೋಗಿಗಳ ಜನಾಂಗಗಳ ಸಂಸ್ಕೃತಿಗಳನ್ನೂ ಇಂದಿನ ಪ್ರಪಂಚದ ಪರಿಸ್ಥಿತಿಯನ್ನೂ ಕವಿಯ ವೈಯಕ್ತಿಕ ಅನುಭವಗಳನ್ನೂ ಏಕೀಭವಿಸುವಂತೆ 'ಕೂಡಿಸಿ, ಕರಗಿಸಿ, ಮಾರ್ಪಡಿಸಿ' ಕಲ್ಪನೆ ಈ ಕವನವನ್ನು ಹೊಮ್ಮಿಸಿದೆ. ನಿಜವಾದ ಕವಿಗೆ ಚಿಂತನೆ ಭಾವ ಇಂದ್ರಿಯಾನುಭವ ಎಲ್ಲವೂ ಒಂದೇ. ಒಂದನ್ನೊಂದು ಕೂಡಬಲ್ಲುದು, ಮಾರ್ಪಡಿಸಬಲ್ಲುದು. ವರ್ಡ್ಸ್‌ವರ್ತ್ ಹೇಳುತ್ತಾನೆ: 'ನಿರಂತರವಾಗಿ ಹೃದಯವನ್ನು ಹೊಗುವ ಭಾವನೆಗಳನ್ನು ಚಿಂತನೆಗಳು ಮಾರ್ಪಡಿಸಿ ಒಂದು ಮಾರ್ಗದಲ್ಲಿ ಒಯ್ಯುತ್ತವೆ. ಆದರೆ ಈ ಚಿಂತನೆಗಳು ಬೇರೆ ಯಾವುವೂ ಅಲ್ಲ. ಹಿಂದಿನ ಭಾವನೆಗಳೆಲ್ಲವುಗಳ ಪ್ರತಿನಿಧಿಗಳು.' 'So feeling comes in aid of feeling.' ವರ್ಡ್ಸ್‌ವರ್ತ್ ಈ ಬಗೆಯ ಕಟ್ಟಡ ಮತ್ತು ಮಾರ್ಪಾಟನ್ನು ಈ ಪ್ರಸಿದ್ಧವಾಕ್ಯಗಳಲ್ಲಿ ಸ್ಪಷ್ಟಪಡಿಸಿದ್ದಾನೆ:

"The principal object was . . . to make . . incidents and stituations interesting by tracing in them, truly though not ostentatiously, the primary laws of our nature: chiefly, as far as regards the manner in which we associate ideas in a state of excitement . . . . Poetry is the spontaneous overflow of powerful feelings: it takes its origin from emotion recollected in tranquillity; the emotion is contemplated till by a species of reaction, the tranquillity gradually disappears, and emotion, kindred to that which was before the subject of contemplation, is gradually produced, and does itself exist in the mind." ಭಾವನೆಗೂ

ರಸಕಕ್ಕೂ ಇರುವ ಅಂತರದ ಕಡೆ ಈ ವಾಕ್ಯ ಬೆರಳು ತೋರಿಸುತ್ತದೆ. ಎಲಿಯಟ್ ಹೇಳುವಂತೆ, " It is not the ' greatness ' the intensity of the emotions the components, but the intensity of the artistic process, the pressure, so to speak, under which the fusion takes place that counts." ಈ ಬಗೆಯ ಪರಿವರ್ತನೆ ಎಷ್ಟು ಮಟ್ಟಿಗೆ ಆಗುತ್ತಿದೆ ಎಂಬುದರ ಮೇಲೆ ಒಂದು ಕಾವ್ಯದ ಕಾವ್ಯವಿಶಿಷ್ಟ ಗುಣವನ್ನು ನಾವು ನಿರ್ಧರಿಸಬಹುದುದು. ಕಾವ್ಯ ಕವಿಯ ವ್ಯಕ್ತಿತ್ವದ ಚರಿತ್ರೆಯಲ್ಲ. ಎಲಿಯಟ್‌ನ ಮಾತಿನಲ್ಲಿ, " The poet has not a ' personality ' to express, but a medium in which impressions and experiences combine in peculiar and unexpected ways." ವರ್ಡ್ಸ್‌ವರ್ತ್‌ನ " wise passiveness " ಅಥವಾ ಕೀಟ್ಸ್‌ನ " negative capability " ಯನ್ನು ಕವಿ ಅಭ್ಯಾಸಮಾಡಬೇಕು.

ಯೂಂಗ್ ಎಂಬ ಮನಶ್ಶಾಸ್ತ್ರಜ್ಞ ಮಾನವಕುಲದ ಸುಪ್ತಚಿತ್ತದಲ್ಲಿ " Archetypal Images " ಅಥವಾ ಪುರಾಣಪ್ರತೀಕಗಳು ನಿರುತವೂ ಇರುವುವೆಂದು ತನ್ನ ಸಿದ್ಧಾಂತವನ್ನು ಪ್ರತಿಪಾದಿಸುತ್ತಾನೆ. ದ್ವಿಜತಾ ಸಿದ್ಧಿ (Initiation)ಗೆ ಸಂಬಂಧಿಸಿದ ಚಿರಸಂಕೇತಗಳು ಸತ್ತು ಮರುಹುಟ್ಟಿದಂತೆ, ಒಣಗಿ ಉದುರಿ ಮತ್ತೆ ಬೆಳೆದಂತೆ, ಕಷ್ಟದಲ್ಲಿ ಸಿಲುಕಿ ಕೊನೆಗೆ ಪರಿಹಾರವನ್ನು ಕಂಡುಕೊಂಡಂತೆ, ಪಾತಾಲಕ್ಕೆ ಹೋಗಿ ಭೂಮಿಗೆ ಹಿಂದಿರುಗಿದಂತೆ ಆಗುವ ಅನುಭವಗಳು. ಪ್ರಾಚೀನ ಸಂಸ್ಕೃತಿಗಳಲ್ಲಿಯೂ ವ್ಯಕ್ತಿಸ್ವಪ್ನಗಳಲ್ಲಿಯೂ ಕಾವ್ಯದಲ್ಲಿಯೂ ಇವು ಪುನಃ ಪುನಃ ಅವತರಿಸುತ್ತವೆ. " The Ancient Mariner " ಎಂಬ ಕವನದಲ್ಲಿ ಇಂತಹ " Rebirth Archetype " ಕಾಣುವುದೆಂದು ಮಾಡ್‌ಬಾಡ್‌ಕಿನ್ ಎಂಬ ವಿಮರ್ಶಕಿ ಅಭಿಪ್ರಾಯಪಟ್ಟಿದ್ದಾಳೆ. ಮಾನವಕುಲದ ಅಜಾಗರ ಚಿತ್ತವನ್ನು ಏಟ್ಸ್ " Anima Mundi " ಎಂದು ಕರೆಯುತ್ತಾನೆ. ಅದು ಸೂಚಿಸುವ ಸಂಕೇತಗಳಿಗೆ ಒಂದು ಕಾಲದ ಅಥವಾ ಒಬ್ಬ ಮನುಷ್ಯನ ಅರಿವಿಗೂ ಮೀರಿದ ಅರ್ಥದ್ಯೋತಕತೆಯಿದೆ ಎಂದು ಅವನ ಅಭಿಪ್ರಾಯ. ಆಂಗ್ಲ ಸಿಂಬಲಿಸ್ಟ್ ಕವಿಗಳಲ್ಲಿ ಇವನು ಪ್ರಮುಖ. ಮನಶ್ಶಾಸ್ತ್ರದ ಬೆಂಬಲಕ್ಕೆ ಮಾನವಶಾಸ್ತ್ರ ನಿಂತಿದೆ. ರೂಪಾಂತರವಾದರೂ ನಷ್ಟವಾಗದ ಪಡಿಯಚ್ಚಿನಂತಹ ಅನುಭಾವಗಳು ಪ್ರಪಂಚದ ಎಲ್ಲ ಪ್ರಾಚ್ಯ ಸಂಸ್ಕೃತಿಗಳಲ್ಲಿ ಮತ್ತೆ ಮತ್ತೆ ಉದಿಸುವುದನ್ನು ಈ ಶಾಸ್ತ್ರ ತೋರಿಸಿಕೊಟ್ಟಿದೆ. ಭಾಷೆ ಅಳಿದ ಸಂಸ್ಕೃತಿಗಳ ಉಳಿದ ಉಲ್ಲೇಖ. " Breath " (ಪ್ರಾಣ) ಎಂಬ ಶಬ್ದಕ್ಕೆ ಉಸಿರು, ವಾಯು, ಆತ್ಮ, ಪರಮಾತ್ಮ ಎಂಬ ಅರ್ಥಗಳು ಹಿಂದೆ ಆಗುತ್ತಿದ್ದವು. ಈ ಬಗೆಯ ಅರ್ಥವಿಪುಲತೆ ಈಗ ಕಾವ್ಯಭಾಷೆಯಲ್ಲಿ ಮಾತ್ರ ಸಿದ್ಧಿಸುತ್ತದೆ. ಬಾರ್‌ಫೀಲ್ಡ್ ಹೇಳುವಂತೆ " The poet in his metaphorical speech restores conceptually a unity which has now been lost to perception." ವಿಶ್ವದ ವಿಷಯದಲ್ಲಿಯೇ ಒಂದು ಸಿದ್ಧಾಂತವಿದ್ದರೆ ಅದರಲ್ಲಿ ಒಂದೊಂದು ಜೀವನ

ವಿಭಾಗಕ್ಕೂ ಅಸ್ತಿತ್ವ ಅರ್ಥ ಇದ್ದರೆ ಆಗ ಒಂದು ಅಂಶವನ್ನು ವರ್ಣಿಸಿದರೂ ಪೂರ್ಣತೆಯು ಸೂಚಿತವಾಗುತ್ತದೆ. ಹಿಂದಿನ ಕಾಲದಲ್ಲಿ ಹೀಗೆ ಪುರಾಣಗಳು (Myths) ಜನಾಂಗಗಳ ವೈಯುಕ್ತಿಕ, ಸಾಮಾಜಿಕ, ಆಧ್ಯಾತ್ಮಿಕ ಅನುಭವ ಗಳನ್ನೆಲ್ಲಾ ಒಗ್ಗೂಡಿಸಿ ಸುಸಂಗತವಾದ ಸಂಸ್ಕೃತಿಗಳನ್ನು ಪ್ರತಿಬಿಂಬಿಸುತ್ತಿದ್ದವು. ಈಗಲಾದರೋ ಬುದ್ಧಿಶಕ್ತಿ ಏರುತ್ತಾ ಭಾವನಾಶಕ್ತಿ ಆರುತ್ತಾ ಎಲ್ಲ ಸಂಸ್ಕೃತಿ ಗಳಲ್ಲಿಯೂ ವಿಶ್ವಾಸ ಅಳಿಯುತ್ತಾ ಅನುಭವ ಸಂಘಟನೆ ಕ್ಲಿಷ್ಟವಾಗುತ್ತಿದೆ. ಒಬ್ಬೊಬ್ಬ ಆಧುನಿಕ ಕವಿವರನೂ ಒಂದೊಂದು "Myth" ಅನ್ನು ಸೃಷ್ಟಿಸಿಕೊಳ್ಳುತ್ತಿದ್ದಾನೆ. ಇದರಿಂದ ಸ್ವಲ್ಪಮಟ್ಟಿಗಾದರೂ ನಮಗೆ ನಮ್ಮ ಪ್ರಪಂಚವನ್ನು ಜೀರ್ಣಿಸಿಕೊಳ್ಳಲು ಸಹಾಯವಾಗುತ್ತಿದೆ. ಈ ವೈಯುಕ್ತಿಕ ದರ್ಶನಗಳಲ್ಲಿಯೂ ಅಜ್ಞಾತವಾಗಿ ಪ್ರಾಚ್ಯ ಪ್ರತೀಕರೂಪಿಕೆಗಳು (Archetypal Patterns) ಅಡಗಿರುತ್ತವೆ. ಮಾನವನ ಆನುವಂಶಿಕ ಅನುಭಾವಗಳ ಪಡಿಯಚ್ಚುಗಳಿಂದಲೇ ವೈಯುಕ್ತಿಕ ದರ್ಶನಗಳು ಎರಕ ಹೊಯ್ಯಲ್ಪಡುತ್ತವೆ.

ಕಲ್ಪನೆಯು ಸೃಷ್ಟಿಸುವ ಸಂಘಟನೆಯಲ್ಲಿ ಇಂದ್ರಿಯಪ್ರಕ್ರಿಯೆ, ಭಾವನೆ, ಚಿಂತನೆ, ಸಾಂಸ್ಕೃತಿಕ ಹಿನ್ನೆಲೆಗಳೊಂದಿಗೆ ಪದಗಳ ನಾದವೂ ಏಕೀಭೂತವಾ ಗಿರುತ್ತದೆ. ರೂಪಕಸೂಚನೆಯಲ್ಲಿ ಕಲ್ಪನೆಯ ಕಾರ್ಯ ಮುಗಿಯಿತೆಂದೂ ಛಂದೋಬದ್ಧ ಶಾಬ್ದಿಕ ಅಭಿವ್ಯಕ್ತಿ ಬೇರೆಯೇ ಆದ ಜಾಣ್ಮೆಯೆಂದೂ ಹೇಳುವುದು ಅವಿವೇಕವೇ ಸರಿ. ನೋಟ ಭಾವನೆ ಚಿಂತನೆಗಳು ಶಬ್ದಗಳನ್ನೂ ಶಬ್ದಗಳು ನೋಟ ಭಾವನೆ ಚಿಂತನೆಗಳನ್ನೂ ಮಾರ್ಪಡಿಸಿ ಎಲ್ಲವನ್ನೂ ಹೊಂದಿರುವ ಆದರೆ ಒಂದೊಂದರಿಂದಲೂ ಬೇರೆಯಾದ ನವೀನ ಸಂಯುಕ್ತ ಸಂಘಟನೆ ಕಾವ್ಯದಲ್ಲಿ ಸಿದ್ಧಿಸುವುದು. ಕವಿಯ ಮನಸ್ಸು ಉದ್ರೇಕ ಸಂಯಮಗಳ ನಡುವೆ ಕೇಂದ್ರಿತ ವಾಗುವಾಗ ರೂಪಕ ಉದ್ರೇಕವನ್ನೂ ಛಂದಸ್ಸು ಸಂಯಮವನ್ನೂ ಪ್ರತಿ ಕೃತಿಸುತ್ತವೆ. ಇದನ್ನು ಕೋಲ್‌ರಿಡ್ಜ್ ಅದ್ಭುತವಾಗಿ ವರ್ಣಿಸಿದ್ದಾನೆ: "This power reveals itself in the balance or reconcilement of opposite or discordant qualities: of sameness, with difference; of the general, with the concrete ; the idea with the image ; the individual with the representative; the sense of novelty and freshness with old and familiar objects; a more than usual state of emotion with more than usual order ; judgement ever awake and steady self-possession with enthusiasm and feeling profound or vehement." ಛಂದಸ್ಸಿನ ನಿರ್ವಹಣೆಗೆ ಸಂಬಂಧಿಸಿದ ಕಲ್ಪನೆ ಯನ್ನು ಎಲಿಯಟ್ "The Auditory Imagination" ಎಂದು ಕರೆದು ಹೀಗೆ ವರ್ಣಿಸುತ್ತಾನೆ—"the feeling for syllable and rhythm penetrating far below the conscious levels of thought and feeling, invigorating every word . . . It works through meanings . . . and . . . the

most ancient and the most civilised mentality." ನೋಟ ಭಾವನೆ ಚಿಂತನೆಗಳಲ್ಲಿ ಸಾಕಷ್ಟು ವ್ಯಕ್ತವಾಗದ ಕಲ್ಪನೆ ಛಂದಸ್ಸಿನಲ್ಲಿ ಪೂರ್ಣ ಅಭಿವ್ಯಕ್ತಿಯನ್ನು ಪಡೆಯುತ್ತದೆ.

ಕೆಲವು ಕವಿಗಳಲ್ಲಿ ಶ್ರುತಿವಿಶಿಷ್ಟ ಕಲ್ಪನೆ (The Auditory Imagination) ಪ್ರಮುಖವಾಗಿರುತ್ತದೆ: ಉದಾಹರಣೆಗೆ, ಮಿಲ್ಟನ್. ಆದರೆ ಡ್ಯಾಂಟೆಯಲ್ಲಿ ದರ್ಶನ ಮತ್ತು ಶ್ರುತಿ ಎರಡೂ ಸಮರಸವಾಗಿ ಬೆರೆಯುತ್ತವೆ. ಅವನ ಗುಣ ಇಂಗ್ಲಿಷ್ ಕಾವ್ಯದಲ್ಲಿ ಷೆಲ್ಲಿಯ ಕೊನೆಯ ಮುಗಿಯದ ಕವನದಲ್ಲಿ ಬರುವ ರೂಸೋ ಎಂಬ ಫ್ರೆಂಚ್ ತಾತ್ವಿಕನ ಪ್ರೇತದ ವರ್ಣನೆಯಲ್ಲಿ ನಿದರ್ಶಿತವಾಗಿದೆ :

" That what I thought was an old root which grew
To strange distortion out of the hill side
Was indeed one of those deluded crew,
And that the grass, which methought hung so wide
And white, was but his thin discoloured hair,
And that the holes it vainly sought to hide
Were or had been eyes."

ಚಿತ್ರೋಜ್ಜ್ವಲವಾದುದನ್ನು ಕಣ್ಣಿಗೆ ಕಟ್ಟುವಂತೆ ನಿರೂಪಿಸುವ ಅವನ ಈ ಪ್ರಸಿದ್ಧ ರೂಪಕವನ್ನೂ ಉದಾಹರಿಸಬಹುದು :

" Life like a dome of many-colourrd glass
Stains the white radiance of eternity."

ಷೆಲ್ಲಿಗಿಂತಲೂ ಕೀಟ್ಸ್ ಹೆಚ್ಚಾಗಿ ಈ ಸಾಮರಸ್ಯವನ್ನು ಸಾಧಿಸುತ್ತಾನೆ. ಇಂದ್ರಿಯಾನುಭವಗಳ ಐಶ್ವರ್ಯವನ್ನು ಅವನು ಕವನಗಳಲ್ಲಿ ತುಂಬುತ್ತಾನೆ. "A fine excess"—ಚೆಲುವಿನ ಕೊಸರು—ಇಲ್ಲದೆ ಅವನಿಗೆ ತೃಪ್ತಿಯಿಲ್ಲ. ಶರದೃತುವೂ ಸೂರ್ಯನೂ " fill all fruit with ripeness to the core," ಎಂದು ವರ್ಣಿಸುತ್ತಾನೆ. ಬೆಳದಿಂಗಳಲ್ಲಿ ಮರದ ನೆರಳಿನಲ್ಲಿ ಕಾಣದ ಗಿಡಬಳ್ಳಿ ಹೂಗಳನ್ನು ಅವುಗಳ ವಾಸನೆಯಿಂದ ಗುರುತಿಸುತ್ತಾನೆ :

" I cannot see what flowers are at my feet
Nor what soft incense hangs upon the boughs,"

ರತಿಮನ್ಮಥರು ಮಲಗಿರುವುದು "Mid hushed coolrooted flowers fragrant-eyed." ಆದರೆ ಇಂದ್ರಿಯಗ್ರಾಹ್ಯವಾದುದಕ್ಕಿಂತ ಕಲ್ಪನಾಗ್ರಾಹ್ಯವಾದುದು ರಮ್ಯತರ :

" Heard melodies are sweet, but those unheard
Are sweeter ; therefore, ye soft pipes, play on !
Not to the sensual ear, but more endeared,
Pipe to the spirit ditties of no tone."

ಕಿವಿ ಕೇಳುವ ಹಾಡಿಗಿಂತಲೂ ಕಲ್ಪನೆ ಕಲ್ಪಿಸಿಕೊಳ್ಳಬಲ್ಲ ಹಾಡು ಮಧುರತರ. ಆದುದರಿಂದ ಧ್ವನಿಕಾವ್ಯ ಅರ್ಥಮಾತ್ರ ಅರ್ಥವಿವರಣೆಮಾಡಿ ಉಳಿದುದನ್ನು ಸೂಚಿಸುತ್ತದೆ—ಸಹೃದಯನ ಕಲ್ಪನೆ ಎಚ್ಚತ್ತು ಊಹಿಸಿಕೊಳ್ಳುವಂತೆ. ಬರ್ನ್ಸ್‌ನಿಂದ ಆರಿಸಿರುವ ಈ ಎರಡು ಉದಾಹರಣೆಗಳಲ್ಲಿ ಎರಡನೆಯದರಲ್ಲಿ ಈ ರೀತಿಯಲ್ಲಿ ಧ್ವನಿ ಹೆಚ್ಚಾಗಿದೆ :

" O my love's like a red red rose
That's newly sprung in June "
" The white moon sets behind the white wave
And Time is setting with me, O ! "

ಕಲ್ಪನೆಯ ಪ್ರಭಾವದಿಂದ ಕವಿ ತಾನು ನೋಡುತ್ತಿರುವುದರಲ್ಲಿ ಲೀನನಾಗಿ ಅದನ್ನರಿಯುತ್ತಾನೆ. ಉದ್ಯಾನದಲ್ಲಿ ವಿಹರಿಸುತ್ತಾ ಮಾರ್ವೆಲ್ ಎಂಬ ಕವಿ ಹಸಿರುಹುಲ್ಲು ಗಿಡ ಹಣ್ಮರ ಹಕ್ಕಿಗಳನ್ನು ನೋಡಿ ಹರ್ಷಿತನಾಗುತ್ತಾನೆ—ತಾದಾತ್ಮ್ಯದಿಂದ :

Meanwhile the mind from pleasure less,
Withdraws into its happiness ; —
The mind, that ocean where each kind
Does straight its own resemblance find ; —
Yet it creates, transcending these
Far other worlds, and other seas,
Annihilating all that's made
To a green thought in a green shade . . .
Casting the vest of my body aside
My soul into the boughs does glide :
There, like a bird, it sits and sings,
Then whets and claps its silver wings
And, till prepared for longer flight,
Waves in its plumes the various light."

ಇಲ್ಲಿ ಕಲ್ಪನಾವಿಲಾಸದ ವಿವರಣೆ ದೃಷ್ಟಾಂತ ಎರಡನ್ನೂ ಕಾಣಬಹುದು.

ವಿಶ್ವದ ಆದ್ಯಂತವನ್ನೂ ಆವರಿಸಿ ಅದರ ಚಾಲಕವಾದ ದಿವ್ಯಶಕ್ತಿಯನ್ನು ವರ್ಡ್ಸ್‌ವರ್ತ್‌ನ ಕಲ್ಪನಾಶಕ್ತಿ ಸ್ವರ್ಗೀಯ ಸಮಾಧಿಯಲ್ಲಿ ಗುರುತಿಸುತ್ತದೆ :

" A sense sublime
Of something far more deeply interfused
Whose dwelling is the light of setting suns,
And the round ocean and the living air,
And the blue sky and in the mind of man :
A motion and a spirit, that impels

All thinking things, all objects of all thought,
And rolls through all things."

ಇಂತಹ ಪೂರ್ಣದರ್ಶನ ಕಲ್ಪನಾಕಲ್ಪವೃಕ್ಷದ ಅಮೃತಫಲ. ಏಟ್ಸ್ ಕೇಳುವಂತೆ ಇಂತಹ ಪೂರ್ಣತೆಯಲ್ಲಿ ಭಾಗಗಳನ್ನು ವಿಂಗಡಿಸುವುದು ಹೇಗೆ ಸಾಧ್ಯ ?

" O chestnut tree, great-rooted blossomer,
Are you the leaf, the blossom or the bole?
O body swayed to music, O brightening glance,
How can we know the dancer from the dance?"

ಈ ಭೂಮದರ್ಶನವನ್ನು ಪಡೆದ ಕವಿ—"The transitory Being that beheld the Vision"–ಷೇಕ್ಸ್‌ಪಿಯರ್‌ನಿಂದ ಹೀಗೆ ವರ್ಣಿಸಲ್ಪಟ್ಟಿರುವುದು ಉಚಿತವಾಗಿಯೇ ಇದೆ :

" The poet's eye in a fine frenzy rolling
Doth glance from heaven to earth, from earth to
heaven . . . "

ಕೆ. ನರಸಿಂಹಮೂರ್ತಿ

# ಕುಮಾರವ್ಯಾಸ—ಕವಿಯ ಚರಿತ್ರ ಮತ್ತು ಕಾವ್ಯ ವಿಚಾರ

ಕುಮಾರವ್ಯಾಸನು ಕರ್ನಾಟಕದ ಕವಿಗಳಲ್ಲಿ ಅತ್ಯಂತ ಪ್ರಭಾವಶಾಲಿಯಾದ ಕವಿಯು. ಇವನು ವ್ಯಾಸರಿಂದ ಪ್ರಣೀತವಾದ ಮಹಾ ಭಾರತವನ್ನು ಕನ್ನಡದಲ್ಲಿ ಭಾಮಿನೀ ಷಟ್ಪದಿಯಲ್ಲಿ ಅವತರಿಸಿ ಕುಮಾರವ್ಯಾಸನೆಂಬ ಹೆಸರಿನಿಂದ ಅಜರಾಮರ ನಾಗಿರುವನು.

[ಈ ಕವಿಯ ಆತ್ಮಚರಿತ್ರ, ಬಾಳಿದ ಕಾಲ ಉಪಾಸಿಸಿದ ಮತ ಇತ್ಯಾದಿಗಳ ಬಗೆಗೆ ಸ್ಪಷ್ಟವಾದ ಪ್ರಮಾಣಗಳು ಸಿಕ್ಕಿಲ್ಲ.] ಆದರೆ ಅವುಗಳನ್ನು ಕುರಿತು ಇತರ ಅಂತರ ಮತ್ತು ಬಾಹ್ಯ ಪ್ರಮಾಣಗಳನ್ನು ವಿಮರ್ಶಿಸುವದು ಅವಶ್ಯವಿದೆ.. (ಮಹಾ ಭಾರತವು ಅತ್ಯಂತ ಶ್ರೇಷ್ಠ ಮತ್ತು ಲೋಕಪ್ರಿಯ ಕಾವ್ಯವಾಗಿದ್ದರಿಂದ ಅದರ ಶ್ರೇಷ್ಠತೆ ಯನ್ನು ಭಾಷೆ, ಶೈಲಿ, ರಸ, ಅಲಂಕಾರ, ಪಾತ್ರ ನಿರೂಪಣೆ, ವಿಷಯ ವ್ಯತ್ಯಾಸದಲ್ಲಿ ಚಮತ್ಕೃತಿ ಮುಂತಾದ ಅಂಗ ಪ್ರತ್ಯಂಗಗಳ ವಿಮರ್ಶೆಯಿಂದ ವಿವರಿಸುವುದೂ ಪ್ರಾಪ್ತವಾಗಿದೆ.)

(ಕವಿಯ ವಂಶ, ಸ್ಥಳ, ಜೀವನ ಇತ್ಯಾದಿಗಳನ್ನು ನಿಃಸಂಶಯವಾಗಿ ಹೇಳುವ ಪ್ರಮಾಣಗಳು ಇದುವರೆಗೆ ಸಿಕ್ಕಿಲ್ಲ.) ಕೇವಲ ಊಹೆಯಿಂದ ಅನೇಕ ಸಂಗತಿಗಳನ್ನು ಹೊಂದುಗೂಡಿಸಲಾಗಿದೆ. ಕರ್ಣಾಟಕಮಹಾಭಾರತದಲ್ಲಿ "ಶ್ರೀಮದಚಿಂತ್ಯ ಮಹಿಮ ಗದಗು ವೀರನಾರಾಯಣ ಚರಣಾರವಿಂದ ಮಕರಂದ ಮಧುಪಾನ ಪುಷ್ಪವ— ಚಷ್ಪಟ್ಪದೀನಿಕಾಯ ಶ್ರೀಮತ್ಕುಮಾರವ್ಯಾಸಯೋಗೀಂದ್ರ ವಿರಚಿತಮಪ್ಪ ಕರ್ಣಾಟ ಭಾರತ ಕಥಾಮಂಜರೀ" ಎಂಬ ಪರ್ವಗಳ ಅಂತ್ಯದಲ್ಲಿ ಬರುವ ಒಕ್ಕಣಿಕೆಯಿಂದ ಕುಮಾರವ್ಯಾಸನು ಗದುಗು ವೀರ ನಾರಾಯಣನ ಭಕ್ತನೆಂದೂ ಯೋಗೀಂದ್ರನಾಗಿದ್ದ ನೆಂದೂ ಗೊತ್ತಾಗುತ್ತದೆ. 'ನುತ ಕುಮಾರವ್ಯಾಸ ಮುನಿಯಿಾ ಕೃತಿಗೆ ಕರ್ತೃವೆನಲ್ಕೆ' (ಆದಿಪರ್ವ ೧, ೧೫) ಎಂದು ಕುಮಾರವ್ಯಾಸನಿಗೆ 'ಮುನಿ' ಎಂದು ವಿಶೇಷಣವೂ ಬರುತ್ತದೆ. ಇದರಿಂದ ಕವಿಯು ಈ ಕೃತಿಯನ್ನು ರಚಿಸುವಾಗ ಆಶ್ರಮಾಂತರ ಸ್ವೀಕಾರ ಮಾಡಿ ತನ್ನ ಲೌಕಿಕ ನಾಮವನ್ನು-ಬಿಟ್ಟು ಕುಮಾರವ್ಯಾಸ ಎಂಬ ನವೀನ ನಾಮವನ್ನು ಧಾರಣಮಾಡಿದಂತೆ ತಿಳಿಯಬಹುದಾಗಿದೆ. 'ಶುಕರೂಪನಲ್ಲವೆ। ಕುಣಿಸಿ ನಗನೇ ಕವಿ ಕುಮಾರವ್ಯಾಸನುಳಿದವರ॥ (I ; ೧, ೧೫) ಎಂಬುದರಿಂದ ಕುಮಾರವ್ಯಾಸನು ತಾನು ಶುಕಾಚಾರ್ಯರ ಅವತಾರಿಯೆಂದು ತಿಳಿದಿದ್ದನೆಂದು ಹೇಳ ಬಹುದು. ಶುಕಾಚಾರ್ಯರಂತೆ ಇವನೂ ಅವಧೂತನೂ ಯೋಗೀಂದ್ರನೂ (ಸನ್ಯಾಸಿಯೂ) ಆಗಿದ್ದನೆಂದು ತಿಳಿಯಲು ಬಾಧಕವೇನೂ ಇಲ್ಲ. ಯೋಗೀಂದ್ರ ನಾಗಿ ಭಾರತವನ್ನು ರಚಿಸುವ ಪೂರ್ವದಲ್ಲಿಯ ಕವಿಯ ಚರಿತ್ರವನ್ನು ಉಪಲಬ್ಧವಿದ್ದ ಪ್ರಮಾಣಗಳಿಂದ ಸ್ವಲ್ಪಮಟ್ಟಿಗೆ ಹೇಳಬಹುದು.

ಈಗ ೮–೧೦ ವರ್ಷಗಳ ಹಿಂದೆ ಕೋಳಿವಾಡದ ಗ್ರಾಮಸ್ಥರೂ (ಶಾನಭೋಗರೂ) ಕನ್ನಡಶಾಲೆಯ ಅಧ್ಯಾಪಕರೂ ಕೂಡಿ ನನ್ನ ಕಡೆಗೆ ಕೆಲವು ಕನ್ನಡ ಮತ್ತು ಮೋಡೀ ಅಕ್ಷರದ ಕೋರೀ ಕಾಗದ ಪತ್ರಗಳನ್ನು ತಂದು ಕೊಟ್ಟು ಕುಮಾರವ್ಯಾಸನ ಬಗ್ಗೆ ಇವುಗಳಲ್ಲಿ ಸಿಕ್ಕುವ ಮಾಹಿತಿಯನ್ನು ತಿಳಿಸಬೇಕೆಂದೂ ಅವನ ಕಾಲವನ್ನು ನಿರ್ಧರಿಸಬೇಕೆಂದೂ ಕೇಳಿಕೊಂಡರು. ಆ ಪತ್ರಗಳ ಪರೀಕ್ಷೆಯಿಂದ ಕೆಳಗಿನ ಮಾಹಿತಿಯು ತಿಳಿದು ಬಂದಿತು :—

ಹುಣಸಿಗೆ ದೇವಲಾಪುರದ ಚಿನ್ನದ ಕೈಯ ಮಾಧವರಸಯ್ಯನು ಮೂಲಪುರುಷ. ವಿಜಯನಗರದ ರಾಜಾ ನರಸಿಂಗರಾಯನ ಮುಖ್ಯದಂಡಾಳುವೂ ಅಂಗರಕ್ಷಕನೂ ಆಗಿದ್ದನು. ಆ ಕಾಲಕ್ಕೆ ಸಾಳೋ ವೆಂಕಟಪತಿ ಎಂಬವನು ಮುಖ್ಯ ಮಂತ್ರಿಯಾಗಿದ್ದನು. ಈತನೂ ಮಾಧವರಸಯ್ಯನಿಗೆ ಅಂಕಿತನಾಗಿ ನಡೆಯುತ್ತಿದ್ದನು. ಕೋಳಿವಾಡ–ಕೋಳಿಂಗನವುರ (ಕಾಳಿಂಗನಪುರ?) ವು ಚೆರ್ಚನಪಳ್ಳಿ (ತ್ರಿಚಿನಾಪಳ್ಳಿ) ಸೀಮೆಯ ತಿಗುಳರ ಮೇಲುಗಿರಿ ಲಕ್ಷ್ಮೀಪತಿ ವೆಂಕಟರಸಯ್ಯನಿಗೆ ಉಂಬಳಿಯಾಗಿತ್ತು. ಅವನ ಗುರು ರಾಮಾನುಜ ಯಜುರ್ವೇದಿ ವೆಂಕಟಾಚಾರ್ಯರು, ವಿದ್ಯಾನಗರಿಯಲ್ಲಿಯೇ ಇರುತ್ತಿದ್ದರು. ವೆಂಕಟರಸಯ್ಯನಿಗೆ ವಿಜಯನಗರದ ಹೆಣ್ಣು ಕೊಟ್ಟಿತ್ತು. ಆಕೆಯು ಜಾರತ್ವದಿಂದ ಒಂದು ಕೂಸು ಹಡೆದು ಅದನ್ನು ಕೊಂದಳು. ಈ ಸುದ್ದಿಯು ರಾಜನ ಕಿವಿಗೆ ಮುಟ್ಟಿತು. ರಾಜಾ ನರಸಿಂಗರಾಯನು ಲಕ್ಷ್ಮೀಪತಿಯನ್ನು ಕರಿಸಿ ವಿಚಾರಣೆಮಾಡಿ ಕಡೆಗೆ ೧೨೦೦೦ ವರಹ ದಂಡಮಾಡಿದನು. ವೆಂಕಟರಸನು ಅಷ್ಟು ಹಣ ಕೊಡಲಾರದೆ ೨೫೬ ವರಹಗಳನ್ನು ಮಾತ್ರಕೊಟ್ಟು ತನ್ನ ಗುರುಗಳಾದ ವೆಂಕಟಾಚಾರ್ಯರ ಮಧ್ಯಸ್ಥಿಕೆಯಿಂದ ಮಾಧವರಸಯ್ಯನಿಗೆ ಉಳಿದ ೧೧೭೪೪ ವರಹಗಳ ಬದಲಾಗಿ ತನ್ನ ಉಂಬಳಿ ಗ್ರಾಮವಾದ ಕೋಳಿವಾಡವನ್ನು ಆತನಿಗೆ ಕ್ರಯ ಕೊಟ್ಟನು. ಕ್ರಯ ಪತ್ರವು ಶಕ ೧೦೬೮ ಪ್ರಭವ ಮಾರ್ಗಶೀರ್ಷ ಶು ೧೨ರಲ್ಲಿ ಆಯಿತು. ಕ್ರಯವಾದ ಮೇಲೆ ಕೋಳಿವಾಡಕ್ಕೆ ೫–೬ ಕುಟುಂಬಗಳನ್ನು ಸಂಗಡ ತಗೊಂಡು ಮಾದರಸಯ್ಯನು ಬಂದನು. ಬರುವಾಗ ದಾರಿಯಲ್ಲಿ ಗದುಗಿನಲ್ಲಿ ವೀರನಾರಾಯಣ ದೇವರ ಗುಡಿಯಲ್ಲಿ ಬೀಡುಬಿಟ್ಟು ರಾತ್ರಿ ಮಲಗಿರಲು ಸ್ವಪ್ನದಲ್ಲಿ ದೇವರು ದಾಸನಾಗಿ ಬಂದು "ನೀನು ಗಳಿಸಿದ ಊರಿನಲ್ಲಿ ಸುಖದಿಂದ ನನ್ನನ್ನು ಭಜಿಸುತ್ತ ಇರು. ಕಲ್ಯಾಣವಾಗುವುದು!" ಎಂದು ಅಂದಂತಾಯಿತು. ಮರುದಿನ ದೇವರ ಸಮಾರಾಧನೆ ಮಾಡಿ ಮರುದಿನ ಅಂದರೆ ಶಾ. ಶಕ. ೧೦೬೯ನೆಯ ವಿಭವ ಸಂವತ್ಸರ ಚೈತ್ರ ಶು. ೧. ಅಶ್ವಿನೀ ನಕ್ಷತ್ರ ಮಂಗಳವಾರ ಅಮೃತಸಿದ್ಧಿ ಯೋಗದಲ್ಲಿ ಕೋಳಿವಾಡಕ್ಕೆ ಬಂದನು. ಬಳಿಕ ಕೆಲವು ದಿನಗಳಾದ ಮೇಲೆ ಗ್ರಾಮದ ಪೂರ್ವಕ್ಕೆ ಕುಲದೇವತೆಯಾದ ಮಹಾ ಮಾಯಾದೇವಿಯನ್ನು ಪಶ್ಚಿಮಕ್ಕೆ ಗ್ರಾಮದ ಮಧ್ಯಭಾಗದಲ್ಲಿ ಇಷ್ಟದೇವತೆಯಾದ ವೀರನಾರಾಯಣನನ್ನು ಪ್ರತಿಷ್ಠೆಮಾಡಿ ವೃತ್ತಿ ಹಾಕಿಕೊಟ್ಟನು.—ಈ ಪ್ರಕಾರ ಮಾಧವರಸಯ್ಯನು ಕೋಳಿವಾಡದಲ್ಲಿ ವ್ಯವಸ್ಥೆಗೊಳಿಸಿ ತನ್ನ ಮಗನಾದ ತಿಮ್ಮರಸನನ್ನು ಕೋಳಿವಾಡ

ದಲ್ಲಿಟ್ಟು ತಾನು ಮುನ್ನಿನಂತೆ ವಿಜಯನಗರಕ್ಕೆ ಹೋದನು. ಕೆಲಸ ಮಾಡುವವರು ವಿಜಯನಗರದಲ್ಲಿಯೂ ಉಳಿದವರು ಉಂಬಳಿ ಗ್ರಾಮದಲ್ಲಿಯೂ ಇರುತ್ತಿದ್ದರು. ೧೦—೧೨ ತಿಂಗಳವರೆಗೆ ಅಂದರೆ ಕೃಷ್ಣರಾಯರ ಕಾಲದವರೆಗೆ ಹೀಗೇ ನಡೆಯುತ್ತ ಬಂದಿತು. ಈ ರಾಯರ ಕಾಲದಲ್ಲಿ ನೀಲಪ್ಪಯ್ಯನು ಕೆಲಸ ಮಾಡುತ್ತಿದ್ದನು. ರಾಯರು ಇವನನ್ನು ಇತಿಹಾಸ ಲೇಖನದ ಕೆಲಸಕ್ಕೆ ನೇಮಿಸಿದ್ದರಂತೆ, ಅಲ್ಲದೆ ಗಜ ಸೇನಾಧಿಕಾರಿಯಾಗಿದ್ದನು. ಇವನ ಮಗನೇ ಗದುಗಿನ ವೀರನಾರಾಯಣಪ್ಪ ನೆಂಬ ಕವಿ.

ಕೃಷ್ಣದೇವರಾಯನು ಕಾಲವಾದಮೇಲೆ ಅರಸೊತ್ತಿಗೆ ದೌಹಿತ್ರ ಸಂತತಿಯವ ನಾದ ರಾಮರಾಜನ ಕೈಸೇರಿತು. ಇದು ನೀಲಪ್ಪಯ್ಯನಿಗೆ ಸಹನವಾಗದೆ ವಿಜಯ ನಗರ ಬಿಟ್ಟು ತನ್ನ ಉಂಬಳಿಗ್ರಾಮಕ್ಕೆ ಬಂದನು. ಮೇವುಂಡಿ ಗೌಡಮನೆತನದ ಕಾಗದಪತ್ರದಲ್ಲಿ ಕುಮಾರವ್ಯಾಸನು(ವೀರನಾರಾಯಣಪ್ಪನು)ಚಿನ್ನದ ಕೈಯತಿಮ್ಮರಸನ ಮಗನೆಂದೂ ಲಕ್ಕರಸನ ತಮ್ಮನೆಂದೂ ಬರೆದಿದೆ. ಶ್ರೀ ಹುಯಿಲಗೋಳ ನಾರಾಯಣ ರಾಯರು ಮೇವುಂಡಿಯಲ್ಲಿ ದೊರಕುವ ಕವಿಯ ವಂಶಾವಳಿಯ ಕಾಗದ ಪತ್ರಗಳ ನ್ನೋದಿ ಒಂದೆಡೆಗೆ ಹೀಗೆ ಉಲ್ಲೇಖಿಸಿದ್ದಾರೆ. ಕೋಳಿವಾಡದ ಕಾಗದ ಪತ್ರಗಳಲ್ಲಿ ವಂಶಾವಳಿಯು ಹೀಗೆ ಇದೆ:—

ಮಾಧವರಸ
|
ತಿರುಮಲ
|
ಲಕ್ಕರಸ
|
ವೀರನಾರಾಯಣ | ಕೃಷ್ಣರಸ | ಶಂಕರಸ | ತಿರುಮಲ | ಅಶ್ವತ್ಥಾಮ

ಒಂದೇಒಂದು ಮೋಡಿ ಪತ್ರದಲ್ಲಿ :—ಚಿನ್ನದ ಕೈ ಮಾದರಸಯ್ಯ
|
ಕೃಷ್ಣರಸಯ್ಯ
|
ಶಂಕರಸಯ್ಯ
|
ಬೊಮ್ಮರಸಯ್ಯ
|
ಲಕ್ಕರಸಯ್ಯ
|
ವೀರನಾರಾಯಣ | ಕೃಷ್ಣರಸ | ಶಂಕರಸ | ತಿರುಮಲ | ಅಶ್ವತ್ಥಾಮ

ಈ ಕಾಗದಗಳಿಂದ ವಂಶಾವಳಿಯು ನಿರ್ಧಾರಿತವಾಗದಿದ್ದರೂ ವೀರನಾರಾಯಣ

ನೆಂಬ ಹೆಸರಿನ ಪುರುಷನು ಲಕ್ಕರಸಯ್ಯನ ಮಗನೇ ಇರಲಿ, ತಮ್ಮನೇ ಇರಲಿ ಅಥವಾ ಮೇಲೆ ಹೇಳಿದಂತೆ ನೀಲಪ್ಪಯ್ಯನ ಮಗನೇ ಇರಲಿ, ಕೋಳಿವಾಡದ ಶಾನುಭೋಗ ಮನೆತನಕ್ಕೆ ಸಂಬಂಧಿಸಿದವನೆಂದು ಹೇಳಬಹುದು ಅಲ್ಲಿ ನಿರ್ದಿಷ್ಟವಾದ ಶಕಾಂಕವು ಮಾತ್ರ ಶುದ್ಧ ತಪ್ಪು. ಶಕ ೧೦೬೮ ರಲ್ಲಿ ವಿಜಯನಗರದ ರಾಜ್ಯವಿರಲು ಸಂಭವವಿಲ್ಲ.

ವೀರನಾರಾಯಣಪ್ಪನು ಚಿಕ್ಕಂದಿನಲ್ಲಿ ಸಕಲ ಶಾಸ್ತ್ರಾಭ್ಯಾಸ ಮಾಡಿರಬೇಕು. ಪೀಠಿಕಾಸಂಧಿಯಲ್ಲಿ

ಅರಸುಗಳಿಗಿದು ವೀರ ದ್ವಿಜರಿಗೆ
ಪರಮ ವೇದದ ಸಾರ ಯೋಗೀಶ್ವ
ರರ ತತ್ವವಿಚಾರ ಮಂತ್ರೀ ಜನಕೆ ಬುದ್ಧಿಗುಣ ॥
ವಿರಹಿಗಳ ಶೃಂಗಾರ ವಿದ್ಯಾ
ಪರಿಣತರಲಂಕಾರ ಕಾವ್ಯಕೆ
ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ ॥ ೧೧ ॥

ಎಂದು ಹೇಳಿದಂತೆ ಕವಿಯ ಪಾಂಡಿತ್ಯವು ಕಾವ್ಯಾಲಂಕಾರಾದಿಗಳಲ್ಲಿಯೂ ವೇದ ವೇದಾಂತಾದಿ ತತ್ವಶಾಸ್ತ್ರಗಳಲ್ಲಿಯೂ ವಿಶೇಷವಾದ ಪರಿಣತಿಯನ್ನು ಹೊಂದಿತ್ತು. ಮತ್ತು,

ಹಲಗೆಬಳಹನ ಹಿಡಿಯದೊಂದ
ಗ್ಗಳಿಕೆ ಪದವಿಟ್ಟಳುಪದೊಂದ
ಗ್ಗಳಿಕೆ ಪರರೊಡ್ಡವದ ರೀತಿಯ ಹಿಡಿಯದಗ್ಗಳಿಕೆ |

ಎಂದು ತಾನೇ ಹೇಳಿಕೊಂಡಂತೆ ಕವಿಯ ರಚನ ವಿದ್ಯಾಪ್ರಭುತ್ವವು ವ್ಯಕ್ತವಾಗುತ್ತದೆ. ಇಷ್ಟೆಲ್ಲ ಶಾಸ್ತ್ರಜ್ಞಾನ ಸಂಪತ್ತಿಯು ಭಕ್ತಿ ಇಲ್ಲದಿದ್ದರೆ 'ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾಶ್ರುತೇನ' ಎಂದು ಹೇಳಿದಂತೆ ಪರಮಾತ್ಮನ ಪ್ರಸಾದಕ್ಕೆ ಕಾರಣವಾಗಲಾರದೆಂಬ ಪೂರ್ಣ ಅರಿವು ಉಳ್ಳವನಾಗಿದ್ದುದರಿಂದ ನಾರಾಯಣನಲ್ಲಿ ಭಕ್ತಿಯೇ ತನ್ನ ಜೀವನದ ಜೀವಾಳವೆಂದು ಭಾವಿಸಿದ್ದನು. 'ಭಕ್ತ್ಯಾಭಾಗವತಂಶಾಸ್ತ್ರಂ ನ ಪ್ರಯುಕ್ತ್ಯಾ ಕಥಂಚನ 'ಎಂಬಂತೆ ಕುಮಾರವ್ಯಾಸನು 'ಇಲ್ಲಿ ನೋಳ್ಪುದು ಪದುಮನಾಭನ ಮಹಿಮೆ' ಎಂದು ತನ್ನ ಜೀವನದ ಸರ್ವಸ್ವವನ್ನು ಸಾರಿದ್ದಾನೆ.

ವೀರನಾರಾಯಣನ ಪ್ರಸಾದದ ಬಲದಿಂದ ಕುಮಾರವ್ಯಾಸನು ಕರ್ಣಾಟಕ ಮಹಾಭಾರತದ ಹತ್ತು ಪರ್ವಗಳನ್ನು ರಚಿಸಿದ್ದಾನೆಂದು ಗ್ರಂಥದ ಆಂತರ ಪ್ರಮಾಣಗಳಿಂದಲೂ ಐತಿಹ್ಯದಿಂದಲೂ ಗೊತ್ತಾಗುತ್ತದೆ. ಗದುಗಿನ ವೀರನಾರಾಯಣನ ದೇವಾಲಯದಲ್ಲಿ 'ಮಹಾಭಾರತದ ಕಂಬ' ಅಥವಾ ಕುಮಾರವ್ಯಾಸನ ಕಂಬವೆಂದು ರಂಗಮಂಟಪದಲ್ಲಿಯ ಒಂದು ಸ್ತಂಭವನ್ನು ಈಗಲೂ ಅಲ್ಲಿಯ ಜನರು ತೋರಿಸುತ್ತಾರೆ. ಈ ಕಂಭದ ಹತ್ತಿರನಿಂತು ಕುಮಾರವ್ಯಾಸನು ಇಡಿಯ ಭಾರತವನ್ನು ಸ್ವಯಂಸ್ಫೂರ್ತಿ

ಯಿಂದ ರಚಿಸಿದನೆಂದು ಪ್ರತೀತಿಯಿದೆ. ಮಹಾಭಾರತವಲ್ಲದೆ 'ಐರಾವತ' ವೆಂಬ ಚಿಕ್ಕಕೃಷ್ಣಭಕ್ತಿಯ ಪ್ರಸಂಗವನ್ನೂ ಈ ಕವಿಯು ರಚಿಸಿದ್ದಾನೆ. ಇವೆರಡೂ ಗ್ರಂಥಗಳು ಪ್ರಕಟವಾಗಿವೆ.

ಐರಾವತವು ಕುಮಾರವ್ಯಾಸನ ಕೃತಿಯೆಂಬಲ್ಲಿ ಕೆಲವರು ಆಕ್ಷೇಪಗೊಳ್ಳುತ್ತಾರೆ. ಅದರಲ್ಲಿ ಕುಮಾರವ್ಯಾಸನ ಮಹಾಭಾರತದ ಭಾಷೆಯ ಬಿಗುವು ಇಲ್ಲವೆಂದೂ ಬೇರೊಬ್ಬ ಸಾಧಾರಣ ಕವಿ ಕುಮಾರವ್ಯಾಸನ ಆದಿಪರ್ವದ 'ಐರಾವತ' ದ ಭಾಗವನ್ನು ತನಗೆ ತೋರಿದಂತೆ ವಿಸ್ತರಿಸಿ ಬರೆದಿರಬಹುದೆಂದೂ ಭಾವ—ಭಾಷೆಗಳಲ್ಲಿ ಕುಮಾರವ್ಯಾಸನ ಉಜ್ವಲತೆ-ಸಹಜತೆಗಳ ಅನುಭೂತಿ ಇದರಲ್ಲಿ ಆಗುವದಿಲ್ಲವೆಂದೂ ಹೇಳುತ್ತಾರೆ (ಕನ್ನಡ ಸಾಹಿತ್ಯ ಚರಿತೆ, ಪುಟ—೨೪೬) ಈ ವಿಷಯದಲ್ಲಿ ಒಂದೆರಡು ಮಾತುಗಳನ್ನು ಹೇಳುವದು ಅವಶ್ಯವೆನಿಸುತ್ತದೆ :—

೧. ಐರಾವತದ ಉಪೋದ್ಘಾತದಲ್ಲಿ ಈ ವಿಷಯವನ್ನು ಸಂಕ್ಷೇಪವಾಗಿ ಚರ್ಚಿಸಿದ್ದೇವೆ. ಇನ್ನೊಬ್ಬ ಕವಿ ಯಾವನೇ ಇರಲಿ, ಅವನು ಕುಮಾರವ್ಯಾಸನ ಆದಿಪರ್ವದಲ್ಲಿದ್ದ ಐರಾವತವನ್ನು ಆಮೂಲಾಗ್ರವಾಗಿ ಕದ್ದು ತನ್ನದೊಂದು ಹೊಸ ಕೃತಿಯನ್ನು ಮಾಡಿದನೆಂದು ತಿಳಿಯುವುದು ಆ ಕವಿಗಾಗಲಿ ಇಂಥ ವಿಮರ್ಶಕರಿಗಾಗಲಿ ಭೂಷಣವಲ್ಲ. ಆದಿಪರ್ವದಲ್ಲಿ ೨೦ ನೆಯ ಸಂಧಿಯಲ್ಲಿ ಬಂದ ಈ ಕಥೆಯು ೧೪೪ ಪದ್ಯಗಳಲ್ಲಿ ಹೇಳಲ್ಪಟ್ಟಿದೆ. ಪ್ರಕೃತ ಗ್ರಂಥದ ಪದ್ಯ ಸಂಖ್ಯೆ ३೭೫. ಅದರಲ್ಲಿ ೧ ನೆಯ ಸಂಧಿಯಲ್ಲಿ ಮೈಸೂರು ಪ್ರತಿಯ೧-೭೬ ಪದ್ಯಗಳೂ ಆಮೇಲೆ ೫-೬ ನೆಯ ಸಂಧಿಗಳಲ್ಲಿ ೭೬—೧೨೦ ಪದ್ಯಗಳೂ ೮ ನೆಯ ಸಂಧಿಯಲ್ಲಿ ೧೨೧—೧೪೪ ಪದ್ಯಗಳೂ ಪಾಠ ಭೇದದಿಂದಲೂ ಕ್ರಮ ವ್ಯತ್ಯಾಸದಿಂದಲೂ ಇಡಿಯಾಗಿಯೂ ಬರುತ್ತವೆ. ಇವುಗಳ ಸಂಖ್ಯೆ ೧೪೦ ಕ್ಕೆ ಮಿಕ್ಕುತ್ತದೆ. ಹೀಗೆ ಇಡಿಯಾಗಿ ಅಥವಾ ವ್ಯತ್ಯಾಸಮಾಡಿ ಕದ್ದು ತಾನು ಬೇರೆ ಕೃತಿಯನ್ನು ರಚಿಸಿರುವೆನೆಂದು ಹೇಳಲು ಅದಾವ ಕವಿಂಮನ್ಯನಿಗೆ ಧೈರ್ಯ ಬಂದೀತು ? ಅದರಲ್ಲಿಯೂ ಕುಮಾರವ್ಯಾಸನ ಪದ್ಯಗಳನ್ನು ಕದ್ದು ನನ್ನದೆಂದು ಹೇಳಿಕೊಂಡರೆ ವಿಮರ್ಶಕ ಜನರಾದರೂ ಸುಮ್ಮನೆ ಕೊಡುತ್ತಿದ್ದರೆ ?

೨. ಇನ್ನು ಆದಿಪರ್ವದ ೨೦ನೆಯ ಸಂಧಿಯಿಂದ ಕದ್ದ ಸುಮಾರು ೧೪೦ ಪದ್ಯಗಳು ಕುಮಾರವ್ಯಾಸನ ಉಜ್ವಲ ಸಹಜ ಭಾಷೆಯಲ್ಲಿ ಇರುವವೆಂದು ತಿಳಿಯುವುದಾದರ ಅದೇ ಸಹಜ ಭಾಷೆಯಲ್ಲಿದ್ದ ಉಳಿದ ಸುಮಾರು ೨೦೦ ಪದ್ಯಗಳು ಅವನವು ಅಲ್ಲವೆಂದು ಹೇಳಲಿಕ್ಕೆ ಗಮಕವೇನು ? ಈ ಅರ್ಧಜರತೀಯನ್ಯಾಯವು ಅನಾದರಣೀಯವು. 'ಐರಾವತದ' ३೭೫ ಪದ್ಯಗಳು ಒಂದೇ ಮಾದರಿಯ ಸಹಜ ಸರಳ ಬಂಧದಲ್ಲಿ ಇರುವವೆಂಬುದು ಓದುಗರಿಗೆ ಗೊತ್ತಾಗದೆ ಇರದು.

३. ಭಾಷೆಯ ಶೈಲಿಯಿಂದ ಗ್ರಂಥಕರ್ತನನ್ನು ಕಂಡು ಹಿಡಿಯುವ ಪಾಶ್ಚಾತ್ಯರ ಶಾಸ್ತ್ರೀಯ ರೀತಿಯಿಂದ ವಿಮರ್ಶಿಸಿ ಆ ತತ್ವಗಳ ನಿಕಷದಿಂದ ಐರಾವತವೂ, ಕುಮಾರ

ವ್ಯಾಸನದೆಂದು ಗೊತ್ತಾದ ಮಹಾಭಾರತದ ಪರ್ವಗಳೂ, ಒಂದೇ ಕರ್ತನ ಕೃತಿಗಳಾಗಿರಬೇಕೆಂದು ಸಾಹಿತ್ಯಪರಿಷತ್ತಿನ ಕನ್ನಡನುಡಿಯಲ್ಲಿ ಶ್ರೀ ಎಂ. ಜಿ. ವೆಂಕಟೇಶಯ್ಯ, ಎಮ್. ಎ. ಎಂಬ ಒಬ್ಬ ವಿಮರ್ಶಕರು ನಿರ್ಧರಿಸಿರುತ್ತಾರೆ. ಕನ್ನಡ ಗ್ರಂಥಗಳಿಗೆ ಆ ತತ್ವಗಳನ್ನು ಹಚ್ಚಿ ವಿಮರ್ಶಿಸಿದ್ದು ಇದೇ ಮೊದಲನೆಯ ಸಲ. ಈ ಪರೀಕ್ಷೆಗೆ ಸರಿಯಾಗಿ ಸಮಾಧಾನವು ಆ ಲೇಖದಲ್ಲಿ ಇರುವದು. (ಕನ್ನಡ ನುಡಿ. ೧೯೩೭.)

೪. ಒಬ್ಬನೇ ಗ್ರಂಥಕರ್ತನು ಕಾಲ, ಅಧಿಕಾರಿ, ವಿಷಯ, ಪ್ರಸಂಗಗಳನ್ನು ಅನುಲಕ್ಷಿಸಿ ಬೇರ ಬೇರೆ ಬಂಧಗಳಲ್ಲಿ ಕೃತಿಗಳನ್ನು ರಚಿಸುವುದು ಹೊಸಮಾತಲ್ಲ. ನಾಟಕಗಳಲ್ಲಿ ಭಿನ್ನ ಭಿನ್ನ ಪಾತ್ರಗಳ ಭಾಷಣಗಳು ಅವರವರಿಗೆ ತಕ್ಕಂತೆ ಭಿನ್ನಭಿನ್ನ ಬಂಧ, ಶೈಲಿಗಳಲ್ಲಿ ಇರುವುವನ್ನು ನಾವು ಕಾಣುತ್ತೇವೆ. ಈ ಐರಾವತವು ಸ್ತ್ರೀಯರಿಗೆ ನಿತ್ಯ ಪೂಜೆಯಲ್ಲಿ ಪಠಿಸಲಿಕ್ಕೆ ಅನುಕೂಲವಾಗಲೆಂದು ಕುಮಾರವ್ಯಾಸನು ತನ್ನ ಶೈಲಿಯ ಬಿಗುವನ್ನು ಹಗುರಾಗಿ ನಡಿಲಿಸಿ ಭಕ್ತಿಗ್ರಂಥವಾಗಿ ಅದನ್ನು ಬರೆದನೆಂದು ತಿಳಿಯುವುದು ಅಸಮಂಜಸವಲ್ಲ.

ಅಂತು ಐರಾವತವು ಕುಮಾರವ್ಯಾಸನ ಕೃತಿಯೆಂದೇ ನಾವು ಭಾವಿಸುತ್ತೇವೆ. ಪಂಡಿತ ಮ. ಪ್ರ ಪೂಜಾರರು ಈ ವಿಷಯದಲ್ಲಿ ಹೀಗೆ ಬರೆಯುತ್ತಾರೆ:—"ಈ ಕಾವ್ಯವನ್ನು ಓದಿ ಇದು ಕುಮಾರವ್ಯಾಸಕೃತವಲ್ಲ ಎಂದು ಖಂಡಿತವಾಗಿ ಹೇಳುವ ಧಾರ್ಷ್ಟ್ಯವು ಯಾರಿಗೂ ಆಗಲಾರವೆಂದು ನಮಗೆ ತೋರುತ್ತದೆ. ನಾಡಿನ ಸಾಹಿತ್ಯಪ್ರಿಯರಿಗೆ, ಹೆಣ್ಣು ಮಕ್ಕಳಿಗೆ, ಯಕ್ಷಗಾನದ ಆಟಕಾರರಿಗೆ ಕೀರ್ತನಕಾರರಿಗೆ ಉಪಯುಕ್ತ ವಸ್ತುವುಳ್ಳ ಕುಮಾರವ್ಯಾಸಕೃತವೆಂದು ನಾವು ಹೆಮ್ಮೆ ಪಡಬಹುದಾದ ಒಂದು ಕನ್ನಡ ಕಾವ್ಯವನ್ನು ಕನ್ನಡ ವಾಙ್ಮಯ ಭಾಂಡಾರಕ್ಕೊದಗಿಸಿರುವುದಕ್ಕೆ 'ವಿದ್ಯಾರತ್ನ' ಶ್ರೀಪಂಚಮುಖಿಯವರು ತನ್ನಡಿಗರ ಅಭಿನಂದನೆಗೆ ಪಾತ್ರರಾಗಿದ್ದಾರೆ (೧೪-೧೨-೧೯೫೦)" (*Twelve years of Kannada Research, p. 12*).

ಕುಮಾರವ್ಯಾಸನ ಆತ್ಮವೃತ್ತವನ್ನು ಕುರಿತು ನಂಬಲರ್ಹವಾದ ಬೇರೆ ಪ್ರಮಾಣಗಳು ಸಿಕ್ಕಿಲ್ಲ. ಇವನ ಮನೆತನವು ರಾಜಾಸ್ಥಾನದಲ್ಲಿ ಪರಂಪರೆಯಿಂದ ಗಜಸೇನಾಧಿಪತ್ಯ ಪದವಿಯನ್ನು ಅನುಭವಿಸುತ್ತ ಬಂದಿತ್ತು. ಕೋಳಿವಾಡದ ಶಕ ೧೪೮೫ರ ಒಂದು ಶಾಸನದಲ್ಲಿ ಇದೇ ವಂಶದ ಆನೆಯ ಸೂರ್ಯಪ್ಪಯ್ಯಗಳ ಉಲ್ಲೇಖವು ಈ ಮಾತಿಗೆ ಪೋಷಕವಾಗಿದೆ. ಹಿಂದಕ್ಕೆ ಭಾರತದ ಮೇಲೆ ಕಾವ್ಯವನ್ನು ಬರೆದಿದ್ದ ಪಂಪ ರನ್ನ ಕವಿಗಳೂ ದಂಡಾಧಿಪತಿಗಳಾಗಿದ್ದು ಆ ಪರಂಪರೆಯಂತೆ ಕುಮಾರವ್ಯಾಸನ ಮನೆತನವೂ ವೀರಸೇನಾನಾಯಕ ಪದವನ್ನು ಹೊಂದಿತ್ತು. ಅದಕ್ಕೆ ತಕ್ಕಂತೆ ಕವಿಯ ಪ್ರತಿಭೆಯು ಮಹಾಭಾರತದಲ್ಲಿ ವೀರ್ಯಯುಕ್ತವಾಗಿದ್ದು ಭಾಷೆಯ ಓಜಸ್ವಿತೆಯಲ್ಲಿ ಪ್ರತಿಫಲಿತವಾಗಿದೆ.

## ಕುಮಾರವ್ಯಾಸನ ಕಾಲ

ಕುಮಾರವ್ಯಾಸನ ಕಾಲದ ಬಗ್ಗೆ ಅನೇಕ ತರ್ಕವಿತರ್ಕಗಳು ಸಾಕಷ್ಟು ನಡೆದಿವೆ.

ಮುಖ್ಯವಾಗಿ ಅವೆಲ್ಲ ಕ್ರಿ.ಶ. ೧೨ನೆಯ ಶತಮಾನದಿಂದ ಕ್ರಿ. ಶ. ೧೬ನೆಯ ಶತಮಾನದ ಅವಧಿಯಲ್ಲಿ ಬೀಳುತ್ತವೆ. ಇವುಗಳಲ್ಲಿ ೧೨, ೧೩, ೧೪ ನೆಯ ಶತಮಾನಗಳಲ್ಲಿ ಅವನು ಬಾಳಿರಲಾರನೆಂಬುದು ಮಹಾಭಾರತದ ಭಾಷೆ ಕಥಾವಸ್ತು ನಿರೂಪಣ ಮತ್ತು ಇತರ ಉಲ್ಲೇಖಗಳಿಂದ ಸ್ಪಷ್ಟವಾಗುತ್ತದೆ. ಕೃಷ್ಣರಾಯನ ಅಪೇಕ್ಷೆಯ ಮೇರೆಗೆ

ಲೇಸೆನಿಸೆ ಮೊದಲಾ ಕುಮಾರ
ವ್ಯಾಸದಶಪರ್ವಗಳ ಹೇಳಿದ
ಸುರನದಿಯು ಯಮುನಾ ತರಂಗಿಣಿ
ಬೆರಸಿ ಹರಿವಂದದಲಿ ಕವಿಕುಂ
ಜರಕುಮಾರವ್ಯಾಸನುರುವಾಗ್ಲಹರಿಯೊಡನೀಗ
ಸರಿಯೆನಿಸಿನೀ . .. ।

ಎಂದು ಹೇಳಿದಂತೆ ಮೊದಲು ಕುಮಾರವ್ಯಾಸನು ರಚಿಸಿದ ಭಾರತದ ಹತ್ತು ಪರ್ವಗಳಾದ ಮೇಲೆ ಉಳಿದ ಎಂಟು ಪರ್ವಗಳನ್ನು ತಿಮ್ಮಣ ಕವಿಯು ರಚಿಸಿದನೆಂದು ತಿಳಿದಿದೆ. 'ನರಸೇಂದ್ರನಾತ್ಮಾಜ ಕೃಷ್ಣರಾಯ ನೃಪ' ಎಂದು ಇರುವದರಿಂದ ಕೃಷ್ಣರಾಯನು ಪಟ್ಟಕ್ಕೆ ಬಂದಮೇಲೆ (೧೫೦೯—೧೫೩೦) ಈ ಸಂಗತಿಯು ನಡೆದಿರಬೇಕು. ಅರ್ಧಕ್ಕೆ ಉಳಿದ ಭಾರತವನ್ನು ಮುಗಿಸಬೇಕಾಗಿದ್ದರೆ ಕೃಷ್ಣರಾಯನಿಗೆ, ಅರ್ಧ ಆಗಿ ಉಳಿದ ಸಂಗತಿಯು ಸ್ವಾಭಾವಿಕವಾಗಿ ಗೊತ್ತಾಗಿರಬೇಕು. ರಾಯನು ಭಾರತ ಭಾಗವತಾದಿ ಪುರಾಣಗಳಲ್ಲಿ ಅತ್ಯಂತ ನಿಷ್ಠೆಯುಳ್ಳವನಾದ್ದರಿಂದ ತನ್ನ ಕಾಲಕ್ಕೆ ಅಥವಾ ತನ್ನ ತಂದೆ ಅಣ್ಣಂದಿರ ಕಾಲಕ್ಕೆ ಅಂದರೆ ತನ್ನ ತಿಳುವಳಿಕೆಯಲ್ಲಿಯೇ ನಡೆದು ಉಳಿದ ಮಹಾಭಾರತವನ್ನು ಮುಂದುವರಿಸಿ ಮುಗಿಸಬೇಕೆಂದು ಪ್ರಯತ್ನಿಸಿರಬೇಕು. ಕೋಳಿವಾಡದ ಒಂದು ಬಖೈರಿನಲ್ಲಿ ಕೃಷ್ಣದೇವರಾಯನ ಗಜಸೇನಾಧಿಕಾರಿಯಾದ ನೀಲಪ್ಪಯ್ಯನು ಗದುಗಿನ ವೀರನಾರಾಯಣಪ್ಪನ ತಂದೆಯೆಂದು ಹೇಳಿದಮಾತು ಈ ಊಹೆಗೆ ಬಲಕೊಡುತ್ತದೆ. ಬಖೈರಿನ ಮಾತದಂತಿರಲಿ. ಅಚ್ಯುತರಾಯನ ಶಾಸನವು ಶಕ೧೪೬೧, ವಿಕಾರಿ ಸಂವತ್ಸರದ್ದು. (ಕ್ರಿ.ಶ. ೧೫೩೯). ಇದರಲ್ಲಿ 'ಕವಿ ಕುಮಾರವ್ಯಾಸಂಗೆ ಪ್ರಸನ್ನನಾದ ಗದುಗು ಶ್ರೀ ವೀರನಾರಾಯಣನ ಸನ್ನಿಧಿಯಲಿ' ಎಂದು ಬರೆದಿದೆ. ವೀರನಾರಾಯಣ ದೇವರು ಕುಮಾರವ್ಯಾಸನಿಗೆ ಪ್ರಸನ್ನನಾದ ಸಂಗತಿಯು ಬಹಳ ಹಳೆಯದಾಗಿರಲಾರದು. ಕೃಷ್ಣರಾಯನಿಗೂ ಅವನ ತಮ್ಮನಾದ ಅಚ್ಯುತರಾಯನಿಗೂ ಸ್ವಯಂ ತಿಳಿದಿರುವಂತೆ ಸ್ವಲ್ಪಕಾಲ ಮುಂಚೆ ಇದು ಜರುಗಿರಬೇಕು. ಅಂದರೆ ಕುಮಾರವ್ಯಾಸನ ಭಕ್ತಿವಿರಕ್ತಿಗಳೂ ಅವನ ಕೃತಿಯೂ ಜನರಲ್ಲಿ ಮನೆಮಾತಿನ ವಿಷಯಗಳಾಗಿರಬೇಕು. ಹಿಂದಕ್ಕೆ ನೂರಾರು ವರ್ಷಗಳ ಹಿಂದೆ ಜರುಗಿದ ಸಂಗತಿಯನ್ನು ಒಮ್ಮೆಲೆ ಈಗ ಶಾಸನದಲ್ಲಿ ಉಲ್ಲೇಖಿಸುವುದು ಸ್ವಾಭಾವಿಕವಾಗಿ ತೋರಲಾರದು. ಈ ವಿಷಯದಲ್ಲಿ ಇನ್ನೂ ಸ್ಪಷ್ಟವಾದ ಪ್ರಮಾಣವನ್ನು ಉಲ್ಲೇಖಿಸಬಹುದು. ಕುಮಾರವ್ಯಾಸನು ಮಹಾಭಾರತವನ್ನು ರಚಿಸಿ ಶ್ರೀವ್ಯಾಸರಾಯ ಸ್ವಾಮಿಗಳಿಗೆ ತೋರಿಸಿದನೆಂದೂ ಅವರು 'ಅರಸುಗಳಿ

ಗಿದು ವೀರ' ಎಂಬ ಪದ್ಯವನ್ನು ರಚಿಸಿ ತಮ್ಮ ಅಭಿಪ್ರಾಯವನ್ನು ವ್ಯಕ್ತಮಾಡಿ ಕವಿಗೆ 'ಕುಮಾರವ್ಯಾಸ' ಎಂಬ ಅಂಕಿತವನ್ನು ಕೊಟ್ಟರೆಂದೂ ಐತಿಹ್ಯವಿದೆ. ಇದಕ್ಕೆ ತಕ್ಕಂತೆ ಪುರಂದರದಾಸರು

'ಹರಿಶರಣರೆನ್ನ ಮನೆಯ ಮೆಟ್ಟಲು ಮನೆ| ಪರಮಪಾವನ್ನವಾಯಿತು ಆ ಆ ಆ ಆ!
ಭಾರತ ಆಗಮಗೋಚರವೆಂದು ವಿರಚಿಸಿ ಮನುಜರಿಗೆ ಗೋಚರವಪ್ಪಂತೆ|
ವೀರ ನಾರಾಯಣ ನೀ ಕವಿಯೆನಿಸಿದೆ ಕು| ಮಾರವ್ಯಾಸನಿಂದ ಭಾರತ ವಿರಚಿಸಿದೆ।...
ಭಾರತ ಮಲ್ಲ ಗದುಗಿನ ವೀರನಾರಾಯಣನು ಗಡ ಪುರಂದರ ವಿಠಲ। ..

ಎಂದು ತಮ್ಮ ಒಂದು ಸುಳಾದಿಯಲ್ಲಿ ಕುಮಾರವ್ಯಾಸನು ತಮ್ಮ ಮನೆಗೆ ಬಂದುದನ್ನೂ ಆತನು ತನ್ನ ಭಾರತಕ್ಕೆ ಶ್ರೀಕೃಷ್ಣನೇ 'ವೀರ'ನೆಂದು ಹೇಳಿದ್ದು ಶಾಸ್ತ್ರ ಸಮ್ಮತವೆಂದೂ ಹೇಳಿದ್ದಾರೆ. ಅಂತು ಕುಮಾರವ್ಯಾಸನು, ಶ್ರೀ ವ್ಯಾಸರಾಯಸ್ವಾಮಿಗಳು ಮತ್ತು ಪುರಂದರದಾಸರ ಸಮಕಾಲಿಕನೆಂದು ಧಾರಾಳವಾಗಿ ಹೇಳಬಹುದು.

ಇನ್ನು ದ್ರೌಪದೀ ಸ್ವಯಂವರದ ಮಂಟಪದ ವರ್ಣನೆಯು ಅಬ್ದುಲ್‌ರಜಾಕನು ೨ನೆಯ ದೇವರಾಯನ ಕಾಲದಲ್ಲಿ ಅರಮನೆಯ ಮಂಟಪವನ್ನು ನೋಡಿ ಬರೆದಿಟ್ಟ ವರ್ಣನೆಯನ್ನು ಹೋಲುತ್ತದಾದ್ದರಿಂದ ಕುಮಾರವ್ಯಾಸನು ಅರಮನೆಯ ಮಂಟಪವನ್ನು ನೋಡಿ ದ್ರೌಪದೀ ಸ್ವಯಂವರದ ಮಂಟಪವನ್ನು ವರ್ಣಿಸಿರಬೇಕೆಂದು ಹೇಳಿ ೨ನೆಯ ದೇವರಾಯನ ಕಾಲದಲ್ಲಿ ಕುಮಾರವ್ಯಾಸನಿದ್ದಿರಬೇಕೆಂದು ಕೆಲ ವಿಮರ್ಶಕರು ಬರೆದಿದ್ದಾರೆ. ಆದರೆ ಕೃಷ್ಣದೇವರಾಯನ ಕಾಲದಲ್ಲಿಯೂ ಅರಮನೆಯ ಮಂಟಪವು ಅದೇ ಅಥವಾ ಇನ್ನೂ ಹೆಚ್ಚಿನ ಅಲಂಕಾರಾದಿಗಳಿಂದ ಅಲಂಕೃತವಾಗಿರಬೇಕಷ್ಟೇ! ಆದರೆ ಕುಮಾರವ್ಯಾಸನು ರಾಜಾಶ್ರಯದಲ್ಲಿರದೆ(ಒಂದು ವೇಳೆ ರಾಜಾಶ್ರಯದಲ್ಲಿದ್ದರೂ ಸಹ) ವೀರನಾರಾಯಣನ ಸನ್ನಿಧಾನದಲ್ಲಿ ಸ್ವಪ್ರತಿಭೆಯಿಂದಲೂ ದೇವರ ಅನುಗ್ರಹದಿಂದಲೂ ಗ್ರಂಥವನ್ನುರಚಿಸಿದ್ದರಿಂದ ಈ ಮೇಲಿನ ತರ್ಕವು ಸಮಂಜಸವಾಗಲಾರದು.

ಬೇರೆ ಕೆಲವರು ಭಾಷೆಯಿಂದಲೂ ಹೊಸಣ, ಸೇವುಣ, ತೇಜಿ ಮೊದಲಾದ ಶಬ್ದ ಪ್ರಯೋಗಗಳಿಂದಲೂ ಅಲ್ಲಲ್ಲಿ ನಿರ್ದಿಷ್ಟವಾದ ಧಾರ್ಮಿಕ ಸನ್ನಿವೇಶಗಳಿಂದಲೂ ೧೩–೧೪ನೆಯ ಶತಮಾನಕ್ಕೆ ಈ ಕವಿಯ ಕಾಲವನ್ನು ಒಯ್ಯುತ್ತಾರ. ಇವಾವುವೂ ನಿರ್ಧಾರಕ ಪ್ರಮಾಣಗಳಾಗಲಾರವಾದ್ದರಿಂದ ಆ ವಿಷಯವನ್ನು ಇಲ್ಲಿ ಹೆಚ್ಚು ಚರ್ಚಿಸುವುದು ಅನವಶ್ಯಕ. ಚಾಮರಸ-ಕುಮಾರವ್ಯಾಸರ ಸಮಕಾಲಿಕತ್ವವೂ ಭದ್ರವಾದ ತರ್ಕ ಸರಣಿಯ ಮೇಲೆ ನಿಂತಿಲ್ಲ. ಈ ಅಂಶವನ್ನು ಹೇಳುವ ವೀರಶೈವ ಗ್ರಂಥಗಳು ಗುರುರಾಜ ಚಾರಿತ್ರ (ಸು. ೧೬೫೦), ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರ (ಸು. ೧೬೭೨), ಚೋರಬಸವ ಚರಿತ್ರೆ (ಕ್ರಿ.ಶ. ೧೭೬೩) ಗಳು ೧೬–೧೭ನೆಯ ಶತಮಾನದ ಅನಂತರದಲ್ಲಿ ಹುಟ್ಟಿದವು. ಕವಿಯ ಕಾಲದ ಸಮಸಾಮಯಿಕ ಪ್ರಮಾಣಗಳು ಹೆಚ್ಚು ಪ್ರಬಲವಾದ್ದರಿಂದ ಅವೇ ವಿಶ್ವಾಸಾರ್ಹವಾಗಿವೆ. ಉಳಿದವು ಪೋಷಕ ಪ್ರಮಾಣವಿಲ್ಲದಿರುವಾಗ ವಿರೋಧ ಬಂದರೆ ತ್ಯಾಜ್ಯವೆಂದು ಬೇರೆ ಹೇಳಬೇಕಾಗಿಲ್ಲ. ಇದಲ್ಲದೆ

ಚಾಮರಸ–ಕುಮಾರವ್ಯಾಸರ ವಿಷಯದ ಐತಿಹ್ಯದಲ್ಲಿಯೂ ಅನೇಕ ವಿಸಂಗತ ಅಂಶಗಳು ಇರುತ್ತವೆ. ಅವುಗಳ ಚರ್ಚೆಯನ್ನು ವಿದ್ವಾಂಸರು ಮುಂಚೆಯೇ ಮಾಡಿದ್ದಾರಾದ್ದರಿಂದ ಆ ವಿಷಯವನ್ನು ಇಲ್ಲಿ ಮತ್ತೆ ಎತ್ತುವದಿಲ್ಲ.

ಶ್ರೀಮುಗಳಿಯವರ 'ಕನ್ನಡ ಸಾಹಿತ್ಯ ಚರಿತ್ರೆ' ಯಲ್ಲಿ ಕ್ರಿ. ಶ. ೧೪೨೪ರಲ್ಲಿ ರಚಿತವಾದ ಭಾಸ್ಕರ ಕವಿಯ ಜೀವಂಧರ ಚರಿತೆಯಲ್ಲಿ ಕುಮಾರವ್ಯಾಸ ಭಾರತದ ಕಾವ್ಯ ಪ್ರಭಾವವು ಕಂಡುಬರುತ್ತದಾದ್ದರಿಂದ ಕುಮಾರವ್ಯಾಸನ ಕಾಲವು ೧೫ ನೆಯ ಶತಮಾನದ ಪೂರ್ವಾರ್ಧದಲ್ಲಿ ಅಂದರೆ ಕ್ರಿ. ಶ. ೧೪೦೦ ರ ಸುಮಾರಕ್ಕಿರಬೇಕೆಂದು ಹೇಳಿದೆ. ಇವೆರಡೂ ಗ್ರಂಥಗಳಿಗೆ ಮೂಲ ಗ್ರಂಥವು ಉಪಜೀವ್ಯವಾಗಿದ್ದಿರಬಹುದೆಂದು ತಿಳಿಯಲು ಅಭ್ಯಂತರವಿಲ್ಲವೆಂಬ ಅಂಶವೂ ಅಲ್ಲಿ ಹೇಳಲ್ಪಟ್ಟಿದೆ. ಕಾವ್ಯಭಾಗಗಳನ್ನು ಆಮೂಲಾಗ್ರವಾಗಿ ಕೊಟ್ಟು ಈ ಹೋಲಿಕೆಗಳನ್ನು ತೋರಿಸಿದ್ದರೆ ಬಹಳ ಉಪಕಾರವಾಗುತ್ತಿತ್ತು. ಏನೇ ಇರಲಿ, ಇದೂ ಸಾವಕಾಶ ಪ್ರಮಾಣವಾಯಿತು. ಬಾಯಿಬಿಚ್ಚಿ ಪುರಂದರದಾಸರ ಸಮಕಾಲೀನನೆಂದು ಹೇಳುವ ದಾಸರ ಪದವು ನಿರವಕಾಶ ಪ್ರಮಾಣವು. ಈ ಪದವು ಉತ್ತರ ಕರ್ನಾಟಕ, ಮದ್ರಾಸ್, ಹೈದ್ರಾಬಾದ ಮತ್ತು ಮೈಸೂರು ಭಾಗಗಳಲ್ಲಿ ಮೊದಲಿನಿಂದಲೂ ಪ್ರಚಾರದಲ್ಲಿ ಇದೆ. ಪುರಂದರದಾಸರ ಕೃತಿಗಳ ಉಡುಪಿಯ ಪ್ರತಿಯಲ್ಲಿ ಈ ದಾಸ–ಕವಿಗಳ ಸಮಾಗಮದ ಪದ್ಯವು ಎಂದೋ ಮುದ್ರಿತವಾಗಿದೆ. ಇದನ್ನು ಅಲ್ಲಗಳೆಯಲಿಕ್ಕೆ ಬರುವದಿಲ್ಲ. ಇನ್ನು ಕುಮಾರವ್ಯಾಸನ ಭಾಷೆಯನ್ನು ವಿಮರ್ಶಿಸಿದರೆ ಅದು ಹಳಗನ್ನಡ ಹೊಸಗನ್ನಡ ಮಧ್ಯವರ್ತಿಯಾದ ನಡುಗನ್ನಡವು ರೂಪುಗೊಳ್ಳುವ ಸ್ಥಿತ್ಯಂತರದ ಕಾಲದ್ದಿರಬೇಕೆಂದೂ ಅದರ ಮುಂದಿನ ಹೆಜ್ಜೆಯೇ ಹರಿದಾಸರ ಭಾಷೆಯಾಗಿರಬೇಕೆಂದೂ ನಾವು ನಮ್ಮ 'ಹರಿದಾಸ ಸಾಹಿತ್ಯ' ದಲ್ಲಿ (ಪುಟ ೨೧೮) ತೋರಿಸಿದ್ದೇವೆ.

ಅಂತು ಮೇಲೆ ಹೇಳಿದಂತೆ ನಿರವಕಾಶ ಪ್ರಮಾಣಗಳಿಂದ ಕುಮಾರವ್ಯಾಸನು ವ್ಯಾಸರಾಯ ಪುರಂದರದಾಸರ ಸಮಕಾಲಿಕನಾಗಿ ಕೃಷ್ಣದೇವರಾಯನು ಪಟ್ಟಕ್ಕೆ ಬರುವ ಮುಂಚೆಯಾಗಲಿ ಅಥವಾ ತತ್ಕಾಲದಲ್ಲಿಯಾಗಲಿ ಇದ್ದಿರಬೇಕು. ಅಂದರೆ ಅವನ ಕಾಲವು ಸುಮಾರು ೧೪೮೦—೧೫೨೦ ಆಗಿರಬಹುದು.

## ಮತ—ಧರ್ಮ

ಕುಮಾರವ್ಯಾಸನು ಮೇಲೆ ಹೇಳಿದಂತೆ ವೀರನಾರಾಯಣನ ಪರಮಭಕ್ತನು. ಶುಕಾಚಾರ್ಯರು ಪರೀಕ್ಷಿತ ಮಹಾರಾಜನಿಗೆ ಉಪದೇಶಿಸಿದ ಭಾಗವತ ಪುರಾಣವು ಭಕ್ತಿ ಪ್ರಧಾನವಾದ ಗ್ರಂಥವಿದ್ದಂತೆ ಕುಮಾರವ್ಯಾಸನ ಮಹಾ ಭಾರತವೂ 'ತಿಳಿಯ ಹೇಳುವೆ ಕೃಷ್ಣಕಥೆಯನು। ಇಳೆಯ ಜಾಣರು ಮೆಚ್ಚುವಂತಿರೆ। ನೆಲೆಗೆ ಪಂಚಮ ಶ್ರುತಿಯನೊರೆವೆನು ಕೃಷ್ಣ ಮೆಚ್ಚಲಿಕೆ।' ಎಂದು ಹೇಳಿದಂತೆ ಮುಖ್ಯವಾಗಿ ಶ್ರೀಕೃಷ್ಣ ಕಥೆಯ ಹೊತ್ತಿಗೆ ಇರುತ್ತದೆ. ದ್ವೈತಾದ್ವೈತ ವಿಶಿಷ್ಟಾದ್ವೈತ ಮತಗಳ ಎಲ್ಲ ಆಚಾರ್ಯರೂ ಅಥವಾ ಅವರ ಶಿಷ್ಯರೂ ಶ್ರೀಮದ್ಭಾಗವತವನ್ನು ತಂತಮ್ಮ ಮತ

ಗ್ರಂಥವೆಂದು ತಿಳಿಯುವಂತೆ ಈ ಮಹಾಭಾರತದಲ್ಲಿಯೂ ವಿದ್ವಾಂಸರು ವಿಶಿಷ್ಟ ಮತದ ತತ್ವಗಳನ್ನು ಆಯ್ದು ಕುಮಾರವ್ಯಾಸನು ಆಯಾ ಮತದವನಿರಬೇಕೆಂದು ಅಭಿಪ್ರಾಯ ಪಟ್ಟಿದ್ದಾರೆ. ಇವನು ದ್ವೈತಿಯೂ ಅಲ್ಲ, ಅದ್ವೈತಿಯೂ ಅಲ್ಲ, ಕೇವಲ ಭಾಗವತ ಸಂಪ್ರದಾಯದವನೆಂದು ಕೆಲವರೂ ಇವನ ಮಾತುಗಳು ರಾಮಾನುಜೀಯ ಮತಕ್ಕೆ ಹೊಂದುತ್ತವೆಂದು ಬೇರೆಯವರೂ ಬರೆದಿದ್ದಾರೆ. ಇನ್ನು ಇವನು ಶಿವಸರ್ವೋತ್ತಮತ್ವವಾದಿಯೋ ವಿಷ್ಣುಸರ್ವೋತ್ತಮತ್ವವಾದಿಯೋ ಎಂಬ ಬಗ್ಗೆ ಕೆಲವು ಲೇಖಕರು ಚರ್ಚಿಸಿರುವರು. ಈ ವಿಷಯದಲ್ಲಿ ಒಂದೆರಡು ಸಾರಭೂತವಾದ ಮಾತುಗಳನ್ನು ಅವನ ಗ್ರಂಥದಿಂದ ಉದ್ಧರಿಸಿ, ಕವಿಯ ಮತವು ಯಾವುದಿರಬೇಕೆಂಬುದನ್ನು ವಾಚಕರೇ ತಿಳಿದುಕೊಳ್ಳಬೇಕೆಂದು ಕೋರುತ್ತೇವೆ.

ಉಪಕ್ರಮೋಪಸಂಹಾರಾ ಅಭ್ಯಾಸೋ ಅಪೂರ್ವತಾ ಫಲಂ |
ಅರ್ಥವಾದೋಪ ಪತ್ತೀಚ ಲಿಂಗಂ ತಾತ್ಪರ್ಯ ನಿರ್ಣಯೇ ||

ಎಂಬ ಮೀಮಾಂಸಕರ ಪ್ರಸಿದ್ಧವಾದ ನಿರ್ಣಾಯಕ ಲಿಂಗಗಳಿಂದ ಮಹಾಭಾರತವನ್ನು ವಿಮರ್ಶಿಸಿ,

ನಿರ್ಣಯಃ ಸರ್ವಶಾಸ್ತ್ರಾಣಾಂ ಸದೃಷ್ಟಾಂತೋಹಿ ಭಾರತೇ |
ಕೃತೋ ವಿಷ್ಣುವಶತ್ವಂ ಹಿ ಬ್ರಹ್ಮಾದೀನಾಂ ಪ್ರಕಾಶಿತಂ |
ಯತಃ ಕೃಷ್ಣವಶೇ ಸರ್ವೇ ಭೀಷ್ಮಾದ್ಯಾಃ ಸಮ್ಯಗೀರಿತಾಃ

(ಮ. ತಾ. ನಿರ್ಣಯ. ೨-೧೨-೧೩)

ಆದ್ಯಂತಯೋರಿತ್ಯವದತ್ಸ ಯಸ್ಮಾದ್ವ್ಯಾಸಾತ್ಮಕೋ ವಿಷ್ಣುರುದಾರ ಶಕ್ತಿಃ।
ತಸ್ಮಾತ್ಸಮಸ್ತಾ ಹರಿಸದ್ಗುಣಾನಾಂ ನಿರ್ಣೀಯತೇ ಭಾರತಗಾ ಕಥೈಷಾ ||

(ಸದರ ೨, ೭೦)

ಎಂದು ಮೂಲ ಭಾರತದ ವಿಮರ್ಶೆಯಲ್ಲಿ ಶ್ರೀಮಧ್ವಾಚಾರ್ಯರು ಹೇಳಿದಂತೆ ಕುಮಾರವ್ಯಾಸನೂ ತನ್ನ ಗ್ರಂಥವು 'ಕೃಷ್ಣಕಥೆ' ಎಂದು ಹೇಳಿದ್ದಾನೆ. ವಿಷ್ಣು-ಕೃಷ್ಣ ಪಾರಮ್ಯವನ್ನು ಹೇಳುವ ಈ ಗ್ರಂಥವು ಶುದ್ಧ ವೈಷ್ಣವ ಗ್ರಂಥವೇ ಆಗಿರಬೇಕಾದ್ದರಿಂದ ಮಧ್ಯದಲ್ಲಿ 'ಶಿವಶಿವಾ' 'ಹರಹರ' ಎಂಬ ಆಶ್ಚರ್ಯದ್ಯೋತಕ ಪದಗಳಿಂದ 'ಹರಿಹರ ವಿಭೇದವಂ ಮಾಳ್ಪವನ ಗತಿ 'ಎಂಬಲ್ಲಿ ಹರಿಹರ ಭೇದವಿಲ್ಲದಂತೆ ಆಪಾತತಃ ತೋರುವ ಪದಗಳಿಂದ ಕವಿಯು ಅನ್ಯ ದೇವತೆಗಳಿಗೆ ಸರ್ವೋತ್ತಮ ಸ್ಥಾನವನ್ನು ಕೊಡುತ್ತಾನೆಂದು ತಿಳಿಯುವುದು ಯುಕ್ತವಾಗುವದಿಲ್ಲ. ಶ್ರೀ ಭಾಗವತದಲ್ಲಿ ಹೇಳಿದಂತೆ ಹರಿಯಲ್ಲಿ ವಿಷ್ಣು ಇದ್ದು ತಾನೇ ಸ್ವರೂಪದಿಂದ ಸ್ಥಿತಿಯನ್ನೂ ಹರ ಬ್ರಹ್ಮ ಇವರಲ್ಲಿ ಅಂತರ್ಯಾಮಿ ರೂಪದಿಂದ ಇದ್ದು ಸೃಷ್ಟಿ ಸಂಹಾರಾದಿಗಳನ್ನೂ ಮಾಡುತ್ತಾನೆ ಎಂಬ ಸಿದ್ಧಾಂತಕ್ಕನುಗುಣವಾಗಿ ವಿಷ್ಣುವಿನ ಈ ರೂಪಗಳಲ್ಲಿ ವಿಭೇದವನ್ನು ಎಣಿಸಬಾರದೆಂಬುದೇ ಕವಿಯ ತಾತ್ಪರ್ಯವು. ಪ್ರಹ್ಲಾದ ಕೃತ ವಿಷ್ಣುಸ್ತುತಿ, ದ್ರೌಪದೀ ಕೃತ ಕೃಷ್ಣಸ್ತುತಿ, ಸನತ್ಸುಜಾತೀಯ, ಭೀಷ್ಮಕೃತ ವಿಷ್ಣುಸ್ತವ ಮುಂತಾದ

ಸ್ಥಳಗಳಲ್ಲಿ ವಿಷ್ಣುವೇ ಸರ್ವೋತ್ತಮ ದೇವತೆಯೆಂದು ಹೊಗಳಲ್ಪಟ್ಟಿದ್ದಾನೆ. ಈ ನಿರವಧಿಕವಾದ ಸರ್ವೋತ್ತಮತ್ವವು ಬ್ರಹ್ಮಾದಿ ದೇವತೆಗಳಿಗೆ ತಾರತಮ್ಯೋಪೇತವಾದ ನೀಚತ್ವವನ್ನು ಹೇಳಿದರೇನೆ ಸಂಗತವಾಗುತ್ತದೆ; ಇಲ್ಲದಿದ್ದರೆ ಇಲ್ಲ. ಈ ತಾರತಮ್ಯೋಪೇತವಾದ ಸರ್ವೋತ್ತಮತ್ವಜ್ಞಾನವಿದ್ದರೇನೆ ನಿರೌಪಧವಾದ ವಿಷ್ಣುಭಕ್ತಿಯು ಯಥಾರ್ಥವಾಗುತ್ತದೆ. 'ಮಾಹಾತ್ಮ್ಯಜ್ಞಾನ ಪೂರ್ವಸ್ತು ಸುದೃಢಃ ಸರ್ವತೋಧಿಕಃ। ಸ್ನೇಹೋಭಕ್ತಿರಿತಿ ಪ್ರೋಕ್ತಸ್ತಯಾ ಮುಕ್ತಿರ್ನಚಾನ್ಯಥಾ॥ ಎಂಬಂತೆ ಭಕ್ತಿಯಲ್ಲಿ ಜ್ಞಾನಸ್ನೇಹಗಳ ಸಮಾವೇಶವಾಗಿರಬೇಕು.

ವಿಷಯ ನಿರೂಪಣೆಯಲ್ಲಿ ಕಥಾ ಸಂದರ್ಭಕ್ಕನುಗುಣವಾಗಿ ಕಿರಾತಾರ್ಜುನೀಯಾದಿ ಪ್ರಸಂಗಗಳಲ್ಲಿ ಶಿವಪ್ರಶಂಸೆಯ ಭಾಗವು ಬಂದರೆ ಈ ಮೇಲಿನ ಸಿದ್ಧಾಂತಕ್ಕೆ ಯಾವ ಬಾಧೆಯೂ ಬರುವದಿಲ್ಲ.

....ಪೇಳುವೆನು ಕೃಷ್ಣನ | ಪರಮ ಲೀಲಾ ಲಲಿತ
ಚರಿತವನೆಂದನಾ ಭೀಷ್ಮ ॥
ಘನರಜೋಗುಣದಲ್ಲಿ ಚತುರಾ
ನನು ತಮೋಗುಣದಲ್ಲಿ ಶಂಕರ
ನೆನಿಸಿ ಸತ್ವಗುಣಾನುಗತಿಯಲಿ ವಿಷ್ಣುವೆಂದೆನಿಸಿ ॥
ಘನ ಜಗನ್ಮಯನಾಗಿ ಸರ್ವಾ—
ತ್ಮನು ಮಹೇಶ್ವರನೆನಿಪನೀತನ
ನೆನಹನೀತನ ನಿಜವನರಿವ ಮಹಾತ್ಮನಾರೆಂದ ॥

ಎಂಬಲ್ಲಿ ಹರಬ್ರಹ್ಮರು ಶ್ರೀಕೃಷ್ಣನ ಅಂತರ್ಯಾಮಿ ರೂಪಗಳೇ ಎಂದು ತಿಳಿಯಬೇಕು. 'ಭ್ರಮೆಯ ಭುಜಗನೋ ರಜ್ಜುವೊ' ಎಂಬ ಪದ್ಯದಲ್ಲಿ ಜೀವಜಗತ್ತು ಪರಮಾತ್ಮರು ಸತ್ಯವೋ ಮಿಥ್ಯೆಯೋ ಎಂಬ ವಿಚಾರವು ಅಜ್ಞರಿಗೆ ಏಕೆ? 'ಚೈದ್ಯಭೂಪತಿ ಕುಮತಿ ಕಪಿಗೇಕಮಲಮಾಣಿಕವೆಂದನಾಭೀಷ್ಮ' (ಸಭಾ, ೧೦, ೧೧) ಈ ವಿಚಾರದಲ್ಲಿ ಮಿಥ್ಯಾಜ್ಞಾನಿಗೆ ಯಥಾರ್ಥವಾದ ಸತ್‌ಜ್ಞಾನವು ಹುಟ್ಟುವುದೆ ಎಂದು ಪ್ರಶ್ನಿಸಿದ್ದಾನೆ. ಮೂವತ್ತಾರು ತತ್ವಗಳಲ್ಲಿ ಅಂತರ್ಯಾಮಿ ನಿರ್ಲಿಪ್ತನಾಗಿದ್ದ ಪರಮ ಚೇತನನು ಸತ್ಯನು. 'ಈ ದುರಾತ್ಮಕನೆತ್ತಬಲ್ಲನು ಬೀದಿಯಲಿ ಬಿದ್ದಿದೆಯೆ ಬೊಮ್ಮ ಎಂದನಾ ಭೀಷ್ಮ' (ಸದರ ೧೩) ಅಚಿಂತ್ಯ ಮಹಿಮೆಯುಳ್ಳ ಕೃಷ್ಣನು ಸರ್ವವೂ ಮಿಥ್ಯೆಯೆಂದು ಹೇಳುವ ಮಿಥ್ಯಾವಾದಿಗೆ ನಿಲುಕಲಾರನು.

ಹೊಳೆವ ಜಗದಲಿ ಹೊಳೆದು ತ |
ನ್ನೊಳಗಳಿದು ತಾನಾಗುಳಿದಬೊಮ್ಮ ಕೇ
ಳಳಿವು ಹೊರುವುದೆ ನಿತ್ಯಶುದ್ಧನೊಳೆಂದನಾಭೀಷ್ಮ ॥—೧೬

ಸತ್ಯಭೂತವಾದ ಜಗತ್ತಿನಲ್ಲಿ ಅಂತರ್ಯಾಮಿಯಾಗಿದ್ದು ಕಡೆಗೆ ತನ್ನೊಳಗೆ ಜಗತ್ತನ್ನು ಲಯಮಾಡಿಸಿಕೊಂಡು ಏಕಮೇವ ಅದ್ವಿತೀಯ ಸ್ವತಂತ್ರ ವಸ್ತುವಾಗಿ ಉಳಿಯುವ

ನಿತ್ಯಶುದ್ಧ ಪರಮಾತ್ಮನಿಗೆ ನಿಂದಾದಿಗಳು ಕೂಡುವವೇ ಎಂದು ಹೇಳಿರುವದರಿಂದ ಕುಮಾರವ್ಯಾಸನ ಮತದಲ್ಲಿ ಜಗತ್ತು, ಜೀವ, ಪರಮಾತ್ಮರು ಸತ್ಯವೆಂದೇ ಹೇಳಬೇಕಾಗುತ್ತದೆ. ಸ್ವರೂಪಾನಂದಾನುಭವದ ಹೊಳಹಿನಲ್ಲಿ ಜೀವಪರಮಾತ್ಮರಿಬ್ಬರೂ ಏಕರೂಪರಾಗಿದ್ದಂತೆ ವರ್ಣನೆಗಳು ಬಂದಾಗ ಭಾಗವತ ಭಾರತಾದಿ ಶಾಸ್ತ್ರಗಳಂತೆ ನಿರ್ಣಾಯಕ ಅಂಶಗಳಿಂದ 'ನೇತಿನೇತೀತ್ಯತತ್ತ್ವ್ಯಜನ್' ಎಂಬಂತೆ, ಅಸಾರಭೂತವಾದ ಜಗತ್ತಿನಲ್ಲಿ ಸಾರಭೂತನು ಪರಮಾತ್ಮನೊಬ್ಬನೇ ಎಂದು ಅರ್ಥಮಾಡಬೇಕು. ಸಾದೃಶ್ಯ ಮತ್ತೈಕ್ಯ ಸ್ಥಾನೈಕ್ಯಗಳಿಂದ ಈ ಅಭೇದವ್ಯವಹಾರವನ್ನು ನಿರ್ವಹಿಸಬೇಕು. ಈ ಅನುಸಂಧಾನದಿಂದ ಕವಿಯ ಎಲ್ಲ ಮಾತುಗಳನ್ನು ಭಕ್ತರು ಸಮನ್ವಯ ಮಾಡಿಕೊಳ್ಳಬಹುದು. ಯಾಕೆಂದರೆ ಶುದ್ಧ ಭಕ್ತಿಯ ರಂಗದಲ್ಲಿ ಅದ್ವೈತಕ್ಕೆ ಯಾವ ವಿಧದ ಸ್ಥಾನವೂ ದೊರಕಲಾರದು.

ಕವಿಯ ಭಕ್ತಿಮಾರ್ಗವು ಯಾವ ತತ್ವಜ್ಞಾನದ ಮೇಲೆ ನಿಂತಿದೆಯೆಂಬುದನ್ನು ಸಾಮಾನ್ಯವಾಗಿ ಮೇಲೆ ಹೇಳಿರುವೆವು ಅವನು ತನ್ನ ಗ್ರಂಥದಲ್ಲಿ

> ಗುರುಮಧ್ವರಾಯ, ನಂದಮುನಿ, 'ಸಾಕ್ಷಾದ್ದೇವ ಮಧ್ವರ
> ತಂದೆಯನು' ರುಜುಗುಣದ ಮುಖ್ಯಪ್ರಾಣದೇವನನೂ ॥ (ಆದಿಪರ್ವ)

ಎಂದು ಭೀಮನ ಉತ್ಪತ್ತಿಯನ್ನು ಹೇಳುವಾಗ ಆಡಿದ ವಚನ ಇತ್ಯಾದಿಗಳನ್ನು ನೋಡಿದರೆ ಮಧ್ವಾಚಾರ್ಯರ ಮತವನ್ನು ಈ ಕವಿಯು ಸಂಪೂರ್ಣವಾಗಿ ಆಶ್ರಯಿಸಿದ್ದನೆಂದೂ ಅದಕ್ಕಾಗಿ ವ್ಯಾಸತೀರ್ಥರೂ ಪುರಂದರದಾಸರೂ ಇವನ ಗ್ರಂಥವು ಪರಿಶುದ್ಧವಾದದ್ದೆಂದು ಮುಕ್ತಕಂಠವಾಗಿ ಹೊಗಳಿದರೆಂದೂ ತಿಳಿಯಬಹುದು. ಆದಿ ಪರ್ವದ ೨೬ನೆಯ ಸಂಧಿಯಲ್ಲಿ ಧರ್ಮಭೀಮಾದಿಗಳ ಜನನದಲ್ಲಿ ಪೌರ್ವಾಪರ್ಯ ಹೇಳುವಾಗ ತೋರಿಸಿದ ಯುಕ್ತಿಗಳು ಶ್ರೀಮಧ್ವಾಚಾರ್ಯರ ತಾತ್ಪರ್ಯನಿರ್ಣಯದ 'ಕೀರ್ತ್ಯರ್ಥಮೇವ ನಿಜಧರ್ಮಪರಿಪ್ರಹಾರ್ಣೇ', ಇತ್ಯಾದಿ ಆ ಭಾಗದ ಅನುವಾದವಾಗಿದೆ. ದ್ರೌಪದಿಯ ಪೂರ್ವಜನ್ಮದ ವೃತ್ತಾಂತವೂ ತಾತ್ಪರ್ಯನಿರ್ಣಯದ ೧೪ನೆಯ ಅಧ್ಯಾಯದಲ್ಲಿ ಹೇಳಿದಂತೆ ಅದೆ.

> ಎಂಬುದನು ಕರುಣಿಪುದು ನೀವೆನೆ
> ಹಂಬಲಿಸದಿರು ದೈತ್ಯರೆಂಬರಿ
> ಗಿಂಬುಕೊಡದೀ ಮೋಕ್ಷ ಲಕ್ಷ್ಮೀಕಾಂತದೂರರಿಗೆ।
> ತುಂಬದೈ ಕೈವಲ್ಯವಾಸವ–
> ದಂಬುಜಾಕ್ಷದ್ವೇಷಿ ಹಿರಣಿಕ
> ನೆಂಬುವಗೆ ತಾನಿತ್ಯ ನರಕವು ಭೂಪ ಕೇಳೆಂದ ॥ (ಆ. ಸಂಭವ ೧೩೨)

ಎಂಬಲ್ಲಿ ಉಕ್ತವಾದ ನಿತ್ಯನರಕದ ಪ್ರಮೇಯವು ಮಧ್ವಸಿದ್ಧಾಂತಕ್ಕೇ ಸಂಗತವಾಗುತ್ತದೆ. ಇದರಿಂದ ಕುಮಾರವ್ಯಾಸನು ಮಧ್ವಸಿದ್ಧಾಂತದ ತತ್ವಜ್ಞಾನವನ್ನೂ ಅದರ ಪೌರಾಣಿಕ ಭಕ್ತಿಮಾರ್ಗವನ್ನೂ ಅವಲಂಬಿಸಿದ್ದನೆಂದು ತಿಳಿಯಲು ಅವಕಾಶ

ಉಂಟು. ಇನ್ನು ಅವನ ಮನೆತನದವರು ಕೋಳಿವಾಡದ ಶಾನುಭೋಗರೂ ಹರಿಹರ ವಿಭೇದವನ್ನು ಮಾಡದ ಅದ್ವೈತ ಮತಾವಲಂಬಿಗಳೂ ಶಂಕರಾಚಾರ್ಯರ ಮಠದ ಶಿಷ್ಯರೂ ಆಗಿದ್ದರೂ ಈಗ ಸುಮಾರು ೪೦೦ ವರ್ಷಗಳ ಹಿಂದೆ ಇದ್ದ ವೀರನಾರಾಯಣನ ಪರಮಭಕ್ತನಾದ ಕುಮಾರವ್ಯಾಸನು ದ್ವೈತಸಿದ್ಧಾಂತದ ಭಕ್ತಿಮಾರ್ಗವನ್ನು ಒಪ್ಪಿ ಕೊಂಡು ವೀರನಾರಾಯಣನ ಪ್ರಸಾದಕ್ಕೆ ಪಾತ್ರನಾಗಿದ್ದನೆಂದು ತಿಳಿಯಬಹುದು. ಭಗವದ್ಭಕ್ತರ ಸೂಕ್ಷ್ಮವಾದ ಮನೋನುಸಂಧಾನವನ್ನು ಬಾಹ್ಯಧಾರ್ಮಿಕ ಆಚರಣೆ ಗಳಿಂದ ಯಥಾವತ್ತಾಗಿ ತಿಳಿಯಲು ಶಕ್ಯವಾಗುವದಿಲ್ಲ. ಆದರೆ ಉಪಾಸನೆಯು ಶಬ್ದ ಗಳಲ್ಲಿ ಸೂಚಿತವಾಗುತ್ತದಾದ್ದರಿಂದ 'ಭಕ್ತ್ಯಾ ಭಾಗವತಂ ಶಾಸ್ತ್ರಂ ನ ಪ್ರಯುಕ್ತ್ಯಾಕ ಥಂಚನ।' ಎಂಬಂತೆ ಭಕ್ತಿಪೂತವಾದ ಅಂತಃಕರಣದಿಂದ ಕುಮಾರವ್ಯಾಸನ ಮಹಾ ಭಾರತವನ್ನು ಓದಿದರೆ ಈ ಮೇಲಿನ ವಿಧಾನಗಳು ಹೃದಯಸ್ಪರ್ಶಿಯಾಗುತ್ತವೆ.

## ಕುಮಾರವ್ಯಾಸನ ಕೃತಿ ಮಹಾಭಾರತ

ಕುಮಾರವ್ಯಾಸನು ಗದಾಯುದ್ಧದವರೆಗೆ ಭಾರತದ ದಶ ಪರ್ವಗಳನ್ನು ಕನ್ನಡಿ ಸಿದ್ದಾನೆ. ಬಹುಶಃ ಉದ್ದೇಶ ಪೂರ್ವಕವಾಗಿಯೇ ತನ್ನ ಗ್ರಂಥವನ್ನು ಅಲ್ಲಿಗೆ ಕೊನೆ ಗೊಳಿಸಿರಬೇಕು. ಕಲಿಯ ಅವತಾರಿಯಾದ ದುರ್ಯೋಧನನು ಭೀಮಸೇನನಿಂದ ಹತನಾಗುವವರೆಗೆ ನಡೆದ ವೃತ್ತಾಂತದಲ್ಲಿ ಶ್ರೀಕೃಷ್ಣನ ಅಪಾರವಾದ ಮಹಿಮೆಯೂ ದುಷ್ಟನಿಗ್ರಹರೂಪ ಅವತಾರ ಕಾರ್ಯದಲ್ಲಿ ಪ್ರಧಮಾಂಗನಾದ ಭೀಮನ ಶ್ರೇಷ್ಠತ್ವವೂ ಈ ಹತ್ತು ಪರ್ವಗಳಲ್ಲಿ ಯುಕ್ತಿಯುಕ್ತವಾಗಿ ವರ್ಣಿತವಾಗುತ್ತವೆ: (೧) ಆದಿಪರ್ವ (೨) ಸಭಾಪರ್ವ, (೩) ಅರಣ್ಯಪರ್ವ, (೪) ವಿರಾಟಪರ್ವ, (೫) ಉದ್ಯೋಗ ಪರ್ವ, (೬) ಭೀಷ್ಮಪರ್ವ (೭) ದ್ರೋಣಪರ್ವ (೮) ಕರ್ಣಪರ್ವ (೯) ಶಲ್ಯಪರ್ವ (೧೦) ಗದಾ ಪರ್ವಗಳಲ್ಲಿ 'ನಿರ್ಣಯಃ ಸರ್ವಶಾಸ್ತ್ರಾಣಾಂ ಭಾರತಂ ಪರಿಕೀರ್ತಿತಂ' .. . 'ನಿರ್ಣಯಃ ಸರ್ವಶಾಸ್ತ್ರಾಣಾಂ ಸದೃಷ್ಟಾಂತೋಹಿ ಭಾರತೇ' (ತಾತ್ಪರ್ಯ ನಿರ್ಣಯ ೨, ೯-೧೨)

ಎಂದು ಹೇಳಿದಂತೆ ಸಕಲಶಾಸ್ತ್ರಾರ್ಥವು ಕೃಷ್ಣ-ಪಾಂಡವ ಕಥೆಯ ವ್ಯಾಜ ದಿಂದ ನಿದರ್ಶನ ಹೊಂದುತ್ತದೆ. ಭೀಷ್ಮ ದ್ರೋಣ ದ್ರುಪದ-ವ್ಯಾಸರು, ಧೃತ ರಾಷ್ಟ್ರ—ಪಾಂಡುರಾಜರುಗಳ ಉತ್ಪತ್ತಿಯನ್ನೂ ಅರಣ್ಯದಲ್ಲಿ ಪಾಂಡವರ ಜನನ ವನ್ನೂ ಹೇಳಲು ಕೌರವರು ಪಾಂಡವರನ್ನು ದ್ವೇಷಿಸಿ ಅವರನ್ನು ಲಾಕ್ಷಾ ಭವನದಲ್ಲಿ ಸುಡಿಸಿ ಕೊಲ್ಲುವ ಪ್ರಯತ್ನವನ್ನು ಮಾಡಿದ್ದೂ ಶ್ರೀಕೃಷ್ಣನ ಅನುಗ್ರಹ ದಿಂದ ಭೀಮನ ಆಶ್ರಯದಲ್ಲಿ ಪಾರಾಗಿ ಬಂದು ಪಾಂಡವರು ದ್ರೌಪದಿಯನ್ನು ಲಗ್ನ ವಾದದ್ದೂ ಅರ್ಜುನನು ಸುಭದ್ರೆಯನ್ನು ವಿವಾಹ ಮಾಡಿಕೊಂಡದ್ದೂ ಆದಿಪರ್ವದಲ್ಲಿ ಹೇಳಿದೆ. ಸಭಾಪರ್ವದಲ್ಲಿ ರಾಜಸೂಯಯಾಗ ಭೀಮನಿಂದ ಜರಾಸಂಧನ ವಧೆ, ಶ್ರೀಕೃಷ್ಣನಿಗೆ ಯಾಗದಲ್ಲಿ ಅಗ್ರಪೂಜೆ ಅಮರ್ಷಿಯಾದ ಶಿಶುಪಾಲನ ವಧೆ, ದುರ್ಯೋ

ಧನನು ಪಾಂಡವರ ಏಳಿಗೆಯನ್ನು ಸಹಿಸದೆ ಕಪಟದಿಂದ ಅವರನ್ನು ದ್ಯೂತದಲ್ಲಿ ಸೋಲಿಸಿ ದ್ರೌಪದಿಯ ವಸ್ತ್ರಾಪಹರಣ ಮಾಡಿದ್ದು, ಶ್ರೀ ಕೃಷ್ಣನು ಭಕ್ತೆಯಾದ ದ್ರೌಪದಿಗೆ ಅಕ್ಷಯ ವಸ್ತ್ರ ಕೊಟ್ಟದ್ದೂ ಮುಂದೆ ಶಕುನಿಯ ತಂತ್ರದಿಂದ ಪಾಂಡವರಿಗೆ ೧೨ ವರ್ಷ ವನವಾಸ, ೧ ವರ್ಷ ಅಜ್ಞಾತವಾಸ ವಿಧಿಸಿದ್ದೂ ವರ್ಣಿಸಲ್ಪಟ್ಟಿವೆ.

ಅರಣ್ಯಪರ್ವದಲ್ಲಿ ಶ್ರೀಕೃಷ್ಣನ ಅನುಗ್ರಹದಿಂದ ಪಾಂಡವರು ವನವಾಸದಲ್ಲಿಯೂ ಅನೇಕ ಅದ್ಭುತ ಕೃತಿಗಳನ್ನು ಮಾಡಿದ್ದು ಹೇಳಿದೆ. ವಿರಾಟಪರ್ವದಲ್ಲಿ ಪಾಂಡವರು ಅಜ್ಞಾತವಾಸದಲ್ಲಿ ವೇಷಧಾರಿಗಳಾಗಿದ್ದು ಕೀಚಕ ವಧೆ, ಜಟ್ಟಿಗಳ ನಾಶ, ಉತ್ತರ ಗೋಗ್ರಹಣ, ಉತ್ತರೆ ಅಭಿಮನ್ಯುವಿನ ವಿವಾಹಗಳು ಹೇಳಲ್ಪಟ್ಟಿವೆ. ಅಜ್ಞಾತವಾಸದ ೧ ವರ್ಷ ಮುಗಿಯುವಷ್ಟರಲ್ಲಿ, ಅರಣ್ಯಕ್ಕೆ ಹೋಗುವಾಗ ಭೀಮ—ದ್ರೌಪದಿಗಳು ಮಾಡಿದ ಪ್ರತಿಜ್ಞೆಯಂತೆ ಕೌರವ ಸಂಹಾರಕ್ಕೆ ಯುದ್ಧ ಸನ್ನಾಹವನ್ನು ಮಾಡಿದ ಸಂಗತಿಯು ಉದ್ಯೋಗ ಪರ್ವದಲ್ಲಿ ಹೇಳಿದೆ. ದುರ್ಯೋಧನನು ಪ್ರಭೂತವಾದ ಸೈನ್ಯ ದೊಂದಿಗೆ ಯುದ್ಧಕ್ಕೆ ಸನ್ನದ್ಧನಾಗಿ ಬಂದು ಭೀಷ್ಮ, ದ್ರೋಣ, ಕರ್ಣ, ಶಲ್ಯರ ಸೇನಾ ನಾಯಕತ್ವದಲ್ಲಿ ಪಾಂಡವರೊಡನೆ ಯುದ್ಧವನ್ನು ಮಾಡಿದ್ದು ಭೀಷ್ಮಪರ್ವ, ದ್ರೋಣ ಪರ್ವ, ಕರ್ಣಪರ್ವ ಶಲ್ಯ ಪರ್ವಗಳಲ್ಲಿ ಉಕ್ತವಾಗಿದೆ. ಕರ್ಣ ಪರ್ವದಲ್ಲಿ ಭೀಮನು ದುಃಶಾಸನನನ್ನು ಕೊಂದು ರಕ್ತಪಾನ ಮಾಡಿದ ವರ್ಣನೆಯಿದೆ. ಎಲ್ಲರೂ ಮಡಿದ ಮೇಲೆ ಸ್ವತಃ ದುರ್ಯೋಧನನು ಗದಾಯುದ್ಧಕ್ಕಾಗಿ ರಣರಂಗಕ್ಕೆ ಬಂದು ಭೀಮನೊಡನೆ ಹೋರಾಡಿದ ಕಥೆಯು ಬಹು ಭೀಕರವಾಗಿ ಗದಾ ಪರ್ವದಲ್ಲಿ ವರ್ಣಿತವಾಗಿದೆ. ಭೀಮನು ಗದಾ ಪ್ರಘಾತದಿಂದ ದುರ್ಯೋಧನನನ್ನು ಕೊಂದು ಅವನ ಅಪರಾಧವನ್ನೆಣಿಸುತ್ತ ಅವನನ್ನು ಒದ್ದು ಹಲ್ಲುಗಳನ್ನು ಕಳಚಿ ಹಣಿದದ್ದು ಬಹು ತೇಜಸ್ವಿಯಾಗಿ ಹೇಳಲ್ಪಟ್ಟಿದೆ. ಶ್ರೀಕೃಷ್ಣನು ಉತ್ತರೆಯ ಗರ್ಭವನ್ನು ರಕ್ಷಿಸಿದ, ಸಕಲ ಶತ್ರುಗಳ ಸಂಹಾರವಾದ ಮೇಲೆ ಧರ್ಮರಾಯನನ್ನು ಸಾಮ್ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದ ವರ್ಣನೆಯಿಂದ ವಿಜಯೋತ್ಸವಾಂತವಾಗಿ ಗದಾಯುದ್ಧವು ಪೂರ್ತಿ ಗೊಳ್ಳುತ್ತದೆ.

ಈ ಕಥಾ ಸಂದರ್ಭದಲ್ಲಿ ಕುಮಾರವ್ಯಾಸನು ದೂರ ಸಂಬದ್ಧವಾದ ಉಪಾ ಖ್ಯಾನಗಳನ್ನು ಸೇರಿಸದೆ, ಶ್ರೀ ಕೃಷ್ಣನ ಶ್ರೇಷ್ಠತೆಯನ್ನೂ ' ಈಶ್ವರಃ ಸರ್ವಭೂತಾನಾಂ ಹೃದ್ದೇಶೇರ್ಜುನ ತಿಷ್ಠತಿ । ಭ್ರಾಮಯನ್ ಸರ್ವ ಭೂತಾನಿ ಯಂತ್ರಾರೂಢಾನಿ ಮಾಯಯಾ ॥ ಎಂಬಂತೆ ಆಬ್ರಹ್ಮಸ್ತಂಭ ಪರ್ಯಂತವಾಗಿ ನಡೆಯುವ ಎಲ್ಲ ವ್ಯಾಪಾರಗಳು ಅವನ ಪ್ರೇರಣೆಯಿಂದಲೇ ನಡೆಯುತ್ತವೆ ಎಂಬುದನ್ನೂ ಹೃದಯಂಗಮ ವಾಗಿ ನಿರೂಪಿಸಿದ್ದಾನೆ. ಪ್ರಹ್ಲಾದನ ನಾರಸಿಂಹ ಸ್ತುತಿ, ದ್ರೌಪದಿಯ ಶ್ರೀಕೃಷ್ಣ ಸ್ತುತಿ (ಸಭೆಯಲ್ಲಿ ವಸ್ತ್ರಾಪಹರಣವಾದಾಗ), ಭೀಷ್ಮಾಚಾರ್ಯರು ರಾಜಸೂಯ ಯಾಗ ದಲ್ಲಿ ಮತ್ತು ಶರಪಂಜರದಲ್ಲಿ ಮಲಗಿದಾಗ ಮಾಡಿದ ಶ್ರೀಕೃಷ್ಣ ಸ್ತುತಿ ಇವುಗಳನ್ನು ಓದಿದಾಗ ಕವಿಯ ಕೃಷ್ಣಭಕ್ತಿಪಾರವಶ್ಯವು ಗೊತ್ತಾಗುತ್ತದೆ. ಜಟ್ಟಿಗಾಳಗದ

ವರ್ಣನೆಯಲ್ಲಿ ಕವಿಯ ಪ್ರತಿಭೆಯನ್ನು ಗಮನಿಸ ಬಹುದಾಗಿದೆ. ಉತ್ತರ ಕುಮಾರನ ಗೋಗ್ರಹಣದ ಯುದ್ಧ ಸಂದರ್ಭದಲ್ಲಿ ಬಂದ ಹಾಸ್ಯಮಯ ವರ್ಣನೆಯೂ ಸ್ವಯಂವರ ವೈವಾಹಿಕ ಪರ್ವಗಳಲ್ಲಿ ಶೃಂಗಾರರಸದ ನಿರೂಪಣೆಯೂ ಕವಿಯ ನವರಸ ಪರಿಣತಿಯನ್ನು ಸೂಚಿಸುತ್ತವೆ.

## ಕವಿಯ ಭಾಷೆ, ಶೈಲಿ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕುಮಾರವ್ಯಾಸನಿಗೆ ಎಲ್ಲ ದೃಷ್ಟಿಯಿಂದಲೂ ಅನ್ಯಾದೃಶವಾದ ಸ್ಥಾನವಿರುತ್ತದೆ. ಪಂಪರನ್ನ ಮೊದಲಾದ ವೀರಾಗ್ರೇಸರ ಕವಿಗಳ ರೀತಿಗೂ ಭಕ್ತಿರಸ ಪ್ರವಾಹದಲ್ಲಿ ಈಸುತ್ತಿರುವ ದಂಡಾಧಿಪತಿ ವಂಶದ ಕುಮಾರವ್ಯಾಸನ ಶೈಲಿಗೂ ಬಹಳ ಅಂತರವಿದೆ. ಹಿಂದಣ ಕವಿಗಳಲ್ಲಿ ಕೃಷ್ಣಕಥೆಯು ಪಾವನವಾದದ್ದು, ಮೋಕ್ಷಪ್ರದವಾದದ್ದು ಎಂಬ ನಿಶ್ಚಯವು ಇದ್ದಿಲ್ಲ. ಅವರು ತಮ್ಮ ಪಾಂಡಿತ್ಯ ಮತ್ತು ಪ್ರತಿಭೆಗಳ ಬಲದಿಂದ ಭಾರತ ಕಥೆಯನ್ನು ಅಂದವಾಗಿ ವರ್ಣಿಸಿದ್ದಾರೆ. ಆ ಸಂದರ್ಭಕ್ಕೆ ತಕ್ಕಂತೆ ವೀರಕರುಣಾದಿ ಎಲ್ಲ ರಸಗಳನ್ನೂ ಚಿತ್ರಿಸಿದ್ದಾರೇನೋ ನಿಜ. ಆದರೆ ಕುಮಾರವ್ಯಾಸನು ಕ್ಷಣಕ್ಷಣಕ್ಕೆ ಮೌಕ್ತಾನಂದವನ್ನು ಅನುಭವಿಸುವಂತೆ ಕಥೆಯನ್ನು ಹೇಳಿರುವನಾದ್ದರಿಂದ ಇವನ ಭಾಷೆಯಲ್ಲಿ ಕಥನ ಶೈಲಿಯಲ್ಲಿ ತತ್ವವಿವೇಚನೆಯಲ್ಲಿ ಕೃತ್ರಿಮತೆ ಎಳ್ಳಷ್ಟೂ ಇಲ್ಲ. ಇವನ ಭಾಷೆಯು ಪಂಡಿತರ ವ್ಯಾಕರಣ ಪರಿಷ್ಕೃತವಾದ ಶಬ್ದಗುಂಫನೆಯಲ್ಲ. ಪಾಮರರ ಶುಷ್ಕ ರಸವಿಧುರ ಆಲಾಪವಲ್ಲ. ಒಳ್ಳೆಯ ಪ್ರೌಢವಾದ ಪರಿಷ್ಕೃತ ಹೃದಯದಿಂದ ಹೊರಟ ಕೃತ್ರಿಮ ನಿಯಮಗಳಿಗೊಳಗಾಗದ ಶಬ್ದಸಮೂಹವದು. ಅಂದಮೇಲೆ 'ವಾಚಮರ್ಥೋನುಧಾವತಿ' ಎಂಬಂತೆ ಅವನ ಭಾಷೆಯಲ್ಲಿ ಎಲ್ಲ ತರದ ಶಬ್ದಾಲಂಕಾರಗಳೂ ಅರ್ಥಾಲಂಕಾರಗಳೂ ರಸಪೋಷಣೆಯೂ **ಅಹಮಹಮಿಕೆಯಿಂದ** ತಾವಾಗಿಯೇ ಬಂದು ಸೇರಿ ಅರ್ಥಕ್ಕೆ ಪುಷ್ಟಿಯನ್ನು ಕೊಡುತ್ತವೆ.

ಅವನ ಭಾಷೆಯ ಬಿಗುವೂ ಪದಗುಂಫನವೂ ಆಮೂಲಾಗ್ರವಾಗಿ ಮಹಾಭಾರತವನ್ನು ಓದಿದವರಿಗೆ ಮನದಟ್ಟಾಗುವವು. ಕವಿಯ ಶಬ್ದಸಂಗ್ರಹವು ಅನ್ಯಾದೃಶವಾದದ್ದು. ಅರ್ಥ ವ್ಯಕ್ತಿಗೆ ಬೇಕಾಗುವ ಶಬ್ದಗಳನ್ನು ವ್ಯಾಕರಣದ ಹೆದರಿಕೆಯಿಲ್ಲದೆ ಬಳಸಿ ತನ್ನದೊಂದು ವಿಶಿಷ್ಟ ಶೈಲಿಯನ್ನು ನಿರ್ಮಾಣಮಾಡಿದ ಕವಿಯೆಂದರ ಕನ್ನಡ ಸಾಹಿತ್ಯದಲ್ಲಿ ಕುಮಾರವ್ಯಾಸನಲ್ಲದೆ ಬೇರೊಬ್ಬರಿಲ್ಲ, ಎಂದು ಹೇಳಬಹುದಾಗಿದೆ.

**ಆರ್. ಎಸ್. ಪಂಚಮುಖಿ**

# ಪಾಂಗ

(ಶಬ್ದನಿಷತ್ತಿ ಮತ್ತು ಅರ್ಥವಿವೇಚನೆ)

ಗೋವಾರಾಜ್ಯದ ಪಣಜಿ ಎಂಬ ಗ್ರಾಮದಲ್ಲಿ ದೊರೆತ ಗೋವೆಯ ಕದಂಬ ವಂಶದ ಒಂದನೆಯ ಜಯಕೇಶಿಯ ತಾಮ್ರಶಾಸನವೊಂದು ಪ್ರಕಟವಾಗಿದೆ.[1] ಈ ಶಾಸನವು ನಾಗರೀ ಲಿಪಿ ಮತ್ತು ಸಂಸ್ಕೃತ ಭಾಷೆಯಲ್ಲಿ ಇದೆ. ಇದರ ಕಾಲ ಶಕ ೯೮೧ ಎಂದರೆ ಕ್ರಿ. ವ. ೧೦೫೯. ಈ ಜಯಕೇಶಿರಾಜನು ತನಗೆ ಉಪಕಾರ ಮಾಡಿದ್ದ ಅರಬ ಜಾತಿಯ ಛಡಮ ಎಂಬ ಶೂರ ಅಧಿಕರಿಗೆ ಲಘು ಮೋರಂಬಿಕಾ ಎಂಬ ವಾಳು ಗ್ರಾಮವನ್ನು ಉಂಬಳಿಯಾಗಿ ಕೊಟ್ಟ ವಿಷಯವನ್ನು ಪ್ರಸ್ತುತ ಶಾಸನದಲ್ಲಿ ವಿವರಿಸಿದೆ. ಈ ದತ್ತಿಯ ನಿಬಂಧನೆಗಳನ್ನು ಹೇಳುವಾಗ ಈ ಮುಂದಿನ ಶ್ಲೋಕಗಳು ಶಾಸನದಲ್ಲಿ ಬರುತ್ತವೆ.[2]

ಚಂದ್ರವಸುಗ್ರಹನಿಮಿತೇ ಶಾಕೇ ವರ್ಷೇ ವಿಕಾರಿಣಿ ಪ್ರಾಪ್ತೇ ।
ಆಷಾಢ ಕೃಷ್ಣಪಕ್ಷೇ ವಾರೇ ಶಶಲಕ್ಷ್ಮಣಸ್ತಥಾಷ್ಟಮ್ಯಾಮ್ ॥
ವಿಕಾರಿ ವತ್ಸರಾದೀನಿ ವರ್ಷಾಣಿ ಸತತಂ ದಶ ।
ನಿಷ್ಕಾಸ್ತ್ರಿಂಶದಿಹ ಗ್ರಾಹ್ಯಾಃ ಪ್ರತ್ಯಬ್ದಂ ಭೈರವಾಹ್ವಯಾಃ ॥
**ಪಾಂಗೇ** ಗದ್ಯಾಣಕಾ ಗ್ರಾಹ್ಯಾ ಗ್ರಾಮೇಽಸ್ಮಿನ್ ಮೇದಿನೀಭುಜಾ ॥
ಕಾಣಿಕಪಂಚಕಸಂಜ್ಞಂ ದಸವಂಧಾದ್ಯುಪಕರಾಖ್ಯಮಿದಂ ।
ಕಿಮಪ್ಯಿನೋ ಗ್ರಾಹ್ಯಂ ನ ಚ ಕಾರ್ಯಂ ಬಾಧನಮಪಿ ಕಿಮಪಿ ವೆಟ್ಟಿತರಾದಿ ॥

ಇವುಗಳ ಸಾರಾಂಶ ಇಂತು. ದಾನಕೊಟ್ಟ ಮಿತಿ ಶಕ ೯೮೧, ವಿಕಾರಿಸಂವತ್ಸರ. ಈ ಸಂವತ್ಸರಾರಭ್ಯ ಮುಂದೆ ಹತ್ತು ವರ್ಷಗಳವರೆಗೆ ಆ ಗ್ರಾಮವನ್ನು ಪಡೆದವನು ಮೂವತ್ತು ಭೈರವ ಗದ್ಯಾಣಗಳನ್ನು (ಚಿನ್ನದ ವಿಶಿಷ್ಟ ನಾಣ್ಯ) ಕೊಡಬೇಕಾದುದು. ಅನಂತರ ಸೌಮ್ಯ ಸಂವತ್ಸರದಿಂದ ಮೂವತ್ತೈದು ಭೈರವ ಗದ್ಯಾಣಗಳನ್ನು ಕೊಡಬೇಕು. ಇದು ಪ್ರತಿಗ್ರಹೀತನು ರಾಜನಿಗೆ ಕೊಡತಕ್ಕ **ಪಾಂಗ.** ಇಷ್ಟನ್ನು ಹೊರತು ಪಡಿಸಿ ಆ ಗ್ರಾಮದಲ್ಲಿ ಬೇರಾವ ತೆರಿಗೆಯನ್ನೂ ಎತ್ತಕೊಡದು. ಬಿಟ್ಟಿ ಮೊದಲಾದ ಬಾಧೆಯನ್ನೂ ತರಕೂಡದು.

---

1. ಭಾರತ ಇತಿಹಾಸ ಸಂಶೋಧಕ ಮಂಡಳ, ಪುಣೆ ; ತ್ರೈಮಾಸಿಕ, ಸಂಪುಟ ೩೧, ಸಂಚಿಕೆ ೪, ಪು. ೨೭ ಮುಂ. ಈ ತಾಮ್ರ ಶಾಸನದ ಫೋಟೋ ಪ್ರತಿಗಳು ಭಾರತ ಪ್ರಭುತ್ವದ ಶಾಸನ ಶೋಧನಾಲಯದ ಸಂಗ್ರಹದಲ್ಲಿಯೂ ಇವೆ. ಇವುಗಳ ಸಹಾಯದಿಂದ ಈ ಶಾಸನದ ಶುದ್ಧ ಪಾಠವನ್ನು ಕಂಡು ಹಿಡಿಯಬಹುದಾಗಿದೆ.

2. ಮೇಲಿನ ಅಡಿಟಿಪ್ಪಣಿಯಲ್ಲ ಕಾಣಿಸಿದ ಪ್ರಕಟನೆಯಲ್ಲಿ ಮುದ್ರಿತವಾದ ಈ ಶಾಸನ ಪಾಠದಲ್ಲಿ ಕೆಲವು ತಪ್ಪುಗಳು ತಲೆದೋರಿವೆ. ಅವುಗಳನ್ನು ತಿದ್ದಿ ಸರಿಯಾದ ಪಾಠವನ್ನು ಇಲ್ಲಿ ಕೊಟ್ಟಿದ್ದೇನೆ.

ಅದೇ ಪ್ರದೇಶದಲ್ಲಿ ಆ ಕದಂಬ ಮನೆತನದ ಒಂದನೆಯ ಜಯಕೇಶಿಯ ಮಗ ತ್ರಿಭುವನ ಮಲ್ಲ ಎಂದರೆ ಗೂವಲದೇವನ ತಾಮ್ರ ಶಾಸನವು ದೊರೆತಿದೆ.[3] ಇದರ ಕಾಲ ಶಕ ೧೦೨೮ ಎಂದರೆ ಕ್ರಿ. ಶ. ೧೧೦೭; ಲಿಪಿ ನಾಗರಿ, ಭಾಷೆ ಸಂಸ್ಕೃತ. ಇದರಲ್ಲಿ ಗೂವಲದೇವನ ಅಧಿಕಾರಿಯಾದ ಗಂಡಗೋಪಾಲ ಕೇಲಿವರ್ಮ ಅಥವಾ ಕೇಲಿಮ ಎಂಬಾತನು ಗೋವಾ ಪ್ರದೇಶದಲ್ಲಿ ಒಂದು ಬ್ರಹ್ಮಪುರಿಯನ್ನು ನಿರ್ಮಾಣಮಾಡಿ, ಅದರಲ್ಲಿ ಬೇರೆ ಬೇರೆಡೆಯ ವಿದ್ವಾಂಸರಾದ ಬ್ರಾಹ್ಮಣರ ಕುಟುಂಬಗಳನ್ನು ಕರೆತಂದು ಸ್ಥಾಪಿಸಿ, ಅವರುಗಳ ಉಪಜೀವನಕ್ಕಾಗಿ ಭೂಮಿ, ಮನೆ, ಮುಂತಾದ ಸೌಕರ್ಯ ಗಳನ್ನು ಒದಗಿಸಿದ ವಿಷಯವನ್ನು ವಿವರಿಸಿದೆ. ಪ್ರಕೃತ ವಿವೇಚನೆಗೆ ಸಹಕಾರಿಯಾಗು ವಂತಹ ಈ ಶಾಸದಲ್ಲಿಯ ಭಾಗವನ್ನು ಇಲ್ಲಿ ಎತ್ತಿ ತೋರಿಸುತ್ತೇನೆ :[4]

ಕೇಲಿವರ್ಮಾ ತು ಧರ್ಮಧೀಃ ॥
ಪುರೋಹಿತ ಮಹಾಮಾತ್ಯಸ್ವಾಮಿ ಭೂಪಾಲ ಸನ್ನಿಧೌ ।
ನಾನಾ ದೇಶ ಸಮಾಯಾತ ಬ್ರಾಹ್ಮಣಾನ್ ಸನ್ನಿಧಾಪ್ಯ ಚ ।
ಗೋವದೀವಾಭಿಧೇ ದೇಶೇ ಗ್ರಾಮೇ ರಟ್ಟೋಡನೇ ಉರೇ ।
ಪೂಗೀವನಂ ಶತಾದ್ದೇವಾತ್ ಕ್ರೀತ್ವಾ ಪ್ರಾದಾನ್ನಮಸ್ಕೃತಮ್ ॥
ಕುಲತ್ಥಾಲ್ಯುದ್ಭವಾನ್ಮಾಲಪಯ್ಯಾತ್ ಸಾಮನ್ತ ಪುತ್ರತಾತ್ ।
ಪಲಗ್ರಾಮೇ ತ್ವಸೌಲೀತಿ ಶತಾತ್ ಕ್ರೀತ್ವಾ ನಮಸ್ಕೃತಮ್ ॥
ತದ್‌ಗ್ರಾಮಾತ್ ಸೊನ್ನಾರಜ್ಜವೀ ಚಿಂಚಖಣ್ಣೀತಿ ಪಾಲಣಂ ।
ಶತಾತ್ ಕ್ರೀತ್ವಾ ದದೌ ಸರ್ವಮೇತತ್ **ಪಾಙ್ಗಾ**ದಿ ವರ್ಜಿತಂ ॥

ಮೇಲೆ ಉದ್ಧರಿಸಿದ ಕೊನೆಯ ಶ್ಲೋಕದಲ್ಲಿ, ಆ ಬ್ರಹ್ಮಪುರಿಯ ಬ್ರಾಹ್ಮಣರು ಗಳಿಗೆ ಕೊಟ್ಟ ಭೂಮಿ ಮೊದಲಾದ ಸೊತ್ತಿನ ಮೇಲೆ ಅವರು **ಪಾಂಗ** ಮೊದಲಾದ ಯಾವ ತರಬಾಧ್ಯತೆಯನ್ನು ಸಲ್ಲಿಸಬೇಕಾಗಿಲ್ಲ ಎಂದು ಹೇಳಿದೆ.

---

3. ಮೇಲ್ಕಂಡ ಭಾರತ ಇತಿಹಾಸ ಸಂಶೋಧಕ ಮಂಡಳದ ತ್ರೈಮಾಸಿಕ, ಪು. ೪೫ ಮುಂ. ಈ ತಾಮ್ರ ಶಾಸನದ ಫೋಟೋ ಪ್ರತಿಗಳಾದರೂ ಭಾರತ ಪ್ರಭುತ್ವದ ಶಾಸನ ಶೋಧನಾಲಯದಲ್ಲಿ ಇವೆ. ಈ ಶಾಸನವನ್ನು ಕುರಿತು ಶುದ್ಧಪಾಠ ಮತ್ತು ಸಮರ್ಪಕ ವಿವರಣೆಯೊಂದಿಗೆ ನಾನೊಂದು ಲೇಖನವನ್ನು ಸಿದ್ಧಪಡಿಸಿದ್ದೇನೆ. ಅದು **Epigraphia Indica** ಎಂಬ ಪತ್ರಿಕೆಯಲ್ಲಿ ಪ್ರಕಟವಾಗಲಿದೆ. ಈ ಶಾಸನವನ್ನು ಮೇಲ್ಕಂಡ ತ್ರೈಮಾಸಿಕ ಪತ್ರಿಕೆಯಲ್ಲಿ ಪ್ರಕಟಗೊಳಿಸಿದ ಶ್ರೀ ಗ. ಹ. ಖರೆಯವರು ಈ ಶಾಸನದ ತ್ರಿಭುವನ ಮಲ್ಲನೆಂದರೆ ಒಂದನೆಯ ಜಯಕೇಶಿಯ ಪುತ್ರ ವಿಜಯಾದಿತ್ಯನಾಗಿರ ಬೇಕು ಎಂದು ಊಹಿಸಿದ್ದಾರೆ. ಈ ಊಹೆ ಸಾಧುವಾಗಿಲ್ಲ. ತ್ರಿಭುವನ ಮಲ್ಲ ಎಂಬುದು ಗೂವಲದೇವನ ಬಿರುದಾಗಿದ್ದಂತೆ ಬೇರೆ ಶಾಸನಗಳಿಂದ ತಿಳಿಯುವುದರಿಂದ, ಈ ತ್ರಿಭುವನ ಮಲ್ಲನು ಗೂವದೇವನಾಗಿರಬೇಕೆಂದು ನಿಶ್ಚಯವಾಗುತ್ತದೆ.

4. ಇದರ ಪಾಠವು ನನ್ನ ವಾಚನವನ್ನು ಅನುಸರಿಸುತ್ತದೆ.

ಮೇಲೆ ವಿವರಿಸಿದ ಮತ್ತು ಉದಾಹರಿಸಿದ ಸಂಸ್ಕೃತ ಶಾಸನ ಭಾಗಗಳಲ್ಲಿ ಒಂದೇ ಸಂದರ್ಭದಲ್ಲಿ ಮತ್ತು ಒಂದೇ ಅರ್ಥದಲ್ಲಿ **ಪಾಂಗ** ಎಂಬ ಪದವು ಬಳಕೆಯಾಗಿದೆ ಎಂಬ ಅಂಶ ಸ್ಪಷ್ಟವಾಗುತ್ತದೆ.

**ಈ ಪಾಂಗ** ಎಂಬ ಪದದ ಅಭಿಪ್ರಾಯವೇನು? ಮತ್ತು ಅದರ ನಿಷ್ಪತ್ತಿಯೇನು? ನನ್ನ ತಿಳಿವಳಿಕೆಯಂತೆ ನನಗೆ ದೊರೆತ ಯಾವ ಸಂಸ್ಕೃತ ಇಲ್ಲವೆ ಪ್ರಾಕೃತ[5] ಭಾಷಾಕೋಶಗಳಿಂದ ಈ ಪ್ರಶ್ನೆಗಳಿಗೆ ಸಮರ್ಪಕ ಉತ್ತರನ್ನು ಕಂಡು ಹಿಡಿಯಲು ಸಹಾಯವಾಗುವಂತಿಲ್ಲ. ಆದುದರಿಂದ ನಾನು ಕನ್ನಡಕ್ಕೇ ಶರಣು ಹೋಗುತ್ತೇನೆ.

ಕನ್ನಡದಲ್ಲಿ ಪ್ರಾಚೀನವಾದ ಪಂಗು ಮತ್ತು ಅದರಿಂದಾದ ಈಚೆಯ ಹಂಗು ಎಂಬ ಪದಗಳು ಇವೆ. ಇದು ಭಾವವಾಚಕ ನಾಮಪದವಾಗಿರುವುದರಿಂದ ಪಂಗು ಎಂಬ ಧಾತುವಾದರೂ ಹಿಂದೆ ಕನ್ನಡದಲ್ಲಿ ಬಳಿಕೆಯಲ್ಲಿರಬೇಕು.[6] ಪಂಗು ಎಂಬ ಧಾತು ಇಲ್ಲವೆ ನಾಮಪದದಿಂದ ಮೇಲ್ಕಂಡ ಪಾಂಗ ಎಂಬ ಶಬ್ದವು ಉಂಟಾಗಿ ಅದು ಶಾಸನಗಳಲ್ಲಿ ವ್ಯವಹೃತವಾಗಿರಬೇಕು. ಕಿಟ್ಟೆಲ್ ಕೋಶದಲ್ಲಿ ಪಂಗು ಪದದ ಅರ್ಥವಿವರಣೆ ಹೀಗಿದೆ: The state of being bound by some favour rendered, that of being obliged, obligation. ಈ ಅಭಿಪ್ರಾಯವು ಮೇಲಿನ ಶಾಸನಗಳಲ್ಲಿಯ ಸಂದರ್ಭಕ್ಕೆ ಸಮರ್ಪಕವಾಗುತ್ತದೆ. ಒಂದನೆಯ ಶಾಸನದಲ್ಲಿ ಜಯಕೇಶಿರಾಜನಿಂದ ಉಪಕೃತನಾಗಿ ಆತನಿಂದ ಒಂದು ಗ್ರಾಮವನ್ನು ಪಡೆದ ಛಡಮನು ಮೊದಲು ಹತ್ತು ವರ್ಷ ಮೂವತ್ತು ಗದ್ಯಾಣಗಳನ್ನೂ **ಪಾಂಗ**ವಾಗಿ ಎಂದರೆ **ಉಪಕೃತಿಯ ಕರ ಇಲ್ಲವೆ ಬಾಧ್ಯತೆಯ ತೆರಿಗೆಯೆಂದು** ಕೊಡಬೇಕಾಗಿ ಹೇಳಿದೆ. ಎರಡನೆಯ ಶಾಸನದಲ್ಲಿ ಇಂತಹ **ಪಾಂಗ**ವನ್ನು ಎಂದರೆ **ತೆರ** ಇಲ್ಲವೆ **ತೆರಿಗೆ**ಯನ್ನು ಬ್ರಹ್ಮಪುರಿಯಲ್ಲಿ ಉಪಕಾರ ಹೊಂದಿದ ಬ್ರಾಹ್ಮಣರು ಕೊಡಬೇಕಾಗಿಲ್ಲ ಎಂದು ಹೇಳಿದೆ. ಇದರಿಂದ **ಉಪಕೃತರಾಗಿ ರಾಜನಿಗೆ ಕೊಡಬೇಕಾದ ತೆರಿಗೆ** ಎಂಬ ಅರ್ಥದಲ್ಲಿ ಅಂದಿನ ರಾಜಕೀಯ ಮೊದಲಾದ ವ್ಯವಹಾರದಲ್ಲಿ **ಪಾಂಗ** ಎಂಬ ಪದವು ಬಳಕೆಯಾಗಿದ್ದಿತು ಎಂಬ ಅಂಶ ಸ್ಪಷ್ಟವಾಗುತ್ತದೆ.

ಪಂಗು ದ್ರಾವಿಡ ಭಾಷೆಗಳಿಗೆ ಸೇರಿದ ಪದವಾಗಿರಬೇಕು. ತೆಲುಗಿನಲ್ಲಿ ಪಂಗಮು

---

5. ಪಾ ಇ ಅ ಸದ್ದಮಹಣ್ಣವೊ (ಪ್ರಾಕೃತಶಬ್ದಮಹಾರ್ಣವ)ಕೋಶದಲ್ಲಿ ಪಂಗ ಎಂಬ ಪದಕ್ಕೆ ಗ್ರಹಣಮಾಡು ಎಂಬ ಅರ್ಥವನ್ನು ಹೇಳಿದೆ. ಈ ಪ್ರಾಕೃತ ಪದಕ್ಕೆ ಪ್ರಸ್ತುತ ವಿವೇಚನೆಯಲ್ಲಿ ಸ್ಥಾನವಿಲ್ಲ. ಇದು ಸಂಸ್ಕೃ ಪ್ರ+ಗ್ರಹ್ ಎಂಬ ಧಾತುವಿನಿಂದ ಉಂಟಾಗಿರಬಹುದು.

6. ಹಂಗಿಸು ಎಂಬ ಇಸು ಪ್ರತ್ಯಯಾಂತ ಧಾತುವಿಗೆ ಹಂಗು ಎಂಬ ಮೂಲವು ಧಾತುವಾಗಿದ್ದರೆ, ಪಂಗು ಎಂಬ ಧಾತುವಿನ ಅಸ್ತಿತ್ವವು ಅಸಂಭವನೀಯವಾಗಿಲ್ಲ.

ಎಂದರೆ a tax on certain employments; ಪಂಗು ಎಂದರೆ fear[7] (ಬ್ರೌನ್ ಕೋಶ). ಇವುಗಳಿಗೂ ಕನ್ನಡ ಪಂಗು ಶಬ್ದಕ್ಕೂ ಬಾಂಧವ್ಯವಿದೆ. ತೆಲುಗಿನ ಪಂಗಮು ಎಂಬ ಪದದಿಂದ ಮೇಲಿನ ವಿವೇಚನೆಗೆ ಪುಷ್ಟಿ ದೊರೆಯುತ್ತದೆ.

ಪಾಲು, share, portion ಎಂಬರ್ಥದಲ್ಲಿ ಪಂಗು ಎಂಬ ಇನ್ನೊಂದು ಪದವು ದ್ರಾವಿಡ ಭಾಷೆಗಳಲ್ಲಿ ಸಿಕ್ಕುತ್ತದೆ. ಅರ್ಥಭಿನ್ನತೆಯ ಮೂಲಕ ಈ ಪಂಗು ಪದವನ್ನು ಮೇಲ್ಕಂಡ ಪಂಗು ಪದದಿಂದ ವಿಂಗಡಿಸಬೇಕೆಂದು ತೋರುತ್ತದೆ. ಇದರ ಮೂಲವನ್ನು ಸಂಸ್ಕೃತ ಭಜ್ ಇಲ್ಲವೆ ಭಞ್ಜ್ ಎಂಬ ಧಾತುರೂಪದಲ್ಲಿ ಕಂಡು ಹಿಡಿಯಬಹುದೇನೋ. ತಮಿಳಿನ ಪಂಗು ಪಕು(ಗು) ಎಂಬ ಪದದಿಂದ ಉಂಟಾದುದು ಪಂಕು(ಗು) ಎಂದರೆ ಭಾಗಿಸು, ವಿಭಾಗಿಸು. ತೆಲುಗು—ಕನ್ನಡದ ಪಂಗ ಎಂದರೆ ಕವಲೊಡೆದುದು, ಕನ್ನಡ ಪಂಗಡ, ತೆಲುಗಿನ ಪಗುಲು ಎಂದರೆ ಒಡೆ, ಸೀಳು; ಮುಂತಾದ ಶಬ್ದಗಳು ಈ ಎರಡನೆಯ ಪಂಗುಪದದೊಡನೆ ಸಂಬಂಧವುಳ್ಳುವೆಂದು ತೋರುತ್ತದೆ.

**ಪಾಂಗ** ಎಂಬ ಶಬ್ದವು ಮರಾಠೀ ಭಾಷೆಯಲ್ಲಿ ಇದೆ. ಇದನ್ನು 'ಪಾಂಗ ಫೇಡಣೇ', 'ಪಾಂಗ ಫಿಟಲೇ' ಮುಂತಾದ ಪ್ರಯೋಗಗಳಲ್ಲಿ ಕಾಣಬಹುದು. ಪಾಂಗ ಶಬ್ದಕ್ಕೆ ಕೊರತೆ, ಅಗತ್ಯ, ಚಿಂತೆ, ಕಷ್ಟ, ಪರಾಧೀನತೆ, ಮುಂತಾದ ಅರ್ಥಗಳನ್ನು ಮರಾಠೀಕೋಶಕಾರರು ಹೇಳಿದ್ದಾರೆ. ಇದರ ನಿಷ್ಪತ್ತಿಯನ್ನು ಅಪಾಂಗ ಇಲ್ಲವೆ ಪಂಗು (ಅಂಗಹೀನ) ಎಂಬೀ ಸಂಸ್ಕೃತ ಪದಗಳಲ್ಲಿ ತೋರಿಸಲಾಗಿದೆ.[8] ಇದು ಚಿಂತ್ಯವಾದುದು. ಈ ವಿಷಯದಲ್ಲಿ ಸಾಕಷ್ಟು ಅನ್ವೇಷಣೆಯನ್ನು ನಡೆಯಿಸಿದರೆ ಇದು ಮೇಲೆ ವಿವೇಚಿಸಿದ ಅರ್ಥದ ಪಾಂಗ ಎಂಬ ಪದವಾಗಿದ್ದಂತೆ ಕಂಡು ಹಿಡಿಯಬಹುದು. ಈ ಮರಾಠೀ ಶಬ್ದದ ಮೂಲವು ಕನ್ನಡ ಪಂಗು ಆಗಿರಬೇಕು ಎಂದು ನನಗೆ ಅನಿಸುತ್ತದೆ. ಈ ದೃಷ್ಟಿಯಿಂದ ಮಹಾರಾಷ್ಟ್ರದ ಭಾಷಾಶೋಧಕರು ವಿಚಾರ ಮಾಡಿದಂತೆ ತೋರುವುದಿಲ್ಲ.

ಇಂತು ಮೇಲಿನ ಸಂಕ್ಷಿಪ್ತ ವಿವೇಚನೆಯಿಂದ, ಮೂಲದಲ್ಲಿ ಕನ್ನಡವಾಗಿದ್ದ ಪಂಗು ಎಂಬ ಪದವು ಸಂಸ್ಕೃತ, ತೆಲುಗು ಮತ್ತು ಮರಾಠೀಭಾಷೆಗಳಲ್ಲಿ ಸ್ವಲ್ಪ ರೂಪಾಂತರದಿಂದ ಬಳಕೆಗೊಂಡು ಹಲವು ವಿಧದ ಪ್ರಯೋಗಗಳಲ್ಲಿ ವಿಸ್ತಾರ ಪಡೆದಿದೆ ಎಂಬ ಸಂಗತಿ ವೇದ್ಯವಾಗುತ್ತದೆ.

**ಪಾಂಡುರಂಗರಾವ್, ದೇಸಾಯಿ.**

---

7. ಹಂಗಿನಲ್ಲಿದ್ದವನಿಗೆ ಭಯಭಾವನೆ ಇದ್ದೇ ಇರುತ್ತದೆ. ಆದುದರಿಂದ ಇದು ಲಕ್ಷಣಾರ್ಥ, Secondary Sense. ಸಂಸ್ಕೃತ ಭಂಗ ಎಂಬ ಮಾತಿಗೂ ಭೀತಿಎಂಬರ್ಥವಿದ್ದ ಅಂಶವನ್ನು ಲಕ್ಷಿಸಬಹುದು.

8. ನನ್ನ ಬಳಿಯಲ್ಲಿ ಮರಾಠೀಕೋಶಗಳು ಇಲ್ಲದುದರಿಂದ ಧಾರವಾಡದ ಶ್ರೀ. ಶಂ. ಬಾ. ಜೋಶಿ ಮತ್ತು ನಾಗಪುರದ ಪ್ರಾ. ಮಿರಾಶಿ ಇವರಿಂದ ಈ ಜಿಜ್ಞಾಸೆಯಲ್ಲಿ ನನಗೆ ಸ್ವಲ್ಪ ಸಹಾಯವಾಗಿದೆ. ಆದಕ್ಕಾಗಿ ನಾನವರಿಗೆ ಋಣಿ.

# ಪಂಪನ ಕರ್ಣ

ಯಾವ ಮಹಾಕವಿಯಾಗಲಿ ಸಮಷ್ಟಿಚಿತ್ರಸ್ವರೂಪವಾದ ಜನಮನೋ ಭೂಮಿಕೆಯಲ್ಲಿ ಸ್ಪಷ್ಟವಾಗಿ ಖಚಿತವಾಗಿ ಶಾಶ್ವತವಾಗಿ ನಿಂತಿರುವ, ಮಹಾಭಾರತ ರಾಮಾಯಣಗಳಂತಹ ಕಥಾನಕಗಳ ಮುಖ್ಯಘಟನೆಗಳನ್ನಾಗಲಿ ಪಾತ್ರಗಳನ್ನಾಗಲಿ ಅತಿಯಾಗಿ ಬದಲಿಸಲಾರ; ಹಾಗೆ ಮೂಲದ ಸ್ವರೂಪವೇ ಮರೆಯಾಗುವಂತೆ ಬದಲಿಸಲೂ ಬಾರದು. * ಅಂತೆಯೆ ಯಾವ ಕವಿಯಾದರೂ ಕರ್ಣನ ಪಾತ್ರವನ್ನು ಚಿತ್ರಿಸ ಹೊರಟರೆ ಆ ಪಾತ್ರಕ್ಕೆ ಮಾತೃಕೆಯಾದ ವ್ಯಾಸಭಾರತದ ಚೌಕಟ್ಟಿನಲ್ಲೇ ತನ್ನ ಪಾತ್ರವನ್ನು ಅರಳಿಸಬೇಕಾಗುತ್ತದೆ. ಹಾಗೆ ನೋಡಿದಲ್ಲಿ ಪಂಪನ ಕರ್ಣನಿಗೂ ವ್ಯಾಸರ ಕರ್ಣನಿಗೂ ಹೆಚ್ಚೇನೂ ಕಡಿದಾದ ವ್ಯತ್ಯಾಸ ಕಾಣಬರುವುದಿಲ್ಲ.

ಕನ್ನಡದ ಮೊಟ್ಟಮೊದಲ ಭಾರತಮಹಾಕಾವ್ಯವಾದ ಪಂಪನ ಈ ಕೃತಿ ವ್ಯಾಸರ ಕರ್ಣನನ್ನು ಎಷ್ಟು ಮನೋಹರವಾಗಿ ಕನ್ನಡಕ್ಕೆ ತರಲು ಸಾಧ್ಯವೋ ಅಷ್ಟು ಮನೋಹರವಾಗಿ ತಂದಿದೆ. ಅಲ್ಲಲ್ಲಿ ಮಾಡಿಕೊಂಡಿರುವ ಸಣ್ಣಪುಟ್ಟ ವಿವರದ ವ್ಯತ್ಯಾಸಗಳು ಕರ್ಣನ ಪಾತ್ರವನ್ನು ರಮಣೀಯವಾಗುವಂತೆ ಮಾಡಿವೆ. ಅಷ್ಟೇ ವಿನಾ ಯಾವ ವಿಧವಾದ ದರ್ಶನಧ್ವನಿಯೂ ಹೊಮ್ಮುವಂತೆ ಹೆಚ್ಚೇನೂ ವ್ಯತ್ಯಾಸಗೊಂಡಿಲ್ಲ.

ಪಂಪನ ದೃಷ್ಟಿಯಲ್ಲಿ ವಿಕ್ರಮಾರ್ಜುನವಿಜಯ ಲೌಕಿಕಕೃತಿ. "ಬೆಳಗುವೆನಿಲ್ಲಿ ಲೌಕಿಕಮನ್" ಎಂದು ಅವನೇ ಹೇಳಿಕೊಂಡಿದ್ದಾನೆ. ಆದ್ದರಿಂದಲೆ ಅವನ ಪಾತ್ರಗಳು ಗುಣಪ್ರಮಾಣದಲ್ಲಿ ಎಂತಹ ಔನ್ನತ್ಯಕ್ಕೇರಿದರೂ ಮನುಷ್ಯತ್ವಕ್ಕೂ ಮಾನವ ಲೋಕಕ್ಕೂ ಹೆಚ್ಚು ಸಮೀಪವಾಗಿಯೆ ಚರಿಸುತ್ತವೆ.

ಪಂಪಕವಿ ಮೂರು ಮುಖ್ಯ ಸೂತ್ರಗಳಲ್ಲಿ ಕರ್ಣನ ಜೀವನವನ್ನು ನೆಯ್ದಿದ್ದಾನೆ: ಒಂದು, 'ಕರ್ಣಂಗೆ ದಲ್ ಒಡ್ಡಿತ್ತುಭಾರತಂ,' ಎರಡು, 'ನನ್ನಿಯೊಳಿನತನಯಂ,' ಮೂರು, 'ಕರ್ಣರಸಾಯನಮಲ್ತೆ ಭಾರತಂ', ಉಳಿದುವು ಏನಿದ್ದರೂ ಹಾಸು ಹೊಕ್ಕಾಗುವ ಉಪಸೂತ್ರಗಳಂತೆ. ಪಂಪನ ಕರ್ಣನಿಗೆ ಇನತನಯ ಎಂಬ ಹೆಸರಿರುವಂತೆ ಅವನು ಕಾನೀನ ಎಂಬ ಹೆಸರಿಗೂ ಪಾತ್ರನಾಗಿದ್ದಾನೆ ಈ ಕಾನೀನ ಎಂಬ ಮೂರಕ್ಕರದ ಮಾತು ಕರ್ಣನ ಲಲಾಟಲಿಪಿಯಾಗಿ ಪರಿಣಮಿಸಿದೆ. ಅವನ ಜೀವನದ ದುರಂತತೆಗೆ ಬೀಜಾಕ್ಷರಸ್ವರೂಪವಾಗಿದೆ. ಕರ್ಣನ ದುರಂತತೆ ಮೊದಲುಗೊಂಡಿರುವುದಾದರೂ ಅವನ ಹುಟ್ಟಿನಲ್ಲಿ. ಅದು ಈ ಕಾನೀನ ಎಂಬ ಪದದಲ್ಲಿ ಧ್ವನಿತವಾಗಿದೆ. ಕರ್ಣನ ಜೀವನ ಹೀಗಲ್ಲದೆ ಮತ್ತಾವ ರೀತಿಯಿಂದಲಾದರೂ ಬೆಳೆದಿದ್ದರೆ, ಒಂದು ವೇಳೆ

---

*ಕವಿಕೃತಿಯಲ್ಲಿ ಅನನ್ಯಪರತಂತ್ರತೆ ಎಂಬ ವಿಮರ್ಶಪ್ರಬಂಧವನ್ನು ನೋಡಿ. ಪ್ರ.ಕ. ನಂದನ ಸಂವತ್ಸರ, ಚೈತ್ರ ಸಂಚಿಕೆ.

ಅವನು 'ನನ್ನಿಯೊಳ್ ಇನತನಯನ್' ಆಗಿಲ್ಲದಿದ್ದರೆ, ಭಾರತಕಥೆಯ ರೀತಿ ವಿಧಾನ ಗತಿಗಳೆ ಬೇರೆಯಾಗುತ್ತಿದ್ದುವು. 'ಕರ್ಣಂಗೆ ದಲ್ ಒಡ್ಡಿತ್ತು ಭಾರತಂ' ಎಂಬ ಕವಿಯ ಮಾತು ಈದೃಷ್ಟಿಯಿಂದಲೆ ಸತ್ಯವಾಗಿದೆ. ಇಂತಹ ಕರ್ಣನ ನನ್ನಿಯ ಕಥೆಯಿಂದಲೆ ಭಾರತ 'ಕರ್ಣರಸಾಯನ' ವಾಗಿದೆ.

ಕರ್ಣನನ್ನು ಪಡೆದ ತಾಯಿ ಲೋಕಾಪವಾದಕ್ಕೆ ಹೆದರಿ 'ನಿಧಾನಮನೀಡಾಡುವಂತೆ' ಗಂಗೆಯಲ್ಲಿ ಬೀಸಾಡಿದರೆ, ಮಕ್ಕಳಿಲ್ಲದ ಮಚ್ಚಿಗ ಬಾಳದಿನೇಶನ ನೆಳಲು ನೀರಿನಲ್ಲಿ ನೆಲಸಿದ್ದಂತೆ ಕಾಣುತ್ತಿದ್ದ ಆ ಕಾನೀನನನ್ನು ನಿಧಿಗಂಡನಂತೆ ತೆಗೆದೆತ್ತಿ ಬಿಗಿದಪ್ಪಿಕೊಳ್ಳುತ್ತಾನೆ. ಅಂತಾಗಿ ಕರ್ಣನ ಬಾಳು ಮಹಾಭಾರತದಲ್ಲೆಲ್ಲಾ ಈಡಾಡಿದ ನಿಧಿಯಂತಾಗುತ್ತದೆ.

ರಾಧೇಯನಾದ ಆತನ ತ್ಯಾಗ, ನನ್ನಿ, ಬಿಲ್‌ಬಲ್ಮೆ ಜನರ ಕಿವಿಯಿಂದ ಕಿವಿಗೆ ಹರಿದುದರಿಂದ ರಾಧೇಯ ಕರ್ಣನಾಗುತ್ತಾನೆ. ಮುಂದೆ ಕೌರವನಿಂದ ಅಂಗರಾಜ್ಯಾಭಿಷಿಕ್ತನಾಗಿ ಅಂಗಾಧಿಪತಿಯಾಗುತ್ತಾನೆ. ಆದರೂ 'ಕಾನೀನ'ಎಂಬ ಹೆಸರು ಮಾತ್ರ ಅವನನ್ನು ಅಭಿಶಾಪದಂತೆ ಅಟ್ಟುತ್ತಲೆ ಇರುತ್ತದೆ.

ಕರ್ಣನ ಜೀವನದಲ್ಲಿ ಒದಗಿ ಬಂದ ನೂರಾರು ಪರೀಕ್ಷೆಗಳಲ್ಲಿ ಅತ್ಯಂತ ಉಗ್ರತಮವಾದ ಅಗ್ನಿನಿಕಷವೆಂದರೆ ಕೃಷ್ಣನ ಭೇದೋಪಾಯ. ಭಗ್ನಸಂಧಿಯಾದ ಮೇಲೆ ಕರ್ಣನಲ್ಲಿ ಎಂದೂ ಇಲ್ಲದ ಬಾಂಧವ್ಯವನ್ನು ತೋರುತ್ತ ಬಂದ ಕೃಷ್ಣ ಅವನನ್ನು ತನ್ನೊಡನೆ ಕರೆದೊಯ್ದು, ಅವನ ಜನ್ಮವೃತ್ತಾಂತವನ್ನು, ಅವನು ಕೇಳದಿದ್ದರೂ, ತಿಳಿಸುತ್ತಾನೆ. ಆದರೆ ಇದಕ್ಕಿಂತಲೂ ಭಯಂಕರವಾದ ಸಂಗತಿಯೆಂದರೆ ಕೌರವ ಕರ್ಣರ ಸ್ನೇಹಮಂದಿರವನ್ನೇ ಪುಡಿಮಾಡಲೆಳಸುವಂತಹ ಸಿಡಿಮದ್ದನ್ನು ಕೃಷ್ಣ ಕರ್ಣನ ಕಿವಿಯಲ್ಲರೆದದ್ದು.

ಸೂತಪುತ್ರನಾದ ಕರ್ಣನನ್ನು ಅಂಗಾಧಿಪತಿಯನ್ನಾಗಿ ಮಾಡಿಕೊಂಡು ಆದರಿಸಿ ಪ್ರೀತಿಸಿ ತನ್ನ ಪ್ರಾಣಮಿತ್ರನನ್ನಾಗಿ ಮಾಡಿಕೊಂಡುದಕ್ಕೆ ಸ್ವಾರ್ಥಕಾರಣವೊಂದಿದೆ. ಗಂಗಾತೀರದಲ್ಲಿ ಹಿಂದೆ ಒಂದು ದಿನ ಬೇಟೆಯಾಡುತ್ತಿದ್ದಾಗ ಸತ್ಯಂತಪರೆಂಬ ದಿವ್ಯಜ್ಞಾನಿಗಳು ಕರ್ಣ ಕೌರವರನ್ನು ಕಂಡಾಗ ಅವರಲ್ಲಿ ಕರ್ಣನನ್ನು ಮಾತ್ರ ಸತ್ಕರಿಸಿದರಂತೆ! ಅದನ್ನು ಕಂಡು ಮಚ್ಚರಗೊಂಡ ಕೌರವ, ಕರ್ಣನನ್ನು ಅತ್ತ ಕಳುಹಿ, ತನಗೆ ರಾಜರಾಜನಾದ ತನಗೆ-ಹಾಗೆ ಅಗೌರವಿಸಿ ಮೀಂಗುಲಿಗನಾದ ಕರ್ಣನಿಗೇಕೆ ಸತ್ಕಾರವಿತ್ತಿರಿ ? ಎಂದು ಋಷಿಗಳನ್ನು ಕೇಳುತ್ತಾನೆ. ಅವರಿಂದ ಕರ್ಣಜನ್ಮವೃತ್ತಾಂತವನ್ನು ತಿಳಿದ ಕೌರವ 'ಪಾಟಿಸುವೆನೊಯ್ಯನೆ ಮುಳ್ಳೊಳೆ ಮುಳ್ಳನ್' ಎಂದು ಎದೆಯೊಳಗೆ ಹಿಗ್ಗಿ ಕರ್ಣನನ್ನು ನಯದಿಂದ ಪೆರ್ಚಿಪೊರೆದನಂತೆ! ಎಂತಹ ಭೇದೋಪಾಯದ ಭಯಂಕರ ಸಿಡಿಮದ್ದು. ಅದನ್ನು ಕೇಳಿದ ಕರ್ಣನ ಮನಸ್ಥಿತಿಯಾದರೂ ಏನಾಗಿದ್ದಿರಬೇಕು ? ಅದನ್ನು ಅರಿವುದಾದರೂ ಎಂತು ? ತಾಯಿಲ್ಲದೆ ಪಿತನಿಲ್ಲದೆ ಕುಲಹೀನನೆಂದು ಕರೆಸಿಕೊಂಡು ನೂರಾರು ವಿಧವಾದ ಯಾತನೆಯನ್ನನುಭವಿಸುತ್ತಿದ್ದ ಅವನಿಗೆ

ಸೂರ್ಯನೆ ತಂದೆ, ಕುಂತಿಯೆ ತಾಯಿ, ಪಾಂಡವರೆ ತಮ್ಮಂದಿರು ಎಂದು ತಿಳಿದಂದು ಹೃದಯದಲ್ಲಿ ಎಂಥ ಸಂವೇದನೆಯಾಯಿತೋ! ಆದರೆ ಅಷ್ಟರಲ್ಲೆ ಕೌರವನ ಕೌಟಿಲ್ಯವನ್ನು ಹೇಳಿ ಭೇದಿಸಲು ಯತ್ನಿಸಿತು ಕೃಷ್ಣನ ಕೌಟಿಲ್ಯ.

ಕೃಷ್ಣ ತನ್ನ ಹುಟ್ಟನ್ನೇಕೆ ಅರುಹಿದನೊ ಎಂದು ಕರ್ಣ ಮೊದಲು ಚಿಂತಿಸುತ್ತಾನೆ. ಕೃಷ್ಣನ ಭೇದೋಪಾಯವೂ ಭಗ್ನವಾಯಿತೆಂಬುದಕ್ಕೆ ಅದೇ ಸಾಕು ಪ್ರಬಲ ಸಾಕ್ಷಿ. ಕರ್ಣನ ಮನಸ್ಸು ಕೃಷ್ಣ ಹೇಳಿದ ಕೌರವನ ಕೌಟಿಲ್ಯದ ಕಡೆಗೆ ಹರಿಯದೆ ಮಧುಸೂದನ ತನ್ನ ಹುಟ್ಟು ಹೇಳಿ ಕೌರವನನ್ನು ಭೇದಿಸಿದನಲ್ಲಾ, ಕೌರವನಿಗೆ ದೈವ ಬಲವಿಲ್ಲದಾಯಿತಲ್ಲಾ ಎಂದು ಚಿಂತಿಸತೊಡಗುತ್ತದೆ ಕೃಷ್ಣ ಹೇಳಿದ ಕೌರವನ ಸ್ನೇಹದ ಛದ್ಮನೆಯನ್ನು ನಂಬುವುದಿರಲಿ, ನಂಬಬಾರದೆಂದೂ ಕೂಡ ಅವನ ಮನಸ್ಸು ಆಲೋಚಿಸುವುದಿಲ್ಲ. ಹಿಂದೊಂದು ದಿನ ಅಂತಃಪುರದಲ್ಲಿ ತನ್ನ ಸ್ನೇಹಿತನ ಪಟ್ಟದರಸಿಯೊಡನೆ ಪಣವೊಡ್ಡಿ ನೆತ್ತವಾಡುತ್ತಿದ್ದಂದು ಸೋತ ಭಾನುಮತಿ ಸೋಲವನ್ನು ಕೊಡಸೆ ತಪ್ಪಿಸಿಕೊಳ್ಳಲೆಳಸಿದುದೂ; ಆಗ ಆ ಕಲಹದಲ್ಲಿ ಪಣವಾಗಿ ಒಡ್ಡಿದ್ದ ಅವಳ ಮುತ್ತಿನ ಹಾರ ಹರಿದುಹೋಗುವುದೂ, ಅದನ್ನು ನೋಡಿ ಏನು ಅಚಾತುರ್ಯವಾಗಿ ಹೋಯಿತು ಎಂದು ತಾನು ಅಳುಕುತ್ತಿದ್ದುದೂ, ದುರ್ಯೋಧನ ಮುತ್ತು ಚೆಲ್ಲಿರುವುದನ್ನೂ ಕರ್ಣನ ಮನಸ್ಥಿತಿಯನ್ನೂ ಕಂಡು 'ಇವನಾಯ್ವುದೊ ತಪ್ಪದೆ ಪೇಟುಮ್' ಎಂದು ಗಮನವನ್ನು ಮುತ್ತನ್ನು ಆಯುವ ಕಡೆಗೆ ಹರಿಸಿ ಆದುದು ಅಚಾತುರ್ಯವೆ ಅಲ್ಲ ಎಂಬಂತೆ ವರ್ತಿಸಿ ಅವನ ಅಳುಕನ್ನು ಪರಿಹರಿಸಿದುದೂ, ಎಲ್ಲ ಚಿತ್ರವೂ ಕರ್ಣನ ಸ್ಮೃತಿ ಪಟಲದ ಮೇಲೆ ಹಾಯ್ದು ಹೋಗುತ್ತವೆ. "ನೆತ್ತಮನಾಡಿ ಭಾನುಮತಿ ಸೋಲ್ತೊಡೆ, ಸೋಲಮನ್ ಈವುದೆಂದು ಕಾಡುತ್ತಿರೆ, ಲಂಬಣಂ ಪಱಿಯೆ, ಮುತ್ತಿನ ಕೇಡನೆ ನೋಡಿ ನೋಡಿ, ಬಟ್ಟಿಕ್ಕುತ್ತಿರೆ, ಏವಮಿಲ್ಲದೆ ಇವನಾಯ್ವುದೊತಪ್ಪದೆ ಪೇಟುಮ್, ಎಂಬ ಭೂಪೋತ್ತಮನಂ ಬಿಸುಟ್ಟಿರದೆ, ನಿಮ್ಮೊಳಿ ಪ್ರೇಕ್ಕೊಡೆ ಬೇಡನಲ್ಲನೇ?'

ಇಲ್ಲಿ ವ್ಯಕ್ತವಾದ ರಾಧೇಯನ ಸ್ನೇಹಶಕ್ತಿಯ ಹೊಡೆತಕ್ಕೆ ರಾಜತಂತ್ರಜ್ಞ ಕೃಷ್ಣನ ಭೇದೋಪಾಯ, ಕೌಟಿಲ್ಯ, ಕುಯುಕ್ತಿಗಳೆಲ್ಲವೂ ನುಚ್ಚು ನೂರಾಗುತ್ತವೆ. ಮುಂದೇನೂ ನುಡಿಯಲರಿಯದೆ ಅವನು ಹಿಂದಿರುಗಬೇಕಾಗುತ್ತದೆ.

ಮುಳ್ಳಿಂದ ಮುಳ್ಳು ತೆಗೆಯುವಂತೆ, ಪಾಂಡವರನ್ನು ಕರ್ಣನಿಂದಲೇ ನಿರ್ಮೂಲ ಮಾಡಿಸಬೇಕೆಂಬ ಸ್ವಾರ್ಥ ಮೂಲವಾದ ಅಭಿಸಂಧಿ ಮಾತ್ರವಿದ್ದಿದ್ದರೆ ಸ್ನೇಹ ಈ ಆತ್ಮೀಯತೆಯ ಅಂತಃಪುರದ ರಾಜರಾಜೇಶ್ವರಿಯ ಎಡೆಗೆ ಏರಲು ಹೇಗೆ ತಾನೆ ಸಾಧ್ಯವಾಗುತ್ತಿತ್ತು? ರಾಜರಾಣಿಯರ ಸರಸಸಲ್ಲಾಪಗಳನ್ನು ಕರ್ಣ ಕುರುಚಕ್ರವರ್ತಿಯ ಅಂತಃಪುರದಲ್ಲಿದ್ದು ಕೇಳಿ ನೋಡುತ್ತಿದ್ದನೆಂದಿದ್ದರೇ ಸಾಕಿತ್ತು ಅವರಿಬ್ಬರ ಅಗಾಧ ಮೈತ್ರಿಯನ್ನು ಸಾರಿ ಹೇಳುವುದಕ್ಕೆ. ಆದರೆ ನೆತ್ತವಾಡುವಷ್ಟರ ಮಟ್ಟಿನ ನಿರ್ಮಲ ಮೈತ್ರಿ ಬೆಳೆದಿರಬೇಕಾದರೆ ಆ ಮೈತ್ರಿಗೆ ಕಳಂಕಾರೋಪ ಮಾಡಲು ಸಾಧ್ಯವೇ? ಆದ್ದರಿಂದಲೇ ಆ ವಿಚಾರದಲ್ಲಿ ಕೃಷ್ಣನ ಬಾಯಿ ಮುಚ್ಚಿ ಹೋದದ್ದು.

ಈ ಒಂದು ಘಟನೆ ಪಂಪ ಅರಿಕೇಸರಿಯರ ಜೀವನದಲ್ಲೇ ನಡೆದಿದ್ದಿರಬಹುದೆಂದು ತೋರುತ್ತದೆ. ಅಥವಾ ಅರಿಕೇಸರಿಯ ಆಸ್ಥಾನದಲ್ಲಿದ್ದ ಕರ್ಣನಂತಹ ಮತ್ತೊಬ್ಬ ಮಿತ್ರನ ಜೀವನದಲ್ಲಿ ಇಂತಹದೊಂದು ಘಟನೆ ನಡೆದಿದ್ದುದನ್ನು ಪಂಪ ತನ್ನ ಕಾವ್ಯದಲ್ಲಿ ಉಪಯೋಗಿಸಿಕೊಂಡಿದ್ದಾನೆ ಅಷ್ಟೆ.

ಮುಂದೆ ಕೃಷ್ಣ ಕಳುಹಿಸಿದ ಕುಂತಿ ಬಂದು ಮಗನನ್ನು ಬೇಡುವ ಸನ್ನಿವೇಶದಲ್ಲಿ ಕರ್ಣ ನುಡಿಯುವ ಒಂದು ಮಾತು ಮೇಲೆ ಕೃಷ್ಣನಿಗೆ ಹೇಳಿದ ಮಾತಿನಷ್ಟೆ ಪರಿಣಾಮಕಾರಿಯಾಗಿದೆ.

> ಮೀಂಗುಲಿಗನೆನ್ ಆಗಿಯುಮ್ ಅಣಮ್
> ಆಂ ಗುಣಮನೆ ಬಿಸುಟೆನಿಲ್ಲ; ನಿಮಗಂ ಮಗನಾ
> ದಂಗೆನಗೆ ಬಿಸುಡಲ್ ಅಕ್ಕುಮೆ ?
> ನೀಂ ಗಳ ಪಂಬಲನೆ ಬಿಸುಡಿಮ್ ಇನ್ ಎನ್ನೆಡೆಯೊಳ್.

ಎಂತಹ ಮಾತು. ಆದರೇನು? ವ್ಯಾಪಾರಕ್ಕಾಗಿ ಬಂದ ತಾಯಿ ಸರಳನ್ನು ಬೇಡಿ ಪಡೆದುಕೊಂಡು ಹೋಗುತ್ತಾಳಷ್ಟೆ.

ತನ್ನ ಜನ್ಮವೃತ್ತಾಂತ ಕೃಷ್ಣನಿಂದ ತಿಳಿದಂತೆ ತಾನು ಎಂಥ ದುಃಖಿ ಎಂಬುದೂ 'ಕರ್ಣನಿಗೆ ತಿಳಿಯಿತು. ತನ್ನ ಸ್ವಾಮಿಗೆ ದೈವಬಲವಿಲ್ಲ ಎಂಬುದು ಮಾತ್ರವಲ್ಲ ತನಗೂ ದೈವಬಲ ಒಂದಿನಿತೂ ಇಲ್ಲವೆಂಬುದು ತಿಳಿಯುತ್ತದೆ. ತನ್ನ ಸ್ವಾಮಿಯ ಅಳಿವು ಸ್ವತಸ್ಸಿದ್ಧವೆಂದೂ ಹೊಳೆಯುತ್ತದೆ. ಅಂತಾಗಿ ಆಳ್ದನಿಗೆ ತನ್ನನ್ನು ತಾನು ಬೇಳುವುದೆ ಪರಮಯೋಗ್ಯವಾದ ಕರ್ತವ್ಯವೆಂದು ದೃಢಸಂಕಲ್ಪಕ್ಕೆ ಬರುತ್ತಾನೆ.

> ಕುರುಪತಿಗಿಲ್ಲ ದೈವಬಲಮ್, ಆಜಿಗೆ ಮೇಲ್ಮಲೆಗೆಯ್ವರಾಗಳುಂ
> ಗುರು, ಗುರುಪುತ್ರ, ಸಿಂಧುಸುತರ್. ಆಳ್ದನುಮ್ ಎನ್ನನೆ ನೆಚ್ಚಿ, ಪೆರ್ಚಿ ಮುಂ
> ಪೊರೆದನ್; ಇದಿರ್ಚಿ ಕಾದುವರುಮ್ ಎನ್ನಯ ಸೋದರರ್, ಎಂತುನೋಡಿ ಕೊ
> ಕ್ಕರಿಸದೆ ಕೊಲ್ವೆನ್, ಎನ್ನೊಡಲನ್ ಆಂ ತವಿಪೆಂ ರಣರಂಗ ಭೂಮಿಯೊಳ್

ಗುರುವಾಗಲಿ ಗುರುಪುತ್ರ ಸಿಂಧುಪುತ್ರರಾಗಲಿ, ತನ್ನ ಸ್ವಾಮಿಯಲ್ಲಿ ತನ್ನಂತೆ ಪೂರ್ಣನಿಷ್ಠೆಯಿಲ್ಲದವರೆಂಬ ಸಂಶಯವಿದ್ದುದರಿಂದಲೆ ಅವನಿಗೆ ತನ್ನ ಸ್ವಾಮಿಕಾರ್ಯದಲ್ಲಿ ತನ್ನ ಪಾತ್ರವೇನೆಂಬುದು ಸ್ಪಷ್ಟಗೊಂಡಿತು. ಈ ಕಾರಣದಿಂದಲೆ, ಭೀಷ್ಮರಿಗೆ ಸೇನಾಧಿಪತ್ಯವನ್ನು ವಹಿಸಿಕೊಟ್ಟಾಗ ಕರ್ಣ ಸ್ವಲ್ಪ ಮೇರೆ ಮೀರಿ ವರ್ತಿಸುತ್ತಾನೆ. ಭೀಷ್ಮರನ್ನು ಹಳಿಯುವುದು ಮಾತ್ರವಲ್ಲ, ಪಟ್ಟಕಟ್ಟುವುದಾದರೆ ತನಗೆ ಕಟ್ಟು ಎಂದು ಎದೆ ತಟ್ಟುತ್ತಾನೆ.

ಏಕೆ ಹೀಗೆ ವರ್ತಿಸುತ್ತಾನೆ ಕರ್ಣ? ಭೀಷ್ಮರ ವಿಷಯದಲ್ಲಿ ಅವನಿಗೆ ಮೊದಲಿದ್ದ ಪೂಜ್ಯ ಭಾವನೆ ಅವರು ತನ್ನ ವಂಶಪಿತಾಮಹರೆಂದು ತಿಳಿದ ಮೇಲೆ ಇಮ್ಮಡಿಗೊಂಡಿರಬಾರದಾಗಿತ್ತೆ? ಹಾಗಿದ್ದರೇಕೀ ನುಡಿ? ಅದಕ್ಕೆ ಮೇಲೆ ಹೇಳಿದ ಕಾರಣವೆ ಮುಖ್ಯವಾದದ್ದು. ಅದನ್ನೇ ಭೀಷ್ಮರೂ ಕೂಡ ಮತ್ತೊಂದು ರೀತಿಯಲ್ಲಿ ಹೇಳುತ್ತಾರೆ.

ಕಲಿತನದುರ್ಕು, ಜವ್ವನದ ಸೊರ್ಕು, ನಿಜೇಶನ ನಚ್ಚು, ಮಿಕ್ಕತೋ
ಳ್ವಲದ ಪೊಡರ್ಪು, ಕರ್ಣ ನಿನಗುಳ್ಳನಿತು ಏನ್ಎನಗುಂಟೆ ? ಭಾರತಂ
ಕಲಹವ್, ಇದಿರ್ಚುವಂ ಹರಿಗನ್, ಅಪ್ಪೊಡೆ ಪೊಕ್ಕಳಮೇಕೆ ನೀಂ ಪಳಂ
ಚಲೆದಪೆ ಅಣ್ಣ! ಸೂೞ್ ಪಡೆಯಲಪ್ಪುದು ಕಾಣ ಮಹಾಜಿರಂಗದೊಳ್.

ಅವರು ಹೇಳಿದ 'ಸೂೞ್ ಪಡೆಯಲಪ್ಪುದು ಕಾಣ ಮಹಾಜಿರಂಗದೊಳ್' ಎಂಬ ಮಾತೆ ಸಾಕ್ಷಿ ಕರ್ಣನ ಶಂಕೆಗೆ! ಕರ್ಣನಿಗೂ ಸೂೞ್ ಬರುತ್ತದಂತೆ! ಆದರೆ ಅವನೆ ಕೊನೆಯಲ್ಲ; ಅವನದೂ ಸರದಿ ಮಾತ್ರ! ಮಹಾಭಾರತದ ಯುದ್ಧದ ಪೂರ್ವವಿಧಿ ಲಿಖಿತವನ್ನು ಭೀಷ್ಮರು ಓದುತ್ತಾರೆ, ಮೇಲಿನ ಮಾತಿನಲ್ಲಿ. ಕರ್ಣನಿಗೂ ಅದರ ಅರಿವಾಗಿದ್ದುದರಿಂದಲೆ ಅವನು ತನ್ನನ್ನು ತಾನೆ ಮಹಾಜಿಯಜ್ಞದಲ್ಲಿ ತವಿಸಿಕೊಳ್ಳುವುದಾಗಿ ನಿರ್ಧಾರಕ್ಕೆ ಬಂದಿರುತ್ತಾನೆ.

ಭೀಷ್ಮಕರ್ಣರ ಈಮಾತಿನ ನಡುವೆ ದ್ರೋಣರು ಕರ್ಣನನ್ನು ಕುರಿತು ಕಹಿಯಾದ ಒಂದು ಮಾತನಾಡಿರುತ್ತಾರೆ. ಭೀಷ್ಮರನ್ನು ಹಳಿದ ಕರ್ಣನ ನಾಲಗೆ ಅವನ ಕುಲಕ್ಕೆ ತುಬ್ಬುಗಾರ ಎಂದು ಹೇಳಿರುತ್ತಾರೆ. ಹುಟ್ಟಿದಂದಿನಿಂದಲೂ ಅದೇ ಕುಲ, ಕುಲ, ಎಂಬ ಮಾತನ್ನೇ ಕೇಳಿ ನೊಂದು ರೋಸಿಹೋಗಿದ್ದ ಕರ್ಣನ ಹೃದಯ ದ್ರೋಣರ ಮಾತಿಗೆ ಕೆರಳಿ ನುಡಿಯುತ್ತದೆ. ತಾನು ಎಲ್ಲರಿಗೂ ಪವಿತ್ರವಾದ ಕುಲದಲ್ಲಿ ಸಂಭವಿಸಿದವನೆಂಬುದು ತಿಳಿದಿದ್ದರೂ ಅವನ ಗಮನ ಕುಲ ಎಂದು ನಾವು ಕರೆಯುವ ಕುಲದ ಕಡೆಗೆ ಹರಿಯುವುದಿಲ್ಲ.

ಕುಲಮನೆ ಮುನ್ನಮ್ ಉಗ್ಗಡಿಪಿರ್, ಏಂ ಗಳ! ನಿಮ್ಮ ಕುಲಂಗಳಾಂತು
ಮಾರ್ಮಲೆವನನ್ ಅಟ್ಟಿ ತಿಂಬುವೆ? ಕುಲಂ ಕುಲಮಲ್ತು, ಚಲಂ ಕುಲಂ, ಗುಣಂ
ಕುಲಮ್, ಅಭಿಮಾನವನ್ ಒಂದೆ ಕುಲಮ್, ಅಣ್ಮು ಕುಲಂ, ಬಗೆವಾಗಳ್ ಈಗಳ್ ಈ
ಕಲಹದೊಳ್ ಅಣ್ಣ! ನಿಮ್ಮ ಕುಲವಾಕುಲಮಂ ನಿಮಗುಂಟು ಮಾಡುಗುಂ!

ಮೇಲಿನ ಮಾತಿನಲ್ಲಿ ಕರ್ಣ, ದ್ರೋಣರ ವಿಚಾರ ಸರಣಿಯನ್ನು ಕುರಿತು ಕೆರಳಿರುವನೆ ಹೊರತು ಗುರುದ್ರೋಣರನ್ನು ಕುರಿತಲ್ಲ. ಈ ಮಾತಿನ ಸತ್ಯ ಮುಂದೆ, ಭೀಷ್ಮರಾದ ಮೇಲೆ, ತನಗೆ ಸರದಿ ಬಂದಾಗ ಕರ್ಣನಾಡುವ ಮಾತಿನಲ್ಲಿ ಸುಸ್ಪಷ್ಟವಾಗಿದೆ, ಅದು ಅವನ ಸಹಜವಿನಯಕ್ಕೆ ಸಾಕ್ಷಿಯಾಗಿದೆ.

ಸುರಸಿಂಧೂದ್ಭವನಿಂ ಬೞಿಕ್ಕೆ ಪೆಱರಾರ್ ಸೇನಾಧಿಪತ್ಯಕ್ಕೆ? ತ
ಕ್ಕರೆ ಲೋಕೈಕಧನುರ್ಧರಂ ಕಳಶಜಂ ತಕ್ಕಂ, ನದೀನಂದನಂ
ಗೆ ರಣಕ್ಕಾಂ ನೆರವಾದೆನ್ ಅಪ್ಪೊಡೆ ಇನಿತೇಕೆ ಆದಪ್ಪುದು ಈಪೊೞ್ತಿಪೊ
ೞ್ತಿರವೇಡ ಈವುದು ಬೀರವಟ್ಟಮನ್ಅದಂ ದ್ರೋಣಂಗೆ ನೀಂ ಭೂಪತೀ!

ಕರ್ಣನ ಸರದಿಯೂ ಬಂತು. ಅಂದು ಭೀಷ್ಮರೊಡನೆ ಅವಿನಯದಿಂದ ವರ್ತಿಸಿದ ಕರ್ಣ ಇಂದು ಅದೇ ಭೀಷ್ಮರನ್ನು ಮೂರು ಬಾರಿ ಪ್ರದಕ್ಷಿಣೆಗೊಂಡು ಅವರಲ್ಲಿ ಕ್ಷಮಾಭಿಕ್ಷೆ ಬೇಡುವ ದೃಶ್ಯವಂತೂ ಯಾರಿಗಾದರೂ ಕರ್ಣನ ವಿಷಯದಲ್ಲಿ ನಮಸ್ಕಾರಬುದ್ಧಿ ಬರುವಂತೆ ಮಾಡದಿರದು.

ಆವ್ ಮಾತಱಿಯದೆ ಮುಳಿದುಂ
ನಿಮ್ಮಡಿಯಂ ನೋಯೆ ನುಡಿದೆನ್ ಉಱದೆ ಏಳಿಸಲ್ ಏನ್
ಎಮ್ಮಳವೆ? ಮಱೆವುದು ಆ ಮನದ
ಉಮ್ಮಚ್ಚರವ್ ಅಜ್ಜ ! ನಿಮ್ಮನ್ ಎರೆಯಲೆ ಬಂದೆಂ!

ತ್ಯಾಗಮೂರ್ತಿ ಕರ್ಣನ ವಿನಯಶ್ರೀಮಂತಿಕೆಯನ್ನು ಕಂಡ ಭೀಷ್ಮರು ಅವನು ಕುಲಹೀನನಲ್ಲ, ತಮ್ಮ ವಂಶಸ್ಥನೆ ಇರಬೇಕು, ಎಂದು ಭಾವಿಸುತ್ತಾರೆ. ಮಾತ್ರವಲ್ಲ, ತಮ್ಮ ಗುರುಗಳಲ್ಲಿ ಕಲಿತ ಕರ್ಣ ತಮ್ಮ ಬಂಧುವೆಂದು ಬಾಯ್ತುಂಬ ನುಡಿಯುತ್ತಾರೆ. ಭೀಷ್ಮರ ಇಂತಹ ಸಮುಸ್ಕಂಧಬಂಧುವಾಗುವ ಭಾಗ್ಯ ಮಹಾಭಾರತದಲ್ಲಿ ಕರ್ಣನಿಗಲ್ಲದೆ ಮತ್ತಾರಿಗೆ?

ಅರ್ಜುನನೆ ತನ್ನನ್ನು ಯುದ್ಧದಲ್ಲಿ ಮಾರಾಂತ ವೇಳೆಯಲ್ಲಿ ಕರ್ಣ 'ಪುರಿಗಣೆ' ಯನ್ನು ತೊಡದೆ ರೌದ್ರಶರವೊಂದಕ್ಕೆ ಕೈನೀಡುತ್ತಾನೆ. ಅಷ್ಟೆ ಅಲ್ಲ; ಶಿರೋಭಾಗಕ್ಕೆ ಉದ್ದೇಶಪೂರ್ವಕವಾಗಿಯೇ ಪ್ರಯೋಗಿಸುತ್ತಿದ್ದ ಆ ಬಾಣವನ್ನು ಎದೆಗೆ ತೊಡೆಂದು ಶಲ್ಯನು ನುಡಿದರೂ ಕೇಳುವುದಿಲ್ಲ. ನಿಷ್ಫಲಗೊಂಡ ಆ ಬಾಣ ಹಿಂದೆ ಬಂದು ತನ್ನನ್ನು ಮತ್ತೆ ಪ್ರಯೋಗಿಸೆಂದು ಕೇಳಿಕೊಂಡರೂ ಅದಕ್ಕೆ ಕಿವಿಗೊಡದೆ ಮುಗುಳ್ನಗೆ ನಗುತ್ತ 'ನೀನು ಯಾರೆಂದು ತಿಳಿಯದೆ ತೊಟ್ಟೆ, ತಿಳಿದಮೇಲೆ ಇನ್ನು ತೊಡುವೆನೆ?' ಎಂದು ನಿರಾಕರಿಸುತ್ತಾನೆ. ಕರ್ಣನ ನನ್ನಿಗೆ ಇದಕ್ಕಿಂತಲೂ ಬೇರಾವ ನಿದರ್ಶನ ಬೇಕು? ತನ್ನ ತಾಯಿಗೆ ಪುರಿಗಣೆಯನ್ನು ತೊಡುವುದಿಲ್ಲವೆಂದು ಕೊಟ್ಟ ಮಾತನ್ನು ನಡೆಸಿಕೊಂಡ. ಆದರೆ ಅವನು ಪುರಿಗಣೆಯನ್ನು ಬಿಟ್ಟು ತೊಟ್ಟಂತಹ ಬೇರೊಂದು ಬಾಣವಾದರೂ ಉಗ್ರತರವಾದ ಸರ್ಪಾಸ್ತ್ರವೇ ಆಗಿತ್ತು. ಅದು ಹಾಗೆಂದು ತಿಳಿದಿದ್ದರೆ ಅದನ್ನು ತೊಡುತ್ತಿರಲಿಲ್ಲವಂತೆ !

ಏಕಗ್ರಾಹಿ ಒರಟ ಎಂದು ಬೈದು ಶಲ್ಯನು ಧಿಕ್ಕರಿಸಿ ಹೊರಟು ಹೋದ ಮೇಲೂ ಏಕಾಂಗಿಯಾಗಿಯೇ ಕರ್ಣ ಯುದ್ಧಮಾಡುತ್ತಿದ್ದರೆ ಧರ್ಮದೇವತಾ ಪ್ರತಿಮೆಯಾದ ಭೂದೇವಿ ಮುನಿದು ಅವನ ರಥವನ್ನು ನುಂಗುತ್ತಾಳೆ. ಅದಕ್ಕೆ ಕಾರಣ ಅವನ ಧರ್ಮವಲ್ಲ; ಅವನು ವಹಿಸಿಕೊಂಡ ಪಕ್ಷದ ಧರ್ಮ. ಕರ್ಣನು ನಿಂತ ಪಕ್ಷ ಹುಸಿನೆಲವಾಗಿತ್ತು. ಆದರೂ ಆತ್ಮಧರ್ಮಶಕ್ತಿಯಿಂದ ರಥವನ್ನು ಮೇಲೆತ್ತುತ್ತಾನೆ. ಆದರೇನು? ದೈವೀಪಕ್ಷಕ್ಕೆ ಇದಿರಾಂತ ಆಸುರೀಪಕ್ಷಕ್ಕೇ ಪರವಾಗಿ ನಿಂತು ಅವನ ಅಸಹಾಯ ಸಾಹಸ ನಡೆಯದಾಗುತ್ತದೆ; ವಿಫಲವಾಗುತ್ತದೆ.

ರಥದ ಗಾಲಿಯನ್ನು ಮೇಲೆತ್ತುವಂದು ಕರ್ಣನನ್ನು ಕೊಲ್ಲೆಂದು ಕೃಷ್ಣ ಅರ್ಜುನನನ್ನು ಪ್ರಚೋದಿಸುತ್ತಾನೆ. ಕರ್ಣನಲ್ಲಿ ಸೋದರಭಾವವನ್ನು ಅನುಭವಿಸುತ್ತಿದ್ದ ಅರ್ಜುನ ಹಿಂದು ಮುಂದು ನೋಡುವನಿತರಲ್ಲೆ ಕರ್ಣನ ತೇಜಸ್ಸು ತಾನು ಎತ್ತಣಿಂದ ಬಂದಿತೋ ಅತ್ತಣಿಗೆ ರವಿಯೆಡೆಗೆ ತೆರಳುತ್ತದೆ.

ಪಂಪಕವಿ ತನ್ನಾಳ್ದನಾದ ಅರಿಕೇಸರಿಯನ್ನು ಅರ್ಜುನನೊಡನೆ ತಗುಳ್ಚಿ ತನ್ನ

ಕೃತಿರಚನೆಯನ್ನು ಮಾಡಿದ್ದರೂ ಮಹಾಭಾರತದಲ್ಲಿ ಪ್ರತಿನಾಯಕನಾದ ಕರ್ಣನ ಪಾತ್ರ ಎಂತಹದೆಂಬುದನ್ನು ಅವನು ವಿಮರ್ಶಕನಾಗಿಯೂ ಪರಿಶೀಲಿಸಿದ್ದಾನೆ. ಮಹಾ ಭಾರತದ ಎಲ್ಲ ವ್ಯಕ್ತಿಗಳ ಆಳ ಎತ್ತರಗಳನ್ನು ಅಳೆದು ತೂಗಿ ತನ್ನ ಕೃತಿಯ ಕೊನೆಯಲ್ಲಿ ಹೇಳುತ್ತಾನೆ 'ನನ್ನಿಯೊಳಿನತನಯಂ' ! ಎಂದು.

ಕೊನೆಯದಾಗಿ ಕವಿಯ ಅನುಕಂಪನಶೀಲವಾದ ಮಹಾಪ್ರತಿಭೆ ಕರ್ಣಾವಸಾನದಲ್ಲಿ ಅವನ ಗೌರವಾರ್ಥವಾಗಿ ಈ ಕವನಮಣಿ ಕಲಶದಲ್ಲಿ ಸೌರಗಭಸ್ತಿಯನ್ನಿಟ್ಟು ಮಂಗಳಾರತಿಯೆತ್ತಿ ನಾಲ್ಕೇ ಪಂಕ್ತಿಗಳಲ್ಲಿ ಒಂದು ಮಹಾಪ್ರಗಾಥವನ್ನೇ ಹಾಡುತ್ತಿದೆ, ದಿಗ್ಗಜಗಳೇ ಕಿವಿನಿಮಿರಿ ಆಲಿಸುವಂತೆ !

ನೆನೆಯದಿರ್ ಅಣ್ಣ ಭಾರತದೊಳ್ ಇನ್‌ಪೆಱರಾರುಮನ್; ಒಂದೆ ಚಿತ್ತದಿಂ
ನೆನೆವೊಡೆ ಕರ್ಣನಂ ನೆನೆಯ; ಕರ್ಣನೊಳ್‌ಆರ್ ದೊರೆ? ಕರ್ಣನೇಱು ಕ
ರ್ಣನ ಕಡುನನ್ನಿ, ಕರ್ಣನಳವು, ಅಂಕದ ಕರ್ಣನ ಚಾಗಮ್‌ಎಂದು ಕ
ರ್ಣನ ಪಡೆಮಾತಿನೊಳ್ ಪುದಿದು, ಕರ್ಣರಸಾಯನಮಲ್ತೆ ಭಾರತಂ

ಹೌದು ! ಕರ್ಣರಸಾಯನಮಲ್ತೆ ಭಾರತಂ !

ಕೆ. ವಿ. ಪುಟ್ಟಪ್ಪ

# ರಸಿಕಬ್ರಹ್ಮಜ್ಞಾನಿಭರತೇಶ

ಭರತೇಶನ ಪಾತ್ರವನ್ನು ಸರ್ವಾಂಗ ಸುಂದರವಾಗುವಂತೆ ಮಾಡಲು ಮಹಾಕವಿ ರತ್ನಾಕರ ತನ್ನ ಸರ್ವಶಕ್ತಿ ಮತ್ತು ಯುಕ್ತಿಗಳನ್ನೆಲ್ಲ ಉಪಯೋಗಿಸಿಕೊಂಡಿದ್ದಾನೆ. ಶ್ರೀಕೃಷ್ಣನನ್ನು ಜಗದ್ವಂದ್ಯನನ್ನಾಗಿ ಮಾಡಲು ಕುಮಾರವ್ಯಾಸ ಹೇಗೆ ತನ್ನ ಭಕ್ತಿಯ ಕುಂಚವನ್ನು ಭಾರತದುದ್ದಕ್ಕೂ ಆಡಿಸಿರುವನೋ, ಬಸವರಾಜರಗಳೆಯಲ್ಲಿ ಬಸವಣ್ಣನವರನ್ನು ಕಾರಣಪುರುಷರೆಂದು ಪ್ರತಿಪಾದಿಸಲು ಹರಿಹರಮಹಾಕವಿ ಪವಾಡಗಳ ಪಂಕ್ತಿಯನ್ನು ಎಂತು ಸೃಷ್ಟಿಸಿರುವನೋ ಅಂತೆಯೇ ರತ್ನಾಕರನು ಭರತೇಶನನ್ನು ರಸಿಕನಾದ ಬ್ರಹ್ಮಜ್ಞಾನಿಯಾಗಿಸಲು ಕಾವ್ಯದುದ್ದಕ್ಕೂ ಬಯಸಿದ್ದಾನೆ. ರತ್ನಾಕರನ ಭರತೇಶ ಒಮ್ಮೆ ನಮ್ಮ ಕಣ್ಣಿಗೆ ಕುಸುಮಕೋಮಲನಾದ ಅಭಿನವ ಮನ್ಮಥನಂತೆ ಕಂಡು ಮರುಕ್ಷಣದಲ್ಲೇ ಜಿತೇಂದ್ರಿಯನಾದ ಮಹಾಮುನಿಯಂತೆ ತೋರದಿರನು. ಭರತೇಶ ಹೆಂಗಳಿದಿರು ಮಂಜುಗಡ್ಡೆಯಂತೆ ಕರಗುವನು ಲತಾಂಗಿಯರಿಗೆ ಈ ಮಹಾಪುರುಷನನ್ನು ಕಂಡರೆ ಸಾಕು, ಶೃಂಗಾರ ತಾನಾಗಿ ಉಕ್ಕಿ ಹರಿಯುವುದನ್ನು ಭರತೇಶ ವೈಭವದುದ್ದಕ್ಕೂ ಕಾಣುವೆವು. ಭರತೇಶನ ಸಂಸಾರದ ನಾನಾಚಿತ್ರಗಳನ್ನು ರಮಣೀಯವಾಗಿ ರತ್ನಾಕರ ಚಿತ್ರಿಸಿ ಭೂಮಿಗೇ ಸಗ್ಗವನ್ನಿಳಿಸಿರುವನು. ಭರತೇಶವೈಭವದ ಪಾತ್ರಗಳೆಲ್ಲ ಸಹಜ,ಸರಳ ಹಾಗು ಸುಂದರವಾದುವು. ಭರತೇಶನಿಗುಂಟಾಗುವ ಕೋಪ ತಾಪ ಆಶೆ ಆಕಾಂಕ್ಷೆ ಆಶ್ಚರ್ಯಾದಿಗಳು ಬಹುಕಾಲನಿಂತು ವ್ಯಕ್ತಿಯನ್ನು ಅಧೋಗತಿಗೆ ತಳ್ಳುವಂತಹುವಲ್ಲ. ಅವೆಲ್ಲ ಕಾಣುತ್ತಿದ್ದ ಹಾಗೆಯೇ ಕರಗಿ ಭರತೇಶ ನಿರ್ವಿಕಾರಿಯಾಗಿ ಉಳಿಯುವುದನ್ನು ರತ್ನಾಕರ ಸಹೃದಯರ ಮನಮುಟ್ಟುವಂತೆ ಚಿತ್ರಿಸಿರುವನು. ರತ್ನಾಕರನ ಭರತೇಶ ನಿಖಿಲ ಕಲೆಗಳಲ್ಲೂ ಪಾರಂಗತ, ಶಾಂತಿಪ್ರಿಯನಾದ ಸದ್ಗೃಹಸ್ಥ; ನಾರೀವೃಂದದ ನಡುವಣ ಕಾಮಾರಿ! ಈತ ಸಂಸಾರದ ಆಗು ಹೋಗುಗಳಲ್ಲಿ ಮುಳುಗಿದ್ದೂ ಸಂನ್ಯಾಸಿ! ಭರತೇಶ ನಿರ್ವಿಕಾರಿಯಾದರೂ ದಯಾದಾಕ್ಷಿಣ್ಯಗಳಿಂದ ತುಂಬಿ ತುಳುಕುವ ಮಹಾಮನು! ಲೋಕದಲ್ಲುದ್ಭವಿಸಬಹುದಾದ ನಾನಾ ಸಮಸ್ಯೆಗಳನ್ನು ವಿರಸಕ್ಕೆ ಬಿಡದೆ ಸರಸಕಲೆಯಿಂದಲೇ ಬಿಡಿಸುವ ಸಮಾಜಸುಧಾರಕ ರತ್ನಾಕರನ ಭರತೇಶ!

ಗಣನೆಯಿಲ್ಲದ ರಾಜ್ಯಭಾರವನ್ನು ತಲೆಯ ಮೇಲೆ ಹೊತ್ತಿದ್ದರೂ ಚಕ್ರೇಶ ತನ್ನ ದಿನಚರಿಯನ್ನಾಗಲಿ, ಸಂಸಾರದಲ್ಲಿ ರಸದ ಬುಗ್ಗೆಯನ್ನೇಳಿಸುವ ಸರಸಸಲ್ಲಾಪವನ್ನಾಗಲಿ ಎಂದೂ ಮರೆತವನಲ್ಲ. ನಾರೀವೃಂದವನ್ನು ಈ ಮಹಾಶಯ ಆಕರ್ಷಿಸಿದ್ದು ತನ್ನ ಸಂಪತ್ತಿನಿಂದಲ್ಲ, ಸಹೃದಯತೆಯಿಂದ. ಗರ್ವದಿಂದ ಈ ಮಹಾಪರಾಕ್ರಮಿ ಯಾರನ್ನೂ ಎರಗಿಸಿಕೊಳ್ಳಲಿಲ್ಲ. ಆದರೆ ತನ್ನ ಗಾಂಭೀರ್ಯದಿಂದ ಸರ್ವರನ್ನೂ ಅಡಿಯಾಳುಗಳನ್ನಾಗಿ ಮಾಡಿಕೊಂಡ. ಈತ ಕಾಮಪ್ರಚೋದನೆಯ ಕಲೆಗೆ ಎಂದೂ ಮಾರುಹೋದವನಲ್ಲ.

ಜಿನನ ಪೊಗಳಿ ಕೂಡೆ ಸಿದ್ಧರ ಕೀರ್ತಿಸಿ। ಮುನಿಗಳ ವಂದಿಸಿ ಮತ್ತೆ||
ತನುವಿನೊಳಿದ್ದಾತ್ಮ ತತ್ವ ವಿಚಾರವ| ಜನಪತಿ ಮೆಚ್ಚಿ ಹಾಡಿದರು|| ಆ. ಸಂ. ೧೦೧.

ಭರತೇಶ ಎಷ್ಟೇ ಶೃಂಗಾರದಲ್ಲಿ ಮಿಂದಿರಲಿ ಅಂತರಾತ್ಮನ ನಿರ್ಮಲಾಕಾರದತ್ತ ಸದಾ ಚಿಂತಿಸುತ್ತಿದ್ದ. ಜೊತೆಗೆ ತನ್ನ ಪರಿವಾರದವರ ಗಮನವನ್ನು ಅತ್ತ ಸೆಳೆಯುತ್ತಿದ್ದ. ಈತ ತನ್ನಕಲ್ಯಾಣವನ್ನು ಮಾಡಿಕೊಂಡರೂ ಲೋಕಕಲ್ಯಾಣವನ್ನು ಮರೆಯಲಿಲ್ಲ.

ರತ್ನಾಕರ ತನ್ನ ಆದರ್ಶಪಾತ್ರವಾದ ಭರತೇಶನನ್ನು ಅಡಿಯಿಂದ ಮುಡಿಯತನಕ ಕಲ್ಪಿಸಿಕೊಂಡು ತನ್ನಲ್ಲಿ ತಾನೇ ಬೆರಗಾಗಿ ' ಈ ಮಹಾನುಭಾವ ಹಿಂದಣಭವದಲ್ಲಿ ಆವ ನೋಂಪಿಯನ್ನು ಮಾಡಿದ್ದನೋ, ಎಂಥ ಭಕ್ತಿಯಿಂದ ಆದಿಜಿನನನ್ನು ಧ್ಯಾನಿಸಿದ್ದನೋ ಇಲ್ಲದಿದ್ದರೆ ಇಂಥ ಲಾವಣ್ಯ ಹೇಗೆ ಲಭಿಸೀತು ' ಎಂದುಕೊಂಡು ಮೂಗಿನ ಮೇಲೆಬೆರಳಿಟ್ಟುಕೊಂಡಿದ್ದಾನೆ. ವಾಚಕರೂ ಅಚ್ಚರಿಯಿಂದ ಅವಲೋಕಿಸುವಂತೆ ಸಗಿದ್ದಾನೆ.

ಪುರುಪರಮೇಶನ ಹಿರಿಯಕುಮಾರನು । ನರಲೋಕಕೊಬ್ಬನೆ ರಾಯ||
ಮುರಿದು ಕಣ್ಣಿಟ್ಟರೆ ಕ್ಷಣಕೆ ಮುಕ್ತಿಯ ಕಾಂಬ | ಭರತಚಕ್ರಿಯ ಹೇಳಲಳವೇ||
ಆ. ಸಂ. ೨೦.

ಹದಿನಾರನೆಯ ಮನು ಪ್ರಥಮ ಚಕ್ರೇಶ್ವರ । ಸುದತಿಜನಕೆ ರಾಜಮದನ||
ಚದುರರ ತಲೆವಣಿ ತದ್ಭವಮೋಕ್ಷಸಂ । ಪದನ ಬಣ್ಣಿಸಲೆನ್ನ ಹವಣೆ॥ ಆ. ಸಂ. ೨೧
ಕೋಮಲಾಂಗನು ಹೇಮವರ್ಣನು ಜಗವೆಲ್ಲ | ಕಾಮಿಸತಕ್ಕ ಚನ್ನಿಗನು||
ಆಮೋದವುಕ್ಕುವ ಜವ್ವನಿಗನು ಸರ್ವ । ಭೂಮೀಶರೊಡೆಯನಾ ಚಕ್ರಿ॥ ಆ. ಸಂ. ೨೫
ಚಿತ್ರಿಸಬಾರದವನರೂಪು ಕರುವಿಟ್ಟು । ಸೂತ್ರಿಸಿಯೆರೆಯಲಶಕ್ಯ||
ನೇತ್ರಕೆ ಮನಕೆ ಗೋಚರವಲ್ಲದದು ವಾಕು । ಮಾತ್ರಕೆ ಗೋಚರವ್ಯಸೆ॥ ಆ. ಸಂ.೪೯

ಭರತೇಶನ ದಿನಚರಿಯಲ್ಲಿ ನಾನಾ ಕಲೆಗಳೂ ಹಾಸು ಹೊಕ್ಕಾಗಿ ಬೆರೆದಿದ್ದವು. ಕಲೆಯೇ ಆತನ ಬಾಳಿನುಸಿರು ಎಂದರೆ ತಪ್ಪಾಗದು. ಒಮ್ಮೆ ಸಂಗೀತ ಗೋಷ್ಠಿ, ಇನ್ನೊಮ್ಮೆ ಕಾವ್ಯಕಲೆಯತ್ತ ಈ ರಸಿಕನ ಗಮನ ಹರಿಯುವುದು. ಕಾವ್ಯವೂ ಕೂಡ ಪರಮಾತ್ಮನತ್ತ ಮನಸೆಳೆಯುವ ಮಾರ್ಗಗಳಲ್ಲೊಂದು. ಆಸ್ಥಾನದ ವರಕವಿಯೊಬ್ಬ ತನ್ನ ಕಾವ್ಯವನ್ನು ಪಾಡುವನು.

ಭೋಗವಿಚಾರವು ಬೇಕು ನೃಪತಿಗಾತ್ಮ । ಯೋಗವಿಚಾರವು ಬೇಕು ||
ರಾಗರಸಿಕನಾಗಬೇಕು ಭಾವಿಸೆ ವೀತ | ರಾಗರಸಿಕನಾಗಬೇಕು || ಕ. ಸಂ. ೭

' ಮಹಾರಾಜರು ಭೋಗದಿಂದ ಸಂಪೂರ್ಣವಾಗಿ ದೂರವಿರಕೂಡದು. ಅವರು ಭೋಗಿಸಲೂ ಬೇಕು. ಆದರೆ ಭೋಗದಲ್ಲಿ ಸಂಪೂರ್ಣವಾಗಿ ಮುಳುಗಿ ವಿಷಯ ಲಂಪಟರಾಗಬಾರದು. ರಸಿಕನಾಗಿ ಹದವರಿತು ಭೋಗಿಸಲಿ. ಇಷ್ಟಕ್ಕೇ ಬಾಳನ್ನು ಮುಗಿಸಿದರೆ ಸಾಲದು. ಬಾಳಿನ ಪರಮ ಹಾಗು ಚರಮಧ್ಯೇಯ ವೀತರಾಗನಾಗುವುದೇ.' ಈ ಆದರ್ಶಗಳನ್ನೆಲ್ಲ ಈ ಭರತೇಶ ಪಡೆದಿದ್ದಾನೆ.

ಪೆರವೆಂಗಳಿಗೆ ಹೇಡಿ ಕದನಕ್ಕೆ ಕಡುಗಲಿ | ಪರಮತಕ್ಕೊಡಂಬಡೆ ಮೂರ್ಖ ॥
ಅರುಹನಾಗಮದೊಳರ್ತಿಗನಾತ್ಮಕಲೆಯೊಳು | ಸರಸನಾಗಿರಬೇಕು ನೃಪತಿ ॥ ಕ.ಸಂ. ೧೩

ಭರತೇಶನ ಪರಮಪಾವನವಾದ ಚರಿತವನ್ನೇ ಕುರಿತು ಆಸ್ಥಾನ ಕವಿ ಪಾಡಿದ್ದಾನೆ.

ಆಗಾಗ ದೇಹ ಬೇರಾತ್ಮ ಬೇರೆಂದು ವಿ। ಭಾಗಿಸಿ ತನ್ನ ತಾ ನೆಮ್ಮಿ ॥
ಭೋಗಿಸಿದರೆ ಕರ್ಮಬಂಧವಿಲ್ಲಾಗಿಯಾ। ಭೋಗಿ ತಾನೆ ಯೋಗಿಯಲ್ತೆ ॥ ಕ. ಸಂ. ೩೧

ಇದೂ ಕೂಡ ಭರತೇಶನ ಬಾಳ್ವೆಯ ಅಂತರಾಳ. ಅವನ ಆಸ್ಥಾನದ ಗಾಯಕರಿಗೆ, ಕವಿಗಳಿಗೆ ಭರತೇಶನ ನಡತೆಯೇ ಪಾಡಲು ಬಣ್ಣಿಸಲು ಎಂದೂ ಮುಗಿಯದ ಮಹಾವಸ್ತುವಾಗಿದೆ.

ದಿನವೂ ಮುನಿಗಳಿಗೆ ಆಹಾರವಿತ್ತು ಅನಂತರ ತಾನುಣ್ಣುವುದಾಗಿ ಭರತೇಶ ಸಂಕಲ್ಪಿಸಿಕೊಂಡಿದ್ದ. ಆತನ ದಿನಚರಿಯಲ್ಲಿ ಪ್ರತಿಯೊಂದರಲ್ಲೂ ಒಂದೊಂದು ವಿಶೇಷವಿದೆ. ಮುನಿಗಳಿಗೆ ಹಾರೈಸಿ ಚಕ್ರೇಶ ಕಾತರನಾಗಿರುವ ಭಾಗದಲ್ಲಿ ರತ್ನಾಕರನ ಪ್ರತಿಭೆ ಭಕ್ತಿರಸವನ್ನು ಚಿಮ್ಮಿಕೊಂಡು ಓದುಗರನ್ನು ಪರವಶಗೊಳಿಸುವುದು.

ಛತ್ರಚಾಮರ ಖಡ್ಗ ಹಾವುಗೆ ಮುಂತಾದ । ಧಾತ್ರೀಶ ಚಿನ್ಹವನಿರಿಸಿ ॥
ಪಾತ್ರದಾನದಪೇಕ್ಷೆಯಿಂದೊಬ್ಬ ಶ್ರಾವಕ। ಮಾತ್ರವೆಂದೆನೆ ನಡೆತಂದಾ ॥ ಮು. ಸಂ. ೪
ಮಂಡಲಿಕರ ಕೈಯ ಹಡಪ ಹಾವುಗೆ ಕುಂಚ । ಗಿಂಡಿಯ ಪಿಡಿಸಿಕೊಂಬುವನು ॥
ಗಂಡಗರ್ವವ ಬಿಟ್ಟು ನಡೆದನು ಗುರುನಿಗೆ। ಗಿಂಡಿಯೂಳಿಗದವನಾಗಿ ॥ ಮು. ಸಂ. ೬

ಗಣನೆಯಿಲ್ಲದ ರಾಜ್ಯಸುಖದೊಳೋಲಾಡುವ ಭರತೇಶ ಮುನಿಗಳನ್ನಿದಿರುಗೊಳ್ಳಲು ಸಾಮಾನ್ಯ ಶ್ರಾವಕನಾಗಿ ನಿಂದಿರುವ ದೃಶ್ಯ ಭಯ ಭಕ್ತಿಯ ಆಗರವಾಗಿದೆ. ಉಳಿದ ವೇಳೆಯಲ್ಲಿ ಈತನ ಸುತ್ತ ನಾನಾ ಮಂಡಳಿಕರು ಸುತ್ತಿ ಸೇವಿಸುವರು. ಆದರೆ ಮುನಿಗಳನ್ನಿದಿರುಗೊಳ್ಳಲು ಅವರಾರನ್ನೂ ಬರಗೊಡದೆ ಭರತೇಶ ತನ್ನ ಗಂಡಗರ್ವವನ್ನು ತೊರೆದು ಗಿಂಡಿಯೂಳಿಗದವನಾದನಂತೆ! ರತ್ನಾಕರ ಭರತೇಶವೈಭವವನ್ನು ರಚಿಸುವುದಕ್ಕೆ ಮೊದಲೇ ಮುನಿಯಾಗಿದ್ದ. ಅಂದಿನ ಜೈನ ಸಮಾಜದಲ್ಲಿ ಮುನಿಗಳಿಗಿದ್ದ ಅತಿ ದೊಡ್ಡ ಸ್ಥಾನವನ್ನು ಸಹಜವಾಗಿ ಚಿತ್ರಿಸಿದ್ದಾನೆ.

ಹಾವುಗೆ ಮೆಟ್ಟದೆ ಕನ್ನಡಿ ನೆಲದಲ್ಲಿ । ಭೂವರನಡಿಯಿಡುವಾಗ ॥
ಮಾವಿನ ಕೆಂದಳಿರ್ಗೆದರಿದಂತೆಸೆದುದು । ಹಾವುಗೆ ಹೆಜ್ಜೆಯ ಕೆಂಪು ॥ ಮು. ಸಂ. ೧೬
ಕೆಂಬಜ್ಜೆಗಳ ಸೋಂಕಿನಿಂದ ಭೂಮಿಯೊಳರು । ಣಾಂಬುಜಗಳ ಪಸರಿಸುತ ॥
ತುಂಬಿಯ ಗಾನವ ಕೇಳುತ ನಡೆದನಾ । ಡಂಬರತಪ್ಪದಾ ಭೋಗಿ ॥ ಮು. ಸಂ. ೧೭

ಭರತೇಶ ಎಷ್ಟೇ ಬಾಹ್ಯಾಡಂಬರ ತೊರೆದರೂ ಸಹಜವಾದ ತನ್ನ ಲಾವಣ್ಯವನ್ನು ಎಲ್ಲಿ ಗಟ್ಟಿಯಾನು! ರತ್ನಾಕರನ ದೃಷ್ಟಿಯಲ್ಲಿ ಭರತೇಶನ ಮೈಮನಗಳೆರಡೂ ಮಹಿಮೆಗೆ ಮನೆಯಾಗಿದ್ದವು. ಭರತೇಶ ನಡೆವಾಗ ಆತನ ಹೆಜ್ಜೆಗಳನ್ನೇ ಮಹಾಕವಿ ಕಣ್ಣಲ್ಲಿ ಕಣ್ಣಿಟ್ಟು ನೋಡುವನು. ಆತ ವೈಭವಗಳನ್ನು ತೊರೆದು ನಡೆದರೂ ಅವೇ ಹಿಂಬಾಲಿಸಿಕೊಂಡು ಬಂದು ಈತನನ್ನು ಓಲೈಸುತ್ತಿದ್ದವು. ಇದಕ್ಕೆ ಮಹಾಕವಿ ರತ್ನಾಕರನೇ ಸಾಕ್ಷಿ!

ಮುನಿಗಳಿಗಾಗಿ ಚಕ್ರೇಶ ಕಾತರದಿಂದ ಕಾಯುವ ಸಂದರ್ಭವನ್ನು ಮಹಾಕವಿ ಹೃದಯಂಗಮವಾಗಿ ಚಿತ್ರಿಸಿರುವನು. ಮುನಿಗಳು ಬಂದಮೇಲೆ ಅವರನ್ನು ಉಪಚರಿಸುವ ವಿಧಾನ ಉತ್ಕೃಷ್ಟ ಸಂಸ್ಕೃತಿಗೆ ಕುರುಹಾಗಿದೆ.

ತಗ್ಗು ಸೋಪಾನದೊಳಿಳಿವಾಗ ಮುನಿಗಳ್ಗೆ । ಬೊಗ್ಗನೆ ಕೈಲಾಗುಗೊಡುವಾ ॥
ಉಗ್ಗಡದೇರು ಸೋಪಾನದೊಳವರ ಕೈ। ಯೊಗ್ಗಿ ಹಿಡಿದು ಮೇಲೆ ನೆಗೆವಾ॥ ಮು. ಸಂ ೬೮
ಅದಕಲ್ಲ ಸ್ವಾಮಿಗಳಿರ ನೋಡಿ ನಾವಿಪ್ಪ । ಸದನವೆಲ್ಲವೂ ಡೊಂಕು ನಮ್ಮ ॥
ಹೃದಯವಿನ್ನೆಷ್ಟು ಡೊಂಕೋ ನೀವು ಬಲ್ಲಿರೆಂ। ದೆದೆಗಿಂಪುದೋರಿ ನುಡಿದನು ॥ಮು. ಸಂ. ೭೦

ಪ್ರತಿಕ್ಷಣದಲ್ಲೂ ಭರತೇಶನಿಗೆ ತನ್ನಲ್ಲೇ ಕೊರತೆಯಿದ್ದಂತೆ ಕಂಡು ತನ್ನನ್ನೇ ತಾನು ತಿದ್ದಿಕೊಳ್ಳುತ್ತ ಬಂದು ಅಂತ್ಯದಲ್ಲಿ ಸರ್ವಕರ್ಮಗಳಿಂದ ಪಾರಾಗಿ ಪಾವನನಾದ ಪರಮಾತ್ಮನೆಂದೇ ರತ್ನಾಕರನ ನಂಬಿಕೆ. ಉಪಚಾರದ ಮಾತುಗಳಲ್ಲೇ, ನಿರ್ಲಿಪ್ತರಾದ ಮುನಿಗಳ ಮನವನ್ನು ಈ ಮಹಾಶಯ ಸೂರೆಗೊಂಡ. ಭರತೇಶನ ಗೆಲುವಿನ ಮೂಲ ಇಲ್ಲಿದೆ. ತನ್ನ ನಡೆ ನುಡಿಗಳಿಂದ ಲೋಕವನ್ನು ಈತ ಮೆಚ್ಚಿಸಿದ್ದಾನೆ. ಭರತೇಶ ತನಗೆ ಅನುರೂಪರೂ ಅನುಕೂಲರೂ ಆದ ಮಡದಿಯರನ್ನು ಪಡೆದು ಇಹಪರಗಳೆರಡನ್ನೂ ಸಾಧಿಸಿಕೊಂಡ. ಅನುಕೂಲ ದಾಂಪತ್ಯವೆಂದರೆ ಹೀಗಿರಬೇಕು. ರತ್ನಾಕರನ ಹಿರಿಮೆಗೆ ಸಾಕ್ಷಿ ಆತ ಚಿತ್ರಿಸಿರುವ ಪರಮ ಪಾವನವಾದ ದಾಂಪತ್ಯಚಿತ್ರಗಳು, ಸತಿಪತಿಯರ ಸರಸಸಲ್ಲಾಪಗಳು !

ರಾಣಿಯರೆಲ್ಲರೊಲ್ದೆರಗಿದರಾಗ ನೇ । ರಾಣಿಯ ಬೊಂಬೆಗಳಂತೆ |
ಕಾಣುತ್ತೆಲ್ಲರ ಹರಿಸಿದರು ಯೋಗಿಗಳು। ಗೀರ್ವಾಣ ಭಾಷೆಯೊಳವರರಿಯೆ॥ ಮು. ಸಂ. ೧೦೭

ಮುನಿಗಳಿಗೆ ಆಹಾರವಾದನಂತರ ಸಮ್ರಾಟನ ಸತಿಯರೆಲ್ಲ ಅವರಿಗೆರಗಿದರಂತೆ. ಚಕ್ರೇಶನ ಸಂಸಾರವನ್ನು ಕಂಡು ಮುನಿಗಳಿಗೂ ಮೆಚ್ಚಿಗೆಯಾಗಿರಬೇಕು.

ನರರ ಸೊಕ್ಕಿಸುವ ಸೌಭಾಗ್ಯ ಸೊಕ್ಕಿಸಿತಿಲ್ಲ । ಹರಯ ಸೊಕ್ಕಿಸಿತಿಲ್ಲ ನಿನ್ನ ॥
ವರಭೋಗ ಮೂರ್ಛೆಯ ಮಾಡಿತಿಲ್ಲಾತ್ಮನ। ಸಿರಿಯ ನೀನೆ ಕಂಡೆ ನೃಪತಿ ॥
ಮು. ಸಂ. ೧೧೮

ಭರತೇಶನಿಗೆ ಇಂದ್ರವೈಭವವಿತ್ತು. ಮಿಗಿಲಾಗಿ ಎಂದೂ ಮುಗಿಯದ ಹರಯವಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ತೊಂಬತ್ತಾರುಸಾಸಿರ ಮಂದಿ ಮಡದಿಯರ ಮನೋವಲ್ಲಭನಾಗಿದ್ದ. ಹೀಗಿದ್ದೂ ಈತನ ಗಮನ ಸದಾ ಎಲ್ಲ ಸಂಪತ್ತಿಗೂ ಮಿಗಿಲಾದ ಆತ್ಮನ ಅನಂತ ಸಿರಿಯತ್ತ ಹರಿದಿತ್ತು. ರತ್ನಾಕರನ ಕಲಾಚಾತುರ್ಯ ಭರತೇಶನ ಅಪೂರ್ವ ಪಾತ್ರ ನಿರ್ಮಾಣದಿಂದ ಮುಗಿಲು ಮುಟ್ಟಿದೆ.

ಭರತೇಶ ಊಟಮಾಡುವ ಸನ್ನಿವೇಶವನ್ನು ಕವಿ ಕಲಾಮಯವಾಗಿ ಚಿತ್ರಿಸಿದ್ದಾನೆ. ಈತನ ಬಾಳ್ವೆಯಲ್ಲಿ ಎಂದೂ ಅವಸರವಿಲ್ಲ. ಲೌಕಿಕದಲ್ಲೂ ಅಷ್ಟೆ, ಪಾರಮಾರ್ಥಿಕದಲ್ಲೂ ಅಷ್ಟೆ. ಊಟಕ್ಕೆ ಕೂರುವಾಗ ತನ್ನ ವನಿತಾರತ್ನಗಳೊಡನೆ ಕುಳಿತು ಉಣ್ಣಬೇಕೆಂದೇ ಈತನ ಬಯಕೆ. ಅವರಿಗಾದರೋ ತಮ್ಮ ಪತಿ ಉಂಡಾದಮೇಲೆ ಉಣ್ಣಬೇಕೆಂಬ ಸಂಕಲ್ಪ. ತಮ್ಮ ವ್ರತವನ್ನು ಪತಿಗೆ ತಿಳಿಸುವರು. ಭರತೇಶನ ಬಾಳ್ವೆ ಯಾಂತ್ರಿಕವಲ್ಲ. ಸದಾಚಾರವೊಂದೇ ಆತನ ಹಿರಿಯ ವ್ರತ. ಸ್ನೇಹ ಸೌಹಾರ್ದತೆಗಳೇ ಆತನ ವ್ರತಾಚರಣೆಗಳು. ತನ್ನ ಸತಿಯರನ್ನೆಲ್ಲ ಒಡಂಬಡಿಸಿ ತನ್ನೊಡನೆ ಊಟಕ್ಕೆ ಕೂರಿಸಿಕೊಳ್ಳುವನು.

ಸ್ತ್ರೀಯರು ತನ್ನೆಡಬಲದಲ್ಲಿ ಸಾಲಾಗಿ। ವೈಯ್ಯಾರದಿಂದ ಕುಳ್ಳಿರಲು ||
ರಾಯನಿದ್ದನು ರತ್ನಹಾರದ ನಡುವಣ | ನಾಯಕ ರತ್ನದಂದದೊಳು || ಆ.ಸಂ.೫೫
ಆರೋಗಣೆಗೆ ಕುಳಿತಾ ರಾಯನೊತ್ತಿನ | ನಾರಿಯರೆಸೆದರೆಂತೆನಲು ॥
ಸಾರಾಮೃತವನುಂಬ ಚಂದ್ರನ ಪಂತಿಯ | ತಾರಾಂಗನೆಯರೆಂಬಂತೆ || ಆ.ಸಂ.೬೬

ಸಂಸಾರವನ್ನು ನಿಸ್ಸಾರವೆಂದು ಗಳಪುವ ಶುಷ್ಕವೇದಾಂತಿಗಳು ಈ ಭಾಗವನ್ನೋದಿನೋಡಲಿ. ರಸಿಕನಾದವನು ತನ್ನ ದಿನಚರಿಯನ್ನೆಲ್ಲ ರಸಮಯವನ್ನಾಗಿ ಮಾಡಿಕೊಳ್ಳಬಲ್ಲ.

ಊಟವಾದ ಮೇಲೆ ಭರತೇಶ ಚಣಕಾಲ ಕಣ್ ಮುಚ್ಚಿ ಅಂತರಾತ್ಮನನ್ನು ನೆನೆದು ನಂತರ ಕಣ್ದೆರೆದು ಜಿನಸಿದ್ಧ ಶರಣೆಂದು ಮೇಲೆದ್ದು ಪರಮಲೀಲೆಯಿಂದ ಸಚ್ಚಿದಾನಂದ ರೂಪವನ್ನು ಮೆಚ್ಚಿ ಭಾವಿಸುತ್ತಾ ಚಂದ್ರಶಾಲೆಗೆ ಬಂದನಂತೆ.

ತೂಗುಮಂಚದಮೇಲೆ ವೊರಗು ಮೂಡೆಗೆ ವಾಮ | ಭಾಗವನಿಟ್ಟು ಕುಳಿತನು||
ಆಗಳೆಬಂದರು ಘುಳಘುಳನಬಲೆಯ | ರಾಗಾಡಿಕಾರನಿದ್ದೆಡೆಗೆ || ಆ.ಸಂ. ೧೧೭
ಪರಿಮಳದೊಡೆವುತ ಪನ್ನೀರ ಚಿಮ್ಮುತ | ತಿರುಹುತ ಬೀಸಣಿಗೆಗಳ ||
ಚರಣವನೊತ್ತುತ ವೀಳೆಯಗೊಡುತ ಸೌಂ। ದರಿಯರಿದ್ದರು ಬಳಸಿನೊಳು ॥
ಆ. ಸಂ. ೧೧೮

ಸಂಸಾರದ ಸಂಪತ್ತೆಂದರೆ ಸತಿಪತಿಯರ ಸರಸಸಲ್ಲಾಪವೇ. ವಿವಾಹವಿಚ್ಛೇದನವನ್ನು ಕಾಯಿದೆಯನ್ನಾಗಿ ಮಾಡಬೇಕೆನ್ನುವ ಸಮಾಜಸುಧಾರಕರು ಈ ಭಾಗವನ್ನೋದಿ ಭರತೇಶವೈಭವದ ಸೊಬಗನ್ನು ನಾಡಿನಲ್ಲಿ ಬಿತ್ತಿದರೆ ಎಷ್ಟೋ ಮೇಲು.

ಭರತೇಶನ ಪತ್ನಿಯರು ಸುಖಲೋಲುಪ್ತರಾಗಿ ಮೈಕೊಬ್ಬಿದವರಲ್ಲ. ಎಲ್ಲ ಕಲೆಗಳಲ್ಲೂ ಪರಿಣತಿಯನ್ನು ಹೊಂದಿದ್ದವರು. ಬೇಕೆಂದಾಗ ಕಲೆಯ ನೆರವಿನಿಂದ ಆತ್ಮಸಂತುಷ್ಟಿಯನ್ನು ಪಡೆದು ತಮ್ಮ ಪತಿದೇವನನ್ನೂ ತಲ್ಲೀನಗೊಳಿಸುತ್ತಿದ್ದರು.

ಹೊಂಗೊರಳದರೊಳು ಭರತರಾಜನ ಶಿಕ್ಷೆ। ಹೆಂಗಳವರು ಚೆಲುವೆಯುರು ||
ಸಂಗೀತ ಮೋಹಿಸುತ್ತಿದ್ದುದು ಕೇಳ್ವರಿ | ಗಿಂಗಡಲೊಳಗೆ ಹೊಕ್ಕಂತೆ ॥ ಉ.ಸಂ ೭೪
ವರಸತಿಯರ ಕೂಡೆ ನುಡಿದಾಡಬೇಕೊಮ್ಮೆ। ಸರಸತಿಯೊಳು ನುಡಿಬೇಕು ||
ಪರಸತಿಯೊಳು ಮೌನ ಮುಕ್ತಿಸತಿಧ್ಯಾನ। ವಿರಬೇಕು ನಾಲ್ಮೊಗಬೇಕು || ಉ.ಸಂ.೭೯

ಆದರ್ಶ ವ್ಯಕ್ತಿಗಿರಬೇಕಾದ ಹಿರಿಯ ಗುಣಗಳನ್ನು ಭರತೇಶನ ಮಡದಿಯರ ಬಾಯಲ್ಲಿ ರತ್ನಾಕರ ನುಡಿಸಿದ್ದಾನೆ. ಗಾನಕ್ಕೆ ತನ್ನ ಶಬ್ದಜಾಲದ ದೇಹವನ್ನು ಮಹಾಕವಿಯಿತ್ತಿದ್ದಾನೆ. ರಾಜಲಾವಣ್ಯಸಂಧಿಯ ತುಂಬ ಕುಸುಮಾಜಿ ತನ್ನ ಪತಿದೇವನನ್ನು ಮನಸಾರೆ ಕೊಂಡಾಡಿಕೊಂಡಿರುವ ಕಲಾಮಯಚಿತ್ರ ಮೂಡಿದೆ. ಕೊಂಡಾಡಿದವಳು ಕುಸುಮಾಜಿ ; ಅದನ್ನಾಲಿಸಿದವಳು ಅಮರಾಜಿ ; ಕೃತಿಮಾಡಿದವಳು ಸುಮನಾಜಿ ; ಅದನ್ನೋದಿದವಳು ಇನ್ನೊಬ್ಬಾಜಿ ; ಕಿವಿಯಿತ್ತು ತಣಿದವನು ಭರತೇಶ. ಚಕ್ರೇಶನ ಸಂಸಾರವೆಂದರೆ ಬುವಿಯಲ್ಲುದ್ಭವಿಸಿದ ಅಭಿನವಸಮವಸರಣ ! ಸಮವಸರಣವೂ ಕೂಡ ರಸಋಷಿಗಳ ಪರಿಷತ್ತು ; ಆನಂದಗೊಂಡ ದೇವಾಂಗನೆಯರ ಸುರಗೀತ ಒಂದೆಡೆ ; ಇನ್ನೊಂದೆಡೆ ಖೇಚರಾಂಗನೆಯರ ನವನವೀನ ನರ್ತನ; ಇದನ್ನೆಲ್ಲ ಕಂಡು

ನಿರ್ಲಿಪ್ತನಾದ ದೇವದೇವ ತಣಿವನು ; ಅಂಟಿಯೂ ಅಂಟದಂತೆ ಕಲೆಯ ಸೊಬಗನ್ನು ತೀರ್ಥೇಶ ಅನುಭವಿಸುವನು. ಭರತೇಶನ ಮನೆಯೂ ಕಲೆಯ ತೌರೂರು; ಭರತೇಶನ ಸಂಸಾರ ರಸಋಷಿಗಳ ಪರಿಷತ್ತು ; ಕಲಾಭಿಮಾನ ದೇವತೆಗಳಂತಿರುವ ವನಜಾನನೆಯರ ಕಮನೀಯ ಕಾಸಾರ ! ಗೃಹಜೀವನದ ಸೊಗಸಾದ ಚಿತ್ರಗಳಿಗೆ ರತ್ನಾಕರ ತನ್ನ ಪ್ರತಿಭೆಯ ಕುಂಚಗಳನ್ನಾಡಿಸಿ ಹೃದಯಸ್ಪರ್ಶಿಯಾಗುವಂತೆ ಮಾಡಿದ್ದಾನೆ. ಇವನಂತೆ ಮಾನವನ ದಿನಚರಿಯನ್ನು ಕಾವ್ಯದಲ್ಲಿ ಕಾಣಿಸಿ ಚಿತ್ರಿಸಿರುವವರು ಅತಿ ವಿರಳ. ರತ್ನಾಕರನ ಭರತೇಶವೈಭವ ಕನ್ನಡ ಕಾವ್ಯದ ಕೊರತೆಯನ್ನು ಬಹುಮಟ್ಟಿಗೆ ಹೋಗಲಾಡಿಸಿದೆ. ಶೃಂಗಾರಕ್ಕೆ ಭವ್ಯತೆಯ ಬಣ್ಣಕಟ್ಟಿದವನೂ ರತ್ನಾಕರನೇ. ಭೋಗಕ್ಕೂ ಯೋಗಕ್ಕೂ ಗಂಟುಹಾಕಿ ಪ್ರಯೋಗ ನಡೆಸಿ ಸಿದ್ಧಹಸ್ತನೆನಿಸಿಕೊಂಡವನೂ ರತ್ನಾಕರನೇ.

ಇದುವರೆವಿಗೂ ಭರತೇಶನ ಮನೆಯೊಳಗಣ ಚಿತ್ರವಾಯಿತು; ಸಂಸಾರದಲ್ಲಿ ಆ ಮಹಾನುಭಾವ ಕಂಡ ಹಾಗೂ ಉಂಡ ಸೊಗದ ಸುಗ್ಗಿಯಾಯಿತು. ಇನ್ನು ಹೊರಗಣ ಜಗತ್ತಿನಲ್ಲಿ ಚಕ್ರೇಶ ನಡೆದುಕೊಂಡ ರೀತಿ ರತ್ನಾಕರನ ಕೈವಾಡದಿಂದ ಹೇಗೆ ಮೂಡಿದೆಯೋ ನೋಡೋಣ. ಭರತೇಶನ ಆಯುಧಾಗಾರದಲ್ಲಿ ಆತನ ಪುಣ್ಯಪ್ರಭಾವದ ಪ್ರತಿರೂಪವೇ ಚಕ್ರರತ್ನವಾಗಿ ಮೂಡಿತು. ಅದರ ನೆರವಿನಿಂದ ಈತ ದಿಗ್ವಿಜಯ ವೆಸಗಬೇಕಾಗುವುದು. ಕಲಾಸಾಗರದಲ್ಲಿ ಓಲಾಡಿದ ಭರತೇಶ, ಪ್ರೇಮವಾರಿಧಿಯಲ್ಲಿ ಮುಳುಗೆದ್ದ ಚಕ್ರೇಶ ಈಗ ದ್ವೇಷಾಸೂಯೆಗಳ ಮಡುವಿನಲ್ಲಿಳಿಯಬೇಕಾಗುವುದು. ಸರಸ ಸಲ್ಲಾಪದಲ್ಲಿ ಮುಳುಗಿದ್ದ ಈ ಮಹಾನುಭಾವ ಈಗ ಅನಿವಾರ್ಯವಾಗಿ ವಿರಸ ಸನ್ನಿವೇಶಕ್ಕಡಿಯಿಡಬೇಕಾಗುವುದು. ಆದರೆ ರತ್ನಾಕರನ ಭರತೇಶ ರಣರಂಗದಲ್ಲಿದ್ದರೂ ಒಂದೆ, ಮಡದಿಯರ ನಡುವಿದ್ದರೂ ಒಂದೆ. ಈ ಎರಡು ಸಂದರ್ಭಗಳಲ್ಲೂ ರಸಿಕನಾಗುಳಿಯುವ ನಿಪುಣತೆ ಈ ಮಹಾನುಭಾವನಲ್ಲಿದೆ. ನಾನಾಮಹಾರಾಜರು ತಾವಾಗಿ ಬಂದೆರಗಿ ಪುನಿತರಾಗುವರು. ಆಗಾಗ ಸರಸಸಾಗದೆ ವಿರಸ ಉದ್ಭವಿಸಿದ್ದುಂಟು. ಮರುಕ್ಷಣದಲ್ಲೇ ಅಂಥ ಸಂದರ್ಭವೂ ಮಿಂಚಿನಂತೆ ಮಾಯವಾಗಿ ಸುಖದ ಬುಗ್ಗೆ ರಣರಂಗದಲ್ಲೂ ಈತನ ಸಹೃದಯತೆಯಿಂದ ತಾನೇತಾನಾಗಿ ಹರಿಯದಿರದು. ಒಟ್ಟಿನಲ್ಲಿ ಈತ ಲೋಕವನ್ನು ಗೆದ್ದುದು ಕ್ಷಾತ್ರಬಲದಿಂದಲ್ಲ, ಆತ್ಮಬಲದಿಂದ! ಇದನ್ನು ಸಾರುವುದೇ ರತ್ನಾಕರನ ಗುರಿ! ತನ್ನ ಗುರಿಗೆ ಅನುಗುಣವಾಗಿ ರಣರಂಗವನ್ನೂಕೂಡ ದಯಾದಾಕ್ಷಿಣ್ಯಗಳ ಆಗರವನ್ನಾಗಿ ಮಹಾಕವಿ ಮಾರ್ಪಡಿಸಿದ್ದಾನೆ; ರತ್ನಾಕರನ ಭರತೇಶ ಅಂತೆ ನಡೆದುಕೊಂಡಿದ್ದಾನೆ. ಅವನು ಅಡಿಯಿಟ್ಟೆಡೆ ಜಯವನಿತೆ ಈತನಿಗಾಗಿ ಕಾದಿರುತ್ತಾಳೆ. ದಿಗ್ವಿಜಯದಲ್ಲಿ ಭೀಕರವಾದ ರಣರಂಗ ಅನಿವಾರ್ಯವಾದರೂ, ರಕ್ತಪಾತ ಅನಿರೀಕ್ಷಿತವಲ್ಲದಿದ್ದರೂ (ರತ್ನಾಕರನ ಪ್ರತಿಭೆಯಿಂದ ಭರತೇಶನ ದಿಗ್ವಿಜಯ ಮದುವೆಗಳ ದಿಬ್ಬಣವಾಗಿದೆ! ಕಲೆಗೆ ನೆಲೆಯಾಗಿದೆ! ಶೃಂಗಾರಕ್ಕೆ ಆಗರವಾಗಿದೆ! ಇಂಥ ನೂರಾರು ಸಂದರ್ಭಗಳನ್ನು ಭರತೇಶನ ದಿಗ್ವಿಜಯದ

ತುಂಬ ಕಾಣಬಹುದು. ಸಿಂಧೂದೇವಿಯನ್ನು ಚಕ್ರೇಶ ಸಂಧಿಸುವ ಸಂದರ್ಭ ಹೃದಯಂಗಮವಾಗಿದೆ.

ಬಾ ಸಿಂಧುದೇವಿ ಮುನ್ನೊಬ್ಬ ತಂಗಿ ಕೈ | ಲಾಸದೊಳ್ತಪಸುದಾಳಿದಳು॥
ವ್ಯಾಸಂಗದ ನೋವು ನಿನ್ನ ಕಂಡಗಲಿತೆಂ । ದಾಸುಮುಖರದೇವ ನುಡಿದ|| ಸಿಂ.ಸಂ.೮೬
ಅವಳ ಪೆಸರು ಬ್ರಾಹ್ಮಿಲಾದೇವಿಯೆಂದು ನಿ। ನ್ನವಯವದಂತವಳಿರವು||
ನವಗಿನ್ನು ಬ್ರಾಹ್ಮಿಲಾದೇವಿ ನೀನೆಂದು ಮಾ । ನವಪತಿ ನುಡಿದನಾಕೆಯೊಳು||೮೭

ಇದಿಷ್ಟೂ ಚಕ್ರೇಶ ಕರುಳುಕರಗಿ ಹೇಳುವ ಮಾತು. ಹೋದ ತಂಗಿಗಾಗಿ ಮಹಾನುಭಾವ ಕಣ್ಣೀರು ಮಿಡಿದಿದ್ದಾನೆ. ನಂಟುತನಕ್ಕೆ ಮೂಲ ರಕ್ತ ಸಂಬಂಧ ವೊಂದೇ ಅಲ್ಲ; ಸ್ನೇಹ ಒಂದಿದ್ದರೆ ಎಲ್ಲಿ ಬೇಕಾದರೂ ಸಂಬಂಧಿಗಳನ್ನು ಹುಡುಕ ಬಹುದು. ಎಲ್ಲರ ಮನವನ್ನೂ ಈತ ಒಲಿಸಿದುದು ಹಾಗೂ ಸೂರೆಗೈದುದು ತ್ರಿಕರಣ ಶುದ್ಧಿಯಾದ ಪಾವನ ಚರಿತದಿಂದ.

ಸುಭದ್ರೆಯೊಡನೆ ಭರತೇಶನಿಗೆ ವಿವಾಹವಾಗುವ ಸಂದರ್ಭವೂ ಆತನ ದಿಗ್ವಿಜಯ ಸಮಾರಂಭಗಳಲ್ಲೊಂದು. ಸುಭದ್ರೆ ಈತನ ಸೋದರತ್ತೆಯ ಮಮತೆಯ ಮಗಳು. ಆಕೆಯನ್ನು ವರಿಸಬೇಕೆಂಬ ಹಂಬಲ ಬಹುದಿನದಿಂದ ಚಕ್ರೇಶನ ಹೃದಯದಲ್ಲಿ ತುಂಬಿದೆ· ಈತನನ್ನೇ ಪತಿಯೆಂದು ಅಹರ್ನಿಸಿ ಆ ಹೆಣ್ಣು ತನ್ನ ಭಾವನಾ ಪ್ರಪಂಚ ದಲ್ಲಿ ವಿಹರಿಸಿದ್ದಾಳೆ. ನಮಿರಾಜ ಸುಭದ್ರೆಯ ಅಣ್ಣ; ಭರತೇಶನ ಚಕ್ರವರ್ತಿಪದವಿಗೆ ಎಂದೆಂದಿಗೂ ತಲೆಬಾಗದ ಸ್ವಾಭಿಮಾನಿ! ಭರತೇಶನ ಸಂಪತ್ತಿನಿದಿರು ಸೆಡೆದುನಿಂತ ವೀರಕ್ಷತ್ರಿಯ! ಮನೆಯವರೆಲ್ಲ ಸುಭದ್ರೆಯನ್ನು ಭರತೇಶಂಗಿತ್ತು ಧಾರೆಯೆರೆಯಲು ಕಾತರರಾಗಿರುವ ವೇಳೆಯಲ್ಲಿ

ಕೊಡಬಾರದೆಂದೆನೆ ನಾನಾತನೆನ್ನೂರ್ಗೆ । ನಡೆದುಬಂದರೆ ಕೊಡಬಹುದು |
ಕುಡಿಯುರಂದದಿ ಹೆಣ್ಣಕೊಂಡೊಯ್ದು ಕೊಡುವುದು । ನಡೆಯೆ ರಾಜರಿಗೆಂದನಾ ಮನು ॥
ಮು.ಸಂ. ೩೩

ತಾಳಿ ಬಂದಿಯ ಮುನ್ನ ಕಟ್ಟಿಸಿ ಮದುವೆಗೆ । ಲೀಲೆಯೊಳ್ಬಹ ಕಾರ್ಯವುಂಟೆ ॥
ಹೇಳಿ ನೀವಲ್ಲದಿದ್ದರೆ ಸುಮ್ಮನಿರಿ ತನ್ನ। ತೋಳ ಬಲ್ಮೆಯ ತೋರಲೆಂದ ॥ ಮಂ. ಸಂ೪೧

ನಮಿರಾಜ ಸ್ವಾಭಿಮಾನಿಯಾಗಿ ಕಡ್ಡಿ ತುಂಡಾಗುವಂತೆ ನುಡಿದಿರುವನು. ಆಗ ಆತನ ಜನನಿ ಯಶೋಭದ್ರೆ ಕಳವಳಗೊಂಡು ಮಗನೊಡನೆ

ಏನಣ್ಣ ಭರತೇಶಗನುಜೆಯ ಕುಡೆನೆಂದು । ನೀನತಿರಭಸದೋರ್ಪೆ ಗಡ ॥
ಆ ನೃಪಗೆಂದೆ ಬಳೆದ ಪೆಣ್ಣ ಕೊಡಬೇಕು । ಗ್ಲಾನಿದೋರದಿರೆಂದಳಾಕೆ ॥ ಮಂ. ಸಂ. ೪೩

ಇಂತು ನುಡಿದಾಗ

ಕುಡನೆಂದುದಿಲ್ಲಮ್ಮ ಭರತೇಶ ತಾನಿಷ್ಟು । ಪೊಡವಿಗಗ್ಗಳನಾದೆನೆಂದು ॥
ಹಿಡಿಬಿಟ್ಟಯೊಳು ಹೆಣ್ಣ ಬೇಡಿದರದಕೆ ನಾ। ನೊಡಬಟ್ಟುದಿಲ್ಲೆಂದನವನು ॥ ಮಂ.ಸಂ.೪೪
ಹೆಣ್ಣ ಬೇಕಾದರೆ ಬರಬೇಕು ನಾವೆಮ್ಮ । ಬಣ್ಣಿಗೆ ತಪ್ಪಿ ಕೊಡುವೆವೆ ॥
ಹೆಣ್ಣುಗಂಡಿನ ಕೊಳುಕೊಡೆಯು ಮೈಸಿರಿ ತಪ್ಪಿ । ಬಣ್ಣಿಸಲಾಗದಿಂತೆಂದ ॥ ಮಂ ಸಂ.೪೮

ಮಗನೆಂದ ಮಾತಿಗೆ ಕಂಬನಿ ಮಿಡಿಯುತ್ತಾ ಯಶೋಭದ್ರೆ

ಹೆಣ್ಣೊಂದ ಪಡೆದುದು ಭರತೇಶಗಿತ್ತೆನ್ನ । ಕಣ್ಣ ಹಬ್ಬವ ಕಾಣ್ಬೆನೆಂದು ॥
ಕಣ್ಣೊಳಿಟ್ಟದೆನಿನ್ನಾತ್ಮ ಕಾರ್ಯವ ಮಾಳ್ಪೆ । ನಣ್ಣ ನೀನೊಪ್ಪೆಂದಳೊಡನೆ ॥ ಮಂ.ಸಂ.೫೩

ದಾರಿಗೆ ಬಾರದ ಮಗನಿಗಾಗಿ ಬೇಸತ್ತು ಸಂಸಾರ ತೊರೆಯುವುದಾಗಿ ತಾಯಿ ನೊಂದು ನುಡಿವಳು. ಇದ್ದಕ್ಕಿದ್ದಂತೆ ಉದ್ಭವಿಸಿದ ವಿರಸ ಸನ್ನಿವೇಶದಲ್ಲಿ, ಮೈನೆರೆದು ಮದುವೆಯನ್ನು ಇದಿರುನೋಡುತ್ತಿದ್ದ ಸುಭದ್ರೆ ಎಷ್ಟು ತಳಮಳಗೊಂಡಳೋ? ಭರತೇಶ ಈ ಸಂದರ್ಭದಲ್ಲಿ ತನ್ನ ಪ್ರತಿಷ್ಠೆಯನ್ನು ಬದಿಗೊತ್ತಿ ತಾನಾಗಿ ಹೆಣ್ಣಿನ ಮನೆಗೆ ಬಂದು ಕ್ರಮಬದ್ಧವಾಗಿ ಸುಭದ್ರೆಯನ್ನೊಲಿಸಿ ನಮಿರಾಜನ ಮನದ ಕಲ್ಮಷವನ್ನು ತೊಳೆಯುತ್ತಾನೆ ಈ ಭಾಗವನ್ನು ರತ್ನಾಕರ ನಾಟಕೀಯವಾಗಿ ಚಿತ್ರಿಸಿ ರಸಗಡಲಲ್ಲಿ ಓದುಗರನ್ನು ತೇಲಿಸಿದ್ದಾನೆ. ಲೋಕಕಲ್ಯಾಣಕ್ಕಾಗಿ ಭರತೇಶ ಎಷ್ಟೋವೇಳೆಯಲ್ಲಿ ತಗ್ಗಿ ನಡೆದಿದ್ದಾನೆ. ಪ್ರತಿಷ್ಠೆಯನ್ನು ನುಚ್ಚುನೂರಾಗಿಸಿ ಎದುರಾಳಿಯ ಮನವನ್ನೊಲಿಸುವನು. ಬಾಹುಬಲಿಯನ್ನು ಕೇವಲ ಮಾತುಗಳಲ್ಲೇ ಚಕ್ರೇಶ ಸೋಲಿಸುವ ಸಂದರ್ಭ ಕಲ್ಲೆದೆಯನ್ನೂ ಕರಗಿಸುವಂತಿದೆ. ಹೃದಯ ಪರಿವರ್ತನೆಯಿಂದ ಪರಿಹರಿಸಲಾರದ ಸಮಸ್ಯೆಗಳು ಇಲ್ಲವೆಂದೇ ರತ್ನಾಕರನ ಕಲಾ ಕುಶಲತೆ ಸಾರುತ್ತದೆ. ರತ್ನಾಕರನ ಭರತೇಶ ರಸಿಕನಾದ ಬ್ರಹ್ಮಜ್ಞಾನಿಯಾದುದರಿಂದ ಕೋಪ ತಾಪಗಳಿಗೆಡೆಯಾದ ಸಂದರ್ಭಗಳನ್ನೂಕೂಡ ತನ್ನ ನಿಪುಣತೆಯಿಂದ ದಯಾದಾಕ್ಷಿಣ್ಯಗಳ ಸೆಲೆಯನ್ನಾಗಿ ಮಾಡುತ್ತಾನೆ. ಈ ಅಪೂರ್ವ ಕಲೆ ಈತನಿಗೆ ಮಾತ್ರ ಮೀಸಲು. ಈತನ ವಂಶವೂ ದೊಡ್ಡದು; ಈತನೂ ದೊಡ್ಡವನು.

ಪುರುಪರಮೇಶನ ಹಿರಿಯಕುಮಾರನು । ನರಲೋಕಕೊಬ್ಬನೆ ರಾಯ ॥
ಮುರಿದು ಕಣ್ಣಟ್ಟರೆ ಕ್ಷಣಕೆ ಮುಕ್ತಿಯುಕಾಂಬ। ಭರತ ಚಕ್ರಿಯ ಹೇಳಲಳವೆ॥ ಆ.ಸಂ.೨೦
ಹದಿನಾರನೆಯ ಮನು ಪ್ರಥಮಚಕ್ರೇಶ್ವರ । ಸುದತಿಜನಕೆ ರಾಜಮದನ ॥
ಚದುರರ ತಲೆವಣಿ ತದ್ಭವ ಮೋಕ್ಷ ಸಂ । ಪದನ ಬಣ್ಣಿಸಲೆನ್ನ ಹವಣೆ ॥ ಆ. ಸಂ. ೨೨

ಭರತೇಶನ ಹಿರಿಮೆಯನ್ನು ಎಷ್ಟು ಸಾರಬಹುದೋ ಅಷ್ಟು ಸಾರಲಾಗದೆ ಈ ಗ್ರಂಥದಲ್ಲಿ ರತ್ನಾಕರಮಹಾಕವಿ 'ಬಣ್ಣಿಸಲೆನ್ನ ಹವಣೆ' ಎಂದಿದ್ದಾನೆ.

ರತ್ನಾಕರನಿಗಿಂತ ಹಿಂದೆ ಎಷ್ಟೋ ಜನ ಭರತೇಶನ ಪಾತ್ರವನ್ನು ಸೃಷ್ಟಿಸಿದ್ದಾರೆ. ಅವರ ಕಣ್ಣಿಗೆ ಈತ ದಿವ್ಯನಾಗಿ ಕಂಡರೂ ಭವ್ಯನಾಗಿ ಕಂಡಿಲ್ಲ; ಭವ್ಯನಾಗಬೇಕಾದರೆ ಎಷ್ಟೋ ಹೊಡೆತಗಳನ್ನು ಭರತೇಶ ತಿಂದು ದಾರಿಗೆ ಬಂದನೆಂದು ಹಿಂದಣ ಕವಿಗಳ ಅಭಿಪ್ರಾಯ. ಅವರ ದೃಷ್ಟಿಯಲ್ಲಿ ಭರತೇಶ ಅತಿಮಾನವನಾಗಿ ಕಂಡರೂಕೂಡ ಕೆಲವು ವೇಳೆ ಅಮಾನುಷನಾಗಿ ವರ್ತಿಸುವ ಚಿತ್ರವನ್ನು ಅವರೆಲ್ಲ ಚಿತ್ರಿಸಿದ್ದಾರೆ. ಆದರೆ ರತ್ನಾಕರನ ಭರತೇಶ ಹುಟ್ಟುವಾಗಲೆ ಭವ್ಯಸಂಸ್ಕಾರವನ್ನು ಪಡೆದಿದ್ದಾತ; ಈ ಮಹಾನುಭಾವ ಕದನಕಾತರನಲ್ಲ, ಶಾಂತಿಪ್ರಿಯನಾದ ಸದ್ಗೃಹಸ್ಥ; ಎಲ್ಲರ ಮೇಲ್ಮೆಯನ್ನೂ ಬಯಸಿದ ಹಿರಿಯ ವ್ಯಕ್ತಿ; ಇಹಪರಗಳೆರಡರಲ್ಲೂ ಸುಖಿಸಿದ ಮಹಾನುಭಾವ! ತನಗಿದಿರು ಬಿದ್ದ ತಮ್ಮನ ಮೇಲೆ ಚಕ್ರ ಪ್ರಯೋಗವನ್ನೆಸಗಿದ ಭ್ರಾತೃಘಾತಕನಲ್ಲ ರತ್ನಾಕರನ ಭರತೇಶ! ತನಗೊಲಿದಿದ್ದ ಚಕ್ರರತ್ನವನ್ನೇ ತಮ್ಮನ ಸ್ವತ್ತಾಗಿಸಿ ಬಾಳೆಂದು ಬಲವಂತವಾಗಿ ನೂಕಿದ ನಿರ್ಲಿಪ್ತನೂ ದಯಾಮಯನೂ ಆದ ಭರತೇಶನನ್ನು ಶೃಂಗಾರಕವಿ ರತ್ನಾಕರ ಕಡೆದಿದ್ದಾನೆ!

ಜಿ. ಬ್ರಹ್ಮಪ್ಪ

# ಶ್ರೀ ಕಾಲಿದಾಸನ ಪ್ರಾರ್ಥನೆಗಳು

'ಕಾಲಿದಾಸ'ನೆಂಬ ಬಿರುದಿನ ಕವಿಗಳು ಅನೇಕರಾಗಿ ಹೋಗಿದ್ದಾರೆ. ಅವರಲ್ಲಿ ಪ್ರಥಮ ಕಾಲಿದಾಸನು ನಾಟಕಕಾರನು. ಎರಡನೆಯವನು 'ಕಾಲಿದಾಸ'ನೆಂಬ ಬಿರುದಿನ 'ಹರಿಷೇಣ' ಕವಿಯು; ಗುಪ್ತರ ಕಾಲದವನು; ಮಹಾಕಾವ್ಯಕಾರನು. ಮೂರನೆಯವನು ಆಮೇಲೆ ಆಗಿರಬೇಕು. ಆಮೇಲೆ ಭೋಜರಾಜನ ಸಭೆಯ ಸಮಸ್ಯಾಪೂರ್ತಿಪ್ರಿಯ ಕಾಲಿದಾಸನು. ಆದರೆ ಈ ಮೊದಲೆ ಕವಿ ರಾಜಶೇಖರನು 'ಕಾಲಿದಾಸ ತ್ರಯಿ'ಯ ವಿಷಯವನ್ನು ಪ್ರಸ್ತಾಪಿಸುತ್ತಾನೆ. ಮೊದಲಿನಿಬ್ಬರು ಕಾಲಿದಾಸರ ನಿಕ್ಕಳ ನಿರ್ಣಯವು ಶ್ರೀ ಸಮುದ್ರಗುಪ್ತರಚಿತವಾದ ಶ್ರೀಕೃಷ್ಣಚರಿತ್ರದ ಪೀಠಿಕಾಭಾಗದಿಂದ ಆಗುತ್ತದೆ. ಈ ಪ್ರಕರಣವನ್ನು ಸಂಪಾದಿಸಿ ಪ್ರಕಟಿಸಿದವರೇ ಪ್ರಕಾಶಪಡಿಸಿದ 'ಯಜ್ಞಫಲ'ವೆಂಬ ನಾಟಕದ ವಿಷಯವು ವಿದ್ವಾಂಸರನ್ನು ಕೆಲದಿನ ಸಂಭ್ರಾಂತಿಗೊಳಿಸಿದುದರಿಂದ ಅದರ ಜೊತೆಗೆ ಇದೂ ಸಂಶಯಗ್ರಸ್ತವಾಗಿತ್ತು. ಈಗ ಪಂಡಿತರು 'ಯಜ್ಞಫಲ'ವು ಕೃತ್ರಿಮವಾದ ಅರ್ವಾಚೀನ ನಾಟಕವಲ್ಲವೆಂದು ಒಪ್ಪಿದ್ದಾರೆ. 'ಶ್ರೀಕೃಷ್ಣ ಚರಿತ್ರ'ವನ್ನೂ ಪಂಡಿತರು ಒಪ್ಪಿ ವಿಮರ್ಶಿಸುವರು ಎಂದು ನಾನು ಹಾರಯಿಸುತ್ತೇನೆ.

ನಾಟಕಕಾರ ಕಾಲಿದಾಸನ ನಾಟಕಗಳಲ್ಲಿ ಒಂದು ವಿಶಾಲ ದೃಷ್ಟಿಯಿದೆ. ಅದರ ಅರಿವು ಜನಕ್ಕೆ ಚೆನ್ನಾಗಿ ಆಗಲೆಂದು ಕೆಲವೊಂದು ವಿಷಯಗಳನ್ನು ಪ್ರತ್ಯೇಕವಾಗಿ ವಿಮರ್ಶಿಸಬೇಕೆನ್ನುತ್ತೇನೆ. ಮೊದಲನೆಯದು-ಅವನ ಪ್ರಾರ್ಥನೆಗಳು. ಇವು ಭರತ ವಾಕ್ಯರೂಪವಾಗಿ ನಾಟಕಗಳ ಕೊನೆಗೆ ಬರುವವು. ಅವನು ಬರೆದ ನಾಟಕಗಳು ನಾಲ್ಕು ಎನ್ನುತ್ತಾನೆ ಸಮುದ್ರಗುಪ್ತ. ನಮ್ಮ ಕೈಗೆ ಬಂದುವು ಮೂರು ಮಾತ್ರ. ನಾಲ್ಕನೆಯದು ಯಾವುದು? ಕೌಂತಲೇಶ್ವರ ದೌತ್ಯವೇ? ಅದು ಅವನದೇ? ಸದ್ಯಕ್ಕೆ ಈ ವಿಚಾರ ಅಷ್ಟಕ್ಕೆ ಇರಲಿ. ಖ್ಯಾತವಾದ ಮೂರುನಾಟಕಗಳನ್ನೇ ಕುರಿತು ವಿಚಾರಿಸುವಾ. ಮೊದಲನೆಯದು ಮಾಲವಿಕಾಗ್ನಿಮಿತ್ರ, ಎರಡನೆಯದು ಅಭಿಜ್ಞಾನ ಶಾಕುಂತಲ, ಮೂರನೆಯದು ವಿಕ್ರಮೋರ್ವಶೀಯ. ಅವುಗಳ ಮೂರು ಭರತವಾಕ್ಯಗಳಲ್ಲಿ ಜೀವನದ ಸಮಗ್ರ ನೋಟವು ಅಡಕವಾಗಿದೆ. ಅದು ಅವನ ಪ್ರತಿಭೆಯ'ತ್ರಿವಿಕ್ರಮ' ಎನ್ನೋಣ!

ಮಾಲವಿಕಾಗ್ನಿಮಿತ್ರದ ಭರತವಾಕ್ಯವು ಹೀಗಿದೆ—

ಆಶಾಸ್ಯಮಭ್ಯಧಿಗಮಾತ್ ಪ್ರಭೃತಿಪ್ರಜಾನಾಂ
ಸಂಪದ್ಯತೇ ನ ಖಲು ಗೋಪ್ತರಿನಾಗ್ನಿಮಿತ್ರೇ॥

ನಾಟಕದ ಕೊನೆಗೆ, ನಾಯಕನಾದ ಅಗ್ನಿಮಿತ್ರನ ಪಟ್ಟಮಹಿಷಿ ಧಾರಿಣಿ, ಇರಾವತಿ ಎಂಬ ಸವತಿ ಇರುವಾಗಲೆ, 'ಮಾಲವಿಕೆ'ಯನ್ನು ತನ್ನ ಕೈಯಿಂದ ಎತ್ತಿ ಕೊಡುತ್ತಾಳೆ. ಸಂಸಾರನಾಟಕವು ಸುಖಪರಿಣಾಮಿಯಾಗಿದೆ. 'ಆರ್ಯಪುತ್ರ, ಇನ್ನೂ ಏನಾದರೂ ನಿನ್ನ 'ಪ್ರಿಯವನ್ನು ಮಾಡಲಾ?' ಎಂದು, ಪಂಚಪಕ್ವಾನ್ನದ ಮೇಲೆ ಪಂಚಾಮೃತ ಮುಕ್ಕುಳಿಸುವಂತೆ ಪ್ರಶ್ನೆ ಮಾಡುತ್ತಾಳೆ-ಧಾರಿಣಿ. ಆಗ ರಾಜ—

'ತ್ವಂ ಮೇ ಪ್ರಸಾದ ಸುಮುಖೀ ಭವ ದೇವಿ ! ನಿತ್ಯಂ
ಏತಾವದೇವ ಹೃದಯೇ ಪ್ರತಿಪಾಲನೀಯಮ್ ॥ '

ತಥಾಪಿ ಇದಂ ಅಸ್ತು—ಎಂದು **ಆಗಳಿನ ಭರತವಾಕ್ಯ** ಆಡುವನಂತೆ! ಆ ಭರತ ವಾಕ್ಯವನ್ನು ಕುರಿತು ಸಂಶೋಧಕರ ಅನುಮಾನಗಳಿವೆ. ಅವು ಇತಿಹಾಸ ವಿಷಯ. ನಾಟಕವು ಶುಂಗರ ಅಗ್ನಿಮಿತ್ರನ ಕಾಲದ್ದೆಂದು ಒಂದು ಅನುಮಾನ. (ಅರ್ಥಾತ್, ಅನೇಕಾನೇಕ ಪಾಠಭೇದಗಳಿವೆ. ಪಾಠ ಭೇದಗಳಿರದೆ ಸಂಶೋಧನೆ ಇಲ್ಲ. ಸಂಶೋಧನೆ ಇಲ್ಲದೆ ಪಾಠಭೇದಗಳಿಲ್ಲ!). ಈ ಅನುಮಾನಕ್ಕೆ 'ಸಂಪದ್ಯತೇ' ಎಂಬ ಪ್ರಯೋಗವೇ ಕಾರಣ. 'ಗೋಪ್ತರಿ' ಪ್ರಯೋಗದಿಂದ ಇದು ಗುಪ್ತರ ಕಾಲದ ನಾಟಕ ಎಂದು ಮತ್ತೊಂದು ಅನುಮಾನ. ಇದು ಅಗ್ನಿಮಿತ್ರ ಸಮಕಾಲೀನವಲ್ಲ, ಗುಪ್ತರ ಕಾಲದ ನಾಟಕ ಎಂದು ಮತ್ತೊಂದು ಅನುಮಾನ. ನಾನೂ ಏನೂ ಅನುಮಾನ ಮಾಡಲೆ, ನನ್ನ ಒಂದು ಅನುಮಾನವನ್ನೂ ಇಲ್ಲಿಯೇ ಸೇರಿಸುತ್ತೇನೆ:—'ಅಗ್ನಿಮಿತ್ರ' ಎಂಬುದು ಶೂದ್ರಕ-ವಿಕ್ರಮನ ಹೆಸರು. ಶುಂಗ ಅಗ್ನಿಮಿತ್ರನ ಚರಿತ್ರದಲ್ಲಿ ಸಮಾಧಿಗುಣದಿಂದ 'ಶೂದ್ರಕ ವಿಕ್ರಮ'ನ ಚರಿತ್ರವನ್ನು ಕಾಲಿದಾಸನು ತನ್ನ ಸಮಕಾಲೀನ ಸಾಮಾಜಿಕರಿದಿರು ಇಡುತ್ತಿದ್ದಾನೆ. ಈ ಪ್ರಮಾಣಿಸಿ ಕೊಡುವ ವಿಷಯವನ್ನು 'ಶೂದ್ರಕ-ವಿಕ್ರಮ'ನನ್ನು ಕುರಿತು ನಾನು ಬರೆಯಬೇಕಾದ ಲೇಖನಕ್ಕೆ ಮೀಸಲಾಗಿಡುವೆ. ಆದರೆ ಇಲ್ಲಿ—ರಾಜನು ಬೇಡಿಕೊಂಡಿದ್ದೇನು? ಎಂಬುದು ಸಾಹಿತ್ಯ ಸ್ವಾರಸ್ಯದ ವಿಷಯ. 'ಹೇ ದೇವಿ! ನೀನು ಯಾವಾಗಲೂ ನನಗೆ ಪ್ರಸನ್ನಮುಖಿಯಾಗಿ ಇದಿರಿರು. ನನ್ನ ಹೃದಯವು ಇದನ್ನೇ ಪ್ರತಿಪಾಲಿಸುವದು.' (ನಿನ್ನ ಹೃದಯವೂ 'ಪ್ರಸಾದ ಸುಮುಖಿ' ಯಾಗುವುದನ್ನೇ ಪ್ರತಿಪಾಲಿಸಲಿ)—ಎಂದು ಬಾಯ್ಬಿಟ್ಟು ಬೇಡಿಕೊಂಡು, ಹೀಗಾಗಿದ್ದಾದರ, ಅಗ್ನಿಮಿತ್ರನ ಪ್ರಜೆಗಳು ಬಯಸತಕ್ಕ ವಿಷಯವೇ ಇಲ್ಲ. ರಾಜ್ಯವು ಸುಖವಾಗಿ ಸಾಗುತ್ತದೆ. ಯಾಕೆಂದರೆ, ರಾಜನ 'ಗ್ರಹ-ಕಾರಣ' ಅಕ್ಷುಬ್ಧ ಶಾಂತಿಯಿಲ್ಲವೆ, ಪ್ರಸನ್ನವಾಗಿದೆ. ಶಿವ-ಶಕ್ತಿ ಸಾಮರಸ್ಯವೇ ಜಗತ್‌ಕಲ್ಯಾಣ ಕಾರಣ. ರಾಜನ ಪ್ರಭುಶಕ್ತಿ ನಿಷ್ಪ್ರಭವಾದರ ಅವನ ಪ್ರಜೆಗಳು ಯಾವ ಮಂಗಲ ಕಂಡಾರು? 'ನಾಯಕ-ನಾಯಿಕಾ' ಪ್ರಸನ್ನತೆಯೆ ಸಮಸ್ತ ಮಂಗಲದ ಅಸ್ತಿಭಾರ. ನಂದ ಮೌರ್ಯರ, ಶುಂಗ-ಕಾಣ್ವರ, ಸಾತವಾಹನ ರಾಜಕೀಯ ಕ್ಷೋಭದ ಹಿಂದೆ **ಗೃಹಕಲಹ**ಗಳಿದ್ದವು. ಕ್ಷುಬ್ಧ ಹೃದಯದ ರಾಜರು ಯಾವ ಬಗೆಯ ಪ್ರಜಾಕಲ್ಯಾಣವನ್ನು ಮಾಡರಿಯರು. ಕಾಲಿದಾಸನ ಪ್ರಾರ್ಥನೆಯ ಧ್ವನಿತಾರ್ಥ ಇಲ್ಲಿದೆ. ರಾಜನು ಬಹು ಭಾರ್ಯೆಯುಳ್ಳವನೇ ಇರಲಿ, ಏಕಪತ್ನೀವ್ರತಿಯೇ ಇರಲಿ, ಸಂನ್ಯಾಸಿ ಇರಲಿ, ಅನೇಕ ಸ್ತ್ರೀಪರಿವೃತನಿರಲಿ, ಅವನ ಹೃದಯವು ದ್ವಿಧಾವೃತ್ತಿಯನ್ನು ತಾಳಿರಬಾರದು. '**ಸಮಾಹಿತಹೃದಯ'ವಾಗಿರುವದು ಪ್ರಭುಶಕ್ತಿಯ ಮೊದಲನೆಯ ಗುಟ್ಟು.** ಕಾಲಿದಾಸನು ಇದರ ರಹಸ್ಯವನ್ನೇ ಈ ಪ್ರಥಮನಾಟಕದಲ್ಲಿ ಪ್ರಪಂಚಿಸಿ ತೋರಿಸಿದ್ದಾನೆ. ಸೇನಾಪತಿ

ಪುಷ್ಯಮಿತ್ರ, ಅಗ್ನಿಮಿತ್ರ, ವಸುಮಿತ್ರ, ಶಕಹೂಣರ ಕಾಟ, ಮಾಲವ—ಅವನ್ತಿ,—ವಿದರ್ಭಗಳ ರಾಜಕಾರಣ, ಅಶ್ವಮೇಧ ಪ್ರಕರಣ, ಅಗ್ನಿಮಿತ್ರನು ಕುಟುಂಬ ಕಾರಣದಲ್ಲಿ ಸೇರಿ, ವಸುಮಿತ್ರನು ಕುದುರೆಯ ಬೆಂಗಾವಲಾಗಿ ಹೋಗಿರುವದು—ಇದೆಲ್ಲವೂ ನಾಟಕ ವಸ್ತುವಿನ ಹೂರಣವು. 'ಮನೆ ಗೆದ್ದು ಮಾರು ಗೆಲ್ಲಬಹುದು' ಇದನ್ನು ರಾಜಶಕ್ತಿ ಮರೆಯಬಾರದು. ಇದು ಕಾಲಿದಾಸ ಪ್ರತಿಭೆಯ ಪ್ರಥಮ ವಿಕ್ರಮ.

ಇನ್ನು 'ಅಭಿಜ್ಞಾನ ಶಾಕುಂತಲ'. ಇದರ ಭರತವಾಕ್ಯವೂ ಇಬ್ಭಾಗವಾಗಿದೆ; ಆದರೆ ಒಡೆದು ಹೇಳಿಲ್ಲ. ಶ್ಲೋಕವು ಹೀಗಿದೆ :—

ಪ್ರವರ್ತತಾಮ್ ಪ್ರಕೃತಿ ಹಿತಾಯ ಪಾರ್ಥಿವಃ ।
ಸರಸ್ವತೀ ಶ್ರುತಿ ಮಹತಾಂ ಮಹೀಯತಾಮ್ ॥
ಮಮಾಪಿ ಚ ಕ್ಷಪಯತು ನೀಲಲೋಹಿತಃ ।
ಪುನರ್ಭವಂ ಪರಿಗತ ಶಕ್ತಿರಾತ್ಮಭೂಃ ॥

'ಪುತ್ರವತಿಯಾದ ಶಕುಂತಲೆಯು, ಆ ಶಾಪ ನಿವೃತ್ತಿಯಾದ ಮೇಲೆ, ನೆನೆವು ಮರಕೊಳಿಸಿದ ದುಷ್ಯಂತನಿಂದ ಪರಿಗೃಹಿಸಲ್ಪಟ್ಟಳು' ಎಂದು ಕಣ್ವರಿಗೆ ಸಂತಸದ ಒಸಗೆ ಕಳುಹಿ, ಮಾರೀಚ ಕಶ್ಯಪರು, ಹೆಂಡಿರು ಮಕ್ಕಳೊಡನೆ ದುಷ್ಯಂತನು ರಾಜಧಾನಿಗೆ ತೆರಳಬಹುದು ಎಂದು ತಿಳಿಸಿ—ನಿನ್ನ ರಾಜ್ಯದಲ್ಲಿ ಯಜ್ಞ ನಡೆಯಲಿ, ಆದರಿಂದ ತೃಪ್ತನಾದ ಇಂದ್ರನು ಸಕಾಲ ವೃಷ್ಟಿಯಿಂದ ನಿನ್ನ ಪ್ರಜೆಗಳನ್ನು ಸುಖವಾಗಿಡಲಿ, ಅಂತೂ ದೇವ—ಮಾನವರ ಉಭಯ ಲೋಕದವರು ಒಬ್ಬರನ್ನೊಬ್ಬರು ಎತ್ತಿ ಹಿಡಿಯಲಿ ಎಂದು ಲೋಕ ಸಂಗ್ರಹದ ಆಶೀರ್ವಚನವಾಡುತ್ತಾರೆ. ದುಷ್ಯಂತನು 'ಯಥಾಶಕ್ತಿಯಾಗಿ ಈ ಶ್ರೇಯೋಮಾರ್ಗವನ್ನು ಅನುಸರಿಸುವೆ' ಎನ್ನುತ್ತಾನೆ. ಆಗ ಕಶ್ಯಪರು 'ವತ್ಸನೇ, ಮತ್ತೇನು ನಿನ್ನ ಪ್ರಿಯವಾಗಲಿ, ಹೇಳು' ಎನ್ನುತ್ತಾರೆ. (ಶ್ರೇಯ—ಪ್ರೇಯಗಳ ದ್ವಂದ್ವವಿಲ್ಲ ಈ ಗುರು ಶಿಷ್ಯರ ಘನ ವಾತ್ಸಲ್ಯ ಸಂಬಂಧದಲ್ಲಿ!). ದುಷ್ಯಂತ ಹೇಳುತ್ತಾನೆ 'ಇದಕ್ಕೂ ಹೆಚ್ಚಿನ ಪ್ರಿಯವೇನಿದೆ? (ಹೌದು!) ಇದ್ದರೆ ಇಷ್ಟಾಗಲಿ' ಅದೆ ಭರತ ವಾಕ್ಯ—

"'ಪಾರ್ಥಿವನು' ಎಂದರ ರಾಜನು 'ಪ್ರಕೃತಿ' ಎಂದರೆ ಪ್ರಜೆಗಳ ಹಿತಕ್ಕಾಗಿ ಪ್ರವರ್ತಿಸಲಿ. ಶ್ರುತಿ ಸಂಪನ್ನರ ಸರಸ್ವತಿಗೆ ಮಹತ್ವ ಬರಲಿ" ಎಂಬುದು ಪ್ರಾರ್ಥನೆಯ ಮೊದಲನೆಯ ಭಾಗ ಕಾಲಿದಾಸನ ನಾಟಕಗಳು ರಂಗಭೂಮಿಯನ್ನೇರಿದಾಗ ದೇಶವಾರ್ತೆ ಏನಿತ್ತು? ಮುಖ್ಯವಾಗಿ 'ಉಜ್ಜಯಿನಿ—ವಿದಿಶಾ' ಪಟ್ಟಣಗಳ ಸುತ್ತು ಯಾವ ಚಳವಳಿ ಸಾಗಿತ್ತು? ಇದನ್ನು ನಾವು ಲಕ್ಷೀಕರಿಸಬೇಕು. ಅದು ಅಲೆಕ್ಸಾಂಡರ್, ಕನಿಷ್ಕ, ಮಿನಾಂಡರ ದಂಡೆತ್ತಿದ ಕಾಲ. ಪರಕೀಯರು ಭರತ ಭೂಮಿಯನ್ನು ಪಾದಾಕ್ರಾಂತಗೊಳಿಸಲು ಹವಣಿಸುತ್ತಿರುವಾಗ, ಸ್ಥಳೀಯ ಬುದ್ಧಿವಂತರು, ಸಂನ್ಯಾಸಿಗಳು ಪ್ರಜೆಗಳಿಗೆ ಪರಲೋಕಪ್ರೀತಿಯನ್ನು ಕಲಿಸುತ್ತಿದ್ದರು. ವ್ಯವಹಾರ ಹದಗೆಟ್ಟಿತ್ತು; ಪರಮಾರ್ಥವೆಂದು ಜನರಲ್ಲಿ ಬೈರಾಗಿತನವನ್ನು ಹಬ್ಬಿಸುತ್ತಿದ್ದರು.

ವೈದಿಕ ಮಾರ್ಗವು ಪರಮಾರ್ಥಕ್ಕೆ ಸರಿಯಿಲ್ಲವೆನ್ನುವದಿರಲಿ, ಇಹಲೋಕ ಯಾತ್ರೆಯೂ ಅಭ್ಯುದಯಕಾರಿಯಾಗುವಂತೆ ಬೋಧೆ ಮಾಡದೆ ಕುಟುಂಬದ ತಳಹದಿಯನ್ನೆ ಅಗೆದು ತೆಗೆದಂತೆ ಸ್ವೈರಭಿಕ್ಷಾಟನವು ಪ್ರಚಾರಗೊಳ್ಳುತ್ತಿತ್ತು. ಗರ್ದಭಿಲ್ಲ—ಕಾಲಿಕಾಚಾರ್ಯ ವೈರದಲ್ಲಿ ಶಕರಿಗೆ ನಿಮಂತ್ರಣ ಹೋಗಿದ್ದ ಕಾಲ ಅದು. ಇಂಥ ಕಾಲಕ್ಕೆ, 'ಪಾರ್ಥಿವರು ಪರಲೋಕ ಪ್ರಣಯಿಗಳಾದರೆ, ಪ್ರಜೆಗಳು ಪರರಾಜ ಭಕ್ತರಾಗುತ್ತಾರೆ' ಈ ಎಚ್ಚರಿಕೆ ಕಾಲಿದಾಸನ ಪ್ರಾರ್ಥನೆ ಕೊಡುತ್ತಿದೆ. ಬಹುಜನರು ಅಭ್ಯುದಯ ಪ್ರಿಯರು, ಅವರಿಗೆ ಪರಮಾರ್ಥ ಎರಡನೆಯದು! ಮೇಲಿನ ಜನರು ತಮಗಾಗಿ ಪರಮಾರ್ಥ ಕಾದಿಟ್ಟುಕೊಂಡಿದ್ದಾರೆ, ಜನ ಸಾಮಾನ್ಯರೂ ವ್ಯವಹಾರ ತಿರಸ್ಕರಿಸಿ ಜಪತಪ ಸಿದ್ಧಿಗಳಿಸಬೇಕು--ಎಂದು ಹುರಿದುಂಬಿಸಿದರೆ, ರಾಜ್ಯವು ಪರರ ಪಾಲಾಗುತ್ತದೆ. ಶಕಹೂಣರ ಪರಕೀಯತ್ವವು ಮುರಿದು ಭಾರತೀಯರ ಸ್ವಕೀಯತ್ವವು ಪ್ರತಿಷ್ಠಾಪಿತವಾಗಲು ೪೦೦–೫೦೦ ವರ್ಷಗಳ ಕಾಲ ಹಿಡಿಯಿತು–ಆಗ ಎರಡನೆ ಕಾಲಿದಾಸ 'ಹರಿಷೇಣ'ತನ್ನ ಮಹಾಕಾವ್ಯಗಳಿಂದ ಲೋಕ ಸಂಗ್ರಹ ಕಾರ್ಯ ಮಾಡುತ್ತಾನೆ. ಶ್ರುತಿಯ ಸಾರಸ್ವತಕ್ಕೂ ಅಪಶ್ರುತಿಯ ಸಾರಸ್ವತಕ್ಕೂ ಇದೇ ಭೇದ. ದೇವ–ಮಾನವರ ಬಾಂಧವ್ಯ ಬೆಳೆಸುವ ಸಾಹಿತ್ಯವು ಋಷಿಗಳದು. ದೇವ-ಮಾನವ ಸಂಬಂಧದಲ್ಲಿ ಸಂಶಯಜಾಲ ಹಬ್ಬಿಸಿ, ಅತಿ ವ್ಯಕ್ತಿತ್ವದ ಪ್ರಸ್ಥ ಹಬ್ಬಿಸಿ, ಸಾಮಾಜಿಕ ಐಕ್ಯವನ್ನು ಅಶಕ್ಯಪ್ರಾಯವಾಗಿ ಮಾಡುವುದು ಅಪಶ್ರುತಿಯ ಕೆಲಸ. ಅಂಥ ಸಾರಸ್ವತ ಸಾಹಿತ್ಯ ಬೆಳೆದರೆ, ಪ್ರಜೆಗಳಿಗೂ ಪಾರ್ಥಿವರಿಗೂ ಹಿತವಿಲ್ಲ—ಇದು ಕಾಲಿದಾಸನ ದೃಷ್ಟಿ. ಇನ್ನು ಪ್ರಾರ್ಥನೆಯ ಎರಡನೆಯ ಭಾಗ 'ಮಮಾಪಿ ಚ' ಎಂದು ಪ್ರಾರಂಭವಾಗುವದು ದುಷ್ಯಂತನು 'ತಾನು ಮತ್ತೊಮ್ಮೆ ಸಂಸಾರದಲ್ಲಿ ಬರುವದು ಬೇಡ' ಎನ್ನುತ್ತಾನೆ. ಈ ಪ್ರಾರ್ಥನೆ ಅವನ ಪರವಾಗಿಯೇ ? ಏನು ಕವಿಯ ಪರವಾಗಿಯೇ? ಏನು, ಸರ್ವರ ಪರವಾಗಿಯೇ ? ಯಾರ ಪರವಾಗಿಯೇ ಇರಲಿ, ಆ ಪ್ರಾರ್ಥನೆಯ ಔಚಿತ್ಯವು ಪ್ರೇಕ್ಷಕ–ವಾಚಕರಪರವಾಗಿ ಏನು ? 'ಪುನರ್ಭವ ಬೇಡ' ಎಂದು ಪ್ರಾರ್ಥಿಸಿದ್ದರಿಂದ ಇದೇ ಕಾಲಿದಾಸನ ಕೊನೆಯ ನಾಟಕವಿರಬೇಕೆಂದು ತರ್ಕಿಸುವವರಿದ್ದಾರೆ. 'ಪರಿಗತ ಶಕ್ತಿಯಾದ ಆತ್ಮಭೂ' ಎನಿಸಿದ ನೀಲಲೋಹಿತನು, ಪುನರ್ಭವವಿಲ್ಲದಂತೆ ಮಾಡಬೇಕು,—ಈ ಶೈವಕಲ್ಪನೆಯ ಪ್ರಾರ್ಥನೆಯು ಆಗಳಿನ ಜೈನ–ಬೌದ್ಧ ಚಾರ್ವಾಕ ಮತಗಳಿಗೆ ಹೊರತಾದದ್ದು ಇದು ಮೊದಲ ಮಾತು ಈ ಶೈವವು ವೈದಿಕ ಮಾರ್ಗಾವಲಂಬಿ, ಇಂದ್ರ–ಯಜ್ಞ ವಿರೋಧಿಯಲ್ಲ–ಇದು ಎರಡನೆಯ ಮಾತು. ಶಿವನ ಒಂದು ಹೆಸರು. **ಭವ** ಎಂದು, ಇನ್ನೊಂದು **ಅಭವ** ಎಂದು. ವಿಷ್ಣುವಂತೂ ಭವದಲ್ಲಿ ಬಂದು ಮುಂಬರಿಯುವ ಹಾದಿ ತೋರಿಸುವ ದೈವತ. (ಅಂಕ ೭, ಪದ್ಯ ೨೭. 'ಪ್ರಾಹುಃ ದ್ವಾದಶ' ಅಭಿ, ಶಾ). ಯಾವುದರ ಭೋಗವೂ ಅದು ಸಾಕು ಎನ್ನುವ ಸೀಮೆಗೆ ಮುಟ್ಟಬೇಕು—ಅದು ಅದರ ಮೋಕ್ಷ. ದುಷ್ಯಂತನಿಗೆ ಶಕುಂತಲಾ ಮತ್ತು ಭರತರನ್ನು ಪಡೆದು ದಾರೇಷಣೆ—ಪುತ್ರೇಷಣೆಗಳು ಪರಾಸೀಮೆಯನ್ನು

ಮುಟ್ಟಿ, ಆ ಆಶೆಯ ಮೋಕ್ಷವಾಗಿತ್ತು. ಆಶಾಪೂರ್ತಿಯೂ ಇಲ್ಲ, ಪ್ರಾಪ್ತಿಯೂ ಇಲ್ಲ, ಆಶೆ ಮಾತ್ರ ಬಿಟ್ಟಿಲ್ಲ; ಇದೇ ಪುನರ್ಭವದ ದುರ್ಬೀಜ. ನೀಲಲೋಹಿತನಾದ ಶಿವನು ಭವಸಾರ ಬಲ್ಲವ. ಅವನಿಗೆ ದಾಕ್ಷಾಯಣಿ–ಪಾರ್ವತಿಯರ ಸಾಮರಸ್ಯ ಗೊತ್ತಿದೆ. ಅದೇ, ಭವನನ್ನೂ ಅಭವನನ್ನಾಗಿ ಮಾಡಿತು ವಿರಸ ಮಾಡುವ ಯಾವ ಸಂಸಾರ ಗರ್ಹಣೆಯಿಂದಲೂ ಭವದಿಂದ ಮುಕ್ತಿಯಿಲ್ಲ; ಪರಮೋಚಿತ ಪೂರ್ತಿಯಿಂದ ಅದರ ಅಲಂ—ಭಾವ ಬರುತ್ತದೆ. ಇದು ಕಾಲಿದಾಸ ದರ್ಶನ. ಪ್ರಸಾದ ಸುಮುಖಿಯಾದ ಧಾರಿಣಿಯ ದರ್ಶನ, ಪ್ರಣಯದ ಪಾಕವು ತಪೋಭೂಮಿಯಿಂದ ತಪೋಭೂಮಿಯ ವರೆಗೆ ಹಬ್ಬಿರುವ ದರ್ಶನ - ಈ ಎರಡು ದರ್ಶನಗಳ ಜತೆಗೆ ಮೂರನೆಯದಾದ ಶ್ರೀ–ಸರಸ್ವತಿಯರ ಸಹಭಾವ ಸೌಜನ್ಯ ಕೂಡಿದರೆ ಆಗ ಸರ್ವಜನವೂ ಸುಖಿಯಾಗಿ ಬಾಳಿ, ಸುಖಿಯಾಗಿ ಜಗತ್ತಿನಿಂದ ಸತ್ಯಬ್ರಹ್ಮದಲ್ಲಿ ಲೀನವಾಗಬಹುದು. ಈ ಪ್ರಾರ್ಥನೆಯು ವಿಕ್ರಮೋರ್ವಶೀಯದಲ್ಲಿ ಬರುತ್ತದೆ.

ಪರಸ್ಪರ ವಿರೋಧಿನ್ಯೋೀರೇತಸಂಶ್ರಯ ದುರ್ಲಭಂ ।

ಸಂಗತಂ ಶ್ರೀ ಸರಸ್ವತ್ಯೋಃಭೂಀತ ಮೇಽಸ್ತು ಸದಾಸತಾಂ॥ ವಿ. ೫ ಅಂಕ–

ಶ್ರೀ ಇದ್ದಲ್ಲಿ ಸರಸ್ವತಿ ಇಲ್ಲ, ಸರಸ್ವತಿ ಇದ್ದಲ್ಲಿ ಶ್ರೀ ಇಲ್ಲ—ಇದು ಅವರ ಪರಸ್ಪರ ವಿರೋಧ; ಅವರು ಏಕತ್ರವಾಗಿರುವುದು ದುರ್ಲಭ. ಯದಾ ಕದಾಚಿತ್, ಅವರು ಏಕತ್ರ ಬಂದರೂ ಸಜ್ಜನರ ಕಲ್ಯಾಣವು ಅದರಿಂದಾಗುವುದು ಪರಮ ದುರ್ಲಭ. ಶ್ರೀ-ಸರಸ್ವತಿಯರ ಮಿಲನವು ಸಜ್ಜನರ ಕಲ್ಯಾಣಕ್ಕಾಗಲಿ, ದುಷ್ಟರ ಪ್ರತಿಷ್ಠೆಗಾಗ ದಿರಲಿ—ಇದು ಕಾಲಿದಾಸನ ಪರಮ ಪ್ರಾರ್ಥನೆ. ರಾಮಾಯ ಸ್ವಸ್ತಿ—ರಾವಣಾಯ ಸ್ವಸ್ತಿ ಎಂಬ ದ್ವಿಜಿಹ್ವ–ಆಶೀರ್ವಾದಗಳಿಂದ ಯಾವ ಸರ್ವೋದಯವಾದೀತು ?

ಸರ್ವಸ್ತರತು ದುರ್ಗಾಣಿ ।
ಸರ್ವೋ ಭದ್ರಾಣಿ ಪಶ್ಯತು ॥
ಸರ್ವಃ ಕಾಮಾನವಾಪ್ನೋತು ।
ಸರ್ವಃ ಸರ್ವತ್ರ ನಂದತು ॥

ಸರ್ವರಲ್ಲಿ ದುಷ್ಟರೂ ಬರಲಿಲ್ಲವೇ ?—ಎಂದು ಕೇಳುವ ಒಂದು ಬಗೆಯ ಶಿಷ್ಟರೂ ಅಲ್ಲಲ್ಲಿ ಇರಬಹುದು! ಇದ್ದುಕೊಳ್ಳಲಿ. ವಾಲ್ಮೀಕಿ-ವ್ಯಾಸರ ಮಾರ್ಗದಲ್ಲಿ ನಡೆದು ಬಂದ ಕಾಲಿದಾಸನಿಗೆ ಸಜ್ಜನರ ಪ್ರತಿಷ್ಠಾಪನೆ, ದುಷ್ಟರ ನಿಗ್ರಹ, ಸಂಹಾರ ಇವು ಪ್ರಾರ್ಥನೀಯ ಪುರುಷಾರ್ಥಗಳಾಗಿ ತೋರುತ್ತವೆ. ಅಂತೆಯೆ, ಕಾಲಿದಾಸನ ವಿಕ್ರಮೋರ್ವಶೀಯದಲ್ಲಿ ಪುರಾಣ ಕಥೆಯ ವಿರಸ ವಿಗ್ರಹಗಳಿಲ್ಲ. ನಾಟಕದ ಕೊನೆ ಕೊನೆಗೆ ನಾರದರು ಬಂದು ಹೇಳುತ್ತಾರೆ–'ತ್ರಿಕಾಲದರ್ಶಿಗಳಾದ ಮುನಿಗಳು ನಿನಗೆ ಹೇಳುತ್ತಾರೆ:-- ಬೇಗನೆ, ಸುರಾಸುರರ ಮಹಾಸಂಗರವು ಆಗಲಿದೆ. ಸ್ವರ್ಗ–ಮರ್ತ್ಯಗಳಲ್ಲಿ ನಮಗೆ ನೀನು ಸಹಾಯ, ಅದಕ್ಕಾಗಿ, ನೀನು **ಶಸ್ತ್ರಸಂನ್ಯಾಸಮಾಡಬಾರದು.** ನೀನಿರುವವರೆಗೇ ಈ ಊರ್ವಶಿ ನಿನ್ನವಳಾಗಿ ಸಹಧರ್ಮಚಾರಿಣಿಯಾಗಿ ಉಳಿಯು

ವಳು'. ಇದು ಕಾಲಿದಾಸ ವಚನ; 'ಮಾಮನುಸ್ಮರ ಯುಧ್ಯಚ' ಎಂಬುದರ ಪ್ರತಿಧ್ವನಿ. ಸಂಸಾರವು ದುಃಖಿಯಾಗುವದಕ್ಕೆ ದುಷ್ಟರ ಪ್ರತಿಷ್ಠೆಯೆ ಕಾರಣ, ಸಂಸಾರದ ಸ್ವಭಾವವಲ್ಲ. ದುಷ್ಟರ ನಿಗ್ರಹವಾಗಿ ಶಿಷ್ಟರ ಕಲ್ಯಾಣವಾಗುವಂತೆ, ಅರ್ಥವ್ಯವಸ್ಥೆ, ವಿದ್ಯಾಪ್ರಚಾರವಾಗಬೇಕು; ಉಳಿದುದು ಅಪಪ್ರಚಾರ; ಅನರ್ಥ, ಅವ್ಯವಸ್ಥೆ, ಅವಿದ್ಯೆ,

ಕಾಲಿದಾಸನ ಭರತವಾಕ್ಯಗಳು, ಇಂದಿಗೂ, ಸಾಮಾಜಿಕ ಶಾಂತಿ ನೆಲೆಸಬೇಕಾದರೆ ಪ್ರಾರ್ಥನಾಪದ್ಯಾವಲಿಗಳಲ್ಲಿ ಸೇರಬೇಕು.

**ದ. ರಾ. ಬೇಂದ್ರೆ**

# ೧ನೆಯ ಗುಣವರ್ಮನ ಶೂದ್ರಕ

ಸಂಸ್ಕೃತ ಮತ್ತು ಕನ್ನಡ ಸಾಹಿತ್ಯ ಇವೆರಡರಲ್ಲಿಯೂ 'ಶೂದ್ರಕ' ಎಂಬ ಪದವು ಗೂಢರಮ್ಯವಾಗಿದೆ. 'ಶೂದ್ರಕ' ಎಂದರೆ ಯಾರು, ಯಾವುದು ಎಂಬ ಪ್ರಶ್ನೆಗೆ ಕೊನೆಯದಾದ ಉತ್ತರವು ದೊರೆತಿಲ್ಲ, ದೊರೆಯುವುದು ಬಹುಶಃ ಸಾಧ್ಯವೂ ಇಲ್ಲ. 'ಶೂದ್ರಕ' ಎಂಬುದು ಸಂಸ್ಕೃತ ಸಾಹಿತ್ಯದಲ್ಲಿ ಮುಖ್ಯವಾಗಿ ಒಬ್ಬ ಪ್ರಸಿದ್ಧ ಗ್ರಂಥ ಕಾರನ ಹೆಸರು, ಕನ್ನಡದಲ್ಲಿ ಅದೊಂದು ಪ್ರಸಿದ್ಧಗ್ರಂಥದ ಹೆಸರು. ಸಂಸ್ಕೃತದಲ್ಲಿ 'ಶೂದ್ರಕ'ನ ಕೃತಿಯಾದ 'ಮೃಚ್ಛಕಟಿಕ' ನಾಟಕವು ದೊರೆತಿದೆ. ಕನ್ನಡದಲ್ಲಿಯ 'ಶೂದ್ರಕ' ಗ್ರಂಥವು ೧ನೆಯ ಗುಣವರ್ಮನ ಕೃತಿಯೆಂದು ಗೊತ್ತಿದೆ, ಆದರೆ ಈವರೆಗೆ ಇಡಿಯಾಗಿ ದೊರೆತಿಲ್ಲ. ಸಂಕಲನ ಗ್ರಂಥಗಳಲ್ಲಿ ಅದು ಬಿಡಿಬಿಡಿಯಾಗಿ ಉಳಿದುಕೊಂಡು ಬಂದಿದೆ. ಅಂತೆಯೆ ಅದು ನಮ್ಮ ಕುತೂಹಲವನ್ನು ಕೆರಳಿಸುತ್ತದೆ, ಊಹೆಯನ್ನು ಕುದುರಿಸುತ್ತದೆ. ಅದರಲ್ಲಿಯ ವಿಷಯವೇನಿರಬಹುದು, ಅದರ ನಿರೂಪಣೆ ಹೇಗಿರ ಬಹುದು ಈ ಪ್ರಶ್ನೆಗಳಿಗೆ ಉತ್ತರ ಕೊಡಲು ಈ ಲೇಖನವು ಹವಣಿಸುತ್ತದೆ.

ಮೊದಲು ಸಂಸ್ಕೃತಸಾಹಿತ್ಯದಲ್ಲಿ 'ಶೂದ್ರಕ' ಎಂಬ ಹೆಸರಿನ ಸುತ್ತು ಬೆಳೆದು ಬಂದಿರುವ ಹಲವು ಬಗೆಯ ಪರಂಪರೆಗಳನ್ನು ಸಂಗ್ರಹವಾಗಿ ತಿಳಿದುಕೊಳ್ಳುವ. ಸ್ಥೂಲವಾಗಿ ಕ್ರಿಸ್ತಶಕ ಪ್ರಾರಂಭದ ಕಾಲದಿಂದ 'ಶೂದ್ರಕ' ನನ್ನು ಕುರಿತು ಬರೆದ ಕಥೆಗಳು ಇರುತ್ತವೆ. ಅವುಗಳಲ್ಲಿ ಗುಣಾಢ್ಯನ 'ಬೃಹತ್ಕಥೆ'ಯಲ್ಲಿ ಬಂದುದನ್ನು ಮೊದಲು ಗಮನಿಸಬೇಕು. 'ಬೃಹತ್ಕಥೆ' ದೊರೆತಿಲ್ಲವಾದರೂ ಅದರ ಅನುವಾದ ಗ್ರಂಥಗಳು ದೊರೆತಿವೆ. ಸೋಮದೇವನ ಕಥಾಸರಿತ್ಸಾಗರದ ವೇತಾಲಪಂಚವಿಂಶತಿಯ ನಾಲ್ಕ ನೆಯ ವೇತಾಲದಲ್ಲಿ ಶೂದ್ರಕನ ಕಥೆ ೧೩೬ಪದ್ಯಗಳಲ್ಲಿ ಬಿತ್ತರಗೊಂಡಿದೆ.* ಅಲ್ಲಿಯ ಕಥಾಸಾರವು ಹೀಗಿದೆ: ಶೋಭಾವತಿ ನಗರದಲ್ಲಿ ಶೂದ್ರಕನೆಂಬ ಶೂರನಾದ ರಾಜನಿ ದ್ದನು. ಅವನ ಧರ್ಮಾಚರಣೆಯಿಂದ ಹಿಗ್ಗಿ ರಾಮಾದಿರಾಜರನ್ನೂ ಭೂಮಿ ಮರೆತು ಬಿಟ್ಟಳು. ಅವನ ಬಳಿ ಮಾಲವದೇಶದಿಂದ ವೀರವರನೆಂಬ ದ್ವಿಜನು ಸೇವೆಗಾಗಿ

---

* ವೇತಾಲಪಂಚವಿಂಶತಿ ಸೋಮದೇವ ಮತ್ತು ಕ್ಷೇಮೇಂದ್ರ ಇಬ್ಬರ ಅನು ವಾದಗಳಲ್ಲಿಯೂ ಬಂದಿದೆ. ಗುಣಾಢ್ಯನ ಬೃಹತ್ಕಥೆಯನ್ನು ಸ್ವಲ್ಪವೂ ಅತಿಕ್ರಮಿಸದೆ ಯಥಾಮೂಲವಾಗಿ ಅನುಸರಿಸಿದ್ದೇನೆ ಎಂದು ಸೋಮದೇವನು ಹೇಳಿದ್ದಾನೆ. ಆದರೆ ಆ ಮೂಲಯಾವುದು? ಬೃಹತ್ಕಥೆಯ ಕಾಶ್ಮೀರಿ ಆವೃತ್ತಿಯೊಂದಿತ್ತೇ? ಅಪೂರ್ಣವಾಗಿ ದೊರೆತ ಬುಧಸ್ವಾಮಿಯ ಅನುವಾದವು ಮೂಲಬೃಹತ್ಕಥೆಗೆ ಹೆಚ್ಚು ಸಮೀಪವಾಗಿ ದೆಯೆಂದು ಕೆಲವು ಪಂಡಿತರು ಅಭಿಪ್ರಾಯಪಡುತ್ತಾರೆ. ಈ ವಿಷಯದ ಚರ್ಚೆಯನ್ನು ಇಲ್ಲಿ ಮಾಡಬೇಕಾಗಿಲ್ಲ. ಇಲ್ಲಿಯ ಮಟ್ಟಿಗೆ ಗುಣಾಢ್ಯನ ಬೃಹತ್ಕಥೆಯಲ್ಲಿ ವೇತಾಲಪಂಚ ವಿಂಶತಿ ಇರಬಹುದೆಂದು ಗ್ರಹಿಸಲಾಗಿದೆ.

ಬಂದನು. ಅವನು ಅರಮನೆಯ ಸಿಂಹದ್ವಾರದಲ್ಲಿ ಧೃತಾಯುಧನಾಗಿ ನಿಂತುಕೊಂಡು ಕಾವಲುಗಾರನ ಕೆಲಸವನ್ನು ಕೈಕೊಂಡನು. ಬಿಸಿಲು ಗಾಳಿ ಮಳೆಯೆನ್ನದೆ ಅವನು ಮಾಡುತ್ತಿರುವ ಸೇವೆಯನ್ನು ನೋಡಿ ಶೂದ್ರಕನು ಮೆಚ್ಚಿದನು. ಒಂದು ದಿನ ಸಂಜೆ ಧಾರಾಕಾರವಾಗಿ ಮಳೆ ಬೀಳುತ್ತಿರಲು ದೂರದಿಂದ ಅಳುತ್ತಿರುವ ಒಬ್ಬ ಹೆಂಗಸಿನ ದನಿ ಅರಸನಿಗೆ ಕೇಳಿಸಿತು. ಅದಾರ ದನಿಯೆಂಬುದನ್ನು ತಿಳಿದುಕೊಂಡು ಬಾ ಎಂದು ಅವನು ವೀರವರನನ್ನು ಕಳಿಸಿ, ಅವನಿಗೆ ತಿಳಿಯದಂತೆ ತಾನೂ ಅವನ ಬೆನ್ನಹಿಂದೆ ಹೋದನು. ವೀರವರನು ಆ ಹೆಂಗಸಿನ ಹತ್ತಿರ ಹೋಗಿ ಕೇಳಲಾಗಿ 'ನಾನು ಪೃಥಿವಿಯೆಂದು ತಿಳಿ. ಈಗ ಧಾರ್ಮಿಕನಾದ ಶೂದ್ರಕನು ನನ್ನನ್ನು ಆಳುತ್ತಾನೆ. ಇನ್ನು ಮೂರು ದಿನಕ್ಕೆ ಅವನಿಗೆ ಸಾವು ಬರುತ್ತದೆ. ಮುಂದೆ ನನ್ನ ಗತಿಯೇನು ಎಂದು ಅಳುತ್ತೇನೆ' ಎಂದು ಅವಳು ಹೇಳಿದಳು. ಇದಕ್ಕೆ ಉಪಾಯವೇನೆಂದು ವೀರವರನು ಕೇಳಿದನು. 'ಚಂಡಿಕಾ ದೇವಿಗೆ ನಿನ್ನ ಮಗನನ್ನು ಬಲಿಕೊಟ್ಟರೆ ಶೂದ್ರಕನ ಸಾವು ತಪ್ಪುವುದು, ಅವನು ನೂರು ವರ್ಷ ಜೀವಿಸುವನು' ಎಂದವಳು ಭರವಸೆ ನೀಡಿದಳು. 'ಹಾಗೆ ಮಾಡುತ್ತೇನೆ' ಎಂದು ವೀರವರನು ರಾತ್ರಿಯಲ್ಲಿ ಮನೆಗೆ ಹೋಗಿ ಹೆಂಡತಿ ಮಕ್ಕಳನ್ನು ಎಚ್ಚರಿಸಿ ಅವರಿಗೆ ಎಲ್ಲವನ್ನು ಹೇಳಿ ಅವರ ಒಪ್ಪಿಗೆ ಪಡೆದನು. ಕೂಡಲೆ ದೇವಿಯ ಗುಡಿಗೆ ಅವರೆಲ್ಲ ಬಂದರು. ಸತ್ತ್ವವರನೆಂಬ ವೀರವರನ ಮಗನು ತನ್ನ ಶಿರವನ್ನು ಕೊಯ್ದು ದೇವಿಗೆ ಮುಡಿಪಿಟ್ಟನು ತರುವಾಯ ತಾವೇಕೆ ಇರಬೇಕೆಂದು ಮಗಳಾದ ವೀರವತಿಯೂ ವೀರವರನೂ ಅವನ ಹೆಂಡತಿ ಧರ್ಮವತಿಯೂ ಮರಣ ಹೊಂದಿದರು. ಕಾಣಿಸದಂತೆ ನಿಂತು ಶೂದ್ರಕನು ಇದನ್ನೆಲ್ಲ ನೋಡಿ ಆಶ್ಚರ್ಯಚಕಿತನಾದನು. 'ಕುಟುಂಬ ಸಹಿತವಾಗಿ ವೀರವರನು ಬದುಕಲಿ' ಎಂದು ಬೇಡಿಕೊಂಡು ಅವನು ಖಡ್ಗದಿಂದ ತನ್ನನ್ನು ಕೊಂದುಕೊಳ್ಳಬೇಕೆನ್ನುವಷ್ಟರಲ್ಲಿ 'ದುಡುಕಬೇಡ, ಅವರು ಬದುಕುವರು' ಎಂದು ಆಕಾಶವಾಣಿಯಾಯಿತು. ಸತ್ತವರೆಲ್ಲ ಎದ್ದು ಕುಳಿತರು. ಅವರಿಗೆ ತಿಳಿಯದಂತೆ ಶೂದ್ರಕನು ಹಿಂದಿರುಗಿದನು. ಮರುದಿನ ವೀರವರನನ್ನು ಕರೆದು ಅಳುತ್ತಿರುವ ಆ ಹೆಂಗಸು ಯಾರೆಂದು ಕೇಳಲಾಗಿ, 'ಯಾವಳೋ ಒಬ್ಬ ರಾಕ್ಷಸಿ, ಕಂಡಂತೆ ಕಣ್ಮರೆಯಾಗಿ ಬಿಟ್ಟಳು' ಎಂದವನು ಸುಳ್ಳು ಹೇಳಿದನು. ಅದನ್ನು ಕೇಳಿ ಶೂದ್ರಕನು ಬೆರಗುವಟ್ಟು ತನ್ನಷ್ಟಕ್ಕೆ ಅಂದನು 'ಮನಸ್ವಿಗಳು ಸಮುದ್ರದಂತೆ ಗಂಭೀರರೂ ಧೀರರೂ ಆಗಿರುತ್ತಾರೆ. ಅಸಾಮಾನ್ಯವಾದ ಕೃತಿಯನ್ನು ಮಾಡಿಯೂ ಅದನ್ನವರು ಹೇಳಿಕೊಳ್ಳುವುದಿಲ್ಲ.' ವೀರವರನ ಬಗ್ಗೆ ಅವನ ಪ್ರೀತಿ ಹೆಚ್ಚಿತು. ಅವನಿಗೆ ಕರ್ಣಾಟ ಸಹಿತವಾಗಿ ಲಾಟದೇಶದ ಅರಸೊತ್ತಿಗೆ ಕೊಟ್ಟು ಗೌರವಿಸಿದನು.

ಶೂದ್ರಕ ಕಥೆ ಅನೇಕ ಸಂಸ್ಕೃತ-ಪ್ರಾಕೃತ ಗ್ರಂಥಗಳಲ್ಲಿ ಮೈದಾಳಿದೆ. ರಾಮಿಲ-ಸೌಮಿಲರಿಬ್ಬರೂ ಸೇರಿ ಶೂದ್ರಕ ಕಥೆಯನ್ನು ಬರೆದರು. 'ತೌ ಶೂದ್ರಕ ಕಥಾಕಾರೌ ವಂದ್ಯೌ ರಾಮಿಲ ಸೌಮಿಲೌ। ಯಯೋರ್ದ್ವಯೋಃ ಕಾವ್ಯಮಾಸೀದರ್ಧನಾರೀಶ್ವರೋಪಮಂ' ಎಂದು ರಾಜಶೇಖರನು ಹೇಳಿರುವನೆಂದು ಜಲ್ಹಣನು ತನ್ನ 'ಸೂಕ್ತಿ

ಮುಕ್ತಾವಳಿ 'ಯಲ್ಲಿ ಉದಾಹರಿಸಿದ್ದಾನೆ.* 'ಶೂದ್ರಕ ಚರಿತ' ಎಂಬ ಆಖ್ಯಾಯಿಕೆಯ ಉಲ್ಲೇಖವನ್ನು ವಾದಿಗಂಘಾಲನು ತನ್ನ 'ಕಾವ್ಯಾದರ್ಶ'ದ ಟೀಕೆಯಲ್ಲಿ ಮಾಡಿದ್ದಾನೆ. ಪಂಚಶಿಖ ಎಂಬ ಕವಿ ಪ್ರಾಕೃತದಲ್ಲಿ ಶೂದ್ರಕ ಕಥೆಯನ್ನು ಬರೆದಿದ್ದಾನೆ. ಭೋಜನು 'ಶೃಂಗಾರ ಪ್ರಕಾಶ' ದಲ್ಲಿ ಈ ಗ್ರಂಥದ ಹರಿಮತೀ ವೃತ್ತಾಂತದಿಂದ ಒಂದು ಪ್ರಾಕೃತ ಪದ್ಯವನ್ನು ಉದಾಹರಿಸಿದ್ದಾನೆ. ಹೇಮಚಂದ್ರನು ತನ್ನ 'ಕಾವ್ಯಾನುಶಾಸನ'ದಲ್ಲಿ ಈ ಗ್ರಂಥದ ಹೆಸರೆತ್ತಿದ್ದಾನೆ. 'ವಿಕ್ರಾಂತ ಶೂದ್ರಕ' ಎಂಬ ಅಜ್ಞಾತಕವಿಯ ನಾಟಕವೊಂದರಲ್ಲಿ ತನ್ನನ್ನು ಬದುಕಿಸಿದ ಶೂದ್ರಕನನ್ನು ಬದುಕಿಸಲು ಹರಗಣನು ತನ್ನ ಹೆಂಡತಿಯಾದ ಹರಿಮತಿಯನ್ನು ಸುಡುವನೆಂದು, ಹೇಳಿದೆ. ಭೋಜ ಮತ್ತು ಅಭಿನವ ಗುಪ್ತರು ಇದನ್ನು ಉಲ್ಲೇಖಿಸಿದ್ದಾರೆ.† ಅನಂತಕವಿಯ 'ವೀರಚರಿತ'ದಲ್ಲಿ ಶೂದ್ರಕನು ಶಾಲಿವಾಹನ ಸಖನೆಂದು ಬಣ್ಣಿಸಲಾಗಿದೆ. ಈ ಬಗೆಯ 'ಶೂದ್ರಕ' ಚರಿತೆಯುಳ್ಳ ಗ್ರಂಥಗಳ ಕಾಲವಿಂಥವೇ ಎಂದು ಹೇಳಲುಬಾರದು. ಆದರೂ ಕಾಳಿದಾಸನಿಂದ ಭಾಸ-ಕವಿಪುತ್ರರೊಡನೆ ಸ್ತುತನಾದ ಸೌಮಿಲನು ಕಿ.ಶ. ೪-೫ ನೆಯ ಶತಕಕ್ಕಿಂತ ಮೊದಲಿನವನೆಂಬುದು ನಿಶ್ಚಿತವಾದದ್ದು. ಅವನ ಜೊತೆಗೆ ಸೌಮಿಲನೂ ಅಷ್ಟೇ ಹಿಂದಿನವನಾಗುತ್ತಾನೆ. ಭಾಸ ನಾಟಕ ಚಕ್ರವನ್ನು ಕುರಿತು ಬರೆದ ಪದ್ಯವಾದೊಡನೆ ರಾಜಶೇಖರನು ರಾಮಿಲ-ಸೌಮಿಲರನ್ನು ಬಣ್ಣಿಸಿದ ಪದ್ಯವನ್ನು ಬರೆದಿದ್ದಾನೆ. ಬಹುಶಃ ಅವರಿಬ್ಬರೂ ಭಾಸನ ಸಮಕಾಲೀನರೂ ಪ್ರಾಚೀನ ಕವಿಗಳೂ ಆಗಿರಬೇಕು. ಇದರಿಂದ ಶೂದ್ರಕ ಕಥೆಯ ಪ್ರಾಚೀನತೆಯನ್ನು ಊಹಿಸಬಹುದು. ಅವರ ಕಥೆಯಲ್ಲಿ ಶೂದ್ರಕಕಥೆ ಯಾವ ಸ್ವರೂಪದಲ್ಲಿ ಬಂದಿದೆಯೆಂಬುದು ತಿಳಿದಿಲ್ಲ. ಗುಣಾಢ್ಯನ ಬೃಹತ್ಕಥೆಯಲ್ಲಿ ಬಂದ ಕಥಾಪರಂಪರೆಯೇ ಅವರ ಆಕರವಾಗಿರಬಹುದು. ತರುವಾಯದ ಶೂದ್ರಕ ಕಥೆಗಳಲ್ಲಿ ಬೇರೆ ಪರಂಪರೆಗಳು ತಲೆಯೆತ್ತಿರಬೇಕೆಂದು ತೋರುತ್ತದೆ.

ಅವುಗಳಲ್ಲಿ ಒಂದು 'ಮೃಚ್ಛಕಟಿಕ' ನಾಟಕದ ಆ ಮುಖದಲ್ಲಿ ಬಂದಿದೆ. ಅಲ್ಲಿಯ ಮೂರು ಪದ್ಯಗಳು ಆ ನಾಟಕದ ಕರ್ತೃವಾದ ಶೂದ್ರಕನ ಪರಿಚಯವನ್ನು ಮಾಡಿಕೊಡುತ್ತವೆ. 'ಅವನು ಗಜೇಂದ್ರಗತಿಯುಳ್ಳವನು, ಚಕೋರನೇತ್ರನು, ಪರಿಪೂರ್ಣ ಚಂದ್ರಮುಖನು, ಒಳ್ಳೆಯ ಶರೀರಯಷ್ಟಿಯುಳ್ಳವನು, ಅಗಾಧಸತ್ವನು ಆಗಿದ್ದು ದ್ವಿಜಮುಖ್ಯತಮಕವಿಯಾದ ಶೂದ್ರಕನೆಂದು ಹೆಸರಾಗಿ ಹೋದನು. ಋಗ್ವೇದ, ಸಾಮವೇದ, ಗಣಿತ, ನೃತ್ಯಗಾಯನಾದಿ ಕಲೆ, ಗಜಶಾಸ್ತ್ರ ಇವುಗಳನ್ನರಿತು ಶಿವನ ಪ್ರಸಾದದಿಂದ ಕತ್ತಲೆ-ಕಳೆದು ಹೋದ ಕಣ್ಣುಗಳನ್ನು ಪಡೆದು, ಮಗ

---

* 'ಶೃಂಗಾರ ಪ್ರಕಾಶ'ದಲ್ಲಿ ಭೋಜನು ಎತ್ತಿಕೊಂಡ 'ಶೂದ್ರಕ ಚರಿತ'ದ ಪದ್ಯದಿಂದ ಆ ಗ್ರಂಥದ ನಾಯಿಕೆಯ ಹೆಸರು ವಿನಯವತಿಯೆಂದು ತಿಳಿಯುತ್ತದೆ.

† 'ಪದ್ಮಪ್ರಾಭೃತಕ' ಎಂಬ ನಾಟಕದಲ್ಲಿ ಶೂದ್ರಕನನ್ನು ಕೊಲ್ಲಲು ಸ್ವಾತಿ ಸಂಘಿಲಕನೆಂಬ ಬೌದ್ಧಯತಿಯನ್ನು ಕಳಿಸಿದನೆಂದು ಬಂದಿದೆ.

ನನ್ನು ರಾಜನನ್ನಾಗಿ ಮಾಡಿ ನೋಡಿ, ಪರಮವೈಭವದಿಂದ ಅಶ್ವಮೇಧಯಜ್ಞ ವನ್ನು ಮಾಡಿ, ಹತ್ತುದಿನ ಸಹಿತವಾದ ನೂರು ವರ್ಷದ ಆಯುಷ್ಯವನ್ನು ಭೋಗಿಸಿ ಶೂದ್ರಕನು ಅಗ್ನಿಪ್ರವೇಶ ಮಾಡಿದನು. ಯುದ್ಧಪ್ರಿಯನೂ ಪ್ರಮಾದ ಶೂನ್ಯನೂ ವೇದವಿದರಲ್ಲಿ ಶ್ರೇಷ್ಠನೂ ತಪೋಧನನೂ ಆದ ಶೂದ್ರಕನು ಅನ್ಯಗಜ ದೊಡನೆ ಬಾಹುಯುದ್ಧಮಾಡುವ ಆಸೆಯುಳ್ಳ ಕ್ಷಿತಿಪಾಲನಾಗಿ ಹೋದನು.' ಇಲ್ಲಿ ವರ್ಣಿತನಾದ ಶೂದ್ರಕನು ಯಾರು? 'ಮೃಚ್ಛಕಟಿಕ' ನಾಟಕದ ನಿಜವಾದ ಕೃರ್ತ ಅವನೇ ಇರಬಹುದೇ? 'ಚಾರುದತ್ತ' ನಾಟಕವು ಅವನಿಗಿಂತ ಮೊದಲಿನದೇ ತರು ವಾಯದ್ದೇ? ಈ ಬಗೆಯ ಅನೇಕ ಜಟಿಲಪ್ರಶ್ನೆಗಳು ತಲೆಯೆತ್ತಿವೆ. ಅವುಗಳ ಚರ್ಚೆ ಇಲ್ಲಿ ಪ್ರಸ್ತುತವಲ್ಲ. ಆದರೂ 'ಮೃಚ್ಛಕಟಿಕ' ನಾಟಕದ ಕರ್ತೃ ಬೇರೆ ವ್ಯಕ್ತಿ ಯಾಗಿದ್ದನೆಂದೂ ಶೂದ್ರಕನ ಮೇಲೆ ಕರ್ತೃತ್ವಾರೋಪಣೆಯನ್ನು ಆ ವ್ಯಕ್ತಿಯಾರೆಂದು ತಿಳಿಯದೆ ತರುವಾಯದ ಪಂಡಿತನೊಬ್ಬನು ಮಾಡಿರಬಹುದೆಂದೂ ಕೆಲಮಟ್ಟಿಗೆ ಊಹಿಸುವಂತಿದೆ. ಆಮುಖದಲ್ಲಿಯ ಪದ್ಯಗಳಲ್ಲಿ ಬಳಸಿದ ಭೂತಕಾಲರೂಪಗಳು (ಬಭೂವ, ಅಗ್ನಿಂ ಪ್ರವಿಷ್ಟಃ)ಈ ಊಹೆಗೆ ಆಧಾರವಾಗಿವೆ. 'ಕಿಲ' ಎಂಬ ಪದಪ್ರ ಯೋಗವು ಪ್ರಾಚೀನದಂತೆ ಕಥೆಯ ಆವರಣವನ್ನು ನೆನಪಿಗೆ ತರುತ್ತದೆ. ಹಾಗೆ ನೋಡಿದರ 'ಬೃಹತ್ಕಥಾ' ಪರಂಪರೆಯಲ್ಲಿದ್ದ ಶೂದ್ರಕಕಥೆಯ ಒಂದು ಸಂಮಿಶ್ರ ಆವೃತ್ತಿ ಇಲ್ಲಿಯ ದಂತಕಥೆಗೆ ಮೂಲವಾಗಿರಬಹುದೆಂದು ತೋರುತ್ತದೆ. ಆ ಕಥೆಯಲ್ಲಿ ಶೂದಕರಾಜನು ಬೇರೆ, ಅವನಿಗೆ ಪ್ರಾಣದಾನ ಮಾಡಿದ ವಿಪ್ರನು ಬೇರೆ. ಇಲ್ಲಿ ಶೂದ್ರ ಕನೇ ದ್ವಿಜಮುಖ್ಯತಮನೂ ವೇದವಿದನೂ ತಪೋಧನನೂ ಆದ ರಾಜನಾಗಿ ಪರಿಣಮಿ ಸಿದ್ದಾನೆ. ಅಶ್ವಮೇಧದಿಂದ ಶತಾಯುಸ್ಸ್ಯವು ಇವನಿಗೆ ಲಭಿಸಿದೆ. ಕ್ಷತ್ರಿಯ ಮತ್ತು ಬ್ರಾಹ್ಮಣ ಇಬ್ಬರ ಶ್ರೇಷ್ಠಗುಣಗಳು ಇವನಲ್ಲಿ ಮಿಲಿತವಾಗಿದ್ದು ದಂತಕಥೆಯ ಆದರ್ಶೀಕರಣವು ಪೂರ್ಣಗೊಂಡಂತಿದೆ.

ಶೂದ್ರಕನು ಮೂಲತಃ ಚಾರಿತ್ರಿಕ ವ್ಯಕ್ತಿಯೋ ದಂತಕಥೆಯ ಸೃಷ್ಟಿಯೋ ಎಂಬ ಪ್ರಶ್ನೆಗೆ ನಿರ್ದಿಷ್ಟವಾದ ಉತ್ತರ ದೊರೆಯಲಾರದು. ಅವನು ಚಾರಿತ್ರಿಕ ವ್ಯಕ್ತಿಯೆಂದು ಗೃಹೀತಹಿಡಿದರೂ ಬರಬರುತ್ತ ಶ್ರೇಷ್ಠಗುಣಗಳ ಸಂಗಮವುಳ್ಳ ದಂತಕಥಾಮೂರ್ತಿಯಾದನೆಂಬುದು ಸ್ಪಷ್ಟವಾಗಿದೆ ಶೂದ್ರಕಕಥೆಯ ಇನ್ನೊಂದು ಪರಂಪರೆಯಿಂದಲೂ ಈ ಮಾತು ಹೊರಪಡುತ್ತದೆ. ಅದೆಂದರೆ ದಂಡಿಯಿಂದ ರಚಿತವೆಂದು ತೋರುವ 'ಅವಂತಿಸುಂದರೀ ಕಥಾಸಾರ' ದಲ್ಲಿ ಸಾರರೂಪವಾಗಿ ಬಂದಿರುವಂಥದು. ಅದು ಹೀಗಿದೆ: ಪೂರ್ವಜನ್ಮದಲ್ಲಿ ಶೌನಕನಾಗಿದ್ದ ಒಬ್ಬನು ಅಶ್ಮಕ ದೇಶದಲ್ಲಿ ದ್ವಿಜೋತ್ತಮನಾದ ಇಂದ್ರಾಣೀಗುಪ್ತನಾಗಿ ಹುಟ್ಟಿದನು. ಅವನನ್ನು ಶೂದ್ರಕ ಎಂದು ಕರೆಯುತ್ತಿದ್ದರು. ಒಂದು ರಾತ್ರಿ ಅವನ ಹತ್ತಿರ ಬಂದ ಬ್ರಹ್ಮಶ್ರೀ ಯನ್ನು ಅವನು ಕಡೆಗಣಿಸಲಾಗಿ ಅವಳು ಶಾಪಕೊಟ್ಟಳು. ಅದರ ಪರಿಣಾಮದಿಂದ ಅನೇಕ ಅಪಾಯಗಳಿಗೆ ಗುರಿಯಾಗಿ ಕೊನೆಗೆ ಅವನು ರಾಜಶ್ರೀಯನ್ನು ಪಡೆದನು.

ಸ್ವಾತಿ ಎಂಬ ಹೆಸರಿನ ರಾಜಪುತ್ರನ ಕೂಡ ಅವನು ಬೆಳೆದು ದೊಡ್ಡವನಾದನು. ಆದರೆ ಅವರ ಆಟದಲ್ಲಿಯ ಜಗಳವು ವಿಪರೀತವೈರವಾಗಿ ಪರಿಣಮಿಸಿತು. ಬಂಧುದತ್ತ ಮುಂತಾದ ಮಿತ್ರರೊಡನೆ ಒಮ್ಮೆ ವನದಲ್ಲಿ ವಿಹಾರಿಸುತ್ತಿರುವಾಗ ಬೇರೆಯವರು ಎತ್ತಲಾಗದ ಕಲ್ಲನ್ನು ಶೂದ್ರಕನು ಎತ್ತಿದನು. ಆಗ ಶಾಕ್ಯಸಂಘಿಲಕನು ಅವನ ಶಕ್ತಿಯನ್ನು ಕಂಡು ಅವನೊಬ್ಬನ ಜೊತೆಗೆ ಒದರಿ ನೆಲದ ಹೊದರನ್ನು ಹೊಕ್ಕನು. ಶೂದ್ರಕನು ಅಲ್ಲಿ ಕಲ್ಲನ್ನೆತ್ತುವ ಕಾಲಕ್ಕೆ ಅವನನ್ನು ಸಂಘಿಲಕನು ಕೊಲ್ಲಬೇಕೆನ್ನಲು ಅವನು ಆ ಕೊಲೆಪಾತಕಿಯನ್ನೇ ಕೊಂದನು. ಮುಂದೆ ಕೊಳ್ಳದಲ್ಲಿ ಬೀಳುವುದು ಮುಂತಾದ ದುಃಖಗಳನ್ನು ಅನುಭವಿಸಿ ಅವನು ಅಡವಿಯಲ್ಲಿ ತಿರುಗಿದನು ಆಗ ವಿಂಧ್ಯಪರ್ವತದ ಗುಹೆಯಲ್ಲಿ ವಿಶ್ವಲಕನೆಂಬ ಗೆಳೆಯನು ಅವನಿಗೆ ದೊರೆತನು. ವಿಶ್ವಲಕನನ್ನು ರಾತ್ರಿಯಲ್ಲಿ ತಿನ್ನುತ್ತಿರುವ ಯಾವಳೋ ಒಬ್ಬ ಹೆಂಗಸನ್ನು ನೋಡಿ ಸಿಟ್ಟು ಬೆಂಕಿಯಾಗಿ ಅವಳನ್ನು ಹಿಡಿದು ತಡೆಯಲು ಅವಳು ಶಾಪಮುಕ್ತಳಾಗಿ ಸ್ವರ್ಗಕ್ಕೆ ಹೋದಳು. ಆಮೇಲೆ ಶೂದ್ರಕನು ಸ್ನೇಹಿತರನ್ನು ತಡೆದು ಮುಂದೆ ಪ್ರಯಾಣ ಬೆಳೆಸಿದನು. ಒಂದು ಮನೆಯಲ್ಲಿ ಶಾಕ್ಯಭಿಕ್ಷುಣಿಯೊಬ್ಬಳು ಅವನನ್ನು ಮೋಸಮಾಡಿ ಕೊಲ್ಲಬೇಕೆಂದಳು. ಆದರೆ ಹೇಗೋ ಕಷ್ಟದಿಂದ ಎಚ್ಚರಿಸಲ್ಪಟ್ಟವನಾಗಿ ಅವನು ವೈದಿಶಾಭಿಮುಖವಾಗಿ ನಡೆದನು. ಗೆಳೆಯರನ್ನು ಕೂಡಿಕೊಂಡು ಸೆರೆಮನೆಯಲ್ಲಿದ್ದ ಬಂಧುದತ್ತನನ್ನು ಅಪಹರಿಸಿ ಉಜ್ಜಯಿನಿಗೆ ಹೊರಟನು. ಬಂಧುದತ್ತನ ಮನೆಗೆ ಹೋಗಿ ರಂಗಪತಾಕೆಯೆಂಬ ಭರತಕನ್ಯೆಯೊಂದಿಗೆ ಅನುರಕ್ತನಾಗಿ ವಿಹರಿಸಿದನು. ಆಮೇಲೆ ಅಲ್ಲಿಯ ತೋಟದಲ್ಲಿ **ವಿನಯವತಿ** ಎಂಬ ಹೆಸರಿನ ರಾಜಕನ್ಯೆಯನ್ನು ನೋಡಿ ದೃಷ್ಟಿವಿಷದಿಂದ ಸ್ಪಷ್ಟವಾಗಿ ಒಳಒಳಗೆ ದಷ್ಟನಾದಂತಾದನು. ಕಾಮಸರ್ಪದಿಂದ ಅವಳೂ ದಷ್ಟಳಾದಳು. ಶೂದ್ರಕ ಸ್ಪರ್ಶದಿಂದ ಅವಳಿಗೆ ಜೀವ ಬಂದಿತು, ಅವನಿಗೂ ಚೈತನ್ಯ ಮರಳಿತು. ಆಮೇಲೆ ಅವಳ ಅಂತಃಪುರದಲ್ಲಿ ಸೇರಿ ಅವನು ರಾತ್ರಿ ಕಾಮಮೂರ್ಛೆಗೊಳಗಾಗಿರಲು ಅವನ ಮೇಲೆ ಕೋಪಿಸಿ ವಧ್ಯನೆಂದು ಅಲ್ಲಿಯ ಅಧಿಕಾರಿಗಳು ಅವನನ್ನು ಕಟ್ಟಿಹಾಕಿದರು. ಮೃತ್ಯುಪಾಯವಾದ ಈ ಅಪಾಯದಿಂದ ಅದು ಹೇಗೋ ಪಾರಾಗಿ ದಾದಿಯ ನೆರವಿನಿಂದ ವಿನಯವತಿಯನ್ನು ಅಪಹರಿಸಿ ಅವನು ಪಟ್ಟಣದಿಂದ ಹೊರವಂಟನು. ದಾರಿಯಲ್ಲಿ ಮಾಳವ ದೇಶದ ರಾಜನಿಂದ ಅಪಹೃತಳಾದ ತನ್ನ ಆ ಪ್ರಿಯೆಯಾದ ವಿನಯವತಿಯನ್ನು ಮರಳಿ ಪಡೆದನು. ಆದರೆ ಅವಳ ನೀರಡಿಕೆಯನ್ನು ತಣಿಸುವುದಕ್ಕೆಂದು ಅವಳನ್ನು ಬಿಟ್ಟು ಒಬ್ಬನೇ ನೀರು ಹುಡುಕುತ್ತ ಹೊರಟಾಗ ಚೋರಚಮೂಪತಿಯ ಜನರು ಅವನನ್ನು ಹಿಡಿದು ಸೆರೆಯಲ್ಲಿರಿಸಿದರು. ಆರ್ಯದಾಸಿ ಎಂಬ ಚಮೂಪತಿಯ ಕನ್ಯೆ ಅವನನ್ನು ಸೆರೆಯಿಂದ ಬಿಡಿಸಿದಳು. ಆಮೇಲೆ ತನ್ನ ಪ್ರಿಯೆ ವಿಪ್ರಕುಲದಲ್ಲಿ ಅಡಗಿರಬೇಕೆಂದು ಕೇಳಿ ಶೋಧಿಸುತ್ತ ಸಾಗಿದನು. ಅಲ್ಲಿಂದ ತನ್ನ ಮಗಳ ಜೊತೆಗಾತಿಯಾಗಿರಲೆಂದು ಅವಳನ್ನು ಆ ವಿಪ್ರನು ಮಥುರೆಗೆ ಕರೆದೊಯ್ದಿರಬೇಕೆಂದು ತಿಳಿಯಿತು. ಅಲ್ಲಿಗೆ

ಶೂದ್ರಕನು ಹೋಗಿ ಸರೋವರದಲ್ಲಿ ಸ್ನಾನಮಾಡಲಾಗಿ ಕಳ್ಳನಂತೆ ಕಾಣುವನೆಂದು ಜನರು ಅವನನ್ನು ಕಟ್ಟಿ ಹಾಕಿದರು. ಅವನು ತನ್ನ ಪತಿಯೆಂಬುದನ್ನು ವಿನಯವತಿ ಅರಿತುಕೊಂಡು ತನ್ನ ಗೆಳತಿಯ ಸಹಾಯದಿಂದ ಅವನನ್ನು ಸಾವಿನ ದವಡೆಯಿಂದ ಉಳಿಸಿಕೊಂಡಳು. ಪಶುವಿನಂತೆ ರಾತ್ರಿಯೆಲ್ಲ ಬಡಿಸಿಕೊಂಡರೂ ಸಾಯದೆ ತನ್ನ ಪ್ರೇಯಸಿಯನ್ನೂ ಮಥುರೇಂದ್ರನ ಮಗಳಾದ ಶೂರಸೇನೆಯನ್ನೂ ಅವನು ಮದುವೆಯಾದನು. ಈ ರೀತಿ ಅನೇಕ ವಿಪತ್ತುಗಳ ಕೊನೆಗೆ ಸ್ವಾತಿಯೊಡನೆ ಹೋರಾಡಿ ಬಾಲಮಿತ್ರನಾದ ಅವನನ್ನು ಕೊಲ್ಲದೆ ಜೀವಸಹಿತವಾಗಿ ಹಿಡಿತಂದನು. ಆಮೇಲೆ ತನ್ನ ಸುಹೃದರು ಮತ್ತು ದಯಿತೆಯರೊಂದಿಗೆ ನೂರುವರ್ಷಗಳವರೆಗೆ ತಾನೊಬ್ಬನೇ ವಿಸ್ತಾರವಾದ ಭೂಮಂಡಲವನ್ನಾಳಿದನು.

ದಂಡಿಯ ದಶಕುಮಾರ ಚರಿತದ ನಾಲ್ಕನೆಯ ಉಚ್ಛ್ವಾಸದಲ್ಲಿ 'ಅವಂತಿ ಸುಂದರೀಕಥಾಸಾರ'ದ ಸಾರವು ಸೂಚಿತವಾಗಿದೆ. ಬೇರೆ ಬೇರೆ ಜನ್ಮಗಳಲ್ಲಿ ಭಿನ್ನ ಹೆಸರುಗಳುಳ್ಳ ಶೌನಕ, ಶೂದ್ರಕ, ಕಾಮಪಾಲ ಎಂಬುವರೂ ಕ್ರಮವಾಗಿ ಬಂಧುಮತಿ, ವಿನಯವತಿ, ಕಾಂತಿಮತಿ ಎಂಬ ಅವರ ಪ್ರಿಯತಮೆಯರೂ ಅಭಿನ್ನರೆಂದು ಅಲ್ಲಿ ಹೇಳಿದೆ. ದಂಡಿಗೆ ಸುಪರಿಚಿತವಾದ ಈ ಶೂದ್ರಕ ಕಥೆಯ ಪರಂಪರ ಕ್ರಿ.ಶ. ಆರನೆಯ ಶತಕದಲ್ಲಿ ಹೆಚ್ಚು ಪ್ರಚುರವಾಗಿತ್ತೆಂದೂ ತನ್ನ ಕೃತಿಗಳಲ್ಲಿ ಅದನ್ನವನು ಅನುಸರಿಸಿದನೆಂದೂ ತಿಳಿಯಬಹುದು. ಭೋಜನು ಉದಾಹರಿಸಿದ 'ಶೂದ್ರಕ ಚರಿತ'ದ ಪದ್ಯದಲ್ಲಿ ವಿನಯವತಿಯ ಉಲ್ಲೇಖವಿರುವುದನ್ನೂ 'ಪದ್ಮಪ್ರಾಭೃತಕ' ನಾಟಕದಲ್ಲಿ ಸ್ವಾತಿ ಸಂಘಿಲಕರ ನಿರ್ದೇಶವಿರುವುದನ್ನು, ನೋಡಿದರೆ ಬೇರೆ ಕವಿಗಳೂ ಈ ಪರಂಪರೆಯನ್ನು ಎತ್ತಿಕೊಂಡಿರಬಹುದೆಂಬುದಕ್ಕೆ ಆಧಾರವಿದೆ.*

೧ನೆಯ ಗುಣವರ್ಮನು ತನ್ನ 'ಶೂದ್ರಕ'ದಲ್ಲಿ ಯಾವ ಕಥಾಪರಂಪರೆಯನ್ನು ಎತ್ತಿಕೊಂಡು ಯಾವ ರೀತಿಯಲ್ಲಿ ಅದನ್ನು ನಿರೂಪಿಸಿದನೆಂಬುದು ಸಂಪೂರ್ಣ ಕೃತಿಯ ಅನುಪಲಬ್ಧಿಯಿಂದ ಅರಿದಾಗಿಯೇ ಉಳಿಯುತ್ತದೆ ಆದರೂ ದೊರೆತಷ್ಟು ಭಾಗದಿಂದ ಹೊರಡಬಹುದಾದ ಅನುಮಾನವನ್ನು ಅಲ್ಲಗಳೆಯುವಂತಿಲ್ಲ. ಸು. ೧೮ನೆಯ ಶ. ದ ಮಧ್ಯದಲ್ಲಿ ರಚಿತವಾದ ೨ನೆಯ ನಾಗವರ್ಮನ 'ಕಾವ್ಯಾವಲೋಕನ'ದಲ್ಲಿ ಕ್ರಿ. ೯ರ ವರೆಗೆ 'ಶೂದ್ರಕ' ದಿಂದೆತ್ತಿದ ಪ್ರಯೋಗ ಪದ್ಯಗಳಿರುತ್ತವೆ.† ಸು. ೧೩ನೆಯ ಶ. ದ ಮಧ್ಯದ ಮಲ್ಲಿಕಾರ್ಜುನನ 'ಸೂಕ್ತಿ ಸುಧಾರ್ಣವ'ವೆಂಬ ಸಂಕಲನ ಗ್ರಂಥದಲ್ಲಿ ೧೧ 'ಶೂದ್ರಕ'ದ ಪದ್ಯಗಳಿವೆ.§ ಸು. ೧೬ನೆಯ ಶ.ದ ಮಧ್ಯಕಾಲದ ಅಭಿನವವಾದಿ

---

*ಕಾವ್ಯಾವಲೋಕನದಲ್ಲಿ ಗುಣವರ್ಮನ 'ಶೂದ್ರಕ'ದಿಂದ ಉದ್ಧೃತವಾದುವೆಂದು ೯ ಪದ್ಯಗಳ ಸಂಖ್ಯೆಯನ್ನು ಆರ್. ನರಸಿಂಹಾಚಾರ್ಯರು 'ಕಾವ್ಯಾವಲೋಕನ'೧೯೦೩ರ ಆವೃತ್ತಿಯ ೫ನೆಯ ಪರಿಶಿಷ್ಟದ ಪು. ೩೭ರಲ್ಲಿ ಕೊಟ್ಟಿದ್ದಾರೆ: ಅವುಗಳ ಮುಂದೆ 'ಕಾವ್ಯಸಾರ'ದ ಸದೃಶ ಪದ್ಯಗಳ ಸಂಖ್ಯೆಯನ್ನು ಕೊಟ್ಟಿದ್ದಾರೆ. ಆದರೆ, ೩ ಪದ್ಯಗಳು (೩೧೧,೮೮೪,೮೮೫) ಮಾತ್ರ 'ಕಾವ್ಯಸಾರ' ದಲ್ಲಿರುವಂತೆ 'ಶೂದ್ರಕ' ದ್ದಾಗಿವೆ. ಎರಡು

ವಿದ್ಯಾನಂದನ 'ಕಾವ್ಯಸಾರ'ವೆಂಬ ಸಂಕಲನ ಗ್ರಂಥದಲ್ಲಿ ಎಲ್ಲಕ್ಕಿಂತ ಹೆಚ್ಚಾಗಿ ಅಂದರೆ ೪೧ ಪದ್ಯಗಳನ್ನು ಮತ್ತು ಗದ್ಯಭಾಗವನ್ನು 'ಶೂದ್ರಕ' ದಿಂದ ಅವತರಿಸಿ ಕೊಳ್ಳಲಾಗಿದೆ. 'ಸೂಕ್ತಿ ಸುಧಾರ್ಣವ'ದಲ್ಲಿ ಬಂದಿರುವ ಪದ್ಯಗಳೆಲ್ಲ 'ಕಾವ್ಯಸಾರ'ದಲ್ಲಿ ಅಡಕವಾಗಿರುತ್ತವೆ. ಪ್ರಯೋಗವೆಂದಾಗಲಿ ಉದಾಹರಣೆಯೆಂದಾಗಲಿ ಬಂದಿರುವ ಈ ಅವತರಣಿಕೆಗಳು ಪ್ರಾಯಶಃ ಪ್ರತ್ಯೇಕವಾದ ವರ್ಣನಾಭಾಗಗಳಾಗಿರುವುದರಿಂದ ಇವು ಗಳಿಂದ 'ಶೂದ್ರಕ' ಕಾವ್ಯದ ಕಥಾನಕದ ಸಾರವನ್ನಾಗಲಿ ಹಲವು ವಿವರಗಳನ್ನಾಗಲಿ ತಿಳಿದುಕೊಳ್ಳುವುದು ಸಾಧ್ಯವಿಲ್ಲ. ಯಾವ ಪ್ರೌಢಕಾವ್ಯದಲ್ಲಿಯೂ ಕಣ್ಣಿಗೆ ಬೀಳುವ

---

ಪದ್ಯಗಳು (೩೬೧,೪೫೧) ಕಾಮದ ಮತ್ತು ಮಹೇಂದ್ರಾಂತಕ ಎಂಬ ಬಿರುದುಗಳ ನ್ನೊಳಗೊಂಡಿರುವ ಕಾರಣ, 'ಶೂದ್ರಕ' ದಲ್ಲಿರಬಹುದು 'ಕಾವ್ಯಸಾರ' ದಲ್ಲಿ ಅವಕ್ಕೆ ಸಂವಾದಿಯಾದ ಪದ್ಯಗಳಿಲ್ಲ. ಪ ೫೬ಕ್ಕೆ 'ಕಾವ್ಯಸಾರ'ದ ೫೪೩ರಲ್ಲಿದೆ, ಆದರೆ ಅದು 'ಅರ್ಧ ನೇಮಿಪುರಾಣ'ದ್ದೆಂದು ಹೇಳಿದೆ. ಪ ೩೦೬ಕ್ಕೆ 'ಕಾವ್ಯಸಾರ' ೧೦೮೭ ಸಂವಾದಿಯಾಗಿದ್ದು 'ಕವಿಕುಂಜರಲೀಲಾವತಿ' (?) ಯಿಂದ ಎತ್ತಿಕೊಂಡಿರಬಹುದಾಗಿ ಹೇಳಿದೆ. ಪ. ೧೩೭ 'ಕಾವ್ಯಸಾರ' .೧೦೯೭ ರಂತಿದ್ದು ಮೂಲವನ್ನು ತಿಳಿಸಿಲ್ಲ. ಪ. ೪೪೮ 'ಕಾವ್ಯ ಸಾರ' ೧೦೪೬ಕ್ಕೆ ಸಮಾನವಾಗಿದ್ದು 'ಪುಷ್ಪದಂತ ಪುರಾಣ'ದಿಂದ ಉದ್ಧೃತವೆಂದು ಹೇಳ ಲಾಗಿದೆ. ಆದರೆ ೧೯೪೪ರಲ್ಲಿ ಅಚ್ಚಾದ 'ಪುಷ್ಪದಂತಪುರಾಣ'ದ ಮದ್ರಾಸ ಆವೃತ್ತಿಯಲ್ಲ ಅದು ಕಾಣುವುದಿಲ್ಲ. ಈ ಎಲ್ಲ ವಿಷಯದ ಪರಿಶೀಲನೆಯಾಗಬೇಕು. ಸದ್ಯಕ್ಕೆ 'ಕಾವ್ಯಾ ವಲೋಕನ'ದಲ್ಲಿ 'ಕಾವ್ಯಸಾರ' ಪ್ರಮಾಣದಿಂದ ೪ ಇಲ್ಲದೆ ೫ ಪದ್ಯಗಳು 'ಶೂದ್ರಕ'ದಿಂದ ಉದಾಹೃತವಾಗಿವೆ ಎನ್ನಬಹುದು. ಇವುಗಳಲ್ಲಿ ಪ. ೧೮೮ (ಕಾವ್ಯಸಾರ-ಸಂವಾದಿ. ಪ. ೧೦೫೭) ಒಂದನ್ನು ಸೇರಿಸಬಹುದಾದರೆ ಸಂಖ್ಯೆ ಒಂದರಿಂದ ಹೆಚ್ಚುತ್ತದೆ.

† ಇಟಲಿದೇಶದ ರೋಮ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾದ ಡಾಕ್ಟರ ಎ. ಗಾರ್ಗ್ಯಾನೊ ಎಂಬ ವಿದ್ವಾಂಸರು ರತ್ನಕರಂಡಕ ಎಂಬ ನೇಪಾಳಿ ಗ್ರಂಥದ ಆಧಾರ ದಿಂದ ಶೂದ್ರಕ ಕಥೆಯನ್ನು ಕುರಿತು ಹೊಸಸಾಮಗ್ರಿಯನ್ನೊಳಗೊಂಡ ಲೇಖನಗಳನ್ನು ಪ್ರಕಟಗೊಳಿಸಿರುವರೆಂದು ಡಾ. ರಾಘವನ್ ಅವರು ಇತ್ತೀಚೆ ಹೇಳಿದ್ದಾರೆ. ಅವುಗಳಲ್ಲ ಹೊಸ ಪರಂಪರೆಯಿರುವುದಾಗಿ ಕಂಡು ಬಂದರೆ ಭಾರತೀಯ ಸಾಹಿತ್ಯಕ್ಕೆ ನವನಿಧಿ ದೊರೆತಂತೆ ಆಗುವುದು.

§ ಅದೇ ಕಾಲದ ಕೇಶರಾಜನ 'ಶಬ್ದಮಣಿದರ್ಪಣ'ದಲ್ಲಿ ಗುಣವರ್ಮನ ಹರಿವಂಶ'ದ ೩ ಪ್ರಯೋಗಗಳಲ್ಲದೆ 'ಶೂದ್ರಕ' ದಿಂದೆತ್ತಿನ ಒಂದೆರಡುಪಯೋಗಗಳಿರಬಹುದೆಂದು ತೋರುತ್ತದೆ. 'ಕಾವ್ಯಾವಲೋಕನ' ೫೬, ಕಾವ್ಯಸಾರ ೫೪೩ ಪದ್ಯದ ಭಾಗವೂ 'ಶಬ್ದಮ ಣಿದರ್ಪಣ' ಸೂತ್ರ ೧೭೪ (ಮದ್ರಾಸ ಆವೃತ್ತಿ) ಪ್ರಯೋಗದಲ್ಲಿದೆ. ಆದರೆ ಅದನ್ನು 'ಶೂದ್ರಕ'ದಿಂದ ಎತ್ತಿಕೊಂಡಿರುವ ವಿಷಯವು ಸಂಶಯಾಸ್ಪದವಾಗಿದೆ. ಸೂತ್ರ ೩೮೬ರ ಪ್ರಯೋಗದಲ್ಲಿ 'ನೆಱೆಯ(ವಿಲ್ಲಿ)ಕರಿಯುಂ ಗಿರಿಯುಂ' ಎಂಬ ಮಾತು 'ಕಾವ್ಯಾವ ಲೋಕನ' ೧೮೮, 'ಕಾವ್ಯಸಾರ' ೧೦೫೭ರ ನೆನಪನ್ನು ತರುತ್ತದೆ, ಆದರೂ ತದ್ರೂಪವಾ ಗಿಲ್ಲ. ಸೂ.೩೧೯ರ ಪ್ರಯೋಗಗಳಲ್ಲಿ ಬಂದಿರುವ 'ಬಗೆದಂ ಶ್ರೀರಂ(ಗಾಂ)ಗ ಚಕ್ರಾ ಯುಧಂ'ಎಂಬುದು ಕಿಟೆಲ್ ಆವೃತ್ತಿಯಲ್ಲಿಲ್ಲವಾದರೂ ಮದ್ರಾಸ ಆವೃತ್ತಿಯಲ್ಲಿದೆ. ಗಾಂಗ ಚಕ್ರಾಯುಧಂ, ಎಂಬ ಪಾಠವೂ ಸ್ವೀಕಾರ್ಯವಾದರೆ ಇದು 'ಶೂದ್ರಕ'ದಿಂದೆತ್ತಿದ ಅವತರಣಿಕೆಯೆಂದು ಹೇಳಬಹುದು.

ಸಂಪ್ರದಾಯಕವಾದ ಅಷ್ಟಾದಶವರ್ಣನೆಯ ಕೆಲವಂಗಗಳು ಇಲ್ಲಿ ತಲೆದೋರಿವೆ. ಹೀಗಿದ್ದರೂ ಇವುಗಳಲ್ಲಿ ಶೂದ್ರಕ ಕಥಾಪರಂಪರೆಯನ್ನು ಸೂಚಿಸುವ ಮಹತ್ವದ ಆಧಾರಗಳಿರುತ್ತವೆ. 'ಕಾವ್ಯಸಾರ' ಪ ೧೧೧ಗಳರಲ್ಲಿ 'ಶೂದ್ರಕನ ಪೊಳೆವ ಸುರಿಗೆಯ ಮೊನೆಯೊಳ್' ಎಂಬಲ್ಲಿ ಶೂದ್ರಕನ ಹೆಸರು ನೇರವಾಗಿ ಬಂದಿದೆ. ಅದೇ ಗ್ರಂಥದ ೬೭೭ರಲ್ಲಿ '**ವಿನಯುವತಿಯು**' ಉಲ್ಲೇಖವಿದೆ. ಕರ್ಮಧರ್ಮಸಂಯೋಗದಿಂದ ಈ ಪದ್ಯವು 'ಕಾವ್ಯಾಲೋಕನ'ದ ೩೧೧ಪ. ದಲ್ಲಿಯೂ 'ಸೂಕ್ತಿ ಸುಧಾರ್ಣವ'ದ ೧೪–೩೪ರಲ್ಲಿಯೂ ಬಂದಿದೆ. ಮೂರರಲ್ಲಿ ಪಾಠಭೇದಗಳಿದ್ದರೂ **ವಿನಯುವತಿ** ಎಂಬ ಹೆಸರಿನ ಬಗ್ಗೆ ಪಾಠಾಂತರವಿಲ್ಲ, ಚರ್ಚೆಗೆ ಆಸ್ಪದವಿಲ್ಲ. ಇದರಿಂದ ದಂಡಿ ಮೊದಲಾದವರು ಅನುಸರಿಸಿದ ಕಥಾಪರಂಪರೆಯನ್ನು ೧ ನೆಯ ಗುಣವರ್ಮನು ಸ್ವೀಕರಿಸಿರಬೇಕೆಂದು ತಿಳಿಯಲು ಅಡ್ಡಿಯಿಲ್ಲ. ಶೂದ್ರಕನ ಪ್ರೇಯಸಿ ವಿನಯವತಿ ಎಂಬುದು ಈ ಪರಂಪರೆಯಲ್ಲಿ ಮಾತ್ರ ಇದೆ. ಈ ಪದ್ಯದಲ್ಲಿ ಶೂದ್ರಕನ ಹೆಸರಿಲ್ಲವಾದರೂ ಸಂದರ್ಭದಿಂದ ಅದನ್ನು ಊಹಿಸಬಹುದು. 'ಕಾವ್ಯಾವಲೋಕನ' ಮತ್ತು 'ಸೂಕ್ತಿಸುಧಾರ್ಣವ' ಗಳಿಗೆ ಸಮಾನವಾದ ಈ ಪದ್ಯದ ಪಾಠ ಹೀಗಿದೆ 'ಸುಯ್ಯ ಸಿಡುಪುಡುಗದಿರೆಯುಂ । ಮೆಯ್ಯರೆ ಮಟ್ಗಿದೆಯುಮಿಂತುಸಂದಂದಿನಿಬರ್ ॥ ಬಯ್ಯಲೆ ಪೊಯ್ಯಲೆ ಕುರುಳಂ । ಕೊಯ್ಯಲೆಪೋಯ್ತಿಂತು **ವಿನಯುವತಿಗಂ ಪತಿಗಂ** ॥' ಕಾವ್ಯಸಾರದ ಪಾಠ: 'ಸುಯ್ಯ ಮಿಡುಪುಡುಗದಿರಯುಂ । ಮೆಯ್ಯ ನಿಮುಳ್ಗಿದೆಯುಮಂತೆ ಲುಂದದಿನಿರುಳೊಳ್ (?) ಬಯ್ಯಲೆ ಪೊಯ್ಯಲೆ ಕುರುಳಂ । ಕೊಯ್ಯಲೆ ಬೆಳಗಾಯ್ತು ವಿನಯವತಿಗಂ ಪತಿಗಂ ॥' ಮೊದಲನೆಯ ಪಾಠವು ಹೆಚ್ಚು ಸ್ಪಷ್ಟವೂ ಗ್ರಾಹ್ಯವೂ ಆಗಿದೆ. ಇದರಲ್ಲಿ ವಿನಯವತಿ ಮತ್ತು ಅವಳ ಪತಿಯಾದ ಶೂದ್ರಕನ ಸುರತಕ್ರೀಡೆ ವರ್ಣಿತವಾಗಿದೆ. ಇದೊಂದು ಆಧಾರದಿಂದಲೇ 'ಅವಂತಿಸುಂದರೀಕಥಾಸಾರ' ದಲ್ಲಿ ಉಕ್ತವಾದ ಶೂದ್ರಕನ ಕಥೆಯನ್ನು ೧ ನೆಯ ಗುಣವರ್ಮನು ತನ್ನ ಆಕರವನ್ನಾಗಿ ತೆಗೆದುಕೊಂಡಿರಬಹುದೆಂದು ಊಹಿಸಿದರ ತಪ್ಪಲ್ಲ. ದಂಡಿ ಭಾಮಹಾದಿಗಳ ಗ್ರಂಥಗಳ ವ್ಯಾಸಂಗವು ಅಂದು ನಡೆಯುತ್ತಿತ್ತು. ವಿಶೇಷತಃ ದಾಕ್ಷಿಣಾತ್ಯನಾದ ದಂಡಿಯ ಗ್ರಂಥಗಳು ಕರ್ನಾಟಕದಲ್ಲಿ ಹೆಚ್ಚು ಉಪಲಬ್ಧವಾಗಿರಬೇಕು. ಅವನ 'ಕಾವ್ಯಾದರ್ಶ' ದ ಅನುವಾದವಾಗಿರುವ 'ಕವಿರಾಜ ಮಾರ್ಗ'ವು ಕ್ರಿ.ಶ. ೯ ನೆಯ ಶತಮಾನದಲ್ಲಿ ಅಂದರೆ ಶೂದ್ರಕನ ಕಾಲದಲ್ಲಿಯೇ ರಚಿತವಾಯಿತು. ಈ ಎಲ್ಲ ಸಂಗತಿಗಳನ್ನು ಗಮನಿಸಿದರೆ ನಮ್ಮ ಊಹೆಗೆ ಪುಷ್ಟಿ ದೊರೆಯುತ್ತದೆ.

ಈಗ ಈ ಊಹೆಯ ಆಧಾರದಿಂದ, ಉಪಲಬ್ಧವಾದ, ಪದ್ಯಗಳಲ್ಲಿ ಶೂದ್ರಕ ಕಥೆಯ ಇತರ ಅಂಶಗಳ ಪರಿಚಯವಾಗುತ್ತದೆಯೊ ಹೇಗೆ ನೋಡೋಣ. ಅವು ತೀರ ಸಾಮಾನ್ಯವಾದ ವರ್ಣನಾತ್ಮಕ ಪದ್ಯಗಳಾದುದರಿಂದ ನಮ್ಮ ಪಾಲಿಗೆ ನಿರಾಶೆಯೆ ಒಟ್ಟಿನಲ್ಲಿ ದೊರೆಯುವುದೆಂಬುದು ಸುಳ್ಳಲ್ಲ. ಕಥನಭಾಗದಿಂದ ಎತ್ತಿದ ಇಷ್ಟೇ ಪದ್ಯಗಳಿದ್ದರೆ ಅವು ಕಥಾನಕದ ಸ್ಥೂಲಸ್ವರೂಪವನ್ನು ಮಿಂಚಿನಂತೆ ಹೊಳೆಯಿಸಿ

ತೋರಿಸಬಹುದಾಗಿತ್ತು. ಇದ್ದುದರಲ್ಲಿ ಕೆಲವು ಸಾಧಾರಣ ಊಹೆಗಳನ್ನು ಮಾಡು ವಂತಿದೆ. ‘ಅವಂತಿಸುಂದರೀಕಥಾಸಾರ’ ದಲ್ಲಿ ಶೂದ್ರಕನು ಹಲವಾರು ಅಪಾಯ ಗಳನ್ನು ಇದುರಿಸಿ ಸ್ವಂತ ಸಾಹಸದಿಂದಲೂ ಇತರರ ಸಹಾಯದಿಂದಲೂ ಅವುಗಳನ್ನು ದಾಟಿದನೆಂದು ಹೇಳಿದೆ. ಒಮ್ಮೆ ಅವನು ವಿನಯವತಿಗಾಗಿ ನೀರ್ದಾಣವನ್ನು ಹುಡು ಕುತ್ತ ಹೋಗಿ ಅವಳಿಂದ ಅಗಲಿ ವನವನ್ನು ಸೇರಿ ಕಷ್ಟವನ್ನು ಅನುಭವಿಸಿದನು. ಕಾನನವನ್ನು ವರ್ಣಿಸಿದ ಪ. ೧೦೪೦, ೧೦೪೪, ೧೦೫೦, ೧೦೫೭ ಇವು ಆ ಸಂದರ್ಭ ದಲ್ಲಿಯೇ ಬಂದಿರಬಹುದು.* ಬೇಂಟೆಯ ವರ್ಣನೆಯಲ್ಲಿ ಬಂದಿರುವ ಪ. ೧೧೧೯ ಮತ್ತು ೧೧೧೪ ಇವು ಚೋರಚಮೂಪತಿಯ ಬೇಟೆಯನ್ನು ವರ್ಣಿಸಿರಬಹುದು, ಅಥವಾ ಅಡವಿಯಲ್ಲಿ ಅಲೆಯುವಾಗ ಶೂದ್ರಕನ ಮೇಲೇರಿ ಬಂದ ವನ್ಯಪ್ರಾಣಿಗಳನ್ನು ವರ್ಣಿಸಿರಬಹುದು. ಪ. ೧೧೧೪ ರಲ್ಲಿ ಎರಡನೆಯ ಊಹೆಗೆ ಬೆಂಬಲ ದೊರೆಯು ತ್ತದೆ. ‘ತುಂಗಗಿರಿಶಿಖರದಿಂದಂ। ಲಂಗಿಸಿ ಶೂದ್ರಕನ ಪೊಳೆವ ಸುರಿಗೆಯ ಮೊನೆ ಯೊಳ್ ॥ ಪೊಂಗಿ ಸೊಡರ್ಗುಡಿಯ ಮೇಲೆ ಪ। ತಂಗಂ ಪಾಯ್ವಂತೆ ಪಾಯ್ದು ಬ(ಬಿ?)ರ್ದುದು ಸಿಂಗಂ ॥’ ಇಲ್ಲಿ ಒಂದು ಸಿಂಹವು ಶೂದ್ರಕನ ಮೇಲೇರಿ ಬಂದು ಅವನಿಂದ ಹತವಾಯಿತು ಎಂದು ಹೇಳಿದೆ.

ಪ. ೧೭೮ ರಲ್ಲಿ ‘ಪಗಲ್ ಪಿರಿಯವಪ್ಪುವಾ ಪುರವರದೊಳ್’ ಎಂಬುದು ಉಜ್ಜಯಿನಿಯ ವರ್ಣನೆಯಾಗಿರುವ ಸಂಭವವಿದೆ. ಪ. ೨೮೧ ರಲ್ಲಿ ‘ಬಣ್ಣಿಸಲರಿದಬ್ಜ ಜಂಗಮಾಕೆಯ ರೂಪಂ’ ಎಂಬುದು ಕಥಾನಾಯಿಕೆಯಾದ ವಿನಯವತಿಯ ರೂಪ ವರ್ಣನೆಯಾಗಿರಬಹುದು. ಪ. ೩೨೮ ರಲ್ಲಿಯೂ ಇದೇ ಬಗೆಯ, ಆದರೆ ಚಮತ್ಕೃತಿ ಪೂರ್ಣವಾದ ವರ್ಣನೆಯಿದೆ. ವ. ೫೨೮ ರಲ್ಲಿ ಬಂದಿರುವ ‘ಸಿದ್ಧಕ್ಷೇತ್ರ’ ಮತ್ತು ಪ. ೭೪೭ ರಲ್ಲಿಯ ಸಪ್ತಮುಖದಿಂದ ಕೂಡಿದ ‘ಮಹಾನದಿ’ ಕಥಾನಕದಲ್ಲಿಯ ವಿಶಿಷ್ಟ ಭೌಗೋಲಿಕ ನಾಮಗಳೆಂದು ತೋರುತ್ತವೆ. ಪ. ೫೩೧, ೫೩೬ ರಲ್ಲಿ ಮಸಣದ ವರ್ಣನೆ ಬಂದಿದೆ. ಅದಕ್ಕೆ ಸಂದರ್ಭ ಯಾವುದೆಂಬುದು ತಿಳಿಯದಾದರೂ ಶೂದ್ರಕ ನನ್ನು ವಧ್ಯನೆಂದು ನಿರ್ಧರಿಸಿ ಕಟ್ಟಿಹಾಕಿದ ಮೇಲೆ ಅವನನ್ನು ಕೊಲ್ಲುವ ಉದ್ದೇಶ ದಿಂದ ಆ ಅಧಿಕಾರಿಗಳು ಮಸಣಕ್ಕೆ ಒಯ್ದಾಗ ಈ ವರ್ಣನೆ ಬಂದಿರಬೇಕು. ವಿನಯವತಿ ಶೂದ್ರಕನನ್ನು ಕಂಡು ತೀವ್ರವಾದ ಕಾಮಬಾಧೆಗೊಳಗಾದಳೆಂಬುದು ಪ. ೫೮೮, ೬೧೯ ರಲ್ಲಿ ಚೆನ್ನಾಗಿ ವರ್ಣಿತವಾಗಿದೆ. ಪ. ೬೫೮, ೬೬೫, ೬೬೬, ೬೭೬, ೬೭೭, ೭೯೪ ಇವುಗಳಲ್ಲಿ ವಿನಯವತಿ ಶೂದ್ರಕರ ಪ್ರಣಯ ಲೀಲೆಯ ಉತ್ಕಟ ಚಿತ್ರವಿದೆ.

ಈ ಗ್ರಂಥವು ಒಂದು ವಿಶಿಷ್ಟಪರಂಪರೆಯ ಶೂದ್ರಕ ಕಥೆಯನ್ನು ನಿರೂಪಿಸುತ್ತದೆ ಎಂಬುದನ್ನು ಈವರೆಗೆ ನೋಡಿದ್ದಾಯಿತು. ಇದರ ನಿರೂಪಣಪದ್ಧತಿ ಪ್ರೌಢವೂ ಸಾಂಪ್ರ

---

* ಈ ವಾಕ್ಯದಲ್ಲಿ ಮತ್ತು ಮುಂದೆ ಲೇಖನದ ಕೊನೆಯವರೆಗೆ ಕೊಟ್ಟಿರುವ ಪದ್ಯ ಸಂಖ್ಯೆ ‘ಕಾವ್ಯಸಾರ’ದ್ದೆಂಬುದನ್ನು ಗಮನಿಸಬೇಕು.

ದಾಯಿಕವೂ ಆಗಿರಬೇಕೆಂದು ವರ್ಣನಾಪದ್ಯಗಳಿಂದ ತಿಳಿಯುತ್ತದೆ. ಆದರೆ ಇದು ಬರಿಯ ಒಬ್ಬ ಪ್ರಾಚೀನ ವ್ಯಕ್ತಿಯ ಚರಿತ್ರೆ ಇಲ್ಲವೆ ಕಲ್ಪಿತ ಕಥೆಯಾಗಿರದೆ 'ತತ್ಕಾಲೀನ ಚರಿತ್ರೆಯನ್ನು ಸೂಚಿಸುವ ವೀರಪ್ರಚುರವಾದ ಕಾವ್ಯ'ವೆಂಬುದನ್ನು 'ಕನ್ನಡ ಸಾಹಿತ್ಯ ಚರಿತ್ರೆ'(ಪು. ೫೦–೫೧)ಯಲ್ಲಿ ತೋರಿಸಲು ನಾವು ಪ್ರಯತ್ನಿಸಿದ್ದೇವೆ. ಈ ಕೃತಿಯಲ್ಲಿ ಶೂದ್ರಕನಿಗೆ ಸಲ್ಲಿಸಿದ ಮಹೇಂದ್ರಾಂತಕ, ಗಂಗಚಕ್ರಾಯುಧಾಂಕ, ಕಾಮದ ಸಂಗ ರಾರ್ಜುನ ಈ ಮುಂತಾದ ಬಿರುದುಗಳೂ ಮಾಡಿದ ಶೌರ್ಯ ಸಾಹಸದ ವರ್ಣನೆಗಳೂ ಇದಕ್ಕೆ ಸಾಕ್ಷಿಯಾಗಿರುತ್ತವೆ. ರಾಜವರ್ಣನೆಯ ಪದ್ಯಗಳಲ್ಲಿ ಗುಣವರ್ಮನು ಒಂದು ಬಗೆಯ ಆತ್ಮೀಯತೆಯನ್ನೂ ಅಭಿಮಾನದ ಅತಿರೇಕವನ್ನೂ ಅತಿಶಯೋಕ್ತಿಯನ್ನೂ ಮೆರೆದಿದ್ದಾನೆ. ತತ್ಕಾಲೀನ ಆಸಕ್ತಿಯಿಲ್ಲದೆ ಇದು ಸಾಮಾನ್ಯವಾಗಿ ಸಾಧ್ಯವಿಲ್ಲ. ಪ. ೨೧೫, ೨೩೯, ೪೧೧, ೪೨೩, ೪೩೭, ೫೨೫, ಈ ಪದ್ಯಗಳನ್ನು ಇದಕ್ಕೆ ಉದಾಹರಣೆ ಯೆಂದು ಲಕ್ಷಿಸಬಹುದು. 'ನರರಾರ್ ನಿನ್ನನ್ನರ್' ಎಂಬಲ್ಲಿಯ ಬಿಂಕವೂ ' ನೀನಿರೆ ಆನೆ ರಿಪುಸೇನೆಗೆ ಸಾಲ್ವೆಂ' ಎಂಬಲ್ಲಿಯ ಆತ್ಮವಿಶ್ವಾಸವೂ ನೋಡುವಂತಿವೆ. ಪ್ರೌಢ ಕಾವ್ಯಗಳಲ್ಲಿ ವರ್ಣನೆಯ ಅತಿಶಯೋಕ್ತಿ ವಾಡಿಕೆಯೆಂಬುದು ದಿಟವಾದರೂ ಸಮ ಸಾಮಯಿಕನಾದ ರಾಜನ ಬಿರುದುಗಳನ್ನು ಶೂದ್ರಕನಲ್ಲಿ ಆರೋಪಿಸಿ ಒಂದು ಹೆಮ್ಮೆಯ ತಾರಸ್ವರದಲ್ಲಿ ಅವನನ್ನು ವರ್ಣಿಸಿರುವ ವೈಖರಿ ನಮಗೆ ತಿಳಿದ ಮಟ್ಟಿಗೆ ಪಂಪ ಮುಂತಾದ ಮುಂದಣ ಕವಿಗಳ ಲೌಕಿಕಕಾವ್ಯಗಳ ರಾಜಕೀಯ ಧ್ವನಿಗೆ ಮೊದಲನೆಯ ಕೋಳಿಕೂಗೆಂಬುದನ್ನು ಒಪ್ಪಬೇಕು. ಈವರೆಗಿನ ಊಹಾಪೋಹೆಯಿಂದ ಶೂದ್ರಕ ಕಾವ್ಯದ ಕಥಾಸ್ವರೂಪವು ಗುರುತುಗೆರೆಗಳಲ್ಲಿ ಕಂಡುಬಂದಿರಬೇಕು. ಅದನ್ನು ಸಂಪೂರ್ಣವಾಗಿ ಸಮರ್ಥಿಸಬೇಕಾದರೆ ಸಮಗ್ರಗ್ರಂಥವೇ ಕೈಗೆ ಬರಬೇಕು. ಆ ಭಾಗ್ಯವು ದೊರಕುವವರೆಗೆ ಕನಿಷ್ಠ ಪಕ್ಷಕ್ಕೆ ಕೆಳಗಿನ ಊಹೆಗಳನ್ನು ನಿರ್ವಿವಾದವಾಗಿ ಮಾಡಬಹುದೆಂದು ತೋರುತ್ತದೆ: ೧. ಮೊದಲನೆಯ ಗುಣವರ್ಮನ ' ಶೂದ್ರಕ ' ವು ವಿನಯವತಿ ಪ್ರೇಮನಾಯಿಕೆಯಾಗಿರುವ ಕಥೆಯನ್ನು ನಿರೂಪಿಸಿರುತ್ತದೆ. ೨. ಅದರಲ್ಲಿ ಕೇವಲ ಶೂದ್ರಕನೆಂಬ ಪ್ರಾಚೀನರಾಜನ ಕಥೆಯಿರದೆ ಅವನ ಚರಿತ್ರೆಯ ಮೂಲಕ ಸೂಚ್ಯವಾಗಿ ಬಣ್ಣಿಸಲಾದ ತತ್ಕಾಲೀನನಾದ ಗಂಗರಾಜ ಎರೆಯಪ್ಪನ ಚರಿತ್ರೆಯಿದೆ. ೩. ಅದೊಂದು ಪ್ರೌಢ ಮತ್ತು ಸಾಂಪ್ರದಾಯಿಕವಾದ ಚಂಪೂಗ್ರಂಥವಾಗಿದೆ.*

**ರಂ. ಶ್ರೀ. ಮುಗಳಿ**

---

* ಈ ಲೇಖನವನ್ನು ಬರೆಯುವಾಗ ಅವಶ್ಯಸಾಮಗ್ರಿಯನ್ನು ಒದವಿಸಿ ಕೊಟ್ಟು ಹಲವು ಬೆಲೆಯುಳ್ಳ ಸೂಚನೆಗಳನ್ನು ನನ್ನ ಮಿತ್ರರಾದ ಪ್ರೊ. ತೀ. ನಂ. ಶ್ರೀಕಂಠಯ್ಯ ನವರು ಮಾಡಿದ್ದಾರೆ. ಅವರಿಗೆ ನಾನು ತುಂಬ ಋಣಿಯಾಗಿದ್ದೇನೆ.

# ನಮ್ಮ ನಾಟಕ ಹಿಡಿದ ದಾರಿ

ಈ ಶತಮಾನದ ಆದಿಭಾಗದಲ್ಲಿ ಕರ್ಣಾಟಕದ ಅನೇಕ ಕಡೆಗಳಲ್ಲಿ ಹುಟ್ಟಿ ಬೆಳೆಯುತ್ತಿದ್ದ ನಾಟಕದ ಕಂಪೆನಿಗಳು ಈಗ ಅದೃಶ್ಯವಾಗಿವೆ; ಇಲ್ಲವೆ ಹೇಗೋ ಕಷ್ಟದಿಂದ ಜೀವವನ್ನು ನೂಕುತ್ತಿವೆ. ಸುಮಾರು ೧೯೧೦–೨೫ ರ ಕಾಲದಲ್ಲಿ ಇಂಥ ಹತ್ತಾರು ಕಂಪೆನಿಗಳ ಹೆಸರು ಹೇಳಬಹುದಾಗಿತ್ತು. ಮೈಸೂರಿನ ಕಡೆ ಚಾಮರಾಜೇಂದ್ರ ಕರ್ಣಾಟಕ ನಾಟಕ ಸಭಾ, ವರದಾಚಾರ್ಯರ ರತ್ನಾವಳಿ ಥಿಯೆಟ್ರಿಕಲ್ ಕಂಪೆನಿ, ಶ್ರೀ ವೀರಣ್ಣನವರ ಗುಬ್ಬಿ ಕಂಪೆನಿ; ಉತ್ತರ ಕರ್ಣಾಟಕದ ಕಡೆ ವಾಮನ ರಾವ್ ಮಾಸ್ತರ್ ಅವರ ಕಂಪೆನಿ, ಸದಾಶಿವ ಗರೂಡ್ ಅವರ ಕಂಪೆನಿ—ಇಂಥ ಹೆಸರುಗಳು ಎಲ್ಲರ ನೆನಪಿಗೂ ಬರುತ್ತವೆ. ಇವಲ್ಲದೆ ಎಷ್ಟೋ ಸಣ್ಣ ಸಣ್ಣ ಕಂಪೆನಿಗಳು ಹಳ್ಳಿಗಳ ಕಡೆ ಸುತ್ತಾಡಿ ಪ್ರದರ್ಶನಗಳನ್ನು ಕೊಡುತ್ತಿದ್ದವು. ನಾನು ಮೊದಲು ನಾಟಕ ನೋಡಿದ್ದು ಮೇಲುಕೋಟೆಯಂಥ ಸಣ್ಣ ಊರಿನಲ್ಲಿ; ನಾಟಕದ ಹೆಸರು 'ಪ್ರಭಾವತೀ ದರ್ಬಾರು', ಕಂಪೆನಿಯ ಹೆಸರು ನೆನಪಿಲ್ಲ. ಈ ಕಂಪೆನಿಗಳಲ್ಲಿ ಕೆಲವು ಇಪ್ಪತ್ತು ವರ್ಷಗಳಿಗಿಂತ ಹೆಚ್ಚಾಗಿ ಬದುಕಿ ಹೆಸರು ಗಳಿಸಿದವು. ಈಗ ಗುಬ್ಬಿ ಕಂಪೆನಿಯೊಂದು ಇನ್ನೂ ಜನಪ್ರಿಯವಾಗಿ ಕೆಲಸ ಮಾಡುತ್ತಿದೆ. ಆಗಿಂದಾಗ ಇತರ ಕಂಪೆನಿಗಳು ಹುಟ್ಟಿಕೊಂಡರೂ ಅವಕ್ಕೆ ಬಹುಕಾಲ ಬಾಳುವ ಚೈತನ್ಯವಿರುವಂತೆ ತೋರಲಿಲ್ಲ. ನಾಟಕಕ್ಕೆ ಈ ದುಃಸ್ಥಿತಿ ಬಂದದ್ದೇಕೆ ?

ಕೆಲವರೇನೋ ಈ ಪ್ರಶ್ನೆಗೆ ನಿಸ್ಸಂದೇಹವಾಗಿ ಉತ್ತರ ಕೊಡುತ್ತಾರೆ: ಈಗ ಎಲ್ಲೆಲ್ಲಿಯೂ ಸಿನೆಮಾ ಮಂದಿರಗಳಾಗಿವೆ; ಚಲಚ್ಚಿತ್ರಗಳು ನಾಟಕದ ಸ್ಥಾನವನ್ನಾಕ್ರಮಿಸಿವೆ. ಸ್ವಲ್ಪಮಟ್ಟಿಗೆ ಎರಡರ ರುಚಿಯೂ ಒಂದೇ ರೀತಿಯದು. ಆದರೆ ನಾಟಕ ಕೊಡುತ್ತಿದ್ದ ಮನೋರಂಜನೆಯನ್ನು ಚಲಚ್ಚಿತ್ರ ಕಡಿಮೆ ಬೆಲೆಗೆ ಕೊಡುತ್ತದೆ. ಹೀಗೆ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡು ಸಿನೆಮಾ ಜನರ ಅಭಿರುಚಿಯನ್ನು ತೀರ ಕೆಡಿಸಿದೆ. ಚಲಚ್ಚಿತ್ರದ ಭಕ್ತರಾದ ಜನ ಒಂದು ಬಗೆಯ ಮಾನಸಿಕ ಅಫೀಮನ್ನು ಸೇವಿಸಿ ಮತ್ತರಾಗುವುದನ್ನು ಅಭ್ಯಾಸ ಮಾಡಿದ್ದಾರೆ. ಅವರಿಗೆ ನಾಟಕ ಕಲೆ ಹೇಗೆ ರುಚಿಸೀತು ?

ಚಲಚ್ಚಿತ್ರದ ಮೇಲೆ ಗೂಬೆ ಕೂರಿಸುವುದು ಈಗ ಸರ್ವ ಸಾಧಾರಣವಾಗಿ ಹೋಗಿದೆ. ನಾನೇನೂ ಅದರ ಪರವಾಗಿ ವಕೀಲಿ ಹಿಡಿದು ನಿಂತಿಲ್ಲ—ಅದರ ಪಾಪ ಅದಕ್ಕೆ. ಮೇಲಿನ ವಾದದಲ್ಲಿ ಸತ್ಯಾಂಶವಿಲ್ಲವೆಂದು ಸಹ ಹೇಳಲಾರೆ. ಅದರೆ ನಾಟಕದ ಅವನತಿಗೆ ಅದೊಂದೇ ಕಾರಣವೆ? ಹೊರಗಿನವರ ಮೇಲೆ ತಪ್ಪು ಹೊರಿಸುವುದು ಸುಲಭದ ಕೆಲಸ. ನಾಟಕವು ಆತ್ಮಪರೀಕ್ಷೆ ಮಾಡಿಕೊಂಡರೆ ತನ್ನಲ್ಲಿಯೇ

ಅವನತಿಯ ಬೀಜವಿರುವುದು ಗೋಚರಿಸಬಹುದೇನೊ. ಸಿನೆಮಾದವರು ತೋರಿಸುವ ಹಣದಾಸೆಗೆ ಹತ್ತು ಜನ ಕಲಾವಿದರು ಬಲಿಬಿದ್ದರೂ ನಾಟಕಕಲೆಗಾಗಿ ನಿಂತು ಹೋರಾಡುವವರು ಕೆಲವರಾದರೂ ನಮ್ಮಲ್ಲಿಲ್ಲವೆಂದು ಹೇಳಲಾಗುವುದಿಲ್ಲ ಶ್ರೀ ವೀರಣ್ಣನವರು ಚಲಚ್ಚಿತ್ರದ ತಯಾರಿಕೆಗೆ ಕೈ ಹಾಕಿದರೂ ತಮ್ಮ ನಾಟಕದ ಕಂಪೆನಿಯನ್ನೇನೂ ಮುಚ್ಚಲಿಲ್ಲ. ಕೈಲಾಸಂ ಅವರು ಚಿತ್ರದೊಡನೆ ಚಕ್ಕಂದವಾಡಿದರೂ ಅವರು ನಾಟಕಗಳನ್ನು ಬರೆದದ್ದೇನೋ ರಂಗಸ್ಥಳಕ್ಕಾಗಿ. ಆದ್ದರಿಂದ ತಾತ್ಕಾಲಿಕ ವಾಗಿಯಾದರೂ ನಮ್ಮ ವಾದಕ್ಕೆ ಚಲಚ್ಚಿತ್ರವನ್ನು ಎಳೆದು ತರದೆ ಈ ಸಮಸ್ಯೆಯನ್ನು ಪರಿಶೀಲಿಸುವುದು ಒಳ್ಳೆಯದು.

ಕಳೆದ ಶತಮಾನದ ಕೊನೆಯಲ್ಲೂ ಈ ಶತಮಾನದ ಮೊದಲಿನಲ್ಲೂ ನಮ್ಮ ನಾಟಕಕಾರರು ಬಹುಮಟ್ಟಿಗೆ ಪ್ರಾಚೀನ ಪುರಾಣೇತಿಹಾಸಗಳಿಂದ ತಮ್ಮ ಕಥಾವಸ್ತು ವನ್ನು ಆರಿಸಿಕೊಂಡರು. ರಾಮಾಯಣ ಮಹಾಭಾರತಗಳ ಕಥೆಗಳು, ಹರಿಶ್ಚಂದ್ರೋ ಪಾಖ್ಯಾನ, ಪ್ರಹ್ಲಾದನ ಕಥೆ—ಇಂಥ ಕಥಾವಸ್ತು ಆಗ ಜನಪ್ರಿಯವಾಗಿತ್ತು. ನಾಟಕ ದಿಂದ ಸಮಾಜ ಸುಧಾರಣೆಯಾಗಬೇಕೆಂಬ ಗುಂಗೂ ಅವರ ತಲೆಗೆ ಹತ್ತಿರಲಿಲ್ಲ. ಪುರಾಣೇತಿಹಾಸಗಳ ವೀರರೂ ರಮ್ಯ ಕಥೆಗಳ ನಾಯಕರೂ ಹಿಂದೆ ಹಾಕಿದ ಲಾಗ ಗಳನ್ನೇ ಮತ್ತೆ ಹಾಕಿ, ಮಾಡಿದ ಚಮತ್ಕಾರಗಳನ್ನೇ ಮತ್ತೆ ಮಾಡಿದರೂ ಅವರಿಗೆ ತೃಪ್ತಿಯಾಗುತ್ತಿತ್ತು. ಈ ನಾಟಕಗಳು—ಧ್ರುವ ಚರಿತ್ರೆ, ಪ್ರಹ್ಲಾದಚರಿತ್ರೆ, ಮನ್ಮಥ ವಿಜಯ ಮುಂತಾದ ಪೌರಾಣಿಕ ನಾಟಕಗಳು, ನಿರುಪಮಾ, ಮಂದಾರವಲ್ಲೀ ಪರಿಣಯ ಮುಂತಾದ ರಮ್ಯ ನಾಟಕಗಳು—ಉತ್ತಮವಾದ ಸಾಹಿತ್ಯವೆಂದೇನೂ ಹೇಳ ಲಾಗುವುದಿಲ್ಲ. ಅನೇಕ ವೇಳೆ ನಾಟಕದ ವಸ್ತು ವಿನ್ಯಾಸ ಒರಟುತನದ ಪರಮಾವಧಿ ಯಾಗುತ್ತಿತ್ತು. ನಾಟಕಕಾರನ ಕೈಗೆ ಬಂದ ಕಥಾ ವಸ್ತುವಿನಲ್ಲಿ ಏಕಮುಖತೆ ಯೇನಾದರೂ ಇದ್ದರೆ ನಾಟಕದಲ್ಲೂ ಉಂಟು, ಅದಿಲ್ಲದಿದ್ದರೆ ನಾಟಕಕಾರನೇನೂ ಆ ಕೊರತೆಯನ್ನು ನಿವಾರಿಸುವ ಯತ್ನ ಮಾಡುತ್ತಿರಲಿಲ್ಲ. 'ಸಂಪೂರ್ಣ ರಾಮಾಯಣ' 'ಸಂಪೂರ್ಣ ಮಹಾ ಭಾರತ' ಮುಂತಾದ ನಾಟಕಗಳಲ್ಲಿ ಏಕಮುಖತೆಯನ್ನು ತರುವುದು ಕಷ್ಟ ಸಾಧ್ಯವೂ ಹೌದು. ಇಂಥ ನಾಟಕಗಳನ್ನು ಬರೆದದ್ದು ಪ್ರಥಮೈಕಾ ದಶಿಯ ಜಾಗರಣೆಯ ಸೌಕರ್ಯಕ್ಕಾಗಿಯೇ ಹೊರತು ಸಾಹಿತ್ಯಸೃಷ್ಟಿಗಾಗಿ ಅಲ್ಲ. ಒಂದರ ಮೇಲೊಂದು ಹತ್ತಾರು ಪ್ರಕರಣಗಳನ್ನು ತೆಗೆದುಕೊಂಡು ಸಂಭಾಷಣೆಯ ರೂಪಕ್ಕೆ ತಿರುಗಿಸಿದರಾಯಿತು. ಜನ ಅದಕ್ಕಿಂತ ಹೆಚ್ಚಿನದೇನನ್ನೂ ಬೇಡಲಿಲ್ಲ.

ಜೊತೆಗೆ 'ಗ್ಯಾಲರಿ ಪ್ರಭು'ಗಳಿಗೆ ಬೇಕಾದ ಹಾಸ್ಯ ಸನ್ನಿವೇಶಗಳು ಬರಬೇಕು —ಅವು ನಾಟಕಕ್ಕೆ ಅವಶ್ಯಕವಾಗಿರಲಿ ಇಲ್ಲದಿರಲಿ. "ರಾಜನ ಮನೆಯಲಿ ಭೋಜನ ವೆಂದರೆ ಯೋಜನವಾದರು ನಾಂ ಪೋಪೆ" ಎಂದು ಹಾಡಿಕೊಂಡು ಬರುವ ವಿದೂಷಕ; ಕಾಸು ಬಿಚ್ಚಲು ಪ್ರಾಣಬಿಡುವ ವೈಶ್ಯ; "ಕಾಸು ಕೊಟ್ಟವರಿಗೆ ಕೈಲಾಸ ತೋರ್ತವಳೆ" ಎಂದು ಈಚಲಮರದವ್ವನ ಮಹಿಮೆಯನ್ನು ಹೊಗಳುವ ಹೆಂಡಕುಡುಕ—ಇವರನ್ನೆಲ್ಲಾ

ಹಿಂಗಟ್ಟುಮುರಿ ಹಾಕಿ ನಾಟಕಕ್ಕೆ ಎಳೆದು ತರುತ್ತಿದ್ದರು. ಹಾಸ್ಯದ ಮತ್ತು ಗಂಭೀರ ವಾದ ಸನ್ನಿವೇಶಗಳು ಅಸಂಬದ್ಧವಾಗಿ ಬೆರೆದು ನಾಟಕದಲ್ಲಿ ಸೇರುತ್ತಿದ್ದವು. ರಾಜ ಪುತ್ರಿಯೂ ಸ್ವತಃ ರಾಣಿಯೂ ಆದ ದ್ರೌಪದಿ ತನಗೆ ಸಹಜವಾದ ಗಾಂಭೀರ್ಯವನ್ನು ಮರೆತು, ಜಾರಿಬಿದ್ದ ದುರ್ಯೋಧನನನ್ನು "ಅರಿಯದೆ ಬಿದ್ದಿರಿ ಭಾವ" ಎಂದು ಹಾಡಿ ಹಳಿದದ್ದುಂಟು.

ಇದರ ಮೇಲೆ 'ಹೊಸ ಡ್ರೆಸ್ಸು ಹೊಸ ಸೀನರಿ'ಗಳ ಹುಚ್ಚು. 'ಕಟ್ ಸೀನು' ಗಳು, ಇದ್ದಕ್ಕಿದ್ದ ಹಾಗೆಯೇ ಪ್ರತ್ಯಕ್ಷರಾಗುವ ದೇವತೆಗಳು, ಚಮುಕಿ ಅಂಗಿಯನ್ನು ತೊಟ್ಟ ರಾಜರು, ವಿದ್ಯುದ್ದೀಪಗಳಿಂದ ಅಲಂಕೃತವಾದ ಸಿಂಹಾಸನ—ನಾಟಕ ಬಹು ಮಟ್ಟಿಗೆ ಇವುಗಳಿಂದ ಬದುಕಬೇಕಾಗಿತ್ತು. ಎಲ್ಲಕ್ಕಿಂತಲೂ ಹೆಚ್ಚಿನದೆಂದರೆ ಸಂಗೀತದ ಹಾವಳಿ. ರಟ್ಟಿನ ಕುದುರೆಗಳನ್ನು ಹೂಡಿದ ಜಾಕಾಯಿಮರದ ರಥದಲ್ಲಿ ಕುಳಿತು "ವಿಯತಿ ಬಹುತರಂ ಸ್ತೋಕಮುರ್ವ್ಯಾಂ" ಎನ್ನುವಷ್ಟು ವೇಗದಿಂದ ಓಡುವ ಜಿಂಕೆ ಯನ್ನು ಬೆನ್ನಟ್ಟಿ ಬರುವ ದುಷ್ಯಂತ "ಪಾರಿತು ಪಾರಿತು ಘಡಮೃಗ ಪೋತ, ತೀರನಿದರ ಬಳಿ ಸೇರಿಸು ಸೂತ" ಎಂದು ನಾಲ್ಕಾರು ಸಂಗತಿಗಳನ್ನು ಹಾಕಿಕೊಂಡು ಹಾಡುವಷ್ಟು ಅವಕಾಶ ದೊರಕಿಸಿಕೊಳ್ಳುತ್ತಾನೆ. "ಕ್ಷೇಮ ವೇನ್ಸೈ ಸಕಲ ಪ್ರಜೆಗಳು? ಮಂತ್ರೀಸ ಪೇಳ್ಳೈ" ಎಂದು ಗಾನಪೂರ್ವಕವಾಗಿ ಪ್ರಶ್ನೆ ಕೇಳುವ ಹಳ್ಳಿಯ ಬಯಲು ನಾಟಕ ಗಳಿಗೂ ಕಂಪೆನಿಯ ನಾಟಕಗಳಿಗೂ ಈ ವಿಷಯದಲ್ಲಿ ಅಷ್ಟೇನೂ ಅಂತರ ಕಾಣ ಲಿಲ್ಲ. ನಾನು ನೋಡಿದ ನಾಟಕವೊಂದರಲ್ಲಿ—ನನ್ನ ನೆನಪನ್ನು ಪೂರ್ತಿ ನೆಚ್ಚಲಾರೆ— ನಾಯಿಕೆಯನ್ನು ಕಳ್ಳರು ಅಪಹರಿಸಿಕೊಂಡು ಹೋಗಿ ಆಕೆಯ ಕಣ್ಣು ಕೀಳಬೇಕೆಂದು ಹವಣಿಸುತ್ತಿದ್ದರು. ಕಳ್ಳರ ಬೆನ್ನು ಹತ್ತಿ ಹೊರಟ ನಾಯಕ ದಾರಿಯಲ್ಲಿ ಒಂದು ವೀರಾಲಾಪದ ಹಾಡು ಹೇಳಲು ನಿಂತದ್ದುಂಟು. ಆ ಕಳ್ಳರು ಕಣ್ಣು ಕೀಳುವ ವಿಷಯದಲ್ಲಿ ಸ್ವಲ್ಪ ಅಲಸಿಗರಾದ್ದರಿಂದ ನಾಯಿಕೆ ಬದುಕಿದಳು. ಎಲ್ಲವೂ ಸರಿ ಹೋಯಿತು.

ಪಾತ್ರರಚನೆಯ ವಿಷಯದಲ್ಲೂ ಈ ನಾಟಕಗಳಿಗೆ ಪ್ರಶಂಸೆ ಸಲ್ಲುವಂತಿಲ್ಲ. ಒಬ್ಬ ವೀರನಂತೆಯೇ ಮತ್ತೊಬ್ಬ; ಅರ್ಜುನನೂ ಕರ್ಣನೂ ಒಬ್ಬರನ್ನೊಬ್ಬರು ಹಳಿಯು ತ್ತಿದ್ದರೆ ಅವರ ಮಾತುಗಳನ್ನು ಅದಲು ಬದಲು ಮಾಡಬಹುದು. ಪ್ರತಿಭಾಶಾಲಿಯಾದ ನಟ (ದೈವಾನುಗ್ರಹದಿಂದ ಅಂಥ ನಟರಿದ್ದರು) ಪಾತ್ರಕ್ಕೆ ಕಳೆತುಂಬಬೇಕೇ ಹೊರತು ನಾಟಕಕಾರನ ಕೈವಾಡ ಅಷ್ಟೇನೂ ಇರುತ್ತಿರಲಿಲ್ಲ. ನಾಟಕದ ಭಾಷೆ ಬಹುಮಟ್ಟಿಗೆ ಗ್ರಂಥದ ಭಾಷೆ. ಅದನ್ನಾಡುವ ವೈಖರಿಯಲ್ಲಿ ಒಂದು ಬಗೆಯ ಅಸಹ್ಯವಾದ 'ನಾಟಕೀ ಯತೆ' (staginess) ಕಾಣುತ್ತಿತ್ತು. ಸಂಭಾಷಣೆಯಲ್ಲಿ ಪ್ರದರ್ಶಿಸುವ ಭಾವವು ಕೋಪ ವಾಗಲಿ ಕರುಣೆಯಾಗಲಿ, ಅದರಲ್ಲಿ ಎರಿಳಿತಗಳೇನೂ ಗೋಚರಿಸುತ್ತಿರಲಿಲ್ಲ. ಕೋಪ ಬಂದವನು ಕಿರಿಚಿದ್ದೂ ಕಿರಿಚಿದ್ದೇ, ದುಃಖ ಬಂದವನು ಅತ್ತದ್ದೂ ಅತ್ತದ್ದೇ. ಇಂಗ್ಲಿಷಿನಲ್ಲಿ tearing a passion to tatters ಎಂದು ಹೇಳುವುದುಂಟು. ಈ

ಕೆಲಸಕ್ಕೆ ನಮ್ಮ ಹಳೆಯ ನಾಟಕಗಳಲ್ಲಿ ಬೇಕಾದಷ್ಟು ಸೌಕರ್ಯವುಂಟು. ಜೀವನದಲ್ಲಿ ಕೋಪತಾಪಗಳ ಅನುಭವವಾಗುವುದು ಈ ರೀತಿಯಲ್ಲಲ್ಲ. ಕೋಪಗೊಂಡವನು ಇದ್ದಕ್ಕಿದ್ದ ಹಾಗೆಯೇ ಕರುಣೆಗೆ ಎಡೆ ಕೊಡುತ್ತಾನೆ; ಆ ಕೋಪದಲ್ಲೇ ನಗುತ್ತಾನೆ; ಸಮಾಧಾನ ತಂದುಕೊಳ್ಳುತ್ತಾನೆ; ಮತ್ತೆ ಕೋಪ ಉಕ್ಕುತ್ತದೆ, ಅದೇ ಕೋಪವನ್ನು ಕೆಲವು ವೇಳೆ ಮಾತಿನ ಬಿರುಸಿನಲ್ಲಲ್ಲದೆ ಭಯಂಕರವಾದ ಮೌನದಿಂದ ತೋರಿಸುತ್ತಾನೆ. ಭಾವಗಳಲ್ಲಿ ಏರುಪೇರುಗಳುಂಟು, ಮಿಶ್ರಣವುಂಟು, ವಕ್ರತೆಯುಂಟು, ಅದರ ಗತಿ ನೇರವಾದದ್ದಲ್ಲ. ಮಿಂಚಿನಂತೆ ಕ್ಷಣಕಾಲ ಹೊಳೆದು ಅದೃಶ್ಯವಾಗುವ ಮನೋಭಾವಗಳಿಗೆ ಹೊಂದಿಕೊಂಡು ಬಳುಕಿ ಬಾಗುವ ಲಯ ಈ ಹಳೆಯ ನಾಟಕಗಳ ಸಂಭಾಷಣೆಯಲ್ಲಿ ಕಾಣುವುದಿಲ್ಲ.

ಇದಿಷ್ಟು ಪೂರ್ವಪಕ್ಷ. ಇದನ್ನೆಲ್ಲಾ ಒಪ್ಪಿದರೂ ಒಂದು ಅಂಶವನ್ನು ಮಾತ್ರ ಮರೆಯುವಂತಿಲ್ಲ. ಇಷ್ಟೆಲ್ಲಾ ಕುಂದುಕೊರತೆಗಳನ್ನುಳ್ಳ ಈ ರಂಗಭೂಮಿಯಲ್ಲಿ ಜೀವಕಳೆ ತಾಂಡವವಾಡುತ್ತಿತ್ತು. ಸ್ಕೂಲು ಕಾಲೇಜುಗಳಲ್ಲಿ ಉಚ್ಚ ಶಿಕ್ಷಣಪಡೆದವರು, ಹಳೆಯ ಕಾಲದ ಪಂಡಿತರು, ಸಂತೇಪೇಟೆಯ ಸಾಹುಕಾರರು, ಜಟಕಾಗಾಡಿಯವರು—ಸಮಾಜದ ಎಲ್ಲಾ ವರ್ಗದವರಿಗೂ ನಾಟಕವೆಂದರೆ ಉತ್ಸಾಹ. ಆಗಿನ ಕಾಲದ ಪ್ರಸಿದ್ಧ ನಟರಾದ ಸಂ. ಲಕ್ಷ್ಮೀಪತಿ ಶಾಸ್ತ್ರಿಗಳು, ವರದಾಚಾರ್ಯರು, ಕೃಷ್ಣಮೂರ್ತಿ, ಮುಂತಾದವರ ಹೆಸರು ಎಲ್ಲರ ಬಾಯಲ್ಲೂ ಇರುತ್ತಿತ್ತು. "ವರದಾಚಾರ್ಯರ ಕಂಪೆನಿಗೆ ನಾಗೇಂದ್ರ ಎಂಬವರು ಸೇರಿದ್ದಾರಂತೆ, ಭೂದೇವಿಯ ಪಾರ್ಟು ಅದ್ಭುತವಾಗಿ ಮಾಡುತ್ತಾರಂತೆ" ಎಂಬ ಸುದ್ದಿ ಹೊರಟಾಗ ಸಾವಿರಗಟ್ಟಲೆ ಜನರು ರತ್ನಾವಳಿ ಥಿಯೆಟರಿಗೆ ನುಗ್ಗಿದರು. ಷೇಕ್ಸ್‌ಪಿಯರನ ನಾಟಕಗಳನ್ನೋದಿ, ಅರಿಸ್ಟೋಟಲ್ ಒದಗಿಸಿದ ಮಸೆಕಲ್ಲಿನ ಮೇಲೆ ತಮ್ಮ ಬುದ್ಧಿಯನ್ನು ಹರಿತ ಮಾಡಿಕೊಂಡು, ನಾಟಕದ ತಂತ್ರ ಮತ್ತು ಪಾತ್ರರಚನೆಯ ಮೇಲೆ ದೀರ್ಘವಾಗಿ ಉಪನ್ಯಾಸ ಕೊಡಬಲ್ಲ 'ಉನ್ನತಭ್ರೂ' ಜನರೂ ಕೂಡ ಈ ನಾಟಕಗಳನ್ನು ನೋಡಲು ಸೀಸನ್ ಟಿಕೆಟ್ ಕೊಂಡುಕೊಳ್ಳುತ್ತಿದ್ದರು. ಕೆಲವರೇನೋ ನಾಟಕವನ್ನು ನೋಡಿ ಬಂದ ಮೇಲೆ ಅದನ್ನು ಇಬ್ಸೆನ್, ಷಾ ಮೊದಲಾದವರ ನಾಟಕಕ್ಕೆ ಹೋಲಿಸಿ, ತೆಗಳಿ, ತಮ್ಮ ಪಾಶ್ಚಾತ್ಯ ಸಂಸ್ಕೃತಿಯ ಮೇಲು ಹೊದಿಕೆಗೆ ಕಪ್ಪ ಸಲ್ಲಿಸಿದರಾದರೂ, ನಾಟಕವನ್ನು ನೋಡದೆ ಬಿಡುತ್ತಿರಲಿಲ್ಲ.

ಈ ಶತಮಾನದ ಎರಡನೆಯ ದಶಕದ ಸುಮಾರಿನಲ್ಲಿ ನಮ್ಮ ದೇಶದ ಮೇಲೆಲ್ಲಾ ಕೊಚ್ಚಿ ಹರಿದ ಸಾಹಿತ್ಯಕ್ರಾಂತಿ ಕಾವ್ಯಪ್ರಪಂಚದಲ್ಲಿ ವರ್ಡ್ಸ್‌ವರ್ತ್, ಕೋಲ್‌ರಿಜ್, ಕೀಟ್ಸ್ ಮಾದರಿಯ ರಮ್ಯ ಕಾವ್ಯದ ಫಲ ಕೊಟ್ಟಿತು. ಆದರೆ ನಾಟಕ ಪ್ರಪಂಚದಲ್ಲಿ ಅದೇ ಕ್ರಾಂತಿ ರೊಮ್ಯಾಂಟಿಕ್ ಮನೋವೃತ್ತಿಯನ್ನು ಅದುಮಿ ವಾಸ್ತವಿಕ ನಾಟಕಗಳಿಗೆ—ಹಾಸ್ಯರಸ ಪ್ರಧಾನವಾದ ಸಾಮಾಜಿಕ ನಾಟಕಗಳಿಗೆ—ಉತ್ತೇಜನ ಕೊಟ್ಟಿತು. ಒಂದೇ ಗಿಡದಲ್ಲಿ ಎರಡು ಬಣ್ಣದ ಹೂವು ಬಿಟ್ಟಂತಾಯಿತು. ಎರಡರ ಮೇಲೆಯೂ ಇಂಗ್ಲಿಷ್ ಸಾಹಿತ್ಯದ ಪ್ರಭಾವವಿದೆಯಾದರೂ ಕಾವ್ಯಕ್ಕೆ ಸ್ಫೂರ್ತಿ ಬಂದದ್ದು

ರೊಮ್ಯಾಂಟಿಕ್ ಯುಗದ ಸಾಹಿತ್ಯದಿಂದ; ನಾಟಕಕ್ಕೆ ಸ್ಫೂರ್ತಿಬಂದದ್ದು ೨೦ನೆಯ ಶತಮಾನದ ವಾಸ್ತವಿಕ ನಾಟಕಗಳಿಂದ.

ನಾಟಕದಲ್ಲಿ ಕ್ರಾಂತಿ ಬರುವುದು ನಿಜವಾಗಿಯೂ ಅನಿವಾರ್ಯವಾಗಿತ್ತು. ಹಿಂದಿನ ನಾಟಕದ ನ್ಯೂನತೆಗಳು ಪರಮಾವಧಿಯನ್ನು ಮುಟ್ಟಿದ್ದವು. ಅಲ್ಲದೆ ಕ್ರಾಂತಿಯಲ್ಲಿ ಮುಂದಾಳಾಗಿ ನಿಂತ ಕೈಲಾಸಂ ಅವರು ಇಂಗ್ಲೆಂಡಿನಲ್ಲಿ ನಾಟಕಗಳನ್ನು ನೋಡಿ ಆ ನಾಟಕಗಳ ಸರಳತೆ ಸಹಜತೆಗೆ ಮನಸೋತಿದ್ದರು. ಆ ಪರಿಸ್ಥಿತಿಯಲ್ಲಿ 'ಟೊಳ್ಳು ಗಟ್ಟಿ' ಯಂಥ ನಾಟಕ ಬಂದದ್ದೇನೂ ಆಶ್ಚರ್ಯವಲ್ಲ. ಕೈಲಾಸಂ ಬರೆಯು ವುದಕ್ಕಿಂತ ಮುಂಚೆಯೆ ವಾಮನರಾವ್ ಮಾಸ್ತರ್ ಕಂಪೆನಿಯವರು ಸಮಾಜಸುಧಾರ ಣೆಯ ಉದ್ದೇಶವುಳ್ಳ 'ವಿವೇಕವಿಜಯ' ಎಂಬ ನಾಟಕವನ್ನಾಡುತ್ತಿದ್ದರು. ಆದರೆ ಆ ನಾಟಕದಲ್ಲಿರುವ ಪಾತ್ರಗಳು—ನನ್ನ ನೆನಪಿರುವ ಮಟ್ಟಿಗೆ—ಮನುಷ್ಯವೇಷ ಹಾಕಿದ ಸದ್ಗುಣದುರ್ಗುಣಗಳು; ಶೈಲಿ, ಪ್ರಯೋಗವಿಧಾನ ಎಲ್ಲಾ ಹಳೆಯ ಕಾಲದವೇ. ಆದ್ದರಿಂದ ನಿಜವಾಗಿ ವಾಸ್ತವಿಕ ಸಾಮಾಜಿಕ ನಾಟಕ ನಮ್ಮಲ್ಲಿ ಪ್ರಾರಂಭವಾದದ್ದು ಕೈಲಾಸಂ ಬರೆಯ ತೊಡಗಿದ ಮೇಲೆ. ಅವರ ನಾಟಕಗಳು ಹೊಸದೊಂದು ಪಂಥವನ್ನು ಸ್ಥಾಪಿಸಿದವು.

ಈ ಹೊಸ ನಾಟಕ ಬೆಳೆದದ್ದು ಅಮೆಚ್ಯುರ್ ಸಂಘಗಳಲ್ಲಿ, ನಾಟಕವನ್ನೇ ವೃತ್ತಿ ಯಾಗಿ ಮಾಡಿಕೊಂಡಿದ್ದ ಕಂಪೆನಿಗಳಲ್ಲಲ್ಲ. ಅದರ ಕಥಾವಸ್ತು ಸಾಮಾಜಿಕ; ಅದರ ಉದ್ದೇಶ ಮನೋರಂಜನೆಯೆಂದು ಹೇಳಬಹುದು; ಆದರೂ ವ್ಯಕ್ತವಾಗಿಯೋ ಅವ್ಯಕ್ತ ವಾಗಿಯೋ ಸಮಾಜದ ಸಮಸ್ಯೆಗಳ ಪರಿಶೀಲನೆಯ ಮತ್ತು ಸಮಾಜ ಸುಧಾರಣೆಯ ಉದ್ದೇಶವೂ ಕಾಣುತ್ತದೆ. ಕಂಪೆನಿಯ ನಾಟಕಗಳಿಗೆ ತಮ್ಮ ಪ್ರೇಕ್ಷಕರನ್ನು ಧರ್ಮದ ಕಡೆಗೆ ಒಲಿಸಿಕೊಳ್ಳಬೇಕೆಂದಾಗಲಿ, ಸಮಾಜಸುಧಾರಣೆ ಮಾಡಬೇಕೆಂದಾಗಲಿ ಯಾವ ಗೀಳೂ ಇರಲಿಲ್ಲ. ಜನರನ್ನು ಮೆಚ್ಚಿಸಿದರಾಯಿತು, ಹಣ ಬಂದರಾಯಿತು. ಇವೆರಡು ಉದ್ದೇಶಗಳೂ ಸಫಲವಾಗಲು ಅವು ಸಂಗೀತ ಬೇಕಾದರೆ ಸಂಗೀತ, ಹಾಸ್ಯ ಬೇಕಾದರೆ ಹಾಸ್ಯ, ಭಕ್ತಿ ಬೇಕಾದರೆ ಭಕ್ತಿ—ಎಲ್ಲವನ್ನೂ ಕೊಡಲು ಸಿದ್ಧವಾಗಿದ್ದವು. ನಾಟಕವು ಕಂಪೆನಿಯವರ ವೃತ್ತಿಯಾದ್ದರಿಂದ ಅವರು ಜನತೆಯ ಅಭಿರುಚಿಯನ್ನು ಅನುಸರಿಸಿ ಹೋಗದಿರುವುದು ಅಸಾಧ್ಯವಾಗಿತ್ತು. ನಮ್ಮ ಹೊಸ ಪಂಥದವರಿಗೆ ನಾಟಕ ಜೀವನೋ ಪಾಯವಲ್ಲ, ಕೇವಲ ಮನೋರಂಜನೆಯ ಹವ್ಯಾಸವೂ ಅಲ್ಲ. ಆದ್ದರಿಂದ ಅವರು ಜನತೆಯ ಅಭಿರುಚಿಯ ಸೆರಗು ಹಿಡಿದು ಹೋಗಬೇಕಾದ್ದಿರಲಿಲ್ಲ. ಆ ಅಭಿರುಚಿಯನ್ನೇ ಅನುಸರಿಸುವ ಸೋಗು ಹಾಕಿ ಕ್ರಮ ಕ್ರಮವಾಗಿ ಅದನ್ನು ತಿದ್ದಿ ನಿರ್ಮಲಮಾಡುವ ಅವಶ್ಯಕತೆ ಅವರಿಗೆ ಕಾಣಲಿಲ್ಲ. ದೇಶಸೇವೆಗೆ ಸಾಧನವಾಗುವಂಥ ಹೊಸ ಬಗೆಯ ನಾಟಕವೊಂದು ಸೃಷ್ಟಿಯಾಗಬೇಕೆಂಬ ಆತುರದಲ್ಲಿ ಅವರು "ನಮಗೆ ಹಣ ಮುಖ್ಯವಲ್ಲ; ಅದು ಬರಲಿ ಬರದಿರಲಿ, ನಾಟಕದ ವಿಷಯದಲ್ಲಿ ನಮಗಿರುವ ಆದರ್ಶವನ್ನು ಕಾರ್ಯರೂಪಕ್ಕೆ ತರುತ್ತೇವೆ; ಹೊಸದೊಂದು ಅಭಿರುಚಿಯನ್ನು ಸೃಷ್ಟಿಸುತ್ತೇವೆ"

ಎಂದು ಹೊರಟರು. ಅವರ ಉದ್ದೇಶ ಘನವಾದದ್ದು; ಅದಕ್ಕಾಗಿ ಅವರು ತ್ಯಾಗ ಬುದ್ಧಿಯಿಂದ ದುಡಿದರು; ಹಳೆಯ ನಾಟಕದ ವಿಷಯದಲ್ಲಿ ಅವರು ಮಾಡಿದ ಟೀಕೆ ಬಹು ಮಟ್ಟಿಗೆ ಸಾಧುವಾದದ್ದು—ಇದನ್ನೆಲ್ಲಾ ನಾವು ಒಪ್ಪಲೇ ಬೇಕು.

ಈ ಪಂಥದವರ ವಾದವನ್ನು ಹೀಗೆ ಸಂಗ್ರಹಿಸಬಹುದು: "ಈ ಪೌರಾಣಿಕ ನಾಟಕಗಳೂ ರಮ್ಯನಾಟಕಗಳೂ ಜೀವನವನ್ನು ಬಿಟ್ಟು ಎಲ್ಲೋ ಹಿಮವತ್ಪರ್ವತದ ಶಿಖರದ ಮೇಲೆ ಕುಳಿತುಕೊಳ್ಳುವ ಚಟಕ್ಕೆ ಸಿಕ್ಕಿವೆ. ಅವುಗಳ ಔನ್ನತ್ಯ ಕೃತಕವಾದದ್ದು; ಅಥವಾ ಕೃತಕವಲ್ಲದಿದ್ದರೂ ಆ ಎತ್ತರದಲ್ಲಿ ನಾವು ಉಸಿರೆಳೆಯಲಾರೆವು; ನಾಟಕವನ್ನು ಅಲ್ಲಿಂದ ಇಳಿಸಿ ಸಾಮಾನ್ಯ ಜನರ ನಡುವೆ ಬೆಳೆಯುವಂತೆ ಮಾಡಬೇಕು. ಈ ರಾಜ ರಾಣಿಯರು, ದೇವದಾನವರು, ಹಾಲುಗಲ್ಲದ ಪ್ರಣಯಿಗಳು, ಸಾಧುಸಂತರು ಮತ್ತು ಅವರನ್ನು ಪೀಡಿಸುವ ದುರುಳರು, ಇವರಿಗೆಲ್ಲಾ ನಮ್ಮ ರಂಗಭೂಮಿ ಗುತ್ತಿಗೆಯಾಗಿ ಹೋಗಿದೆ. ಅವರನ್ನೋಡಿಸಿ ಆ ಸ್ಥಳವನ್ನು ಸಾಮಾನ್ಯ ಮಾನವನಿಗೆ ಕೊಡಬೇಕು. ಅವನ ದಿನದಿನದ ಜೀವನವನ್ನು ಚಿತ್ರಿಸಬೇಕು. ನಾಟಕದ ಭಾಷೆ ಜೀವನದಲ್ಲಿ ಬಳಕೆಯಾಗಿರುವ ಭಾಷೆಯೇ ಆಗಬೇಕು. ನಾಟಕಕಲೆ ಹುಟ್ಟಿದ್ದು ಅಣ್ಣಾಹೊಟ್ಟೆಗಾರರ ಮನೋರಂಜನೆಗಲ್ಲ, ಅದು ವಿಚಾರಪ್ರಚೋದನೆಗಾಗಿ, ಜೀವನೋದ್ಧಾರಕ್ಕಾಗಿ ಶ್ರಮಿಸಬೇಕು. ಸಮಾಜದ ಕುಂದು ಕೊರತೆಗಳನ್ನು ಎತ್ತಿ ತೋರಿಸಬೇಕು. ಈ ಕೆಲಸಕ್ಕೆ ಉಪಯುಕ್ತವಾದ ಸಾಧನವೆಂದರೆ ಹಾಸ್ಯ, ವಿಡಂಬನ—ಇವೇ ನಮ್ಮ ಅಸ್ತ್ರಗಳು."

ಈ ಹೊಸ ನಾಟಕದಲ್ಲಿ ಸಂಗೀತಕ್ಕೆ ಸ್ಥಾನವೇ ಇಲ್ಲವೆನ್ನಬಹುದು. "ಹಾರ್ಮಣಿ ಬಾರ್ಸ್ನೋ ಕೈ ಹಾಲ್ಕಾಸೀತೆ" ಎಂಬ ಹಾಸ್ಯಕ್ಕೆ ಅವಕಾಶ ಕೊಡುವಷ್ಟು ಮಾತ್ರ ಬಂದರೆ ತಡೆದೇವು—ಹೆಚ್ಚಾಗಬಾರದು. ಬೋರ ತರಕಾರಿಯನ್ನು ತಂದು ಒಳಹಜಾರದಲ್ಲಿ—ಡ್ರಾಯಿಂಗ್ ರೂಮಿನಲ್ಲಲ್ಲ—ಇಡಬೇಕಾದ ಸಂದರ್ಭದಲ್ಲಿ "ಕತ್ತಾರಿ ಕಾಯ್ ತತ್ತಾರೋ" ಎಂದು ಪಲ್ಲವಿ ಹಾಡುವುದು ಉಚಿತವಲ್ಲವಷ್ಟೆ. ಮದುವೆಗೆ ಮುಂಚೆ awfully simple ಆಗಿದ್ದು ಮದುವೆಯಾದ ಮೇಲೆ simply awful ಆಗುವ ಹೆಂಗಸಿನ ವಿಷಯವಾಗಿ ಬರೆದ ನಾಟಕಕ್ಕೆ ಸ್ವರಪ್ರಸ್ತಾರ ಹಾಕಿ ಹಾಡಿಸಲಾಗುವುದಿಲ್ಲ—ಅದಕ್ಕೇ ಬೇರೊಂದು ಬಗೆಯ ಸಂಗೀತವನ್ನು ಸೃಷ್ಟಿಸಬೇಕಾದೀತು. ಇಂಥ ನಾಟಕದಲ್ಲಿ ವಸ್ತ್ರ ಭೂಷಣಗಳ, ಸೀನರಿಗಳ ಆಡಂಬರವೂ ಇಲ್ಲ. ಇದರ ವಸ್ತುಗಳು—ಈಗಿನ ವಿದ್ಯಾಭ್ಯಾಸದ ಕುಂದು ಕೊರತೆಗಳು, ಬಿರುದು ಬಾವಲಿಗಳ ಆಸೆ, ವರದಕ್ಷಿಣೆಪದ್ಧತಿಯ ವಿಷಮ ಫಲ, ಸಂಸಾರದ ಛಿದ್ರಗಳು, ಮನೆಯನ್ನು ಮರೆತು ಸಂಘಗಳಲ್ಲಿ ಕಾಲಹಾಕುವ ಹೆಂಗಸರು, ಹರಿಜನೋದ್ಧಾರ—ಇತ್ಯಾದಿ.

ಹಿಂದಿನ ಪೌರಾಣಿಕ ನಾಟಕಗಳಲ್ಲಿ ಅಭಿನಯಿಸುತ್ತಿದ್ದ ಕೆಲವು ನಟರು ಈ ಹೊಸನಾಟಕಕ್ಕೆ ತಮ್ಮ ಕಲೆಯನ್ನು ದಾನಮಾಡಿದರು. ಶ್ರೀ ನಾಗೇಂದ್ರರಾಯರು ಮೊದಲು ವರದಾಚಾರ್ಯರ ಕಂಪೆನಿಗೆ ಸೇರಿದಾಗಲೆ ಜನರ ಮನಸ್ಸನ್ನು ಸೂರೆ

ಗೊಂಡರು. ಆದರೆ ಅವರು ಕೈಲಾಸಂ ಬರೆದ 'ಅಮ್ಮಾವ್ರ ಗಂಡ'ದಲ್ಲಿ ಅಮ್ಮಾವ್ರಾಗಿ ಬಂದಾಗ ಅವರ ಕಲೆ ಹಿಂದಿಗಿಂತ ಹೆಚ್ಚಾಗಿ ಶೋಭಿಸಿತೆಂದು ಅನೇಕರ ಅಭಿಪ್ರಾಯ.

ಸಾಮಾಜಿಕ ನಾಟಕಗಳಿಂದ ನಾಟಕಕಲೆಗೆ ವಿಶೇಷ ಪ್ರಯೋಜನವಾಯಿತೆನ್ನುವುದರಲ್ಲಿ ಯಾವ ಸಂಶಯವೂ ಇಲ್ಲ. ಅರ್ಥವಿಲ್ಲದ ಸಂಗೀತ, ಕೆಲಸಕ್ಕೆ ಬಾರದ ಡ್ರೆಸ್ಸು ಸೀನರಿಗಳು, ರಂಗಸ್ಥಳವನ್ನು ಬಿಟ್ಟು ಹೋದದ್ದು ಮಾತ್ರವಲ್ಲ—ಅದಕ್ಕಿಂತ ಮುಖ್ಯವಾದ ಸುಧಾರಣೆಗಳು ನಡೆದವು. (೧) ಹೊಸ ನಾಟಕದಲ್ಲಿ ಬರುವ ವ್ಯಕ್ತಿಗಳು ಸಾಮಾನ್ಯ ಮಾನವರಾದ್ದರಿಂದ—ಅವರ ಸ್ವಭಾವನಿರೂಪಣೆಯಲ್ಲಿ ಹಿಂದಿನ ಕವಿಗಳ ಅನುಕರಣೆ ಸಾಧ್ಯವಲ್ಲದ್ದರಿಂದ–ನಾಟಕಕಾರ ಪಾತ್ರಸೃಷ್ಟಿಯ ಕಡೆಗೆ ಗಮನ ಕೊಡುವುದು ಅವಶ್ಯಕವಾಯಿತು. (೨) ಹಾಗೆಯೇ ನಾಟಕದ ಬಂಧವೂ ಸ್ವಲ್ಪ ಬಿಗಿಯಾಗಬೇಕಾಯಿತು. ಪೌರಾಣಿಕ ನಾಟಕವಾದರೆ ಜನ ತಮಗೆ ಪರಿಚಿತವಾದ ಹಳೆಯ ಕಥೆಯನ್ನು ನೆನಪಿನಲ್ಲಿಟ್ಟುಕೊಳ್ಳುತ್ತಾರೆ. (ಇದರಿಂದ ಪ್ರತಿಭಾಶಾಲಿಯಾದ ನಾಟಕಕಾರನಿಗೆ ಪ್ರಯೋಜನವೂ ಉಂಟೆಂಬುದನ್ನು ನಾವು ಮರೆಯಬಾರದು.) ಇಲ್ಲಿ ನಾಟಕಕಾರನೇ ಸಮರ್ಪಕವಾದ ಕಥೆಯೊಂದನ್ನು ಕಲ್ಪಿಸಿಕೊಳ್ಳಬೇಕಾಯಿತು. ಕಥೆ ಅಸಮರ್ಪಕವಾದರೆ ಆ ಹುಳುಕು ವಾಸ್ತವಿಕನಾಟಕದಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಆಂಜನೇಯ ಸಮುದ್ರವನ್ನು ಲಂಘಿಸಿದನೆಂದರೆ ಒಪ್ಪಬಹುದು. ಆದರೆ ಶಾಮಣ್ಣ ಅದೇ ಕೆಲಸವನ್ನು ಮಾಡಿದನೆಂದರೆ ಯಾರೂ ನಂಬರು. ಅವನು ಮಾಡುವ ಪ್ರತಿಯೊಂದು ಕೆಲಸವೂ ಆಡುವ ಪ್ರತಿಯೊಂದು ಮಾತೂ ಪ್ರಕೃತಿಯಲ್ಲಿ ಕಾಣುವ ಕಾರ್ಯಕಾರಣ ನಿಯಮಕ್ಕೆ ಒಳಪಟ್ಟಿರಬೇಕು. (೩) ನಾಟಕದ ಭಾಷೆ ಸ್ವಾಭಾವಿಕವಾಯಿತು. ಕೈಲಾಸಂ ಅವರ ಭಾಷೆ ಮತ್ತೊಂದು ಬಗೆಯ ಅತಿರೇಕಕ್ಕೆ ಹೋಯಿತೆಂದರೂ ಒಟ್ಟಿನಲ್ಲಿ ಹಾಸ್ಯ ನಾಟಕಕ್ಕೆ ಬೇಕಾದ ಮಧ್ಯಮವರ್ಗದ ಶೈಲಿಯೊಂದು ಸೃಷ್ಟಿಯಾಯಿತು. (೪) ವಾಸ್ತವಿಕನಾಟಕದ ಮಟ್ಟದಲ್ಲಿ ಅಭಿನಯಕಲೆಯೂ ಹೆಚ್ಚು ಸ್ವಾಭಾವಿಕವಾಯಿತು; ರಂಗಸ್ಥಳದ ಮೇಲೆ ಮಾತಾಡುವ ಕಲೆಯೂ ಉತ್ತಮಗೊಂಡಿತು. (೫) ತಕ್ಕ ಮಟ್ಟಗೆ ಶುದ್ಧವಾದ, ಮತ್ತು ನಾಟಕದ ವಸ್ತುವಿಗೆ ಹೊರೆಯಲ್ಲದ, ಹಾಸ್ಯ ನಮಗೆ ದೊರಕಿತು. (೬) ಇದೆಲ್ಲಕ್ಕಿಂತಲೂ ಮುಖ್ಯವಾಗಿ ನಾಟಕಕಾರರು ಹಿಂದಿನ ಉದ್ದಾಮ ಕವಿಗಳ ಅನುಭವವನ್ನು ಕಣ್ಣು ಮುಚ್ಚಿ ಅನುಕರಿಸುವ ಅಭ್ಯಾಸ ತಪ್ಪಿ ತಮ್ಮ ಸ್ವಂತ ಅನುಭವವನ್ನೇ ನಾಟಕದ ಸೃಷ್ಟಿಗೆ ಉಪಯೋಗಿಸುವಂತಾಯಿತು. ಈ ದೃಷ್ಟಿಯಿಂದ ನಾಟಕ ಜೀವನಕ್ಕೆ ಹತ್ತಿರ ಬಂತು. ಆ ಅನುಭವದ ವೈಶಾಲ್ಯವೆಷ್ಟು, ಆಳವೆಷ್ಟು ಎನ್ನುವುದು ಬೇರೆ ಮಾತು.

ಈ ನಾಟಕಗಳು ಕೆಲಕಾಲ ಯಶಸ್ವಿಯಾಗಿ ಬಾಳಿದವೆಂದು ಒಪ್ಪಲೇಬೇಕು. ದೇಶದ ಪ್ರಾಜ್ಞಮಂಡಲಿ, ಪಾಶ್ಚಾತ್ಯ ಸಂಪ್ರದಾಯದ ವಿದ್ವನ್ಮಂಡಲಿ, ತನ್ನ ಬೆನ್ನು ತಟ್ಟಿಕೊಂಡಿತು. "ನಾವು ವಿಚಾರ ಪ್ರಧಾನವಾದ ನಾಟಕವನ್ನು ಸೃಷ್ಟಿ ಮಾಡಿದ್ದೇವೆ; ನಾಟಕವನ್ನು ಜೀವನದ ಸಮೀಪಕ್ಕೆ ತಂದಿದ್ದೇವೆ, ಸಮಾಜೋದ್ಧಾರಕ್ಕೂ ಕಲೆಯ

ಉದ್ಧಾರಕ್ಕೂ ತಳಹದಿ ಹಾಕಿದ್ದೇವೆ" ಎಂಬ ಭಾವನೆಯಿಂದ ಅವರಿಗೆ ರೋಮಾಂಚ ವಾಗಿ ಮೈಯುಬ್ಬಿತು. ಕೈಲಾಸಂ ಹಾಕಿಕೊಟ್ಟ ಮೇಲ್ಪಂಕ್ತಿಯನ್ನು ಅನುಸರಿಸಲು–ಅನುಕರಿಸಲು ಎಂದರೂ ತಡೆಯುತ್ತದೆ–ಹತ್ತಾರು ಜನರು ಮುಂದೆ ಬಂದರು. ಹಳೆಯ ನಾಟಕ ತಾನಾಗಿಯೇ ನವೆದು ಪ್ರಾಣಬಿಟ್ಟಿತೋ ಅಥವಾ ವಿದ್ವಜ್ಜನರ ತಿರಸ್ಕಾರ ಅದನ್ನು ಕೊಂದಿತೋ, ಅಂತೂ ಹೆಚ್ಚುಕಡಿಮೆ ಅದು ಗೋರಿಯಾದಂತಾಯಿತು. ಅದಕ್ಕಾಗಿ ಕಣ್ಣೀರು ಬಿಟ್ಟವರೂ ವಿರಳ. ಗುಬ್ಬಿಕಂಪೆನಿ ಮಾತ್ರ ಹೊಸ ನಾಟಕದ ದಾಳಿಯನ್ನು ತಡೆದುಕೊಂಡು ಇನ್ನೂ ಜನರನ್ನು ನಾಟಕಶಾಲೆಗೆ ಸೆಳೆಯುತ್ತಿದೆ.

ಆದರೆ ಹಳೆಯ ನಾಟಕ ಜನತೆಯಿಂದ ಗಳಿಸಿದ್ದ ಸನ್ಮಾನಕ್ಕೆ ಹೊಸ ನಾಟಕ ವೇನೂ ವಾರಸುದಾರನಾಗಲಿಲ್ಲ. ವಿದ್ವಜ್ಜನರು ಹಾಡಿ ಹಲುಬಿ ಬರಮಾಡಿಕೊಂಡ ವಾಸ್ತವಿಕ ನಾಟಕದಲ್ಲಿ ಏನೋ ಒಂದು 'ಐಬು' ಇದ್ದಿರಬೇಕು. ಅದು ಅಮೆಚ್ಯುರ್ ರಂಗಭೂಮಿಯಲ್ಲಿ ಯಶಸ್ವಿಯಾಯಿತೆಂದರೂ ಅಲ್ಲಿಂದ ಮುಂದೆ ಹೊರಟು ಜನಸಾ ಮಾನ್ಯಕ್ಕೆ ಪ್ರಿಯವಾಗಲಿಲ್ಲ. ಅಮೆಚ್ಯುರ್ ನಾಟಕ ಮಂಡಲಿಗಳು ಯಾವುವೂ ಹತ್ತಾರು ವರ್ಷ ಸ್ಥಿರವಾಗಿ ನಿಂತು ಕೆಲಸ ನಡಸಿದಂತೆ ಕಾಣುವುದಿಲ್ಲ. ಒಂದಾನೊಂದು ಕಾಲದಲ್ಲಿ ಬಳ್ಳಾರಿ ರಾಘವಾಚಾರ್ಯರಂಥ ಪ್ರಸಿದ್ಧ ನಟರನ್ನು ರಂಗಭೂಮಿಗೆ ತಂದ ಬೆಂಗಳೂರಿನ ಅಮೆಚ್ಯುರ್ ನಾಟಕಮಂಡಲಿ ಹೆಸರು ಮಾತ್ರಕ್ಕೆ ಇನ್ನೂ ಬದುಕಿದೆ. ವಾಸ್ತವಿಕ ಪಂಥದವರು ತಮಗೆ ಹಣ ಗಳಿಸುವ ಆತುರವಿಲ್ಲವೆಂದು ಘೋಷಿಸಿದ್ದು ಬುದ್ಧಿವಂತಿಕೆಯ ಮಾತೇ ಆಯಿತು. ಅವರ ನಾಟಕಕ್ಕೆ ಹಣ ಕೊಡಲು ಜನತೆಯೇನೂ ಧಾವಿಸಿ ಬಂದು ಕ್ಯೂ ನಿಲ್ಲಲಿಲ್ಲ. ಅದಕ್ಕೆ ಸ್ಥಾನ ದೊರೆತದ್ದು ಜನಸಾಮಾನ್ಯದ ರಂಗ ಭೂಮಿಯಲ್ಲಲ್ಲ, 'ಕಾಲೇಜ್‌ಡೆ', ಸಂಘಗಳ ವಾರ್ಷಿಕೋತ್ಸವ, ಮುಂತಾದ ಸಮಾರಂ ಭಗಳಲ್ಲಿ ಮಾತ್ರ. ಅಲ್ಲಿಯೂ ಅದಕ್ಕೆ ದೊರೆತಿರುವ ಗೌರವ ಎಲೆಯ ಕೊನೆ ಯಲ್ಲಿ ಬಡಿಸುವ ಉಪ್ಪಿನಕಾಯಿಗೆ ಸಲ್ಲುವಷ್ಟು ಮಾತ್ರ. ನಮ್ಮ ವಿದ್ವಜ್ಜನರು ಕೂಡ ಅಲ್ಲಿಗೆ ಹೋಗುವುದು ಮುಖ್ಯವಾಗಿ ನಾಟಕ ನೋಡುವುದಕ್ಕಲ್ಲ. ಆ ಸಮಾರಂಭಕ್ಕೆ ಗಣ್ಯರಾದವರೊಬ್ಬರು ಅಧ್ಯಕ್ಷರಾಗುತ್ತಾರೆ; ದೊಡ್ಡ ಮನುಷ್ಯರೊಬ್ಬರು ಭಾಷಣ ಮಾಡುತ್ತಾರೆ; ಅಲ್ಲಿಗೆ ಹೋಗುವುದು ಗೌರವಸ್ಥರ ಲಕ್ಷಣ; ಹಾಗೇ ನಾಟಕವನ್ನೂ ನೋಡಬೇಕೆಂದರೆ . ಆಗಬಹುದು, ಅದಕ್ಕೇನು. ಬಹುಮಟ್ಟಿಗೆ ಅಮೆಚ್ಯುರ್ ನಾಟಕಗಳ ವಿಷಯದಲ್ಲಿ ಇದು ಜನರ ಮನೋಭಾವ. ವಿದ್ವಜ್ಜನರಲ್ಲಿ ಮುಕ್ಕಾಲು ಪಾಲು—ಅನೇಕ ವೇಳೆ ಸಮಾರಂಭದ ಅಧ್ಯಕ್ಷರು ಕೂಡ— ಸುಮಾರು ಎಂಟು ಘಂಟೆಗೆ ಮನೆಗೆ ಹೊರಟುಬಿಡುತ್ತಾರೆ. ಹಾಗೆ ಹೊರಡಲು ಅನುಕೂಲವಾಗಲೆಂದೇ ನಾಟಕ ವನ್ನು ಕಾರ್ಯಕ್ರಮದ ಕೊನೆಗೆ ತಳ್ಳುವ ಅಭ್ಯಾಸ ಬೆಳೆದಿದೆ. ನಾಟಕ ನೋಡ ಬೇಕೆಂಬ ಉತ್ಸಾಹದಲ್ಲಿ ನಿದ್ದೆ ಕೆಡುವುದನ್ನೂ ಗಮನಿಸದೆ, ರಾತ್ರಿ ಹತ್ತು ಘಂಟೆಗೆ ನಾಟಕಶಾಲೆಗೆ ಹೋಗಿ ಎರಡು ಘಂಟೆಗೋ ಮೂರು ಘಂಟೆಗೋ ಹಿಂದಿರುಗುತ್ತಿದ್ದ ಕಾಲವೆಲ್ಲಿ, ಈ ಕಾಲವೆಲ್ಲಿ ! ಷೇಕ್ಸ್‌ಪಿಯರ್ 'the play is the thing' ಎಂದು

ಹೇಳಿದ. ಈಗಲಾದರೋ ನಾಟಕ ಯಾವುದೋ ಒಂದು ಉತ್ಸವದ ಉಪಕರಣ ಮಾತ್ರ. ವಿದ್ವನ್ಮಣಿಗಳಿಂದ ಕೂಡ ಅದಕ್ಕೆ ದೊರೆತಿರುವುದು ಕಡೆಗಣ್ಣಿನ ಕಟಾಕ್ಷ. ಬಹುಶಃ ಅವರಿಗೆ ಬೇಕಾಗಿರುವುದು ಈನಾಟಕವಲ್ಲ; ಹಳೆಯ ತೆರದ ನಾಟಕವೂ ಅಲ್ಲ; ಬೇರೊಂದು ಬಗೆಯ ನಾಟಕ. ವಾಸ್ತವಿಕ ನಾಟಕಗಳಲ್ಲಿಲ್ಲದ, ಹಳೆಯ ನಾಟಕದಲ್ಲಿ ಸ್ವಲ್ಪ ಮಟ್ಟಿಗಾದರೂ ಇದ್ದ ಯಾವುದೋ ಕೆಲವು ಗುಣಗಳಿಗೆ ಅವರು ಮನಸೋತಿದ್ದಾರೆಂದು ತೋರುತ್ತದೆ. ನನಗೆ ಬಹಳ ಪರಿಚಿತರಾದ ಇಂಗ್ಲಿಷ್ ಪ್ರಾಧ್ಯಾಪಕರೊಬ್ಬರು -- ಇಬ್ಸೆನ್, ಷಾ ಮೊದಲಾದವರ ಕೃತಿಗಳನ್ನು ವ್ಯಾಸಂಗ ಮಾಡಿದವರು— "ನನಗೆ ನಿಮ್ಮ ವಿದ್ವಾಂಸರ ನಾಟಕ ಹಿಡಿಸುವುದಿಲ್ಲವಯ್ಯ" ಎಂದು ನಿರ್ದಾಕ್ಷಿಣ್ಯವಾಗಿ ಹೇಳುತ್ತಿದ್ದರು. ಹೊಸ ನಾಟಕದ ಬೆಂಬಲಿಗರು ಈ ಪರಿಸ್ಥಿತಿಯಿಂದ ನಿರಾಶರಾಗಲಿಲ್ಲ. "ಈ ಬಗೆಯ ನಾಟಕ ಇನ್ನೂ ಹೊಸದು, ಜನರ ಅಭಿರುಚಿ ನೇರವಾಗಬೇಕಾದರೆ ಕಾಲ ಬೇಕು" ಎಂದು ಮನಸ್ಸಿಗೆ ಸಮಾಧಾನ ತಂದುಕೊಂಡರು. ನಮ್ಮ ವಾಸ್ತವಿಕ ನಾಟಕ ಹುಟ್ಟಿದಂದಿನಿಂದ ಇದುವರೆಗೆ ಕಾಲುಶತಮಾನಕ್ಕಿಂತ ಹೆಚ್ಚು ಕಾಲ ಕಳೆದಿದೆ. ಆದರೂ ಈ ಪಂಥದವರ ನಾಟಕವು ಕಂಪೆನಿಯವರ ರಂಗಸ್ಥಳವನ್ನಾಕ್ರಮಿಸಿ ಸಾಮ್ರಾಜ್ಯ ಕಟ್ಟಿರುವ ಚಿಹ್ನೆಯೇನೂ ಕಾಣುವುದಿಲ್ಲ. 'ದೇವದಾಸಿ'ಯಂಥ ಒಂದೆರಡು ನಾಟಕಗಳು ಈ ಮಾತಿಗೆ ವಿನಾಯಿತಿಯಾಗಬಹುದೇನೊ.

ವಿದ್ವಾಂಸರ ಬಯಕೆಯಿಂದಲೇ ಹುಟ್ಟಿ ಅವರಿಂದ ಪೋಷಿತವಾದ ನಾಟಕ ಅವರಿಗೇ ಅಸಡ್ಡೆಯಾದ ಮೇಲೆ ಜನಸಾಮಾನ್ಯಕ್ಕೆ ಅದು ರುಚಿಸದೆ ಹೋದದ್ದೇನೂ ಆಶ್ಚರ್ಯವಲ್ಲ. ಹಳೆಯ ನಾಟಕ ಕಣ್ಮರೆಯಾಯಿತು; ಹೊಸದು ಅವರಿಗೆ ಸೇರದು. ಆದ್ದರಿಂದ ಮನೋರಂಜನೆ ಬೇಕೆನ್ನಿಸಿದಾಗ ಅವರಿಗೆ ಚಲಚ್ಚಿತ್ರಗಳೇ ಶರಣು. ಜನಸಾಮಾನ್ಯರು ಬೇಡುವ ದೇವದಾನವರು, ಸಂತರು, ವಿದೂಷಕರು ಎಲ್ಲವನ್ನೂ ಸಿನೆಮಾದವರು ಕೊಡುತ್ತಿದ್ದಾರೆ, ಕಲೆಯ ರೂಪದಲ್ಲಲ್ಲದಿದ್ದರೂ.

ನಾಟಕವನ್ನು ಜೀವನದ ಹತ್ತಿರಕ್ಕೆ ತರಬೇಕೆಂದು ಹೊರಟ ವಾಸ್ತವಿಕ ಪಂಥದವರು ಜೀವನದ ಮೂಲಪ್ರವಾಹದಿಂದ ಹೊರಬಿದ್ದು ಯಾವುದೋ ಸಣ್ಣ ಕಾಲುವೆಯಲ್ಲಿ ಸಿಕ್ಕಿಕೊಂಡಂತೆ ತೋರುತ್ತದೆ. ಈ ವಿಚಿತ್ರ ವಿರೋಧಾಭಾಸದ ಅರ್ಥವೇನು? ವಾಸ್ತವಿಕನಾಟಕ ಜನಸಾಮಾನ್ಯಕ್ಕೆ ರುಚಿಸದಿರುವುದಕ್ಕೆ ಕಾರಣವೇನು? ಅಮೆಚ್ಯುರ್ ರಂಗಭೂಮಿಯಲ್ಲಿ ಉತ್ತಮ ನಟರಿಲ್ಲವೆಂದೆ? ಹಾಗೆ ಹೇಳಲಾಗುವುದಿಲ್ಲ. ಶ್ರೀ ಎನ್. ಎಸ್. ನಾರಾಯಣಶಾಸ್ತ್ರಿ, ಶ್ರೀ ಬಿ. ಕೃಷ್ಣಮೂರ್ತಿ, ಮುಂತಾದ ನಟರು ಯಾವ ನಾಟಕ ಮಂಡಲಿಗಾದರೂ ಗೌರವ ತರಬಲ್ಲವರು; ಶ್ರೀ ಪರ್ವತವಾಣಿಯವರ ಗುಂಪಿನಲ್ಲಿ ಒಳ್ಳೆಯ ನಟರಿದ್ದಾರೆ; ಹಿಂದೆ ಕೂಡ ಕೈಲಾಸಂ ಅವರ ಸುತ್ತಮುತ್ತ ಪ್ರತಿಭಾಶಾಲಿಗಳಾದ ನಟರು ಸೇರಿದ್ದರು. ಹೊಸನಾಟಕಕ್ಕೂ ರಂಗಭೂಮಿಗೂ ಹೊಂದಿಕೆಯಿಲ್ಲವೆನ್ನೋಣವೆ? ಈ ಮಾತು ಸ್ವಲ್ಪ ಮಟ್ಟಿಗೆ ನಿಜವೆಂದರೂ ಅದನ್ನು ಸಂಪೂರ್ಣವಾಗಿ ಒಪ್ಪಲಾಗುವುದಿಲ್ಲ. ಶ್ರೀ ಪರ್ವತವಾಣಿಯವರ ನಾಟಕಗಳು ಸಾಹಿತ್ಯದೃಷ್ಟಿಯಿಂದ

ಪರಿಣಾಮಕಾರಿಯಲ್ಲವೆಂದರೂ ರಂಗಸ್ಥಳಕ್ಕೆ ಬಹಳ ಚೆನ್ನಾಗಿ ಹೊಂದಿಕೊಳ್ಳುತ್ತವೆ. ಹಾಗಾದರೆ ಹೊಸನಾಟಕದ ಕೊರತೆಯೇನು? ಈ ನಾಟಕಕಾರರು ನಿಜವಾಗಿಯೂ ನಮಗೆ ಉಚ್ಚವರ್ಗದ ಕಲೆಯನ್ನು ಕೊಟ್ಟಿದ್ದಾರೆಯೆ? ಅದು ರುಚಿಸದಿರುವುದಕ್ಕೆ ಜನ ಸಾಮಾನ್ಯದ ಕೀಳು ಅಭಿರುಚಿಯೇ ಕಾರಣವೆ? ಶಿಷ್ಟ ನಾಟಕಕಾರರ ಮತ್ತು ಅವರ ಬೆಂಬಲಿಗರೆನ್ನಬಹುದಾದ ಶಿಷ್ಟ ಪ್ರೇಕ್ಷಕವೃಂದದ ಅಭಿರುಚಿಯೇ ಸರಿ, ಉಳಿದವರ ದ್ದೆಲ್ಲಾ ತಪ್ಪು ಎಂದು ಹೇಳೋಣವೆ? ಉಚ್ಚಪೀಠದಲ್ಲಿ ಕುಳಿತು ಪ್ರಜಾಪ್ರಭುತ್ವದ ತತ್ವವನ್ನು ಹಳಿಯುವವರೇನೋ ನಿಸ್ಸಂದೇಹವಾಗಿ ಉತ್ತರ ಕೊಡುತ್ತಾರೆ: "ಒಪ್ಪತಕ್ಕ ಮಾತೇ ಘನವಾದ ಕಲೆ ಜನಸಾಮಾನ್ಯರಿಗಲ್ಲ; ಅದು ಶಿಷ್ಟರಿಗಾಗಿಯೇ ಹುಟ್ಟಿದ್ದು."

ಶಿಷ್ಟವೃಂದಕ್ಕೆ ಸಲ್ಲಿಸಬೇಕಾದ ಗೌರವವನ್ನು ಸಲ್ಲಿಸೋಣ. ಆದರೆ ಪ್ರಪಂಚದ ನಾಟಕದ ಚರಿತ್ರೆ ಅವರ ವಾದಕ್ಕೆ ವಿರೋಧವಾಗಿ ನಿಲ್ಲುತ್ತದೆ. ಹಿಂದೆ ಗ್ರೀಸಿನಲ್ಲಿ ಈಸ್ಕಿಲಸ್ ಮತ್ತು ಸೋಫೊಕ್ಲೀಸರ ನಾಟಕಗಳನ್ನು ನೋಡುವುದಕ್ಕೆ ೨೦-೩೦ ಸಾವಿರ ಜನ ಸೇರುತ್ತಿದ್ದರಂತೆ. ಅವರೆಲ್ಲರೂ ಸುಸಂಸ್ಕೃತರೆಂದು ಹೇಳಲಾಗುವುದಿಲ್ಲ. ಅಥವಾ ಈಸ್ಕಿಲಸ್ ಸೋಫೊಕ್ಲೀಸರು 'ಗ್ಯಾಲರಿ ಪ್ರಭು' ಗಳ ಮೆಚ್ಚಿಕೆಗಾಗಿ ನಾಟಕ ಬರೆದ ರೆಂದೂ ಹೇಳಲಾಗುವುದಿಲ್ಲ. ಷೇಕ್ಸ್‌ಪಿಯರನ ಪ್ರೇಕ್ಷಕವೃಂದದಲ್ಲಿದ್ದವರು ಎಸೆಕ್ಸ್, ಸೌಥಾಂಪ್ಟನ್-ಇಂಥವರು ಮಾತ್ರವಲ್ಲ; ಲಂಡನ್ನಿನ ಸಾಮಾನ್ಯ ವರ್ಗದವರೂ ಇದ್ದರು. ಅವನ ನಾಟಕಗಳ ಸ್ವಾರಸ್ಯವೂ ಕಾವ್ಯಶಕ್ತಿಯೂ ಸುಸಂಸ್ಕೃತರಿಗೆ ಹೆಚ್ಚು ಅರ್ಥವಾದವೆಂದೇನೋ ಹೇಳಬಹುದು. ಆದರೂ ಜನಸಾಮಾನ್ಯರೂ ಕೂಡ 'ಖುದ್ದು ರಾಜಿ'ಯಿಂದ ಹಣಕೊಟ್ಟು ಅವನ ನಾಟಕ ನೋಡಲು ಹೋಗುತ್ತಿದ್ದರೆಂಬುದೂ ನಿಜ.

ನಮ್ಮಲ್ಲಿ ೩೦-೪೦ ವರ್ಷದ ಕೆಳಗಿದ್ದ ರಂಗಭೂಮಿಯನ್ನು ಎಲಿಸಬೆತ್ ಕಾಲದ ರಂಗಭೂಮಿಗೆ ಸ್ವಲ್ಪ ಮಟ್ಟಿಗೆ ಹೋಲಿಸಬಹುದು. ನಮ್ಮವರಿಗೆ ಹೇಗೋ ಅಲ್ಲಿಯವರಿಗೂ ಹಾಗೆಯೇ ಪಟಾಟೋಪ, ಆರ್ಭಟಗಳು (rant) ಬೇಕಾಗಿದ್ದವು. "ಛಿ ನೀಚನೆ, ದುರಾತ್ಮನೆ, ಕಠೋರ ಖೂಳ ಹೇಡಿಯೆ, ವಿನೀತಭಾವವನ್ನು ತೋರಿ ಮೋಸಗೈಯುತಿರ್ಪೆಯಾ!" ಎಂದು ಮುಂತಾಗಿ ಹಾಡಿದ್ದರೆ ಅವರೂ ಕರತಾಡನ ಮಾಡಿ ಕುಣಿಯುವಂಥವರೇ. ಈ 'ರ್‍ಯಾಂಟ್' ಷೇಕ್ಸ್‌ಪಿಯರನಂಥ ಕವಿಯ ಕೈಚಳ ಕದಿಂದ ಹೃದಯಸ್ಪರ್ಶಿಯಾದ ಕಾವ್ಯವಾಗಿ ಪರಿಣಮಿಸಿದಾಗ ಅವರು ಮತ್ತೂ ಸಂತೋಷಪಟ್ಟಿರಬೇಕು. "ಯಾವುದು 'ರ್‍ಯಾಂಟ್', ಯಾವುದು ಕಾವ್ಯ?" ಎಂದು ಪ್ರಶ್ನೆ ಹಾಕಿದ್ದರೆ ಉತ್ತರಕೊಡುವುದೇನೋ ಅವರಿಗೆ ಕಷ್ಟವಾಗುತ್ತಿತ್ತು, ನಿಜ. ಆದರೂ ಅವರು

Duncan is in his grave;
After life's fitful fever he sleeps well ;
Treason has done his worst · nor steel
nor poison
Malice domestic, foreign levy, nothing,
Can touch him further.

ಎಂಬ ವಾಕ್ಯಗಳನ್ನು ಕೇಳಿದಾಗ "ಇದೇನೋ ಕಾವ್ಯ ಬಂದು ಬಿಟ್ಟಿತು, ನಮಗೆ ಬೇಡ" ಎಂದು ಎದ್ದು ಹೋಗಲಿಲ್ಲ. ಹುಚ್ಚುಕಳೆದ ಲಿಯರ್ ಕಾರ್ಡೀಲಿಯಳನ್ನು ನೋಡುವ ದೃಶ್ಯ ಬಂದಾಗ ಶಿಷ್ಟವೃಂದ ಹೇಗೋ ಹಾಗೆಯೇ ಗ್ಯಾಲರಿಯವರೂ ಕಣ್ಣೀರು ಕರೆದಿರ ಬೇಕು.

ರ್ಯಾಂಟ್ ವಿಷಯದಲ್ಲಿ ಹೇಳಿದ ಮಾತು ನಾಟಕದ ಇತರ ಅಂಶಗಳಿಗೂ ಅನ್ವಯಿಸುತ್ತದೆ. ಜನಸಾಮಾನ್ಯಕ್ಕೆ ನಕಲಿ ಬೇಕಿತ್ತು. 'ಆಗಬಹುದು' ಎಂದು ಷೇಕ್ಸ್‌ಪಿಯರ್ ಅವರಿಗೆ ಒಂದು ಕಡೆ ಲಾನ್ಸ್‌ಲಟ್ ಗಾಬೋವಿನ ನಕಲಿಯನ್ನು ಕೊಟ್ಟ; ಮತ್ತೊಂದು ಕಡೆ ಫಾಲ್ ಸ್ಟಾಫ್, ಲಿಯರ್ ನಾಟಕದಲ್ಲಿ ಬರುವ ವಿದೂಷಕ ಇವರನ್ನೂ ಕೊಟ್ಟ. ಎರಡು ಬಗೆಯ ಹಾಸ್ಯವೂ ಅವರಿಗೆ ರುಚಿಸಿತು. ಸಾಮಾನ್ಯ ಜನಕ್ಕೆ ಭಯಂಕರ ಕೃತ್ಯಗಳ ಪ್ರದರ್ಶನ ಬೇಕು; ಭೂತಪ್ರೇತಾದಿಗಳನ್ನು ರಂಗಸ್ಥಳಕ್ಕೆ ತರಬೇಕು; ರೋಮಾಂಚವೆಬ್ಬಿಸಿ ಮೈನಡುಗಿಸುವಂಥ ದೃಶ್ಯಗಳು ಬೇಕು. ಷೇಕ್ಸ್‌ಪಿಯರ್ ಈ ಬೇಡಿಕೆಯನ್ನೂ ಸಲ್ಲಿಸಿದ: 'ಮ್ಯಾಕ್‌ಬೆತ್'ನ ಮಾಟಗಾತಿಯರು, ಬ್ಯಾಂಕ್ವೋವಿನ ಪ್ರೇತ, 'ಹ್ಯಾಮ್ಲೆಟ್' ನಲ್ಲಿ ನಡೆಯುವ ಕೊಲೆಗಳು—ಇವನ್ನು ನೆನಪಿಗೆ ತಂದುಕೊಂಡರೆ ಸಾಕು. ಜನರು ಬೇಡಿದ್ದು ಮದ್ಯ, ಷೇಕ್ಸ್‌ಪಿಯರ್ ಕೊಟ್ಟದ್ದು ಅಮೃತ. ಅಮೃತವೆಂಬ ಅರಿವು ಅವರಿಗಾಗಲಿ ಬಿಡಲಿ, ಅದು ಅವರಿಗೆ ರುಚಿಸಿತು; ಅದರ ಪ್ರಭಾವಕ್ಕೆ ಅವರು ಕಟ್ಟುಬಿದ್ದರು. ಆದ್ದರಿಂದ ಅವರ ಅಭಿರುಚಿ ತಿದ್ದಲಾರದಷ್ಟು ಕೀಳು ಎನ್ನುವಂತಿಲ್ಲ. ಸೂಕ್ಷ್ಮವಾಗಿ ಪರಿಶೀಲಿಸಿ ನೋಡಿದರೆ ಅವರಿಗೆ ಬೇಕಾಗಿದ್ದದ್ದು ರ್ಯಾಂಟ್, ಕೊಲೆ, ಕೀಳು ದರ್ಜೆಯ ಹಾಸ್ಯ ಮೊದಲಾದುವಲ್ಲ; ರಕ್ತಮಾಂಸಗಳುಳ್ಳ, ಶಕ್ತಿಯುಕ್ತವಾದ, ವರ್ಣಸಂಪತ್ತಿಯೂ ವೈವಿಧ್ಯವೂ ಉಳ್ಳ, ಹೃದಯವನ್ನೆಚ್ಚರಿಸಿ ಕೆರಳಿಸುವಂಥ ನಾಟಕ.

ಈ ಬಗೆಯ ನಾಟಕದಲ್ಲಿ ಸಿಡಿಲಿನ ಶಕ್ತಿಯಿದೆ, ಮಿಂಚಿನ ತೇಜಸ್ಸಿದೆ; ಭಯ, ಕರುಣ, ವೀರ, ಹಾಸ್ಯ--ಎಲ್ಲ ರಸಗಳೂ ಮಿಳಿತವಾಗಿವೆ. ಈ ಮಾತು ಷೇಕ್ಸ್‌ಪಿಯರನ ರುದ್ರನಾಟಕಗಳಿಗೆ ಹೇಗೋ ಹಾಗೆಯೇ ಅವನ 'ಕಾಮೆಡಿ' ಗಳಿಗೂ ಅನ್ವಯಿಸುತ್ತದೆ. ಹಾಸ್ಯ ಚೆಲ್ಲಾಟಗಳಲ್ಲೇ ಮಗ್ನಳಾಗಿರುವಂಥ ರೋಸಲಿಂಡ್ ಇದ್ದಕ್ಕಿದ್ದ ಹಾಗೆಯೇ

down on your knees,
And thank heaven, fasting, for a good man's love.

ಎಂದು ಬುದ್ಧಿವಾದ ಹೇಳುತ್ತಾಳೆ. ಪ್ರೇಕ್ಷಕರ ನಗೆಗೂ ತಿರಸ್ಕಾರಕ್ಕೂ ಮಾತ್ರ ಪಾತ್ರನಾಗಬಹುದಾಗಿದ್ದ ಷೈಲಾಕ್ ತನ್ನ ಪಂಗಡದವರು ಶತಮಾನಗಳ ಕಾಲ ಅನುಭವಿಸಿದ ಸಂಕಟಗಳ ಪ್ರತೀಕವಾಗಿ ನಿಲ್ಲುತ್ತಾನೆ; ಬೆನೆಡಿಕ್ ಎಂಬವನನ್ನು ಕೀಟಲೆಮಾಡಿ ಗೋಳು ಹೊಯ್ದುಕೊಳ್ಳುವ ಬಿಯಾಟ್ರಿಸ್ ಹಠಾತ್ತಾಗಿ ಕೆರಳಿ "Kill Claudio" ಎಂದು ಅವನನ್ನು ಬೇಡುತ್ತಾಳೆ.

ಪ್ರತಿಯೊಬ್ಬ ಮನುಷ್ಯನ ಅಂತರಂಗದಲ್ಲೂ ರಸಗಳಿಗೆ ತಕ್ಕ ಭಾವಗಳು ಹಸಿ ಹಸಿಯಾಗಿ ಇರುತ್ತವೆ. ರಸೋತ್ಪಾದನೆ ಶಕ್ತಿಯುಕ್ತವಾಗಿ ನಡೆಯಬೇಕಾದರೆ ಈ ಹಸಿಯ ಭಾವಗಳು ನಮ್ಮ ಅನುಭವದಲ್ಲಿ ನೆನೆದು ಪ್ರತಿಭೆಯಲ್ಲಿ ಕುದಿದು ಪರಿಪಕ್ವ ವಾಗಬೇಕು. ಈ ಭಾವಗಳು ಹಸಿಯಾಗಿಯಾದರೂ ನಾಟಕದಲ್ಲಿ ಬಂದರೆ ಜನ ಸಾಮಾನ್ಯ ಅದನ್ನು ಮೆಚ್ಚುತ್ತದೆ; ಒಂದಲ್ಲ ಒಂದು ದಿನ ದೊಡ್ಡ ನಾಟಕಕಾರ ಹುಟ್ಟಿ ಅವನ್ನು ರಸವಾಗಿ ಮಾರ್ಪಡಿಸುತ್ತಾನೆ. ಕಿಡ್‌ನಂಥ ನಾಟಕಕಾರರು ಹಸಿಯ ಭಾವ ಗಳನ್ನು ಉಪಯೋಗದಲ್ಲಿಟ್ಟಿದ್ದರೆ ನಂತರ ಅವನ್ನು ಮಾರ್ಪಡಿಸಲು ಷೇಕ್ಸ್‌ಪಿಯರ್ ಬರಬಹುದು.

ಆದರೆ ಶಕ್ತಿಯುತವಾದ ಭಾವಗಳನ್ನೇ ಬಿಟ್ಟುಕೊಟ್ಟು ಸಮಾಜ ಜೀವನದ ಅಥವಾ ವ್ಯಕ್ತಿ ಜೀವನದ ಮೇಲುಪದರದಲ್ಲಿ ಬರುವ ನೊರೆಯಂಥ ಕೋಪತಾಪ ಗಳನ್ನೇ ಹಾಸ್ಯದೃಷ್ಟಿಯಿಂದ ಚಿತ್ರಿಸಿ ತೃಪ್ತರಾದರೆ ನಮ್ಮ ನಾಟಕ ಜನಪ್ರಿಯವಾಗ ಲಾರದು. ಸುಶಿಕ್ಷಿತರಾದವರಿಗೆ ಭಾವಾತಿರೇಕ ಹಿಡಿಸದು; ನಿಜ. ಆದರೆ ಅವರು ಯಾವಾಗಲೂ ನಾಗರಿಕತೆಯ ಮೆರುಗಿನಿಂದ ಹೊಳೆಯುತ್ತಿರಬೇಕೆಂದರೆ ಅವರು ಕೊನೆಗೆ ಭಾವಾನುಭವವನ್ನೇ ಕಳೆದುಕೊಳ್ಳುತ್ತಾರೆ. ಆ ಮೆರುಗು ಗಾಳಿಗಿಂತ ತೆಳು ವಾದದ್ದು; ಅದರ ಕೆಳಗೆ ಚರ್ಮ ಮಾಂಸಗಳಿವೆ; ಕಪಿಯ ರಕ್ತ, ಹುಲಿಯ ರಕ್ತಗ ಳಿವೆ. ನಾಟಕಕಾರ ಇದನ್ನು ಗಮನಿಸಬೇಕು. ಸಾಮಾಜಿಕ ಜೀವನದಲ್ಲಿ ಸಾಧಾರಣ ವಾಗಿ ನಾವು ಇದನ್ನು ಮುಚ್ಚಿ ನಾಗರಿಕತೆಯ ಮುಖವಾಡ ಹಾಕಿಕೊಳ್ಳುತ್ತೇವೆ. ಕೋಪತಾಪಗಳನ್ನು ಒಂದು ಮಿತಿಯಲ್ಲಿ ಪ್ರದರ್ಶಿಸುತ್ತೇವೆ. ಆದ್ದರಿಂದ ಸಾಮಾಜಿಕ ನಾಟಕ ಬರೆಯುವವರು ಬಹುಮಟ್ಟಿಗೆ ಜೀವನದ ಮೇಲುಪದರವನ್ನು ಮಾತ್ರ ಚಿತ್ರಿ ಸುತ್ತಾರೆ. ಈ ನಾಟಕದಲ್ಲಿ ರಚನಾಸಾಮರ್ಥ್ಯವಿರಬಹುದು, ಪಾತ್ರಸೃಷ್ಟಿಯಲ್ಲಿ ಸಮ ತೂಕವಿರಬಹುದು, ಶೈಲಿಯಲ್ಲಿ ಸಹಜತೆಯಿರಬಹುದು. ಆದರೆ ಶಕ್ತಿಯೆಲ್ಲಿ? ವಿಮ ರ್ಶಕನೊಬ್ಬ ಯಾರ ಶೈಲಿಯನ್ನೋ ಹೊಗಳುತ್ತಾ "ಅದರಲ್ಲಿ ಹಿಡಿತವಿದೆ, ಮಿತಿ ಯಿದೆ, ಭಾಷೆಯ ಮೇಲೆ ಪ್ರಭುತ್ವ ಕಾಣುತ್ತದೆ" ಎಂದನಂತೆ. ಅದನ್ನು ಕೇಳಿದ ಸಾಮಾನ್ಯಮಾನವನೊಬ್ಬ, "I see the bridle and the curb, but where's the 'bl—y hoss?" ಎಂದನಂತೆ. ನಮ್ಮ ಸಾಮಾಜಿಕ ನಾಟಕದ ವಿಷಯ ದಲ್ಲೂ ಈ ಪ್ರಶ್ನೆಯನ್ನು ಕೇಳಬೇಕೆನ್ನಿಸುತ್ತದೆ. ಜನಸಾಮಾನ್ಯಕ್ಕೆ ಈ **'bl—y hoss'** ಇರುವ ನಾಟಕ ರುಚಿಸುತ್ತದೆ. ಅದನ್ನುಳಿಸಿಕೊಂಡು ಅದರ ಮೇಲೆ ಪ್ರತಿಭೆಯ ಗಾರುಡಿಯನ್ನೆಷ್ಟುಬೇಕಾದರೂ ಪ್ರಯೋಗಿಸಬಹುದು.

ಷೇಕ್ಸ್‌ಪಿಯರ್ ತನ್ನ ಪ್ರೇಕ್ಷಕರ ಅಭಿರುಚಿಯನ್ನು ತಿರಸ್ಕಾರ ದೃಷ್ಟಿಯಿಂದ ನೋಡದೆ ಅವರಿಗೆ ಪ್ರಿಯವಾದ ಅಂಶಗಳನ್ನು ಉಪಯೋಗಿಸಿಕೊಂಡದ್ದರಿಂದ ಅವನ ನಾಟಕ ದೇಶವೆಲ್ಲದರ ಸ್ವತ್ತಾಯಿತು. ಇತ್ತ ಅವನ ಕಲೆ ಸೊರಗಿ ಬಡವಾಗುವುದಕ್ಕೆ ಬದಲು ಅದರ ನಾಳ ನಾಳದಲ್ಲಿಯೂ ಜೀವನದ ಅಮೃತ ವಾಹಿನಿ ಹರಿಯಿತು; ಅದು

ತನ್ನ ಗಾಢಾಶ್ಲೇಷದಲ್ಲಿ ಜೀವನವೆಲ್ಲವನ್ನೂ ತುಂಬಿಕೊಂಡಿತು. ಜನಸಾಮಾನ್ಯವನ್ನು ಕಡೆಗಣಿಸಿ 'ನಾವು ಸುಸಂಸ್ಕೃತರು, ಈ ಕುರಿಮಂದೆಯಂತಲ್ಲ' ಎಂದುಕೊಂಡರೆ ನಮಗೂ ಅವರಿಗೂ ಇರಬೇಕಾದ ಭ್ರಾತೃಭಾವವನ್ನು ಕಳೆದುಕೊಳ್ಳುತ್ತೇವೆ, ನಮ್ರತೆಯನ್ನು ಕಳೆದುಕೊಳ್ಳುತ್ತೇವೆ, ಎಲ್ಲಕ್ಕಿಂತಲೂ ಮುಖ್ಯವಾಗಿ ಜೀವನದ ಸಂಪರ್ಕವನ್ನು ಕಳೆದುಕೊಳ್ಳುತ್ತೇವೆ. ನಮಗೆ ಅವರ ಜೀವನದಲ್ಲೂ ಅಭಿರುಚಿಯಲ್ಲೂ ಆಸಕ್ತಿಯಿಲ್ಲದಿದ್ದರೆ ಅವರಿಗೆ ನಮ್ಮ ನಾಟಕದಲ್ಲಿ ಆಸಕ್ತಿಯಿಲ್ಲ. ಕಲೆಗಾರನಿಂದ ಜನಕ್ಕೂ ಜನರಿಂದ ಕಲೆಗಾರನಿಗೂ ಹರಿಯುತ್ತಿರುವ ಸಹಾನುಭೂತಿಯೊಂದಿರಬೇಕು. ಅದಿಲ್ಲದಿದ್ದರೆ ಇಬ್ಬರಿಗೂ ನಷ್ಟ. 'ಆ ಪರಿತೋಷಾದ್ವಿದುಷಾಂ ನ ಸಾಧು ಮನ್ಯೇ ಪ್ರಯೋಗವಿಜ್ಞಾನಂ' ಎಂಬ ಮಾತು ಒಪ್ಪತಕ್ಕದ್ದೇ. ಆದರೂ ವಿದ್ವಾಂಸರಿಗೆ ಮಾತ್ರ ಸಂತೋಷವಾಗುವಂತಿದ್ದರೆ ಸಾಲದು. ಈ ಶ್ಲೋಕದ ಎರಡನೆಯ ಪಂಕ್ತಿಯನ್ನು ವಿದ್ವಾಂಸರ ಮೇಲೆಯೇ ಪ್ರಯೋಗಿಸಬಹುದು · 'ಬಲವದಪಿ ಶಿಕ್ಷಿತಾನಾಂ ಆತ್ಮನ್ಯಪ್ರತ್ಯಯಂ ಚೇತಃ'

ನಾವೆಲ್ಲರೂ ಹೆಜ್ಜೆ ಹೆಜ್ಜೆಗೂ ಉಪಯೋಗಿಸುವ 'ಜೀವನ' ಎಂಬ ಪದವನ್ನು ಒಂದು ಘಳಿಗೆ ಪರಿಶೀಲಿಸುವುದೊಳ್ಳೆಯದು. ಆ ಪದ ಕಿವಿಗೆ ಬಿದ್ದೊಡನೆ "ಯಾರ ಜೀವನ, ಯಾವ ಕಾಲದ ಜೀವನ, ಯಾವ ಮಟ್ಟದ ಜೀವನ?" ಎಂದು ನಾಲ್ಕಾರು ಪ್ರಶ್ನೆಗಳನ್ನು ಕೇಳಬೇಕೆನ್ನಿಸುತ್ತದೆ. ರೊಮ್ಯಾಂಟಿಕ್ ಕವಿಗಳು ಸಾಹಿತ್ಯವನ್ನು ಜೀವನದ ಹತ್ತಿರ ತರಬೇಕೆಂದೇ ಹೊರಟವರು. ವಾಸ್ತವಿಕರ ಧ್ವಜದ ಮೇಲೆ ಆ ಮಾತನ್ನೇ ಉಲ್ಲೇಖಿಸಿದ್ದಾರೆ. ಇವೆರಡು 'ಜೀವನ' ಗಳೂ ಒಂದೇ ಅಥವಾ ಬೇರೆ ಬೇರೆಯೆ? ರೊಮ್ಯಾಂಟಿಕ್ ಪಂಥದವನಲ್ಲವೆನ್ನಬಹುದಾದ ಗೋಲ್ಡ್‌ಸ್ಮಿತ್ 'She stoops to conquer' ಎಂಬ ನಾಟಕವನ್ನು ಬರೆದಾಗ ಅವನು ಇಂಗ್ಲೆಂಡಿನ ಒಳ ಪ್ರಾಂತದ ಮಧ್ಯಮ ವರ್ಗದ ಸಮಾಜವನ್ನು ಹಾಸ್ಯದೃಷ್ಟಿಯಿಂದ ಚಿತ್ರಿಸಲು ಹೊರಟಂತೆ ತೋರುತ್ತದೆ. ಆ ನಾಟಕದಲ್ಲಿ ಬರುವ ಟೋನಿ ಲಂಪ್‌ಕಿನ್ ಶುದ್ಧ ಹಸಿಯ ಮನುಷ್ಯ, ಅನಾಗರಿಕ. ಆದರೆ ನಾಟಕವನ್ನು ಬಹುಮಟ್ಟಿಗೆ ಅವನೇ ಕದ್ದುಬಿಟ್ಟಿದ್ದಾನೆ. ನಾಗರಿಕ ಜೀವನಕ್ಕಿಂತ ಅವನ 'ಜೀವನ'ವೇ ಮುಖ್ಯವಾದಂತಾಗಿದೆ. ಹೇಮಕೂಟದಲ್ಲಿದ್ದ ಶಕುಂತಲೆ 'ವಸನೇ ಪರಿಧೂಸರೇ ವಸಾನಾ ನಿಯಮಕ್ಷಾಮಮುಖೀ ಧೃತೈಕವೇಣಿಃ' ಆಗಿದ್ದಳಂತೆ! ದಿನದಿನದ ಜೀವನದಲ್ಲಿ ಪತಿವಿರಹಿತರಾದ ಸ್ತ್ರೀಯರೆಲ್ಲ ಮಾಸಲು ಬಣ್ಣದ ವಸ್ತ್ರಗಳನ್ನು ಧರಿಸಿ ಉಪವಾಸಮಾಡುತ್ತಿರುತ್ತಾರೆಯೆ? ಕ್ಲಿಯೋಪಾತ್ರ ಆತ್ಮಹತ್ಯೆ ಮಾಡಿಕೊಳ್ಳುವುದಕ್ಕೆ ಮುಂಚೆ

> Give me my robe, put on my crown; I have
> Immortal longings in me: now no more,
> The juice of Egypt's grape shall moist this lip:
>
> * * * * *
>
> I am fire and air; my other elements
> I give to baser life.

ಎನ್ನುತ್ತಾಳೆ. ದಿನದಿನದ ಜೀವನದಲ್ಲಿ ಇಂಥ ಮಾತುಗಳು ಕೇಳಿಬಂದಾವೆ ? ದುರ್ಯೋಧನನಂತೆ, ಕರ್ಣನಂತೆ, ಭೀಮನಂತೆ, ಜೀವನದಲ್ಲಿ ಎಷ್ಟು ಜನ ಮಾತಾಡುತ್ತಾರೆ, ವರ್ತಿಸುತ್ತಾರೆ? (ಮತ್ತೊಂದು ದೃಷ್ಟಿಯಿಂದ ನೋಡಿದರೆ ಅವರೆಲ್ಲರೂ ನಮ್ಮಂತೆಯೇ ವರ್ತಿಸುತ್ತಿದ್ದಾರೆ!) ನಮ್ಮ ಜೀವನದಲ್ಲಿ ಅಂಥ ಶಕ್ತಿಯುಕ್ತವಾದ ಮಾತೂ ವರ್ತನೆಯೂ ಕಾಣುವುದಿಲ್ಲವೆಂದರೆ ಅದಕ್ಕೆ ಕಾರಣ ನಾವು ಸುಸಂಸ್ಕೃತರಾಗಿರುವುದೋ ಅಥವಾ ನಮ್ಮಲ್ಲಿ ಭಾವಾವೇಶವೇ ಇಲ್ಲದಿರುವುದೋ? ನಮ್ಮ ಮನಸ್ಸು ದುರ್ಯೋಧನನ ಛಲಕ್ಕೆ, ಕರ್ಣನ ತ್ಯಾಗಕ್ಕೆ, ಭೀಮನ ರೌದ್ರಕ್ಕೆ, ಹ್ಯಾಮ್ಲೆಟನ ವಿಶ್ವವ್ಯಾಪಿಯಾದ ಪ್ರತಿಭಾ ಶಕ್ತಿಗೆ, ಕಬೀರದಾಸನ ಭಕ್ತಿಗೆ, ರೋಮಿಯೋವಿನ ಪ್ರೇಮಕ್ಕೆ, ಏರಬಲ್ಲುದೆ? ನಮ್ಮಲ್ಲಿ ರಕ್ತ ಸಾಕಾದಷ್ಟು ಬಿಸಿಯಾಗಿಲ್ಲವೇನೊ; ಅದನ್ನು ವಾಸ್ತವಿಕತೆಯ ರೆಫ್ರಿಜಿರೇಟರಿನಲ್ಲಿಟ್ಟು ತಣ್ಣಗೆ ಮಾಡಿಕೊಂಡಿದ್ದೇವೆಯೇನೊ. ಮಹಾಕವಿಗಳ ಕೃತಿಗಳಲ್ಲಿ ಬರುವ ವ್ಯಕ್ತಿಗಳ ಮಾತು, ಅವರ ವರ್ತನೆ, ನಮ್ಮ ಜೀವನಕ್ಕೆ ವಾಸ್ತವಿಕವಲ್ಲದಿದ್ದರೂ ಅವರ ಜೀವನಕ್ಕೆ ವಾಸ್ತವಿಕವೇ. ನಾವು ನಮ್ಮ ಭಾವಜೀವನವನ್ನು ಹದಗೊಳಿಸಿ ಪರಿಪಕ್ವಮಾಡಿಕೊಳ್ಳುವ ಬದಲು ಅದಕ್ಕೆ ದಹನಕ್ರಿಯೆ ನಡಸಿದ್ದೇವೆಯೆ ಎಂಬ ಸಂದೇಹ ಬರುತ್ತದೆ.

ಹಾಗಾದರೆ ನಾವೆಲ್ಲರೂ ಹೆಂಡತಿಯರ ಮುಡಿಕಟ್ಟಬೇಕಾದರೆ ಕೇಶರಂಜನ ತೈಲಕ್ಕೆ ಬದಲಾಗಿ ಶತ್ರುಗಳ ರಕ್ತವನ್ನು ಲೇಪಿಸಬೇಕೆ? ಆ ಬಗೆಯ ವರ್ತನೆ ನಮ್ಮ ಸಮಾಜದಲ್ಲಿ ಹೇಗೋ ಹಾಗೇ ಮಹಾಭಾರತದ ಆವರಣದಲ್ಲಿಯೂ ಅನಾಗರಿಕವೇ. ಆದರೆ ನಾವು ಆ ಬಗೆಯ ಉದ್ವೇಗವನ್ನು ಅರ್ಥಮಾಡಿಕೊಳ್ಳುವಷ್ಟಾದರೂ ತ್ರಾಣವುಳ್ಳವರಾಗಬೇಕು. ಆ ಅನುಭವಕ್ಕೆ ಬೇಕಾದ ಶಕ್ತಿ ನಮ್ಮಲ್ಲಿದ್ದರೆ ಅದನ್ನು ಎಂದಾದರೂ ತಾಮಸ ರಾಜಸಗಳಿಗೆ ಬದಲಾಗಿ ಸಾತ್ವಿಕ ಸನ್ನಿವೇಶಗಳಲ್ಲಿ ಉಪಯೋಗಿಸಿಕೊಳ್ಳಬಹುದು. ನಮ್ಮ ಸಾಮಾಜಿಕ ನಾಟಕವು ಹೃದಯದ ಅಂತರಾಳದಲ್ಲಿ ನಡೆಯುವ ವಿಚಿತ್ರವಾದ ಮನಕುಮನಕಾದ ರುದ್ರ, ಲಲಿತ, ಭೀಭತ್ಸ ವ್ಯಾಪಾರಗಳನ್ನೂ ಅಲ್ಲಿ ರೂಪುಗೊಳ್ಳುವ ಭಯಾನಕ ಚಿತ್ರಗಳನ್ನೂ ಬಿಡಿಸುವ ಯತ್ನಮಾಡಿಲ್ಲ. ಹೇಗೆ ತಾನೆ ಮಾಡೀತು? 'ಜೀವನ' ಎಂಬ ಪದಕ್ಕೆ ಅದು ಕೊಟ್ಟಿರುವ ಅರ್ಥವೇ ಬೇರೆ. ಮಹಾಕವಿಗಳೆಲ್ಲರೂ ಈ ಕೆಲಸ ಮಾಡಿದ್ದಾರೆ. ಅವರು ಚಿತ್ರಿಸಿರುವುದೂ ಜೀವನವೇ. ಅನೀಮಿಯಾದಿಂದ ನರಳುತ್ತಿರುವವರು ತಮ್ಮ ನರಗಳನ್ನು ಆ ಜೀವನಕ್ಕೆ ಶ್ರುತಿಮಾಡಿಕೊಳ್ಳಲಾರರು, ಅಷ್ಟೆ. ವೀಣೆಯ ತಂತಿಯ ದಿನದಿನದ ಜೀವನದಲ್ಲಿ ನಾದವಿಲ್ಲ; ಶ್ರುತಿ ಮಾಡಿದ ಮೇಲೆಯೇ ಅದಕ್ಕೆ ನಾದ, ಮಾಧುರ್ಯ, ಶಕ್ತಿ ಬರಬೇಕಾದರೆ.

ಸಾಮಾಜಿಕ ನಾಟಕದ ವಿಷಯದಲ್ಲಿ ಆಡಿರುವ ಮಾತು ಕಠಿನವೇ ಆಯಿತೇನೊ. ಅದರಿಂದ ಪ್ರಯೋಜನವೂ ಆಗಿದೆಯೆಂದು ಮೇಲೆ ಕಾಣಿಸಿದೆ. ಹಳೆಯ ನಾಟಕಗಳನ್ನು ಅವು ಇದ್ದ ರೀತಿಯಲ್ಲೇ ಇಂದು ಆಡಿದರೆ ನೋಡುವುದು ಕಷ್ಟವೆಂದೂ ಒಪ್ಪಬೇಕು. ಸಾಹಿತ್ಯ ಚರಿತ್ರೆಯನ್ನು ಬಲ್ಲವರಿಗೆ ಈ ವಾಸ್ತವಿಕತೆಯ ಕೂಗು ಆಗಿಂದಾಗ ಬರಬೇ

ಕಾದ್ದು ಅವಶ್ಯಕವೆಂದೂ ಮನವರಿಕೆಯಾಗುತ್ತದೆ. ಮೇಲೆ ವರ್ಣಿಸಿರುವ ನಾಟಕವು ಅನುಭವವನ್ನು ಚಿತ್ರಿಸದೆ ಹಿಂದಿನ ಕವಿಗಳ ಪಾತ್ರಸೃಷ್ಟಿಗೂ ಭಾಷೆಗೂ ಭಾವಾನು ಭವಕ್ಕೂ ಎಂದು ಪ್ರತಿಧ್ವನಿ ಮಾತ್ರ ಕೊಡುತ್ತದೆಯೋ ಅಂದು ಅದರ ಶಕ್ತಿ ಕುಂದು ತ್ತದೆ. ಆ ಸಂದರ್ಭದಲ್ಲಿ ವಾಸ್ತವಿಕ ಕ್ರಾಂತಿ ಬರದಿದ್ದರೆ ಸಾಹಿತ್ಯಕ್ಕೆ ನಷ್ಟ. ಆದರೆ ಕ್ರಾಂತಿ ಬಂದು ನಮ್ಮ ಗಮನವನ್ನು ಅನುಕರಣೆಯಿಂದ ಅನುಭವದ ಕಡೆಗೆ ಸೆಳೆದ ಮೇಲೆ ನಾವು ಮತ್ತೆ ಮೇಲ್ಮಟ್ಟಕ್ಕೆ ಏರಬೇಕು. ಬಿ. ಎಂ. ಶ್ರೀಕಂಠಯ್ಯನವರು, ಶ್ರೀಗಳಾದ ಮಾಸ್ತಿ, ಪುಟ್ಟಪ್ಪ, ಕಾರಂತ, ಗೋಕಾಕ, ಜಹಗೀರ್‌ದಾರ್, ವಿ. ಸೀ. ಮೊದಲಾದವರು ಈ ಪ್ರಯತ್ನವನ್ನು ಬೇರೆಬೇರೆ ರೀತಿಯಲ್ಲಿ ಮಾಡಿದ್ದಾರೆ. ಆದರೆ ಬೇರೆ ಕಾರಣಗಳಿಂದಾಗಿ ಈ ನಾಟಕಗಳು ಜನಸಾಮಾನ್ಯದ ರಂಗಭೂಮಿಗೆ ಬಂದಿಲ್ಲ. ಕೈಲಾಸಂ ಕೂಡ ಒಂದು ಕಡೆ ಕರ್ಣಾಟಕ ಪ್ರಹಸನ ಪಿತಾಮಹರಾದರೆ ಮತ್ತೊಂದು ಕಡೆ 'ಪರ್ಪಸ್', 'ಕರ್ಣ' ನಾಟಕಗಳನ್ನು ಬರೆದರು. ಈ ನಾಟಕಗಳನ್ನೂ ಅವರು ಕನ್ನಡದಲ್ಲೇ ಬರೆದಿದ್ದರೆ, ಹಾಸ್ಯ ನಾಟಕಕ್ಕೆ ತಕ್ಕ ಶೈಲಿಯನ್ನು ಸೃಷ್ಟಿಸಲು ಶ್ರಮಿಸಿ ದಂತೆ ಆ ನಾಟಕಗಳಿಗೂ ಸಹಜವಾದ ಕನ್ನಡ ಗದ್ಯಶೈಲಿಯನ್ನು ಸೃಷ್ಟಿಸಿದ್ದರೆ, ನಮ್ಮ ನಾಟಕಕ್ಕೆ ಅಭ್ಯುದಯದ ದಾರಿ ತೋರಿಸಿದಂತಾಗುತ್ತಿತ್ತೇನೊ.

ಎಲ್ಲರೂ ಪೌರಾಣಿಕ ಅಥವಾ ರಮ್ಯ ನಾಟಕಗಳನ್ನೇ ಬರೆಯಬೇಕೆಂದು ಈ ವಾದದ ತಾತ್ಪರ್ಯವಲ್ಲ. ನಾಟಕದ ವಸ್ತು ಪೌರಾಣಿಕವಾಗಬಹುದು, ರಮ್ಯ ಕಥೆ ಯಾಗಬಹುದು, ಸಾಮಾಜಿಕ ವಿಷಯವಾದರೂ ಆಗಬಹುದು. 'ಮೃಚ್ಛಕಟಿಕ' ದಲ್ಲಿ ಸಾಮಾಜಿಕ ವಿಷಯವಿದೆ; ಆದರೂ ನಮ್ಮ ಸಾಮಾಜಿಕ ನಾಟಕಗಳಲ್ಲಿಲ್ಲದ ಕಳೆ ಅದರಲ್ಲಿದೆ. ಮೇಲಿನ ವಾದದ ಸಾರಾಂಶವೆಂದರೆ ಮೊದಲನೆಯದಾಗಿ : ನಾಟಕಕಾರ ಜನಸಾಮಾನ್ಯದ ಅಭಿರುಚಿಯನ್ನು ಕಡೆಗಣಿಸದೆ ಅದಕ್ಕೆ ಪ್ರಿಯವಾದ ಅಂಶಗಳನ್ನು ತನ್ನ ಕಲೆಯ 'ಕಚ್ಚಾಮಾಲು' ಎಂದು ಭಾವಿಸಿದರೆ ನಾಟಕದ ಹಿತಸಾಧನೆಗೆ ಸಹಾ ಯವಾದೀತು; ಎರಡನೆಯದಾಗಿ, ಮಾನವರಲ್ಲರಿಗೂ ಸಹಜವಾದ ಅಂತರಂಗದ ಪ್ರವೃತ್ತಿಗಳನ್ನು ಪ್ರದರ್ಶಿಸಬೇಕು—ಇಲ್ಲದಿದ್ದರೆ ಜೀವನದ ಅಲೆಗಳ ತುದಿಯಲ್ಲಿ ಮಾತ್ರ ಕುಪ್ಪಳಿಸಿದಂತಾಗುತ್ತದೆ; ಹಾಗೆ ಮಾಡಿದ್ದರಿಂದ ನಮಗೆ ಮುತ್ತು ಸಿಕ್ಕುವು ದಿಲ್ಲ. ಈ ಪ್ರವೃತ್ತಿಗಳು ಒಂದೊಂದು ಕಾಲದಲ್ಲೂ ಆಗಿನ ಸಮಾಜ ಸ್ಥಿತಿಗೂ ನಾಗರಿ ಕತೆಯ ಸ್ವರೂಪಕ್ಕೂ ತಕ್ಕಂತೆ ಹೊರಪಡುತ್ತವೆ. ಅವುಗಳ ಬಾಹ್ಯರೂಪ ಎಷ್ಟೇ ಬದಲಾಯಿಸಲಿ, ಅವುಗಳೇನೋ ಶಾಶ್ವತ. ಉನ್ನತವರ್ಗದ ನಾಟಕಕಾರ ಬಾಹ್ಯ ರೂಪವನ್ನು ಚಿತ್ರಿಸುವಾಗ ಅದನ್ನು ಭೇದಿಸಿಕೊಂಡು ಒಳಗೆ ಅಡಗಿರುವ ಆದಿ ಅಂತ್ಯಗ ಳಿಲ್ಲದ ಮಾನವತೆಯ ಅರಿವನ್ನೂ ನಮಗೆ ಕೊಡಬೇಕು. ಈ ಮಾತು ರುದ್ರನಾಟಕ ಹಾಸ್ಯನಾಟಕಗಳೆರಡಕ್ಕೂ ಅನ್ವಯಿಸುತ್ತದೆ.

ಇದನ್ನು ಬಿಟ್ಟು ಕೇವಲ ಆಧುನಿಕ ಸಮಾಜದ ಹೊರಮೈಯ ಚಿತ್ರಣಕ್ಕೂ ಸಮಾಜ ಸುಧಾರಣೆಗೂ ಹೊರಟರೆ ನಾವು ಒಂದು ಘಳಿಗೆಯ ಮನೋರಂಜನೆಯ

ನ್ನೇನೋ ಸಾಧಿಸಬಹುದು—ಆ ಮನೋರಂಜನೆಯನ್ನೂ ನಾವು ತಿರಸ್ಕರಿಸಬೇಕಾದ್ದಿಲ್ಲ. ಆದರೆ ಅಷ್ಟರಲ್ಲೇ ತೃಪ್ತರಾದರೆ ನಮ್ಮ ನಾಟಕ ಶಕ್ತಿಹೀನವಾಗುತ್ತದೆ; ಆದ್ದರಿಂದ ಸಮಾಜ ಸುಧಾರಣೆಯ ಉದ್ದೇಶವೂ ನೆರವೇರುವುದಿಲ್ಲ. ಆಧುನಿಕ ಪ್ರಪಂಚವನ್ನೂ ಸಾಮಾಜಿಕ ಜೀವನವನ್ನೂ ನಾಟಕದಲ್ಲಿ ಚಿತ್ರಿಸಬೇಕು. ಅದಕ್ಕೆ ಕಾರಣ—ಪ್ರಪಂಚದಲ್ಲಿ ಹೊಸ ಯೋಚನೆಗಳು, ಸನ್ನಿವೇಶಗಳು, ಹೊಸ ನಾಗರಿಕತೆ ತಂದ ಅನುಭವಗಳು—ಎಲ್ಲವನ್ನೂ ಸಾಹಿತ್ಯವು ಗಮನಿಸಿ ಅವುಗಳನ್ನೊಳಗೊಂಡ ಮಾನಸಿಕ ವ್ಯವಸ್ಥೆಯನ್ನು ರೂಪಿಸಲು ನೆರವಾಗಬೇಕು, ಆ ಅನುಭವಗಳಿಗೆ ಮಾನವನ ಪ್ರತಿಕ್ರಿಯೆ ಯೇನೆಂಬುದನ್ನು ತೋರಿಸಬೇಕು. ಅದರ ಗುರಿ ಸುಧಾರಣೆಯಲ್ಲ, ಅನುಭವದ ಚಿತ್ರಣ. ಸುಧಾರಣೆ ನಡೆದರೆ ಅದರ ಪರಿಣಾಮವಾಗಿ ನಡೆಯಬೇಕು

"ಒಟ್ಟಿನಲ್ಲಿ ನೀವು ಷೇಕ್ಸ್‌ಪಿಯರ್ ಕಾಳಿದಾಸರಂಥ ನಾಟಕಕಾರರು ಬೇಕೆನ್ನುತ್ತೀರಿ" ಎನ್ನಬಹುದು. ಹೌದು, ಅಂಥವರು ಬೇಕೆಂದು ಅಂಗಲಾಚಿ ಬೇಡಿಯೇನು. ಆದರೆ ಅಂಥವರನ್ನು ಹೇಳಿ ಮಾಡಿಸಲಾಗುವುದಿಲ್ಲ. ಅವರ ದಾರಿಯನ್ನು ಹಿಡಿಯುವುದು ಉತ್ತಮವೆಂದು ಮಾತ್ರ ಇಲ್ಲ ಸೂಚಿಸಬಹುದು.

ಎ. ಎನ್. ಮೂರ್ತಿರಾವ್

# ತಾವರೆ

ತಾವರೆ ಭಾರತದ ಸಂಸ್ಕೃತಿಯ ಪ್ರತೀಕವಾಗಿದೆ. ಭಾರತದ ಸಾಹಿತ್ಯ, ಧರ್ಮ ಕಲೆಗಳಲ್ಲಿ ಇದಕ್ಕೆ ಉತ್ಕೃಷ್ಟ ಸ್ಥಾನ ಸಂದಿದೆ. ಪುರಾಣ ಪುಣ್ಯ ಕಥೆಗಳಲ್ಲಿ, ಪೂಜೆ ಪುರಸ್ಕಾರಗಳಲ್ಲಿ ಈ ಪುಷ್ಪಕ್ಕೆ ಅದ್ವಿತೀಯ ಸ್ಥಾನವನ್ನು ಕೊಟ್ಟಿದೆ. ವಿಷ್ಣು ದೇವತೆಯ ಪತ್ನಿಗೆ ಪದ್ಮಾ ಎಂದೇ ಹೆಸರು. ಅನಂತಶಾಯಿಯಾದ ವಿಷ್ಣುವಿನ ನಾಭಿಕಮಲ ದಿಂದ ಸೃಷ್ಟಿಕರ್ತನಾದ ಬ್ರಹ್ಮ ಹುಟ್ಟಿದನೆಂಬುದು ಪುರಾಣಪ್ರಸಿದ್ಧವಾಗಿದೆ. ಚತು ರ್ಮುಖ ಬ್ರಹ್ಮ ಅರಳಿದ ತಾವರೆಯ ಮೇಲೆ ಕುಳಿತಿರುವುದು ಎಲ್ಲರಿಗೂ ತಿಳಿದ ಅಂಶವೇ.

ಯಾವ ದೇವತೆಗೇ ಆಗಲಿ ಒಂದಲ್ಲ ಒಂದು ರೀತಿಯಲ್ಲಿ ಕಮಲದ ಸಂಬಂಧ ವಿಲ್ಲದೆ ಇಲ್ಲ. ಮಹಾಕಾಳಿಯ ಚಿತ್ರವನ್ನೂ ತೆಗೆದುಕೊಳ್ಳೋಣ. ಕಾಳರಾತ್ರಿಯಂತೆ ಈ ದೇವತೆ ಅಚ್ಚ ಕಪ್ಪುವರ್ಣದವಳು. ಪುಷ್ಪಮಾಲೆಯ ಬದಲು ಮಾನವ ರುಂಡಗಳ ಮಾಲೆಗಳನ್ನು ಧರಿಸಿರುವವಳು. ಈಕೆಗೂ ವಿಷ್ಣುವಿನಂತೆ ನಾಲ್ಕು ಕೈಗಳುಂಟು. ಒಂದು ಬಲಗೈಯಲ್ಲಿ ಕತ್ತಿಯನ್ನು ಹಿಡಿದಿದ್ದಾಳೆ. ಅಜ್ಞಾನ ಅವಿದ್ಯೆಗಳನ್ನು ಛೇದಿಸುವ ಅಸಿ ಧಾರೆ. ಅಹಂ, ಮಮ ಎನ್ನುವ ಮಾಯಾಪಾಶಗಳನ್ನು ಕತ್ತರಿಸುವ ಕತ್ತಿ. ಇನ್ನೊಂದು ಬಲಗೈಯಲ್ಲಿ ಕತ್ತರಿ ಹಿಡಿದಿದ್ದಾಳೆ. ಜೀವತಂತುವನ್ನು ಕತ್ತರಿಸುವ ಕತ್ತರಿ. ಒಂದು ಎಡಗೈಯಲ್ಲಿ ಪೂರ್ಣಕುಂಭವನ್ನು ಹಿಡಿದಿದ್ದಾಳೆ; ಮತ್ತೊಂದು ಎಡಗೈಯ್ಯಲ್ಲಿ ಕಮಲ ಪುಷ್ಪ. ಬಲಗೈಯ್ಯಲ್ಲಿರುವ ಆಯುಧಗಳು ಲಯ ಸೂಚಕವಾದವು. ಆದರೆ ಲಯ, ನವ ಸೃಷ್ಟಿಯ ಪೀಠಿಕೆ ಮಾತ್ರ. ಎಡಗೈಯ್ಯಲ್ಲಿ ಹಿಡಿದಿರುವ ಪೂರ್ಣಕುಂಭ ಮತ್ತು ಅರಳುತ್ತಿರುವ ತಾವರೆ ನೂತನ ಪ್ರಫುಲ್ಲಿತ ಜೀವಪುಷ್ಪ. ಕಡುಕಪ್ಪಾದ ಕಾಳಿಯ ಕೈಯಲ್ಲಿ ಶ್ವೇತ ಪದ್ಮವಿರುವುದು ಲಯದಿಂದ ಸೃಷ್ಟಿ ಎಂಬುದನ್ನು ಸೂಚಿಸುತ್ತದೆ. ಅಶುಭದಿಂದ ಶುಭಕ್ಕೆ ಅಮಂಗಳದಿಂದ ಮಂಗಳಕ್ಕೆ ಮೃತ್ಯುವಿನಿಂದ ಅಮೃತತ್ವದ ಕಡೆಗೆ ನಮ್ಮನ್ನು ಒಯ್ಯುತ್ತದೆ. ಲಯವೇ ಕಟ್ಟಕಡೆಯ ಸ್ಥಿತಿಯಲ್ಲ. ಕೆಸರಿನಿಂದ ಕಮಲ ಹುಟ್ಟುವಂತೆ, ಅಶುಭವಾದ ಲಯದಿಂದ ಶುಭ ಸೃಷ್ಟಿಯಾಗುತ್ತದೆ. ಅಪರ ಕರ್ಮ ಮುಗಿದು ಶುಭಸ್ವೀಕಾರ ಹೊಸ ಚೇತನಕ್ಕೆ ಸ್ಫೂರ್ತಿಕೊಡುತ್ತದೆ. ಮಹಾಕಾಳಿ ಭಯಂಕರಿ. ಆದರೆ ಅವಳ ಕೈಯ್ಯಲ್ಲಿ ಹಿಡಿದಿರುವ ಶ್ವೇತ ಪದ್ಮ ಭಯನಿವಾರಕ ಶುಭ ದಾಯಕ ಚಿಹ್ನೆ. ಮಹಾಕಾಳಿ ನಿಗ್ರಹಾನುಗ್ರಹೆ. ಅವಳ ಅನುಗ್ರಹ ಚಿಹ್ನೆ ಶ್ವೇತ ಪದ್ಮ.

ಕೇವಲ ಅನುಗ್ರಹದ ಮೂರ್ತಸ್ವರೂಪವಾದ ದೇವತೆ ಎಂದರೆ ಲಕ್ಷ್ಮಿ. ಈ ದೇವತೆಗೆ ಶ್ರೀಎಂದೂ ಹೆಸರು. ಇವಳು ಹರಿಪ್ರಿಯೆ. ಪದ್ಮಾಲಯಾ, ಪದ್ಮಾ, ಕಮಲಾ ಎಂಬೆಲ್ಲ ಹೆಸರುಗಳೂ ಶ್ರೀಗೆ ಸಂದ ಹೆಸರುಗಳಾಗಿವೆ. ಈ ದೇವತೆ ಪದ್ಮದಲ್ಲಿ ಹುಟ್ಟಿ ದವಳು. ಆದ್ದರಿಂದ ಪದ್ಮಸಂಭವಾ ಎಂದು ಹೆಸರು ಬಂದಿದೆ. ಈಕೆ ಪದ್ಮೇಸ್ಥಿತಾ

ಅಂದರೆ ಪದ್ಮದ ಮೇಲೆ ನಿಂತವಳು. ಇವಳು ಪದ್ಮವರ್ಣಳೂ ಹೌದು. ಇವಳ ಕಣ್ಣು ಗಳು ಕಮಲದಂತೆ ಇರುವುವಾದುದರಿಂದ ಇವಳಿಗೆ ಪದ್ಮಾಕ್ಷೀ ಎಂದೂ ಹೆಸರು. ಇವಳು ಧರಿಸಿರುವ ಹಾರ ಪದ್ಮಹಾರವಾದದ್ದರಿಂದ ಪದ್ಮಮಾಲಿನೀ ಎಂದು ಕರೆಯ ಲ್ಪಟ್ಟಿರುತ್ತಾಳೆ. ಶ್ರೀ ಧಾನ್ಯ ಮತ್ತು ಧನ ಸಮೃದ್ಧಿಯ ಅಧಿದೇವತೆ. ಕೆಸರಿನಿಂದ ಮೇಲೆ ಏಳುವ ಧಾನ್ಯದಂತೆ ಲಕ್ಷ್ಮಿ ಕೆಸರಿನಲ್ಲಿ ಹುಟ್ಟಿದ ಕಮಲದಲ್ಲಿ ಉದ್ಭವಿಸು ತ್ತಾಳೆ. ವ್ಯವಸಾಯ ಕೆಸರಿನೊಡನೆ ಸಂಬಂಧಪಟ್ಟದ್ದಷ್ಟೆ. ಆದ್ದರಿಂದ ಲಕ್ಷ್ಮಿಯನ್ನು ಕೆಸರು ಉಳ್ಳವಳು ಅಂದರೆ ' ಕರೀಷಿಣೀ 'ಎಂಬುದಾಗಿ ವರ್ಣಿಸಿದೆ. ಎಲ್ಲಾ ವಿಧವಾದ ಭಾಗ್ಯಗಳನ್ನೂ, ಅನುಗ್ರಹಿಸುವ ದೇವತೆ ಲಕ್ಷ್ಮಿ ಆರೋಗ್ಯ, ದೀರ್ಘಾಯುಷ್ಯ, ಪುತ್ರ ಪೌತ್ರರು, ಧನಕನಕ ವಸ್ತ್ರಾದಿಗಳು ಇವುಗಳೆಲ್ಲವನ್ನೂ ದಯಪಾಲಿಸುವಳು ಈಕೆ. ರಾಜ ಲಕ್ಷ್ಮಿಯಾಗಿ ರಾಜನಿಗೆ ಒಲಿದಿರುವವರೆಗೂ ರಾಜನ ಅಭ್ಯುದಯ ಸ್ವತಃಸಿದ್ಧ. ರಾಜ ಲಕ್ಷ್ಮಿ ತೊರೆದರೆ ರಾಜನ ದೌರ್ಭಾಗ್ಯ ದಿನಗಳು ಆರಂಭವಾದಂತೆ. ಹರಿವಲ್ಲಭೆಯಾದ, ವಿಷ್ಣುಪತ್ನಿಯಾದ ಈ ಲಕ್ಷ್ಮಿ ಹಿರಣ್ಯವರ್ಣಾ ಎಂದು ವರ್ಣಿಸಲ್ಪಟ್ಟಿದ್ದಾಳೆ. ಲಕ್ಷ್ಮೀದೇವಿಗೆ ಅತಿ ಪ್ರಿಯವಾದ ಪುಷ್ಪವೆಂದರ ಪದ್ಮ. ಆದ್ದರಿಂದಲೇ ಇವಳಿಗೆ ' ಪದ್ಮ ಪ್ರಿಯಾ ' ಎಂದು ಹೆಸರು.

ಲಕ್ಷ್ಮಿಯ ಸಂಪೂರ್ಣ ವಿಗ್ರಹವಿಲ್ಲವೆಡೆಯಲ್ಲಿಯೂ ಕಮಲ ಪುಷ್ಪವೇ ಅವಳ ಸಂಕೇತವೆಂದೆಣಿಸಲ್ಪಟ್ಟಿದೆ. ಪದ್ಮಹಸ್ತಾ, ಪದ್ಮಪಾಣೀ ಎಂಬ ಹೆಸರುಗಳಿಂದ ಖ್ಯಾತಳಾದ ಪದ್ಮಾವತಿ ಪದ್ಮಪಾಣಿಯಾದ ಬೋಧಿಸತ್ವನ ಅನಂತ ಅಪಾರ ಕೃಪೆ ಯಾಗಿ ಬೌದ್ಧಮತದ ಮಹಾಯಾನ ಪಂಥದಲ್ಲಿ ರೂಪಾಂತರವನ್ನೂ ತಾಳುತ್ತಾಳೆ. ಹಾಗೆಯೇ ಪ್ರಜ್ಞಾಪಾರಮಿತಾ ಎನ್ನುವ ಬೋಧಿಸತ್ವನ ಪರಿಪೂರ್ಣ ಜ್ಞಾನದ ಮೂರ್ತಿಯಾಗಿ ಬೆಳಗುತ್ತಾಳೆ. ಐಹಿಕ ಅಭ್ಯುದಯದ ಅಧಿದೇವತೆಯಾಗಿದ್ದ ಶ್ರೀ ದೇವತೆ ಮೋಕ್ಷದಾಯಿನಿ, ನಿರ್ವಾಣ ಪ್ರದಾಯಿನಿಯಾಗಿ ಪ್ರಜ್ಞಾಪಾರಮಿತಳಾಗಿ ಬೌದ್ಧಧರ್ಮದಲ್ಲಿ ಬೆಳಗುತ್ತಾಳೆ. ಲೋಕವೆಲ್ಲವೂ ನಿರ್ವಾಣ ಸಾಮ್ರಾಜ್ಯವನ್ನು ಪಡೆ ದಾಗ ಮಾತ್ರ ತಾನು ನಿರ್ವಾಣ ಪಡೆಯುತ್ತೇನೆಂದು ಸಂಕಲ್ಪಮಾಡಿ ಲೋಕದ ಮೇಲೆ ತನ್ನ ಕೃಪಾಕಟಾಕ್ಷವನ್ನು ಬೀರಿದ ಅವಲೋಕಿತೇಶ್ವರನ ವಿಶೇಷಣ ಪದ್ಮ ಪಾಣಿ ಎಂದು. ಎಂದರೆ ಪದ್ಮ ಜ್ಞಾನ ವಿಕಾಸದ ಸಂಕೇತವಾಗಿದೆ.

ಅರ್ಚಾರೂಪಿಯಾದ ಈಶ್ವರನ ಪಾದಗಳನ್ನು ಪಾದಪದ್ಮಗಳೆಂದು ಕರೆಯುವು ದಂತೂ ಭಕ್ತರ ಸಹಜೋಕ್ತಿಯಾಗಿದೆ. ತಮಿಳುನಾಡಿನ ಆಳ್ವಾರುಗಳು 'ತಿರುವಡಿ ತಾಮರೈಗಳ್' ಎಂದು ಭಗವಂತನ ಪಾದಾರವಿಂದಗಳನ್ನು ವರ್ಣಿಸುವರು. ಈ ಪಾದಕಮಲಗಳಿಂದ ಸ್ಯಂದವಾದ ಜೇನಿನ ಸವಿಯನ್ನೂ ಭಕ್ತರು ಆಸ್ವಾದಿಸಿ ಆನಂದ ಪಡುತ್ತಾರೆ. ' ಅಮೃತ ಸ್ಯಂದಿನಿ ಪಾದ ಪಂಕಜೆ ನಿವೇಶಿತಾತ್ಮಾ ಕಥಮನ್ಯದಿಚ್ಛತಿ' ಎಂದು ಒಬ್ಬರು ಭಕ್ತರು ಕೇಳುತ್ತಾರೆ. ಅಮೃತಧಾರೆಯನ್ನು ಸುರಿಸುವ ಪಾದಪಂಕಜ ಗಳಲ್ಲಿ ಇಟ್ಟ ನನ್ನ ಆತ್ಮವು ಮತ್ತೇನನ್ನೂ ತಾನೆ ಆಶಿಸಬಲ್ಲದೆಂದು ಇದರ ತಾತ್ಪರ್ಯ.

ಇದೇ ಅಭಿಪ್ರಾಯವನ್ನು ಮತ್ತೊಂದು ಶ್ಲೋಕದಲ್ಲಿ ಭಕ್ತರೊಬ್ಬರು ಹೀಗೆ ವ್ಯಕ್ತಪಡಿಸಿದ್ದಾರೆ. ' ಸ್ಥಿತೇರವಿಂದೇ ಮಕರಂದ ನಿರ್ಭರೇ ಮಧುವ್ರತೋ ನೇಕ್ಷುರ ಕಂ ಹಿ ವೀಕ್ಷತೇ ' ಅಂದರೆ ಕಮಲದಲ್ಲಿ ಉಳಿದು ಅದರ ಜೇನನ್ನು ಸವಿದು ತೃಪ್ತರಾದ ದುಂಬಿಗಳು ಕಬ್ಬಿನ ಜಲ್ಲೆಗೆ ಆನೆಪಡುವುವೇನು ? ಎನ್ನುವುದು ಇದರ ತಾತ್ಪರ್ಯ.

ಹೀಗೆ ಹಿಂದೂ, ಬೌದ್ಧ, ಜೈನ ಭಕ್ತಿಸಾಹಿತ್ಯವೆಲ್ಲವೂ ಪದ್ಮಮಯವಾಗಿದೆ.

ಮಾನವನು ಪ್ರಪಂಚದಲ್ಲಿ ಬಾಳಬೇಕಾದುದು ಹೇಗೆ ಎನ್ನುವ ಪ್ರಶ್ನೆಗೆ ಭಾರತ ಧರ್ಮ ಸಂಸ್ಕೃತಿಯ ಉತ್ತರ, ಪದ್ಮ ಪತ್ರದ ಮೇಲಿನ ನೀರಿನ ತುಂತುರುವಿನಂತೆ, 'ಪದ್ಮಪತ್ರಮಿವಾಂಭಸಾ ' ಎನ್ನುವುದಾಗಿದೆ. ಇದು ಗೀತೆಯ ವಾಕ್ಯ.

ಭಾರತದ ಪ್ರಸಿದ್ಧ ಕವಯಿತ್ರಿ ಸರೋಜಿನಿ ದೇವಿಯವರು ತಾವರೆಯ ಮೇಲೆ ರಚಿಸಿರುವ ತಮ್ಮ ಪದ್ಯದಲ್ಲಿ ತಾವರೆಯ ಶುಭ್ರ ಧವಳ ಕಾಂತಿ ಭಾರತ ಧರ್ಮದ ಶುದ್ಧ ಸಾತ್ವಿಕ ಧ್ಯೇಯದ ಗುರುತೆಂದೂ ಜಗತ್ತಿನಲ್ಲಿ ಉಳಿದೂ ಜಗತ್ತಿನ ಕೊಳೆ ತನಗೆ ಅಂಟದಂತೆ ಶುಭ್ರವಾಗಿಯೇ ಉಳಿಯುವ ಯೋಗಿ ಹೃದಯವು ಪದ್ಮಸದೃಶವಾದು ದೆಂದೂ ಸ್ಫುರಿಸುವ ಭಾವನೆಗಳನ್ನು ಹೊರಸೂಸಿರುತ್ತಾರೆ.

' ಕಮಲದ ಮೇಲಿನ ತುಂತುರಿವಿನಂತೆ ಬಾಳು ' ಎನ್ನುವುದು ಮಾನವನಿಗೆ ತಾವರೆಯ ಸಂದೇಶ. ಮನುಷ್ಯನ ಹೃದಯವನ್ನು ಹೃದಯಕಮಲವೆಂದು ವರ್ಣಿಸಿದೆ. ಈ ಹೃದಯಕಮಲವು ಪರಮಾತ್ಮನ ವಾಸಸ್ಥಾನ. ಧ್ಯಾನಾಸಕ್ತನಾದವನು ಪದ್ಮಾಸನ ದಲ್ಲಿ ಕುಳಿತುಕೊಳ್ಳಬೇಕೆಂದು ' ಆಸನಂ ಪದ್ಮಕಂ ಬಧ್ವಾ ' ಎಂದು ಯೋಗಶಾಸ್ತ್ರ ತಿಳಿಸುತ್ತದೆ. ಮಹಾನಾರಾಯಣೋಪನಿಷತ್ತು ಶ್ರೀದೇವಿಯನ್ನು 'ಪದ್ಮ ಪ್ರಭೆ ಪದ್ಮ ಸುಂದರಿ' ಎಂದು ಸಂಬೋಧಿಸುತ್ತವೆ. ಅರ್ಜುನನು ಶ್ರೀಕೃಷ್ಣನನ್ನು ಗೀತೆಯಲ್ಲಿ 'ಕಮಲ ಪತ್ರಾಕ್ಷ' ಎಂದು ಕರೆದಿದ್ದಾನೆ. ಹೀಗೆ ಕಮಲ ಪುಷ್ಪ, ಅದರ ಆಕಾರ. ವರ್ಣ ಮತ್ತು ಸುರಭಿಗಳಿಗೆ ಭಾರತೀಯರ ಹೃದಯ ಮತ್ತು ಮನಸ್ಸು ಮಣಿದಿವೆ, ತಾವರೆ 'ಸತ್ಯಂ, ಶಿವಂ, ಸುಂದರಂ' ಎಂಬ ತತ್ವತ್ರಯದ ಏಕಮೇವ ಅಧಿಷ್ಠಾನವಾ ವಾಗಿದೆ. ಪರ್ಷಿಯಾ ದೇಶದ ಪ್ರೀತಿ ಪುಷ್ಪ ಗುಲಾಬಿಯಾದಂತೆ ಭಾರತದ ಭವ್ಯ ಪುಷ್ಪ ತಾವರೆಯಾಗಿದೆ.

**ಎಂ. ಯಾಮುನಾಚಾರ್ಯ**

# ಇಮ್ಯಾಜಿನೇಷನ್

ಮಾನವನ ಮಾನಸಿಕ ಶಕ್ತಿಗಳಲ್ಲಿ ಮುಖ್ಯವಾದುವು ಎರಡು: ಬುದ್ಧಿ ವಿವೇಕ (Reason) ಇಮ್ಯಾಜಿನೇಷನ್ (Imagination). ಅವೆರಡರಲ್ಲಿ ಯಾವುದು ಪ್ರಥಮ ವೆಂಬುದನ್ನು ನಿಷ್ಕರ್ಷಿಸುವುದು ಕಷ್ಟ. ಯಾವನಾದರೂ ಆಗಲಿ ತನ್ನ ಸಂಸಾರದ, ಊರಿನ, ನಾಡಿನ, ಜಗತ್ತಿನ, ಹಾಗೂ ದೈಹಿಕ, ಹಾರ್ದಿಕ, ಆಧ್ಯಾತ್ಮಿಕ ಸಮಸ್ಯೆಗಳಲ್ಲಿ ಕೆಲವುಗಳ ಮಧ್ಯೆ ಆದರೂ ಸಮಾಧಾನ ಜೀವನ ನಡೆಸಬೇಕಾಗಿರುವುದರಿಂದ ಬುದ್ಧಿ ವಿವೇಕ ಅತ್ಯಗತ್ಯ; ಅದಕ್ಕೇ ಪ್ರಧಾನ ಪದವಿಯನ್ನು ಸಲ್ಲಿಸೋಣ. ಅದರ ಸಮರ್ಪಕ ಚಟುವಟಿಕೆಗೆ ಇಮ್ಯಾಜಿನೇಷನ್‌ನ ಸಹಾಯ ಅಷ್ಟಿಷ್ಟಲ್ಲ. ಅನುಭವ ಅವಲೋಕನ ಆಲೋಚನೆ ನೆನಪು ತೀರ್ಮಾನ ಇತ್ಯಾದಿ ಪ್ರವೃತ್ತಿಗಳು ಒದಗಿಸುವ ಸಾಮಗ್ರಿಯನ್ನು ಅಚ್ಚುಕಟ್ಟಾಗಿ ಅಳವಡಿಸುವುದಕ್ಕೂ ಅವೊದಗಿಸಲಾರದ ಸಾಮಗ್ರಿಯನ್ನು ಒದಗಿಸುವುದಕ್ಕೂ ಇಮ್ಯಾಜಿನೇಷನ್ ಅತ್ಯಾವಶ್ಯಕ. ಅದನ್ನು ಬಿಟ್ಟು ನಡೆಸಿದ ಕಾರ್ಯಕಲಾಪ ನಿರ್ದೋಷಿಯಾಗಲಾರದು; ನಿಷ್ಫಲವೋ ದುಷ್ಫಲವೋ ಆಗಿಬಿಡುವ ಸಂಭವ ಹೆಚ್ಚು. ಅಪನಂಬಿಕೆ ಅಂಜಿಕೆ ಅಶಾಂತಿಗಳು ಪ್ರಪಂಚವನ್ನು ಅಡಸಿ ಹಿಡಿದುಕೊಂಡಿರುವುದಕ್ಕೆ ಕಾರಣವೇನು? ಮಹಾರಾಷ್ಟ್ರಗಳಲ್ಲಿ ಚೆನ್ನಾಗಿ ಕಂಡು ಬರುವ ಇಮ್ಯಾಜಿನೇಷನ್‌ನ ಉಪೇಕ್ಷೆ. ವಾಸ್ತವಿಕತ್ವ (Realism) ಎಂಬ ಹಸುರು ಕನ್ನಡಕ ವಿಶೇಷ ರೂಢಿಗೆ ಬಂದಿರುವಾಗ ಇಮಾಜಿನೇಷನ್ ನ ಸಹಜ ನೇತ್ರವನ್ನು ಉಪಯೋಗಿಸುವ ಅನಾಗರಿಕರುಂಟೆ? ವಸ್ತುಸ್ಥಿತಿಯನ್ನು ನಿಷ್ಪಕ್ಷಪಾತವಾಗಿ ತಿಳಿಯಬೇಕಾದರೂ ಇಮ್ಯಾಜಿನೇಷನ್ನೇ ದಿಕ್ಕು. ಈ ಮಾತು ಬರಿ ಅಭಿಪ್ರಾಯದ ಉರವಣೆಯಲ್ಲ; ಜಿಜ್ಞಾಸೆಯ ಸಿದ್ಧಾಂತ.

'ಸುಳ್ಳು ಪೊಳ್ಳಿನ ತಾಯಿ ಇಮ್ಯಾಜಿನೇಷನ್' ಎಂಬ ಹಳೆಯ ಕಿಂವದಂತಿಯೊಂದಿದೆ; ವಿಪರೀತ ಅಪಚಾರ ಎಸಗುತ್ತಲೇ ಬಂದಿದೆ. ಉತ್ತಮ ಸಾಹಿತ್ಯಶಾಸ್ತ್ರಜ್ಞರಾದ ಅರಿಸ್ಟಾಟಲ್ ಲಾಂಜೈನಸ್ ಹಾರೆಸ್ ಕ್ವಿಂಟಿಲಿಯನ್ ಡಾಂಟೆ ಸ್ಕ್ಯಾಲಿಜರ್ ರಾನ್ಸಾ ಸಿಡ್ನಿ ಬ್ವಾಲೊ ಡ್ರೈಡನ್ ಮೊದಲಾದವರಾರೂ ಇಮ್ಯಾಜಿನೇಷನ್ ಕುರಿತು

---

**ವಿಜ್ಞಾಪನೆ:**—Imagination ಎಂಬುದಕ್ಕೆ ಅನುರೂಪ ತರ್ಜುಮೆ ನನಗೆ ಗೋಚರಿಸಲಿಲ್ಲ. 'ಭಾವನಾಶಕ್ತಿ' ಆಲೋಚನಾಶಕ್ತಿ Thinking ಗೂ 'ಕಲ್ಪನಾಶಕ್ತಿ' Invention ಗೂ 'ಊಹಾಶಕ್ತಿ' Fancy ಗೂ 'ನಿರ್ಮಾಣಶಕ್ತಿ' ಅಥವಾ 'ಸೃಷ್ಟಿಶಕ್ತಿ' Creation ಗೂ 'ಪ್ರತಿಭೆ' Genius ಗೂ ತುಂಬ ಹತ್ತಿರ. 'ಪ್ರತಿಬಿಂಬ ನಿರ್ಮಾಪಕ ಶಕ್ತಿ' ಉದ್ದವಾದ ವಿವರಣೆ; ಉಪಯೋಗಕ್ಕೆ ಕಷ್ಟ. ಆದ್ದರಿಂದ 'ಇಮ್ಯಾಜಿನೇಷನ್' ಎಂಬ ಶಬ್ದವನ್ನೇ ಎದೆಗಾರಿಕೆಯಿಂದ ಬಳಸಿಕೊಂಡಿದ್ದೇನೆ. ತಮಗೆ ಸೂಕ್ತವೆಂದು ತೋರಿದ ಸಮಾನಾರ್ಥಕ ಪದವನ್ನು ಓದುಗರು ಅನ್ವಯಿಸಿಕೊಳ್ಳಬಹುದು—ರಂ.

ಸುದೀರ್ಘ ಚರ್ಚೆ ಕೈಗೊಳ್ಳಲಿಲ್ಲ. ೧೮ ನೇ ಶತಮಾನದ ಕಡೆಯಲ್ಲಿ ಲೆಸ್ಸಿಂಗ್ ಷ್ಲೆಗಲ್, ೧೯ ನೇ ಶತಮಾನದ ಆದಿಯಲ್ಲಿ ಕೋಲ್‌ರಿಜ್ ವರ್ಡ್ಸ್‌ವರ್ತ್, ಮುಂತಾದ ವಿಮರ್ಶಕರು ಗಂಭೀರ ಚಿಂತನೆ ನಡೆಸಿ, ನಿಜಾಂಶವನ್ನು ಹೊರಗೆಡಹುವವರೆಗೂ ‘ಆಧಾರವಿಲ್ಲದ ಅನೃತವಾದ ಊಹಾಪೋಹ’ ಎಂಬುದೇ ಯೂರೋಪಿನಲ್ಲಿ ಇಮ್ಯಾಜಿನೇಷನ್ ಪದದ ಅರ್ಥ. ತರ್ಕ ನ್ಯಾಯಸರಣಿ ಯುಕ್ತರೀತಿ ಸೂಕ್ತನೀತಿ ಯಾವುದನ್ನೂ ಅನುಸರಿಸದೆ ಹದ್ದು ಹಾಳತವನ್ನು ಅತಿಕ್ರಮಿಸಿ, ಚಪಲ ಮನಸ್ಸನ್ನು ಯದ್ವಾತದ್ವಾ ಹರಿಯಗೊಡುವುದೇ ಇಮ್ಯಾಜಿನೇಷನ್! ಷೇಕ್ಸ್‌ಪಿಯರನ ಪ್ರಖ್ಯಾತ ವಾಕ್ಯಗಳಲ್ಲಿ ಬರುವ ಇಮ್ಯಾಜಿನೇಷನ್‌ಗೂ ಅದೇ ತಾತ್ಪರ್ಯ. ‘ಕಿಕ್ಕಿರಿದ ನರಕದಲ್ಲಿಲ್ಲದ ಭೂತಪಿಶಾಚಿಗಳು ಕಾಣಿಸುತ್ತವೆ ಹುಚ್ಚನ ಕಣ್ಣಿಗೆ. ಉನ್ಮತ್ತ ಪ್ರಣಯಿಯ ದೃಷ್ಟಿಯಲ್ಲಿ ಕರಿಯ ಕುರೂಪಿ ಹೆಲನ್‌ಸದೃಶ ಲಾವಣ್ಯವತಿ. ತುಂಬಿದಾವೇಶದಲ್ಲಿ ಕವಿಲೇಖನಿ ನೆಲೆಯನ್ನೂ ನಾಮಧೇಯವನ್ನೂ ದಯಪಾಲಿಸುತ್ತದೆ ಗಾಳಿ ಶೂನ್ಯತೆಗೆ.’ ಮಿಲ್ಟನ್ನನ ವಿವರಣೆಯೂ ಇದನ್ನು ಸಮರ್ಥಿಸುತ್ತದೆ: ‘ನಡುರಾತ್ರಿಯಲ್ಲಿ ಬುದ್ಧಿ ವಿಶ್ರಾಂತಿ ಹೊಂದುತ್ತಿರುವಾಗ ಫ್ಯಾನ್ಸಿ (Fancy)* ಎಚ್ಚರಗೊಳ್ಳುತ್ತದೆ ಸುವ್ಯವಸ್ಥೆಯಲ್ಲಿಟ್ಟಿದ್ದ ಅಂಶಗಳನ್ನು ಮನಸೋ ಇಚ್ಛೆ ಕೆದರಿ, ಚೆಲ್ಲಾಪಿಲ್ಲಿ ಮಾಡಿ, ಅಬದ್ಧ ವಿಕಾರಗಳನ್ನು ರೂಪಿಸುತ್ತದೆ; ಅವೇ ಕನಸುಗಳು.’ ೧೮ ನೇ ಶತಮಾನದ ಅಂತ್ಯದವರೆಗೂ ‘ವೃಥಾ’ ‘ಹುರುಳಿಲ್ಲದ’ ‘ಹುಚ್ಚಾಬಟ್ಟೆ’ ‘ಅಂಕೆ ಮೀರಿದ’ ಎಂಬ ವಿಶೇಷಣಗಳೇ ಇಮ್ಯಾಜಿನೇಷನ್ನಿಗೆ ಅನ್ವಯವಾಗುತ್ತಿದ್ದುವು. ಈಗಲೂ ಕೂಡ ಅನೇಕರಿಗೆ ‘ಇಮ್ಯಾಜಿನರಿ’ (Imaginary) ‘ಇಮ್ಯಾಜಿನೆಟಿವ್’ (Imaginative) ಎಂಬೆರಡು ವರ್ಗದ ಭೂ-ವೈಕುಂಠ ವ್ಯತ್ಯಾಸ ಗೊತ್ತಿಲ್ಲ.

ಎದುರಿಗಿಲ್ಲದುದನ್ನು ಎದುರಿಗಿದ್ದಂತೆ, ಇಲ್ಲದುದನ್ನು ಇದ್ದಂತೆ, ಭಾವಿಸಿಕೊಳ್ಳುವುದು ಇಮ್ಯಾಜಿನೇಷನ್ನಿನ ಮೂಲ ನಡೆವಳಿಕೆ. ಪ್ರತಿಬಿಂಬ ಕಲ್ಪನೆಯೇ ಅದರ ವಿಧಿಬದ್ಧ ಕರ್ತವ್ಯ. ಇಂದ್ರಿಯಾನುಭವವೆಲ್ಲವೂ ಸ್ಮೃತಿ ಭಂಡಾರದಲ್ಲಿ ಸೇರಿಕೊಂಡು ಅಂತರ್ಯದ ಆಸ್ತಿಯಾಗುತ್ತದೆ ತಾನೆ. ಕಾಲಕ್ರಮೇಣ ಅವಲ್ಲಿ ಕೆಲವು ಮಾಯವಾಗುತ್ತವೆ, ಕೆಲವು ಮುಸುಕಾಗುತ್ತವೆ, ಕೆಲವು ಅಚ್ಚಳಿಯದೆ ಉಳಿಯುತ್ತವೆ. ಬೇಕಾದಾಗ ಅನುಭವ ತುಣುಕುಗಳನ್ನು ಆರಿಸಿಕೊಂಡು, ಸಾಲಾಗಿರಿಸಿಯೋ ಗುಂಪುಕೂಡಿಸಿಯೋ, ಚಿತ್ತ ಭಿತ್ತಿಯ ಮೇಲೆ ಪ್ರಕಾಶಮಾನವಾಗಿ ಚಿತ್ರಿಸಿ, ಹಿಂದೆ ಆದ ಅನುಭವವನ್ನು ಪುನಃ ತಂದುಕೊಡುವುದು ಇಮ್ಯಾಜಿನೇಷನ್ನಿನ ಒಂದು ಬಗೆಯ ಕಾರ್ಯ. ಇಲ್ಲಿ ಇಮ್ಯಾಜಿನೇಷನ್ನಿಗೂ ಜ್ಞಾಪಕಶಕ್ತಿಗೂ ಭಿನ್ನತೆ ಅಲ್ಪ ; ಆದರೂ ಭಿನ್ನತೆ ಇಲ್ಲದಿಲ್ಲ. ಆಯುಸ್ಸು ವ್ಯತ್ಯಾಸ ಆವರಣ ವ್ಯತ್ಯಾಸಗಳಿಂದ ನೆನಪಾದ ಅನುಭವ ಮೊದಲಣ

---

*ಮಿಲ್ಟನ್ನಿಗೆ Fancy, Imagination ಎರಡೂ ಸಮಾನಾರ್ಥಕ ; Fancy ಎಂಬುದನ್ನೇ ಅವನು ಹೆಚ್ಚಾಗಿ ಬಳಸುವುದು.

ಆಕಾರ ಅಳತೆ ವ್ಯವಸ್ಥೆಯಲ್ಲಿಯೇ ಮರುಕೊಳಿಸುವುದು ಸಾಮಾನ್ಯವಾಗಿ ಅಸಾಧ್ಯ. ಹಳೆಯಂಶ ಕೆಲವು ಕಳಚಿಕೊಳ್ಳುತ್ತವೆ; ಹೊಸ ಅಂಶ ಕೆಲವು ಅಂಟಿಕೊಳ್ಳುತ್ತವೆ. ಪ್ರತಿಬಿಂಬ ಎಂದಿಗೂ ಹುಟ್ಟುವುದಿಲ್ಲ ಬಿಂಬದ ಯಥಾರ್ಥ ಪಡಿಯಚ್ಚಾಗಿ; ನರನ ಮೆದುಳು ಪೆಟ್ಟಿಗೆ ಫೊಟೋ ತೆಗೆಯುವ ಉಬ್ಬುಗಾಜಿನ ಪೆಟ್ಟಿಗೆಯಲ್ಲ. **ಮ್ಯಾಕ್‌ಬೆತ್** ನಾಟಕದಲ್ಲಿ ನಿದ್ರಾ ಸಂಚಾರಿ ಲೇಡಿ ಮ್ಯಾಕ್‌ಬೆತ್‌ಗೆ ನೆನಪಾಗುತ್ತದೆ ತಾನು ಹಿಂದೆ ದುರ್ಧೈರ್ಯದಲ್ಲಿ ಮುಟ್ಟಿ ಸವರಿದ ಕೊಲೆ ರಕ್ತದ ಕಂಪು: ಅದಕ್ಕೀಗ ಕತ್ತು ಹಿಸುಕಿ ಪಿತ್ಥವಿಕಲ್ಪ ಮಾಡುವ ರೌದ್ರ ಸಾಮರ್ಥ್ಯ! ಸ್ಮರಣಾತ್ಮಕ ಇಮ್ಯಾಜಿನೇಷನ್ (Recollective or Reproductive Imagination) ಸ್ಮರಣೆಯಂತೆ ಕೊಂಚ ಮಟ್ಟಿಗೆ ಕೃಷಿಗೈದರೂ ಸ್ಮರಣೆಯನ್ನು ಮಿಂಚಿ ಸ್ವತಂತ್ರವಾಗಿ ಮುಂದುವರಿಯುತ್ತದೆ.

ಇಮ್ಯಾಜಿನೇಷನ್‌ನ ಸಂತತ ಸಾಮಾನ್ಯ ಕರ್ಮ ಯಾವುದೆಂದರೆ ನವ್ಯ ನಿರ್ಮಾಣ ಲೋಕಾನುಭವ ಗ್ರಂಥಾನುಭವ ಸಂಗ್ರಹಿಸಿದ ಸಂಗತಿಗಳಲ್ಲಿ ಯುಕ್ತವಾದದ್ದನ್ನು ಸ್ವೀಕರಿಸಿ, ಅಯುಕ್ತವಾದದ್ದನ್ನು ನಿರ್ಲಕ್ಷಿಸಿ, ಕುಗ್ಗಿಸಿ, ಹಿಗ್ಗಿಲಿಸಿ, ಅಗತ್ಯವಾದಂತೆ ಕ್ರಮ ಬದಲಾಯಿಸಿ, ಸ್ವಕಲ್ಪಿತ ಸಂಗತಿಗಳನ್ನು ಸೇರಿಸಿ, ಸ್ಫೂರ್ತಿ ಸೂಚಿಸಿದ ಯೋಜನೆಯ ರೀತಿ ಅಂಗಾಂಗಗಳನ್ನು ಹವಣುಗೈದು, ನೂತನ ಸಾಹಿತ್ಯ ಸಂಗೀತ ವರ್ಣಚಿತ್ರ ಶಿಲ್ಪ ವಾಸ್ತುಶಿಲ್ಪಗಳನ್ನು ರಚಿಸಿ ಮೂರ್ತಗೊಳಿಸುತ್ತದೆ. ಇಮ್ಯಾಜಿನೇಷನ್‌ನ ಈ ವ್ಯಾಪಾರದಿಂದ ಕಲೆಗಾರನಿಗೆ ಪ್ರಕೃತಿ ದೇವಿಯ ಪ್ರತಿಸ್ಪರ್ಧಿ ಎಂಬ ಬಿರುದು. ಉತ್ಪತ್ತಿಗೈಯುವುದು ಇಮ್ಯಾಜಿನೇಷನ್‌ಗೆ ಸ್ವಾಭಾವಿಕವಾದ್ದರಿಂದ ಸೃಷ್ಟಿಕಾರಕ ಇಮ್ಯಾಜಿನೇಷನ್ (Productive or Creative Imagination) ಎನ್ನುವುದು ತಲೆ ಶಿರೋಭಾರದಂತೆ ಆಭಾಸ. ಕಲೆಗಾರರಲ್ಲಿ ಕವಿಯೇ ಸರ್ವವಿದಿತನಾದ್ದರಿಂದ ಇದನ್ನು ಕವಿತಾ ಇಮ್ಯಾಜಿನೇಷನ್ (Poetic Imagination) ಎಂದು ಕರೆಯುವ ವಾಡಿಕೆಯುಂಟು. ಆ ನುಡಿ ಕೂಡ ಆಭಾಸ; ಎರಡು ವಿಧದಲ್ಲಿ ಆಭಾಸ. ಹೇಗೆ ದಿವಾಕರನಿಂದ ದಿವಸವೋ ಹಾಗೆ ಇಮ್ಯಾಜಿನೇಷನ್‌ನಿಂದ ಕಾವ್ಯ. ಕವಿಯ ಅಧಿಕಾರ ಇಮ್ಯಾಜಿನೇಷನ್‌ನ ಮೇಲೆ ಅತ್ಯಧಿಕವಾದರೂ ಅದರ ಏಕಸ್ವಾಮ್ಯವನ್ನಾಗಲೀ ಏಕಾನುಭೋಗವನ್ನಾಗಲೀ ಅವನಿಗಿತ್ತಿಲ್ಲ ಬ್ರಹ್ಮ. ಮನುಷ್ಯರೆಲ್ಲರಿಗೂ ಅದು ಆವಶ್ಯಕ, ಮನುಷ್ಯರೆಲ್ಲರಲ್ಲಿಯೂ ಅದರ ಬೀಜ ಇದ್ದೇ ಇರುತ್ತದೆ; ಮಮತೆಯಿಂದ ಪೋಷಿಸಿದರೆ ದೊಡ್ಡ ಮರ, ಇಲ್ಲದಿದ್ದರೆ ಗಿಡ್ಡ ಸಸಿ. ಅದಿರಲಿ. ಪುಸ್ತಕಜ್ಞಾನ ಪ್ರಪಂಚಪರಿಚಯ ಸಮಾಜಪ್ರಚೋದನೆ ಅಧ್ಯವಸಾಯ ಕರಕೌಶಲ್ಯ ಕಾವ್ಯೋದ್ದೇಶಗಳ ವೈಶಾಲ್ಯ ಸಂಕೋಚದಿಂದ ಒಬ್ಬ ಸಾಹಿತಿ ಇನ್ನೊಬ್ಬನಿಂದ ಹೇಗೆ ಬೇರೆಯೋ ಹಾಗೆ ಇಮ್ಯಾಜಿನೇಷನ್ನಿನ ಬಲ ತೀಕ್ಷ್ಣತೆ ಪರಾಕ್ರಮ ಮಟ್ಟದಿಂದಲೂ ಒಬ್ಬೊಬ್ಬನ ವೈಶಿಷ್ಟ್ಯ ಒಂದೊಂದು. ಎಲೆಕ್ಟ್ರಾ ಎಂಬ ಒಂದು ವಿಷಯವನ್ನು ಕುರಿತು ಬರೆದ ಎಂಟು ನಾಟಕಗಳಿಗೆ ಎಂಟು ಬೇರೆ ಬೇರೆ ಸ್ವಾರಸ್ಯದ ವಸ್ತು. ಮಹಾಭಾರತದ ಶಕುಂತಲೆ ಒಬ್ಬ ಹೆಂಗಸು, ಕಾಳಿದಾಸನ ಶಕುಂತಲೆ ಮತ್ತೊಬ್ಬಳು.

ನವೀನತೆಯ ವಿಚಾರ ಒಂದೆರಡು ಮಾತು. ಚಿರಪರಿಚಿತ ದ್ರವ್ಯಗಳ ಪರಸ್ಪರ ಪ್ರಮಾಣ ಸಂಬಂಧ ಹೊಂದಾವಣೆಗಳಲ್ಲಿ ಹೊಸತನ್ನು ಪರಿಭಾವಿಸಿ ನಿರೂಪಿಸುವುದೇ ಇಮ್ಯಾಜಿನೇಷನ್ನಿನ ನಾವೀನ್ಯ. ಗುಜ್ಜಾರಿ ಮಲತಾಯಿ ಮಾಟಗಾರ ರಾಜಕುಮಾರಿ ರಾಕ್ಷಸ ಹಕ್ಕಿ ಬೆಕ್ಕು ಅರಣ್ಯ ಕತ್ತಲೆ ಮುಂತಾದವುಗಳಿಂದ ಅದೆಷ್ಟು ಅಡುಗೂಳಜ್ಜಿ ಕಥೆಗಳನ್ನು ಹಿಂದೆ ಕಟ್ಟಿದ್ದಾರೆ, ಮುಂದೆ ಕಟ್ಟಬಹುದು, ಚಿಕ್ಕ ಮಕ್ಕಳಿಗಾಗಿ ! 'ಪ್ರೇಮ ಯುದ್ಧ ಮತ: ಇವು ಮೂರೇ ಎಲ್ಲ ಸಾಹಿತ್ಯದ ವಿಷಯ" ಎನ್ನಲಿಲ್ಲವೆ ಡಾಂಟೆ? ಒಂದು ದೃಷ್ಟಿಯಿಂದ ಇಮ್ಯಾಜಿನೇಷನ್‌ಗೆ ಇದು ಗಡಿಗೋಡೆಯನ್ನು ಕಟ್ಟಿ ಒಳಗೆ ಕೂಡಿಟ್ಟಂತೆ. ಆದರೆ ಕಲಾಕೃಷಿಕ ಕನಲಬೇಕಾದ್ದಿಲ್ಲ, ಕೊರಗಬೇಕಾದ್ದಿಲ್ಲ. ಕೇವಲ ನೂರಾರು ಮೂಲ ಧಾತುಗಳಿಂದ ಪ್ರಕೃತಿ ಲಕ್ಷೋಪಲಕ್ಷ ಪ್ರತ್ಯೇಕ ಚೇತನಾಚೇತನ ವಿರಚನೆಗಳನ್ನು ತಯಾರಿಸಿ ದಾನಮಾಡಿದ್ದಾಳೆ, ಮಾದರಿಯಾಗಿದ್ದಾಳೆ, ಮೇಧಾವಿ ಮಾನವನಿಗೆ. ಏಸೊಂದು ಜನ್ಮ ಕಲಾವಿದಗೋಷ್ಠಿ ನಿರ್ಮಾಣಗಳನ್ನು ಎಸಗಿದರೂ ಹೊಸ ಸೊಗಸಿಗೆ ಅವಕಾಶ ಇದ್ದೇ ಇದೆ. 'ಕಾಲ ಪುರಾತನವಾಯ್ತು, ಕಲೆ ಕೊಳೆತುಹೋಯ್ತು, ವಿಶ್ವಕ್ಕೆ ವೃದ್ಧಾಪ್ಯ!' ಎಂದು ಗೊಣಗುಟ್ಟುವವನ ವ್ಯಾಧಿ ಅವನ ಅವಯವನಾವುದರಲ್ಲಿಯೂ ಇಲ್ಲ, ಅವನ ಇಮ್ಯಾಜಿನೇಷನ್‌ನಲ್ಲಿ.

ಉನ್ನತ ಕಲಾವಿದನಲ್ಲಿ ವಿಪುಲವಾಗಿ, ಎರಡನೇ ದರ್ಜೆಯ ಕಲೆಗಾರನಲ್ಲಿ ವಿರಳವಾಗಿ, ಅಸೊಂದು ವಿಶೇಷ ವಿದ್ಯಮಾನ ತಲೆದೋರಿಸಿ ವಿಸ್ಮಯಗೊಳಿಸುತ್ತದೆ. ಇಮ್ಯಾಜಿನೇಷನ್ ತೀಕ್ಷ್ಣ ದೃಷ್ಟಿಯಾಗಿ ಪರಿಣಮಿಸಿ, ಬಾಳಿನ ತೋರ್ಕೆಯ ಪದರ ಪದರಗಳನ್ನು ಭೇದಿಸಿಕೊಂಡು ಒಳನುಗ್ಗಿ, ಅತಿ ಸೂಕ್ಷ್ಮವಾದ ಸತ್ಯದ ಅನಿರೀಕ್ಷಿತ ಬಳ್ಳಿಮಿಂಚನ್ನು ಕಣ್ಣು ಕೋರೈಸದೆ ಈಕ್ಷಿಸಿ, ದಿವ್ಯದರ್ಶನವನ್ನು ಪಡೆಯುತ್ತದೆ, ಬಣ್ಣಿಸುವ ನೈಪುಣ್ಯವನ್ನೂ ಪಡೆಯುತ್ತದೆ. ಆಗ ಹೊರಹೊಮ್ಮುವ ವಚನ ಜೀವನಕ್ಕೆ ಒಂದು ಮಹತ್ತ್ವಗೂಡಿದ ಭಾಷ್ಯ,ಅಪೂರ್ವ ರಮ್ಯತೆಯ ಭಾಷ್ಯ ಅಂಥ ಕಲಾವಿದನೇ ಪ್ರವಾದಿ, ಋಷಿ; ಅವನ ಗೆಯ್ಮೆಯೇ ಶಿಲ್ಪಯಜ್ಞ, ಸಂಗೀತಯೋಗ, ಸಾಹಿತ್ಯ ತಪಸ್ಸು. ಇಮ್ಯಾಜಿನೇಷನ್ನಿನ ಈ ಅಗಾಧ ವರ್ತನೆ(**Interpretative or Prophetic Imagination**) ದಾರ್ಶನಿಕರು ವಿವರಿಸುವ ಅಂತರ್ಬೋಧೆ (**Intuition**) ಯ 'ಸಹೋದರ.' ಅಪರೂಪ ಮಂಗಳ ಮುಹೂರ್ತದಲ್ಲಿ, ದೈವಿಕವೋ ಎಂಬ ಅನುಮಾನವನ್ನು ಏಳಿಸುವ ಪ್ರಚೋದನೆಯಿಂದ, ಉಲ್ಬಣವಾಗಿ ಉದ್ಯಮಗೈಯುವ, ಕೊಂಚಮಟ್ಟಿಗೆ ಅಮಾನುಷವೆಂದು ತೋರುವ, ಈ ಪರಮ ಪ್ರಶಸ್ತ ಸತ್ವಕ್ಕೆ ಇಮ್ಯಾಜಿನೇಷನ್ ಎಂಬ ಹೆಸರು ಸಾಲದು, ಭಾಷಾದಾರಿದ್ರ್ಯದಿಂದ ಅದನ್ನೊಪ್ಪಿಕೊಳ್ಳಬೇಕು, ಎಂಬುದು ವರ್ಡ್ಸ್‌ವರ್ತ್‌ನ ಅಭಿಮತ. ಗಹನತತ್ತ್ವಗಳನ್ನು ಕಂಡುಹಿಡಿದು ಲೋಕಕ್ಕೆ ಭಾಗ್ಯದಾತರಾಗುವ ಪ್ರಚಂಡವಿಜ್ಞಾನಿ ತತ್ವಶಾಸ್ತ್ರಪಾರಂಗತ ಉತ್ಕೃಷ್ಟಚಾರಿತ್ರಕ ಪ್ರಬಲರಾಜ್ಯತಂತ್ರಜ್ಞ ಮುಂತಾದವರ ಅಗಾಧ ವೈಭವದ ಮಹತ್ಕಾರ್ಯಕ್ಕೂ ಈ ಲಾಂಛನದ ಇಮ್ಯಾಜಿನೇಷನ್ನೇ ಶರಣು. ಯಾರು ಏನನ್ನೇ ಹೇಳಲಿ, ಪ್ರತಿಭಾಶಾಲಿಗಳೆಲ್ಲ ಜಗಳವಾಡದ ಜೊತೆಗಾರರು; ಷೆಲ್ಲಿ

ಸ್ತುತಿಸುವ 'ಪ್ರಪಂಚ ಗುರುತಿನದ ಶಾಸನಕಾರರು.' 'ಸತ್' ಎಂಬುದು ಒಂದು; ಅದಕ್ಕೆ ಹಾದಿ ಹತ್ತೆಂಟು. ಹಾದಿಯೂ ಒಂದೇ ಎಂದು ಬಗೆಯುವವನು ಅಜ್ಞ.

ವಸ್ತುವಿನ ಘಟನೆಯ ವಿಷಯದ ಇಂದ್ರಿಯಾನುಭವದಿಂದ ಬಾಹ್ಯಪರಿಚಯ ದೊರಕಿ, ತನ್ಮೂಲಕ ಉಂಟಾಗುವ ತಿಳಿವಳಿಕೆ ಯಾವಾಗಲೂ ಅಲ್ಪಸ್ವಲ್ಪ, ಕಿಷ್ಕಿಂಧ, ಅಪರಿಪೂರ್ಣ. ವಾಸ್ತವಿಕತೆಯನ್ನು ಅಸತ್ಯವೆಂದು ಅಸಡ್ಡೆಗೈಯುವುದು ತಪ್ಪು. ಆದರೆ ಅದು ಬರಿ ವೇಷ; ಸತ್ಯದ ಏಕದೇಶ ಮಾತ್ರ. ನಿಜದ ಎಲ್ಲ ಮುಖವನ್ನೂ ಒಳಗೊಂಡ ಶುದ್ಧಸ್ವರೂಪ ಮನುಷ್ಯ ಸಾಹಸಕ್ಕೆ ಸಾಧ್ಯವಾದಷ್ಟು ಸಿಕ್ಕುವುದು ಹೇಗೆ? ಪ್ಲೇಟೋವಿನ 'ಐಡಿಯ' (Idea) ಅರಿಸ್ಟಾಟಲನ 'ಐಡಾಸ್' (Acidos) ಸರ್ವ ಬೋಧವಾದ 'ಆದರ್ಶ' (Ideal) ದ ಸಾಮಿಪ್ಯ ಲಭಿಸುವುದು ಹೇಗೆ? ಅಂತಃಚಕ್ಷುವಾದ ಇಮ್ಯಾಜಿನೇಷನ್‌ನ ಮೂಲಕ ಅದನ್ನು ಗ್ರಹಿಸುವುದೊಂದೇ ವಿಧಾನ. ಹಾಗೆ ಮಾಡುವಾಗ ವಿಕಾರ ಊಹೆಗಳೂ ವಿಪರೀತ ಕಲ್ಪನೆಗಳೂ ಜನಿಸಿ ದಾಂಧಲೆಗೈವ ಸಂಭವವುಂಟು. ಉದರಕ್ಕೆ ಹೃದಯಕ್ಕೆ ಮನಸ್ಸಿಗೆ ಶ್ವಾಸಕೋಶಕ್ಕೆ ರೋಗಗಳಿರುವಂತೆ ಇಮ್ಯಾಜಿನೇಷನ್ನಿಗೂ ರೋಗವಿವೆ. ಬಿಳಿ ಕಪ್ಪು ತೊಗಲೆಂಬ ವರ್ಣಮದ, ಮೂರ್ಖ ಮತಾಂಧತೆ, ಹುಸಿದರ್ಪದ ಅರೆಹುಚ್ಚು, ಮಾರಿ ದೆವ್ವವೆಂಬ ಇರುಳು ಭೀತಿ, ಪವಾಡ ಜರುಗುವುದೆಂಬ ಹಗಲುಗನಸು, ಒಂದನ್ನ ಇನ್ನೊಂದೆಂದು ಬಗೆಯುವ ವಕ್ರ ಊಹೆ, ನಿಷ್ಕಾರಣ ಸಂಶಯ, ನಿರಾಶೆ ಮುಂತಾದ ಕೊಳೆಗಳೆಲ್ಲ ಕಾಹಿಲೆಇಮ್ಯಾಜಿನೇಷನ್ನಿಂದಾದ ನರ ದೌರ್ಬಲ್ಯದ ಸ್ವೇದ. ಪರಿಪೂರ್ಣಜ್ಞಾನ ಆದಷ್ಟು ದೊರಕಬೇಕಾದರೆ ಇಮ್ಯಾಜಿನೇಷನ್ ದೃಢಾರೋಗ್ಯ ಕೂಡಿ ಸುಟಿಯಾಗಿರಬೇಕು. ಉತ್ತಮ ಕಲೆಯ ನಿತ್ಯ ಸಂಸರ್ಗ ಅದಕ್ಕೆ ತಕ್ಕ ಉಪಾಯ.

ಹೃದಯವನ್ನು ಕುಲುಕಿ ಅಲುಗಾಡಿಸಿ, ಭಾವಗಳನ್ನು ಎಬ್ಬಿಸಿ ಉದ್ರೇಕಿಸುತ್ತ, ತನ್ನ ಎಸಕವನ್ನು ಎಸಗುವುದು ಇಮ್ಯಾಜಿನೇಷನ್‌ನ ಒಂದು ಸುಂದರ ಚರ್ಯೆ. ಆದ್ದರಿಂದಲೇ ಅದು ಕವಿಗಳಿಗೆ ಅಷ್ಟೊಂದು ಒಗ್ಗಿಬಿಟ್ಟಿರುವುದು. 'ಅಯ್ಯೋ, ಬಹು ಬೇಜಾರು!' ಎಂಬ ಉದ್ಗಾರವನ್ನು ಉಸುರುತ್ತ ಬಿಸುಸುಯ್ಯುದ ಮಂದಿ ಎಷ್ಟಿದ್ದಾರೆ ಕ್ಷಿತಿಯ ಮೇಲೆ? ಬಲು ಮಂದಿಯ ಬಾಳು ಹೀಗೆ ಅಮಿಶ್ರ ಬೇಸರದ ಹೊರೆಯಾಗುವುದೇಕೆ? (ಮನುಜನ ಚಿತ್ತ ಗಡಿಯಾರದ ಲೋಲಕದಂತೆ : ಆ ಕೊನೆಯ ಜುಗುಪ್ಸೆಯಿಂದ ಈ ಕೊನೆಯ ಜುಗುಪ್ಸೆಗೆ ತೂಗಾಡುತ್ತ ನಡೆಯುತ್ತದೆ.) ಒಂದು ಸ್ವಾರಸ್ಯದಿಂದ ಇನ್ನೊಂದು ಸ್ವಾರಸ್ಯಕ್ಕೆ ಅದೇಕೆ ಒಲೆಯಬಾರದು? ದಿನಬಳಕೆಯ ಪ್ರತ್ಯಕ್ಷ ವಿದ್ಯಮಾನಗಳು ಔದ್ಯೋಗಿಕವಾಗಲೀ ಯಾಂತ್ರಿಕವಾಗಲೀ ಜನಸಂಪರ್ಕದಲ್ಲಾಗಲೀ ನಿಸರ್ಗ ಸಂಪರ್ಕದಲ್ಲಾಗಲೀ ಅವಲ್ಲಿ ಅವಿತುಕೊಂಡಿದೆ ಅಚ್ಚರಿ ಸೊಗಸು. ಅದನ್ನು ಕೂಗಿ ಹೊರಕ್ಕೆ ಕರದು ತೋರಿಸುವ ಚೈತನ್ಯ ಇಮ್ಯಾಜಿನೇಷನ್ನಿಗಿದೆ. ಕಛೇರಿಯ ಮೇಜಿನ ಬಳಿ ಆವ ಉಲ್ಲಾಸ, ರೈಲು ಎಂಜಿನ್ನಿಗೆ ಎಂಥ ಚೆಲುವು, ಒಲೆ ಹೊತ್ತಿಸಿ ಅಡಿಗೆ ಮಾಡುವಾಗ ಏನು ಹಿತ, ಟೆಲಿಗ್ರಾಫ್ ಕಂಬ ನಯನ ಮನೋಹರವೆ—ಎಂದು

ಇಮ್ಯಾಜಿನೇಷನ್ನುಳ್ಳ ಯಾವ ನರನೂ ತಾತ್ಸಾರ ಸೂಚಿಸಲು ಆಧಾರವಿಲ್ಲ. ರಸಪುಷ್ಟ ಬದುಕಿಗೆ ಎಲ್ಲರಿಗೂ ಹಕ್ಕುಂಟು; ಸಾಧನ ಸಂಪತ್ತೂ ಹೇರಳವಾಗಿದೆ. ಕೃತಕ ಬಡತನದಲ್ಲಿ ಮನುಷ್ಯ ನರಳಿದರೆ ತಪ್ಪು ಯಾರದ್ದು ?

ಕೇವಲ ಗುರುತರ ವಿಚಾರಗಳಲ್ಲಿ ಮಾತ್ರ ಇಮ್ಯಾಜಿನೇಷನ್ ಸದಾ ನಿರತವಾಗಿ ರಬೇಕೆಂಬ ನಿರ್ಬಂಧವಿಲ್ಲ. ಆಗಾಗ ಅದು ಹೊಣೆಗಾರಿಕೆಯ ಕಟ್ಟನ್ನು ಸಡಿಲಿಸಿಕೊಂಡು ಲಘು ವಿನೋದಗಳಿಂದ ಆಕರ್ಷಿತವಾಗಿ, ಹುಡುಗಾಟಿಕೆಯ ಪ್ರಕಾರ ನೃತ್ಯಗೈಯುವ ಸಂಪ್ರದಾಯವಿದೆ. ಅದಕ್ಕೆ ಆಗ ರಜಾದಿನ ಸಹಜವಾದ ಚಿತ್ತಹಾಸ. ಧಾರಾಳ ಊಹೆಗಳೂ ಸ್ವೇಚ್ಛಾ ಕಲ್ಪನೆಗಳೂ ತಮ್ಮದೇ ಆದ ತರ್ಕ ಸರಣಿಯನ್ನು ಅನುಸರಿಸಿ ಮೆರವಣಿಗೆ ನಡೆಯುತ್ತವೆ. ಮಕ್ಕಳ ಪ್ರಾಸಪದ್ಯ (Nursery Rhyme), ಪ್ರಾಣಿ ಗಳೇ ಪಾತ್ರವಾದ ಮಿಥ್ಯ ಕಥೆ (Fable), ಅಸಂಬದ್ಧ ಸಾಹಿತ್ಯ (Nonsense Literature), ಅದ್ಭುತ ಕಥೆ (Wonder Tale) ಮೊದಲಾದುವೆಲ್ಲ ಉದ್ಭವವಾಗುವುದು ಇಂಥ ಸಮಯದಲ್ಲಿಯೇ. ಇಮ್ಯಾಜಿನೇಷನ್ನಿನ ಈ ಪದ್ಧತಿಯ ಪ್ರಕಟನೆಗೆ ಫ್ಯಾನ್ಸಿ (Fancy) ಎಂದು ಹೆಸರು. ಕೋಲ್‌ರಿಜ್, ಇನ್ನೂ ಕೆಲವರು, ಫ್ಯಾನ್ಸಿಯೊಂದು ಪ್ರತ್ಯೇಕ ಮಾನಸಿಕ ಶಕ್ತಿಯೆಂದು ವಾದಿಸಿದರು. ಅದಕ್ಕೀಗ ಮನ್ನಣೆಯಿಲ್ಲ. ಇಮ್ಯಾಜಿನೇಷನ್ ಒಂದೇ ಶಕ್ತಿ; ಅದು ಮೈದೋರುವ ಮಾಳ್ಕೆ ಏಳುಂಟು. ಇನ್ನೊಂದು ಎಚ್ಚರಿಕೆ. ಕಲಾಕ್ಷೇತ್ರದಲ್ಲಿ ಫ್ಯಾನ್ಸಿಯ ಸರಸಸಲ್ಲಾಪ ಹೊರಗಡೆ ಬಾಲ್ಯಕೇಳಿಯಾಗಿ ಕಾಣಿಸಿದರೂ ಒಳಗಡೆ ಅದಕ್ಕೆ ಉಜ್ವಲ ವಿವೇಚನೆ. ಅಸಂಬದ್ಧ ಸಾಹಿತ್ಯ ರಚನೆಗೂ ಅಗತ್ಯ ಅಸಾಧಾರಣ ಪ್ರೌಢಿಮೆ, ಆಜನ್ಮ ಪ್ರತಿಭೆ.

ನೆರೆಮನೆಯವನ ಕಷ್ಟಸುಖಗಳನ್ನು ಸ್ಪಷ್ಟವಾಗಿ ತಿಳಿಸಿ ಸಹಾನುಭೂತಿ ಹುಟ್ಟಿಸುವುದು ಇಮ್ಯಾಜಿನೇಷನ್. ಪರರಾಷ್ಟ್ರದ ರೀತಿ ನೀತಿ ಆಗುಹೋಗುಗಳ ಖಂಡಿತ ಪರಿಚಯ ಮಾಡಿಕೊಟ್ಟು ಸೌಹಾರ್ದ ಬೆಳೆಸುವುದು ಇಮ್ಯಾಜಿನೇಷನ್. ಪ್ರಪಂಚದ ಹಿಂದಿನ ಚರಿತ್ರೆಯನ್ನು ಸರಿಯಾಗಿ ಚಿತ್ರಿಸಿ ಅರ್ಥಮಾಡಿಕೊಳ್ಳಲು ಬೇಕು ಇಮ್ಯಾಜಿನೇಷನ್. ಭವಿಷ್ಯ ಪ್ರಪಂಚದ ರೂಪುರೇಖೆಗಳನ್ನು ಊಹಿಸಲು ಬೇಕು ಇಮ್ಯಾಜಿನೇಷನ್. ಇಮ್ಯಾಜಿನೇಷನ್ ವಿನಾ ಸುಪುಷ್ಟ ಜೀವನವಿಲ್ಲ; ಜೀವನದ ಪ್ರಗತಿಯಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ, ಸ್ವಾರ್ಥ ವ್ಯವಹಾರದ 'ನಾನು' 'ನನ್ನದು' ಎಂಬ ಇಕ್ಕಟ್ಟಿನ ನೆಲಮಾಳಿಗೆ ಸೆರೆಯಿಂದ ಬಿಡಿಸಿ ಸ್ವಾತಂತ್ರ್ಯ ಈಯುವುದು ಇಮ್ಯಾಜಿನೇಷನ್. ಅಣು ಮಾನವ ವ್ಯಕ್ತಿಗೆ ಬ್ರಹ್ಮಾಂಡದೊಡನೆ ಆತ್ಮೀಯವಾಗಿ ತಾಂಡವಗೈಯುವ ಪವಿತ್ರ ತೇಜಸ್ಸು ಲಭಿಸಲು ನೆರವಾಗಬೇಕು ಇಮ್ಯಾಜಿನೇಷನ್.

**ಎಸ್. ವಿ. ರಂಗಣ್ಣ**

# ನುಡಿನಂಟು

ಭಾಷೆಗೂ ಮಾನವನ ಇತರ ವ್ಯಾಪಾರಗಳಿಗೂ ಇರುವ ಸಂಬಂಧವನ್ನೂ ಭಾಷೆಯಿಂದಾಗಿ ವ್ಯಕ್ತಿ ವ್ಯಕ್ತಿಗೆ ತೊಡಗುವ ಸಂಬಂಧವನ್ನೂ ಕುರಿತು ಕೆಲವು ಅಂಶಗಳನ್ನು ಪರಿಶೀಲಿಸುವುದೇ ಈ ಲೇಖನದ ಉದ್ದೇಶ.

ಮಾನವನಲ್ಲಿ ಮೊದಲು ಮಾತು ಎಂದು, ಹೇಗೆ ಮೂಡಿತು, ಮೊಳೆಯಿತು ಎಂಬುದರ ಬಗ್ಗೆ ಹಲವು ಊಹಾಪೋಹಗಳು ನಡೆದಿವೆ, ಅಭಿಪ್ರಾಯಗಳು ತೇರಿವೆ. ಈ ಊಹಾಪೋಹಗಳ ಮತ್ತು ಅಭಿಪ್ರಾಯಗಳ ಪರಿಶೀಲನೆ ಇಲ್ಲಿ ಅಪ್ರಕೃತ. ಭಾಷೆಯ ಆದಿ ಸದ್ಯಕ್ಕಂತೂ ನಿರ್ಭೇದ್ಯ ರಹಸ್ಯವಾಗಿದೆ; ಬಹುಶಃ ಎಂದೆಂದೂ ಅದು ಹಾಗೆ ರಹಸ್ಯವಾಗಿಯೇ ಉಳಿಯುತ್ತದೆ. ಪ್ರಪಂಚದ ಆದಿ ಭಾಷೆಯಾವುದು ಎಂಬುದನ್ನು ಕಂಡು ಹಿಡಿಯಲು ಹಿಂದೆ ನಡೆದುವು ಎಂದು ಹೇಳುವ ಹಲವು ಪ್ರಯೋಗಗಳ ಕಥೆಗಳಲ್ಲಿ ಎರಡನ್ನು ಇಲ್ಲಿ ಪ್ರಸ್ತಾಪಿಸಬಹುದಾಗಿದೆ. ಈ ಕಥೆಗಳಲ್ಲಿ ಒಂದು ನಮ್ಮ ಭರತ ಖಂಡದ್ದು, ಇನ್ನೊಂದು ಹೊರದೇಶದ್ದು. ಕ್ರಿಸ್ತ ಪೂರ್ವ ಐದನೆಯ ಶತಮಾನದಲ್ಲಿದ್ದ ಯವನ ಇತಿಹಾಸಕಾರ ಹೇರೊದೋತೊಸ್ ಹೇಳುವ ಕಥೆ ಇದು. ಈಜಿಪ್ಟಿನಲ್ಲಿ ಆಳುತ್ತಿದ್ದ ಪ್ಸಮ್ಮೆತಿಖೊಸ್ ಎಂಬೊಬ್ಬ ದೊರೆಗೆ ಪ್ರಪಂಚದ ಆದಿಭಾಷೆ ಯಾವುದು ಎಂದು ಕಂಡುಹಿಡಿಯುವ ಕುತೂಹಲವಾಯಿತಂತೆ. ಆತ ಇದಕ್ಕಾಗಿ ಒಂದು ಪ್ರಯೋಗ ನಡಸಿದನಂತೆ. ಎರಡು ಹಾಲು ಹಸುಳೆಗಳನ್ನು ಮನುಷ್ಯ ಸಂಪರ್ಕವೇ ಇಲ್ಲದ ನಿರ್ಜನ ಪ್ರದೇಶದಲ್ಲಿ ಬೇರ್ಪಡಿಸಿಟ್ಟು, ಅವಕ್ಕೆ ನಳಿಕೆಗಳ ಮೂಲಕ ಹಾಲೊದಗಿಸುವ ಏರ್ಪಾಟು ಮಾಡಿ, ಯಾವೊಂದು ಮನುಷ್ಯ ಧ್ವನಿಯೂ ಅವುಗಳ ಕಿವಿಗೆ ಬೀಳದಂತೆ ಎಚ್ಚರಿಕೆ ತೆಗೆದುಕೊಂಡು ಬೆಳಸಿದನಂತೆ. ಕೆಲವು ಕಾಲವಾದ ಮೇಲೆ ಪರೀಕ್ಷಿಸಲು ಹೋಗಿ ನೋಡಿದಾಗ ಆ ಹಸುಳೆಗಳು 'ಬೆಕೊ' ಎಂದ ಹಾಗೆ ಭಾನವಾಯಿತಂತೆ. 'ಬೆಕೊ(ಸ್)' ಎಂದರೆ ಫ್ರಿಜಿಯ ನುಡಿಯಲ್ಲಿ ರೊಟ್ಟಿ ಎಂದು ಅರ್ಥ. ಹಸುಳೆಗಳು ಹಸಿದು /ರೊಟ್ಟಿ ಬೇಡುತ್ತಿವೆ, ಅದಕ್ಕಾಗಿ 'ಬೆಕೊ' ಎನ್ನುತ್ತಿವೆ ಎಂದುಕೊಂಡು, ಯಾರ ಉದ್ದೇಶ ಪ್ರಯತ್ನ ಬೋಧನ ಚೋದನಗಳೂ ಇಲ್ಲದೆ ತಮ್ಮಷ್ಟಕ್ಕೆ ತಾವೇ ಸ್ವಾಭಾವಿಕವಾಗಿ 'ಬೆಕೊ' ಎಂಬ ಫ್ರಿಜಿಯ ಮಾತನ್ನು ಮಕ್ಕಳು ಉಚ್ಚರಿಸಿದ್ದರಿಂದ ಪ್ರಪಂಚದ ಆದಿ ಭಾಷೆ ಫ್ರಿಜಿಯ ಭಾಷೆ ಎಂದು ಆ ದೊರೆ ತೀರ್ಮಾನಿಸಿದನಂತೆ. ಈ ಕಥೆಯ ಮೈಯನ್ನೂ ತಿರುಳನ್ನೂ ಹೆಚ್ಚು ಹಿಕ್ಕ ಹೋಗುವುದು ನಮ್ಮ ಬುದ್ಧಿ ಶ್ರದ್ಧೆಗಳಿಗೆ ಅಪಚಾರ ಮಾಡಿದಂತೆ. ಇದನ್ನು ಕುರಿತು ಇಷ್ಟು ಹೇಳಬಹುದು. ಆ ಮಕ್ಕಳು ಏನು ಬೆಬೇಬ್ಯಾ ಎಂದು ಅರಚಿದುವೊ! ಅರಸನು ಮಾತ್ರ ಆ ಅಸ್ಪಷ್ಟ ಧ್ವನಿಯನ್ನು ತನಗೆ ಪರಿಚಿತವಾಗಿದ್ದ ತನ್ನ ಫ್ರಿಜಿಯ ನುಡಿಯ ಬೆಕೊ(ಸ್) ಎಂಬ ಮಾತಿಗೆ ಹೊಂದಿಸಿಕೊಂಡು ಬಿಟ್ಟ. ಅಂಥದೇ ಒಂದು ಪ್ರಸಂಗದಲ್ಲಿ ಅಂಥ ಅಸ್ಪಷ್ಟ ಧ್ವನಿ ಕನ್ನಡಿಗನ

ಕಿವಿಗೆ ಬಿದ್ದಿತು ಎನ್ನಿ. ಅವನು ಖಂಡಿತವಾಗಿ ಅದನ್ನು 'ಬೇಕು' ಅಥವಾ 'ಬೆಕ್ಕು' ಎಂಬ ತನ್ನ ನುಡಿಯ ಮಾತಿಗೆ ಸರಿಹೊಂದಿಸಿಕೊಂಡು, ಆ ಮಕ್ಕಳು ಹಾಲು ಬೇಕು ಎನ್ನುತ್ತವೆ ಎಂದೋ ಬೆಕ್ಕು ಬಂತು ಎನ್ನುತ್ತವೆ ಎಂದೋ ಅರ್ಥ ಮಾಡಿ, ಪ್ರಪಂಚದ ಆದಿ ಭಾಷೆ ಸರ್ವಥಾ ಕನ್ನಡ ಎಂದು ತೀರ್ಮಾನಿಸಿಬಿಡುತ್ತಿದ್ದನೆಂಬುದರಲ್ಲಿ ಸಂದೇಹ ವಿಲ್ಲ.

ಇನ್ನು ನಮ್ಮ ದೇಶದ ಕಥೆ, ಕ್ರಿಸ್ತಶಕ ಹದಿನಾರನೆಯ ಶತಮಾನದ್ದು. ಮೊಗಲ ಚಕ್ರವರ್ತಿ ಅಕ್ಬರನಿಗೂ ಇಂಥದೇ ಕುತೂಹಲ ಕೆರಳಿ ಅವನೂ ಇಂಥಸೊಂದು ಪ್ರಯೋಗ ನಡಸಿದನಂತೆ. ಆದರೆ, ಆ ಪ್ರಯೋಗದ ಪರಿಣಾಮ ಮಾತ್ರ ಬೇರೆಯ ಪ್ರಕಾರದ್ದು, ಇಂದೂ ಅರ್ಥವತ್ತಾದ್ದು. ತಾನು ನಡಸಿದ ಪ್ರಯೋಗದ ಫಲವನ್ನು ಪರೀಕ್ಷಿಸಲು ಚಕ್ರವರ್ತಿ ಸಮಿತ್ರಪರಿವಾರನಾಗಿ ಹೋಗಿ ಮಕ್ಕಳನ್ನು ನೋಡಿದಾಗ ಅವು ಯಾವ ಶಬ್ದವನ್ನೂ ಮಾಡದೆ ಮೂಕವಾಗಿದ್ದುವಂತೆ. ಮಕ್ಕಳು ಯಾವ ಧ್ವನಿ ಯನ್ನೂ ಮಾಡಲೇ ಇಲ್ಲವೊ, ಇಲ್ಲವೆ, ತನಗೆ ಪರಿಚಿತವಾದ ಭಾಷೆಗಳಲ್ಲಿಯ ಯಾವೊಂದು ಅರ್ಥವತ್ತಾದ ಧ್ವನಿಯನ್ನೂ ಮಾಡಲಿಲ್ಲವೊ ಎಂಬ ಸೂಕ್ಷ್ಮವಿಚಾರ ಇಲ್ಲಿ ಸಲ್ಲದು. ಇಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದ್ದು ಈ ಪ್ರಯೋಗ ಪರಿಣಾ ಮದ ಸ್ವಾರಸ್ಯವನ್ನು. ಅದೇನೆಂದರೆ: ಮಗುವಿಗೆ ಕಲಿಸದೆ, ಕಲಿಯದೆ, ಯಾವ ಮಾತೂ ತಾನೇ ತಾನಾಗಿ ಬರುವುದಿಲ್ಲ. ಮಾನವಕುಲದ ಆದಿ ಭಾಷೆ ಎಂದರೆ, ಒಂದು ಅರ್ಥದಲ್ಲಿ, ಮೂಕ ಭಾಷೆ. ಭಾಷೆ ಎಂದರೆ ಉದ್ದೇಶ ಪೂರ್ವಕವಾಗಿ ಉದ್ದೇಶ ಪೂರೈಕೆಗಾಗಿ ಜಿಹ್ವಾದಿ ಅಂಗಗಳ ಚಲನವಲನಗಳಿಂದ ಉಲಿದು ಶ್ರವಣ ಗೋಚರ ವಾಗುವ ಸಾರ್ಥಕ ಉಕ್ತಿ ಎಂಬುದನ್ನು ಗಮನಿಸಬೇಕು. ನೋವು ನಲಿವುಗಳಿಂದ ಹಸಿವು ನೀರಡಿಕೆಗಳಿಂದ ಬೆದರು ಬೆರಗುಗಳಿಂದ ಕೆರಳಿ ಪ್ರಾಣಿಗಳು ಬುದ್ಧಿವ್ಯಾಪಾರವಿ ಲ್ಲದೆ ಹೊಮ್ಮಿಸುವ ಕೇವಲ ಉದ್ಗಾರಗಳನ್ನು ಈ ಸಂದರ್ಭದಲ್ಲಿ ಪರಿಗಣಿಸಲಾಗದು.

ಪರಪ್ರೇರಣೆ ಪರಬೋಧನೆಗಳಿಂದಾಗಿ, ಸ್ವಬುದ್ಧಿ ಸ್ವಪ್ರಯತ್ನಗಳಿಂದಾಗಿ ಮಾನವ ಸಹವಾಸ ಸಂಸರ್ಗದಲ್ಲಿ ಅಭ್ಯಾಸ ಮೂಲಕದ ಹೊರತು, ಮನುಷ್ಯನಿಗೆ ತಾನೇ ತಾನಾಗಿ ಯಾವ ಭಾಷೆಯೂ ಮೂಡಿ ಬರುವುದಿಲ್ಲ. ಹಾಗಾದರ, "ಮನುಷ್ಯ ಮಾತನಾಡುವ ಪ್ರಾಣಿ" ಎನ್ನುತ್ತಾರಲ್ಲ! ಅದಕ್ಕೆ ಏನು ಅರ್ಥ ಎಂದು ಕೇಳಬಹುದು. ಭಾಷಾದೃಷ್ಟಿಯಿಂದ, ಮನುಷ್ಯನಿಗೂ ಪ್ರಾಣಿಗೂ ಇರುವ ವ್ಯತ್ಯಾಸ ಇಷ್ಟೆ: ಮನುಷ್ಯೇ ತರ ಪ್ರಾಣಿಗೆ ವಾಕ್‌ಛಕ್ತಿಯೇ ದತ್ತವಾಗಿಲ್ಲ; ಎಷ್ಟು ಬೋಧನ ಶಿಕ್ಷಣ ಅಭ್ಯಾಸ ಸಂಸ್ಕಾರ ನಡೆದರೂ ಪ್ರಾಣಿ ಮಾತನಾಡಲಾರದು (ಇಲ್ಲಿ ಅರಗಿಳಿಯ ಪ್ರಸ್ತಾಪಬೇಡ); ಮನುಷ್ಯನಿಗಾದರೊ ಸಾಮಾನ್ಯ ವಾಕ್‌ಛಕ್ತಿ ನಿಸರ್ಗದತ್ತವಾಗಿದೆ. ಆದರೆ, ಅವನು ಯಾವ ನಿರ್ದಿಷ್ಟ ಭಾಷೆಯನ್ನು ಆಡುತ್ತಾನೆ ಎಂಬುದು ಪರಿಸ್ಥಿತಿ ವಾತಾವರಣಗಳನ್ನು ಅವಲಂಬಿಸಿದೆ; ಅಷ್ಟೇ ಅಲ್ಲ, ಯಾವ ಪ್ರಭಾವವೂ ಬೀಳದೆ ಯಾವ ಪ್ರಯತ್ನವೂ ನಡೆಯದಿದ್ದರೆ ಮನುಷ್ಯ ಯಾವ ಭಾಷೆಯನ್ನೂ ಆಡಲಾರ. ಮನುಷ್ಯನನ್ನು ಪ್ರಾಣಿ

ಯೊಡನೆ ಹೋಲಿಸಿ ನೋಡುವುದರಿಂದ ಭಾಷಾ ಶಕ್ತಿಯ ಒಂದ ಮುಖದ ಅರಿವು ನಮಗೆ ಆಗುವುದಾದರೆ, ಅವನನ್ನು ಯಂತ್ರದೊಡನೆ ಹೋಲಿಸಿ ನೋಡುವುದರಿಂದ ಅದರ ಇನ್ನೊಂದು ಮುಖ ಅರಿವಾಗುತ್ತದೆ. ಮಾತಾಡುವಂತೆ ತೋರುವ ಯಂತ್ರಗಳು ಇವೆ: ಗ್ರಾಮಫೋನು, ಟೆಲಿಫೋನು, ರೇಡಿಯೊ, ಮೊದಲಾದುವು. ಆದರೆ, ಇವು ನಿಜವಾಗಿ ಮಾತಾಡುವ ಯಂತ್ರಗಳಲ್ಲ. ಇವು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಇನ್ನೊಬ್ಬರು ಆಡಿದ ಮಾತನ್ನು ಒಯ್ಯುವ, ಸಾಗಿಸುವ ಸಾಧನ ಯಂತ್ರಗಳು ಮಾತ್ರ. ವಿಜ್ಞಾನ ಸಂಶೋಧನೆಗಳ ಫಲವಾಗಿ ತಾನೇ ಮಾತಾಡುವಂತೆ ಭಾಸವಾಗುವ ಯಂತ್ರಗಳನ್ನು ನಿರ್ಮಿಸಲು ಇಷ್ಟರಲ್ಲೇ ಸಾಧ್ಯವಾಗಲೂ ಬಹುದು. ಆದರೆ, ಆಗ ಕೂಡ ಅವು ಹಲವು ಚಲನವಲನಗಳ ಮೂಲಕ ಕೆಲವು ಗೊತ್ತಾದ ಧ್ವನಿಗಳನ್ನು ಪಡಿಮೂಡಿಸಬಹುದೆ ಹೊರತು, ಯಂತ್ರ ಯಾವುದೂ ಯಾವ ನೈಜ ಭಾಷೆಯನ್ನೂ ಆಡಲಾರದು. ಹೀಗೆಂದರೆ ಅರ್ಥವೇನು? ಯಾವ ವ್ಯಕ್ತಿಯೆ ಆಗಲಿ ಮಾತನಾಡಿದರೆ ಆ ಮಾತಿನ ಹಿಂದೆ, ಆ ಮಾತಿಗೆ ಪ್ರೇರಕವಾಗಿ, ಆಧಾರವಾಗಿ ಆಲೋಚನೆ ನಡೆದಿರಬೇಕು. ಆಲೋಚನೆ ಆಗ ತಾನೆ ನಡೆದಿರಬಹುದು, ಬಲು ಹಿಂದೆ ನಡೆದಿರಬಹುದು, ಪ್ರತ್ಯಕ್ಷವಾಗಿ ನಡೆದಿರಬಹುದು, ಪರೋಕ್ಷವಾಗಿ ನಡೆದಿರಬಹುದು; ಆ ವ್ಯಾಪಾರ ಪ್ರಬುದ್ಧ ಪ್ರಜ್ಞೆಯಲ್ಲಿ ನಡೆದಿರಬಹುದು, ಸುಪ್ತ ಪ್ರಜ್ಞೆಯಲ್ಲಿ ನಡೆದಿರಬಹುದು. ಅಂತೂ, ಎಂದೋ ಎಂತೋ ಹೇಗೋ ಆಲೋಚನೆ ನಡೆಯದ ಹೊರತು, ನಡೆದಿರದ ಹೊರತು ಮಾತು ಮೂಡಲಾರದು, ಹೊಮ್ಮಲಾರದು. ಆಲೋಚನೆಗೂ ಭಾಷೆಗೂ ನಿಕಟ ಸಂಬಂಧವಿದೆ. ಇವೆರಡಕ್ಕೂ ಅನ್ಯೋನ್ಯ ಸಂಬಂಧ, ಅವಿನಾ ಸಂಬಂಧ ಇದೆ ಎನ್ನಬಹುದು. ಆಲೋಚನೆ ಇಲ್ಲದೆ ಭಾಷೆಯಿಲ್ಲ, ಭಾಷೆ ಇಲ್ಲದೆ ಆಲೋಚನೆಯಿಲ್ಲ. ಈ ಮರ್ಮವನ್ನು ಅರಿತರೆ "ಮಾತಾಡುವ ಯಂತ್ರ" ಎಂಬುದು ಅಸಾಧ್ಯದ ಮಾತು ಎಂಬುದು ತಿಳಿಯುತ್ತದೆ. ಏಕೆಂದರೆ, ಮಾತಾಡುವಂತೆ ತೋರುವ ಯಂತ್ರಗಳು ಇರಬಹುದಾದರೂ ಆಲೋಚನೆ ಮಾಡುವ ಯಂತ್ರಗಳು ಇನ್ನೂ ಬಂದಿಲ್ಲ. ಅಂಥ ವಿಶ್ವಾಮಿತ್ರ ಸೃಷ್ಟಿಯ ಕಾಲ ಎಂದಾದರೂ ಬಂದೀತೆನ್ನುವುದೂ ಧಾರ್ಷ್ಟ್ಯದ ಮಾತೇ ಆದೀತು. ಅದು ಏನೇ ಇರಲಿ, ಆಲೋಚನೆ ಮಾಡುವ ಯಂತ್ರ ಇಲ್ಲದ ಮೇಲೆ ಮಾತಾಡುವ ಯಂತ್ರದ ಮಾತೇ ಇಲ್ಲ.

ಭಾಷೆಯನ್ನು ಆಲೋಚನಾವಾಹನ, ಆಲೋಚನಾ ಸಾಧನ, ಆಲೋಚನಾ ಪ್ರಣಾಳ ಎಂದು ಪರಿಗಣಿಸಬಹುದು. ವಾಹನ, ಸಾಧನ, ಪ್ರಣಾಳ ಎಂಬ ಈ ಪದಗಳು ಪರ್ಯಾಯ ಪದಗಳಂತೆ ತೋರಿದರೂ ಇವು ಒಂದೊಂದೂ ಭಾಷೆಯ ಒಂದೊಂದು ವ್ಯಾಪಾರವನ್ನು ಪ್ರಮುಖವಾಗಿ ನಿರ್ದೇಶಿಸುತ್ತವೆ. ಮನಸ್ಸಿನಲ್ಲಿ ಮೂಡಿದ ಆಲೋಚನೆಗಳನ್ನು ವ್ಯಕ್ತಪಡಿಸುವಾಗ ಭಾಷೆ ವಾಹನವಾಗುತ್ತದೆ; ಮನಸ್ಸಿನಲ್ಲಿ ನಡೆಯುವ ಆಲೋಚನೆಗೆ ಸಹಕಾರಿಯಾದಾಗ ಭಾಷೆ ಸಾಧನವಾಗುತ್ತದೆ; ನಮ್ಮ ಆಲೋಚನೆ ಹೇಗೆ ಹರಿಯುತ್ತದೆ, ಏಕೆ ಹಾಗೆ ಹರಿಯುತ್ತದೆ ಎಂಬುದನ್ನು ಗಮನಿಸಿದಾಗ ಭಾಷೆಯ 'ಪ್ರಣಾಳ' ಧರ್ಮ ಗೋಚರವಾಗುತ್ತದೆ. ಆಲೋಚನೆ ಭಾಷೆ

ಗಳು ಒಂದು ದೃಷ್ಟಿಯಲ್ಲಿ, ಪರಸ್ಪರ ಪ್ರೇರಕ ಪ್ರವರ್ಧಕಗಳು. ಒಂದು ಭಾಷೆಯ ಸಿರಿಸಂಪತ್ತುಗಳು, ಸೊಂಪುಸೆಂಪುಗಳು, ಬಿಗಿ ಬನಿಗಳು ಅದನ್ನು ಆಡುವ ಜನರ ಸಂಖ್ಯೆಯನ್ನು ಅವಲಂಬಿಸಿರುವುದಿಲ್ಲ; ಅದನ್ನು ಬಳಸುವ ಜನರ ಬುದ್ಧಿಯ ಪ್ರಕಾಶಸಂಸ್ಕಾರಗಳನ್ನು ಅವಲಂಬಿಸಿರುತ್ತವೆ ಆಲೋಚನಾಸಂಪತ್ತು ಭಾಷಾ ಸಂಪತ್ತಿನಲ್ಲಿಯೂ, ಭಾಷಾ ಸಂಪತ್ತು ಆಲೋಚನಾ ಸಂಪತ್ತಿನಲ್ಲಿಯೂ ಪ್ರತಿಫಲಿತವಾಗುತ್ತವೆ. ಆಲೋಚನೆ ಭಾಷೆಗಳಿಗೆ ಸಂಬಂಧಪಟ್ಟಂತೆ ಮಾನವ ವ್ಯವಹಾರದಲ್ಲಿ ಮತ್ತೊಂದು ಅಂಶವಿದೆ. ಅದು ಸಂಸ್ಕೃತಿ. ಒಂದು ಜನತೆಯ ಸಂಸ್ಕೃತಿಯ ವಿಕಾಸ ಪ್ರಕಾಶಗಳಿಗೆ ಇತರ ಕಲಾ ಸಾಧನಗಳ ಜತೆಗೆ, ಭಾಷೆಯೂ ಒಂದು ಸಾಧನವಾಗಿದೆ. ಮಿಕ್ಕ ಸಾಧನಗಳಿಗಿಂತ ಭಾಷಾಸಾಧನ ಸಾರ್ವತ್ರಿಕವೂ ಸಮರ್ಥವೂ ಆದದ್ದು. ಶಿಲ್ಪ, ಚಿತ್ರ, ನೃತ್ಯ ಮೊದಲಾದ ಕಲೆಗಳ ಮೂಲಕ ಒಂದು ಜನತೆಯ ಸಂಸ್ಕೃತಿಯ ಸ್ವಲ್ಪ ಭಾಗವನ್ನು ಮಾತ್ರ ತಲೆಮಾರಿಂದ ತಲೆಮಾರಿಗೆ ಒಯ್ದು ಮುಂದಿನ ಪೀಳಿಗೆಗಳಿಗೆ ಪೂರ್ವಾರ್ಜಿತವಾಗಿ ಬಿಡಬಹುದು. ಆದರೆ, ಒಂದು ಜನತೆಯ ಅನುಭವ ಸಂಸ್ಕೃತಿಗಳ ಬಹುಭಾಗ ತಲೆಮಾರಿಂದ ತಲೆಮಾರಿಗೆ ಸಾಗಿ ಪರಂಪರಾಗತ ಸ್ವತ್ತು ಆಗಬೇಕಾದರೆ ಇರುವುದು ಒಂದೇ ಸಾಧನ, ಅದು ಭಾಷೆ. ಭಾಷೆ ಪ್ರಭಾವಶಾಲಿಯೂ ಪರಿಣಾಮಕಾರಿಯೂ ಆದ ಸಾಧನ. ಬರವಣಿಗೆ ಇಲ್ಲದಿದ್ದರೂ ಸಂಸ್ಕೃತಿ ಮುನ್ಸಾಗಿ ಬೆಳೆಯಬಲ್ಲದು. ಆದರೆ ಭಾಷೆ ಇಲ್ಲದಿದ್ದರೆ ಸಂಸ್ಕೃತಿ ಮುನ್ಸಾಗದು, ಬೆಳೆಯದು. ಹೀಗಾಗಿ, ಆಲೋಚನೆ ಭಾಷೆ ಸಂಸ್ಕೃತಿಗಳಿಗೆ ಒಂದು ಬಗೆಯ ಮುಪ್ಪುರಿನಂಟು ಇದೆ ಎನ್ನಬಹುದು.

ಮನುಷ್ಯನಿಗೆ ನಿಸರ್ಗದತ್ತವಾದ್ದು ಸಾಮಾನ್ಯ ವಾಕ್ಛಕ್ತಿ ಮಾತ್ರ, ಯಾವುದೇ ನಿರ್ದಿಷ್ಟ ಭಾಷೆ ಕಲಿತೇ ಬರಬೇಕು ಎಂಬುದನ್ನು ಎಷ್ಟು ಒತ್ತಿ ಹೇಳಿದರೂ ತೀರದು. ಮಗುವಿನ ಬೆಳವಣಿಗೆಯಲ್ಲಿ ಎರಡು ಸಹಕಾರಿ ಅಂಶಗಳನ್ನು, ಆವಶ್ಯಕ ಅಂಶಗಳನ್ನು ಗಮನಿಸಬೇಕು. ಒಂದು ವ್ಯಕ್ತಿ, ಇನ್ನೊಂದು ಆವರಣ. ಬಲುಪಾಲು ಮಕ್ಕಳಿಗೆ ಈ ವ್ಯಕ್ತಿ ತಾಯಿ, ಈ ಆವರಣ ಮನೆ ಮಗುವಿನ ಲಾಲನೆ ಪಾಲನೆಗಳಲ್ಲಿ ತಾಯಿಯ ಪಾತ್ರ ಪ್ರಥಮವೂ ಪ್ರಧಾನವೂ ಆದ್ದು. ಮಗುವಿಗೆ ಹೊರ ಪ್ರಪಂಚದ ಅರಿವು ಅನುಭವಗಳು ತೊಡಗುವುದು ಮನೆಯಿಂದ. ಎಷ್ಟೋ ಮಕ್ಕಳಿಗೆ ಮನೆಯೆ ಪ್ರಪಂಚವಾಗಿ ಬಿಟ್ಟಿರುತ್ತದೆ. ಹೀಗಾಗಿ, ತಾಯ ಮತ್ತು ಮನೆಯ ಪ್ರಭಾವ ಪ್ರಥಮವಾಗಿ, ಸತತವಾಗಿ, ದೀರ್ಘವಾಗಿ, ದೃಢವಾಗಿ ಬಿದ್ದು ಆಗ ಕಲಿತ ಕಲಿಕೆ ಗುಣಗಳೆಲ್ಲ ಬೇರೂರಿ ನಿಲ್ಲುತ್ತವೆ. ಮಗುವಿಗೆ ಅಳು ಅರಚು ನಗು ನರಳುಗಳು ತಾವಾಗಿಯೇ ಬರುತ್ತವೆ. ಮಾತು ಮಾತ್ರ ಹಾಗೆ ಬರುವುದಿಲ್ಲ. ಮೂಕ ಸಹವಾಸದಲ್ಲಿ, ಮೂಕಾವರಣದಲ್ಲಿ ಬೆಳೆದ ಮಗು ಮೂಕಾಗಿಯೇ ಇರುತ್ತದೆ. ಇಲ್ಲಿ ಹೇಳುತ್ತಿರುವುದು ಹುಟ್ಟು ಮೂಗಿನ ವಿಷಯವನ್ನಲ್ಲ. ಹುಟ್ಟು ಮೂಗಿಗೆ ಕಾರಣ ವ್ಯಕ್ತಿಯಲ್ಲಿಯ ಅಂಗದೋಷ, ಅಂಗ ವ್ಯಾಪಾರದೋಷ. ಆದರೆ, ಮಗುವಿಗೆ ವಾಕ್ಛಕ್ತಿ ದತ್ತವಾಗಿದ್ದರೂ ಅಡಗಿರುವ ಆ ಶಕ್ತಿ ವಿಕಾಸವಾಗಿ ಪ್ರಯೋಜನಕ್ಕೆ ಬರದೆ ಹೋಗಿ ಮಗು ಮೂಗಾಗಿ ಬೆಳೆದರೆ ಅದಕ್ಕೆ ಕಾರಣ

ಸಹವಾಸದೋಷ, ಆವರಣದೋಷ. ಮಗು ಮಾತನಾಡುವುದು ಮೊದಲು ತಾಯಿಂದ ಕಲಿತ ಮಾತನ್ನು, ತಾಯ ಮಾತನ್ನು. ಇದರಿಂದ ಆ ಮಾತನ್ನು ತಾಯಿನುಡಿ, ಮಾತೃಭಾಷೆ ಎಂದು ವ್ಯವಹರಿಸುವುದು ರೂಢಿಯಾಗಿದೆ. ಬಲು ಪಾಲು ಅದೃಷ್ಟವಂತ ಮಕ್ಕಳಿಗೆ ಹೆತ್ತ ತಾಯೇ ಸಾಕುತಾಯೂ ಆದದ್ದರಿಂದ ಈ ' ತಾಯಿನುಡಿ'ಯ ಬಗ್ಗೆ ಕೆಲವು ಅಪತಿಳಿವಳಿಕೆಗಳು ತಲೆದೋರಿವೆ.

ನಿಜವಾಗಿ ನೋಡಿದರೆ, ಮಗುವಿನ ಮೊದಲ ಮಾತನ್ನು ತಾಯಿನುಡಿ ಎನ್ನುವುದಕ್ಕಿಂತ ದಾದಿನುಡಿ ಎನ್ನಬೇಕು ಹೆತ್ತವಳು ತಾಯಿ, ಸಾಕಿದವಳು ದಾದಿ. ತಾಯೂ ದಾದಿಯೂ ಒಬ್ಬಳೇ ಆಗಿದ್ದರೆ, ಆಗ ತಾಯಿನುಡಿಯೇ ಮಗುವಿನ ನುಡಿಯೂ ಆಗಿ, ಆ ನುಡಿ ತಾಯಿನುಡಿ ಆಗುತ್ತದೆ. ಹಾಗಲ್ಲದೆ, ಯಾವುದೇ ಕಾರಣದಿಂದ ಮಗುವಿಗೆ ಹೆತ್ತ ತಾಯ ಅಗಲಿಕೆ ಉಂಟಾಗಿ, ಮಗು ದಾದಿಯ ಲಾಲನೆ ಪಾಲನೆಗಳಲ್ಲಿ ಬೆಳೆದರೆ, ಹೆತ್ತ ತಾಯ ಮಾತೂ ಸಾಕು ದಾದಿಯ ಮಾತೂ ಬೇರೆಯಾಗಿದ್ದರೆ, ಆಗ ಮಗುವಿನ ಮಾತು ತಾಯನುಡಿಯಾಗುವುದಿಲ್ಲ. ದಾದಿಯ ನುಡಿ ಆಗಿರುತ್ತದೆ. ಈ ಅಂಶವನ್ನು ಸ್ಪಷ್ಟವಾಗಿ ಗಮನಿಸಬೇಕು. ಏಕೆಂದರೆ, ತಾಯಿಂದ ಮಗುವಿಗೆ ಕೆಲವು ಗುಣಗಳು ಹುಟ್ಟೇ ಕಾರಣವಾಗಿ ಬಂದು ಹುಟ್ಟುಗುಣಗಳಾಗುತ್ತವೆ. ಮಾತು ಇಂಥ 'ಮಾತ್ರಾರ್ಜಿತ' ಹುಟ್ಟುಗುಣಗಳಲ್ಲಿ ಒಂದಲ್ಲ. ಕನ್ನಡಿತಿತಾಯ ಮಗು ಕನ್ನಡ ಮಾತಾಡಿದರೆ ಅದು ಹುಟ್ಟುಗುಣವಲ್ಲ, ಕಲಿತಗುಣ. ಬಂಗಾಳಿತಾಯ ಬಸಿರಲ್ಲಿ ಬಂದ ಮಗುವಿನ ರಕ್ತದಲ್ಲಿ ಬಂಗಾಳಿ ಮಿಡಿದು ನುಡಿಯುತ್ತಿರುವುದಿಲ್ಲ. ಇಂಗ್ಲಿಷ್ ಮಗುವೊಂದು ಹುಟ್ಟಿದಂದಿನಿಂದ ಚೀನಿತಾಯ ಮಡಿಲಲ್ಲಿ ಬೆಳೆದರೆ ಅದರ ನಾಲಗೆ ನುಡಿಯುವುದು ಇಂಗ್ಲಿಷನ್ನಲ್ಲ, ಚೀನಿಯನ್ನು. ಇದನ್ನು ಮನಗಂಡರೆ ಭಾಷಾ ಸಮಸ್ಯೆಯ ಬಗ್ಗೆ ರಾಜಕೀಯಾದಿ ಕಾರಣಗಳಿಂದ, ಅನ್ಯಥಾ ದೃಷ್ಟಿಗಳಿಂದ, ಕೆರಳುವ ಆವೇಶ ಆಕ್ರೋಶಗಳಿಗೆ ಎಡೆಯೇ ಇರುವುದಿಲ್ಲ.

ಅನಾದಿ ಕಾಲದಿಂದ, ಒಂದಲ್ಲ ಒಂದು ಕಾರಣಕ್ಕಾಗಿ ಮಾನವ ವ್ಯವಹಾರದಲ್ಲಿ ಹುಟ್ಟಿಗೆ, ನೆತ್ತರಕರೆಗೆ ಒಂದು ಪ್ರಾಧಾನ್ಯ, ಪ್ರಾಮುಖ್ಯತೆ ಬಂದಿದೆ. ಸಹವಾಸ ಸಂಬಂಧಕ್ಕಿಂತ ರಕ್ತಸಂಬಂಧ ಬಲವತ್ತರವಾದ್ದು ಎಂಬ ಅರ್ಥದಲ್ಲಿ 'ನೆತ್ತರು ನೀರಿಗಿಂತ ಮಂದ' ಎಂದು ಹೇಳುವುದುಂಟು. ನಮ್ಮ ಸಾಹಿತ್ಯ ಸಂಸ್ಕೃತಿಗಳಲ್ಲಿ ಈ ನಂಬಿಕೆಯ ಪ್ರತಿಫಲನವನ್ನು ಕಾಣುತ್ತೇವೆ. ಲವಕುಶರ ಕಾಳೆಗ, ಕರ್ಣಾರ್ಜುನರ ಕಾಳೆಗ- ಇವೇ ಮುಂತಾದ ಪ್ರಸಂಗಗಳಲ್ಲಿ ನಮ್ಮ ಕರುಳನ್ನು ಕಲಕಿ ಹಿಂಡುವ ಭಾವವೆಂದರೆ ನೆತ್ತರನಂಟು, ಆದರೆ, ಈ ನೆತ್ತರನಂಟು ಮನುಷ್ಯ ಕಲ್ಪನೆಯ ಗಂಟು ಅಷ್ಟೆ. ಕಳದಲ್ಲಿ ಲವಕುಶರನ್ನು ಕಂಡೊಡನೆ ರಾಮಲಕ್ಷ್ಮಣರಿಗೆ, ಕರ್ಣನನ್ನು ಕಂಡು ಅರ್ಜುನನಿಗೆ ಯಾವುದೇ ತೆರನ ಅವ್ಯಕ್ತ ಅಸ್ಪಷ್ಟ ಆತ್ಮೀಯ ಭಾವನೆ ಯಾವುದೇ ರೀತಿಯಲ್ಲಿ ಮೂಡಬೇಕಾದರೆ, ಅವರ ಪರಸ್ಪರ ಸಂಬಂಧದ ಬಗ್ಗೆ ಒಂದಲ್ಲ ಒಂದು ರೀತಿಯಲ್ಲಿ, ಒಂದಲ್ಲ ಒಂದು ಸನ್ನಿವೇಶ ಸಂದರ್ಭ ಕಾರಣದಿಂದ ಮೊದಲೇ ಶಂಕೆ ಸಂದೇಹಗಳು

ತಲೆಯಲ್ಲಿ ನುಸುಳಿರಲೇ ಬೇಕು. ಹಾಗಲ್ಲದೆ, ಕೇವಲ ಕರುಳಿನ ಮೂಕಕರೆಯಿಂದ ಆ ಅನುಭವ ಆಯಿತೆನ್ನುವುದು ಬರಿಯ ಕವಿ ಕಲ್ಪನಾಭ್ರಾಂತಿ. ಕರುಳಿನ ಕರೆ ನಿಜವೇ ಆಗಿದ್ದಲ್ಲಿ, ಬಲಿಷ್ಠವಾಗಿದ್ದಲ್ಲಿ, ರುಸ್ತುಂ ಕೈಮೀರುವ ಮೊದಲೆ ತನ್ನ ಮಗನನ್ನು ಗುರುತಿಸಲಾರದೆ ಕೊಲ್ಲುತ್ತಿರಲಿಲ್ಲ; ಈಡಿಪಸ್ ತಾನು ಅರಸ ಹೊರಟ ತನ್ನ ಜನಕನನ್ನು ಯಾವನೋ ದಾರಿಹೋಕನೆಂದು ಹೊಡೆದುಹಾಕುತ್ತಿರಲಿಲ್ಲ 'ಕಣ್ಣಱಿಯದೊಡಂ ಕರುಳಱಿಯದೆ!' ಇದು ಸತ್ಯವೇ ಆಗಿದ್ದರೆ, ಅದು ಬರಿಯ ಕಾವ್ಯ ಸತ್ಯ ಮಾತ್ರ. ನಾವು ರಕ್ತದ ಮಹಿಮೆ ಎಂದು ತಿಳಿದುಕೊಂಡಿರುವುದೆಲ್ಲಾ ಅನೇಕ ವೇಳೆ ಕೇವಲ ಸಹವಾಸ ಸಂಸರ್ಗ ಮಹಿಮೆ ಅಷ್ಟೆ. ತಾಯಿ ಮಕ್ಕಳು, ಅಣ್ಣ ತಮ್ಮಂದಿರು, ಅಕ್ಕತಂಗಿಯರು ಹುಟ್ಟಿದಂದಿನಿಂದ ಅಗಲಿ, ತನ್ನ ಪಾಲಿನವರು ಬೇರೊಬ್ಬರು ಇದ್ದರು, ಇದ್ದಿರಬೇಕು, ಇರಬಹುದು ಎಂಬ ನೆನಪು ಅರಿವುಗಳು ಕೂಡ ಇಲ್ಲದೆ ಬೇರೆಯಾಗಿ ಬೆಳೆದು ಬಿಟ್ಟು, ಅಕಸ್ಮಾತ್ತಾಗಿ ಒಬ್ಬರನ್ನೊಬ್ಬರು ಕಂಡರೆ ಅವರಲ್ಲಿ ಎಂದೂ ಎಂಥ ರಕ್ತಸಂಬಂಧದ ಭಾವನೆಯೂ ಮೂಡಲು ಅವಕಾಶವಿರುವುದಿಲ್ಲ. ಬೇರೆ ಯಾವುದಾದರೂ ಬಾಹ್ಯಕಾರಣದಿಂದ ಅಂಥ ಸಂಬಂಧದ ಅರಿವೊ ನೆನಪೊ ಆದರೆ, ಆಗ ನಮ್ಮ ಸಮಾಜ ಸಾಹಿತ್ಯ ಸಂಸ್ಕೃತಿಗಳು ಮೊದಲಿಂದ ನಮ್ಮ ಮೇಲೆ ಮಾಯೆ ಬೀಸಿ ಹಾಕಿರುವ ಮೋಡಿಯ ಫಲವಾಗಿ ನಮಗೆ ಪ್ರೇಮಾವೇಶ ಉಕ್ಕುತ್ತದೆ ಅಷ್ಟೆ. ಈ ಮೋಡಿಯೇ ಕಾರಣವಾಗಿ, ಇಂಥ ಸಂಬಂಧಿಗಳು ಒಬ್ಬರನ್ನೊಬ್ಬರು ಗುರುತಿಸಿಕೊಂಡಂತೆ ಭಾವಿಸಿ ಪ್ರೀತಿಸತೊಡಗಬಹುದು; ಹಾಗೆ ತೊಡಗಿ ಆಜನ್ಮ ಸಹವಾಸಿಗಳಂತೆ ವರ್ತಿಸಲೂ ಬಹುದು ಮಿಕ್ಕೆಲ್ಲ ವ್ಯವಹಾರಗಳಲ್ಲಿ ಇಂಥ ಆಶು ವ್ಯಾಪಾರ ಸಾಧ್ಯವಿರಬಹುದು. ಆದರೆ, ಭಾಷೆಯ ವಿಷಯದಲ್ಲಿ ಇಂಥ ವ್ಯಾಪಾರ ಸಾಧ್ಯವೇ ಇಲ್ಲ. ಹುಟ್ಟಿದಂದಿನಿಂದ ಶುದ್ಧಾಂಗವಾಗಿ ಕನ್ನಡೇತರ ಆವರಣದಲ್ಲಿಯೇ ಬೆಳೆದು, ಕನ್ನಡದ ಗಂಧವೇ ಇಲ್ಲದ 'ಕನ್ನಡ' ಮಗನೊಬ್ಬ ಮುಂದೆ ಎಂದೋ ಅಕಸ್ಮಾತ್ತಾಗಿ ತನ್ನ ಕನ್ನಡ ತಾಯನ್ನು ಕಂಡು ಕಾರಣಾಂತರಗಳಿಂದ ಆಕೆ ತನ್ನ ತಾಯಿ ಎಂದು ಮನವರಿಕೆಯಾದರೆ, ಆಗ ಆತನಲ್ಲಿ ತಾಯೊಲವು ಮೂಡಿ ಸೂಸಬಹುದಷ್ಟೆ; ತಾಯ ಮೈ ನವಿರೆದ್ದು ಮೊಲೆ ತೊರೆಯಬಹುದಷ್ಟೆ. ಆದರೆ ಮಾತ್ರ, ಆಕೆಯನ್ನು ಕಂಡೊಡನೆ, ಕಂಡ ಮೇಲೂ, ನಾಲಗೆ ತನ್ನಷ್ಟಕ್ಕೆ ತಾನೇ ಕನ್ನಡ ನುಡಿಯ ತೊಡಗುವುದಿಲ್ಲ; ಕನ್ನಡ ಕೇಳಿ ಕಿವಿ ಕೊನರುವುದಿಲ್ಲ.

ಈ ಅಂಶವನ್ನು ಇಷ್ಟು ವಿಸ್ತಾರವಾಗಿ, ನಿರ್ದಾಕ್ಷಿಣ್ಯವಾಗಿ ಪ್ರಸ್ತಾಪಿಸಿರುವುದಕ್ಕೆ ಕಾರಣ, ಭಾಷೆಯ ಬಗ್ಗೆ ನಮ್ಮಲ್ಲಿ ಬೇರೂರಿರುವ ಹಲವು ವಿಚಿತ್ರ ತಪ್ಪು ತಿಳಿವಳಿಕೆಗಳು. ಯೆಹೂದ್ಯರು ತಾವು ದೇವರ ವರಪುತ್ರರು, ಹೀಬ್ರು ಭಾಷೆ ದೈವದತ್ತವಾದ ಆದಿ ಭಾಷೆ, ಅದು ಮಿಕ್ಕ ಭಾಷೆಗಳಿಗೆ ಜನಕಭಾಷೆ ಎಂದು ತಿಳಿದಿದ್ದರು. ನಮ್ಮಲ್ಲಿಯೂ ಹಾಗೆಯೇ ಸಂಸ್ಕೃತ ದೈವೀಭಾಷೆ, ಗೀರ್ವಾಣಭಾಷೆ, ಮಿಕ್ಕೆಲ್ಲ ಭಾಷೆಗಳಿಗೆ ಜನಕಭಾಷೆ ಎಂಬ ತಿಳಿವಳಿಕೆ ಇತ್ತು. ಇತ್ತು ಏಕೆ, ಈಗಲೂ ಕೆಲವರಲ್ಲಿ ಇದೆ. ಭಾಷೆಗಳಲ್ಲಿ ದೈವೀಭಾಷೆ, ಆಸುರೀಭಾಷೆ, ಮಾನವೀ ಭಾಷೆ ಎಂದು ಇಲ್ಲ. ಎಲ್ಲವೂ

ಮಾನವೀ ಭಾಷೆಗಳೇ. ಬೇಕಾದರೆ, ಒಂದು ಅರ್ಥದಲ್ಲಿ, ಎಲ್ಲವೂ ದೈವೀಭಾಷೆಗಳು ಎಂದೂ ಇಟ್ಟುಕೊಳ್ಳಬಹುದು. ಮಾನವನ ಸಕಲ ಪ್ರವೃತ್ತಿವ್ಯಾಪಾರಗಳಿಗೂ ದೈವ ಪ್ರೇರಣೆಯೇ ಮೂಲಕಾರಣವೆಂಬ ದೃಷ್ಟಿಯಿಂದ ಎಲ್ಲವೂ ದೈವಸೃಷ್ಟಿ ಎಂದು ಭಾವಿಸುವುದಾದರೆ, ಅದೇ ಅರ್ಥದಲ್ಲಿ ಭಾಷೆಯನ್ನೂ ದೈವಸೃಷ್ಟಿ ಎಂದು ಭಾವಿಸಬಹುದು. ಆದರೆ, ಲೌಕಿಕ ದೃಷ್ಟಿಯಿಂದ ವ್ಯವಹರಿಸುವುದಾದರೆ ಭಾಷೆ ಮಾನವ ನಿರ್ಮಿತವಾದದ್ದು. ಭಾಷೆಗಳಲ್ಲಿ ಸ್ವಾಭಾವಿಕ, ಕೃತಕ ಎಂಬ ಭೇದ ಇಲ್ಲ. ಎಲ್ಲವೂ ಕೃತಕವೇ. ತಮ್ಮ ಭಾಷೆ ಸ್ವಾಭಾವಿಕ ಭಾಷೆ, ತಮ್ಮ ಭಾಷೆಯ ಶಬ್ದಗಳಿಗೂ ಆ ಶಬ್ದಗಳಿಂದ ಸೂಚಿತವಾಗುವ ವಸ್ತು ಭಾವ ಕ್ರಿಯೆಗಳಿಗೂ ನಿಕಟನಿಸರ್ಗ ಸಂಬಂಧವಿದೆ ಎಂಬ ಭ್ರಮೆ ಕೆಲವರಲ್ಲಿ ಇದೆ. 'ಇದು ಬ್ಯಾಗ್ ಅಲ್ಲವೇನಮ್ಮ? ಇವನಿಗೆ ಬುದ್ಧಿಯಿಲ್ಲ. ಇದು ಬ್ಯಾಗ್ ಅಲ್ಲ, ಚೀಲ ಅಂತಾನೆ ನೋಡಮ್ಮ!' ಎಂದು ಹೇಳುವ ಮಗುವಿನ ಮಾತಿಗೆ ಎಷ್ಟು ಅರ್ಥವೋ, ತಮ್ಮ ಭಾಷೆಯೇ ಸ್ವಾಭಾವಿಕ ಭಾಷೆ, ಮಿಕ್ಕವರದು ಕೃತಕ ಭಾಷೆ ಇಲ್ಲವೆ ವಿಕಾರಭಾಷೆ ಎನ್ನುವುದಕ್ಕೂ ಅಷ್ಟೇ ಅರ್ಥ.

ಯಾವುದೇ ಭಾಷೆಯಾಗಲಿ, ಆ ಭಾಷೆಯಲ್ಲಿ ಬಳಕೆಯಾಗುವ ಮಾತುಗಳು ಅದನ್ನು ಆಡುವ ಜನ ವ್ಯಾವಹಾರಿಕವಾಗಿ ಕಲ್ಪಿಸಿಕೊಂಡಿರುವ ಧ್ವನಿಸಂಕೇತಗಳು ಅಷ್ಟೆ. ಎಲ್ಲ ಸಂಕೇತಗಳೂ ಕೃತಕವೆ. ಧ್ವನಿ ಅಥವಾ ಶಬ್ದ ವಸ್ತುಭಾವ ಕ್ರಿಯೆಗಳ ಅಥವಾ ಅರ್ಥದ ಸಂಕೇತವಾದರೆ, ಲಿಪಿ ಅಥವಾ ಬರವಣಿಗೆ ಧ್ವನಿಯ ಸಂಕೇತ. ಎಂದರೆ, ಬರವಣಿಗೆ ಸಂಕೇತದ ಸಂಕೇತ. ಮೊದಲ ಸಂಕೇತವೆ ಕೃತಕವೆಂದಮೇಲೆ ಈ ಎರಡನೆಯ ಸಂಕೇತವೂ ಕೃತಕವೆಂದು ಬೇರೆ ಹೇಳಬೇಕಾಗಿಲ್ಲ. ಆದರೆ, ಈ ಬರವಣಿಗೆಯ ವಿಷಯದಲ್ಲೂ ಕೆಲವರಲ್ಲಿ ಭ್ರಾಂತಿ ಇದೆ. ಒಂದು ಧ್ವನಿಯನ್ನು ಸೂಚಿಸುವುದಕ್ಕೆ ತಮ್ಮ ಲಿಪಿಯೇ ಸರ್ವಸೂಕ್ತವೂ ಸಮರ್ಥವೂ ಆದದ್ದೆಂದೂ, ಆ ಧ್ವನಿಗೂ ಆ ಆಕಾರಕ್ಕೂ ಸ್ವಾಭಾವಿಕ ಸಂಬಂಧವಿದೆಯೆಂದೂ ಕೆಲವರು ಭ್ರಮಿಸಿರುವುದುಂಟು. ಅರ್ಥಕ್ಕೂ ಧ್ವನಿಗೂ ಸ್ವಾಭಾವಿಕಸಂಬಂಧವಿದೆ ಎಂಬ ಕಲ್ಪನೆಗೆ ಎಷ್ಟು ಆಧಾರವೋ ಧ್ವನಿಗೂ ಲಿಪಿಗೂ ಸ್ವಾಭಾವಿಕ ಸಂಬಂಧವಿದೆ ಎಂಬ ಕಲ್ಪನೆಗೂ ಅಷ್ಟೇ ಆಧಾರ.

ನಮ್ಮ ಮಾತು ನಮ್ಮ ಬರವಣಿಗೆ ನಮಗೆ ಎಷ್ಟೇ ಸ್ವಾಭಾವಿಕವಾಗಿ ಸುಂದರವಾಗಿ ಕಂಡುಬಂದರೂ ಅವೆರಡೂ ಜನ ತಮ್ಮ ವ್ಯವಹಾರಾನುಕೂಲಕ್ಕಾಗಿ ತಮ್ಮ ಅನುಭವ ಸಂಘಟನ ಸಂಸ್ಕರಣಗಳಿಗಾಗಿ ಕಲ್ಪಿಸಿ ರೂಢಿಸಿಕೊಂಡು ಬಂದ ಸಂಕೇತ ಸಾಧನಗಳು ಎಂಬುದನ್ನು ಮರೆಯಬಾರದು. ಇದನ್ನು ಅರಿತರೆ, ಭಾಷೆಯ ವಿಷಯದಲ್ಲಿ ಯಾವುದೇ ಮಿಥ್ಯಾಭಿಮಾನ ಅತಿರೇಕಾಭಿಮಾನಗಳಿಗೆ ಎಡೆಯಿರುವುದಿಲ್ಲ.

**ಕೆ. ವೆಂ. ರಾಘವಾಚಾರ್**

# ಬೆಳಕಿನ ದಾರಿ

ಓಂ ನಮೋ ಭಗವತೇ ವಾಸುದೇವಾಯ

ವಸುದೇವನ ಮಗನಾಗಿ ಮೈದೋರಿದ ಭಗವಂತನಿಗೆ ನಮಸ್ಕಾರ.

**ತೇಜಸೇಸ್ತು ನಮೋ ಧೇನುಪಾಲಿನೇ ಲೋಕಪಾಲಿನೇ**

**ರಾಧಾಪಯೋಧರೋತ್ತುಂಗಶಾಯಿನೇ ಶೇಷಶಾಯಿನೇ**

ಗೋವುಗಳನ್ನು ಪಾಲಿಸಿದವನೇ ಲೋಕಗಳನ್ನು ಪಾಲಿಸುವವನು. ರಾಧೆಯ ಸ್ತನಶಿಖರಗಳಲ್ಲಿ ಮಲಗಿದ ಅವನೇ ಶೇಷನ ಮೇಲೆ ಮಲಗಿದವನು. ಆ ಪರಾತ್ಪರವಾದ ತೇಜಸ್ಸಿಗೆ ನಮಸ್ಕಾರ.

## ಪರಾತ್ಪರವಾದ ಬೆಳಕು

"ಇದು ಬೆಳಕುಗಳಿಗೆಲ್ಲ ಬೆಳಕು ಕೊಡುವ ಬೆಳಕು. ಕತ್ತಲೆಯನ್ನು ಮೀರಿದ ಬೆಳಕು. ಜ್ಞಾನವೂ ಜ್ಞೇಯವೂ ಜ್ಞಾನಗಮ್ಯವೂ ಆದ ಈ ಬೆಳಕು ಎಲ್ಲದರ ಹೃದಯ ಗಳೊಳಗೂ ನೆಲಸಿ ನಿಂತಿದೆ." (ಗೀತಾ ೧೩-೧೭)

"ಅದು ಇರುವೆಡೆಯಲ್ಲಿ ಸೂರ್ಯನು ಹೊಳೆಯುವುದಿಲ್ಲ, ಚಂದ್ರನೂ ತಾರಗೆಗಳೂ ಇಲ್ಲ, ಈ ಮಿಂಚುಗಳೂ ಹೊಳೆಯುವುದಿಲ್ಲ ಎಂದ ಮೇಲೆ ಈ ಅಗ್ನಿ ಹೊಳೆಯುವುದೆಲ್ಲಿ? ಅದರ ಬೆಳಕನ್ನೇ ಅನುಸರಿಸಿ ಎಲ್ಲವೂ ಬೆಳಗುವುವು. ಅದರ ಬೆಳಕಿನಿಂದ ಇವು ಎಲ್ಲವೂ ಬೆಳಕುಬಿಡುವುವು." (ಕಠ ೪-೧೫)

ಶ್ರೀ ಕೃಷ್ಣನ ಅನುಗ್ರಹದಿಂದ ದಿವ್ಯಚಕ್ಷುಸ್ಸನ್ನು ಪಡೆದ ಅರ್ಜುನನು ಆ ಪರಮ ಪುರುಷನ ತೇಜೋರಾಶಿಯನ್ನು ಕಂಡ ಕಾಲದಲ್ಲಿ—"ಆಕಾಶದಲ್ಲಿ ಸಹಸ್ರಸೂರ್ಯರು ಒಮ್ಮೆಗೇ ಎದ್ದು ಬಂದರೆ ಹೇಗೋ ಹಾಗೆ ಆಯಿತಂತೆ ಆ ಮಹಾತ್ಮನ ಭಾಸವೈಭವ." (ಗೀತಾ ೧೧-೧೨.) "ಎಲ್ಲ ಕಡೆಯೂ ದೀಪ್ತಿಮಂತವಾದ ಆ ತೇಜೋರಾಶಿಯು ದುರ್ನಿರೀಕ್ಷ್ಯವಾಗಿತ್ತು. ಸುತ್ತ ಎಲ್ಲ ಕಡೆಯಲ್ಲೂ ಉರಿಯುವ ಬೆಂಕಿಯಂತೆ, ಸೂರ್ಯನಂತೆ ಬೆಳಗುತ್ತ ಅಪ್ರಮೇಯವಾಗಿತ್ತು." (ಗೀತಾ ೧೧-೧೭.) ಅರ್ಜುನ ಆ ಬೆಳಕನ್ನು ಹೀಗೆ ಸ್ತುತಿಮಾಡಿದ: "ನೀನು ಪರಮನು. ನೀನು ತಿಳಿಯಬೇಕಾದವನು. ನೀನು ವಿಶ್ವಕ್ಕೆಲ್ಲ ಪರಮ ಆಶ್ರಯನು. ಶಾಶ್ವತವಾದ ಧರ್ಮವನ್ನು ಸಂರಕ್ಷಿಸುವ ಅವ್ಯಯನು ನೀನು. ನೀನು ಸನಾತನ ಪುರುಷನೆಂದು ನನ್ನ ಮತ." (ಗೀತಾ ೧೧-೧೮.)

**ಯಸ್ಮಾದಿದಂ ಜಗದಜಾಯತ ಯತ್ರ ತಿಷ್ಠ-**
**ತ್ಯಂತೇ ಸಮಸ್ತಮಿದಮಸ್ತಮುಪೈತಿ ಯತ್ರ।**
**ತಸ್ಮೈ ನಮಃ ಸದಸದಾದಿವಿಕಲ್ಪಶೂನ್ಯ-**
**ಚೈತನ್ಯಮಾತ್ರವಪುಷೇ ಪುರುಷೋತ್ತಮಾಯ ॥**

"ಆ ಸನಾತನ ಪುರುಷನಿಂದ ಸೃಷ್ಟಿಯೆಲ್ಲ ಹುಟ್ಟಿ ಬಂದಿತು, ಆತನಲ್ಲಿ ನಿಂತಿದೆ,

ಕೊನೆಗೆ ಇದೆಲ್ಲವೂ ಆತನಲ್ಲಿಯೇ ಅಸ್ತವಾಗುತ್ತದೆ. ಆತನು ಸತ್, ಅಸತ್ ಮೊದಲಾದ ವಿಕಲ್ಪಗಳಿಲ್ಲದವನು, ಕೇವಲ ಚೈತನ್ಯಮಯನಾದವನು. ಆ ಪುರುಷೋತ್ತಮನಿಗೆ ನಮಸ್ಕಾರ." (ಭಾಗವತ.) "ಕ್ಷರ ಮತ್ತು ಅಕ್ಷರ ಎಂಬ ಎರಡು ರೀತಿಯ ಪುರುಷರುಗಳನ್ನು ಮೀರಿ, ಲೋಕತ್ರಯಗಳನ್ನು ಆವರಿಸಿ ಅವ್ಯಯನಾದ ಈಶ್ವರನಾಗಿರುವ ಕಾರಣ, ಈತನು ಲೋಕದಲ್ಲಿಯೂ ವೇದದಲ್ಲಿಯೂ ಪುರುಷೋತ್ತಮನೆಂದು ಪ್ರಸಿದ್ಧನಾಗಿರುವನು." (ಗೀತಾ ೧೫—೧೭, ೧೮.)

ಸನಾತನಪುರುಷನಾದ ಈ ಪುರುಷೋತ್ತಮನು 'ಮೇಲುಗಡೆಗೆ ಬುಡವಿರಿಸಿಕೊಂಡು ಕೆಳಗಡೆಗೆ ಕೊಂಬೆಗಳನ್ನು ಚಾಚಿದ ಸನಾತನವಾದ ಅಶ್ವತ್ಥವೃಕ್ಷ. ಶುಕ್ರವೆಂಬುದು ಇದೇ, ಬ್ರಹ್ಮವೆಂಬುದು ಇದೇ, ಇದನ್ನೇ ಅಮೃತವೆಂದು ಹೇಳುವರು. ಅದರಲ್ಲಿ ಸರ್ವಲೋಕಗಳೂ ಆಶ್ರಯ ಪಡೆದಿವೆ. ಅದನ್ನು ಮೀರಿದ್ದು ಯಾವುದೂ ಇಲ್ಲ, ಖಂಡಿತವಾಗಿಯೂ ಇದೇ ಅದು." (ಕಠ ೬—೧.) ಈ ಸತ್ಯವನ್ನು ಸಂದರ್ಶಿಸಿದಾಗ ಅರ್ಜುನ ಹೇಳಿದ: "ಎಲ್ಲಿಂದ ಪುರಾತನವಾದ ಪ್ರವೃತ್ತಿಗಳು ಹರಿದು ಬಂದುವೋ ಆ ಆದ್ಯಪುರುಷನನ್ನೇ ನಾನು ಮರೆಹೊಗುತ್ತೇನೆ." (ಗೀತಾ ೧೫—೪.)

"ಆತನ ಭಯದಿಂದ ಅಗ್ನಿ ಸುಡುವನು; ಆತನ ಭಯದಿಂದ ಸೂರ್ಯ ತಪಿಸುವನು; ಆತನ ಭಯದಿಂದ ಇಂದ್ರನೂ ವಾಯುವೂ ಐದನೆಯದಾಗಿ ಮೃತ್ಯುವೂ ತಮ್ಮ ತಮ್ಮ ಕರ್ತವ್ಯ ಮಾಡುವರು." (ಕಠ ೬—೩.)

"ಇಂದ್ರಿಯಗಳನ್ನು ಮೀರಿದ್ದು ಮನಸ್ಸು, ಮನಸ್ಸನ್ನು ಮೀರಿದ್ದು ಬುದ್ಧಿ, ಬುದ್ಧಿಯನ್ನು ಮೀರಿದ್ದು ಮಹಾನ್ ಆತ್ಮ, ಮಹತ್ತನ್ನು ಮೀರಿದ್ದು ಅವ್ಯಕ್ತ, ಅವ್ಯಕ್ತವನ್ನು ಮೀರಿದ್ದು ಪುರುಷ, ಪುರುಷನನ್ನು ಮೀರಿದ್ದು ಯಾವುದೂ ಇಲ್ಲ. ಆ ಪುರುಷನೇ ಕೊನೆ, ಅದೇ ಪರಮವಾದ ಗತಿ. (ಕಠ ೩—೧೦, ೧೧.) ಈ ಪುರುಷ ಅಲಿಂಗವಾದದ್ದು. ಇದನ್ನು ತಿಳಿದ ಜಂತುವು ಮೃತ್ಯುವನ್ನು ಬಿಡಿಸಿಕೊಂಡು ಅಮೃತತತ್ತ್ವಕ್ಕೆ ಹೋಗುವುದು." (ಕಠ ೬—೮.) ಪುರುಷನನ್ನು ಮೀರಿಸಿದ್ದು ಯಾವುದೂ ಇಲ್ಲ. ಸೂತ್ರವು ಮಣಿಗಳನ್ನು ಕೋದು ಕೂಡಿಸಿಕೊಂಡಿರುವಂತೆ ಎಲ್ಲವೂ ಪುರುಷನನ್ನು ಸಮಾಶ್ರಯಿಸಿಕೊಂಡಿವೆ." (ಗೀತಾ ೭—೭.)

ಇಂಥ ಪುರುಷನಿಂದ ಬರುವ ಅಮೃತತತ್ತ್ವವನ್ನು ಬಯಸಿಯೇ ನಮ್ಮವರು ಬೇಡಿದರು: "ನಮ್ಮನ್ನು ಅಸತ್ತಿನಿಂದ ಸತ್ತಿಗೆ ನಡಸು, ತಮಸ್ಸಿನಿಂದ ಜ್ಯೋತಿಗೆ ನಡಸು, ಮೃತ್ಯುವಿನಿಂದ ಅಮೃತಕ್ಕೆ ನಡಸು." (ಬೃಹದಾರಣ್ಯಕ.)

ಹೀಗೆ ಬೇಡುವ ಪುರುಷ ಹೊರಗೆ ಅಲ್ಲಿರುವಂತೆಯೇ ಒಳಗೆ ಇಲ್ಲೂ ಇದ್ದಾನೆ. "ಅಂಗುಷ್ಠಮಾತ್ರನಾದ ಪುರುಷನು, ಅಂತರಾತ್ಮನು, ಸದಾ ಜನಗಳ ಹೃದಯದಲ್ಲಿ ಸನ್ನಿವಿಷ್ಟನಾಗಿದ್ದಾನೆ. ಅವನನ್ನು ಶುಕ್ರವೆಂದು, ಅಮೃತವೆಂದು ತಿಳಿ. ಅವನನ್ನು ಶುಕ್ರವೆಂದು, ಅಮೃತವೆಂದು ತಿಳಿ." (ಕಠ ೬—೧೭.)

"ವೇದಾಭ್ಯಾಸದಿಂದಾಗಲಿ, ಮೇಧಾಶಕ್ತಿಯಿಂದಾಗಲಿ, ಬಹುವಾದ ಪಾಂಡಿತ್ಯ

ದಿಂದಾಗಲಿ ಈ ಆತ್ಮನು ಲಭಿಸುವುದಿಲ್ಲ. ಆತ್ಮಜ್ಞರಿಗೆ ಅದು ತನ್ನ ರೂಪವನ್ನು ಕಾಣಿಸಿಕೊಳ್ಳುವುದು. (ಕಠ ೨–೨೩.) "ಆತ್ಮದಿಂದ ಆತ್ಮದ ಉದ್ಧಾರವಾಗಬೇಕು. ಆತ್ಮವನ್ನು ಬಲಹೀನವಾಗಿಸಬಾರದು. ಆತ್ಮಕ್ಕೆ ಬಂಧು ಆತ್ಮನೇ, ಆತ್ಮಕ್ಕೆ ಶತ್ರು ಆತ್ಮನೇ, ಆತ್ಮವನ್ನು ಆತ್ಮದಿಂದ ಜಯಿಸಿದವನಿಗೆ ಆತ್ಮವು ಬಂಧು. ಜಯಿಸದವನಿಗೆ ಆತ್ಮವು ಶತ್ರುವಿನಂತೆ ಶತ್ರುತ್ವದಿಂದ ನಡೆದುಕೊಳ್ಳುವುದು." (ಗೀತಾ ೬–೫,೬.)

"ಆತ್ಮಜಯಕ್ಕಾಗಿ ಹಂಬಲಿಸುವವರು ನಾಲ್ಕು ವಿಧದ ಜನ, ಸುಕೃತಿಗಳು, ಅವರು ಯಾರೆಂದರೆ–ಆರ್ತರು, ಜಿಜ್ಞಾಸುಗಳು, ಅರ್ಥಾರ್ಥಿಗಳು ಮತ್ತು ಜ್ಞಾನಿಗಳು. ಅವರಲ್ಲಿ ಜ್ಞಾನಿಯು ನಿತ್ಯಯುಕ್ತನಾಗಿ, ಏಕಭಕ್ತಿಯಿಂದ ವಿಶಿಷ್ಟತೆಯನ್ನು ಪಡೆಯುತ್ತಾನೆ. ಅಂಥವನಿಗೆ ಪುರುಷೋತ್ತಮನು ಪ್ರಿಯನು; ಆದ್ದರಿಂದ ಅವನು ಪುರುಷೋತ್ತಮನಿಗೆ ಪ್ರಿಯನು." (ಗೀತಾ ೭–೧೬,೧೭.)

"ಇದನ್ನು ಕೇಳುವುದಕ್ಕೆ ಕೂಡ ಬಹುಜನರಿಗೆ ಲಭ್ಯವಿಲ್ಲ; ಕೇಳಿದವರಲ್ಲಿಯೂ ಬಹುಜನರು ಅದನ್ನು ತಿಳಿಯಲಾರರು. ಅದನ್ನು ಕುರಿತು ಹೇಳುವ ಕುಶಲನಾದ ಆತ್ಮಜ್ಞಾನಿ ದೊರಕುವುದು ಒಂದು ಆಶ್ಚರ್ಯ. ಅವನು ಅನುಶಾಸನ ಮಾಡಿದುದನ್ನು ತಿಳಿದುಕೊಳ್ಳುವ ಕುಶಲಿಯೂ ಒಂದು ಆಶ್ಚರ್ಯ." (ಕಠ ೨–೭.) "ಆತ್ಮಜ್ಞಾನವು ತರ್ಕದಿಂದ ಪಡೆಯತಕ್ಕದ್ದಲ್ಲ. ತಿಳಿದವರು ಇತರರು ತಿಳಿಸಿದರೆ ಅದು ಚೆನ್ನಾಗಿ ತಿಳಿಯುತ್ತದೆ." (ಕಠ ೨–೯.)

ಹಿಂದೆ, ಅಮೃತವನ್ನು ತಿಳಿಸಬಲ್ಲ ಮೃತ್ಯುವಿನ ಬಳಿಗೆ ಅಮೃತವನ್ನು ತಿಳಿಯ ಬಯಸಿ ನಚಿಕೇತನು ಬಂದಾಗ, ಅವನ ಸತ್ಯಧೃತಿಗೆ ಪ್ರೀತನಾಗಿ ಮೃತ್ಯು ಅವನಿಗೆ ಹೀಗೆ ಅನುಶಾಸನ ಮಾಡಿದನು: "ಹೃದಯದಲ್ಲಿ ಆಶ್ರಯ ಪಡೆದಿರುವ ಕಾಮಗಳು ಎಲ್ಲವೂ ಯಾವಾಗ ನಾಶ ಹೊಂದುವುವೋ ಆಗ ಮರ್ತ್ಯನು ಅಮೃತನಾಗುವನು, ಇಲ್ಲಿಯೇ ಬ್ರಹ್ಮವನ್ನು ಪಡೆಯುವನು. ಇಲ್ಲಿ ಹೃದಯದೊಳಗಿನ ಎಲ್ಲ ಗ್ರಂಥಿಗಳನ್ನೂ ಯಾವಾಗ ಒಡೆದು ಹಾಕುವನೋ ಆಗ ಮರ್ತ್ಯನು ಅಮೃತನಾಗುವನು. ಇದಿಷ್ಟೇ ಅನುಶಾಸನ." (ಕಠ ೬–೧೪,೧೫.)

ಈ ಅನುಶಾಸನವನ್ನು ತಿಳಿದು ನಡೆಯುವವರು "ಏಳಬೇಕು. ಎಚ್ಚರದಿಂದಿರಬೇಕು, ಶ್ರೇಷ್ಠರಾದವರನ್ನು ಹೊಂದಿ ಅವರಿಂದ ತಿಳಿದುಕೊಳ್ಳಬೇಕು. ಈ ದಾರಿ ಕ್ಷುರದ ಧಾರೆಯಂತೆ ನಿಶಿತವಾದದ್ದು, ದಾಟಲು ಕಠಿನವಾದದ್ದು, ಇದು ದುರ್ಗ—ಎಂಬುದಾಗಿ ಜ್ಞಾನಿಗಳು ಹೇಳುತ್ತಾರೆ." (ಕಠ ೩–೧೪.) "ಗುರುವಿಗೆ ಅಡ್ಡಬಿದ್ದು, ಗುರುವನ್ನು ಪರಿಪ್ರಶ್ನಿಸಿ, ಗುರುವಿನ ಸೇವೆ ಮಾಡುವುದರಿಂದ, ತತ್ತ್ವದರ್ಶಿಗಳಾದ ಆ ಜ್ಞಾನಿ ಗುರುಗಳು, ಆ ಜ್ಞಾನವನ್ನು ಉಪದೇಶ ಮಾಡುವರು." (ಗೀತಾ ೪–೩೪.)

### ಯಮನು ಉಪದೇಶಿಸಿದ ದಾರಿ

"ಆತ್ಮವನ್ನು ರಥಿಯೆಂದೂ, ಶರೀರವನ್ನು ರಥವೆಂದೂ ತಿಳಿ. ಬುದ್ಧಿಯನ್ನು ಸಾರಥಿಯೆಂದೂ ಮನಸ್ಸನ್ನು ಹಗ್ಗವೆಂದೂ ತಿಳಿ.

"ಇಂದ್ರಿಯಗಳನ್ನು ಕುದುರೆಗಳೆಂದೂ ವಿಷಯಗಳನ್ನು ಅವುಗಳ ಗೋಚರ ಗಳೆಂದೂ ಹೇಳುತ್ತಾರೆ. ಆತ್ಮ–ಇಂದ್ರಿಯ–ಮನಸ್ಸುಗಳಿಂದ ಕೂಡಿದವನನ್ನು ಭೋಕ್ತಾ ಎಂದು ಜ್ಞಾನಿಗಳು ಕರೆಯುತ್ತಾರೆ.

"ಯಾವನು ವಿಜ್ಞಾನವಿಲ್ಲದವನಾಗಿ, ಸದಾ ಅಯುಕ್ತವಾದ ಮನಸ್ಸಿನಿಂದ ಇರುವನೋ ಅವನ ಇಂದ್ರಿಯಗಳು, ಸಾರಥಿಯ ದುಷ್ಟಾಶ್ವಗಳು ಹೇಗೋ ಹಾಗೆ, ವಶಕ್ಕೆ ಬಾರದೆ ಹೋಗುವುವು.

"ಯಾವನು ವಿಜ್ಞಾನವಂತನಾಗಿ, ಸದಾ ಯುಕ್ತವಾದ ಮನಸ್ಸಿನಿಂದ ಇರುವನೋ ಅವನ ಇಂದ್ರಿಯಗಳು, ಸಾರಥಿಯ ಸದಶ್ವಗಳು ಹೇಗೋ ಹಾಗೆ, ವಶಕ್ಕೆ ಬರುವುವು.

"ಯಾವನು ವಿಜ್ಞಾನವಿಲ್ಲದನಾಗಿ, ಯುಕ್ತವಾದ ಮನಸ್ಸಿಲ್ಲದವನಾಗಿ, ಸದಾ ಅಶುಚಿಯಾಗಿ ಇರುವನೋ ಅವನು ಆ ಪರಮಪದವನ್ನು ಎಂದಿಗೂ ಪಡೆಯನು, ಜನನ ಮರಣಗಳ ಸಂಸಾರವನ್ನು ಹೊಂದುವನು.

"ಯಾವನು ವಿಜ್ಞಾನವಂತನಾಗಿ ಯುಕ್ತವಾದ ಮನಸ್ಸುಳ್ಳವನಾಗಿ, ಸದಾ ಶುಚಿಯಾಗಿ ಇರುವನೋ ಅವನು ಆ ಪರಮಪದವನ್ನು ಪಡೆಯುವನು, ಅಲ್ಲಿಂದ ಪುನಃ ಹುಟ್ಟಿಬರುವುದಿಲ್ಲ.

"ವಿಜ್ಞಾನವನ್ನು ಸಾರಥಿಯನ್ನಾಗಿಯೂ ಮನಸ್ಸನ್ನು ಕುದುರೆಯ ಹಗ್ಗವನ್ನಾಗಿಯೂ ಹೊಂದಿದ ನರನು—ಅವನು ದಾರಿಯ ಕೊನೆಯನ್ನು ಮುಟ್ಟುವನು, ಅದು ವಿಷ್ಣುವಿನ ಪರಮ ಪದ." (ಕಠ ೩–೩ರಿಂದ ೯.)

## ಬುದ್ಧನು ಉಪದೇಶಿಸಿದ ದಾರಿ

'ತದ್ ವಿಷ್ಣೋಃ ಪರಮಂ ಪದಂ, ಸದಾ ಪಶ್ಯಂತಿ ಸೂರಯಃ' ಅನ್ನುತವನ್ನು ಕಂಡ ಸೂರಿಗಳಲ್ಲಿ ಪ್ರಸಿದ್ಧನಾದ ಬುದ್ಧಗುರು ಕಠೋಪನಿಷತ್ತಿನ ಮಾರ್ಗವನ್ನೇ ತಾನೂ ಹೇಳಿ ಮುಂದುವರಿಸಿದ್ದಾನೆ:

"ಆ ಮಾರ್ಗಕ್ಕೆ 'ನೇರವಾದದ್ದು' ಎಂದು ಹೆಸರು. ಆ ದಿಕ್ಕಿಗೆ 'ಭಯವಿಲ್ಲದ್ದು' ಎಂದು ಹೆಸರು. ರಥಕ್ಕೆ 'ಸದ್ದುಮಾಡದುದು' ಎಂದು ಹೆಸರು. ಅದು ಧರ್ಮವೆಂಬ ಚಕ್ರಗಳಿಂದ ಕೂಡಿದ್ದು.

"ರಥದ ಗತಿಯನ್ನು ನಿಯಮಿಸುವುದೇ–ಹ್ರೀ. ಒಳಗೆ ಕುಳಿತವರು ಹೊರಗೆ ಬೀಳದೆ ತಡೆಯುವ ಸುತ್ತಿನ ಕಟಕಟೆ–ಸತ್ಯ. ಧರ್ಮವನ್ನು ನಾನು ಸಾರಥಿಯೆನ್ನುತ್ತೇನೆ. ರಥದ ಹಾದಿಯನ್ನು ಸಮಗೊಳಿಸಲು ಮುಂದೆ ವೇಗವಾಗಿ ಹೋಗುವುದು—ಸಮ್ಯಕ್ ದೃಷ್ಟಿ.

"ಯಾರಿಗೆ ಈ ರೀತಿಯಾದ ಯಾನವುಂಟೋ—ಅವರು ಸ್ತ್ರೀಯಾಗಲಿ ಪುರುಷರಾಗಲಿ—ಅವರೇ, ಇದೇ ಯಾನದಿಂದಲೇ ನಿರ್ವಾಣಕ್ಕೇ ಸಮೀಪರಾಗುವರು."

(ಸಂಯುಕ್ತನಿಕಾಯ, ದೇವತಾ ಸಂಯುಕ್ತ, ಆದಿತ್ಯವರ್ಗ, ಅಪ್ಸರಾಸೂತ್ರ.)

## ಯೇಸುಸ್ವಾಮಿಯು ಉಪದೇಶಿಸಿದ ದಾರಿ

ವೇದಾಂತವು, 'ವಿಷ್ಣುವಿನ ಪರಮಪದ'ವೆಂದು ಕರೆದದ್ದನ್ನು, ಬುದ್ಧನು 'ನಿರ್ವಾಣ'ವೆಂದದ್ದನ್ನು ಯೇಸುಸ್ವಾಮಿಯು **'the Kingdom of God'** ಎಂದು ಕರೆದು, ಅದನ್ನು ಪಡೆಯುವ ದಾರಿಯನ್ನು ಹೀಗೆ ನಿರ್ದೇಶಿಸಿದ್ದಾನೆ :

**"Enter ye in at the strait gate; for wide is the gate, and broad is the way that leadeth to destruction, and many there be which go in there at; because strait is the gate, and narrow is the way, which leadeth unto life, and few there be that find it." (St.Matt. vii. 13, 14.)**

ಇದರೊಡನೆ ಕಠೋಪನಿಷತ್ತಿನ "ಕ್ಷುರಸ್ಯಧಾರಾನಿಶಿತಾ ದುರತ್ಯಯಾ ದುರ್ಗಂ ಪಥಸ್ತತ್" ಎಂಬುದನ್ನು ಹೋಲಿಸಬಹುದು. ಇಲ್ಲಿಯ **'destruction'** ಅಲ್ಲಿಯ 'ಮೃತ್ಯು', ಇಲ್ಲಿಯ **'life'** ಅಲ್ಲಿಯ 'ಅಮೃತ.'

**"Strive to enter in at the strait gate; for many, I say unto you, will seek to enter in, but shall not be able." (St. Luke. xii 23.)**

ಇದರೊಡನೆ ಈ ಗೀತಾವಾಕ್ಯಗಳನ್ನು ಹೋಲಿಸಬಹುದು : "ಸಾವಿರ ಮನುಷ್ಯರಲ್ಲಿ ಸಿದ್ಧಿಗಾಗಿ ಯತ್ನಿಸುವವನು ಯಾವನೋ ಒಬ್ಬ ; ಹೀಗೆ ಪ್ರಯತ್ನಿಸುವ ಸಿದ್ಧರಲ್ಲಿ ಯಾದರೂ ತತ್ತ್ವತಃ ನನ್ನನ್ನು ತಿಳಿಯುವವನು ಯಾವನೋ ಒಬ್ಬ." (೭–೩.) "ಬಹುವಾದ ಜನ್ಮಗಳ ಕೊನೆಯಲ್ಲಿ ಜ್ಞಾನವಂತನು ನನ್ನಲ್ಲಿ ಪ್ರಪತ್ತಿಯನ್ನು ಮಾಡಿ, ಸರ್ವವೂ ವಾಸುದೇವನೇ ಎಂದು ತಿಳಿಯುವನು. ಅಂತಹ ಮಹಾತ್ಮನು ದೊರಕುವುದು ತುಂಬ ಕಷ್ಟ." (೭-೧೯.)

**"Verily I say unto you, That a rich man shall hardly enter into the Kingdom of Heaven And again I say unto you, It is easier for a camel to go through the eye of a needle, than for a rich man to enter into the Kingdom of God." (St. Matt. xix, 23—24.)**

ಐಹಿಕವಾದ ಭೋಗಭಾಗ್ಯಗಳನ್ನು ಒಲ್ಲದೆ, ದೈವೀಸಂಪತ್ತನ್ನು ಸಮೃದ್ಧಿಯಾಗಿ ಬೆಳಸಿಕೊಂಡ ಭಕ್ತನು ಭಗವಂತನಿಗೆ ಅತೀವ ಪ್ರಿಯನಾಗುವನೆಂಬ ಭಗವದ್ಗೀತೆಯ ಮಾತುಗಳನ್ನು ಇಲ್ಲಿಗೆ ಹೋಲಿಸಿ ನೋಡಬಹುದು.

## ಮಹಮದ್ ಪ್ರವಾದಿ ಉಪದೇಶಿಸಿದ ದಾರಿ.

ಜಗತ್ತಿನ ಪ್ರತಿಷ್ಠಿತ ಧರ್ಮಗಳಲ್ಲಿ ಅತ್ಯಂತ ಈಚಿನದಾದ ಇಸ್ಲಾಂ ಕೂಡ ಬೆಳಕಿನ ದಾರಿಯನ್ನು ಹೀಗೆಯೇ ವರ್ಣಿಸುತ್ತದೆ:

"God hath made a straight road, with two walls, one on each side of it in which are open doors, with curtains drawn across. At the top of the road is an Admonisher, who saith "go straight on the road, and not crooked" ; and above this Admonisher is another who saith to any one who would pass through those doorways, 'Pass not through those doors, or verily ye will fall. Now, the road is Islam ; and the open doors are those things which God hath forbidden ; and the curtains before the doors the bounds set by God ; the Admonisher is the Kur'an and the upper Admonisher God, in the heart of every Mu' min." (The sayings of Muhammad. Ed. by Al-Suhrawardy. P. 40).

'Mu'min' ಎಂದರೆ ಭಕ್ತ. ಭಕ್ತನ ಹೃದಯದಲ್ಲಿ ದೇವರು ಇದ್ದು ಅವನಿಗೆ ಎಚ್ಚರ ಕೊಡುವನೆಂಬ ಮಾತು ನಮಗೆ ಹೊರತಾದದ್ದಲ್ಲ: 'ಅಂತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ' (ಕಠ.) 'ಸರ್ವಸ್ಯಚಾಹಂ ಹೃದಿ ಸನ್ನಿವಿಷ್ಟಃ' (ಗೀತಾ.) 'ಈಶ್ವರಃ ಸರ್ವಭೂತಾನಾಂ ಹೃದ್ದೇಶೇ ತಿಷ್ಠತಿ' (ಗೀತಾ.) ಹೃದಯಸ್ಥನಾದ ಈಶ್ವರನು ಪ್ರೇರಿಸುವ ಋಜುಮಾರ್ಗವನ್ನು ತ್ಯಜಿಸಿ, ಕುಟಿಲವಾದ ಅಡ್ಡ ಹಾದಿಗಳನ್ನು ಹಿಡಿಯುವಂತೆ ಮಾಡುವ ಕಾಮದ ಪ್ರಭಾವವನ್ನು ಕುರಿತ ಗೀತಾವಾಕ್ಯಗಳನ್ನು (ಅಧ್ಯಾಯ ೩) ಮೇಲಿನ ಮುಹಮ್ಮದ್ ಮುಖ ಮಾಧುರಿಯೊಡನೆ ಹೋಲಿಸಿ ನೋಡಬಹುದು.

## ಬೆಳಕಿನ ದಾರಿ ದುರ್ಗಮವಾದದ್ದು

" ಇಂದ್ರಿಯಗಳು ದೊಡ್ಡವೇ ಆದರೂ ಮನಸ್ಸು ಅವಕ್ಕಿಂತ ದೊಡ್ಡದು. ಮನಸ್ಸಿಗಿಂತ ಬುದ್ಧಿ ದೊಡ್ಡದು. ಬುದ್ಧಿಗಿಂತ ದೊಡ್ಡದು ಅಂತರಾತ್ಮ." (ಗೀತಾ ೩-೪೨) " ಅಂತರಾತ್ಮಕ್ಕೆ ಶತ್ರುವಾದದ್ದು, ದುರ್ದಮ್ಯವಾದದ್ದು ಕಾಮ." (ಗೀತಾ ೩-೩೩) ಆದ್ದರಿಂದಲೇ ಪ್ರತಿ ಕ್ಷಣವೂ ಪ್ರಾಣಿಯ ಎದುರಿಗೆ ಪ್ರೇಯಶ್ರೇಯಗಳೆರಡೂ ಬಂದು ಭ್ರಮೆಗೊಳಿಸುತ್ತವೆ.

" ಒಂದು ಶ್ರೇಯ, ಒಂದು ಪ್ರೇಯ. ಅವು ಎರಡೂ ನಾನಾರ್ಥಗಳುಳ್ಳ ಪುರುಷನನ್ನು ಬಂಧಿಸುತ್ತವೆ. ಅವುಗಳಲ್ಲಿ ಶ್ರೇಯವನ್ನು ಎತ್ತಿಕೊಳ್ಳುವವನಿಗೆ ಒಳ್ಳೆಯದು ಉಂಟಾಗುತ್ತದೆ, ಪ್ರೇಯವನ್ನು ಆರಿಸುವವನು ತನ್ನ ಗುರಿಯಿಂದ ದೂರನಾಗಿ ಹೋಗುತ್ತಾನೆ. ಶ್ರೇಯವೂ ಪ್ರೇಯವೂ ಮನುಷ್ಯನ ಬಳಿ ಬರುತ್ತವೆ. ಧೀರರು ಅವೆರಡನ್ನೂ ಪರಿಶೀಲಿಸಿ ಬೇರ್ಪಡಿಸುತ್ತಾರೆ. ಧೀರನು ಪ್ರೇಯಕ್ಕಿಂತ ಹೆಚ್ಚಾಗಿ ಶ್ರೇಯವನ್ನೇ ವರಿಸುತ್ತಾನೆ, ಮಂದಬುದ್ಧಿಯವನು ಲಾಭ ಲೋಭಗಳ ದೆಸೆಯಿಂದ ಪ್ರೇಯವನ್ನು ವರಿಸುತ್ತಾನೆ." (ಕಠ ೨-೧, ೨.)

ಈ ಎರಡರ ಪರಿಶೀಲನೆಯಿಂದೊಡಗೂಡಿದ ಆಯ್ಕೆ ಏಕೆ ಇಷ್ಟು ದುಷ್ಕರವಾಗಿದೆ ಯೆಂದರೆ—"ಸ್ವಯಂಭುವು ಪ್ರಾಣಿಗಳ ಇಂದ್ರಿಯದ್ವಾರಗಳನ್ನು ಹೊರಗಡೆಗೆ ತೆರೆದು ಕೊಳ್ಳುವಂತೆ ಸೃಷ್ಟಿಮಾಡಿ ಶಿಕ್ಷಿಸಿದನು. ಆದ್ದರಿಂದ ಪ್ರಾಣಿ ತನ್ನ ಹೊರಗಿನ ಪ್ರೇಯ ವನ್ನು ಕಾಣುವುದು ಸುಗನುವಾಗಿದೆಯೆ ಹೊರತು, ತನ್ನ ಒಳಗಿನ ಶ್ರೇಯವನ್ನು ಕಾಣು ವುದು ದುರ್ಗಮವಾಗಿದೆ. ಕೆಲವರು ಯಾರೋ ಧೀರರು, ಅಮೃತತ್ವವನ್ನು ಇಚ್ಛಿಸಿ, ಆವೃತ್ತಚಕ್ಷುಗಳಾಗಿ, ಪ್ರತ್ಯಗಾತ್ಮನನ್ನು ಈಕ್ಷಿಸುವರು." (ಕಠ. ೪—೧.)

ಇಂಥ ಧೀರರೇ ಜ್ಞಾನಿಗಳು. "ಜ್ಞಾನಕ್ಕೆ ಸಮನಾಗಿ ಪವಿತ್ರವಾದದ್ದು ಯಾವುದೂ ಇಲ್ಲ. ಅದನ್ನು ಯೋಗಸಂಸಿದ್ಧನಾದವನು ಸಕಾಲದಲ್ಲಿ ತನ್ನ ಆತ್ಮದಲ್ಲಿ ತಾನೇ ತಿಳಿಯುತ್ತಾನೆ. ಶ್ರದ್ಧೆಯಿದ್ದವನಿಗೆ, ತತ್ಪರನಾದವನಿಗೆ, ಇಂದ್ರಿಯ ಸಂಯಮ ವುಳ್ಳವನಿಗೆ ಜ್ಞಾನ ಲಭಿಸುತ್ತದೆ. ಜ್ಞಾನವನ್ನು ಪಡೆದು, ಅವನು ಆ ಕೂಡಲೆ ಪರಮ ವಾದ ಶಾಂತಿಯನ್ನು ಹೊಂದುತ್ತಾನೆ." (ಗೀತಾ. ೪-೩೮, ೩೯.)

ಆದ್ದರಿಂದ, ಇದು ದುರ್ಗಮವಾದರೂ ಈ ದಾರಿ ಬಿಟ್ಟರೆ ಬೇರೆ ಗತಿಯಿಲ್ಲ. ಇದನ್ನೇ ಯಮನು ನಚಿಕೇತನಿಗೆ ಹೇಳಿದನು :

"ಸರ್ವಭೂತಗಳ ಅಂತರಾತ್ಮನಾಗಿ, ಅವುಗಳನ್ನು ವಶಪಡಿಸಿಕೊಂಡು ಏಕೈಕ ನಾದವನು ಯಾವನೋ—ತನ್ನ ಏಕವಾದ ರೂಪವನ್ನು ಯಾವನು ತಾನು ಬಹು ವಾಗಿ ಮಾಡುತ್ತಾನೋ—ಆ ಆತ್ಮಸ್ಥನನ್ನು ಯಾವ ಧೀರರು ಕಾಣುತ್ತಾರೆಯೋ ಅವರದು ಶಾಶ್ವತವಾದ ಸುಖ, ಇತರರದಲ್ಲ; ಅನಿತ್ಯರ ನಡುವೆ ನಿತ್ಯನಾದವನು, ಚೇತನರುಗಳಲ್ಲಿ ಚೇತನನಾದವನು, ತಾನು ಏಕನಾದರೂ ಅನೇಕರ ಬಯಕೆಗಳನ್ನು ಕೊಡುವವನು ಯಾವನೋ—ಆ ಆತ್ಮಸ್ಥನನ್ನು ಯಾವ ಧೀರರು ಕಾಣುತ್ತಾರೆಯೋ ಅವರದು ಶಾಶ್ವತವಾದ ಶಾಂತಿ, ಇತರರದಲ್ಲ." (ಕಠ. ೫—೧೨, ೧೩.)

ಓಂ ಶಾಂತಿಃ ಶಾಂತಿಃ ಶಾಂತಿಃ

**ಜಿ. ಪಿ. ರಾಜರತ್ನಂ**

# ಕನ್ನಡ ಗ್ರಂಥಗಳಲ್ಲಿ ಗದ್ಯರಚನೆ

ಕನ್ನಡ ಕಾವ್ಯಗಳು ಮೊದಲು ಸಂಸ್ಕೃತದ ಸ್ಫೂರ್ತಿಯಿಂದಲೇ ಹುಟ್ಟಿದವು. ಸಂಸ್ಕೃತ ಕಾವ್ಯಗಳಲ್ಲಿಯೂ ಪದ್ಯಭಾಗಕ್ಕಿಂತ ಗದ್ಯಭಾಗ ಕಡಿಮೆಯೇ. ಸರಳವಾದ ತೇಜಸ್ವಿಯಾದ ಗದ್ಯವನ್ನು ಬರೆಯುವುದು ಸುಲಭವೆಂದಲ್ಲ. ಆದರೆ ಅಂದಿನ ಅಭಿರುಚಿ ಮತ್ತು ಕವಿತೆಯ ಒರೆಗಲ್ಲು, ಪದ್ಯಕಾವ್ಯ ಶ್ಲೋಕ ಕಂದ ವೃತ್ತಗಳ ಕಡೆಗಿತ್ತು. ಛಂದೋಬದ್ಧವಾದ ಕವಿತೆಯನ್ನು ಬರೆದವರೆಲ್ಲ ಉತ್ತಮವಾದ ಜೀವಕಳೆಗೊಂಡ ಶಕ್ತಿಯುತವಾದ ಗದ್ಯವನ್ನು ಬರೆಯಬಲ್ಲವರಾಗಿದ್ದರೆಂದು ಹೇಳುವುದು ಕಷ್ಟ. ಸಂಸ್ಕೃತ ಸಾಹಿತ್ಯದಲ್ಲಿಯೂ ಉತ್ತಮವಾದ ಗದ್ಯಶೈಲಿಗೆ ಪುರಸ್ಕಾರವಿತ್ತು. ಕಾಳಿದಾಸನೇ ಮೊದಲಾದ ವರಕವಿಗಳ ಅಮರ ಕೃತಿಗಳಿಗೆ ವ್ಯಾಖ್ಯಾನ ಬರೆದಿರುವ ಮಲ್ಲಿನಾಥ ಸೂರಿಯ ಗದ್ಯಶೈಲಿ, ಉತ್ತಮವಾದ ಗದ್ಯದಿಂದ ಏನನ್ನು ಸಾಧಿಸಬಹುದೆಂಬುದಕ್ಕೆ ಉಜ್ವಲ ಉದಾಹರಣೆ. ಬಾಣನ ಕಾದಂಬರಿ ಗದ್ಯಕಾವ್ಯವಾದರೂ ಅದು ಛಂದೋಬದ್ಧವಾದ ಕವಿತೆಯಲ್ಲವೆಂಬ ಕಾರಣದಿಂದ ಪಂಡಿತರೂ ಕವಿಗಳೂ ಅದನ್ನು ಕಡೆಗಣಿಸಲಿಲ್ಲ. ಬರಬರುತ್ತ, ಉತ್ಕೃಷ್ಟವಾದ ಗದ್ಯ, ಸಾಹಿತ್ಯದ ಮುಖ್ಯ ಅಂಗವೆಂಬುದನ್ನು ಸಂಸ್ಕೃತಜ್ಞರೆಲ್ಲರೂ ಒಪ್ಪಿದರು. ಸಂಸ್ಕೃತ ಭಾಷೆಯ ವಾದ ಸರಣಿಯಲ್ಲಿ, ವ್ಯಾಖ್ಯಾನ ಭಾಷ್ಯಗಳಲ್ಲಿ, ತರ್ಕವ್ಯಾಕರಣಗಳಲ್ಲಿ, ವೇದಾಂತ ಮೀಮಾಂಸೆಗಳಲ್ಲಿ, ಸಂಸ್ಕೃತ ಸಾಹಿತಿಗಳು ಸಂಸ್ಕೃತ ಗದ್ಯಶೈಲಿಯನ್ನು ನಾದಿ, ಪ್ರತಿಯೊಂದು ಮಾತಿಗೂ ಪ್ರತ್ಯೇಕವಾದ ಪೃಥಕ್ಕಾದ ಅರ್ಥವನ್ನಿಟ್ಟು ಸಂಸ್ಕೃತ ಗದ್ಯವನ್ನು ಸರ್ವಾಂಗ ಸುಂದರವಾಗಿ ಚೈತನ್ಯಯುಕ್ತವಾಗಿ ಮಾಡಿದರು ಪತಂಜಲಿಯ ಭಾಷ್ಯದ ಗದ್ಯ ಶೈಲಿಯಂತಹ ಶೈಲಿ, ಈವರಗೆ ಹುಟ್ಟಲೇ ಇಲ್ಲವೆಂದು ಸಂಸ್ಕೃತಜ್ಞರು ಹೇಳುತ್ತಾರೆ. ಸ್ಫೂರ್ತಿದಾಯಕವಾದ ಗದ್ಯವನ್ನು ಬರೆಯದವನು ಕವಿಯೇ ಅಲ್ಲ ಎಂದೂ ಒಂದು ಭಾವನೆ ರಸಿಕರಲ್ಲಿ ಮೂಡಿತು. 'ಗದ್ಯಂ ಕವೀನಾಂ ನಿಕಷಂ ವದಂತಿ' ಎಂಬ ವಾಕ್ಯ ಪ್ರಚಾರಕ್ಕೆ ಬಂತು.

ಪದ್ಯಂ ಯದ್ಯಪಿ ವಿದ್ಯತೇ ಬಹುಸತಾಂ ಹೃದ್ಯಂ ವಿಗದ್ಯಂನತೇ
ದ್ಗದ್ಯಂಚ ಪ್ರತಿ ಪದ್ಯತೇ ನವಿಜಪತ್ಪದ್ಯಂ ಬುಧಾಸ್ವಾದ್ಯತಾಂ
ಅಥತ್ತೇಹಿ ತಯೋಃ ಪ್ರಯೋಗ ಉಭಯೋರಾಮೋದಭೂಮೋದಯಃ
ಸಂಗಃ ಕಸ್ಯಹಿ ನಸ್ವದೇತ ಮನಸೇ ಮಾಧ್ವೀಕ ಮೃದ್ವೀಕಯೋಃ

(ಪದ್ಯಕಾವ್ಯಗಳು ಲೋಕದಲ್ಲಿ ಬೇಕಾದಂತೆ ಇವೆ. ಆದರೆ ಗದ್ಯವಿಲ್ಲದ ಪದ್ಯ ರಸಿಕರಿಗೆ ರುಚಿಸುವುದಿಲ್ಲ. ಪದ್ಯವಿಲ್ಲದ ಗದ್ಯವನ್ನು ಜಾಣರು ಒಪ್ಪುವುದಿಲ್ಲ. ಗದ್ಯ ಪದ್ಯಗಳೆರಡರ ಮಿಶ್ರಣ ಹಿತಕರವಾಗಿರುತ್ತದೆ. ಜೇನು ತುಪ್ಪ ಮತ್ತು ದ್ರಾಕ್ಷಾರಸ ಇವೆರಡರ ಯೋಗ ಯಾರಿಗೆ ತಾನೇ ಸವಿಯಾಗುವುದಿಲ್ಲ!)

ಕನ್ನಡ ಕಾವ್ಯಗಳಲ್ಲಿ ಗದ್ಯದ ಪ್ರಾದುರ್ಭಾವ ಯಾವಾಗ ಉಂಟಾಯಿತೆಂಬು

ದನ್ನು ಸ್ಪಷ್ಟವಾಗಿ ಹೇಳುವುದು ಕಷ್ಟ. ಕವಿರಾಜಮಾರ್ಗದಲ್ಲಿ (ಒಂಭತ್ತನೆ ಶತಮಾನದ ಮಧ್ಯ)

> ಮಿಗೆ ಕನ್ನಡ ಕಬ್ಬಂಗಳೊ
> ಳಗಣಿತ ಗುಣ ಗದ್ಯಪದ್ಯಸಂಮಿಶ್ರಿತಮಂ
> ನಿಗದಿಸುವರ್ ಗದ್ಯಕಥಾ
> ಪ್ರಗೀತಿಯಿಂ ತಚ್ಚಿರಂತನಾಚಾರ್ಯರ್ಕಳ್ ೧_೨೭

(ಅಂದರೆ ಕನ್ನಡದಲ್ಲಿ ಕವಿರಾಜಮಾರ್ಗಕ್ಕಿಂತ ಹಿಂದೆ ಗದ್ಯಪದ್ಯಮಿಶ್ರವಾದ 'ಗದ್ಯಕತೆ' ಇತ್ತು) ಎಂದು ಹೇಳಿದೆ. ಈ ಗದ್ಯಕತೆ ಬರಿಯ ಚಂಪೂಕಾವ್ಯ ಮಾತ್ರವಾಗಿದ್ದಿರಲಾರದು. ಚಂಪೂಕಾವ್ಯಗಳಲ್ಲಿರುವುದಕ್ಕಿಂತ 'ಗದ್ಯಕತೆ' ಯಲ್ಲಿ ಗದ್ಯದ ಪ್ರಾಬಲ್ಯ ಪ್ರಾಶಸ್ತ್ಯ ಹೆಚ್ಚಾಗಿದ್ದಿರಬೇಕು. ಕವಿರಾಜಮಾರ್ಗಕ್ಕಿಂತ ಮುಂಚೆ,

> ವಿಮಲೋದಯ ನಾಗಾರ್ಜುನ
> ಸಮೇತ ಜಯಬಂಧುದುರ್ವಿನೀತಾದಿಗಳೀ
> ಕ್ರಮದೊಳ್ ನೆಗಳ್ಚಿ ಗದ್ಯಾ
> ಶ್ರಮಪದ ಗುರುತಾಪ್ರತೀತಿಯಂ ಕೈಕೊಂಡರ್ ೧_೨೯

ವಿಮಲೋದಯ ನಾಗಾರ್ಜುನ ಜಯಬಂಧು ದುರ್ವಿನೀತಾದಿಗಳು ಗದ್ಯಕಾವ್ಯಗಳನ್ನು ರಚಿಸಿದ್ದರೆಂಬುದಕ್ಕೆ ಕವಿರಾಜಮಾರ್ಗದಲ್ಲಿ ಉಲ್ಲೇಖವಿದೆ. ಈ ಗದ್ಯಪ್ರಕಾರವು ಕವಿರಾಜಮಾರ್ಗಕ್ಕೆ ಸುಮಾರು ಇನ್ನೂರು ವರುಷಗಳ ಹಿಂದಲಿಂದಲೂ ಇದ್ದಿರಬೇಕೆಂದು ಪಂಡಿತರು ಅಭಿಪ್ರಾಯಪಡುತ್ತಾರೆ. ಆದರೂ ಆ ಗದ್ಯ ಗ್ರಂಥಗಳಲ್ಲಿ ಒಂದಾದರೂ ನಮಗೆ ಇನ್ನೂ ದೊರೆತಿಲ್ಲ.

೨

ಕನ್ನಡದಲ್ಲಿ ಪೂರ್ಣವಾಗಿ ಗದ್ಯಶೈಲಿಯಲ್ಲಿ ರಚಿತವಾಗಿರುವ ಗ್ರಂಥ ಈಗ ನಮಗೆ ದೊರಕಿರುವುದು ವಡ್ಡಾರಾಧನೆ. ಇದು ಜೈನ ಧಾರ್ಮಿಕ ಕತೆಗಳ ಸಂಗ್ರಹ. ಇದು ಸ್ವಲ್ಪ ಹೆಚ್ಚು ಕಡಿಮೆ ಪಂಪನ ಕಾಲಕ್ಕೆ ಸೇರಿದುದು. ಈ ಗ್ರಂಥಕ್ಕೆ, ಇದು ಕನ್ನಡದಲ್ಲಿ ಮೊದಲನೆಯ ಗದ್ಯ ಗ್ರಂಥವೆಂಬ ಕಾರಣದಿಂದಲೂ, ಇದರ ಶೈಲಿಯ ಕಾರಣದಿಂದಲೂ, ತುಂಬ ಪ್ರಾಮುಖ್ಯತೆ ಇದೆ. ಧಾರ್ಮಿಕ ಗ್ರಂಥವಾದುದರಿಂದ ಪ್ರಯತ್ನಪೂರ್ವಕವಾಗಿ ಕವಿ, ಇದರಲ್ಲಿ, ಹತ್ತನೆಯ ಶತಮಾನದ ಹಿಂದಲ ಹಳಗನ್ನಡವನ್ನು ಉಪಯೋಗಿಸಿದ್ದಾನೆ. 'ಈ ಪೇಳ್ದ ಪತ್ತೊಂಬತ್ತು ಕತೆಗಳು ಶಿವಕೋಟಾಚಾರ್ಯರ ಪೇಳ್ದ ವೊಡ್ಡಾರಾಧನೆಯ ಕವಚವು ಮಂಗಳ ಮಹಾಶ್ರೀ' ವಡ್ಡಾರಾಧನೆ ಯತಿಧರ್ಮವನ್ನು ಬೋಧಿಸುವ ಗ್ರಂಥ. ಇದು ಭಗವತೀ ಆರಾಧನೆಯ ಗಾಥೆಗಳ ವಿವರಣೆಯಾದರೂ, ಕಥಾನಿರೂಪಣೆ ಸ್ವಾರಸ್ಯವಾಗಿದೆ. ಕಥೆಗಳೆಲ್ಲ, ಸಾಂಪ್ರದಾಯಕ ಧಾರ್ಮಿಕ ನೀತಿ ವೈರಾಗ್ಯ ಬೋಧಕಗಳಾಗಿ ಅಲ್ಲಲ್ಲಿ ಪುನರುಕ್ತಿ ಹೆಚ್ಚಾಗಿದ್ದರೂ, ಶೈಲಿಯಲ್ಲಿರುವ ಒಂದು ಸಹಜ ಓಘದಿಂದ, ಸ್ವಾರಸ್ಯವಾದ ಭಾಗಗಳನ್ನು

ಮತ್ತೆ ಮತ್ತೆ ಓದೋಣವೆನಿಸುತ್ತದೆ. ಇದರ ಶೈಲಿಯಲ್ಲಿ ಅನವಶ್ಯಕವಾದ ಸಂಸ್ಕೃತ ಆಡಂಬರ ಅಷ್ಟಾಗಿ ಇಲ್ಲ. ಕನ್ನಡ ಸಂಸ್ಕೃತಗಳ ಸಮಬೆರಕೆ ಇದರಲ್ಲಿ ತೋರಿ, ಭಾಷೆ ಸಜೀವವಾಗಿದೆ. ಧಾರ್ಮಿಕ ಕತೆಯನ್ನು ಆಕರ್ಷಣೀಯವಾಗಿ ಮಾಡುವುದು ಸುಲಭವಲ್ಲ. ಅದು ನೀರಸವಾಗುವ ಸಂಭವವೇ ಹೆಚ್ಚು. ಆದರೆ ಶಿವಕೋಟಿಯ ಗದ್ಯ ಶೈಲಿಯಿಂದ ವಡ್ಡಾರಾಧನೆ, ರಸಿಕರನ್ನು ಆಕರ್ಷಿಸುತ್ತದೆ. 'ಅಹೋ ಸುರಲೋಕ ಮೆಂಬಮೃತ ಸಮುದ್ರದ ನೀರೆಲ್ಲಮಂ ಕುಡಿದು, ತಣಿಯದನೀ ಮನುಷ್ಯಭವದ ಸುಖ ಮೆಂಬ ಪುಲ್ವನಿಯೊಳ್ ಸಿಲ್ಕಿ, ಶಿವಸುಖಮನೆಯ್ದಿಸುವ ಸಚ್ಚಾರಿತ್ರದಿಂ ಬಳ್ಚಿದೆಂ, ನಿಸ್ಸಾರಮಪ್ಪಭೋಗದೊಳ್ ಸಿಲ್ಕಿ ಅಮೇಧ್ಯದೊಳ್ ಕ್ರೀಡಿಸುವ ಬಾಳಕಂಬೊಲ್ ಕಾಲಮಂ ಬರಿದೆ ಕಳಿದೆಂ' ಶಿವಕೋಟಿಯ ಮುಖ್ಯ ಗುಣ ಕನ್ನಡಮಾತಿಗೆ ಅವನು ಕೊಟ್ಟ ಪ್ರಾಧಾನ್ಯತೆ. 'ಕಿರಿಯಾತಂ ವಾಯುಭೂತಿ ಸೂರ್ಯಮಿತ್ರಂ ಗೆಯ್ದುದೆಲ್ಲ ಮಪಕಾರಮೆಂದು ಬಗೆದು, ಎಂತಪ್ಪೊಡಂ ಎಮ್ಮ ಮಾವಂ ಬೈಕಂದಿರಿದು ತಂದ ಕೂಳ್ಗೆ ನೆರಮೆಣ್ಣೆಯನಕ್ಕೆ ಉಪ್ಪನಕ್ಕೆ ಕಳಿಯನಕ್ಕೆ ಎಂತಪ್ಪೊಡಂ ಇಕ್ಕಿಯುಂ ಎರೆಯಿ ಸಿಯುಮರಿಯಂ ಕೆರೆಗೆ ಪೋಗಿ ಮೀವಾಗಳ್ ತಲೆಯಂ ಪೂಸಲೆಣ್ಣೆಯಂ ಅಪ್ಪೊಡಂ ಎರೆಯಿಸಿಯರಿಯಂ, ತಾಂ ದಿವ್ಯಮಪ್ಪ ಆಹಾರಂಗಳಂ ದೆವಸದೆವಸಕ್ಕಂ ಪಲಂಬರ್ ನೆಂಟರ್ಕಳುಂ ಆಳ್ಗಳುಂ ಬೆರಸು ಉಣ್ಗುಂ ಪರ್ವದಿವಸದೊಳಪ್ಪೊಡಂ ಎಂದಾನುಮಿವರ್ಗೆ ಉಣಲಿಕ್ಕಿ ಎಂದು ಅರಿಯಂ ಪಂಚ ಮಹಾಪಾತಕನೆನ್ನುನೇಳೆಂಟು ವರುಷಂ ಬರಂ ಪಗೆವರಂ ಬಗೆವಂತೆ ದಂಡಿಸಿದನೆಂದು ಮನದೊಳ್ ಮುಳಿಸಂ ಭಾವಿಸಿ ಪೊರಮಟ್ಟು ಪೋದನ್' ಇಲ್ಲಿ ಕಥನ ಕಲೆಯೂ ಗದ್ಯ ಶೈಲಿಯೂ ಸಿದ್ಧಿಯನ್ನು ಮುಟ್ಟಿವೆ.

ವಡ್ಡಾರಾಧನೆಯ ಕನ್ನಡ ಶೈಲಿ ಇಂದಿನವರೆಗೆ ನಡೆದು ಬಂದಿರುವ ಶೈಲಿ. ಹತ್ತು ಶತಮಾನಗಳ ಹಿಂದೆ ಬರೆದ ಆ ಗ್ರಂಥ, ಕನ್ನಡಮಾತಿನ ಭಾಗಗಳಲ್ಲಿ ಇಂದು ಬರೆದಂತೆ ತೋರುತ್ತಿದೆ. 'ನಮ್ಮ ಮಗಳಿಗೆ ನಿಮ್ಮ ವ್ರತಗಳನ್ನು ಏಕೆ ಕೊಟ್ಟಿರಿ' ಎಂದು ಬ್ರಾಹ್ಮಣ ಕೇಳಲು ಅವನು 'ನಮ್ಮ ಮಗಳಿಗೆ ನಮ್ಮ ವ್ರತಗಳನ್ನು ನಾವು ಕೊಟ್ಟರೆ ನಿಮಗೆ ಜೇನೆ ಮಾಡಿತೇ' ಎಂದನಂತೆ! ವಿದ್ಯುತ್ ಚೋರನ ಕಥೆಯಲ್ಲಿ ಚೋರನು ಯಮದಂಡನಿಗೆ 'ಹಿಂದೆ ಪೂಣ್ದ ಪ್ರತಿಜ್ಞೆಗಳನ್ನು ನೆನೆವೆಯೋ ನೆನೆಯೆಯೋ' ಎನ್ನಲು ಅವನು 'ದೇವ, ಒಳ್ಳಿತ್ತಾಗಿ ನೆನೆದೆಂ' ಎನ್ನುವನು. ಅವನು ಮತ್ತೆ 'ಮತ್ತೀಗಳ್ ನೀನೇನ್ ಸತ್ತೆಯೋ ಸಾಯೆಯೋ ಮತ್ತೇನೋ' ಎನ್ನಲು ಅವನು 'ದೇವಾ, ನೀ ಗೆಲ್ದೆಯಾಂ ಸೋಲ್ತೆನುಂ ಸತ್ತೆನುಂ' ಎಂದನು. ಇಂದಿಗೂ ಪ್ರಯೋಗದಲ್ಲುಳಿದು ಕೊಂಡಿರುವ ಕನ್ನಡ ಶೈಲಿ ವಡ್ಡಾರಾಧನೆಯದು.

ಹೀಗೆ ನಮಗೆ ದೊರಕಿರುವ ಕನ್ನಡದ ಮೊದಲನೆಯ ಗದ್ಯಕೃತಿ, ಮಹಾಕಾವ್ಯ ವಲ್ಲದಿದ್ದರೂ ಅಚ್ಚ ಕನ್ನಡ ಕೃತಿ. ಕನ್ನಡದ ಜೀವಾಳವನ್ನು ಅರಿತು, ಕನ್ನಡವನ್ನು ಸಂಸ್ಕೃತದ ಅಡಿಯಾಳು ಮಾಡದೆ, ತನ್ನ ಕಾಲಿನ ಮೇಲೆ ತಾನು ನಿಲ್ಲುವಂತೆ ಮಾಡಿದ ಕೃತಿ ವಡ್ಡಾರಾಧನೆ. ಕನ್ನಡ ಗದ್ಯರಚನೆಯಲ್ಲಿ ಇದು ಧೀರವಾದ ಸ್ಪಷ್ಟವಾದ ಹೆಜ್ಜೆ.

೩

ವಡ್ಡಾರಾಧನೆಯನ್ನು ಬಿಟ್ಟರೆ ನಮಗೆ ಮುಂದೆ ಕನ್ನಡ ಗದ್ಯ ಸಿಕ್ಕುವುದು ಚಂಪೂ ಕಾವ್ಯಗಳಲ್ಲಿ. ಇಲ್ಲಿಯೂ ಕವಿಕುಲ ಲಲಾಮ ಪಂಪನೇ ಎತ್ತಿದ ಕೈ. ಪಂಪನಲ್ಲಿ ಕನ್ನಡ ಸಂಸ್ಕೃತಗಳ ಸುಖವಾದ ಸಮಬೆರಕೆ ಇದೆ. ಅವನ ಉಜ್ವಲ ಪಾಂಡಿತ್ಯ, ದಿವ್ಯದೃಷ್ಟಿ, ಧರ್ಮವನ್ನೂ ಕಾವ್ಯ ಧರ್ಮವನ್ನೂ ಒಂದುಗೂಡಿಸಿರುವ ಉದಾತ್ತತೆ, ಲೌಕಿಕ ಮತ್ತು ಜಿನಾಗಮಗಳನ್ನು ಒಂದೊಂದು ಕಾವ್ಯದಲ್ಲಿ ಬೆಳಗಿರುವ ಇಹಪರ ದೃಷ್ಟಿ ಸಮನ್ವಯ, ಇವುಗಳು ರಸಿಕರನ್ನು ತಲೆದೂಗಿಸಿದಂತೆ ಅವನ ಗದ್ಯದ ಮಿಂಚು ಸಹ ರಸಿಕರನ್ನು ಮೆಚ್ಚಿಸಿತು. ಮುಂದಲ ಚಂಪೂ ಕವಿಗಳೆಲ್ಲ ಪಂಪನ ಗದ್ಯ ಶೈಲಿಯನ್ನೇ ಅನುಕರಿಸತೊಡಗಿದರು. ಪದ್ಯಗಳಲ್ಲಿ ಯಾವ ಮೇಲ್ಮೆಯನ್ನು ಪಂಪ ಮುಟ್ಟಿದನೋ ಗದ್ಯ ಶೈಲಿಯಲ್ಲಿಯೂ ಅದೇ ಮೇಲ್ಮೆಯನ್ನು ಮುಟ್ಟಿದನು 'ಅಂತು ಧರ್ಮಪುತ್ರನಬ್ಜಜಪುತ್ರನಂ ಮುಂದಿಟ್ಟೊಡಗೊಂಡು ಬಂದು ಮಣಿಕನಕ ರಚನ ವಿಚಿತ್ರ ವೇತ್ರಾಸನದೊಳಿರಿಸಿ ಮಹಾರ್ಘ್ಯಗುಣಮಣಿ ವಿಭೂಷಣಂಗೆ ಕನಕ ಪಾತ್ರದೊಳರ್ಘ್ಯಮೆತ್ತಿ ಕನಕ ಕಳಶ ಸಂಭೃತ ಶುಚಿ ಜಲಗಳಿಂದಮಾ ಮುನೀಶ್ವರನ ಪಾದ ಪದ್ಮಮಂ ಕರ್ಚಿ ತತ್ಪಾದ ಪವಿತ್ರೋದಕಗಳಿಂ ಮಹಾಋಷಿಯು ತಳಿದ ಕನಕ ಕಮಂಡಲುವಿನ ತೀರ್ಥೋದಕಗಳಿಂದಯ್ವರುಂ ಪವಿತ್ರೀಕೃತ ಮಸ್ತಕರಾಗಿರ್ದು ಯುಧಿಷ್ಠಿರಂ ನಾರದ ಮಹಾ ಮುನಿಯ ಮೊಗಮಂ ನೋಡಿ' (ಪಂಪ ಭಾರತ ೬-೧೧ನೇ ಪದ್ಯದ ನಂತರ ಗದ್ಯ)

'ಎಂದು ಗಜರಿ ಗರ್ಜಿಸುವುದುಮುಮಳರುಮೀ ಜೇಳ್ವಿಯ ಮಾತಂ ತೆಮಳೆ ನುಡಿಮೊಡೆನ್ನು ಗಂಡವಾತುನುಳುಂಬಂ ಭೃತನುಕ್ಕುಮೊಂದು ಮೆಯ್ಯ್ ಮೆಯ್ಯ್ಗೆ ಬೆಸನೆಂಬುದಂ ರಾಜಸೂಯಮಂ ಜೇಳ್ವಲ್ಲದಿರಿರ್ಪ್ಪೊಡೆ ಗಂಗಾ ನದಿಯ ಬಡಗಣ ತಡಿಯ ಮಗಮಗಿಸುವ ವಾರಣಾಸಿ ಪುರಮನಾಳ್ವ ಬೃಹದ್ಬಳಂ ಪುತ್ರೋತ್ಪತ್ತಿ ನಿಮಿತ್ತಮಪ್ಪೊಂದು ದಿವ್ಯ ಪಿಂಡಮಂ ತನ್ನೀರ್ವರರಸಿಯರ್ಗೆ ಪಚ್ಚು ಕೊಟ್ಟೊಡೆ ಪುಟ್ಟಿದೆರಡು ಪೋಳುವುನೀವೆವುವೆಂದು ಬಿಸುಡೆ ಜರೆಯೆಂಬ ರಕ್ಕಸಿ ಕಂಡು ತಿನ್ನಲೆಂದೆರಡು ಪೋಳುಮನೊಂದು ಕೆಯ್ಯೊಳ್ ಪಿಡಿದೊಡೊಂದಮೊಳ್ ಸಂದಿಸಿ ಮಾನಸರೂಪುಗೊಂಡೊಡೆ ಚೋದ್ಯಂ ಬಟ್ಟು ಜರಾಸಂಧನೆಂದು ಪೆಸರಿಟ್ಟು ಬೃಹದ್ಬಳಂಗೆ ಕೊಟ್ಟೊಡೆ ಜರಾಸಂಧನುಂ ಸಾಲ್ವಲನುಮೆಂಬ ದೈತ್ಯನುಮೊಂದಾಗಿ ಮೂವತ್ತೆರಡಕ್ಕೋಹಿಣೀ ಬಲಂ ಬೆರಸು ಮಧುರಾಪುರಕ್ಕೆ ವಂದೆನ್ನಂ ಮುತ್ತಿಕೊಂಡೊಡುಪಾಯು ಬಲದೊಳೆ ಸಾಲ್ವನಂ ಕೊಂದು ಜರಾಸಂಧಂಗಳ್ಕಿ ಮಧುರಾಪುರಮಂ ಬಿಸುಟ್ಟು ಪೋಗಿ ದ್ವಾರಾವತಿಯಂ ಸಮುದ್ರಮೆ ನೀರ್ಗಾದಿಗೆಯಾಗಿ ಮಾಡಿದೆನಿನ್ನುಂ ಯಾದವರ ಸೆರೆಗಳೆಲ್ಲಾ ತನ್ನಲ್ಲಿರ್ದರಾತನುಂ ಭೀಮನ ಕೆಯ್ಯೊಳಲ್ಲದೆ ಸಾಯನೆಂಬುದಾದೇಶಮದರಿನೆಮ್ಮಿ ಚ್ಚೆಯುಂ ಸಮಸ್ತ ಬಲಂ ಬೆರಸು ಭೀಮಾರ್ಜುನರಂ ಪೇಳ್ವುದೆಂದು ಧರ್ಮಪುತ್ರನ ನೊಡಂಬಡಿಸಿ ನುಡಿದು ಮಧುರಾಪುರಮನೆಯ್ದಿ ಬೃಹದ್ಬಳ ತನೂಜನಲ್ಲಿಗೆ

ಧರ್ಮಯುದ್ಧಮಂ ಬೇಡಿಯಟ್ಟಿದೊಡೆ' (ಪಂ—ಭಾ ೬ನೇ ಆಶ್ವಾಸ)

'ಅಂತು ದುರ್ಯೋಧನನಜಾತಶತ್ರುವಿನ ಸರ್ವಸ್ವಮೆಲ್ಲಮಂ ಗೆಲ್ದು ಗೆಲ್ದ ಕಸವರಮೆಲ್ಲಂ ಬಂದುದು ಪಾಂಚಾಳರಾಜತನೂಜೆಯೊರ್ವಳ್ ಬಂದಳಿಲ್ಲಾಕೆಯುಂ ತನ್ನಿಮೆಂದು ಯುಧಿಷ್ಠಿರಂ ಕೊಟ್ಟ ಸನ್ನಿಯ ಬಲದೊಳ್ ತನಗೆ ಲಯಮಿಲ್ಲದುದನರಿದು ಮೇಗಿಲ್ಲದ ಗೊಡ್ಡಾಟಮಾಡಲ್ ಬಗೆದು ಕರ್ಣನ ಲೆಂಕಂ ಪ್ರಾತಿಕಾಮಿಯೆಂಬನುಮಂ ತನ್ನ ತಮ್ಮ ದುಶ್ಶಾಸನನುಮಂ ಪೇಳ್ದೊಡವಂದಿರಾಗಳೆ ಬೀಡಿಂಗೆ ವರಿದು ರಜಸ್ವಲೆಯಾಗಿರ್ದಂ ಮುಟ್ಟಲಾಗದೆನೆಯುಮೊತ್ತಂಬದಿಂದೊಳಗಂ ಪೊಕ್ಕು ಪಾಂಚಾಳಿಯಂ ಕಣ್ಗಿಡೆ ಜಡಿದು ಮುಡಿಯುಂ ಪಿಡಿದು ತನ್ಮಧ್ಯದಿಂ ಸುಯೋಧನನ ಸಭಾ ಮಧ್ಯಕ್ಕೆ ತಂದು' (ಪಂ -ಭಾ ೭ನೇ ಆಶ್ವಾಸ)

ಪಂಪನ ಗದ್ಯಶೈಲಿಯೂ ಜೇನು ಕೊಡುವೆ. ಅದೊಂದು ಮಿಂಚಿನ ಗೊಂಚಲು. ಒಂದೇ ವಾಕ್ಯದಲ್ಲಿ ಒಂದು ಆಶ್ವಾಸದ ಅಭಿಪ್ರಾಯಗಳನ್ನೆಲ್ಲ ಹೊಳೆಸುತ್ತಾನೆ. ಗದ್ಯದಲ್ಲಾಗಲೀ ಪದ್ಯದಲ್ಲಾಗಲೀ ಪಂಪನ ಸಮಾನರು ಹುಟ್ಟಲಿಲ್ಲ.

ಪಂಪನ ನಂತರ ನಮಗೆ ಸಿಕ್ಕುವ ಪೂರ್ಣವಾದ ಗದ್ಯ ಗ್ರಂಥ ಚಾವುಂಡರಾಯ ಪುರಾಣ. ಚಾವುಂಡರಾಯ ಪುರಾಣದ ಕಥಾವಸ್ತು ಆದಿಪುರಾಣದ ಮೊದಲನೆಯ ಭಾಗವೇ. ಚಾವುಂಡರಾಯಪುರಾಣದ ಶೈಲಿಯಲ್ಲಿ ಕಾವ್ಯಭಾಗ ಹೆಚ್ಚಾಗಿಲ್ಲ. ಇದು ಕಾವ್ಯಗದ್ಯ ಮತ್ತು ಶಾಸ್ತ್ರಗದ್ಯಗಳ ಒಂದು ಮಿಲನ. ಇದರ ಮುಖ್ಯ ಸ್ವಾರಸ್ಯ ಇದರಲ್ಲಿ ಅನೇಕ, ಒಳಕೆಯ ಮಾತಿನ ಕನ್ನಡ ಪದಗಳು ಸೇರಿರುವುದೇ ಆಗಿದೆ. ಚಾವುಂಡರಾಯನನ್ನು. ಕನ್ನಡ ಗದ್ಯ ಶೈಲಿಯಲ್ಲಿ ದೇಸಿಯ ಬಳಕೆಯನ್ನು ಪ್ರಚಾರಕ್ಕೆ ತಂದ ಗದ್ಯಕಾರನೆನ್ನಬಹುದು.

ಚಂಪೂಕಾವ್ಯದಲ್ಲಿ ಗದ್ಯವನ್ನು ಪ್ರಭಾವಯುತವಾಗಿ ಬಳಸಿದವರಲ್ಲಿ ನಾಗವರ್ಮನೂ ಒಬ್ಬ. ನಾಗವರ್ಮನ ಕಾದಂಬರಿಯ ಗದ್ಯ ಶೈಲಿಯಲ್ಲಿ ಅಲ್ಲಲ್ಲಿ ನಾವೀನ್ಯತೆ ಇದೆ. ಕನ್ನಡದಲ್ಲಿ ಪಂಚತಂತ್ರವನ್ನು ರಚಿಸಿದ ದುರ್ಗಸಿಂಹನ ಗದ್ಯ, ಚಂಪೂಗದ್ಯದಿಂದ ಭಿನ್ನವಾಗಿದೆ. ಪಶುಪಕ್ಷಿ ಸಂಬಂಧವಾದ ಸಾಂಕೇತಿಕ ಕಥೆಗಳನ್ನು ಕುರಿತು ಹೇಳಿರುವುದರಿಂದ ಈ ಗದ್ಯ, ಪ್ರೌಢ ಚಂಪುವಿನ ಹೊರೆಯನ್ನು ಕಳೆದುಕೊಂಡು ಹಗುರವಾಗಿದೆ.

ಜನ ಸಾಮಾನ್ಯರಿಗೆ ತಿಳಿಯುವ ಗದ್ಯವನ್ನು, ಚಂಪೂ ಗ್ರಂಥದಲ್ಲಿ ಬಳಕೆಗೆ ತಂದವನು ನಯಸೇನ. ಜನಸಾಮಾನ್ಯದಲ್ಲಿ ಮತತತ್ವಗಳನ್ನು ಬಳಕೆಗೆ ತರಲು ಈತನಿಗೆ ಸುಲಭವಾದ ಭಾಷೆ ಬೇಕಾಗಿದ್ದಿತು. ಕನ್ನಡ ಸಂಸ್ಕೃತದ ಅಸಭ್ಯ ಸಂಮಿಳನವನ್ನು ನಯಸೇನ ಒಪ್ಪಲಿಲ್ಲ.

ಪೊಸ ಕನ್ನಡದಿಂ ವ್ಯಾವ
ರ್ಣಿಸುವೆಂ ಸತ್ಕೃತಿಯನೆಂದು ಕನ್ನಡವುಂ ಚಿಂ
ತಿಸಿ ಕೂಡಲಾರದಕ್ಕಟ
ಮಿಸುಕಿದ ಸಕ್ಕದಮನಿಕ್ಕುವವನುಂ ಕವಿಯೇ ? ಧರ್ಮಾಮೃತ ೧_೪೧

ಸುದ್ದ ಕನ್ನಡನೋಳ್ ಸಕ್ಕದವ ತಂದಿಕ್ಕುವುದೇ ಎಂದು ಹೊರಟವನು ಈತ. ಈತನ ಗದ್ಯದ ಮುಖ್ಯ ಲಕ್ಷಣ, ಈತನ ಅಚ್ಚ ಕನ್ನಡ ಸಾದೃಶ್ಯಗಳು, ಪುಂಖಾನುಪುಂಖವಾಗಿ ಬರುವ ಹೋಲಿಕೆಗಳು. 'ಕೆರೆಯನೊಡೆದು ತೊರೆಯ ತೀವುವ, ಮನೆಯನಳಿದು ಬೇಲಿಯನಿಕ್ಕುವ, ಹಾಸನಳಿದು ಕಂಥೆಯಂ ಪೊಲಿಸುವ, ತುಪ್ಪವನೊಕ್ಕು ಸಗಣಮಂ ಕೊಳ್ವ, ಕಸ್ತೂರಿಯಂ ಬಿಸುಟು ಕೆಸರಂ ಕೊಳ್ವ, ಬಂಡಾರಮನೀಡಾಡಿ ಕಾಚಂ ಸಂವರಿಸುವ, ಬಟ್ಟೆಯಂ ಬಿಟ್ಟು ಕಾಡಂ ಪುಗುವ ಕೆಯ್ಯಂ ಬಿಟ್ಟು ಪುಲ್ಲಂ ಕೊಳ್ವ, ಪೊನ್ನಂ ಬಿಟ್ಟು ಮಸಿಯ ಕಟ್ಟುವೆಗ್ಗನಂ ಪ್ರೋಲ್" (ಧರ್ಮಾಮೃತ ೩-೨೧)

ಕೆಲವು ಕಡೆ ಈ ಉಕ್ತಿಗಳು ಸ್ವಲ್ಪ ಹೆಚ್ಚಾದರೂ ಅವುಗಳ ಸ್ವಾರಸ್ಯ ಕಡಿಮೆಯಾಗುವುದಿಲ್ಲ. ಈ ಮುಂದಲದು ಒಬ್ಬ ಸ್ತ್ರೀ ನರಕದ ಹಿಂಸೆಗಳನ್ನು ವರ್ಣಿಸುವ ಬಗೆ.

'ಬಾರಿಬಾರಿಗೆ ಗಾಣದೊಳಿಟ್ಟು ಪೀಳಿದುಂ, ನೋಡೆ ನೋಡೆ ಗಾಣಿದೊಳಿಕ್ಕಿ ತೆಗೆದುಂ, ಸಂದು ಸಂದುಗಳೊಳ್ ಸೂಜಿಯಂ ಪೆಟ್ಟಿಯುಂ, ಒಡಲೊಳುಳಿಗಳಂ ಸೇರಿಸಿಯುಂ, ಮೆಯ್ಯಂ ಕಿರಿಕಿರಿದಾಗಿ ಕತ್ತರಿಸಿ ಬಾಯೊಳ್ತುರುಕಿಯುಂ, ಬಸಿರನಿಬ್ಬಗಿ ಮಾಡಿ ಕುದಿದೆಣ್ಣೆಯುಂ ಪೊಯ್ದು, ಪುಣ್ಣೊಳ್ ಲೋಹರಸಮಂ ಪೊಯ್ದುಂ, ಕಣ್ಣೊಳ್ ಕೆಂಡಮನಿಟ್ಟು, ಮೂಗುಂಬಾಯಂ ಉಸಿರ್ವಿಡುಕಗೊಡದೆಪಿಡಿದುಂ ಪೆರ್ನೊಣಂಗಳಿಂ ತಗಳ್ದೂರಿಸಿಯುಂ ಇಂತನೇಕವಿಧದಂಡನೆಗಳಿಂ ದಂಡಿಸಿಯುಂ ಸೈರಿಸಲಾರದೆ ಅರಿಸಿನದಂತೆ ಪಿಣಿವರ್, ಕಾರೆಯಂತೆ ಕೊರಲಂ ಪತ್ತಿಕೊಯ್ವರ್, ಗರಗಸದಂತೆ ಮೆಯ್ಯಂ ಕೊರೆವರ್, ಪಣಿಗೆಯಂತೆ ತಲೆಯ ಪತ್ತಿತೆಗೆವರ್, ಮೊರೆಯಂತೆ ಎರ್ದೆಯಂಪತ್ತಿ ನೆತ್ತರಂ ಕುಡಿವರ್, ಉಗುರಂತೆ ಬೆರಲಂ ಪತ್ತಿಕೀಳ್ವರ್, ನಿರಿಯಂತೆ ತೊಡೆಯಂ ಪತ್ತಿಯುಡಿವರ್ ಪೊರೆಯಂತೆ ನೊಣಕಾಲಂ ಪತ್ತಿಮುರಿವರ್, ಸೀರೆಯಂತೆ ನಡುವಂ ಪತ್ತಿನೆಲಕ್ಕಿಕ್ಕುವರ್, ಬಾಸೆಯಂತೆ ಬಸುರಂ ಪತ್ತಿಕರುಳನುಗಿವರ್, ಕೂಸಿನಂತೆ ಮೊಲೆಯಂ ಪತ್ತಿತಿಂಬರ್, ತಿಲಕದಂತೆ ನೊಸಲಂಪತ್ತಿಕಡಿವರ್, ಓಲೆಯಂತೆ ಕಿವಿಯಂ ಪತ್ತಿಪರಿವರ್, ಕೇಶದಂತೆ ಬೆನ್ನಂಪತ್ತಿಬಾರನುರ್ಚುವರ್, ಮಲ್ಲರಂತೆ ಬರಿಯಂಪತ್ತಿ ಕಳಲೆಗಟ್ಟುವರ್ ಪೇನಂತೆ ತಲೆಯಂಪತ್ತಿಪಲ್ಕಡಿವರ್, ತೋರಣದಂತೆ ತಳಮಂ ಪತ್ತಿ ಕತ್ತರಿಸುವರ್, ಕಂಕಣದಂತೆ ಮುಂಗೈಯಂ ಪತ್ತಿ ಕೊರೆವರ್, ಕಾಡಿಗೆಯಂತೆ ಕಣ್ಣಂ ಪತ್ತಿ ಬೆರಲೊಳಿರಿವರ್, ಕಂಪಿನಂತೆ ಮೂಗಂ ಪತ್ತಿಕೊಯ್ವರ್, ತಂಬುಲವಂತೆ ಪಲ್ಲಂ ಪತ್ತಿ ತಿವಿವರ್, ಸವಿಯಂತೆ ನಾಲಗೆಯಂ ಪತ್ತಿಮೆಲ್ವರ್, ಕರ್ಪಿನಂತೆ ಕಾಲಂ ಪತ್ತಿಕಡಿವರ್, ಕುಪ್ಪಸದಂತೆ ಬೆನ್ನಂ ಪತ್ತಿ ಕೆತ್ತುವರ್, ಸಿಪ್ಪಿಗನಂತೆ ಪೊಲಿವರ್, ಕಮ್ಮಾರನಂತೆ ಕಾಸಿಬಡಿವರ್, ಮೇದನಂತೆ ಸೀಳ್ವರ್, ಬಡಗಿಯಂತೆ ಕೆತ್ತುವರ್, ಅಗಸನಂತೆ ಬೀಸಿ ಪೊಯ್ವರ್, ಒಕ್ಕಲಿಗನಂತೆ ಮೆಟ್ಟಿಪರಗುವರ್, ಮಲ್ಲರಂತೆ ಪೋರುವರ್, ಲೇಖಕನಂತೆ ಕೀಸುವರ್, ಗಜದಂತಿಕ್ಕಿಮೆಟ್ಟುವರ್, ಪರ್ದಿನಂತೆ ಕೀಳ್ವರ್, ಕೇಳಿನಂತೆ ನೋಯಿಸುವರ್, ಸಿಡಿಲಂತೆ ಪೊಡೆವರ್' (ಧರ್ಮಾಮೃತ ೩-೭೩)

ನಯಸೇನನ ಗದ್ಯ ಚಂಪೂ ಗದ್ಯದ ಕ್ಲಿಷ್ಟತೆಯನ್ನು ಕಳೆದುಕೊಂಡು ಉಲ್ಲಾಸ

ವಾಯಿತು: ಜನಜೀವನದ ವ್ಯವಹಾರ ವಚನಗಳು ಅದರಲ್ಲಿ ಪ್ರವೇಶಿಸಿದವು. 'ನಾಣ್ನುಡಿ ದೇಸಿವೆತ್ತ ಪೊಸಮಾರ್ಗಂ.' ಮತ್ತೊಬ್ಬ ಪ್ರಸಿದ್ಧ ಗದ್ಯಕಾರ ಶೂದ್ರಕ ವೆಂಬ ಕಾವ್ಯವನ್ನು ಬರೆದಿರುವವನು. ಈ ಕಾವ್ಯ ನಮಗೆ ಸಿಕ್ಕಿಲ್ಲ. ಇದನ್ನು ಬರೆ ದವನು ಗುಣವರ್ಮನೆಂಬುವನೆಂದು ಪಂಡಿತರ ಊಹೆ. ಈತನ ಕಾವ್ಯದಿಂದ ಉದ್ಧೃತ ವಾದ ಭಾಗಗಳು ಕಾವ್ಯಸಾರದಲ್ಲಿವೆ.

ಬೆಳಗಪ್ಪ ಜಾವದಯ್ಕಿಲ‍
ಕೊಳೆ ಶೀತಕ್ಕಾರಕಳ್ಕಿ ತೊಟ್ಟಿರ್ದ ಧರಾ
ತಳವೆಂಬ ಪೆಣ್ಣ ಪೊಸಕಂ
ಚುಳಿಕೆಯ ಸೀರ್ಮುತ್ತಿನಂದವಾದುವು ಪನಿಗಳ್ (ಕಾವ್ಯಸಾರ ೬೯೪)

ಬೆಳಗಿನ ಜಾವದಲ್ಲಿ ಚಳಿಹತ್ತಲು ಶೀತವನ್ನು ತಡೆಯಲಾರದೆ ಭೂವನಿತೆ ತೊಟ್ಟ ಹೊಸಕುಪ್ಪಸದ ಸೀರ್ಮುತ್ತಿನಂತೆ ಇದ್ದವು ನೆಲದಮೇಲಿನ ಹನಿಗಳು ಮುಂತಾದ ಸೊಗಸಾದ ವರ್ಣನಾಭಾಗಗಳು ಇವನಲ್ಲಿ ದೊರಕುತ್ತವೆ. ಇವನ ಗದ್ಯಶೈಲಿ ತೇಜಸ್ವಿ ಯಾಗಿ ಓದುಗರನ್ನು ತನ್ನ ಋಜುತ್ವದಿಂದ ಆಕರ್ಷಿಸುತ್ತದೆ 'ಸಂಗರಾಜನಂ ಸಿದ್ಧ ನಂತಾ ಸಿದ್ಧಕ್ಷೇತ್ರಮುಂ ಪುಗುತಂದನದೆಂತಪ್ಪುದೆಂದೊಡೆ—ಇಂದ್ರಜಾಲಿಗನಂತುರಿಯ ನುಗುಳ್ವಬಳ್ಳಗಳಿಂ, ವಾತಪೂರಣಂಗಳಿಂ ನೊಂದಂತೆ ದೆಸೆದೆಸೆಗೆ ಪ್ರೊಂಗುವ ಗೂಗೆಗಳಿಂ, ಬೆದೆಕಾರರಿರ್ದೆಯಂತೆ ಬೇಯುತಿರ್ದ ಪೆಣಂಗಳಿಂ ಜಿಗುಣ್ಸೆಯಂತೆ ನೆತ್ತರನೆ ಪೀರ್ವ ಡಾಕಿನಿಯರಿಂ, ಭೈರವನಂತೆ ಭೂಂಕಾರಂಗುಡುತಿರ್ಪ ಸಾಧಕರಿಂ, ಗೋದಾಮೆಯಂತೆ ಬಗೆದ ಬಣ್ಣಮಪ್ಪ ರಣಜೆಟ್ಟಿಗರಿಂ, ನಾರಾಯಣನಂತೆ ಬಲಿಯಂ ಬೇಡುವ ಬ್ರಹ್ಮ ರಾಕ್ಷಸರಿಂ, ಬಲದೇವನಂತೆ ಪೆಣನಂ ಪೊತ್ತು ತೊಳಲ್ವ ಕ್ಷೇತ್ರಪಾಲರಿಂ, ಈಶ್ವರನಂತೆ ಪಾವಂ ತೊಟ್ಟಿರ್ದ ಬೇತಾಳರಿಂ, ಮೀನ್ಗಳಂತೆ ಗಾಳದೊಳ್ ತೊಡರ್ದಿರ್ದ ಪಾದರಿಗರಿಂ, ಮಹಿಷಾಸುರನಂತೆ ಸೂಲದೊಳ್ ನೊಂದು ನರಳ್ವ ಕಳ್ಳರಿಂ, ಬೊಂತಿಯಂತೆ ದಕ್ಕಿ ನೊಳಿರ್ದ ಪಂದಲೆಗಳಿಂ ಬಂದಿಕಾರನಂತೆ ತೆರಪುವಾರ್ದು ಪಿಡಿವ ಶಾಕಿನಿಯರಿಂ ಮೃಗಯೂಪತಿಯಂತೆ ಕಿಲಾಲಜಲದೊಳೋಳಾಡುವ ಲಲಾಮೆಯರಿಂ (?) ಸೋಂಬನಂ ಮೆಚ್ಚಿ ಬೇರೂರ್ಗೆ ಪ್ರೇದ ಸೂಳೆಯಂತುಯ್ಯಲಾಡುವ ರಣದೇವತೆಯರಿಂದತಿ ಭಯಂಕಾರಮಪ್ಪುದರೊಳಗೆ (ಕಾವ್ಯಸಾರ ೫೮೯)

ಚಂಪೂಗದ್ಯಶೈಲಿಯಲ್ಲಿ ತಕ್ಕಮಟ್ಟಿನ ಗದ್ಯಸಿದ್ಧಿಯನ್ನು ಪಡೆದವನು ನಾಗಚಂದ್ರ. ಇವನ ಶೈಲಿಯಲ್ಲಿ ಬಣ್ಣವಿದೆ, ಯೌವನವಿದೆ, ಪ್ರೌಢವಾದ ಸರಣಿಯಿದೆ. ಮುಂದಲದು ರಾಮಚಂದ್ರಚರಿತಪುರಾಣದ ಒಂದು ಗದ್ಯ. ಸೀತೆಯ ಅಲಂಕಾರ—'ಅಂತು ಬಂದು ಚೆಂಬೊನ್ನಕನ್ನೆಮಾಡದ ಮೊಗಸಾಲೆಯೊಳಿಕ್ಕಿದ ಮುತ್ತಿನ ಬಿತ್ತರಿಗೆಯೊಳ್ ಕುಳ್ಳಿರ್ಪುದುಂ, ಮೇಳದಂಗನೆಯರ್ ಮಂಗಳಪಸದನಂಗೊಳಿಸಲವಸರಂಬಡೆದು ಚಿತ್ರಚೀನಾಂಬರಮುಂ ನಿರಿವಿಡಿದುಡಿಸಿ ಕೆಂದಾವರೆಯನಿಳವಿಸಿಲೆಳಸುವಂದಮಾಗೆ ಲಾಕ್ಷಾರಸದಿನಡಿಯೂಡಿಯುಂ, ಚರಣನಖಚಂದ್ರಮಾಲೆಗೆ ನಕ್ಷತ್ರಮಾಲೆಯನೋಲ

ಗಿಸುವಂತೆ ಮುಕ್ತಾಫಲನೂಪುರಮುಂ ತುಡಿಸಿಯುಂ, ಪುಳಿನವಲಯಮಂ ಪೊಂದಾವರೆಯ ಬಳ್ಳಿಬಳಸಿದಂತೆ ನಿತಂಬವಳಯದೊಳ್ ಮಣಿಮೇಖಲೆಯಂ ತೊಡರ್ಚಿಯುಂ, ಮದನಮದನದನೀರದನದೊಳ್ ಕೀರ್ತಿಮುಖಮಂ ಕೀಲಿಸುವಂತೆ ಶತಪತ್ರಭಂಗಮುಂ ತುಂಗಸ್ತನಭಾಗದೊಳ್ ಸಂಗಳಿಸಿಯುಂ, ಪೀವರಪಯೋಧರಮಂಡಲಕ್ಕೆ ಪರಿವೇಷಮುಂ ಪಡೆವಂತೆ ಪಂಚರತ್ನದ ಪಂಚಸರಮಂ ಕೊರಲೊಳಿಕ್ಕೆಯುಂ, ಬಾಹುಲತೆಯ ಬೀಳಲಂತೆ ರತ್ನಕಾಂತಿ ಕವಲ್ವರಿವಿನಮಂಗದಮಂ ನಳಿತೋಳ್ಗಳವಡಿಸಿಯುಂ, ಬಾಸಿಗಮಂ ಭೃಂಗಮಾಲೆ ಬಳಸುವಂತೆ ನಳಿತೋಳೊಳ್ ಪಚ್ಚೆಯ ಪಿಂಡುಗಂಕಣಮನೇರಿಸೆಯುಂ, ನನೆಗಣೆಗೆ ಗತಿಗಟ್ಟುವಂತಂಗುಳಿಯೊಳ್ ರತ್ನಮುದ್ರಿಕೆಯಂ ಮುದ್ರಿಸಿಯುಂ, ಸ್ಮರವಶೀಕರಣಯಂತ್ರಮಂ ಬರೆವಂತೆ ಕರ್ಪೋಲದೊಳ್ ಮಕರಿಕಾಪತ್ರಮಂ ಬರೆದುಂ, ಪೊಸಮಸೆಯ ಪೂಗಣೆಗೆ ಪೊಗರಂ ಪಡೆವಂತೆ ನಗೆಗಣ್ಗಳೊಳಂಜನಮನೆಚ್ಚಿಗೆಯ್ದುಂ, ಕರ್ಣಾಂತವಿಶ್ರಾಂತ ವಿಲೋಚನನೊಳ್ ಪಡಿಯಿಟ್ಟು ನೋಳ್ಪಂತೆ ಕಿವಿಯೊಳವತಂಸೋತ್ಪಲಮಂ ತೊಡರ್ಚಿಯುಂ"

೪

ಇಲ್ಲಿಂದ ಮುಂದೆ ನಾವು ವಚನಕಾರರ ರಾಜ್ಯವನ್ನು ಪ್ರವೇಶಿಸುತ್ತೇವೆ. ಶಿವಶರಣರು ವಾದವಿವಾದಗಳಿಂದ ಸಾಮಾನ್ಯಜನತೆಯ ಮನಸ್ಸನ್ನು ತಿದ್ದಿ ಅವರ ಭಾಷೆಯಲ್ಲಿಯೇ ಅವರಿಗೆ ಬೋಧಿಸಿ ಮತಪ್ರಚಾರ ಮಾಡಬೇಕಾಗಿದ್ದುದರಿಂದ, ಅವರ ವಚನಗಳಲ್ಲಿ ತಿಳಿಗನ್ನಡಕ್ಕೆ ಪ್ರಾಶಸ್ತ್ಯ ಹೆಚ್ಚಾಯಿತು. ಸಾಧಕರ, ಅನುಭಾವಿಗಳ, ಆಧ್ಯಾತ್ಮಸಾಧಕರ ಭಾವಗೀತಗಳೇ ಇವು. ಸ್ವಾಭಾವಿಕವಾಗಿ ಲಾಲಿತ್ಯಮಾರ್ದವವುಳ್ಳ ಕೆಲವೆಡೆ ಭಕ್ತಿಯ ಅತಿರೇಕದಿಂದ ಸ್ವಲ್ಪ ಪರುಷರಾಗಿಯೂ ಇವೆ. ಈ ಬಗೆಯ ಸಾಹಿತ್ಯವಿಶೇಷ ಕನ್ನಡಕ್ಕೇ ಪೃಥಕ್ಕಾದುದು. ಇವುಗಳ ಶೈಲಿಯಲ್ಲಿಯೂ ಬೇರೆ ಬೇರೆ ಬಗೆಗಳಿವೆ. ಹಳಗನ್ನಡ ನಡುಗನ್ನಡ ಸಮನ್ವಯ, ಸಂಸ್ಕೃತದ ಭಾವನೆಗಳನ್ನು ಅಚ್ಚಕನ್ನಡದಲ್ಲಿ ಹೇಳುವ ರೀತಿ, ಧರ್ಮಬೋಧೆಗಾಗಿ ವಚನಗಳು ಹುಟ್ಟಿದರೂ ಇವುಗಳಲ್ಲಿ ಸಾಹಿತ್ಯಭಾಗ ವಿಶೇಷವಾಗಿದೆ. ಸೌಂದರ್ಯದೃಷ್ಟಿ, ಸ್ವಾನುಭವ, ಸಾಧಕನ ಕಾತರ, ಭಕ್ತನ ತೈಲಧಾರಾವಚ್ಛಿನ್ನವಾದ ಭಕ್ತಿ, ಭಕ್ತಿಯಲ್ಲಿ ಅವ್ಯಭಿಚಾರಭಾವ ಇವುಗಳೆಲ್ಲದರಿಂದ ವಚನಗಳು ಕನ್ನಡನಾಹಿತ್ಯ ಕಾವ್ಯಗದ್ಯ ರತ್ನಗಳಾಗಿವೆ. ✓ಇವುಗಳ ಆಕಾರ ಗದ್ಯವಾದರೂ ಇವು ಮೂಲತಃ ಕಾವ್ಯ. ದೇವರ ದಾಸಿಮಯ್ಯ ಅಲ್ಲಮಪ್ರಭು ಬಸವೇಶ್ವರ ಅಕ್ಕಮಹಾದೇವಿ ಇವರೆಲ್ಲ ಈ ಸಾಹಿತ್ಯದಲ್ಲಿ ಪಳಗಿದವರು.

'ಕರಿಯ ನಿತ್ತೊಡೆ ಒಲ್ಲೆ, ಸಿರಿಯನಿತ್ತಡೆ ಒಲ್ಲೆ ಹಿರಿದಪ್ಪರಾಜ್ಯನಿತ್ತಡೆ ಒಲ್ಲೆ, ನಿಮ್ಮ ಶರಣರ ಸೂಳ್ನುಡಿಯ ಒಂದರಗಳಿಗೆ ಇತ್ತಡೆ ನಿಮ್ಮನಿತ್ತೆಕಾಣಾ ರಾಮನಾಥಾ; ಕಡುದರ್ಪವೇರಿದ ಒಡಲೆಂಬ ಬಂಡಿಗೆ ಮೃಡಶರಣರ ನುಡಿಗಡಣವೇ ಕಡೆಗೀಲು. ಜ್ವರವಿಡಿದ ಬಾಯಿಗೆ ನೊರೆವಾಲು ಒಲಿವುದೆ? ಎಳ್ಳು ಇಲ್ಲದ ಗಾಣದಲ್ಲಿ ಎಣ್ಣೆ ಉಂಟೆ? ಬರು ಶಠಗನ ಭಕ್ತಿ ನಿಜವೆಂದು ನಂಬಲಿಬೇಡ. ಮಠದೊಳಗಣಬೆಕ್ಕು

ಇಲಿಯ ಕಂಡು ಪುಟನೆಗೆದಂತಾಯ್ತು. ಮಾರಿಯ ಪೂಜಿಸಿ ಮಸಣಕ್ಕೆ ಹೋಗಿ ಗೋರಿಗೊಳಿಸಿ ಕುರಿಯ ಕೊರಳನೆ ಕುಯಿದುಂಬ ಕ್ರೂರಕರ್ಮಿಗಳಿಗೆ ಶಿವಭಕ್ತರೆನಬಹುದೆ? ಸಾವರೆ ಸಂಗ್ರಾಮಕ್ಕೆ ಹೋದವರೆಲ್ಲ ಇರಿಯಬಲ್ಲರ? ನೂರಕ್ಕೊಬ್ಬ, ಸಹಸ್ರಕ್ಕೊಬ್ಬ. ಹುಣಸೆಯ ಹೂವೆಲ್ಲ ಕಾಯಾಗಬಲ್ಲುದೇ ರಾಮನಾಥ? ಈಶನ ಶರಣರು ವೇಶಿಯ ಹೋದರೆ, ಮೀಸಲೋಗರವ ಹೊರಗಿರಿಸಿದರೆ, ಹಂದಿ ಮೂಸಿನೋಡಿದಂತೆ ಕಾಣಾ ರಾಮನಾಥಾ. ಉಣ್ಣಿ ಕೆಚ್ಚಲ ಹತ್ತಿ ಉಂಬುದೇ ನೊರೆವಾಲ? ಪುಣ್ಯಕ್ಷೇತ್ರದಲ್ಲಿ ಹುಟ್ಟಿ ಉಣ್ಣದವನು ಆ ಉಣ್ಣಿಯಿಂದ ಕರಕಷ್ಟ ರಾಮನಾಥಾ. ಇಳೆ ನಿಮ್ಮ ದಾನ ಬೆಳೆ ನಿಮ್ಮ ದಾನ ಸುಳಿದು ಬೀಸುವ ವಾಯು ನಿಮ್ಮ ದಾನ. ನಿಮ್ಮ ದಾನವನುಂಡು ಅನ್ಯರ ಹೊಗಳುವ ಕುನ್ನಿಗಳನೇನೆಂಬೆ ರಾಮನಾಥಾ. ಮೊಲೆ ಮೂಡಿಬಂದರೆ ಹೆಣ್ಣೆಂಬರು, ಗಡ್ಡ ಮೀಸೆ ಬಂದರೆ ಗಂಡೆಂಬರು. ನಡುವೆ ಸುಳಿವಾತ್ಮನು ಗಂಡೂ ಅಲ್ಲ ಹೆಣ್ಣೂ ಅಲ್ಲ ಕಣಾ ರಾಮನಾಥಾ.' ದೇವರ ದಾಸಿಮಯ್ಯ ಸಂಸ್ಕೃತಶ್ಲೋಕಗಳನ್ನು ಹಾಗೆಯೇ ಕನ್ನಡಕ್ಕೆ ಇಳಿಸಿರುವ ಉದಾಹರಣೆಗಳು ಇವೆ.

ಸಂಸಾರದೆಡೆಯಲ್ಲಿ ದುಃಖವಲ್ಲದೆ ಸುಖವಿಲ್ಲ ನೋಡಾ. ಅದೆಂತೆಂದೊಡೆ 'ಭಾರ್ಯಾವಿಯೋಗಸ್ಸ್ವಜನಾಪವಾದಃ ಋಣಸ್ಯ ಶೇಷಂ ಅಧಮಸ್ಯ ಸೇವಾಃ । ದಾರಿದ್ರ್ಯಕಾಲೇ ಪ್ರಿಯದರ್ಶನಂ ಚ ವಿನಾಗ್ನಿನಾ ಪಂಚ ದಹಂತಿ ಕಾಯಂ॥ ಇಂತೆಂದುದಾಗಿ ಈ ಯ್ಯೆದು ಕಿಚ್ಚನಿಕ್ಕಿ ಮಣ್ಣು ಹೋಯಿದು ಕೆಡಿಸಿದೆಯಯ್ಯಾ ರಾಮನಾಥಾ' (ನಡೆನೋಟ ಸೊಲ್ಲೆಡೆಯಲ್ಲಿ ಒಂದು ಕಿಚ್ಚು, ಮಡದಿ ಪುರುಷರೆಡೆಯಲ್ಲಿ ಒಂದು ಕಿಚ್ಚು ತಡೆದುಂಬ ಎಡೆಯಲ್ಲಿ ಒಂದು ಕಿಚ್ಚು ಕೂಡಿದ ದ್ರವ್ಯದ ಮೋಹದೆಡೆಯಲ್ಲಿ ಒಂದು ಕಿಚ್ಚು ಇಂತೀ ಐದು ಕಿಚ್ಚನಿಕ್ಕಿ ಬಾಯಲ್ಲಿ ಮಣ್ಣು ಹೊಯ್ದು ಕೆಡಸಿದೆಯಯ್ಯಾ ಕಾಣಾ ರಾಮನಾಥಾ ಈ ದಾರಿಯಲ್ಲಿ ಮುಂದೆ ವಚನ ಸಾಹಿತ್ಯ ಅಪಾರವಾಗಿ ಬೆಳೆಯಿತು. 'ಜನ ಮೆಚ್ಚು ಶುದ್ಧನಲ್ಲದೆ ಮನ ಮೆಚ್ಚು ಶುದ್ಧನಲ್ಲವಯ್ಯ! ತನುವಿನ ಮೇಲೆ ಬ್ರಹ್ಮಚರ್ಯತ್ವವಳವಟ್ಟರೇನು, ಮನದ ಮೇಲೆ ಬ್ರಹ್ಮಚರ್ಯತ್ವ ವಳವಡದನ್ನಕ್ಕ. ಮೆಳೆಯ ಮೇಲೆ ಕಲ್ಲನಿಕ್ಕಿ ಮೆಳೆ ಭಕ್ತನಾಗಬಲ್ಲುದೆ? ಮಾತೆಂಬುದು ಜ್ಯೋತಿರ್ಲಿಂಗ. ಕಂಡುದ ಹಿಡಿಯಬೊಲ್ಲದೆ ಕಾಣದುದನರಸಿ ಹಿಡಿದಿಹೆನೆಂದರೆ ಸಿಕ್ಕದೆಂಬ ಬಳಲಿಕೆ ನೋಡಾ ಬೆಟ್ಟಕ್ಕೆ ಚಳಿಯಾದಡೆ ಏನ ಹೊದ್ದಿಸುವರಯ್ಯಾ, ಬಯಲು ಬತ್ತಲೆ ಇದ್ದರೆ ಏನನುಡಿಸುವರಯ್ಯಾ, ಭಕ್ತನು ಭವಿಯಾದಡೆ ಅದೇನನನು ಪಮಿಸುವನಯ್ಯಾ; ಮುಗಿಲ ಬಣ್ಣದ ಪಕ್ಷಿ ಮಗನ ಕೈಯ್ಯರಗಿಣಿ ಗಗನ ಕೋಲಂಬಿನಲಿ ಸ್ವಪ್ನದ ನಿಲವನು ತೆಗೆದೆಚ್ಚನಾರೋ; ಅಂಗೈಯೊಳಗೆ ಅರಳ್ದ ತಲೆಯ ಹಿಡಿದುಕೊಂಡು ಕಂಗಳ ಮುತ್ತು ಪವಣಿಸುವಾಕೆ ನೀನಾರು ಹೇಳಾ; ಅಂಬರದೊಳಗಾಡುವ ತುಂಬಿಯ ಬಿಂಬದ ಕಂಬನಿಯೊಳಗಣ ರತ್ನದ ಬಯಕೆಯ ಆದ್ಯಂತವೇನಯ್ಯ' (ಅಲ್ಲಮ ಪ್ರಭು)

ವಚನಕಾರರಲ್ಲಿ ಅಲ್ಲಮಪ್ರಭು ಅತ್ಯಂತ ಶ್ರೇಷ್ಠನಾದವನು. ಇವನ ಮಾತು ಮಿಂಚು ; ವಿಶಾಲವಾದ ಭಾವನೆ, ಕಪಟರಾಹಿತ್ಯ; ದೋಷವನ್ನು ಕಂಡೆಡೆ ಕಟುಟೀಕೆ. ಅಲ್ಲಮ ಪ್ರಭುವಿನ ಮಾತೇ ಮುತ್ತುಗಳು. 'ಕರ್ಕಶವಾದ ತರ್ಕ, ಸಹಜವಕ್ರವಾದ ಬೆಡಗು, ಹುಟ್ಟುಗನ್ನಡದ ವಿಡಾಯ್ತು, ಧೀರ ವಿಚಾರ, ಅಧ್ಯಾತ್ಮ ಸಾಹಸದ ಹಾಸ್ಯ, ಮಾತಿನ ಸುಳಿವುಗಳಲ್ಲಿ ಜ್ಯೋತಿಯ ಹೊಳಹನ್ನು ಹುಟ್ಟಿಸುವ ಶಿಲ್ಪ, ಸರಸ ಸಜ್ಜನಿಕೆ' ಇವುಗಳಿಂದ ವಚನ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ದೊಡ್ಡ ಸ್ಫೂರ್ತಿ ಕೊಟ್ಟಿತು. 'ಕಾಮನ ಸುಟ್ಟು ಹೋಮವನುರುಹಿ ತ್ರಿಪುರಸಂಹಾರದ ಕೀಲನರಿಯ ಬಲ್ಲರೆ ಯೋಗಿಯಾದಡೇನು ಭೋಗಿಯಾದಡೇನು ? ಶೈವನಾದಡೇನು ಸಂಸಾರಿಯಾದಡೇನು ? ಅಶನವ ತೊರೆದಾತ ವ್ಯಸನವ ಮರೆದಾತ ; ನಾನು ಘನ ತಾನು ಘನವೆಂಬ ಹಿರಿಯರುಂಟೆ ? ಜಗದೊಳಗೆ ಹಿರಿಯರ ಹಿರಿತನದಿಂದೇನಾಯ್ತು ? ಹಿರಿದು ಕಿರಿದೆಂಬ ಶಬ್ದ ವಡಗಿದರ ಆತನೇ ಶರಣ. ನಿಜವನರಿದ ನಿಶ್ಚಿಂತನೇ, ಮರಣವ ಗೆಲಿದ ಮಹಂತನೇ ಘನಕಂಡ ಮಹಿಮನೆ ಪರವನೊಳಕೊಂಡ ಪರಿಣಾಮಿಯೇ ಬಯಲ ಒದಗಿದ ಭರಿತನೇ; ಆಚಾರವನರಿಯದೆ ವಿಭವವಳಿಯದೆ ಕೋಪವಡಗದೆ ತಾಪ ಮುರಿಯದೆ ಬರಿದೆ ಭಕ್ತರಾದೆವೆಂದು ಬೆಬ್ಬನೆ ಬೆರವವರ ಕೇಡಿಂಗೆ ಮರುಗುವೆ ಕಾಣಾ ; ಕಲ್ಲು ದೇವರೆಂದು ಪೂಜಿಸುವರು ಆಗದು ಕಾಣಿರೋ ಅಗಡಿಗರಾದಿರೆಲ್ಲಾ ಮುಂದೆ ಹುಟ್ಟುವ ಕೂಸಿಂಗೆ ಇರಿದು ಮೊಲೆಯ ಕೊಡುವಂತೆ ; ವೇದವೆಂಬುದು ಓದಿನ ಮಾತು, ಶಾಸ್ತ್ರವೆಂಬುದು ಸಂತೆಯ ಸುದ್ದಿ ಪುರಾಣವೆಂಬುದು ಪುಂಡರ ಗೋಷ್ಠಿ, ತರ್ಕವೆಂಬುದು ತಗರ ಹೋರಟೆ, ಭಕ್ತಿಯೆಂಬುದು ತೋರಿ ಉಂಬ ಲಾಭ, ಗುಹೇಶ್ವರನೆಂಬುದು ಮೀರಿದ ಘನವು.' (ಅಲ್ಲಮಪ್ರಭು)

ಬಸವೇಶ್ವರನು ವಚನಗಳಲ್ಲಿ ಅಗಾಧವಾದ ಸಿದ್ಧಿಯನ್ನು ಪಡೆದನು. 'ನಾಳೆ ಬಪ್ಪುದು ನಮಗಿಂದೇ ಬರಲಿ. ಇಂದು ಬಪ್ಪುದು ನಮಗೀಗಲೇ ಬರಲಿ. ಇದಕಾರಂಜುವರು ; ಮರಣವೇ ಮಹಾನವಮಿ, ಲೋಕದ ಡೊಂಕ ನೀವೇಕೆ ತಿದ್ದುವಿರಿ, ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ, ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ, ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯ, ದಯವಿಲ್ಲದ ಧರ್ಮವಾವುದಯ್ಯ, ದೇವಲೋಕ ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ, ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯ, ದಯವಿಲ್ಲದ ಧರ್ಮವಾವುದಯ್ಯ, ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿಭೋ. ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ, ಆಚಾರವೇ ಸ್ವರ್ಗ, ಅನಾಚಾರವೇ ನರಕ.' ಈ ವಚನಗಳು ತೀವ್ರವಾದ ಭಾವನೆಗಳಿಂದ ಹುಟ್ಟಿದುವಾದುದರಿಂದ ಸಹಜಸ್ಫೂರ್ತಿಯುಳ್ಳವಾಗಿ ಸ್ಪಷ್ಟವಾದ ಶಬ್ದಚಿತ್ರಣ ಶಕ್ತಿಯುಳ್ಳವುಗಳಾಗಿವೆ. ಬಸವೇಶ್ವರನನ್ನು ಬಿಟ್ಟರೆ ವಚನ ಸಾಹಿತ್ಯದಲ್ಲಿ ಅಕ್ಕಮಹಾದೇವಿಯ ಸ್ಥಾನ ಹಿರಿದು. ಸಂಪ್ರದಾಯವನ್ನು ಮೀರಿ ಆ ಹೆಣ್ಣುಮಗಳು, ಭಕ್ತಿ ಅನುಭಾವಗಳ ಅಲೆಗಳ ಮೇಲೆ ಹಾರಾಡುತ್ತಾ ಚಮತ್ಕಾರ

ರಸಪೂರ್ಣವಾದ ಕವಿತೆ ರಚಿಸಿದಳು. ಅವಳ ವಚನಗಳಲ್ಲಿ ಅವಳ ಉಗ್ರಸಾಧನೆ, ಇಂದ್ರಿಯನಿಗ್ರಹ, ಅವಳು ಪಡೆದ ಸಿದ್ಧಿ ಇವು ವ್ಯಕ್ತವಾಗಿವೆ. 'ಅಳಿಸಂಕುಲವೇ, ಮಾಮರವೇ, ಬೆಳುದಿಂಗಳೇ, ಕೋಗಿಲೆಯೇ ನಿಮ್ಮ ನಿಮ್ಮನೆಲ್ಲರನು ಒಂದು ಬೇಡುವೆನು. ಎನ್ನೊಡೆಯ ಚೆನ್ನಮಲ್ಲಿಕಾರ್ಜುನ ದೇವರ ಕಂಡರೆ ಕರೆದು ತೋರಿರೇ, ಸಾವಿಲ್ಲದ ಕೇಡಿಲ್ಲದ ಚೆಲುವಂಗಾನೊಲಿದೆನವ್ವ, ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು. ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದಡೆಂತಯ್ಯಾ; ಲೋಕದೊಳಗೆ ಹುಟ್ಟಿರ್ದ ಬಳಿಕ ಸ್ತುತಿನಿಂದೆಗಳು ಬಂದಡೆ ಮನದಲ್ಲಿ ಕೋಪವತಾಳದೆ ಸಮಾಧಾನಿಯಾಗಿರಬೇಕು. ಉಟ್ಟಸೀರೆಯ ಸೆಳೆದುಕೊಟ್ಟ ತೊಡಿಗೆಯ ಹರಿದು ಬಿಟ್ಟೆನೋ ನಾನು ಬಿಡುಮುಡಿಯ ಎಲೆ ದೇವ. ಹಸಿವಾದಡೆ ಭಿಕ್ಷಾನ್ನಗಳುಂಟು, ತೃಷೆಯಾದೊಡೆ ಕೆರೆಹಳ್ಳ ಭಾವಿಗಳುಂಟು, ಶಯನಕ್ಕೆ ಹಾಳು ದೇಗುಲಗಳುಂಟು, ಚೆನ್ನಮಲ್ಲಿಕಾರ್ಜುನಯ್ಯ ಆತ್ಮಸಂಗಾತಕ್ಕೆ ನೀನುಂಟು. ಆರೂ ಇಲ್ಲದವಳೆಂದು ತಿಳಿಗೊಳಬೇಡ ಕಂಡೆಯಾ. ಏನು ಮಾಡಿದಡೆಯೂ ನಾನು ಅಂಜುವಳಲ್ಲ. ತರಗೆಲೆಯ ಮೆಲ್ಲಿದ್ದು ನಾನಿಹೆನು, ಸುರಗಿಯ ಮೇಲೊರಗಿ ನಾನಿಹೆನು; ಕಿಡಿಕಿಡಿ ಕೆದರಿದಡೆ ಎನಗೆ ಹಸಿವು ತೃಷೆ ಅಡಗಿತೆಂಬೆನು; ಮುಗಿಲು ಹರಿದು ಬಿದ್ದಡೆ ಎನಗೆ ಮಜ್ಜನಕ್ಕೆರೆದರೆಂಬೆನು. ಗಿರಿ ಮೇಲೆ ಬಿದ್ದಡೆ ಎನಗೆ ಪುಷ್ಪವೆಂಬೆನು. ಚೆನ್ನಮಲ್ಲಿಕಾರ್ಜುನ ಶಿರಹರಿದು ಬಿದ್ದಡೆ ಪ್ರಾಣ ನಿನಗರ್ಪಿತವೆಂಬೆನು' (ಮಹದೇವಿಯಕ್ಕನ ವಚನಗಳು ೪೯, ೧೦೬, ೧೦೭) ವಚನಗಳಲ್ಲಿಯ ಸಾಹಿತ್ಯಗುಣ ವ್ಯಕ್ತಿತ್ವದ ಘನತೆಯಿಂದಲೂ ಭಾವಾನಾಪ್ರಾಧಾನ್ಯದಿಂದಲೂ ಉಂಟಾದುದು. ಇವುಗಳನ್ನು ಹಾಡಬಹುದಾದರೂ, ಇವು ಹಾಡುಗಳಾಗಿ ಮೊದಲು ಹುಟ್ಟಿರಲಾರವು. ಈಚೆಗೆ ಕೆಲವರು ವಚನಗಳನ್ನೇ ಹಾಡುಗಳಾಗಿ ಮಾರ್ಪಡಿಸಿಕೊಂಡು ಹಾಡಿರಬೇಕು. ವಚನಗಳನ್ನು ಗದ್ಯಕವನಗಳೆನ್ನಬಹುದು.

ವಚನಗಳಿಂದ ಕನ್ನಡಸಾಹಿತ್ಯದಲ್ಲಿ ಗದ್ಯ ಹೆಚ್ಚು ಪರಿಣಾಮಕಾರಿಯಾಗಿ ಪ್ರಯೋಗವಾದ ಅನುಭವವುಂಟಾಯಿತು. ಆತ್ಮಾನುಭವ, ಹೃದಯ ಮತ್ತು ದೃಷ್ಟಿ ವೈಶಾಲ್ಯ, ಸೃಷ್ಟಿಯ ರಹಸ್ಯದರ್ಶನ, ಭೇದನ, ಇವುಗಳ ನಿರೂಪಣೆಗೆ ಗದ್ಯ ಹದವಾಗಿ ಒದಗುವುದೆಂಬುದನ್ನು ಕವಿಗಳು ಅರಿತರು. ಜನಜೀವನದಲ್ಲಿ ಆಡುವ ಮಾತುಗಳನ್ನು ಗದ್ಯದಲ್ಲಿ ಬಳಸುವುದರಿಂದ, ಗದ್ಯ ಪ್ರಭಾವಯುಕ್ತವಾಗುವುದೆಂಬುದನ್ನೂ ಅವರು ಅರಿತರು.

೫

ಹರಿಹರ ರಗಳೆಗಳಲ್ಲಿ ಹೇಗೆ ಔನ್ನತ್ಯವನ್ನು ಪಡೆದನೋ ಹಾಗೆಯೇ ಕನ್ನಡ ಗದ್ಯಕ್ಕೂ ಹೊಸಪ್ರಾಣವನ್ನು ಕೊಟ್ಟನು. ಅವನ ಬಸವರಾಜದೇವರ, ನಂಬಿಯಣ್ಣನ, ಮಹಾದೇವಿಯಕ್ಕನ ರಗಳೆಗಳಲ್ಲಿ ಕನ್ನಡ ಗದ್ಯ ಒಂದು ಆದರ್ಶಮಟ್ಟವನ್ನು ಮುಟ್ಟಿತು. ಗದ್ಯವನ್ನು ಉಪಯೋಗಿಸುವುದರಲ್ಲಿ ಹರಿಹರ ಹಿಂದಲ ಚಂಪೂಕಾರರಿಗಿಂತ ಸ್ವಲ್ಪ

ಭಿನ್ನನಾದನು. ಚಂಪೂಕಾರರು ಪದ್ಯಗಳ ಮಧ್ಯದಲ್ಲಿ ಒಂದೊಂದು ಗದ್ಯವನ್ನು ಹಾಕುತ್ತಿದ್ದರು. ಆದರೆ ಹರಿಹರ ಒಂದು ಸ್ಥಳವನ್ನು ಗದ್ಯದಲ್ಲಿಯೂ ಮತ್ತೊಂದು ಸ್ಥಳವನ್ನು ರಗಳೆಯಲ್ಲಿಯೂ ರಚಿಸಿ, ಕಥಾಕಾವ್ಯನಿರೂಪಣಕ್ಕೆ ಪದ್ಯದಷ್ಟೇ ಗದ್ಯವೂ ಉಚಿತವಾದುದೆಂಬುದನ್ನು ತೋರಿಸಿದನು. ಹರಿಹರನಲ್ಲಿ ಮತ್ತೊಂದು ವಿಶೇಷವೇನೆಂದರೆ, ಅವನ ಗದ್ಯ ಅಂದಿನ ಜನದ ಬಳಕೆಯ ಗದ್ಯ. ಆದುದರಿಂದ ಹರಿಹರ ರಗಳೆಗಳನ್ನು ಹಳೆಗನ್ನಡದ ಶೈಲಿಯಲ್ಲಿ ಬರೆದಿದ್ದರೂ, ಜನರಲ್ಲಿ ಬಳಕೆಯಲ್ಲಿದ್ದ ಭಾಷೆಯನ್ನೇ ಗದ್ಯದಲ್ಲಿ ಉಪಯೋಗಿಸಿದ್ದಾನೆ. ಹರಿಹರನ ಗದ್ಯ ಕನ್ನಡಸಾಹಿತ್ಯದ ಉತ್ಕೃಷ್ಟ ಗದ್ಯ. ಒಂದು ಉದಾಹರಣೆ; ಬಸವಣ್ಣನವರ ಧಾರ್ಮಿಕಜೀವನವನ್ನು ಶಿವಶರಣರು ವರ್ಣಿಸಿರುವ ಕ್ರಮ. 'ಎಲೆ ಬಸವ, ನಿನ್ನ ನೇಮವಿದಾರ್ಗುಂಟು. ಗುರುಲಿಂಗದೊಳ್ ಎರಡಿಲ್ಲದಿಪ್ಪೆ. ಶರಣರಂ ಸಂಗನೆಂದೆ ಕಾಣ್ಬೆ. ಬಂದ ಭಕ್ತರನತ್ಯಾದರಿಪೆ. ಬಪ್ಪ ಭಕ್ತರಂ ಹರುಷದೊಳಿದಿರ್ಗೊಂಬೆ. ಬೇಡಿದುದ ಶರಣರ್ಗೆ ಇಲ್ಲೆನ್ನದೀವೆ. ಬೇಡಲೊಲ್ಲದವರ್ಗೆ ಮಿಗಿಲಾಗಿ ಆರಾಧಿಪೆ. ಜಾಗ್ರತ್ಸ್ವಪ್ನ ಸುಷುಪ್ತಿಯವಸ್ಥಾತ್ರಯಂಗಳೊಳು ಶರಣರಂ ಸಂಗನೆಂದಲ್ಲದೆ ಕಾಣೆ. ನಿಚ್ಚ ಶಿವರಾತ್ರಿಯನಚ್ಚರಿಯಿಂ ಮಾಳ್ಪೆ. ಜಂಗಮ ಪ್ರಾಣಿಯಾಗಿಪ್ಪೆ. ಶಿವಲಿಂಗಾರ್ಪಿತವಲ್ಲದುದನಾಘ್ರಾಣಿಸೆ, ನೋಡೆ, ನುಡಿಯೆ, ಮುಟ್ಟೆ, ಕೇಳೆ ಶಿವಸಮಯವನುದ್ಧರಿಸುವೆ. ಪರಸಮಯವಂ ಸಂಹರಿಸುವೆ. ಲಿಂಗದಲ್ಲಿ ಕಠಿಣಮಂ ಕೇಳೆ. ಜಂಗಮದಲ್ಲಿ ಜಾತಿಯನರಸೆ. ಪ್ರಸಾದದಲ್ಲಿ ಅಪವಿತ್ರತೆಯನರಿಯೆ .ಪಾಷಂಡಿಭೂಮಿಯೊಳು ಶಿವಭಕ್ತಿಯನಾರಂಭಿಸಿ ಸಾಮರ್ಥ್ಯಮಂ ಬಿತ್ತಿ ಪ್ರತ್ಯಕ್ಷಂಗಳಂ ಬೆಳೆದು ಗಣಪರ್ವಂಗಳಂ ಸುಫಲಂ ಮಾಡಲೆಂದು ಬಂದ ಕಾರಣಿಕ ಬಸವ, ನಿನ್ನ ದೆಸೆಯಿಂದೆಮ್ಮ ಭಕ್ತಿ ಬಣ್ಣವೇರಿತು '
(ಬಸವರಾಜ ದೇವರ ರಗಳೆ ೮–೩೮–೫೮)

ಹರಿಹರನ ಗದ್ಯದ ಮತ್ತೊಂದು ಉದಾಹರಣೆ, ನಂಬಿಯಣ್ಣನರಗಳೆ. ಈ ರಗಳೆಯಲ್ಲಿ ಪದ್ಯಕ್ಕಿಂತ ಗದ್ಯವೇ ಹೆಚ್ಚು ಪ್ರಭಾವಯುಕ್ತವಾಗಿದೆ. ಶಿವನು ವೃದ್ಧನಾಗಿ ಕೈಲಾಸದಿಂದ ಮದುವೆಯ ಮಂಟಪಕ್ಕೆ ಬಂದ ಸಂದರ್ಭ : ' ತಮ್ಮನಾರುಮರಿಯದೆ ಕಾಣದೆ ಲೆಕ್ಕಿಸದೆ ಸಂಭ್ರಮದೊಳಿರೆ, ಮೆಲ್ಲಮೆಲ್ಲನೆಲ್ಲವ ನೋಡುತುಂ ಮನದೊಳ್ ನಗುತುಂ,ಕೋಲನೂರುತೆ ಕೆಮ್ಮಿ ಕುಮ್ಮುತ್ತ,ಸಾಲ್ಗೊಂಡಿರ್ದ ತುಪ್ಪದ ಕೊಡಂಗಳೊಳ್ ನಾಲ್ಕೆರಡನೆಡಹಿ ನಮಃಶಿವಾಯ ಎಂಬ ವೃದ್ಧಧ್ವನಿ ಪುಟ್ಟೆ ಕೊಡಂಗಳ ಮೇಲೊಡೆ ಬಿಳ್ದು, ಕುಳ್ಳಿರ್ದರ ಮುಖದೊಳಂ ಕಣ್ಣೊಳಂ ಮಯ್ಯೊಳಂ ತುಪ್ಪಂ ಚೆಲ್ಲೆ ಎಲ್ಲರೆರ್ದು ಮಲ್ಲಳಿಗೊಂಡು ಘೊಳ್ಳೆಂದು ಬಿಳ್ದ ವೃದ್ಧಮಾಹೇಶ್ವರನಂ ಮುತ್ತಿಕೊಂಡೆತ್ತಲನುವಾಗಿ ಮೆಲ್ಲನೆ ನೆಗಪಿ ನಿಂದಿರಿಸಲ್ ಒಂದೆರಡಡಿಯಿಟ್ಟು ದಡದಡಿಸಿ ನೋಡುವ ಜನವೆಲ್ಲಂ ಎಲೆಲೆ ವೃದ್ಧನಾ ಬಿದ್ದನೆಂಬಲ್ಲಿಂ ಮುನ್ನಂ ನಿಲಲಾರದೆ ಹಳಿಲನೆ ಘಳಿಗೆವಟ್ಟಲ ಮೇಲೆ ಭ್ಗೀಳೆ ಕಳಸಿಗೆಯೊಡೆದು ಘಳಿಗೆವಟ್ಟಲು ಮುರಿದು ತಂಡುಲಂ ಚೆಲ್ಲಿ ಜೋಯಿಸರೆಲ್ಲಂ ಕೆದರಿ ಪೋಗೆ ಬಿದ್ದೇಳಲಾರದೆ ಹಮ್ಮೈಸಿದಂತಿರೆ ಪರಿತಂದು ಕಣ್ಣೊಳಂ ಬಾಯೊಳಂ

ನೀರಂ ತಳಿದೆಂತಕ್ಕೆಚ್ಚರಿಸೆ ಎತ್ತುವರ ಕೈಯ್ಯ ಬಾಯೊಳೆ ಜೀವಂ ಹಿಡಿಯಬಾರದು, ಮುಟ್ಟಬಾರದು, ನೋಡಬಾರದು, ನುಡಿಸಲರಿದು, ಪಿಡಿದು ಬಿಟ್ಟಡೆ ತುಪ್ಪದ ಕೊಡನ ಮೇಲಲ್ಲದೆ ಬೀಳಂ, ಈ ವೃದ್ಧಬ್ರಾಹ್ಮಣನನೀ ಮುಪ್ಪಿನ ಮಹಳನನೀ ಗೌತಮನ ಗೋವನೀ ಬ್ರಹ್ಮೇತಿಕಾರನನಾರ್ ಪೊಗಿಸಿದರಾರ್ ಪೊಗಿಸಿದರಾರ್, ಇದೇನವಶಕುನ ಇನ್ನೇನೀಮದುವೆ ಹಸನಾಗದೆನುತೆಲ್ಲರುಂ ಮೆಲ್ಲನೆ ಕಯ್ಯುಮಂ ಕಾಲುಮಂ ಪಿಡಿದೆತ್ತಿ ಕೊಂಡು ಹೋಗಿ ತಮ್ಮಾಯುಷ್ಯ ಭಾಷೆಗಳಂ ಪೊರಗಿಡುವಂತೆ ಚಪ್ಪರದ ಪೊರಗೆ ಮೆಲ್ಲ ನಿಳುಪಿ ಈ ವಿಪ್ರನಂ ಪೋಗಲೀಯದಿರೀ ವೃದ್ಧನಂ ಪೊಗಿಸದಿರೆಂದು ಬಾಗಿಲನನದು ಹುತ್ತಿ ಕದವನಿಕ್ಕಿ ಒಳಗಂ ಪೊಗುವೈಸಕ್ಕೆ ಅವರಿಂ ಮುನ್ನ ಮೆಯ್ತುಂದೊಳಗಂ ಪೊಕ್ಕು ತೋರಣದ ತಳಿರಂ ಪರಿದು ಶಿವದಿಡುತ್ತಿರಲ್ ಅವರ್ ಕಂಡು ಬೆರಗಾಗಿ ಈಗಳಿಂತು ಪೊರಗಿರಿಸಲಾಗಳಂತೆ ಬಂದು ಮುಂದಿರ್ದವನೀ ವೃದ್ಧಂ ಕಿರುಕುಳನಲ್ಲ ಕಾರಣಿಕನಾಗಲೆ ವೇಳ್ಕುಮೆಂದು ನೋಡುತ್ತಿರೆ ಯಷ್ಟಿಯ ಕೋಲಿಂ ಬಿಂಗಾರಿಗಳನಿರಿದೊಡೆವುತ್ತಂ ಜಗಲಿಯಂ ದರಿಗೆಡಹುತಂ ಮಂಗಳವೆಲ್ಲವನಮಂಗಳವಂ ಮಾಡುತ್ತಿರಲ್ ಅಲ್ಲಿಯ ಪಿರಿಯರುಂ ಮಾನ್ಯರುಂ ಕಂಡೆಲೆ ಅಪ್ಪರೆ ಇತ್ತ ಬಿಜಯಂಗೆಯ್ವುದೆನೆ ಕೇಳದಂತೆ ಮತ್ತೆ ಮತ್ತೆ ಶಿವದಿಡುತ್ತೆ ಎನ್ನ ತೊತ್ತಿನ ಮಗನಂ ಕುಮಾರನೆಂದು ಸತ್ಕುಲಜನೆಂದು ಬಗೆದು ಹೆಣ್ಣಂ ಕೊಟ್ಟು ನಿಮ್ಮ ಕುಲಮಂ ಕೆಡಿಸಿಕೊಳ್ಳದಿರಿ ನಾನಪ್ಪಡೆ ಮದುವೆಯಾಗ ಲೀಯೆಂ ನೀವಿದರಾದ್ಯಂತವನೇನೆಂದರಿಯಿರಿ, ಅವಂ ನರಸಿಂಗ ಮೊನೆಯರ್ ಪೆತ್ತಮ ಗನಲ್ಲಂ ಕೊಂಡುಸಾಕಿದ ದತ್ತಪುತ್ರನವಂ ಶಿವಬ್ರಾಹ್ಮಣಂ ಸೌಂದರ ಪೆರುಮಾಳೆಯಲ್ಲಂ ನಂಬಿಯೆಂದು ಎನ್ನ ತೊತ್ತಿನ ಮಗಂ ಅದಕ್ಕೆ ಪ್ರಮಾಣಪತ್ರಮುಂಟೆಂದಾಸುರಂ ಮಸಗಲಾ ತಾಯ್ತುಂದೆಗಳ್ ಕಂಡು ಕೌತುಕಂಬಟ್ಟು ಎಮಗೀ ಮದುವೆಯಂತಿರ್ಕೆ ಮುನ್ನವೀ ಬ್ರಾಹ್ಮಣನ ಬ್ರಹ್ಮಹತ್ಯಾದೋಷಂ ತಪ್ಪಿತಿದೆ ಸಾಲ್ಗುಂ,ಎಲೆ ಅಯ್ಯಾ ಚಿತ್ತೈ ಸೆಮ್ಮಮಾತಂ ಸೀಂತಡೊಳಗಾಗಿ ಮಹಾಪ್ರತಿಷ್ಠೆಗಳಂ ಮಾಣ್ದು ಕಳೆವರಲ್ಲದೆ ಪ್ರತ್ಯಕ್ಷ ಶಿವನಂತಿರ್ದ ನೀವೇ ಬಂದು ತುಪ್ಪದ ಕೊಡನನೊಡೆದು ಕೆಡಹಿ ತೋರಣದ ತಳಿರಂ ಪರಿದು ತೀದು ಘಳಿಗೆವಟ್ಟಲನೊಡೆದು ಕೆಡಹಿ ಮೊರೆಯಿಟ್ಟು ಶಿವದಿಟ್ಟು ವೇದಿಕೆಯಂ ಅಡಹಿ ಕುಲಂ ಪೊಲ್ಲವೆಂದ ಬಳಿಕಿನ್ನಾವ ಮೊಗಂ ಮುಂದಿಟ್ಟು ಮದುವೆಯ ಮಾತ ನಾಡಿದಪೆವು ಅದಂತಿರ್ಕೆ ನೀವಿಲ್ಲಿಂದ ಹದುಳ ಹೋದಡೆ ಸಾವಿರ ಮದುವೆಯ ಮಾಡಿದ ಸಂತಸಂ ಅದಲ್ಲದೆ ನೀವರಸುವ ನಂಬಿಯಣ್ಣಂ ಬಸದೊಳೈದನೆ ಅವನೊಡನಾಡಿ ಕೊಂಬುದು ಎಮ್ಮಂ ಕಾಡಲಾಗದು ನಿಮ್ಮಡಿಗಳಂ ಬಿಜಯಂ ಗೆಯ್ವುದು ಸ್ವಾಮಿ ಎನಲ್ (ನಂಬಿಯಣ್ಣನ ರಗಳೆ ತೀ. ನಂ. ಶ್ರೀ. ಸಂ.)

ಒಂದು ದೃಷ್ಟಿಯಲ್ಲಿ ಕನ್ನಡ ಗದ್ಯಕ್ಕೆ ಹರಿಹರನೇ ಉನ್ನತ ಶಿಖರವೆನ್ನಬಹುದು. ಅಲ್ಲಿಂದ ಮುಂದೆ ಮೈಸೂರು ಚಿಕ್ಕದೇವರಾಯರ ಕಾಲದವರೆಗೆ ತಲೆ ಎತ್ತಿ ಮೆರೆವ ಗದ್ಯಗ್ರಂಥ ಯಾವುದೂ ಇಲ್ಲ. ಚಿಕ್ಕದೇವರಾಜ(ಯ) ಬಿನ್ನಪ ವೇದಾಂತವನ್ನು ಸಾಹಿತ್ಯವಾಗಿಸಿದ ಕೃತಿ. ಇದರ ಶೈಲಿ ಸೊಗಸಾಗಿದೆ. ವಚನಗಳು ಬಿಡಿಬಿಡಿ ಮುತ್ತಿ

ನಂತಿವೆ. ನೂತನ ಕಲ್ಪನೆಗಳೂ ಉಚಿತ ವಾಗ್ವೈಖರಣೆಯೂ ಹೆಜ್ಜೆಹೆಜ್ಜೆಗೆ ಒಡೆದು ತೋರುತ್ತವೆ. ಆದರೆ ಕನ್ನಡ ಗದ್ಯಗ್ರಂಥಗಳಲ್ಲಿ ಚಿಕ್ಕದೇವರಾಯ ವಂಶಾವಳಿಗೆ (ಸು-೧೭೦೦) ಪ್ರಾಮುಖ್ಯವಾದ ಸ್ಥಾನವುಂಟು. ಅದರ ಗದ್ಯ ಶಕ್ತಿಯೇ ಅದರ ಕಾವ್ಯ ಶಕ್ತಿ. ಸಂಸ್ಕೃತ ಮತ್ತು ಹಳಗನ್ನಡ ಸಾರವನ್ನು ಹೀರಿ ಆತ್ಮಪ್ರತ್ಯಯದಿಂದ ನಡೆಯುವ ಧೀರ ಹುಟ್ಟುಕನ್ನಡ ಶೈಲಿ ತಿರುಮಲೆಯಾರ್ಯನದು. ಈ ಶೈಲಿಯಲ್ಲಿ ಸಮತೂಕ ಲಾಲಿತ್ಯ ಎರಡೂ ಇವೆ. ಶೈಲಿ ತಿಳಿಯಾಗಿ ನಿರರ್ಗಳವಾಗಿ ಹರಿಯುತ್ತದೆ. 'ಮುಸುಂಕಿದ ಮುಗಿಲನೊಡೆದು ಮೈದೋರುವ ಗಿರಿಯಂತೆಯುಂ, ಮಂಜಂ ಕಳೆದು ತೊಳಗುವ ನೇಸರಂತೆಯುಂ' [ಪುಟ ೭೦] 'ಒಡಲೊಳೆಡರಂ ಪಾಸಿನೊಳ್ ತೇಳಂ ಮಗ್ಗುಲೊಳ್ ಪಾವಂ ಮನೆಯೊಳೆ ಮಾರಿಯಮೂರೊಳ್ ಪುಲಿಯಂ ಪುಗಿಸಿ ಬಾಳ್ವಂತೆ' [ಪುಟ ೨೬] ಈ ಗ್ರಂಥವನ್ನು ಕುರಿತು ಸಿಂಗರಾರ್ಯರ ಪ್ರಶಂಸೆ: 'ಎನಿತಂದವಾಗಿ ಮೆಲ್ಪುವಡೆದ ಸಬುದಂಗಳ ಸೇರುವೆಯಿಂ ಸರಳಮುಂ ಕರಮೆಸೆವ ಪುರುಳ ಪವಣಿಗೆಯಿಂ ಸರಸಮುಮೆನಿಸಿ ತನಿಸೊದೆಯ ಸೋನೆಯಂತೆ ಇನಿದಂ ಕಿವಿಗಳ್ಗೆ ಕರೆಗುಮೀ ತಿರುಮಲಾರ್ಯರ ಬಾಯ್ದೆರೆಯ ಸರಸತಿಯ ನೈಪುವಡೆದ ಸಾಹಿತ್ಯ ಸೌಂದರ್ಯ' ಎಂಬ ನುಡಿ ಅತಿಶಯೋಕ್ತಿಯಲ್ಲ.

ಚಿಕ್ಕದೇವರಾಯ ವಂಶಾವಳಿಯೊಂದಿಗೆ ಹಳಗನ್ನಡ ರೀತಿಯ ಗದ್ಯಕಾವ್ಯ ಕೊನೆಯಾಯಿತೆಂದು ಹೇಳಬಹುದು. ಮುಂದೆ ನಾವು ಗಮನಿಸಬೇಕಾದ ಗದ್ಯಗ್ರಂಥ ಮುದ್ರಾಮಂಜೂಷ. ಇದು ನಿಸ್ಸಂದೇಹವಾಗಿ ಹೊಸಗನ್ನಡ ಗದ್ಯ. ಆದರೆ ಇದರ ಶೈಲಿಯಲ್ಲಿ ಒಮ್ಮುಖತೆ ಇಲ್ಲ. ಸಂಸ್ಕೃತದ ಬೆರಕೆ ಕೆಲವೆಡೆ ಕರ್ಕಶವಾಗಿ ಕನ್ನಡದೊಂದಿಗೆ ಸೇರಿಕೊಂಡಿದೆ. ಹಳಗನ್ನಡ ಹೊಸಗನ್ನಡ ಎಲ್ಲ ಶೈಲಿಗಳೂ ಇದರಲ್ಲಿವೆ. ಕೆಲವೆಡೆ ಕರ್ಮಣಿ ಪ್ರಯೋಗ ವಿಕಾರವಾಗಿ ಬಂದಿದೆ. ಆದುದರಿಂದ ಕತೆ ಎಷ್ಟೇ ರಸವತ್ತಾಗಿದ್ದರೂ, ಕೆಂಪು ನಾರಾಯಣನ ಶೈಲಿಯಲ್ಲಿ ಸಹಜ ಓಟ, ಓಘ ತೇಜಸ್ಸುಗಳಿದ್ದರೂ, ಇದರ ಕನ್ನಡವನ್ನು ಅಚ್ಚ ಹೊಸಗನ್ನಡ ಶೈಲಿಯ ಆದರ್ಶ ಉದಾಹರಣೆಯಾಗಿ ತೆಗೆದುಕೊಳ್ಳುವುದು ಸಾಧ್ಯವಿಲ್ಲ. ಈ ಶೈಲಿ ಹಳಗನ್ನಡಹೊಸಗನ್ನಡಗಳ ಸಮ್ಮಿಶ್ರಣದ ಫಲ.

೬

ಕೆಂಪುನಾರಾಯಣನ ಕಾಲಕ್ಕೆ ಕನ್ನಡ ಗದ್ಯ ಪೂರ್ಣವಾಗಿ ಹೊಸಗನ್ನಡವಾಯಿತು. ಆದರೂ ಹಳಗನ್ನಡದ ಆಕರ್ಷಣೆ, ಅದರ ಸತ್ವಯುಕ್ತವಾದ ಗರಡಿ ಸಾಧನೆ, ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿ ಮುದ್ದಣನನ್ನು ಬಿಡಲಿಲ್ಲ. ವ್ಯಾಯಾಮ ಶಿಕ್ಷಕನಾದ ಮುದ್ದಣ ಸ್ವಚ್ಛವಾದ ಹಳಗನ್ನಡ ಶೈಲಿಯನ್ನು ಪಳಗಿಸಿಕೊಳ್ಳುವುದರಲ್ಲಿ ಯಶಸ್ವಿಯಾಗಿದ್ದಾನೆಂದು ಹೇಳಬಹುದು. ಮುದ್ದಣನ ಮೊದಲನೆಯ ಗ್ರಂಥ ಅದ್ಭುತರಾಮಾಯಣ. ಈ ಗ್ರಂಥ ಓದುವುದಕ್ಕೆ ಸೊಗಸಾಗಿದೆ. ಆದರೆ ಮುದ್ದಣನ ನಿಜವಾದ ಹಳಗನ್ನಡ ಗದ್ಯವಿರುವುದು ರಾಮಾಶ್ವಮೇಧದಲ್ಲಿ. ಇದರ ಕತೆಗೆ ಪ್ರಾರಂಭದ ಮಳೆಗಾಲ ವರ್ಣನೆಯಿಂದಲೂ, ಮುದ್ದಣ ಮನೋರಮೆಯರ

ಆಕರ್ಷಕ ಸಂವಾದದಿಂದಲೂ ಕಳೆ ಬಂದಿರುವುದಂತೂ ಇರಲಿ, ಮುದ್ದಣ ತಾನೇ ಹೇಳಿಕೊಂಡಿರುವಂತೆ ' ಕರ್ಮಣಿ ಸರದೊಳ್ ಚೆಂಬವಳಂ ಕೋದಂತಿರೆ ರಸಮೊಸರೆ ಲಕ್ಕಣಂ ಮಿಕ್ಕಿರೆ ಎಡೆಎಡೆಯೊಳ್ ಸಕ್ಕದದ ನಲ್ನುಡಿ ಮೆರೆಯೆ ತಿರುಳ್ಗನ್ನಡದೊಳೆ ಕತೆಯನುಸಿರ್ವೆಂ ' ಎಂಬ ಆದರ್ಶವನ್ನು ಬಹುಮಟ್ಟಿಗೆ ಸಾಧಿಸಿದ್ದಾನೆ. ಕನ್ನಡ ನಾಡಿನ ವೃಕ್ಷಗಳ ವರ್ಣನೆ ಇವನ ಗ್ರಂಥದಲ್ಲಿ ಸುಂದರವಾಗಿ ಬಂದಿದೆ. ' ಆಲದ, ಬೇಲ ದಕ್ಕೆಯ, ಬಿಕ್ಕೆಯ ಕಕ್ಕೆಯ, ಹೊನ್ನೆಯ ಬನ್ನಿಯ, ಬೇವಿನ ಮಾವಿನ ಮತ್ತಿಯ ಮುಳ್ತುಗದ ನೆಲ್ಲಿಯ ಕಂಕೆಲ್ಲಿಯ ಸೀರಿಲ ನೆಳಲಂ ' ಮುದ್ದಣ್ಣನ ಶೈಲಿಯಲ್ಲಿ ಪದ ಪ್ರಯೋಗ ತುಂಬ ಉಚಿತವಾಗಿದೆ ' ಹಯಮಂ ತಾರೆಂಬ ರಾಘವನಂ ತೋರೆಂಬ ಕೆಲಸಾರೆಂಬ ನೀನಾರೆಂಬ ಪೋರೆಂಬ ಬಾರೆಂಬ ಸಡಗರದ ನುಡಿ. ' ಸೀತೆಯ ಅಲಂಕಾರ ವರ್ಣನೆ ಮುಂದಲದು ' ನಲ್ಗೆಳದಿಯರ್ ಮಲ್ಲಿಕಾಸ್ಮಿತೆಗೆ ಮಲ್ಲಿಗೆಯ ಚೊಲ್ಲೆಯಮಂ ಕುಂದಕುಟ್ಮಲರದನೆಗೆ ಕುಂದದ ಬಾಸಿಗಮಂ, ಮಂದಗಮನೆಗೆ ಮಂದಾರದ ಬೈತಲೆ ಬೊಟ್ಟ ಕಮಲಮುಖಿಗೆ ವಿಮಲಕಮಲದಂದುಗೆಯಂ, ಚಂಪಕ ಸುನಾಸೆಗೆ ಸಂಪಗೆಯೊಡ್ಯಾಣಮಂ ಶಿರೀಷ ಕೋಮಲಾಂಗಿಗೆ ಸಿರಸದ ಕಿರುಮುಗುಳಕ್ಕ ಸರಮಂ ಜಾತಿನಾಯಕಿಗೆ ಜಾತಿಯ ಪಿಂಡುಗಂಕಣಮಂ, ಸೀಮಂತಿನಿಗೆ ಸೇವಂತಿ ಗೆಯ ತೋಳಬಂದಿಯಂ ನಮೆದು ಸಿಂಗರಿಸಲೊಡಂ.' ಲವಕುಶರ ಬಾಲವರ್ಣನೆಯೂ ರಾಮಾಶ್ವಮೇಧದಲ್ಲಿ ಸೊಗಸಾಗಿ ಬಂದಿದೆ. ' ಚಲದಿಂ ಮರುಗುವ, ಮರುಗುತಬ್ಬೆಯ ನಿರ್ಕೆಲದೊಳಂ ಸೆರಗಂ ಸೆಳೆವ, ಸೆಳೆದೊಡೋಡುವ ...ಕರ್ಗೋಡಗನಂ ಗಡ್ಡದೊಳೇಳ್ದು ಮರಿಸಿಂಗನ ಬಾಲಕ್ಕೆ ಗಂಟಿಕ್ಕುವ, ಗಂಟಿಕ್ಕಿ ನಗುವ, ನಕ್ಕು ಮೊಕ್ಕಳಂ ನಲಿವ, ನಲಿದು, ಬಂದು ಮುನಿಯನಪ್ಪುವ, ಪಿಡಿದಪ್ಪಿ ತೊಡೆಯನೇರುವ, ತೊಡೆಯನುಳಿದು ಪೆಗಲನಡರ್ವ, ಪೆಗಲನಡರ್ದು ಕಿವಿಯನೂದುವ, ಕಿವಿಯನೂದಿ ತಲೆಯನಲುಗುವ, ತಲೆಯನಲುಗಿ ಮುಡಿ ಜಡೆಯಂ ಬಿಡುವ, ಬಿಟ್ಟ ಕೆಂಜೆಡೆಯ ತುದಿಗೆ ಬೆಲ್ಲದತ್ತಮಂ ಪೋಲ್ವ, ಪೋಲ್ವಬ್ಬೆಗೆ ತೋರುವ, ಅಬ್ಬೆಗೆ ತೋರಿ ಕೈಪರೆಗುಟ್ಟುವ, ಕೈಪರೆಗುಟ್ಟಿ ಬೆನ್ನೊಳ್ ಮೈಗರೆವ ಮೈಗರೆದು ಗುಂಡಿಗೆಯಂ ಕಳ್ವ, ಕಳ್ದು ಬೈತಿಡುವ, ಬೈತಿ ಟ್ಟೊರ್ವನಂ ಕಳ್ವನೆಂದೊರ್ವನಂ ಪೇಳ್ವ, ಪೇಳ್ದೊಡೆ ತಂದೀವ, ತಂದಿತ್ತಡೆರಗುವ, ಅಡಿಗೆರಗಿ ಪರಕೆಗೊಂಬ, ಪರಕೆಗೊಂಡು ತಾಯೆಡೆ ಬರ್ಪ ಬಂದು ತಮ್ಮ ಲೀಲೆಯಂ ಕೇಳಿಪ ' (ಅಶ್ವಾಸ ೧೬) ಹೀಗೆ ಮುದ್ದಣ್ಣನ ಶೈಲಿಯಲ್ಲಿ ಸಮತೂಕವೂ ಗಾನ ಮಾಧುರ್ಯವೂ ಬಿಗಿಯೂ ಇವೆ. 'ಕೆಲರಂ ಕಡಿದಂ, ಕೆಲರಂ ಬಡಿದಂ, ಕೆಲರನುಗಿದಂ, ಕೆಲರಂ ಬಿಗಿದಂ ಕೆಲರಂ ಕುರಿದರಿದರಿದಂ, ಕೆಲರಂ ಬಿಗಿದಂ ಕೆಲರನಿಟ್ಟಂ ಮೊನೆ ಯೊಳ್ ' (ಅಶ್ವಾಸ ೧೬) ಮುದಣ್ಣನ ಶೈಲಿ ಹೃದ್ಯವಾದ ಗದ್ಯವಾಗಿದೆ.*

---

*ಈ ಲೇಖನದಲ್ಲಿ ಶಕಟರೇಫ, ರಳವನ್ನು ಬಳಸಿಲ್ಲ. ಸಂ.

೭

ಹೀಗೆ ಕನ್ನಡಗದ್ಯ ೯ನೆಯ ಶತಮಾನದ ದುರ್ವಿನೀತಾದಿಗಳಲ್ಲಿ ಅದೃಶ್ಯಸರಸ್ವತಿಯಾಗಿ, ಪಂಪಾದಿಗಳ ಚಂಪೂಕಾವ್ಯಗಳಲ್ಲಿ ಪದ್ಯಗಳ ಸಾಟಿಯಾಗಿ, ವಡ್ಡಾರಾಧನೆ ಚಾವುಂಡರಾಯ ಪುರಾಣಗಳಲ್ಲಿ ಸ್ವತಂತ್ರ ರೂಪವಡೆದು, ಹರಿಹರನಲ್ಲಿ ಮಹಾಭಿಷಿಕ್ತವಾಯಿತೆಂದು ಹೇಳಬಹುದು. ಪದ್ಯದ ಜತೆಯಲ್ಲಿಯೇ ಗ್ರಂಥವನ್ನು ಕಂಡಿರಬಹುದಾದ ಗದ್ಯ, ಏರು ತಗ್ಗುಗಳಲ್ಲಿ ಹರಿದು ಹರಿಹರನಲ್ಲಿ ಮಹಾಪ್ರವಾಹವಾಗಿ ಕನ್ನಡ ಜನದ ಬಾಳು, ದೇಸಿ. ಜನಪದಗಳ ಆಡುಮಾತು ಇವುಗಳನ್ನೆಲ್ಲ ಕೊಂಡು, ಮಹತ್ ಸತ್ಯವೇದಾಂತಗಳನ್ನೂ ನಿತ್ಯವ್ಯವಹಾರಗಳನ್ನೂ ಸಾಧಿಸಲು ತಾನು ಶಕ್ತನೆಂಬುದನ್ನು ತೋರಿಸಿಕೊಟ್ಟಿದೆ. ಕನ್ನಡ ಗದ್ಯ ಇದುವರೆಗೆ ಸಾಧಿಸದ ಕೆಲಸ ಯಾವುದೂ ಇಲ್ಲ. ಕನ್ನಡ ಜನತೆಯ ಬಾಳನ್ನು ತಿದ್ದಲು ಈ ಗದ್ಯವೇ ನಮಗೆ ಗತಿ. ಹೊಸಗನ್ನಡ ಗದ್ಯಕ್ಕೆ ಇಂದು ಎಂದಿಗಿಂತ ಹೆಚ್ಚಾದ ಜವಾಬ್ದಾರಿಯಿದೆ. ಆಧುನಿಕ ಜಗತ್ತಿನ ಜಟಿಲ ಸಮಸ್ಯೆಗಳಿಗೆ ಕನ್ನಡಿಗರನ್ನು ಸಿದ್ಧಮಾಡುವ ಹೊಣೆ ಕನ್ನಡಗದ್ಯದ್ದು. ಈ ಕಾರ್ಯದಲ್ಲಿ ಕನ್ನಡಗದ್ಯ ಲೇಖಕರು ಹಿಂದೆ ಸಾಧಿಸಿರುವುದೇ ನಮಗೆ ಕೈ ದೀವಿಗೆ. ನಮಗೆ ಅಪಾರವಾದ ಶಬ್ದರಾಶಿ ಭಂಡಾರ ದೊರಕಿದೆ. ಆಧುನಿಕ ವಿಜ್ಞಾನ ಸಮಾಜಶಾಸ್ತ್ರ ಮನಃಶಾಸ್ತ್ರ ಅರ್ಥಶಾಸ್ತ್ರ ತತ್ವಶಾಸ್ತ್ರ ಎಲ್ಲವನ್ನೂ ಚರ್ಚಿಸಲು ಕನ್ನಡದಲ್ಲಿ ಶಬ್ದಸಂಪತ್ತಿಯಿದೆ. ಈವರೆಗೆ ಬೆಳೆದು ಬಂದಿರುವ ಗದ್ಯವನ್ನು ಅಭ್ಯಾಸಿಸಿದರೆ ಅಲ್ಲಿ ದೊರಕುವ ಶಬ್ದಸಂಪತ್ತು ಆಶ್ಚರ್ಯವನ್ನುಂಟುಮಾಡುವುದು. ಇದು ನಮ್ಮ ದೊಡ್ಡ ಆಸ್ತಿ.

ಹೊಸಗನ್ನಡ ಗದ್ಯನಿರ್ಮಾಣದಲ್ಲಿ ಪೂಜನೀಯ ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳ ಸೇವೆ ಹಿರಿದಾದುದು. ಕನ್ನಡ ಗದ್ಯದ ಶಕ್ತಿಯನ್ನೂ ಆ ಗದ್ಯ ಏನನ್ನು ಸಾಧಿಸಬಹುದೆಂಬುದನ್ನೂ ಈ ಮಾನನೀಯರು ತೋರಿಸಿಕೊಟ್ಟಿದ್ದಾರೆ. ಇವರ ಹೆಸರು ಕನ್ನಡನಾಡಿನಲ್ಲಿ ಮನೆಮಾತಾಗಿದೆ. ವಚನಭಾರತದಿಂದ ಜನತೆಗೆ ಭಾರತದಲ್ಲಿ ಒಂದು ಹೊಸ ಉತ್ಸಾಹ ಉಂಟಾಗಿದೆ. ಆಧುನಿಕ ಕನ್ನಡ ಗದ್ಯದ ಶಕ್ತಿ ಏನು, ಸ್ವಭಾವವೇನು, ಸಾಧನೆಯೇನು ಎಂಬುದಕ್ಕೆ ಇವರ ಶೈಲಿಯೇ ಸ್ಪಷ್ಟ ಉದಾಹರಣೆ.

‘ಸಂಸಾರದಲ್ಲಿ ಒಬ್ಬರು ಸೋತಾಗಲೀ ಇಬ್ಬರೂ ಸೋತಾಗಲೀ ಸ್ನೇಹ ಬೆಳೆಯಬೇಕು. ಅದರಿಂದಲೇ ಚಿಂತೆ ಕಷ್ಟಗಳ ನಿವಾರಣೆ; ಸುಖಸಂಪಾದನೆ. ಆದ್ದರಿಂದ ವ್ಯಕ್ತಿಯ ಶೀಲ, ಅದರಲ್ಲಿಯೂ ತ್ಯಾಗ ಕ್ಷಮೆ ಇವು ಮುಖ್ಯ. ಅದರಿಂದ ಸಂಸಾರ ಹಸನಾಗುತ್ತದೆ. ಇವುಗಳಿಗೆ ಮೂಲ ಪ್ರೀತಿ, ಪ್ರೇಮ, ವಾತ್ಸಲ್ಯ, ಭಕ್ತಿ, ಗೌರವ ಇತ್ಯಾದಿ. ಇವೆಲ್ಲ ಮೂಲತಃ ಒಂದೇ. ಸ್ಥಾನಭೇದದಿಂದ ಸ್ವಲ್ಪಸ್ವಲ್ಪ ಬಣ್ಣ ಬದಲಾಗಿ ಒಂದೇ ಸ್ನೇಹಭಾವನೆ ಬೇರೆಬೇರೆ ಹೆಸರನ್ನು ತಳೆಯುತ್ತದೆ. ಹೀಗೆ ವ್ಯಕ್ತಿಗಳು ಉತ್ತಮಗೊಂಡರೆ ಸಂಸಾರವು ಉತ್ತಮವಾಗುತ್ತದೆ. ಏಕೆಂದರೆ ಹತ್ತು ವ್ಯಕ್ತಿಗಳಿಂದ ಒಂದು ಸಂಸಾರ; ಹತ್ತು ಉತ್ತಮವಾದ ಸಂಸಾರಗಳಿಂದ ಒಂದು ಶ್ಲಾಘ್ಯವಾದ ಸಮಾಜ; ಸಮಾಜದಿಂದಲೇ ದೇಶ, ರಾಷ್ಟ್ರ ಎಲ್ಲಾ! ಆದ್ದರಿಂದ ಸಾಧಾರಣ

ನೀತಿ, ಸಾಂಸಾರಿಕ ನೀತಿ, ವೈಯಕ್ತಿಕ ಗುಣಶೀಲಗಳು, ಇವು ಅತ್ಯಂತ ಮುಖ್ಯ ವಾದವು. ವ್ಯಕ್ತಿಸಂಪತ್ತೇ ದೇಶ ಸಂಪತ್ತು—ಆ ಸಂಪತ್ತನ್ನು ವೃದ್ಧಿಪಡಿಸುವುದೇ ರಾಜನ ಪ್ರಥಮ ಧರ್ಮ.' (ವಚನಭಾರತ, ಪೀಠಿಕೆ)

'ದೇಹವನ್ನು ಕೊಬ್ಬಿಸಬಾರದು; ಹಾಗಾದರೆ ಗೊಬ್ಬರ ಹೆಚ್ಚಾದ ಪಯಿರಿ ನಂತಾಗುತ್ತದೆ. ಇಂಥ ಪಯಿರಿನಲ್ಲಿ ಹೊರವಾಗಿ ಎಲೆ ಬಿಡುತ್ತದೆ; ಹೂವೂ ಹಣ್ಣೂ ಸೊನ್ನೆ. ಹೀಗೆಂದು ದೇಹವನ್ನು ಒಣಗಿಸಬಾರದು. ಏಕೆಂದರೆ ಒಣಗಿದ ಪಯಿರಿ ನಲ್ಲಿ ಹಣ್ಣಿರಲಿ, ಎಲೆಯೂ ಹೋಗಿ ಬಿಡುತ್ತವೆ. ದೇಹವು ಲಘುವಾಗಿ ಆರೋಗ್ಯ ವಾಗಿರುವುದರ ಜತೆಗೆ ಬುದ್ಧಿಯು ಹರಿತವಾಗಿರಬೇಕು. ಚಟುವಟಿಕೆಯುಳ್ಳದ್ದಾಗಿರ ಬೇಕು. ಬುದ್ಧಿ ಮುದಡಾದರೆ ಅದರ ಹಿಂದಿರುವ ಆತ್ಮದ ದರ್ಶನವು ಮಂಕಾಗುತ್ತದೆ. ಆದುದರಿಂದ ಸಂತತವಾದ ದೇಹಶ್ರಮ ಬುದ್ಧಿಶ್ರಮಗಳು ಆವಶ್ಯಕ. ಅವೇ ತಪಸ್ಸು. ದೇಹಶೋಷಣೆ ಅಕರ್ಮ ಅಲಸತೆಗಳು ತಪಸ್ಸಲ್ಲ. ಆಹಾರ ದೋಷದಿಂದ ರಾಜಸ ತಾಮಸಗಳು ಹೆಚ್ಚಾದರೆ ದೇಹ ಭಾರವಾಗಿ ಬುದ್ಧಿ ಮಂಕಾಗುವುದೂ ನಮ್ಮೆಲ್ಲರ ಅನು ಭವಕ್ಕೆ ಬಂದಿರುವ ಸಂಗತಿ. ಆದ್ದರಿಂದ ಆಹಾರ ವಿಹಾರ ನಿದ್ರೆ ಎಚ್ಚರ ಕಾರ್ಯ ವಿಶ್ರಾಂತಿ ಇವು 'ಯುಕ್ತ'ವಾಗಿರಬೇಕು. ಅತಿಗೆ ಹೋಗಬಾರದು. ತಪಸ್ಸು ಯಾವಾ ಗಲೋ ಒಂದು ಗಳಿಗೆ ಕಣ್ಣುಮುಚ್ಚಿಕೊಂಡು ಕುಳಿತಿರುವುದಲ್ಲ ಮನೋವಾಕ್ಕಾಯ ಗಳಿಂದ ಸದಾ ಅನುಷ್ಠಾನ ಮಾಡತಕ್ಕದ್ದು. ಇದೇನು ಕಠಿಣವಾದದ್ದಲ್ಲ; ಘೋರ ವಾದದ್ದಲ್ಲ; ಸರ್ವಸಾಧ್ಯವಾದದ್ದು. ಸಾವಿತ್ರಿ ಮಾಡಿದ ತಪಸ್ಸು ಇದೇಯೆ.' (ವಚನ ಭಾರತ; ಪೀಠಿಕೆ)

'ಅಹಿಂಸೆಯೆಂಬುದು ಅಪರಂಜಿಯ ಹಾಗೆ; ಶುದ್ಧ ಅಪರಂಜಿ ನಾಣ್ಯವಾಗುವು ದಿಲ್ಲ; ವ್ಯವಹಾರಕ್ಕೆ ಸಲ್ಲುವುದಿಲ್ಲ. ಅದಕ್ಕೆ ಸ್ವಲ್ಪವಾದರೂ ಪೆಡಸಾದ ಕೆಚ್ಚನೆಯ ತಾಮ್ರ ಬೆರೆಯಬೇಕು. ಹಾಗೆಯೇ ರಾಜನಲ್ಲಿ ಸ್ವಲ್ಪ ಕಾಠಿಣ್ಯ ಬೇಕು ರಾಜ ದಂಡವೇ ಧರ್ಮಾರ್ಥಗಳನ್ನೂ ಧನಧಾನ್ಯಗಳನ್ನೂ ರಕ್ಷಿಸತಕ್ಕದ್ದು. ದಂಡದ ಹೆದರಿಕೆ ಯಿಂದಲೇ ಜನರು ತೆಪ್ಪಗಿರುತ್ತಾರೆ. ದುಷ್ಟನಿಗ್ರಹಕ್ಕೆ ಕ್ರೌರ್ಯವೂ ಬೇಕು, ಹಿಂಸೆಯೂ ಬೇಕು. ಆ ಹಿಂಸೆ ಹಿಂಸೆಯಲ್ಲ, ಧರ್ಮ. ರಾಮರಾಜ್ಯದಲ್ಲಿಯೂ ರಾಕ್ಷಸನ ಸಂಹಾರ ವಾಗಿಯೇ ಆಯಿತು. ಸ್ವಾರ್ಥಸಾಧನೆಗೆ ದೇಶದ ಯುವಕರನ್ನು ಬಲಿಕೊಡುವುದು ಹಿಂಸೆಯೇ ಹೊರತು ಶಿಷ್ಟ ಪರಿಪಾಲನೆಗೆ ಹಿಂಸಾಕೌರ್ಯಗಳನ್ನು ಆಚರಿಸುವುದು ಪಾಪ ವಲ್ಲ. ಆದ್ದರಿಂದ ಹಿಂಸಾಕಾರ್ಯಕ್ಕಿಂತಲೂ ಅದರ ಹಿಂದೆ ಇರುವ ಉದ್ದೇಶವೇ ಪ್ರಧಾನ. ಅದಕ್ಕೆ ಕಾರಣಗಳಾದ ಲೋಭಗರ್ವ ಕಾಮಕ್ರೋಧಾದಿಗಳು ವರ್ಜ್ಯ. ವೈದ್ಯನು ಶಸ್ತ್ರ ಚಿಕಿತ್ಸೆಮಾಡಿ ಜೀವ ಉಳಿಸಿದರೆ ಅದು ಹಿಂಸೆಯೆನ್ನಿಸುವುದಿಲ್ಲ; ಪಾಪವಾಗುವುದಿಲ್ಲ. ಆದರೆ ಅದೇ ಆಯುಧದಿಂದ ಘಾತುಕನು ಕೊಲೆಮಾಡಿದರೆ ಅದು ಪಾಪ. ಆದ್ದರಿಂದ ಹಿಂಸೆಯೆಂದು ತೋರುವ ಕಾರ್ಯದಲ್ಲಿ ಯಾರು, ಏಕೆ, ಹೇಗೆ ಎಂಬ ಪ್ರಶ್ನೆಗಳ ಉತ್ತರವೂ ಮುಖ್ಯ.' (ವಚನಭಾರತ ಪೀಠ)

'ಇವೆಲ್ಲಕ್ಕಿಂತಲೂ ಶೀಲ ಮುಖ್ಯ. ಶೀಲದಿಂದಲೇ ಧರ್ಮ ಸತ್ಯ ನಡತೆ ಬಲ ಸಂಪತ್ತು ಎಲ್ಲವೂ ಲಭಿಸುವುದು. ಹಿಂದೆ ಪ್ರಹ್ಲಾದನು ಇಂದ್ರನನ್ನು ಗೆದ್ದು ತನ್ನ ಶೀಲ ದಿಂದ ಮೂರು ಲೋಕಗಳನ್ನೂ ವಶಪಡಿಸಿಕೊಂಡು ಆಳುತ್ತಿದ್ದನಂತೆ. ಆಗ ಇಂದ್ರನು ಬ್ರಾಹ್ಮಣವೇಷದಿಂದ ಅವನಲ್ಲಿಗೆ ಹೋಗಿ ಶಿಷ್ಯವೃತ್ತಿಯಿಂದ ಅವನನ್ನು ಸಂತೋಷ ಪಡಿಸಿ ಅವನ ಶೀಲವನ್ನೇ ವರವಾಗಿ ಕೇಳಿ ಪಡೆದನಂತೆ. ಇಂದ್ರನು ಹೋದ ಕೂಡಲೇ ಅವನ ಹಿಂದೆ ಪ್ರಹ್ಲಾದನ ದೇಹದಿಂದ ಒಂದು ತೇಜಸ್ಸಿನ ಮೂರ್ತಿ ಹೊರ ಹೊರಟ ದ್ದನ್ನು ನೋಡಿ ಪ್ರಹ್ಲಾದನು 'ನೀನು ಯಾರು?' ಎಂದು ಕೇಳಿದನಂತೆ. ಅದಕ್ಕೆ ಅದು 'ನಾನು ಶೀಲ, ನಿನ್ನನ್ನು ಬಿಟ್ಟು ಹೋಗುತ್ತಿದ್ದೇನೆ' ಎಂದಿತಂತೆ. ಆಮೇಲೆ ಹೀಗೆಯೇ ತೇಜೋರೂಪಿನಿಂದ ಧರ್ಮವೂ ಸತ್ಯವೂ ನಡತೆಯೂ ಬಲವೂ ಸಂಪತ್ತೂ ಒಂದೊಂದಾಗಿ ಹೊರಟು ಹೋದುವಂತೆ. ಆದ್ದರಿಂದ ಶೀಲವೇ ಸಕಲ ಶ್ರೇಯಸ್ಸಿಗೂ ಮೂಲ. ಮನಸ್ಸಿನಿಂದಾಗಲೀ ಮಾತಿನಿಂದಾಗಲೀ ದೇಹದಿಂದಾಗಲೀ ಯಾರಿಗೂ ಕೆಡಕು ಮಾಡಬಾರದು. ಆದಷ್ಟು ಉಪಕಾರವನ್ನೂ ದಾನವನ್ನೂ ಮಾಡಬೇಕು. ಅನ್ಯರಿಗೆ ಹಿತವಲ್ಲದ ಅಥವಾ ನಾಚಬೇಕಾದ ಕೆಲಸಮಾಡಬಾರದು. ಹತ್ತು ಜನ ಮೆಚ್ಚುವುದನ್ನು ಮಾಡಬೇಕು. ಇವೇ ಸಂಗ್ರಹವಾಗಿ ಶೀಲದ ಸ್ವರೂಪ. ಶೀಲವಂತರಲ್ಲ ದವರು ಎಲ್ಲಾದರೂ ಸಿರಿವಂತರಾಗಿದ್ದರೆ ಅದನ್ನು ಅವರು ಹೆಚ್ಚು ದಿನ ಅನುಭವಿಸು ವುದಿಲ್ಲ. ಬೇಗ ಬುಡಮುಟ್ಟನಾಶವಾಗುತ್ತಾರೆ' (ವಚನಭಾರತ ಪುಟ, ೩೩೭)

'ಆಧುನಿಕ ಸಾಹಿತ್ಯದಲ್ಲಿ ಶಾಸ್ತ್ರಗ್ರಂಥಗಳು ಬಹಳ ಕಡಿಮೆ ಎಂಬುದು ಒಂದು ಲೋಪವಾಗಿ ಎಣಿಸಲ್ಪಟ್ಟಿದೆ. ಇದು ಲೋಪ ನಿಜ. ಆದರೆ ಬರೆಯುವವರಿಲ್ಲವೆಂದಲ್ಲ. ಈಗ ಬೇಕಾದಷ್ಟು ಜನರಿದ್ದಾರೆ. ಆದರೆ ಬರೆದು ಏನುಮಾಡಬೇಕು. ಆ ಪುಸ್ತಕ ಗಳನ್ನು ಹೇಗೆ ಉಪಯೋಗಿಸುವುದು? ಇದು ಸಮಸ್ಯೆ. ಮೈಸೂರು ದೇಶದ ಹೈಸ್ಕೂಲು ತರಗತಿಗಳಲ್ಲಿ ಕನ್ನಡದ ಮೂಲಕ ಬೋಧನೆಯಾಗಬೇಕೆಂದು ನಿರ್ಧರಿಸಿದಾಗ ಆರು ತಿಂಗಳೊಳಗೆ ಎಲ್ಲ ಶಾಸ್ತ್ರಗಳ ವಿಚಾರವಾಗಿಯೂ ಪಠ್ಯಗ್ರಂಥಗಳು ಆದವು. ಅಚ್ಚಾ ದವು, ವಿದ್ಯಾರ್ಥಿಗಳ ಕೈಗೆ ಬಂದವು. ನಾಳೆ ಕಾಲೇಜಿಗೂ ಕನ್ನಡವೇ ಬೋಧಕ ಭಾಷೆಯಾಗಬೇಕೆಂದು ನಿರ್ಧಾರವಾಗಲಿ, ಆರು ತಿಂಗಳಲ್ಲದಿದ್ದರೆ ವರುಷದಲ್ಲಿ ಬೇಕಾದ ಪಠ್ಯ ಪುಸ್ತಕಗಳೆಲ್ಲ ಬಂದಾವು. ಕನ್ನಡಿಗರಲ್ಲದವರು 'ಪಠ್ಯ ಪುಸ್ತಕಗಳಿಲ್ಲವೆ?' ಎಂದು ಆಕ್ಷೇಪಣೆ ಹೂಡುವರೇ ಹೊರತು ಕನ್ನಡಿಗರು ಎಂದಿಗೂ ಹೂಡುವಂತಿಲ್ಲ. ಕೆಲವು ದಿನ ಇಂಗ್ಲಿಷ್ ಗ್ರಂಥಗಳು ಸಹಾಯಕ್ಕಿರಲಿ. ಕನ್ನಡದ ಅಲಂಕಾರ ಛಂದಸ್ಸು ಗಳನ್ನು ಪಾಠ ಹೇಳುವಾಗ ಸಂಸ್ಕೃತ ಗ್ರಂಥಗಳನ್ನು ನಾವು ಉಪಯೋಗಿಸಿಕೊಳ್ಳುವು ದಿಲ್ಲವೆ? ಪುಸ್ತಕಗಳು ದೇಶಭಾಷೆಯಲ್ಲಿ ಆಗುವುದು ಅಸಾಧ್ಯವಾದುದರಿಂದ, ಅದು ಬೋಧನ ಭಾಷೆಯಾಗುವುದು ಅಸಾಧ್ಯ ಎಂಬ ತರ್ಕ ಪೊಳ್ಳು....ಕನ್ನಡವು ಸಾರ್ವತ್ರಿಕ ವಾದರೆ ಜನರಿಗೆ ಕನ್ನಡದಲ್ಲಿ ಯೋಚಿಸುವ ಶಕ್ತಿ ತಾನೇ ಬರುತ್ತದೆ. ಕನ್ನಡದಲ್ಲಿ ಓದ

ಬೇಕೆಂಬ ಬಯಕೆ ಬರುತ್ತದೆ. ಓದುವವರು ಹೆಚ್ಚಾಗುತ್ತಾರೆ. ಓದು ರುಚಿಸುತ್ತದೆ. (ಎ. ಆರ್. ಕೃಷ್ಣಶಾಸ್ತ್ರೀ, ಭಾಷಣಗಳು ಮತ್ತು ಲೇಖನಗಳು)

ಇಂತಹ ಭಾಷೆಯಿಂದ ಜಗತ್ತಿನಲ್ಲಿ ಸಾಧಿಸಲಾರದ ಕೆಲಸ ಯಾವುದು ?*

**ಗೊರೂರು ರಾಮಸ್ವಾಮಯ್ಯಂಗಾರ್**

---

*ಈ ಲೇಖನ ಬರೆಯಲು ಉದ್ದಕ್ಕೂ ಸೂಚಿಸಿರುವ ಗ್ರಂಥಗಳಲ್ಲದೆ ಶ್ರೀ ಮುಗಳಿ ಅವರ ಕನ್ನಡ ಸಾಹಿತ್ಯ ಚರಿತ್ರೆಯನ್ನೂ ಆಧಾರವಾಗಿಟ್ಟುಕೊಂಡಿದ್ದೇನೆ. ಗೊ. ರಾ

# ಮಹಾಭಾರತದ ಚಿತ್ರಗಳು

ನಮ್ಮ ಭರತ ಖಂಡದಲ್ಲಿ ಪಂಡಿತಪಾಮರರೆಲ್ಲರಿಗೂ ಅತ್ಯಂತ ಪ್ರಿಯವಾಗಿ ಎಲ್ಲೆಡೆಗಳಲ್ಲಿಯೂ ಹರಡಿರುವ ಧಾರ್ಮಿಕಗ್ರಂಥಗಳೆಂದರೆ ರಾಮಾಯಣ ಮಹಾಭಾರತಗಳೇ. ಈ ಗ್ರಂಥಗಳು ನಮ್ಮ ದೇಶದಲ್ಲಿ ಮಾತ್ರವಲ್ಲದೆ ದೇಶದ ಹೊರೆಗೆ ಜಾವಾದ್ವೀಪದವರೆಗೂ ಹಿಂದಿನ ಕಾಲದಲ್ಲಿಯೇ ಪ್ರಚುರವಾಗಿದ್ದುವು. ಇವುಗಳಲ್ಲಿ ಮಹಾಭಾರತವೇ ಬಲು ದೊಡ್ಡದು. ಮುಖ್ಯಕಥಾ ವಸ್ತುವಾದ ಪಾಂಡವರ ಚರಿತ್ರೆಯಲ್ಲದೆ ಅನೇಕ ಆಖ್ಯಾಯಿಕೆಗಳೂ ರಾಜಧರ್ಮ ಆಪದ್ಧರ್ಮ ಮೊದಲಾದ ಧರ್ಮಬೋಧೆಗಳೂ ಭಗವದ್ಗೀತಾದಿ ತತ್ತ್ವೋಪದೇಶಗಳೂ ಇದರಲ್ಲಡಗಿರುವುವು! ಈ ಗ್ರಂಥವು ವೇದವ್ಯಾಸಮಹರ್ಷಿಯಿಂದ ಸಂಸ್ಕೃತಭಾಷೆಯಲ್ಲಿ ರಚಿತವಾಗಿ ಸುಮಾರು ಒಂದು ಲಕ್ಷ ಗ್ರಂಥ (ಒಂದು ಗ್ರಂಥಕ್ಕೆ ೩೨ ಅಕ್ಷರಗಳು) ದಷ್ಟು ಪ್ರಮಾಣವುಳ್ಳದುದಾಗಿದೆ. ಪುರಾಣ ಪಠನದ ಮೂಲಕವಾಗಿಯೂ ಹರಿಕಥಾಕಾಲಕ್ಷೇಪದ ಮೂಲಕವಾಗಿಯೂ ಜನಗಳು ಇದರ ಸ್ವಾರಸ್ಯವನ್ನು ಇಂದಿಗೂ ಅರಿಯುವರು. ಈಚೆಗೆ ಮಹಾಭಾರತದ ಕಥೆಯನ್ನು ಸಂಗ್ರಹಿಸಿರುವ ಕನ್ನಡ ಭಾಷೆಯ ವಚನಭಾರತಗಳೂ ಪ್ರಚಾರದಲ್ಲಿವೆ. ಧರ್ಮರಾಯನ ಪಟ್ಟಾಭಿಷೇಕದವರೆಗೂ ಪಾಂಡವರ, ಕಥೆಯನ್ನೊಳಗೊಂಡು ಎರಡು ಪದ್ಯಕಾವ್ಯಗಳು ಕನ್ನಡ ಭಾಷೆಯಲ್ಲಿ ರಚಿತವಾಗಿವೆ. ಮೊದಲನೆಯದು ಕ್ರಿ. ಶ. ೯೪೧ರಲ್ಲಿ ಪಂಪನೆಂಬ ಜೈನ ಕವಿಯಿಂದ ರಚಿತವಾದ ಪಂಪಭಾರತವೆಂಬ ಗ್ರಂಥ. ಎರಡನೆಯದು ಸುಮಾರು ೧೫ನೆಯ ಶತಮಾನದಲ್ಲಿ ಕುಮಾರವ್ಯಾಸ ಅಥವಾ ನಾರಣಪ್ಪನಿಂದ ರಚಿತವಾದ ಗದುಗಿನ ಭಾರತ. ಇವುಗಳಲ್ಲದೆ ಮಹಾ ಭಾರತದ ಕೆಲಕೆಲವು ಕಥೆಗಳನ್ನು ವಿವರಿಸುವ ಇನ್ನೆಷ್ಟೋ ಸಣ್ಣ ಕಾವ್ಯಗಳೂ ಯಕ್ಷಗಾನಪ್ರಬಂಧಗಳೂ ಹಾಡುಗಳೂ ಹೇರಳವಾಗಿ ದೊರೆಯುವುವು.

ನಮ್ಮ ದೇಶದ ದೇವಸ್ಥಾನಗಳಲ್ಲಿ ಮುಖ್ಯವಾಗಿ ೧೧ನೆಯ ಶತಮಾನದಿಂದ ೧೪ನೆಯ ಶತಮಾನದವರೆಗೆ ಪ್ರಸಿದ್ಧಿಪಡೆದ ಹೊಯ್ಸಳ ರೀತಿಯ ಶಿಲ್ಪದ ದೇವಾಲಯಗಳಲ್ಲಿ ಮಹಾಭಾರತದ ಕಥೆಗೆ ಸಂಬಂಧಪಟ್ಟ ಚಿತ್ರಗಳನ್ನು ಭಿತ್ತಿಗಳ ಮೇಲೆ ಪಟ್ಟಿಕೆಗಳಲ್ಲಿ ಕೆತ್ತಿರುವರು, ಗೂಡುಗಳಲ್ಲಿ ವಿಗ್ರಹಗಳನ್ನು ನಿರ್ಮಿಸಿರುವರು. ಈ ದೇವಾಲಯಗಳ ವರ್ಣನೆಯನ್ನು ಮಾಡುವಾಗ ಆರ್ಕಿಯಲಾಜಿಕಲ್ ಇಲಾಖೆಯ ವಾರ್ಷಿಕ ವರದಿಗಳಲ್ಲಿ ಚಿತ್ರಗಳ ವಿವರಗಳನ್ನೂ ಕೊಟ್ಟಿರುವರು ಕೆಲವೆಡೆಗಳಲ್ಲಿ ಛಾಯಾಗ್ರಹಣದ ಮೂಲಕ ತಯಾರಾದ ಈ ಚಿತ್ರಗಳ ಪಡಿಯಚ್ಚುಗಳನ್ನೂ ಮುದ್ರಿಸಿ ವಿವರಿಸಿರುವರು. ಈ ಚಿತ್ರಗಳನ್ನು ಕೊರೆದ ಶಿಲ್ಪಿಗಳ ಹೆಸರನ್ನೂ ಚಿತ್ರದ ವಿಳಾಸವನ್ನೂ ಕೆಲವೆಡೆಗಳಲ್ಲಿ ಶಿಲ್ಪಿಗಳು ಕೆತ್ತಿರುವರು. ಈ ವರದಿಗಳಲ್ಲಿರುವ ಚಿತ್ರಗಳ

ವಿವರಗಳ ಆಧಾರದ ಮೇಲೆ ಈ ನನ್ನ ಪ್ರಬಂಧವು ರಚಿತವಾಗಿದೆ. ಈ ಚಿತ್ರಗಳ ವಿಚಾರವನ್ನು ಉಲ್ಲೇಖಿಸುವಾಗ ಮಹಾ ಭಾರತದ ಆನುಪೂರ್ವಿಯನ್ನೇ ಅನುಸರಿಸಿ ಸಂಬಂಧಪಟ್ಟ ಕಥಾವೃತ್ತವನ್ನು ಕ್ರಮವಾಗಿ ಬರೆಯಲಾಗಿದೆ.

ಚಿತ್ರಗಳಲ್ಲಿ ಕಾಣಬರುವ ಮೊತ್ತಮೊದಲನೆಯ ಮಹಾಭಾರತದ ಕಥಾ ವೃತ್ತವೆಂದರೆ—ಪಾಂಡುವಿನ ಮರಣಾನಂತರ ಅವನ ಹೆಂಡತಿಯಾದ ಕುಂತಿಯೂ ಮಕ್ಕಳಾದ ಪಾಂಡವರೂ ಅಂದರ ಧರ್ಮರಾಯ ಭೀಮ ಅರ್ಜುನ ನಕುಲ ಸಹದೇವರೂ ಹಸ್ತಿನಾವತಿಗೆ ಹೋಗಿ ಅರಮನೆಯಲ್ಲಿ ನೆಲಸಿದುದು. ಕಡೂರು ಡಿಸ್ಟ್ರಿಕ್ಟು ತರೀಕೆರೆ ತಾಲ್ಲೋಕು ಅಮೃತಾಪುರದ ಅಮೃತೇಶ್ವರದೇವಾಲಯದ ಉತ್ತರದ್ವಾರದ ಬಳಿ ಹೊರಭಿತ್ತಿಯ ಅಡ್ಡಪಟ್ಟಿಗಳ ಮೇಲೆ ಈ ಇತಿವೃತ್ತವು ಚಿತ್ರಿತವಾಗಿದೆ. ಕುಂತಿಯೂ ಪಾಂಡವರೂ ಹಸ್ತಿನಾವತಿಗೆ ಪ್ರಯಾಣ ಮಾಡಿ ಭೀಷ್ಮನ ರಕ್ಷಣೆಯನ್ನು ಬೇಡುವರು. ಇದಕ್ಕಾಕ್ಷೇಪಿಸಿದ ಕೌರವರನ್ನು (ಧೃತರಾಷ್ಟ್ರನ ಮಕ್ಕಳಾದ ದುರ್ಯೋಧನ ದುಶ್ಶಾಸ ನಾದಿಗಳನ್ನು) ಧಿಕ್ಕರಿಸಿ ಪಾಂಡವರನ್ನು ಅರಮನೆಯಲ್ಲಿ ಭೀಷ್ಮನು ನೆಲೆಗೊಳಿಸುವನು. ಅನಂತರ ಹೀಗೆ ಒಟ್ಟಾಗಿ ಬೆಳೆಯುತ್ತಿದ್ದ ಕೌರವರು ಒಂದು ಬಾರಿ ಫಲವೃಕ್ಷವನ್ನು ಹತ್ತಿ ಹಣ್ಣುಗಳನ್ನು ಕೊಯ್ಯುತ್ತಿದ್ದಾಗ ಕೆಳಗೆ ನಿಂತಿದ್ದ ಭೀಮನು ತನ್ನ ವಿಶೇಷಬಲ ದಿಂದ ಮರವನ್ನಲ್ಲಾಡಿಸಿ ಹಣ್ಣುಗಳನ್ನು ಕೆಡಹಿದುದಲ್ಲದೆ ಮರದ ಮೇಲಿದ್ದ ಕೌರವ ರನ್ನೂ ಉರುಳಿಸುವನು. (ಮೈಸೂರು ಆರ್ಕಿಯಲಾಜಿಕಲ್ ಇಲಾಖೆಯ ೧೯೩೧ನೆಯ ವರ್ಷದ ವರದಿ ಪುಟ, ೧೦) ಅವನು ಹೀಗೆ ಮಾಡಿದ್ದು ವಿನೋದಕ್ಕಾಗಿಯೇ.

ಅಮೃತೇಶ್ವರ ದೇವಾಲಯವು ಹೊಯ್ಸಳ ವಂಶದ ರಾಜನಾದ ಇಮ್ಮಡಿ ವೀರ ಬಲ್ಲಾಳನಿಂದ ಕ್ರಿಸ್ತಶಕ ೧೧೯೬ರಲ್ಲಿ ಪ್ರತಿಷ್ಠಿತವಾಯಿತೆಂದೂ ಅಲ್ಲಿಂದ ಕ್ರಿ.ಶ. ೧೨೦೬ರ ವರೆಗೂ ದೇವಾಲಯದ ಮುಖಮಂಟಪ ಮೊದಲಾದ ಕೆಲವು ಭಾಗಗಳು ನಿರ್ಮಿತ ವಾದುವೆಂದೂ ಉಕ್ತವಾಗಿವೆ. (೧೯೩೧ನೆಯ ವರ್ಷದ ವರದಿ, ಪುಟ ೭) ಭೀಮನು ಕೌರವರನ್ನು ಮರದ ಮೇಲಿನಿಂದ ಕೆಡಹಿದ ಸಂಗತಿ ಮೈಸೂರು ಡಿಸ್ಟ್ರಿಕ್ಟು ತಿರಮ ಕೂಡಲು ನರಸೀಪುರದ ತಾಲ್ಲೋಕು ಸೋಮನಾಥಪುರಗ್ರಾಮದ ಕೇಶವ ದೇವಾ ಲಯದ ತಳಹದಿಯಲ್ಲಿಯೂ ಮಂಡ್ಯ ಡಿಸ್ಟ್ರಿಕ್ಟು ಮಂಡ್ಯ ತಾಲ್ಲೋಕು ಬಸ್ರಾಳುಗ್ರಾಮದ ಮಲ್ಲಿಕಾರ್ಜುನ ದೇವಾಲಯದ ಹಿಂಭಾಗದ ಭಿತ್ತಿಯಲ್ಲೂ ಚಿತ್ರಿತವಾಗಿದೆ. ಸೋಮ ನಾಥಪುರದ ಕೇಶವ ದೇವಾಲಯವು ಸು. ಕ್ರಿ. ಶ. ೧೨೬೮ರಲ್ಲಿ ಹೊಯ್ಸಳ ರಾಜನಾದ ೩ನೆಯ ನರಸಿಂಹನ ಆಶ್ರಿತನಾದ ಸೋಮನಾಥ ದಣಾಯಕನಿಂದ ನಿರ್ಮಿತವಾಯಿತು. ಬಸ್ರಾಳಿನ ಮಲ್ಲಿಕಾರ್ಜುನ ದೇವಾಲಯವು ಹೊಯ್ಸಳ ರಾಜನಾದ ಇಮ್ಮಡಿ ನರ ಸಿಂಹನ ಅಧಿಕಾರಿಯಾದ ಹರಿಹರ ದಣಾಯಕನಿಂದ ಕ್ರಿ. ಶ. ೧೨೩೪ರಲ್ಲಿ ರಚಿತ ವಾಯಿತು. (೧೯೩೨ನೆಯ ವರ್ಷದ ವರದಿ, ಪುಟ ೧೬,೨೨;೧೯೩೪ನೆಯ ವರ್ಷದ ವರದಿ, ಪುಟ ೩೬, ೩೮)

ಹೀಗೆ ಚಿತ್ರಗಳ ವಿಚಾರವನ್ನುಲ್ಲೇಖಿಸುವಾಗ ಅವುಗಳು ದೊರೆಯುವ ಸ್ಥಳ, ಆ ಕಟ್ಟಡದ ಕಾಲ ಮತ್ತು ಅದನ್ನು ರಚಿಸಿದ ದೊರೆಯ ಅಥವಾ ಅಧಿಕಾರಿಯ ಹೆಸರು, ಚಿತ್ರದಿಂದ ಸೂಚಿತವಾಗುವ ಮಹಾಭಾರತದ ಕಥಾಂಶ, ಚಿತ್ರಗಳನ್ನು ವಿವರಿಸುವ ಆರ್ಕಿಯಲಾಜಿಕಲ್ ಇಲಾಖೆಯ ವರದಿ ಇವುಗಳನ್ನೆಲ್ಲಾ ಈ ಪ್ರಬಂಧದಲ್ಲಿ ಸೂಚಿಸಿರುತ್ತದೆ.

ಇತ್ತ ಭೀಮಸೇನನು ಬಲಿಷ್ಠನೆಂದು ಪ್ರಖ್ಯಾತಿ ಪಡೆದ ಹಾಗೆಲ್ಲಾ ಅವನ ಮೇಲೆ ದುರ್ಯೋಧನನಿಗೆ ದ್ವೇಷ ಹೆಚ್ಚಾಗಿ ಪ್ರಮಾಣ ಕೋಟಿ ಎಂಬ ಮಡುವಿನಲ್ಲಿ ಲತೆಗಳಿಂದ ಬಿಗಿಸಿ ಮಲಗಿದ್ದ ಭೀಮನನ್ನು ಹಾಕಿಸಿದನು. ಆದರೆ ಭೀಮನು ಎಚ್ಚರವಾಗಿ ಕಟ್ಟುಗಳನ್ನೆಲ್ಲಾ ಕಿತ್ತುಕೊಂಡು ಮೇಲಕ್ಕೆ ಎದ್ದು ಬಂದನು. ಹೀಗೆಯೇ ಇನ್ನೊಂದು ಸಾರಿ ನಿದ್ರೆಮಾಡುತ್ತಿದ್ದಾಗ ಭೀಮನ ಮೇಲೆ ಘೋರ ವಿಷಸರ್ಪಗಳನ್ನು ಬಿಡಿಸಿದನು. ಆದರೆ ಅವುಗಳ ಹಲ್ಲು ಅವನ ಚರ್ಮದಲ್ಲಿ ಇಳಿಯಲಾರದೆ ಹೋದುವು; ಎಚ್ಚರಗೊಂಡು ಅವನೇ ಅವುಗಳನ್ನು ಕೊಂದುಹಾಕಿದನು. ಭೀಮನು ನಾಗರಾಜನೊಡನೆ ಯುದ್ಧ ಮಾಡುವ ದೃಶ್ಯವು ಕಡೂರು ಡಿಸ್ಟ್ರಿಕ್ಟು ಚಿಕ್ಕಮಗಳೂರು ತಾಲ್ಲೂಕು ಬೆಳವಾಡಿ ಗ್ರಾಮದ ವೀರನಾರಾಯಣ ದೇವಾಲಯದ ತಳಹದಿಯ ಮಂಟಪದಲ್ಲಿ ಚಿತ್ರಿತವಾಗಿದೆ. (೧೯೩೩ ನೆಯ ವರ್ಷದ ವರದಿ, ಪುಟ. ೮೪) ಈ ದೇವಾಲಯವು ಹೊಯ್ಸಳರ ಶಿಲ್ಪಕ್ಕೆ ಸೇರಿದ್ದು. ಸುಮಾರು ಕ್ರಿ.ಶ ೧೨೦೦ ರಲ್ಲಿ ಇದು ನಿರ್ಮಿತವಾಗಿರಬಹುದು. (ಅದೇ ವರದಿಯ ಪುಟ ೮೧)

ಪಾಂಡವ ಕೌರವರು ದೊಡ್ಡವರಾದುದನ್ನು ಕಂಡು ಭೀಷ್ಮನು ಶಸ್ತ್ರಾಸ್ತ್ರ ಪ್ರಯೋಗದಲ್ಲಿ ಪ್ರವೀಣನಾಗಿದ್ದ ದ್ರೋಣಾಚಾರ್ಯನೆಂಬ ಬ್ರಾಹ್ಮಣನನ್ನು ಅವರಿಗೆ ಶಸ್ತ್ರ ವಿದ್ಯಾಭ್ಯಾಸದಲ್ಲಿ ಗುರುವಾಗಿ ಗೊತ್ತುಮಾಡಿದನು ಅನೇಕ ಮಂದಿ ರಾಜಪುತ್ರರು ದೇಶದೇಶಗಳಿಂದ ಬಂದು ಅವನಲ್ಲಿ ವಿದ್ಯೆಯನ್ನು ಕಲಿತರು. ಒಂದು ದಿನ ಅವರು ಕಲಿತ ವಿದ್ಯೆಯ ಪ್ರದರ್ಶನಕ್ಕಾಗಿ ದ್ರೋಣನು ಹಸ್ತಿನಾವತಿಯ ಹೊರಗೆ ಪ್ರೇಕ್ಷಾಗಾರವನ್ನು ಕಟ್ಟಿಸಿ ಅದರಲ್ಲಿ ಧೃತರಾಷ್ಟ್ರ ಭೀಷ್ಮ ಮೊದಲಾದವರು ಪರಿವಾರದವರೂ ರಾಣಿವಾಸದವರೂ ಕುಳಿತುಕೊಂಡು ನೋಡುವಂತೆ ಮಂಚಗಳನ್ನೂ ರಚಿಸಿದನು. ಒಂದು ದಿನ ಹೀಗೆ ಅವರೆಲ್ಲರೂ ಒಬ್ಬೊಬ್ಬರಾಗಿ ರಂಗಕ್ಕೆ ಬಂದು ಶಸ್ತ್ರಾಸ್ತ್ರಗಳ ಪ್ರಯೋಗಗಳಲ್ಲಿ ತಮ್ಮ ಕೌಶಲ್ಯವನ್ನು ತೋರಿಸಿದರು. ಧರ್ಮರಾಯನ ಅನಂತರ ಭೀಮ ದುರ್ಯೋಧನರು ಗದೆಗಳನ್ನು ಹೊತ್ತು ಮಂಡಲಾಕಾರವಾಗಿ ಸುತ್ತುತ್ತಿರಲು ರಂಗವೆಲ್ಲ ಉಬ್ಬೆದ್ದು ಗದ್ದಲವಾಯಿತು. ಆಗ ದ್ರೋಣನು ತನ್ನ ಮಗನ ಮೂಲಕ ಗದಾಪ್ರದರ್ಶನವನ್ನು ಅಷ್ಟಕ್ಕೇ ಸಾಕೆಂದು ನಿಲ್ಲಿಸಿದನು. ಅನಂತರ ಅಸ್ತ್ರ ವಿದ್ಯಾಕೌಶಲ್ಯವನ್ನು ತೋರಿಸಿದ ಅರ್ಜುನ ಕರ್ಣರಿಗೂ ಯುದ್ಧವಾಗುವಂತೆ ಏರ್ಪಾಟಾಗುವುದರಲ್ಲಿತ್ತು. ಅರ್ಜುನನ ಕಡೆಗೆ ಪಾಂಡವರೂ ಕರ್ಣನ ಕಡೆಗೆ ಕೌರವರೂ ಸೇರಿ ಶುಭವನ್ನು ಕೋರುತ್ತಿದ್ದರು. ಆದರೆ ಕರ್ಣನ ಸೂತಜನ್ಮದ ಕಾರಣದಿಂದ ಅವನನ್ನು ಯುದ್ಧಕ್ಕೆ ಅರ್ಹವೆಂದು ಒಪ್ಪಲಿಲ್ಲ. ಸೂರ್ಯಾಸ್ತಮಾನವಾಗಿ ಎಲ್ಲರೂ ಮನೆಗೆ ಹೋದರು.

ಪಾಂಡವ ಕೌರವರು ಕಾಳೆಗಕ್ಕೆ ಸನ್ನದ್ಧರಾದರೆಂದೂ ರಥಿಕರೆಲ್ಲರೂ ರಂಗಕ್ಕೆ ಹೊರಟರೆಂದೂ ಧೃತರಾಷ್ಟ್ರದಿಂದ ಪ್ರೇರೇಪಿತರಾದ ಭೀಷ್ಮದ್ರೋಣ ಮೊದಲಾದ ಗುರುಜನರು ಯುದ್ಧವನ್ನು ತಪ್ಪಿಸಿ ಸಮಾಧಾನಮಾಡಿದರೆಂದೂ ಸೋಮನಾಥಪುರದ ಕೇಶವ ದೇವಾಲಯದ ತಳಹದಿಯಲ್ಲಿ ಚಿತ್ರಿತವಾಗಿದೆ. (೧೯೩೨ನೆಯ ವರ್ಷದ ವರದಿ ಪುಟ ೨೨).

ಹೀಗೆ ಕೌರವ ಪಾಂಡವರು ಧನುರ್ವಿದ್ಯಾಪಾರಂಗತರಾದ ಮೇಲೆ ದ್ರೋಣನು ಅವರನ್ನು ಕರೆದು ದ್ರುಪದರಾಜನ ಮೇಲೆ ದಂಡೆತ್ತಿ ಹೋಗಿ ಸೋಲಿಸಿ ಅವನನ್ನು ಸೆರೆಹಿಡಿದು ತಮಗೆ ಒಪ್ಪಿಸಬೇಕೆಂದೂ ಅದೇ ತಮ್ಮ ಗುರುದಕ್ಷಿಣೆಯೆಂದೂ ಹೇಳಿದರು. ಅವರು ಅದಕ್ಕೆ ಒಪ್ಪಿ ದ್ರೋಣನೊಡನೆ ಹೊರಟು ಪಾಂಚಾಲ ದೇಶಕ್ಕೆ ಮುತ್ತಿಗೆ ಹಾಕಿ ದ್ರುಪದವನ್ನು ದ್ರೋಣನ ಪಾದದ ಮೇಲೆ ಕೆಡಹಿದರು. ಇದರಲ್ಲಿ ಪಾಂಡವರೂ ಮುಖ್ಯವಾಗಿ ಅರ್ಜುನನೂ ವಿಶೇಷ ಸಾಹಸವನ್ನು ತೋರಿಸಿದರು. ಹೀಗೆ ಅರ್ಜುನನು ದ್ರುಪದನಿಗೆ ಬುದ್ಧಿಕಲಿಸಿದುದನ್ನು ಅಮೃತಾಪುರದ ಅಮೃತೇಶ್ವರ ದೇವಾಲಯದ ಹೊರಭಿತ್ತಿಯಲ್ಲಿ ಉತ್ತರದ್ವಾರದ ಬಳಿ ಚಿತ್ರಿತವಾಗಿದೆ. ದ್ರುಪದರಾಜನು ದ್ರೋಣನ ಮೇಲೆ ವೈರವನ್ನು ಸಾಧಿಸಿ ಅವನನ್ನು ಕೊಲ್ಲುವಂತಹ ವೀರನಾದ ಪುತ್ರನೂ ಅರ್ಜುನನಿಗೆ ಯೋಗ್ಯಳಾದ ಪುತ್ರಿಯೂ ಹುಟ್ಟುವಂತೆ ಯಾಜೋಪಯಾಜರೆಂಬ ಬ್ರಾಹ್ಮಣರಿಂದ ಯಜ್ಞಮಾಡಿಸಿದಾಗ ಅಗ್ನಿಕುಂಡದಿಂದ ಧೃಷ್ಟದ್ಯುಮ್ನನೆಂಬ ವೀರಪುತ್ರನೂ ದ್ರೌಪದಿ ಅಥವಾ ಕೃಷ್ಣೆಯೆಂಬ ಸುಂದರಿಯಾದ ಕನ್ಯೆಯೂ ಅವರ ವರದಿಂದ ಉದ್ಭವಿಸಿದರು. ಹೀಗೆ ಅವರು ಹುಟ್ಟಿದುದು ಅದೇ ಉತ್ತರ ದ್ವಾರದ ಬಳಿ ಚಿತ್ರಿತವಾಗಿದೆ (೧೯೩೧ನೆಯ ವರ್ಷದ ವರದಿ ಪುಟ ೧೦).

ಇತ್ತ ಕೌರವರ ಮೇಲೆ ಅವರ ವಿದ್ಯಾಪರಾಕ್ರಮಗಳಿಗಾಗಿ ಅಸೂಯೆಪಟ್ಟು ಅವರನ್ನು ತೀರಿಸಿ ಬಿಡುವುದಕ್ಕೆ ಕರ್ಣ ಶಕುನಿಗಳೊಡನೆ ಆಲೋಚಿಸಿ ತಂತ್ರವನ್ನು ಹೂಡಿ ಧೃತರಾಷ್ಟ್ರನ ಮೂಲಕ ಪಾಂಡವರು ವಾರಣಾವತಿಗೆ ಹೋಗಿ ಅಲ್ಲಿಂದ ಕೆಲವು ಕಾಲವಿದ್ದು ಅಲ್ಲಿಯ ಉತ್ಸವವನ್ನು ನೋಡಿಕೊಂಡು ಬರುವಂತೆ ಹೇಳಿಸಿದನು. ನಿರ್ವಾಹವಿಲ್ಲದೆ ಧರ್ಮರಾಯನು ಇದಕ್ಕೊಪ್ಪಿ ಸಹೋದರರನ್ನೂ ತಾಯಿಯನ್ನೂ ಕರೆದುಕೊಂಡು ವಾರಣಾವತಿಗೆ ಹೋಗಿ ನೆಲಸಿದನು. ದುರ್ಯೋಧನನ ಸ್ನೇಹಿತನಾದ ಪುರೋಚನನೆಂಬುವನು ಅವನ ಆಜ್ಞಾನುಸಾರ ಅಲ್ಲಿ ಅರಗು ಮೊದಲಾದ ಸುಲಭವಾಗಿ ಉರಿ ಹೊತ್ತುವ ದ್ರವ್ಯಗಳನ್ನು ಸೇರಿಸಿ ಒಂದು ಗೃಹವನ್ನು ನಿರ್ಮಾಣಮಾಡಿಸಿ ಅಲ್ಲಿ ವಾಸಮಾಡಲಿಕ್ಕೆ ಅನುಕೂಲವಾದ ಆಸನಾದಿಗಳನ್ನೇರ್ಪಡಿಸಿದನು. ಪಾಂಡವರು ಇದರ ಗುಟ್ಟನ್ನು ವಿದುರನ ಉಪದೇಶದಿಂದ ಅರಿತಿದ್ದರೂ ಪುರೋಚನನನ್ನು ವಂಚಿಸುವುದಕ್ಕೋಸ್ಕರ ಆ ಮನೆಯಲ್ಲಿ ಕೆಲವು ಕಾಲ ವಾಸಮಾಡಿ ಒಂದು ದಿನ ಒಬ್ಬ ಬೇಡಿತಿಯೂ ಅವಳ ಐದು ಮಕ್ಕಳೂ ಅಲ್ಲಿಗೆ ವಿಶ್ರಮಾರ್ಥವಾಗಿ ಬಂದಿದ್ದಾಗ ಆ ಅರಗಿನ ಮನೆಗೆ ಬೆಂಕಿ ಹೊತ್ತಿಸಿ ತಾವು ವಿದುರನ ಕಡೆಯವನೊಬ್ಬನು ಮೊದಲೇ

ನಿರ್ಮಿಸಿದ್ದ ಸುರಂಗಮಾರ್ಗವಾಗಿ ಹೊರಹೊರಟು ಗಂಗಾನದಿಯನ್ನು ದಾಟಿ ಬಹು ದೂರ ನಡೆದು ಹಿಡಿಂಬವನವನ್ನು ಪ್ರವೇಶಿಸಿದರು. ಹೀಗೆ ಅರಗಿನ ಮನೆಯನ್ನು ದಹಿಸಿದುದೂ ಅಲ್ಲಿಂದ ತಪ್ಪಿಸಿಕೊಂಡ ಧರ್ಮರಾಯಾದಿ ಸಹೋದರರನ್ನೂ ಕುಂತಿಯನ್ನೂ ಭೀಮನು ರಕ್ಷಿಸಿ ತಾನೇ ಒಯ್ದುದೂ ಅದೇ ಉತ್ತರದ್ವಾರದ ಬಳಿ ಚಿತ್ರಿತವಾಗಿದೆ (೧೯೩೧ನೆಯ ವರ್ಷದ ವರದಿ, ಪುಟ ೧೦)

ಪಾಂಡವರು ಹಿಡಿಂಬವನವೆಂಬ ಕಾಡನ್ನು ಪ್ರವೇಶಿಸಿ ವಿಶ್ರಮಿಸಿಕೊಳ್ಳುತ್ತಿರಲು ಅಲ್ಲಿ ವಾಸಮಾಡುತ್ತಿದ್ದ ನರಭಕ್ಷಕನಾದ ಹಿಡಿಂಬನೆಂಬ ರಾಕ್ಷಸನು ತನ್ನ ತಂಗಿಯಾದ ಹಿಡಿಂಬೆಯನ್ನು ವನದಲ್ಲಿ ಮಲಗಿದ್ದ ಮನುಷ್ಯರು ಯಾರೆಂದು ತಿಳಿದುಕೊಂಡು ಬರುವಂತೆ ಕಳುಹಿಸಿದನು. ಅವಳು ಪಾಂಡವರ ಬಳಿಗೆ ಬಂದು ಸಮೀಪದಲ್ಲಿ ಕುಳಿತಿದ್ದ ಭೀಮನ ಮೇಲೆ ಪ್ರೀತಿಗೊಂಡು ಅಲ್ಲಿಯೇ ನಿಂತುಬಿಟ್ಟಳು. ಬಳಿಕ ಹಿಡಿಂಬನು ಅಲ್ಲಿಗೆ ಬಂದು ಮೇಲೆ ಬೀಳಲು ಹೋಗಲು ಭೀಮನು ಅವನೊಡನೆ ಬಹಳ ಹೊತ್ತು ಕಾದಿ ಅವನನ್ನು ಅಪ್ಪಳಿಸಿಕೊಂದನು. ಸುಂದರಿಯಾದ ಮನುಷ್ಯಳ ರೂಪವನ್ನು ಧರಿಸಿದ್ದ ಹಿಡಿಂಬಿಯ ನಿಜಸ್ವಭಾವವನ್ನರಿತು ಭೀಮನು ಧರ್ಮರಾಯನ ಅಪ್ಪಣೆಯಂತೆ ಅವಳೊಂದಿಗೆ ಕೂಡಿ ಕೆಲವು ಕಾಲ ವಿಹರಿಸಿದನು. ಅವರಿಗೆ ಘಟೋತ್ಕಚನೆಂಬ ಪುತ್ರನು ಹುಟ್ಟಿ ಬಾಲ್ಯದಲ್ಲಿಯೇ ಯೌವನವನ್ನು ಪಡೆದು ಹಿಡಿಂಬೆಯೊಂದಿಗೆ ಉತ್ತರ ದಿಕ್ಕನ್ನು ಹಿಡಿದು ಹೊರಟುಹೋದನು ಭೀಮನು ಅಡವಿಯಲ್ಲಿ ಹಿಡಿಂಬನನ್ನು ಸಂಹರಿಸುವುದೂ ಹಿಡಿಂಬೆಯನ್ನುಮದುವೆಯಾಗುವುದೂ ಅವರಿಗೆ ಘಟೋತ್ಕಚನೆಂಬ ಮಗನು ಹುಟ್ಟಿ ವನದಲ್ಲಿ ಮರಕ್ಕೆ ತೂಗುಹಾಕಿದ ತೊಟ್ಟಿಲಲ್ಲಿ ಅವನು ಬೆಳೆಯುವುದೂ ಸೋಮನಾಥಪುರದ ಕೇಶವ ದೇವಾಲಯದ ತಳಹದಿಯಲ್ಲಿ ಚಿತ್ರಿತವಾಗಿದೆ. (೧೯೩೨ ನೆಯ ವರ್ಷದ ವರದಿ, ಪುಟ ೨೨) ಭೀಮನು ಹಿಡಿಂಬನನ್ನು ಸಂಹರಿಸುವುದು ಅಮೃತಾಪುರದ ಅಮೃತೇಶ್ವರ ದೇವಾಲಯದ ಉತ್ತರದ್ವಾರದ ಬಳಿ ಹೊರಭಿತ್ತಿಯಲ್ಲಿ ಚಿತ್ರಿತವಾಗಿದೆ. (೧೯೩೧ ನೆಯ ವರ್ಷದ ವರದಿ, ಪುಟ ೧೦)

ಕೆಲಕಾಲದ ಮೇಲೆ ಪಾಂಡವರೂ ಕುಂತಿಯೂ ಏಕಚಕ್ರವೆಂಬ ನಗರಕ್ಕೆ ಹೋಗಿ ಅಲ್ಲಿ ಭಿಕ್ಷಾವೃತ್ತಿಯಿಂದ ಬ್ರಾಹ್ಮಣ ವೇಷದಲ್ಲಿ ಜೀವಿಸುತ್ತಿದ್ದರು. ಒಂದು ದಿನ ಅವರು ವಾಸಿಸುತ್ತಿದ್ದ ಬ್ರಾಹ್ಮಣನ ಮನೆಯವರು ಬಕಾಸುರನೆಂಬ ರಾಕ್ಷಸನಿಂದ ಉಂಟಾದ ಹಿಂಸೆಯನ್ನು ವಿವರಿಸಿದರು. ಆ ಊರಿನಲ್ಲಿ ಪ್ರತಿಯೊಂದು ಮನೆಯವರೂ ಸರದಿಯ ಮೇರೆಗೆ ಒಂದು ಬಂಡಿ ತುಂಬ ಆಹಾರವನ್ನೂ ಆ ಬಂಡಿಯನ್ನು ಹೊಡೆದುಕೊಂಡು ಹೋಗುವ ಒಬ್ಬ ಮನುಷ್ಯನನ್ನೂ ಎಳೆದುಕೊಂಡು ಹೋಗಲು ಎರಡು ಕೋಣಗಳನ್ನೂ ಸಮೀಪದ ವನದಲ್ಲಿ ವಾಸಿಸುತ್ತಿದ್ದ ಬಕಾಸುರನೆಂಬ ರಾಕ್ಷಸನಿಗೆ ತೆಗೆದುಕೊಂಡು ಹೋಗಿ ಬಲಿಕೊಡಬೇಕೆಂದೂ ತಮ್ಮ ಸರದಿಯು ಆ ದಿನ ಬಂದಿತೆಂದೂ ಹೇಳಿದರು. ಅದನ್ನು ಕೇಳಿ ಕುಂತಿ ಭೀಮನನ್ನು ಆಹಾರದ ಬಂಡಿಯೊಂದಿಗೆ ಕಳುಹಿಸಲು ಒಪ್ಪಿದಳು. ಭೀಮನು ಗಾಡಿಯನ್ನು ಹೊಡೆದುಕೊಂಡು ಹೋಗಿ ಅದರಲ್ಲಿ

ತುಂಬಿದ್ದ ಆಹಾರವನ್ನೆಲ್ಲಾ ತಿಂದು ಮೇಲೆ ಬಿದ್ದ ಬಕಾಸುರನನ್ನು ಕೊಂದುಹಾಕಿದನು. ಭೀಮನು ಬಕಾಸುರನನ್ನು ಕೊಲ್ಲುವುದು ಅದೇ ಅಮೃತೇಶ್ವರ ದೇವಾಲಯದ ಉತ್ತರ ದ್ವಾರದ ಬಳಿ ಹೊರಭಿತ್ತಿಯಲ್ಲಿ ಚಿತ್ರಿತವಾಗಿದೆ. ಭೀಮನು ಬಂಡಿಯನ್ನು ಹೊಡೆದುಕೊಂಡು ಹೋಗಿ ಬಕಾಸುರನ ಮೇಲೆ ಬಿದ್ದು ಕೆಡಹಿ ಅವನ ಮೇಲೆ ಬಂಡಿಯನ್ನೆಸೆದಂತೆಯೂ ಅದನ್ನು ಅವನ ಸಹೋದರರೂ ತಾಯಿಯೂ ನೋಡುವಂತೆಯೂ ಹೊಯ್ಸಳರ ಕೊನೆಯ ರಾಜನಾದ ೩ನೆಯ ವೀರಬಲ್ಲಾಳನಿಂದ ಸು. ೧೯೪೪ ರಲ್ಲಿ ನಿರ್ಮಿತವಾದ ಭೀಮೇಶ್ವರ ದೇವಾಲಯದ ನವರಂಗದ ಕಂಬವೊಂದರಲ್ಲಿ ಚಿತ್ರಿತವಾಗಿದೆ. ಈ ದೇವಾಲಯವು ಕೋಲಾರ ಡಿಸ್ಟ್ರಿಕ್ಟ್ ಚಿಂತಾಮಣಿ ತಾಲ್ಲೋಕು ಕೈವಾರವೆಂಬ ಗ್ರಾಮದಲ್ಲಿರುವುದು. (೧೯೩೫ ನೆಯ ವರ್ಷದ ವರದಿ.)

ಬಕಾಸುರನನ್ನು ಕೊಂದನಂತರ ದ್ರೌಪದಿಯ ಸ್ವಯಂವರದ ಸುದ್ದಿಯನ್ನು ಕೇಳಿ ಪಾಂಡವರು ಕುಂತಿಯೊಡನೆ ದ್ರುಪದನ ರಾಜಧಾನಿಯಾದ ಕಾಂಪಿಲ್ಯನಗರವನ್ನೈಯ್ದಿ ಅಲ್ಲಿ ಒಬ್ಬ ಕುಂಬಾರನ ಕಾರ್ಯಶಾಲೆಯಲ್ಲಿಳಿದುಕೊಂಡು ಹಿಂದಿನಂತೆಯೇ, ಬ್ರಾಹ್ಮಣವೇಷದಿಂದ ಭಿಕ್ಷಾವೃತ್ತಿಯನ್ನು ಕೈಕೊಂಡು ಜೀವಿಸುತ್ತಿದ್ದರು. ದ್ರೌಪದಿಯ ಸ್ವಯಂವರಕ್ಕಾಗಿ ದುರ್ಯೋಧನಕರ್ಣಶಲ್ಯರೇ ಮೊದಲಾದ ನಾನಾ ದೇಶಗಳ ರಾಜರೂ ಬ್ರಾಹ್ಮಣರೂ ಋಷಿಗಳೂ ದ್ರುಪದನ ರಾಜಧಾನಿಗೆ ಬಂದು ಸೇರಿದರು. ಸ್ವಯಂವರದ ದಿನ ಪಾಂಡವರು ಬ್ರಾಹ್ಮಣರೊಂದಿಗೆ ಮಂಟಪವೊಳಗೆ ಬಂದು ಕುಳಿತರು. ಆಗ ದ್ರೌಪದಿಯ ಅಣ್ಣನಾದ ಧೃಷ್ಟದ್ಯುಮ್ನನು ನೆರೆದಿದ್ದ ರಾಜರನ್ನುದ್ದೇಶಿಸಿ 'ಇಗೋ, ಯಾರು ಇಲ್ಲಿರುವ ಬಿಲ್ಲನ್ನು ಹೆದೆಯೇರಿಸಿ ಈ ಯಂತ್ರದಲ್ಲಿರುವ ರಂಧ್ರವನ್ನು ಹಾಯಿಸಿಹೋಗಿ ಹಿಂದೆ ಕಾಣುವ ಚಿನ್ನದ ಲಕ್ಷ್ಯವನ್ನುಭೇದಿಸುವಂತೆ ಈ ಐದು ಬಾಣಗಳನ್ನು ಹೊಡೆಯುತ್ತಾನೋ ಅವನಿಗೆ ನನ್ನ ತಂಗಿ ದ್ರೌಪದಿ ಹೆಂಡತಿಯಾಗುವಳು' ಎಂದು ಗಟ್ಟಿಯಾಗಿ ಹೇಳಿದನು. ಅಲ್ಲಿ ಅಲಂಕಾರ ಮಾಡಿಕೊಂಡು ಕುಳಿತಿದ್ದ ರಾಜರಾರಿಗೂ ಆಗ ಬಿಲ್ಲಿಗೆ ಹೆದೆಯನ್ನು ಏರಿಸಲು ಆಗಲಿಲ್ಲ. ಆಗ ಬ್ರಾಹ್ಮಣರ ಮಧ್ಯದಿಂದ ಅರ್ಜುನನು ಎದ್ದು ಬಂದು ಬಾಣಗಳಿಂದ ಲಕ್ಷ್ಯವನ್ನು ಹೊಡೆದು ಕೆಡವಿದನು. ದ್ರೌಪದಿ ಅವನ ಕೊರಳಿಗೆ ಸಂವರಣ ಮಾಲಿಕೆಯನ್ನು ಹಾಕಿದಳು. ಹೀಗೆ ಒಬ್ಬ ಬ್ರಾಹ್ಮಣನಿಗೆ ದ್ರುಪದನು ತನ್ನ ಮಗಳನ್ನು ಕೊಡಲಿರುವುದನ್ನು ನೋಡಿ ಅಲ್ಲಿಗೆ ಬಂದಿದ್ದ ರಾಜರು ಕೋಪಗೊಂಡು ದ್ರುಪದನ ಮೇಲೆ ಬೀಳಹೋಗಲು ಭೀಮಾರ್ಜುನರು ಅವರನ್ನು ಸೋಲಿಸಿ ಓಡಿಸಿ ದ್ರೌಪದಿಯೊಂದಿಗೆ ತಮ್ಮ ವಸತಿಗೆ ಹೋದರು.

ಪಾಂಡವರು ಕುಂಬಾರನ ಮನೆಯಲ್ಲಿಳಿದಿರುವುದೂ ಅವರು ಚಕ್ರದಿಂದ ಕೆಲಸ ಮಾಡುತ್ತಿರುವುದೂ ಅರ್ಜುನನು ಲಕ್ಷ್ಯವನ್ನು (ಮತ್ಸ್ಯ ಯಂತ್ರವನ್ನು) ಭೇದಿಸಿ ದ್ರೌಪದಿಯನ್ನು ಪಡೆದು ಮೇಲೆ ಬಿದ್ದ ರಥಿಕರನ್ನೋಡಿಸಿ ತಮ್ಮ ಸ್ಥಳವನ್ನು ಸೇರುವುದೂ ಸೋಮನಾಥಪುರದ ಕೇಶವ ದೇವಾಲಯದ ತಳಹದಿಯಲ್ಲಿ ಚಿತ್ರಿತವಾಗಿದೆ. (೧೯೩೦ನೆಯ ವರ್ಷದ ವರದಿ, ಪುಟ ೨೨) ಅಮೃತಾಪುರದ ಅಮೃತೇಶ್ವರ ದೇವಾಲಯ

ದಲ್ಲಿಯೂ ಮತ್ಸ್ಯಯಂತ್ರಭೇದನವೂ ಪಾಂಡವರಿಂದ ಶತ್ರುರಾಜರ ಪರಾಭವವೂ ಹೊರಭಿತ್ತಿಯಲ್ಲಿ ಚಿತ್ರಿತವಾಗಿವೆ (೧೯೩೧ನೆಯ ವರ್ಷದ ವರದಿ, ಪುಟ ೧೧). ಅರ್ಜುನನು ಮತ್ಸ್ಯಯಂತ್ರವನ್ನು ಭೇದಿಸುವುದೂ ದ್ರೌಪದಿ ಅವನಿಗೆ ಮಾಲೆಯನ್ನು ಹಾಕುವುದೂ ಬಸ್ರಾಳಿನ ಮಲ್ಲಿಕಾರ್ಜುನ ದೇವಾಲಯದ ನವರಂಗದ ವಾಯುವ್ಯಭಿತ್ತಿಯಲ್ಲಿ ಚಿತ್ರಿತವಾಗಿವೆ. (೧೯೩೪ನೆಯ ವರ್ಷದ ವರದಿ. ಪುಟ ೪೨. ಇದೇ ೪೨ ನೆಯ ಪುಟದಲ್ಲಿ ಇದರ ಪಡಿಯಚ್ಚು ಮುದ್ರಿತವಾಗಿದೆ). ಹಾಸನದ ಡಿಸ್ಟ್ರಿಕ್ಟು ಹಾಸನದ ತಾಲ್ಲೋಕು ಕೋರವಂಗಲದ ಬೂಚೇಶ್ವರ ದೇವಾಲಯದ ತಳಹದಿಯ ಮೇಲೆ ಪೂರ್ವಮುಖದ ಭಿತ್ತಿಯಲ್ಲಿಯೂ ಅರ್ಜುನನ ಮತ್ಸ್ಯ ಯಂತ್ರ ಭೇದನವು ಚಿತ್ರಿತವಾಗಿದೆ. (೧೯೩೩ನೆಯ ವರ್ಷದ ವರದಿ, ಪುಟ ೪೬. ಇದೇ ಪುಟದ ಪಕ್ಕದಲ್ಲಿ ಈ ಚಿತ್ರದ ಪಡಿಯಚ್ಚು ಮುದ್ರಿತವಾಗಿದೆ. ಇದರಲ್ಲಿ ಮತ್ಸ್ಯಾಕಾರದ ಲಕ್ಷ್ಯವನ್ನು ಸ್ಫುಟವಾಗಿ ಕಾಣಬಹುದು.). ಅದೇ ಹಾಸನ ಡಿಸ್ಟ್ರಿಕ್ಟಿನ ಚನ್ನರಾಯಪಟ್ಟಣದ ತಾಲ್ಲೋಕಿನ ನುಗ್ಗಿಹಳ್ಳಿಯ ಲಕ್ಷ್ಮೀನರಸಿಂಹ ದೇವಸ್ಥಾನದ ತಳಹದಿಯ ಮೇಲೆ ಉತ್ತರ ದಿಕ್ಕಿನ ಗೂಡಿನಲ್ಲಿ ಅರ್ಜುನನು ಎಣ್ಣೆಯ ಪಾತ್ರೆಯಲ್ಲಿ ಮತ್ಸ್ಯಯಂತ್ರದ ಪ್ರತಿ ಬಿಂಬವನ್ನು ನೋಡಿ ಲಕ್ಷ್ಯಭೇದನಮಾಡುವುದೂ ಅವನ ಹನುಮಧ್ವಜವೂ ದ್ರೌಪದಿ ಮಾಲೆಯನ್ನು ಹಿಡಿದು ಅವನ ಎಡಕ್ಕೆ ನಿಂತಿರುವುದೂ ಚಿತ್ರವಾಗಿವೆ. (೧೯೩೩ನೆಯ ವರ್ಷದ ವರದಿ, ಪುಟ ೨೭) ಕೋರವಂಗಲದ ಬೂಚೇಶ್ವರದೇವಾಲಯವು ಹೊಯ್ಸಳರಾಜದ ೧ನೆಯ ನರಸಿಂಹನ ಅಧಿಕಾರಿಯಾದ ಬೂಚಿರಾಜನಿಂದ ಕ್ರಿ. ಶ. ೧೧೭೩ರಲ್ಲಿ ಪ್ರತಿಷ್ಠಿತವಾಯಿತು. ನುಗ್ಗಿಹಳ್ಳಿಯ ಲಕ್ಷ್ಮೀನರಸಿಂಹದೇವಾಲಯವು ಕ್ರಿ. ಶ. ೧೨೪೬ರಲ್ಲಿ ಹೊಯ್ಸಳರಾಜನಾದ ಸೋಮೇಶ್ವರನ ಅಧಿಕಾರಿಯಾದ ಬೊಮ್ಮಣ್ಣ ದಣ್ಣಾಯಕನಿಂದ ನಿರ್ಮಿತವಾಯಿತು. (ಅದೇ ವರದಿ, ಪುಟ ೨೦,೪೫). ಮೈಸೂರು ಡಿಸ್ಟ್ರಿಕ್ಟು ಹೆಗ್ಗಡದೇವನಕೋಟೆ ತಾಲ್ಲೋಕು ಮುಳ್ಳೂರುಗ್ರಾಮದ ಹೊಯ್ಸಳ ಶಿಲ್ಪದ ರೀತಿಯ ಲಕ್ಷ್ಮೀಕಾಂತ ದೇವಾಲಯದ ಭಿತ್ತಿಯಲ್ಲಿ ಮತ್ಸ್ಯಯಂತ್ರ ಭೇದನದ ವಿಗ್ರಹವು ಕೊರೆಯಲ್ಪಟ್ಟದೆ. (೧೯೩೭ನೆಯ ವರದಿ, ಪುಟ ೧೨).

ತೈಲಪಾತ್ರೆಯಲ್ಲಿ ಲಕ್ಷ್ಯವನ್ನು ನೋಡಿದುದೂ ಲಕ್ಷ್ಯವು ಮತ್ಸ್ಯದಂತಿದ್ದುದೂ ಕುಮಾರವ್ಯಾಸನ ಭಾರತದಲ್ಲಿ ಉಕ್ತವಾಗಿದೆ.

ಸ್ವಯಂವರದ ತರುವಾಯ ಪಾಂಡವರೈವರೂ ದ್ರೌಪದಿಯನ್ನು ವಿವಾಹವಾಗಿ ಕೆಲವು ಕಾಲ ದ್ರುಪದನಪಟ್ಟಣದಲ್ಲಿದ್ದು ಅನಂತರ ಧೃತರಾಷ್ಟ್ರನ ಅಪ್ಪಣೆಯಂತೆ ಹಸ್ತಿನಾಪುರಕ್ಕೆ ಹೋಗಿ ಅರ್ಧರಾಜ್ಯವನ್ನು ಪಡೆದು ಇಂದ್ರಪ್ರಸ್ಥದಲ್ಲಿ ರಾಜ್ಯವಾಳತೊಡಗಿದರು. ಹೀಗೆ ಕೆಲವು ವರ್ಷಗಳು ಕಳೆದ ಮೇಲೆ ನಾರದಮುನಿಯ ಉಪದೇಶದಂತೆ ದ್ರೌಪದಿಯನ್ನು ಧರ್ಮರಾಯನೊಡನೆ ಏಕಾಂತದಲ್ಲಿ ಕಂಡ ಸಲುವಾಗಿ ಅರ್ಜುನನು ತೀರ್ಥಯಾತ್ರೆಗೆ ಹೊರಟನು. ಅನೇಕ ತೀರ್ಥಗಳಲ್ಲಿ ಸ್ನಾನಮಾಡಿ ಸಂಚರಿಸುತ್ತ ಕೊನೆಗೆ ಅವನು ದ್ವಾರಕೆಗೆ ಹೋಗಿ ಅಲ್ಲಿ ಕೃಷ್ಣನು ಹೇಳಿದಂತೆ ಅವನ ತಂಗಿಯಾದ ಸುಭದ್ರೆಯನ್ನು ವರಿಸಿ ರಥದಲ್ಲಿ ಕುಳ್ಳಿರಿಸಿಕೊಂಡು ಇಂದ್ರಪ್ರಸ್ಥಕ್ಕೆ ಹೊರಟನು. ಹೀಗೆ

ಅವನನ್ನು ಅಟ್ಟಿಕೊಂಡು ಯಾದನ ವೀರರು ಹೊರಡಲು ಸಿದ್ಧರಾದರು. ಬಲರಾಮನೂ ಸಿದ್ಧನಾಗಿ ಕೃಷ್ಣನ ಅಭಿಪ್ರಾಯವನ್ನು ಕೇಳಲು ಅವನು ಸುಭದ್ರೆಗೆ ಅರ್ಜುನನಿಗಿಂತ ಉತ್ತಮರಾದ ವರರಾರೂ ಇಲ್ಲವೆಂದೂ ಹೇಳಿದನು. ಬಲರಾಮನು ಯುದ್ಧಪ್ರಯತ್ನ ವನ್ನು ನಿಲ್ಲಿಸಿ ಅರ್ಜುನನಿಗೆ ತಕ್ಕ ಬಳುವಳಿಯನ್ನು ಕೊಟ್ಟನು. ಅರ್ಜುನನ ಸುಭದ್ರಾ ಹರಣವೂ ಬಲರಾಮನು (?) ಅವನನ್ನು ಬೆನ್ನಟ್ಟಿ ಹೋದುದೂ ಬೆಳವಾಡಿಯ ವೀರ ನಾರಾಯಣ ದೇವಾಲಯದ ತಳಹದಿಯಲ್ಲಿ ಚಿತ್ರಿತವಾಗಿವೆ. (೧೯೩೩ನೆಯ ವರ್ಷದ ವರದಿ, ಪುಟ ೮೪).

ಅರ್ಜುನನು ಸುಭದ್ರೆಯೊಡನೆ ಇಂದ್ರಪ್ರಸ್ಥಕ್ಕೆ ಹಿಂತಿರುಗಿ ಬಂದಮೇಲೆ ಒಂದು ದಿನ ಕೃಷ್ಣನೊಡನೆ ಯಮುನಾತೀರದಲ್ಲಿ ವಿಹಾರಮಾಡಬೇಕೆಂದು ಹೊರಟನು. ಆಗ ಅಲ್ಲಿಗೆ ಅಗ್ನಿದೇವನು ಬ್ರಾಹ್ಮಣ ವೇಷದಲ್ಲಿ ಬಂದು ತಾನು ಅಗ್ನಿಯೆಂದೂ ಖಾಂಡವ ವನವನ್ನು ತಾನು ತಿನ್ನಬೇಕೆಂದೂ ಆದರೆ ಇಂದ್ರನು ಅದನ್ನು ಕಾಪಾಡಿಕೊಂಡಿರುವುದ ರಿಂದ ಅದು ಸಾಧ್ಯವಲ್ಲವೆಂದೂ ಅರ್ಜುನನು ಸಹಾಯವಾದರೆ ತಾನು ವನವನ್ನು ಸುಡಲಾಗುವುದೆಂದೂ ಹೇಳಿದನು. ಆಗ ಅರ್ಜುನನು ಅಗ್ನಿಯ ರಕ್ಷಣೆಗೊಪ್ಪಿ ಅದಕ್ಕೆ ಅನುಕೂಲವಾದ ಗಾಂಡೀವವೆಂಬ ಧನುಸ್ಸನ್ನೂ ಅಕ್ಷಯತೂಣೀರಗಳನ್ನೂ ದಿವ್ಯಾಶ್ವ ಗಳಿಂದ ಕೂಡಿದ ರಥವನ್ನೂ ಪಡೆದನು. ಅಗ್ನಿ ಕಾಡನ್ನು ದಹಿಸಲಾರಂಭಿಸಲು ಕಿಚ್ಚಿನ ಎರಡು ಕಡೆಯೂ ಎರಡು ರಥಗಳಲ್ಲಿ ಕೃಷ್ಣಾರ್ಜುನರು ಕುಳಿತು ಕಿಚ್ಚಿನಿಂದ ಪ್ರಾಣಿಗಳು ತಪ್ಪಿಸಿಕೊಂಡು ಹೋಗದ ಹಾಗೆ ನೋಡಿಕೊಂಡರು. ಆಗ ದೇವೇಂದ್ರನು ಬಲವಾಗಿ ಮಳೆಗರೆಯಲು ಅರ್ಜುನನು ವನದ ಮೇಲೆ ಶರಪಂಜರವನ್ನು ಕಟ್ಟಿದ್ದರಿಂದ ಅಗ್ನಿಗೆ ಹಾನಿಯಾಗಲಿಲ್ಲ ಅನಂತರ ದೇವೇಂದ್ರನು ಐರಾವತದ ಮೇಲೆ ಕುಳಿತು ದೇವತೆಗಳೊಡನೆ ಅರ್ಜುನನ ಮೇಲೆ ಆಯುಧಗಳನ್ನು ಪ್ರಯೋಗಿಸಿದರೂ ಪ್ರಯೋಜನ ವಾಗದೆ ಅವನೊಂದಿಗೆ ಸ್ನೇಹವನ್ನು ಮಾಡಿಕೊಂಡನು. ಹೀಗೆ ಅರ್ಜುನನು ಕೃಷ್ಣನೊಡ ಗೂಡಿ ಅಗ್ನಿಯ ಅಪೇಕ್ಷೆಯನ್ನು ಸಲ್ಲಿಸುವುದೂ ಅರ್ಜುನನು ಖಾಂಡವವನ ದಹನಕ್ಕನು ಕೂಲಮಾಡುವುದೂ ಕೃಷ್ಣಾರ್ಜುನರು ದೇವೇಂದ್ರನನ್ನು ಸೋಲಿಸುವುದೂ ಅಮೃತಾ ಪುರದ ಅಮೃತೇಶ್ವರದೇವಾಲಯದ ಉತ್ತರದ್ವಾರದ ಬಳಿ ಚಿತ್ರಿತವಾಗಿದೆ. (೧೯೩೧ನೆಯ ವರ್ಷದ ವರದಿ, ಪುಟ ೧೧).

ಕೆಲಕಾಲದ ಮೇಲೆ ಖಾಂಡವದಹನಕಾಲದಲ್ಲಿ ಕೃಷ್ಣಾರ್ಜುನರ ದಯೆಯಿಂದ ಕಿಚ್ಚಿಗೆ ಸಿಕ್ಕದೆ ಪಾರಾಗಿದ್ದ ಮಯನು ಧರ್ಮರಾಯನಿಗೆ ಇಂದ್ರಪ್ರಸ್ಥಪುರದಲ್ಲಿ ದೇವ ಸಭೆಯಂತೆ ಶೋಭಿಸುತ್ತಿದ್ದ ದಿವ್ಯವಾದ ಸಭಾಭವನವನ್ನು ಕಟ್ಟಿಕೊಟ್ಟನು. ಧರ್ಮ ರಾಯನು ಆ ಸಭೆಯಲ್ಲಿ ಕುಳಿತು ರಾಜಸೂಯವೆಂಬ ಯಾಗವನ್ನು ಮಾಡಿದನು. ಅವನ ಅಪ್ಪಣೆಯಂತೆ ಅವನ ತಮ್ಮಂದಿರು ನಾಲ್ಕು ದಿಕ್ಕುಗಳಲ್ಲಿದ್ದ ರಾಜರಲ್ಲರನ್ನೂ ಗೆದ್ದು ಅವ ರಿಂದ ಹೇರಳವಾದ ಕಪ್ಪಕಾಣಿಕೆಗಳನ್ನು ಸ್ವೀಕರಿಸಿ ಧರ್ಮರಾಯನಿಗೆ ಒಪ್ಪಿಸಿದರು. ಆ ಮಹಾಯಾಗವು ಆರಂಭವಾಯಿತು. ಅದಕ್ಕೆ ಬಂದ ಋತ್ವಿಕ್ಕುಗಳಲ್ಲಿ ವ್ಯಾಸಮುಹ

ಷ್ಠಿಯೇ ಮುಖ್ಯನಾಗಿದ್ದನು. ಯಾಗದ ಕೊನೆಯಲ್ಲಿ ಧರ್ಮರಾಯನು ಭೀಷ್ಮನು ಹೇಳಿದಂತೆ ಕೃಷ್ಣನಿಗೆ ಅಗ್ರಪೂಜೆಯನ್ನು ಮಾಡಿದನು. ಅನೇಕ ಮಂದಿ ರಾಜರು ಸೇರಿದ್ದ ಆ ಮಹಾಸಭೆಯಲ್ಲಿ ಶಿಶುಪಾಲನೆಂಬುವನಿಗೆ ಇದು ಸರಿಬೀಳದೆ ಕೃಷ್ಣನನ್ನು ಸ್ವೇಚ್ಛೆಯಾಗಿ ಬಯ್ದು ಅವನ ಮೇಲೆ ಯುದ್ಧಕ್ಕೆ ಸನ್ನದ್ಧನಾದನು. ಆಗ ಕೃಷ್ಣನು ಅವನ ದುಷ್ಕೃತ್ಯಗಳನ್ನೆಲ್ಲಾ ತಿಳಿಸಿ ತನ್ನ ಚಕ್ರದಿಂದ ಅವನನ್ನು ಸಂಹರಿಸಿದನು. ಹೀಗೆ ವ್ಯಾಸಮುನಿಯ ಮೇಲ್ವಿಚಾರಣೆಯಲ್ಲಿ ಧರ್ಮರಾಯನು ರಾಜಸೂಯಯಾಗ ವನ್ನು ಮಾಡುವುದೂ ಕೃಷ್ಣನು ಶಿಶುಪಾಲನ ವಧೆಯನ್ನು ಮಾಡುವುದೂ ಅದೇ ಅಮೃತೇಶ್ವರ ದೇವಾಯದ ಉತ್ತರದ್ವಾರದ ಬಳಿ ಚಿತ್ರಿತವಾಗಿವೆ. (೧೯೩೧ನೆಯ ವರ್ಷದ ವರದಿ, ಪುಟ ೧೧)

ರಾಜಸೂಯಯಾಗದಲ್ಲಿ ಧರ್ಮರಾಯನ ಸಂಪತ್ತನ್ನೂ ವೈಭವವನ್ನೂ ನೋಡಿ ಹೊಟ್ಟೆಯ ಕಿಚ್ಚಿನಿಂದ ತುಂಬಿದ ದುರ್ಯೋಧನನು ಹಸ್ತಿನಾವತಿಗೆ ಹೋಗಿ ಶಕುನಿ ಕರ್ಣ ರೊಡನೆ ಆಲೋಚಿಸಿ ಪಾಂಡವರನ್ನು ದ್ಯೂತದಲ್ಲಿ ಸೋಲಿಸಿ ಅವರ ಸಮಸ್ತ ರಾಜ್ಯೈ ಶ್ವರ್ಯವನ್ನೂ ಅಪಹರಿಸಬೇಕೆಂದು ಸಂಚುಮಾಡಿದನು. ಅವನ ಅಪೇಕ್ಷೆಯಂತೆ ಧೃತರಾಷ್ಟ್ರನು ವಿದುರನನ್ನು ಕಳುಹಿಸಿ ಧರ್ಮರಾಯನು ವಿನೋದಕ್ಕಾಗಿ ಕೌರವರ ಸಭೆಯಲ್ಲಿ ದ್ಯೂತವಾಡುವಂತೆ ಹಸ್ತಿನಾವತಿಗೆ ಕರಯಿಸಿದನು. ಧರ್ಮರಾಯನು ದೊಡ್ಡಪ್ಪನ ಅಪ್ಪಣೆಯನ್ನು ಮೀರದೆ ತನ್ನ ತಮ್ಮಂದಿರು ತಾಯಿ ಹೆಂಡತಿ ಮಕ್ಕಳೊಡನೆ ಚತುರಂಗಸೈನ್ಯ ಸಮೇತನಾಗಿ ಹಸ್ತಿನಾವತಿಗೆ ಬಂದು ಸಭೆಯಲ್ಲಿ ದ್ಯೂತಕ್ಕೆ ಕುಳಿತನು. ಆ ಸಭೆಯಲ್ಲಿ ಧೃತರಾಷ್ಟ್ರನೂ ದ್ರೋಣನೂ ಭೀಷ್ಮನೂ ವಿದುರನೂ ಬಾಹ್ಲೀಕ ಮೊದಲಾದ ರಾಜರೂ ಸೇರಿದ್ದರು. ದುರ್ಯೋಧನನೂ ಅವನ ತಮ್ಮಂದಿರೂ ಕರ್ಣನೂ ಶಕುನಿಯೂ ಒಂದು ಕಡೆ ಪಾಂಡವರೆಲ್ಲರೂ ಒಂದು ಕಡೆ ಹೀಗೆ ಕುಳಿತರು. ಪಗಡೆ ಯಾಟಕ್ಕೆ ಪ್ರಾರಂಭವಾಯಿತು. ಶಕುನಿಯು ಕಪಟದ್ಯೂತನಲ್ಲಿ ನಿಪುಣನಾದ್ದರಿಂದ ಧರ್ಮರಾಯನನ್ನು ಸೋಲಿಸಿ ಅವನು ಪಣವಾಗೊಡ್ಡಿದ ಸಮಸ್ತೈಶ್ವರ್ಯಯುಕ್ತ ವಾದ ರಾಜ್ಯವನ್ನೂ ಅವನ ಸಹೋದರರನ್ನೂ ಅವನನ್ನೂ ಪತ್ನಿಯಾದ ದ್ರೌಪದಿ ಯನ್ನೂ ದ್ಯೂತದಲ್ಲಿ ಗೆದ್ದನು ಪಾಂಡವರು ದಾಸ್ಯವನ್ನು ಹೊಂದಬೇಕಾಯಿತು. ಇಷ್ಟಕ್ಕೆ ತೃಪ್ತಿಪಡದೆ ದುರ್ಯೋಧನನ ಅಪ್ಪಣೆಯಂತೆ ದುಶ್ಶಾಸನನು ರಜಸ್ವಲೆಯಾಗಿ ಒಂಟಿ ಬಟ್ಟೆಯಲ್ಲಿದ್ದ ದ್ರೌಪದಿಯನ್ನು ತುರುಬಿನಿಂದ ಹಿಡಿದು ಸಭೆಗೆ ಎಳೆದು ತಂದು ದಾಸಿಯೆಂದು ಅವಳನ್ನು ಹಿಯ್ಯಾಳಿಸಿದನು. ಅನಂತರ ಪಾಂಡವರು ತಮ್ಮ ಉತ್ತ ರೀಯಗಳನ್ನು ಕೌರವರ ಇಚ್ಛೆಯಂತೆ ತೆಗೆದು ಎಸೆದರು. ಆಗ ದುಶ್ಶಾಸನನು ಬಲಾತ್ಕಾರ ದಿಂದ ದ್ರೌಪದಿಯ ಬಟ್ಟೆಯನ್ನು ಸೆಳೆದುಕೊಳ್ಳಲು, ದ್ರೌಪದಿ ಮಾನಭಂಗವನ್ನು ತಪ್ಪಿಸಿಕೊಳ್ಳಲು ಶ್ರೀಕೃಷ್ಣನನ್ನು ಪ್ರಾರ್ಥಿಸಿದುದರಿಂದ ಅವಳಿಗೆ ಅಕ್ಷಯವಸ್ತ್ರವುಂಟಾಗಿ ದುಶ್ಶಾಸನನು ಎಳೆದಷ್ಟೂ ಬೇರ ಬೇರೆ ಸೀರೆಗಳು ಒಳಗೆ ಕಾಣಿಸಿಕೊಳ್ಳುತ್ತಿದ್ದುವು. ಹೀಗೆ ದ್ರೌಪದಿ ವಿಪತ್ತಿನಿಂದ ಪಾರಾದಳು. ಬಳಿಕ ಭೀಮನು ಭಯಂಕರವಾದ

ಪ್ರತಿಜ್ಞೆಯನ್ನು ಮಾಡಿದುದರಿಂದಲೂ ದುರ್ನಿಮಿತ್ತಗಳು ತೋರಿದುದರಿಂದಲೂ ಧೃತ ರಾಷ್ಟ್ರನು ದ್ರೌಪದಿಯನ್ನು ಮನ್ನಿಸಿ ಪಾಂಡವರನ್ನು ದಾಸ್ಯಮುಕ್ತರನ್ನಾಗಿಮಾಡಿ ಮೊದಲಿನಂತೆ ರಾಜ್ಯವನ್ನನುಭವಿಸಲು ಇಂದ್ರಪ್ರಸ್ಥಕ್ಕೆ ಕಳುಹಿಸಿಕೊಟ್ಟನು. ಹೃದಯ ವಿದ್ರಾವಕವಾದ ಈ ಕಪಟದ್ಯೂತವೂ ದ್ರೌಪದಿಯ ವಸ್ತ್ರಾಕರ್ಷಣವೂ ಅಮೃತಾಪುರದ ಅಮೃತೇಶ್ವರದೇವಾಲಯದ ಉತ್ತರ ದ್ವಾರದ ಬಳಿ ಚಿತ್ರಿತವಾಗಿವೆ. (೧೯೩೧ನೆಯ ವರ್ಷದ ವರದಿ, ಪುಟ ೧೧) ಅದೇ ವರದಿಯ ೯ನೆಯ ಪುಟದಲ್ಲಿ ದ್ರೌಪದಿಯ ವಸ್ತ್ರಾಪ ಕರ್ಷಣದ ಚಿತ್ರದ ಪಡಿಯಚ್ಚು ಮುದ್ರಿತವಾಗಿದೆ. ದ್ಯೂತದ ಸಭೆಯ ಚಿತ್ರವೂ ಅದರ ಕೆಳಗೆ ಹಸ್ತಿನಾಪುರವೆಂಬ ವಿಲಾಸವೂ ಸೋಮನಾಥಪುರದ ಕೇಶವದೇವಾ ಲಯದ ತಳಹದಿಯಲ್ಲಿ ಕೊರೆಯಲ್ಪಟ್ಟಿದೆ. (೧೯೩೨ನೆಯ ವರ್ಷದ ವರದಿ, ಪುಟ ೨೩) ಧರ್ಮರಾಯನು ಪಗಡೆಯಾಟದಲ್ಲಿ ರಾಜ್ಯವನ್ನು ಕಳೆದುಕೊಂಡುದೂ ದ್ರೌಪದಿಯ ವಸ್ತ್ರಾಪಕರ್ಷಣವೂ ಹೊಸ ಹೊಳಲಿನ ಲಕ್ಷ್ಮೀನಾರಾಯಣದೇವಾಲಯದ ಹೊರ ಭಿತ್ತಿಯಲ್ಲೂ ಚಿತ್ರಿತವಾಗಿದೆ. (೧೯೩೩ನೆಯ ವರ್ಷದ ವರದಿ, ಪುಟ ೭)

ಪಾಂಡವರು ಇಂದ್ರಪ್ರಸ್ಥವನ್ನು ಸೇರಿ ಸ್ವಲ್ಪಕಾಲದಲ್ಲಿಯೇ ಧೃತರಾಷ್ಟ್ರನಿಂದ ಮರಳಿಯೂ ಹಸ್ತಿನಾಪುರಕ್ಕೆ ಕರೆಸಲ್ಪಟ್ಟು ಶಕುನಿಯೊಡನೆ ದ್ಯೂತವಾಡಿ ಸೋತು ಹನ್ನೆರಡು ವರ್ಷ ವನವಾಸವನ್ನೂ ಅನಂತರ ಒಂದು ವರ್ಷ ಅಜ್ಞಾತವಾಸವನ್ನೂ ಆ ಅಜ್ಞಾತವಾಸದಲ್ಲಿ ಪಾಂಡವರಾಗಲಿ ದ್ರೌಪದಿಯಾಗಲಿ ವಾಸಿಸುತ್ತಿರುವುದನ್ನು ದುರ್ಯೋಧನನ ಕಡೆಯವರು ಕಂಡುಹಿಡಿದರೆ ತಿರುಗಿ ಹನ್ನೆರಡುವರ್ಷ ವನವಾಸ ಮಾಡಬೇಕೆಂಬುದನ್ನೂ ಒಪ್ಪಿಕೊಂಡು ಪಾಂಡವರೂ ದ್ರೌಪದಿಯೂ ನಾರುಬಟ್ಟೆ ಯನ್ನುಟ್ಟು ಕಾಡಿಗೆಹೊರಟು ಹೋದರು. ಹೀಗೆ ಕಷ್ಟದಿಂದ ಅವರು ಅರಣ್ಯವಾಸವನ್ನು ಮಾಡುತ್ತಿದ್ದಾಗ ಭೀಷ್ಮದ್ರೋಣ ಕರ್ಣರ ಅಸ್ತ್ರಸಾಮರ್ಥ್ಯವನ್ನರಿತಿದ್ದ ಧರ್ಮರಾಯನು ತಮ್ಮನಾದ ಅರ್ಜುನನನ್ನು ಧನುರ್ಧಾರಿಯಾಗಿ ಉತ್ತರ ದಿಕ್ಕಿಗೆ ಹೋಗಿ ಘೋರವಾದ ತಪಸ್ಸಿನಿಂದ ದೇವತೆಗಳನ್ನು ಒಲಿಸಿಕೊಂಡು ದಿವ್ಯಾಸ್ತ್ರಗಳನ್ನು ಸಂಪಾದಿಸಬೇಕೆಂದು ನಿಯಮಿಸಿ ಕಳುಹಿಸಿದನು. ಆಗ ಅರ್ಜುನನು ಸಹೋದರರನ್ನೂ ದ್ರೌಪದಿಯನ್ನೂ ಬೀಳ್ಕೊಂಡು ಇಂದ್ರಕೀಲ ಪರ್ವತಕ್ಕೆ ಹೋಗಿ ಅಲ್ಲಿ ದೇವೇಂದ್ರನನ್ನು ಕಂಡು ಅವನು ಹೇಳಿದಂತೆ ಪರಮೇಶ್ವರನನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡತೊಡಗಿದನು. ಅವನು ಒಂದೇ ಕಾಲಿನ ಮೇಲೆ ನಿಂತು ಮಾಡುತ್ತಿದ್ದ ಘೋರತಪಸ್ಸನ್ನು ನೋಡಿ ತಪೋವನದಲ್ಲಿದ್ದ ಮುನಿಗಳೂ ವಿಸ್ಮಿತರಾದರು. ಆಗ ಅರ್ಜುನನ ತಪಸ್ಸಿಗೆ ಮೆಚ್ಚಿ ಪಾರ್ವತೀಪರಮೇಶ್ವರರು ಕಿರಾತವೇಷವನ್ನು ಧರಿಸಿ ಅವನ ಮುಂದೆ ಬಂದು ನಿಂತರು. ಅಷ್ಟರಲ್ಲಿ ಪರಮೇಶ್ವರನು ಅರ್ಜುನನ ಕಡೆಗೆ ನುಗ್ಗಿಬರುತ್ತಿದ್ದ ಹಂದಿಯ ಮೇಲೆ ಬಾಣ ವನ್ನೆಸೆಯಲು ಅದೇ ಕಾಲದಲ್ಲಿಯೇ ಅರ್ಜುನನೂ ಅದರಮೇಲೆ ಶರವನ್ನು ಪ್ರಯೋಗಿಸಿ ಕೊಂದುಹಾಕಿದನು. ಹಂದಿಯನ್ನು ಕೊಂದವರಾರೆಂಬ ವಿಷಯದಲ್ಲಿ ಅವರಿಬ್ಬರಿಗೂ ವಾಗ್ವಾದವಾಗಿ ಕೊನೆಗೆ ಯುದ್ಧವು ತೊಡಗಿತು. ಅರ್ಜುನನು ಬಿಟ್ಟ ಬಾಣಗಳನ್ನೂ

ಅವನ ಧನುಸ್ಸನ್ನೂ ನುಂಗಿ ಪರಮೇಶ್ವರನು ಅವನನ್ನು ಮುಷ್ಟಿಯುದ್ಧದಲ್ಲಿ ಸೋಲಿಸಿ ಕೊನೆಗೆ ಅವನ ತಪಸ್ಸಿಗೆ ಮೆಚ್ಚಿ ಯಾರಿಂದಲೂ ಅಜೇಯವಾದ ಪಾಶುಪತಾಸ್ತ್ರವನ್ನು ದಯಪಾಲಿಸುವನು. ಈ ಸಂಗತಿಗಳನ್ನೊಳಗೊಂಡ ಚಿತ್ರವು ಹಳೆಯಬೀಡು ಹೊಯ್ಸಳೇಶ್ವರದೇವಾಲಯದ ದಕ್ಷಿಣದ್ವಾರದ ಬಳಿ ಚಿತ್ರಿತವಾಗಿದೆ. ಈ ಚಿತ್ರವನ್ನು ಕೊರೆದವನ ಹೆಸರು ಬಲಣ. ಇದರಲ್ಲಿ ಅರ್ಜುನನು ಅರಣ್ಯಕ್ಕೆ ಹೋಗಿ ಮುನಿಗಳನ್ನೂ, ಎಲೆಯುಡಿಗೆಯುಟ್ಟು ಕಾಡಕ್ಕಿಯನ್ನು ಕುಟ್ಟುತ್ತಿದ್ದ ತಾಪಸಿಯರನ್ನೂ ಸಂದರ್ಶಿಸಿ ಬಳಿಕ ಇಂದ್ರಕೀಲ ಪರ್ವತದಲ್ಲಿ ಇತರ ಋಷಿಗಳ ಜೊತೆಗೆ ಒಂದು ಕಾಲಮೇಲೆ ನಿಂತು ತಪಶ್ಚರಣೆಗೆಯ್ಯುವುದೂ ಒಂದು ಹಂದಿ ಅವನ ಕಡೆಗೆ ನುಗ್ಗುವುದೂ ಕಿರಾತಿಯ ವೇಷವನ್ನು ಧರಿಸಿದ ಪಾರ್ವತಿಯೊಡನೆ ತಾನೂ ಕಿರಾತವೇಷವನ್ನು ಧರಿಸಿ ಅಲ್ಲಿಗೆ ಬಂದ ಪರಮೇಶ್ವರನೊಡನೆ ಅರ್ಜುನನು ಕಾದುವುದೂ ಕಾಣಬರುತ್ತವೆ. (೧೯೩೦ನೆಯ ವರ್ಷದ ವರದಿ, ಪುಟ ೪೧) ಇದರ ಪಡಿಯಚ್ಚು ಅದೇ ವರದಿಯ ೪೪ನೆಯ ಪುಟದ ಪಕ್ಕದಲ್ಲಿ ಮುದ್ರಿತವಾಗಿದೆ. ಅದೇ ದೇವಾಲಯದ ಮತ್ತೊಂದು ಕಡೆ ದಕ್ಷಿಣದ ಗುಡಿಯ ಉತ್ತರದ ಗೂಡಿನಲ್ಲಿ ಕೇತಣ್ಣನೆಂಬುವನಿಂದ ಕೊರೆಯಲ್ಪಟ್ಟ ಚಿತ್ರದಲ್ಲಿ ಮೇಲಿನ ಸಂಗತಿಗಳಲ್ಲದೆ ಅರ್ಜುನನು ತನ್ನ ವರವನ್ನು ಬೀಳ್ಕೊಡುವುದೂ ಋಷಿಗಳು ಲಿಂಗವನ್ನು ಪೂಜೆಮಾಡುವುದೂ ಅರ್ಜುನನು ಶಿವನನ್ನು ಸೋಲಿಸುವುದೂ ಪಾರ್ವತಿಯು ಯುದ್ಧವನ್ನು ನಿಲ್ಲಿಸಿ ಪಾಶುಪತಾಸ್ತ್ರವನ್ನು ಶಿವನಿಂದ ಅರ್ಜುನನಿಗೆ ಕೊಡಿಸುವುದೂ ಚಿತ್ರಿತವಾಗಿದೆ. (ಅದೇ ವರದಿ, ಪುಟ ೪೪) ಅರ್ಜುನನು ಇಂದ್ರಕೀಲ ಪರ್ವತದಲ್ಲಿ ತಪಸ್ಸುಮಾಡುವುದೂ ಹಂದಿಗೋಸ್ಕರ ಕಾದಾಡಿದ ಶಿವನನ್ನು ಸೋಲಿಸಿ ಅವನ ದಯೆಯಿಂದ ಪಾಶುಪತಾಸ್ತ್ರವನ್ನು ಸಂಪಾದಿಸುವುದೂ ಅಮೃತಾಪುರದ ಅಮೃತೇಶ್ವರದೇವಾಲಯದ ಉತ್ತರದ್ವಾರದ ಬಳಿ ಚಿತ್ರಿತವಾಗಿದೆ (೧೯೩೧ನೆಯ ವರ್ಷದ ವರದಿ, ಪುಟ ೧೧) ಕಿರಾತವೇಷಧಾರಿಯಾದ ಶಿವನೊಡನೆ ಅರ್ಜುನನು ಯುದ್ಧಮಾಡುವುದೂ ಅವನಿಂದ ವರವನ್ನು ಪಡೆಯುವುದೂ ಹೊಸಹೊಳಲಿನ ಲಕ್ಷ್ಮೀನಾರಾಯಣ ದೇವಾಲಯದ ಹೊರಭಿತ್ತಿಯಲ್ಲಿ ಚಿತ್ರಿತವಾಗಿದೆ. [೧೯೩೩ನೆಯ ವರ್ಷದ ವರದಿ, ಪುಟ ೬) ಅರ್ಜುನನ ತಪಸ್ಸೂ ಹಂದಿಯನ್ನು ಬಾಣದಿಂದ ಹೊಡೆಯುವುದೂ ಶಿವನೊಂದಿಗೆ ಕಾದಾಡಿ ಅವನಿಂದ ಪಾಶುಪತಾಸ್ತ್ರವನ್ನು ಸಂಪಾದಿಸುವುದೂ ಬಸ್ರಾಳಿನ ಮಲ್ಲಿಕಾರ್ಜುನ ದೇವಾಲಯದ ನವರಂಗದ ವಾಯುವ್ಯದಲ್ಲಿ ಹೊರಭಿತ್ತಿಯಲ್ಲಿ ಚಿತ್ರಿತವಾಗಿದೆ. (೧೯೩೪ನೆಯ ವರ್ಷದ ವರದಿ, ಪುಟ ೩೯). ಅರ್ಜುನನ ತಪಸ್ಸೂ ಹಂದಿಗಾಗಿ ಶಿವನೊಂದಿಗೆ ಅವನು ಬಿಲ್ಲಿನಿಂದಲೂ ಕತ್ತಿಯಿಂದಲೂ ಬಂಡೆಗಳನ್ನೆಸೆದೂ ಕಾದಾಡುವಂತೆಯೂ ಕೊನೆಗೆ ಅವರಿಬ್ಬರೂ ಬಾಹುಯುದ್ಧವನ್ನು ಮಾಡುವುದೂ ಪಾರ್ವತಿಯೂ ಅದನ್ನು ದಿಟ್ಟಿಸುವುದೂ ಅರ್ಜುನನು ಸೋತು ಮರಳಿಯೂ ಯುದ್ಧ ಮಾಡಲು ಸಾಮರ್ಥ್ಯವನ್ನು ಪಡೆಯುವುದಕ್ಕಾಗಿ ಶಿವಲಿಂಗವನ್ನು ಪೂಜಿಸುವುದೂ ಅನಂತರ ಪಾರ್ವತೀಪರಮೇಶ್ವರರ ನಿಜಸ್ವರೂಪವನ್ನರಿತು ಅವರಿಗೆ ನಮಸ್ಕರಿಸುವುದೂ

ಅವರು ಗಣಗಳಿಂದ ಸಮೇತರಾಗಿ ವೈಭವದಿಂದ ಕುಳಿತು ಅರ್ಜುನನಿಗೆ ಪಾಶುಪತಾಸ್ತ್ರ ವನ್ನು ದಾನಮಾಡುವುದೂ ಕಡೂರು ಡಿಸ್ಟ್ರಿಕ್ಟು ಶೃಂಗೇರಿ ಜಹಗೀರಿಯ ವಿದ್ಯಾಶಂಕರ ದೇವಾಲಯದ ಉತ್ತರದ ಭಿತ್ತಿಯಲ್ಲಿ ಚಿತ್ರಿತವಾಗಿದೆ (೧೯೩೬ನೆಯ ವರ್ಷದ ವರದಿ ಪುಟ ೨೮).

ಅರ್ಜುನನೂ ಪರಮೇಶ್ವರನೂ ಹೊಡೆದುಕೊಂದ ಹಂದಿ ಒಬ್ಬ ರಾಕ್ಷಸನ ವೇಷವೆಂದು ಮಹಾಭಾರತದಲ್ಲಿ ಹೇಳಿದೆ. ಅರ್ಜುನನೂ ಋಷಿಗಳೂ ಶಿವಲಿಂಗವನ್ನು ಪೂಜಿಸಿದಂತೆ ಭಾರತದಲ್ಲುಕ್ತವಾಗಿಲ್ಲ. ಆದರೆ ಕುಮಾರವ್ಯಾಸನ ಭಾರತದ ಅರಣ್ಯ ಪರ್ವತದಲ್ಲಿ ಅರ್ಜುನನು ಸೋತು ಮಣಲಲಿಂಗವನ್ನು ಮಾಡಿ ಪುಷ್ಪಗಳಿಂದ ಪೂಜಿಸಿ ತಿರುಗಿ ಕಿರಾತನೊಂದಿಗೆ ಯುದ್ಧಕ್ಕೆ ಸಿದ್ಧವಾಗಿ ನೋಡಲು ಅವನ ತಲೆಯ ಮೇಲೆ ಆ ಪುಷ್ಪಗಳಿದ್ದುದನ್ನು ನೋಡಿ ಅವನು ಶಿವನೆಂದು ತಿಳಿದು ಶರಣುಹೊಕ್ಕಂತೆ ವರ್ಣಿಸಿದೆ. ಅರ್ಜುನನು ಶಿವನನ್ನು ಪರಾಭವಗೊಳಿಸಿದನೆಂಬುದು ಪಂಪಭಾರತದಲ್ಲಿ ಉಲ್ಲೇಖಿತ ವಾಗಿದೆ.

ಹೀಗೆ ಅರ್ಜುನನು ಪಾಶುಪತಬಾಣವನ್ನೂ ಇತರ ಅನೇಕ ದಿವ್ಯಾಸ್ತ್ರಗಳನ್ನೂ ಸಂಪಾದಿಸಿ ಹಿಂದಕ್ಕೆ ಬಂದು ಸಹೋದರರೊಡನೆ ದ್ವೈತವನದಲ್ಲಿ ವಾಸಮಾಡು ತ್ತಿದ್ದಾಗ ಅವರ ಮುಂದೆ ತನ್ನ ಐಶ್ವರ್ಯದ ವೈಭವವನ್ನು ತೋರಿಸಿ ತಾಪಸರಂತೆ ಜೀವಿಸುತ್ತಿದ್ದ ಅವರಿಗೆ ವ್ಯಥೆಯುಂಟಾಗಬೇಕೆಂದು ಬಗೆದು ದುರ್ಯೋಧನನು ಕರ್ಣ ಶಕುನಿ ಮೊದಲಾದವರೊಡನೆ ಸಪರಿವಾರನಾಗಿ ರಾಣಿವಾಸವನ್ನೂ ಕರೆದುಕೊಂಡು ದ್ವೈತವನದ ಸರಸ್ಸಿನ ಬಳಿ ಬೀಡುಬಿಟ್ಟನು. ಆದರೆ ಅದೇ ಕಾಲದಲ್ಲಿ ಅಲ್ಲಿಗೆ ವಿಹಾರಾರ್ಥವಾಗಿ ಬಂದಿದ್ದ ಗಂಧರ್ವರಿಗೂ ಕೌರವರ ಕಡೆಗೂ ಯುದ್ಧವಾಗಿ ಗಂಧರ್ವರ ರಾಜನಾದ ಚಿತ್ರಸೇನನು ಜಯವನ್ನು ಹೊಂದಿ ಕೌರವರನ್ನೂ ಅವರ ರಾಣಿವಾಸದವರನ್ನೂ ಸೆರೆಹಿಡಿದನು ಕೌರವರ ಪರಿವಾರದಲ್ಲಿ ಕೆಲವರು ತಪ್ಪಿಸಿಕೊಂಡು ಹೋಗಿ ಯುಧಿಷ್ಠಿರನಿಗೆ ವರದಿ ಮಾಡಲು ಧರ್ಮಾತ್ಮನಾದ ಆತನು ಭೀಮಾರ್ಜುನ ರನ್ನು ಕೌರವರ ರಕ್ಷಣೆಗಾಗಿ ಕಳುಹಿಸಿದನು. ಅರ್ಜುನನೊಂದಿಗೆ ಸ್ವಲ್ಪ ಕಾದಾಡಿ ಅನಂತರ ಶರಣಾಗತನಾದ ಚಿತ್ರಸೇನನು ಧರ್ಮರಾಯನ ಅಪ್ಪಣೆಯಂತೆ ಕೌರವರ ನ್ನೆಲ್ಲಾ ಅವರ ರಾಣೀವಾಸದವರೊಂದಿಗೆ ಬಂಧವಿಮುಕ್ತರನ್ನಾಗಿ ಮಾಡಿದನು. ಈ ಸಂಗತಿಗಳು ಹಳೆಯಬೀಡಿನ ಹೊಯ್ಸಳೇಶ್ವರ ದೇವಾಲಯದ ಹೊರಭಿತ್ತಿಯಲ್ಲಿ ದಕ್ಷಿಣದ್ವಾರದ ಬಳಿ ಚಿತ್ರಿತವಾಗಿವೆ (೧೯೩೦ನೆಯ ವರ್ಷದ ವರದಿ ಪುಟ ೪೧-೪೨).

ಪಾಂಡವರು ಅರಣ್ಯದಲ್ಲಿ ವಾಸಮಾಡುತ್ತಿದ್ದಾಗ ಕೆಲಕಾಲದ ಮೇಲೆ ದುರ್ಯೋಧನನ ಮೈದುನನಾದ ಸೈಂಧವನು (ಜಯದ್ರಥನು) ಮಾರ್ಗವಶದಿಂದ ಅಲ್ಲಿಗೆ ಬಂದು ಪಾಂಡವರು ಬೇಟೆಗೆಹೋಗಿದ್ದಾಗ ದ್ರೌಪದಿಯನ್ನು ಬಲಾತ್ಕಾರವಾಗಿ ಎತ್ತಿ ರಥದ ಮೇಲೆ ಕುಳ್ಳಿರಿಸಿಕೊಂಡು ಸೈನ್ಯಸಮೇತನಾಗಿ ತನ್ನ ದೇಶದ ಕಡೆಹೊರಟನು. ಆದರೆ ಭೀಮಾರ್ಜುನರು ಈ ಸಮಾಚಾರವನ್ನರಿತು ಅವನ ಬೆನ್ನಟ್ಟಿಹೋಗಿ ಅವನನ್ನು

ಹಿಡಿದು ಚೆನ್ನಾಗಿ ಶಿಕ್ಷಿಸಿ ಜೀವಸಹಿತ ಬಿಟ್ಟುಕೊಟ್ಟು ದ್ರೌಪದಿಯನ್ನು ಸಂತೈಸಿ ಕರೆದುಕೊಂಡು ಬಂದ ಸಂಗತಿ ಅದೇ ದೇವಾಲಯದ ದಕ್ಷಿಣದ್ವಾರದ ಬಳಿ ಚಿತ್ರಿತ ವಾಗಿದೆ. (೧೯೩೦ನೆಯ ವರ್ಷದ ವರದಿ, ಪುಟ ೪೧)

ಹೀಗೆ ಹನ್ನೆರಡು ವರ್ಷಗಳ ಕಾಲ ವನವಾಸವನ್ನನುಭವಿಸಿ ಪಾಂಡವರೂ ದ್ರೌಪದಿಯೂ ವೇಷವನ್ನು ಮರೆಸಿಕೊಂಡು ವಿರಾಟರಾಜನ ರಾಜಧಾನಿಯಾದ ಮತ್ಸ್ಯನಗರದಲ್ಲಿ ಒಂದು ವರ್ಷಕಾಲ ಅಜ್ಞಾತ ವಾಸವನ್ನು ಪೂರೈಸಿದರು. ಭೀಮನು ವಲಲ ಅಥವಾ ಬಲ್ಲನೆಂಬ ಹೆಸರಿನಿಂದ ವಿರಾಟನಲ್ಲಿ ಅಡಿಗೆಯವನಾಗಿದ್ದನು. ಹೀಗಿರಲು ಒಂದು ಉತ್ಸವಕಾಲದಲ್ಲಿ ಜೀಮೂತ ಮೊದಲಾದ ಶ್ರೇಷ್ಠರಾದ ಮಲ್ಲರು ವಿರಾಟನ ಆಸ್ಥಾನಕ್ಕೆ ಬಂದು ಅವನ ಕಡೆಯ ಜಟ್ಟಿಗಳನ್ನೆಲ್ಲಾ ಸೋಲಿಸಿದರು. ಇದರಿಂದ ವಿರಾಟನಿಗೆ ಅಪಮಾನವಾದಂತಾಗಿ ಅವನು ಕಂಕನೆಂಬ ಸನ್ಯಾಸಿಯ ವೇಷದಲ್ಲಿ ತನ್ನಲ್ಲಿದ್ದ ಧರ್ಮರಾಯನ ಸಲಹೆಯ ಮೇರೆಗೆ ವಲಲನನ್ನು ಕರೆಸಲು ಭೀಮನು ಬಂದು ಜಟ್ಟಿಗಳನ್ನೆಲ್ಲಾ ಸೋಲಿಸಿ ಕೊಂದುದಲ್ಲದೆ ಕಾಡುಮೃಗಗಳಾದ ಆನೆಮೊದ ಲಾದುವುಗಳೊಡನೆ ಹೋರಿ ತನ್ನ ಪೌರುಷವನ್ನು ದೊರೆಯ ಮುಂದೆ ಪ್ರದರ್ಶಿಸಿದನು. ಭೀಮನ ಈ ಸಾಹಸವು ಹೊಸಹೊಳಲಿನ ಲಕ್ಷ್ಮೀನಾರಾಯಣ ದೇವಸ್ಥಾದ ಹೊರ ಭಿತ್ತಿಯಲ್ಲಿ ಚಿತ್ರಿತವಾಗಿದೆ. (೧೯೩೩ ನೆಯ ವರ್ಷದ ವರದಿ, ಪುಟ ೬).

ಹೀಗೆ ಅಜ್ಞಾತವಾಸದಲ್ಲಿ ಹತ್ತು ತಿಂಗಳು ಕಳೆದಮೇಲೆ ವಿರಾಟನ ಸೇನಾಪತಿ ಯಾದ ಕೀಚಕನು ದಿಗ್ವಿಜಯವನ್ನು ಪೂರೈಸಿಕೊಂಡು ಬಂದು ವಿಶೇಷಗೌರವವನ್ನು ಹೊಂದಿ ಒಂದು ದಿನ ವಿರಾಟನ ರಾಣಿಯೂ ತನ್ನ ಅಕ್ಕನೂ ಆದ ಸುದೇಷ್ಣೆಯ ಅಂತಃಪುರದಲ್ಲಿ ಸೈರಂಧ್ರಿಯೆಂಬ ಜಡೆಹೆಣೆಯುವ ದಾಸಿಯ ವೇಷದಲ್ಲಿದ್ದ ದ್ರೌಪದಿ ಯನ್ನು ನೋಡಿ ಕಾಮಿಸಿದನು. ಆದರೆ ದ್ರೌಪದಿ ಅವನನ್ನು ತಿರಸ್ಕರಿಸಿ ತನ್ನ ತಂಟೆಗೆ ಬಂದರೆ ಪತಿಗಳಾದ ಗಂಧರ್ವರು ಕೊಲ್ಲುವರೆಂದು ಹೆದರಿಸಿದಳು. ಒಂದು ದಿನ ಸುದೇಷ್ಣೆಯ ಅಪ್ಪಣೆಯಂತೆ ಮಧುವನ್ನು ತರಲು ಕೀಚಕನ ಬಳಿಗೆ ಹೋದ ದ್ರೌಪದಿಯನ್ನು ಕೀಚಕನು ಬೆನ್ನಟ್ಟಿ ವಿರಾಟನ ಸಭೆಯ ಮುಂದೆಯೇ ಕಾಲಿನಿಂದ ಒದ್ದನು. ಆಗ ದ್ರೌಪದಿ ಭೀಮನ ಬಳಿಗೆಹೋಗಿ ತನಗೆ ಉಂಟಾದ ಹಿಂಸೆಯನ್ನು ತಿಳಿಸಲು ಭೀಮನು ಕೀಚಕನನ್ನು ಮಾರನೆಯ ದಿನ ಸಂಜೆ ನಾಟ್ಯಗೃಹಕ್ಕೆ ಬರು ವಂತೆಯೂ ತಾನು ಅಲ್ಲಿ ಮಂಚದಮೇಲೆ ಅವನಿಗಾಗಿ ಕಾದಿರುವಂತೆಯೂ ದ್ರೌಪದಿ ಹೇಳಿ ಒಪ್ಪಿಸಬೇಕೆಂದೂ ಹಾಗೆಬಂದ ಕೀಚಕನನ್ನುತಾನು ಕೊಲ್ಲುವೆನೆಂದೂ ಪ್ರತಿಜ್ಞೆ ಮಾಡಿದನು. ಭೀಮನ ಏರ್ಪಾಟಿನಂತೆ ಕೀಚಕನು ಮಾರನೆಯ ದಿನ ಅಲಂಕೃತನಾಗಿ ಸಂಜೆಯ ಹೊತ್ತು ನಾಟ್ಯಗೃಹಕ್ಕೆ ಹೋದನು. ಆದರೆ ದ್ರೌಪದಿಯೊಡನೆ ಮೊದಲೇ ಅಲ್ಲಿಗೆ ಹೋಗಿ ಮಂಚದಮೇಲಿದ್ದ ಭೀಮನು ಅವನ ಮೇಲೆ ಹಾರಿ ಸ್ವಲ್ಪಹೊತ್ತುಕಾದಿ ಕೀಚಕನನ್ನು ಕೊಂದು ಮಾಂಸದ ಮುದ್ದೆಯನ್ನಾಗಿಮಾಡಿ ದ್ರೌಪದಿಯನ್ನು ಸಮಾ ಧಾನಪಡಿಸಿದನು. ಭೀಮನಿಂದಾದ ಕೀಚಕನ ಸಂಹಾರ ಅದೇ ಲಕ್ಷ್ಮೀನಾರಾಯಣ ದೇವ

ಸ್ಥಾನದ ಹೊರಭಿತ್ತಿಯಲ್ಲಿ ಚಿತ್ರಿತವಾಗಿದೆ. (೧೯೩೩ ನೆಯ ವರ್ಷದ ವರದಿ, ಪುಟ ೬). ಈಸಂಗತಿಗಳು ಹಳೆಯಬೀಡಿನ ಹೊಯ್ಸಳೇಶ್ವರದೇವಾಲಯದ ಈಶಾನ್ಯದ್ವಾರದ ಹೊರ ಭಿತ್ತಿಯಲ್ಲಿ ಚಿತ್ರಿತವಾಗಿವೆ. ಆದರೆ ಈ ಚಿತ್ರದಲ್ಲಿ ಭೀಮನು ಸ್ತ್ರೀವೇಷವನ್ನು ಧರಿಸಿ ನಾಟ್ಯಾಗಾರದಲ್ಲಿದ್ದು—ಕೀಚಕನಮೇಲೆ ಬಿದ್ದನೆಂದು ಕಾಣಿಸಿದೆ. ಭೀಮನ ಈ ಸ್ತ್ರೀವೇಷವು ವ್ಯಾಸಭಾರತದಲ್ಲಾಗಲಿ ಕುಮಾರವ್ಯಾಸನ ಭಾರತದಲ್ಲಾಗಲೀ ಪಂಪ ಭಾರತದಲ್ಲಾಗಲೀ ವರ್ಣಿತವಾಗಿಲ್ಲ. ಆದರೆ ವೈಷ್ಣವಸಂಪ್ರದಾಯದ ವಾದಿರಾಜಯತಿ (ಕಾಲ ಸು. ೧೫೭೦) ಮತ್ತು ವಿಜಯದಾಸರು (ಕಾಲ ಸು ೧೭೨೫) ತಮ್ಮ ಹಾಡುಗಳಲ್ಲಿ ಈ ಸ್ತ್ರೀವೇಷವನ್ನು ವರ್ಣಿಸಿರುತ್ತಾರೆ.

ಕೀಚಕನ ಸಂಹಾರವನ್ನರಿತ ಕೌರವರು ಬಲವಾದ ಸೇನೆಯನ್ನು ತೆಗೆದುಕೊಂಡು ಭೀಷ್ಮದ್ರೋಣಕೃಪ ಅಶ್ವತ್ಥಾಮರೊಡನೆ ಬಂದು ವಿರಾಟನಗರದ ಗೋವುಗಳನ್ನು ಹಿಡಿದರು. ಅದರ ಹಿಂದಿನ ದಿನ ಅವನ ಅಪ್ಪಣೆಯಂತೆ ತ್ರಿಗರ್ತದೇಶಾಧಿಪತಿಯಾದ ಸುಶರ್ಮನು ವಿರಾಟನ ಗೋವುಗಳನ್ನು ಮತ್ತೊಂದು ಕಡೆ ಹಿಡಿದು ವಿರಾಟನೊಡನೆ ಕಾದಿ ಅವನ ಸಹಾಯರಾಗಿದ್ದ ಧರ್ಮರಾಯ ಭೀಮನಕುಲ ಸಹದೇವರಿಂದ ಪರಾಜಿತನಾಗಿ ಸೆರೆಸಿಕ್ಕು ವಿರಾಟನ ದಯೆಯಿಂದ ಹೊರಟು ಹೋದನು. ಕೌರವರು ಗೋವುಗಳನ್ನು ಹಿಡಿದಾಗ ರಾಜಧಾನಿಯಲ್ಲಿದ್ದ ಉತ್ತರನೆಂಬ ವಿರಾಟನ ಮಗನು ತನ್ನ ಪೌರುಷವನ್ನು ಸ್ತ್ರೀಯರ ಮುಂದೆ ಕೊಚ್ಚಿಕೊಂಡು ಬೃಹನ್ನಳೆಯ ವೇಷದಿಂದಿದ್ದ ಅರ್ಜುನನನ್ನು ಸಾರಥಿಯನ್ನಾಗಿ ಮಾಡಿಕೊಂಡು ರಥದಲ್ಲಿ ಕುಳಿತು ಕೌರವರ ಸೈನ್ಯದ ಮುಂದೆ ಹೋಗಿ ತತ್ತರಿಸತೊಡಗಲು ಅರ್ಜುನನು ತನ್ನ ವಿಕಾರವಾದ ವೇಷವನ್ನು ಕಳೆದು ಶಮೀವೃಕ್ಷದಲ್ಲಿರಿಸಿದ್ದ ಗಾಂಡೀವ ಧನುಸ್ಸನ್ನೂ ಬಾಣಗಳನ್ನೂ ಶಂಖವನ್ನೂ ಧ್ವಜವನ್ನೂ ತೆಗೆದುಕೊಂಡು ಉತ್ತರನ ರಥದಲ್ಲಿ ಕುಳಿತು ತನ್ನ ಪೂರ್ವದ ರೂಪದಲ್ಲಿಯೇ ಶೋಭಿಸುತ್ತ ಉತ್ತರನನ್ನು ಸಾರಥಿಯಾಗಿ ಮಾಡಿಕೊಂಡು ಕೌರವ ಸೈನ್ಯವನ್ನೆಲ್ಲಾ ತನ್ನ ಬಾಣಗಳಿಂದ ನೋಯಿಸಿ ಸಂಮೋಹನಾಸ್ತ್ರದಿಂದ ವಿಸಂಜ್ಞವನ್ನಾಗಿ ಮಾಡಿ ಜಯವನ್ನು ಗಳಿಸಿ ಗೋವುಗಳನ್ನು ಹಿಂತಿರುಗಿಸಿದನು. ಅರ್ಜುನನ ಈ ಸಾಹಸವು ಹೊಸ ಹೊಳಲಿನ ಲಕ್ಷ್ಮೀನಾರಾಯಣ ದೇವಾಲಯದ ಹೊರಭಿತ್ತಿಯಲ್ಲಿ ಚಿತ್ರಿತವಾಗಿದೆ. (೧೯೩೩ನೆಯ ವರ್ಷದ ವರದಿ, ಪುಟ ೬).

ಅರ್ಜುನನಿಂದ ಉತ್ತರಗೋಗ್ರಹಣದಲ್ಲಿ ಪರಾಜಿತರಾದ ಕೌರವರು ತಮ್ಮ ರಾಜಧಾನಿಗೆ ಮರಳಿದ ನಂತರ ಪಾಂಡವರು ಅಜ್ಞಾತವಾಸದಿಂದ ಮುಕ್ತರಾಗಿ ವಿರಾಟ ರಾಜನಿಂದ ಮನ್ನಣೆಯನ್ನು ಪಡೆದು ಅವನ ಮಗಳಾದ ಉತ್ತರೆಯನ್ನು ಅರ್ಜುನನ ಮಗನಾದ ಅಭಿಮನ್ಯುವಿಗೆ ವಿವಾಹ ಮಾಡಿ ಅನಂತರ ಉಪಪ್ಲಾವ್ಯ ನಗರದಲ್ಲಿ ನಿಂತು ಮುಂದಿನ ಕಾರ್ಯಭಾಗಕ್ಕೆ ಉದ್ಯೋಗಿಸಿದರು. ದ್ರುಪದರಾಜನ ಪುರೋಹಿತನ ಮೂಲಕ ಪಾಂಡವರ ರಾಜ್ಯವನ್ನು ಹಿಂದಕ್ಕೆ ಕೊಡುವಂತೆ ಕೌರವರಿಗೆ ಹೇಳಿಕಳುಹಿಸಿದರೂ ದುರ್ಯೋಧನನು ಸಮ್ಮತಿಸದಿದ್ದುದರಿಂದ ಪಾಂಡವರು ಏಳು ಅಕ್ಷೌಹಿಣೀಸೈನ್ಯ

ವನ್ನು ಸೇರಿಸಿ ಯುದ್ಧಕ್ಕೆ ಸಿದ್ಧನಾದನು. ಶ್ರೀಕೃಷ್ಣನು ಪಾಂಡವರ ಕಡೆ ನಿಂತು ತನ್ನ ಸೈನ್ಯದ ಬಹುಭಾಗವನ್ನು ದುರ್ಯೋಧನನಿಗೆ ಕೊಟ್ಟನು. ಹೀಗೆ ಇಬ್ಬರೂ ಯುದ್ಧಕ್ಕೆ ಸಿದ್ಧರಾದರೂ ಧರ್ಮರಾಯನಿಗೆ ಯುದ್ಧದಿಂದುಂಟಾಗುವ ಪ್ರಜಾಕ್ಷಯವು ಸಮ್ಮತವಾಗದೆ ಕೃಷ್ಣನನ್ನು ಸಂಧಿಗಾಗಿ ದುರ್ಯೋಧನನ ಬಳಿಗೆ ಕಳುಹಿಸಿದನು.

ಕೃಷ್ಣನು ಹಸ್ತಿನಾವತಿಗೆ ಹೋಗಿ ಕೌರವರ ಸಭೆಯನ್ನು ಪ್ರವೇಶಿಸಿದನು. ಆ ಸಭೆಯಲ್ಲಿ ಧೃತರಾಷ್ಟ್ರನು ಕಿರೀಟವನ್ನು ಧರಿಸಿ ಸಿಂಹಾಸನದ ಮೇಲೆ ಕುಳಿತಿದ್ದನು. ಅವನ ಪಕ್ಕದಲ್ಲಿ ಗದೆಯನ್ನು ಹಿಡಿದು ದುಶ್ಶಾಸನನು ಓಲೈಸುತ್ತ ನಿಂತಿದ್ದನು. ದುಶ್ಶಾಸನನ ಪಾರ್ಶ್ವದಲ್ಲಿ ಕರ್ಣ ದುರ್ಯೋಧನರಿದ್ದರು. ಕೃಷ್ಣನು ಬಂದೊಡನೆಯೇ ಸಭೆಯಲ್ಲಿ ಸೇರಿದ್ದ ಭೀಷ್ಮದ್ರೋಣ ವಿದುರಾದಿಗಳೆಲ್ಲರೂ ತಮ್ಮ ಆಸನಗಳಿಂದ ಎದ್ದರು. ಆದರೆ ದುರ್ಯೋಧನನು ಮಾತ್ರ ತನ್ನ ಆಸನವನ್ನು ಬಿಟ್ಟೇಳಲಿಲ್ಲ. ಕೃಷ್ಣನು ಆಗ ತನ್ನ ಪಾದದಿಂದ ನೆಲವನ್ನೊತ್ತಲು ದುರ್ಯೋಧನನು ಕೆಳಕ್ಕುರುಳಿ ಬಿದ್ದನು. ಅನಂತರ ಎಲ್ಲರೂ ತಮ್ಮ ತಮ್ಮ ಆಸನಗಳಲ್ಲಿ ಕುಳಿತ ಮೇಲೆ ಕೃಷ್ಣನು ಸಂಧಿಯ ವಿಷಯವನ್ನು ಪ್ರಸ್ತಾಪಿಸಿ ದ್ಯೂತಕಾಲದ ಪ್ರತಿಜ್ಞಾನುಸಾರವಾಗಿ ಅರ್ಧರಾಜ್ಯವನ್ನಾಗಲಿ ಕೊನೆಗೆ ಪಾಂಡವರ ವಾಸಕ್ಕೆ ಐದು ಗ್ರಾಮಗಳನ್ನಾಗಲಿ ಬಿಟ್ಟುಕೊಡಬೇಕೆಂದೂ ಹಾಗೆ ಮಾಡಿದರೆ ಧರ್ಮರಾಯನು ಸಂಧಿಗೊಡಂಬಡುವನೆಂದೂ ಅಲ್ಲದಿದ್ದರೆ ಯುದ್ಧಮಾಡಿ ಕೌರವರನ್ನು ಕೊಂದು ರಾಜ್ಯವನ್ನು ಸಂಪಾದಿಸುವನೆಂದೂ ಹೇಳಿದನು. ಇದಕ್ಕೆ ಒಪ್ಪದೆ ದುರ್ಯೋಧನನು ಸೂಜಿಯ ಮೊನೆ ಚುಚ್ಚುವಷ್ಟು ಭೂಮಿಯನ್ನೂ ತಾನು ಕೊಡುವುದಿಲ್ಲವೆಂದು ಹೇಳಿ ಕೃಷ್ಣನನ್ನು ಹಗ್ಗಗಳಿಂದ ತನ್ನ ಕಡೆಯವರೊಡನೆ ಸೇರಿ ಕಟ್ಟಿಹಾಕಬೇಕೆಂದು ಉಜ್ಜುಗಿಸಿದನು. ಆದರೆ ಕೃಷ್ಣನು ವಿಶ್ವರೂಪವನ್ನು ಧರಿಸಿ ಎಲ್ಲರಿಂದಲೂ ಪೂಜಿತನಾಗಿ ಯುದ್ಧಕ್ಕೆ ಸಿದ್ಧರಾಗುವಂತೆ ಕೌರವರಿಗೆ ಹೇಳಿ ಪಾಂಡವರ ಬಳಿಗೆ ಹೋದನು. ಈ ಸಂಗತಿಗಳೆಲ್ಲವೂ ಹಾಸನದ ಡಿಸ್ಟ್ರಿಕ್ಟು ಬೇಲೂರಿನ ಕೇಶವ ದೇವಾಲಯದ ನವರಂಗದ ಭುವನೇಶ್ವರಿಯಲ್ಲಿ ಚಿತ್ರಿತವಾಗಿವೆ. ದುರ್ಯೋಧನನು ಉರುಳಿದ ದೃಶ್ಯವು ಮಾತ್ರ ಅದೇ ದೇವಾಲಯದ ಪೂರ್ವದ್ವಾರದ ಬಲಕ್ಕೆ ಪಟ್ಟಿಕೆಯ ಮೇಲೆ ಚಿತ್ರಿತವಾಗಿದೆ. (೧೯೩೧ ನೆಯ ವರ್ಷದ ವರದಿ ಪುಟ ೪೫ ; ೧೯೧೭ ನೆಯ ವರದಿ, ಪುಟ ೬). ದುರ್ಯೋಧನನು ಸಿಂಹಾಸನದಿಂದ ಉರುಳಿದ ಸಂಗತಿಯು ವ್ಯಾಸಭಾರತದಲ್ಲಿಲ್ಲ. ಕುಮಾರವ್ಯಾಸನ ಭಾರತದ ಉದ್ಯೋಗಪರ್ವದಲ್ಲಿ ಉಕ್ತವಾಗಿದೆ. ಬೇಲೂರು ಕೇಶವ ದೇವಾಲಯವು ಹೊಯ್ಸಳರ ರಾಜನಾದ ವಿಷ್ಣುವರ್ಧನನಿಂದ ಕ್ರಿ. ಶ. ೧೧೧೭ ರಲ್ಲಿ ಪ್ರತಿಷ್ಠಿತವಾಗಿ ಅವನ ಮೊಮ್ಮಗನಾದ ಇಮ್ಮಡಿ ಬಲ್ಲಾಳನಿಂದ ವಿಸ್ತಾರವನ್ನೈಯ್ದಿತು. (೧೯೩೧ ನೆಯ ವರ್ಷದ ವರದಿ, ಪುಟ ೨೭)

ಬಳಿಕ ಕುರುಕ್ಷೇತ್ರದ ಯುದ್ಧವು ಪ್ರಾರಂಭವಾಯಿತು. ಪಾಂಡವರ ಮತ್ತು ಕೌರವರ ಎರಡು ಕಡೆಯ ಸೈನ್ಯಗಳೂ ಒಬ್ಬರ ಮೇಲೊಬ್ಬರು ಸಾಹಸದಿಂದ ಕಾದಿದರು. ಮೊದಲು ಕೌರವರು ವೃದ್ಧನಾದ ಭೀಷ್ಮನನ್ನು ಸೇನಾಪತಿಯಾಗಿ ಅಭಿಷೇಕಮಾಡಿದರು.

ಅರ್ಜುನನಿಗೂ ಭೀಷ್ಮನಿಗೂ ಅನೇಕ ವೇಳೆ ಯುದ್ಧವಾಯಿತು. ಕೃಷ್ಣನು ಅರ್ಜುನನಿಗೆ ಸಾರಥಿಯಾಗಿ ರಥದಲ್ಲಿ ಕುಳಿತು ಸಹಾಯಮಾದನು. ರಥಗಳಲ್ಲಿ ಕುಳಿತು ರಥಿಕರು ಬಾಣಗಳನ್ನು ಬಿಡುತ್ತಲೂ ಅವರುಗಳ ಮಧ್ಯೆ ಕಾಲಾಳುಗಳು ನಿಂತು ಒಬ್ಬರನ್ನೊಬ್ಬರು ಬಾಣಗಳಿಂದಲೂ ಆಯುಧಗಳಿಂದಲೂ ಕೊಲ್ಲುತ್ತಿದ್ದರು. ಹೀಗೆ ಸಾಹಸದಿಂದ ಕಾದಾಡಿ ಹತ್ತನೆಯ ದಿನ ಭೀಷ್ಮನು ಶಿಖಂಡಿಯನ್ನು ಮರೆಮಾಡಿಕೊಂಡು ಅರ್ಜುನ ನಿಂದ ಬಿಡಲ್ಪಟ್ಟ ಬಾಣಗಳು ದೇಹದಲ್ಲೆಲ್ಲಾ ನಾಟಿ ರಥದಿಂದ ಬಿದ್ದು ಶರಗಳ ಹಾಸಿ ಗೆಯ ಮೇಲೆಂಬಂತೆ ಮಲಗಿದನು ಆಗ ಪಾಂಡವರೂ ಕೌರವರೂ ಯುದ್ಧವನ್ನು ನಿಲ್ಲಿಸಿ ಅವನ ಬಳಿಗೆ ಬಂದು ದುಃಖಪಟ್ಟರು. ಆಗ ಭೀಷ್ಮನು ಬಾಯಾರಿಕೆಯಿಂದ ಕಂಗೆಟ್ಟುದನ್ನು ನೋಡಿ ಅರ್ಜುನನು ತನ್ನ ಎಡಗೈಯಿಂದ ಬಾಣವನ್ನು ಪ್ರಯೋಗಿಸಿ ಅಮೃತದಂಥ ನೀರು ಬುಗ್ಗೆಯಾಗಿ ಮೇಲಕ್ಕೆ ಚಿಮ್ಮಿ ಭೀಷ್ಮನ ಬಲಪಾರ್ಶ್ವದಲ್ಲಿ ಬರು ವಂತೆ ಮಾಡಿದನು. ಇಲ್ಲಿಗೆ ಭೀಷ್ಮ ಪರ್ವದ ಕಥೆಯು ಮುಗಿಯಿತು. ನೀರು ತರಿಸುವ ದೃಶ್ಯ ವಿನಾ ಇತರ ಎಲ್ಲ ದೃಶ್ಯಗಳೂ ಹಳೆಯಬೀಡು ಹೊಯ್ಸಳೇಶ್ವರ ದೇವಾಲಯದ ಆಗ್ನೇಯ ದ್ವಾರಬಂಧದ ಬಳಿ ಚಿತ್ರಿತವಾಗಿವೆ. ಅರ್ಜುನನು ಶರತಲ್ಪ ದಲ್ಲಿದ್ದ ಭೀಷ್ಮನಿಗೆ ನೀರನ್ನು ಒದಗಿಸಿದ ಸಂಗತಿ ಬೇಲೂರು ಕೇಶವದೇವಾಲಯದ ನವರಂಗದ ಭುವನೇಶ್ವರಿಯಲ್ಲಿ ಚಿತ್ರಿತವಾಗಿವೆ. (೧೯೩೦ನೆಯ ವರ್ಷದ ವರದಿ, ಪುಟ ೪೦–೪೧; ೧೯೩೧ನೆಯ ವರ್ಷದ ವರದಿ, ಪುಟ ೪೫)

ಭೀಷ್ಮನು ಶರಶಯ್ಯೆಯಲ್ಲಿ ಮಲಗಿರುವುದು ಮೈಸೂರು ಡಿಸ್ಟ್ರಿಕ್ಟು ಚಾಮರಾಜ ನಗರದ ತಾಲ್ಲೋಕು ಹಳೆಯ ಆಲೂರಿನ ಅರ್ಕೇಶ್ವರದೇವಾಲಯದ ಮುಖಮಂಟಪದ ನೈರುತ್ಯದ ಕಂಬದಲ್ಲೂ ಚಿತ್ರಿತವಾಗಿದೆ. (೧೯೩೭ನೆಯ ವರ್ಷದ ವರದಿ, ಪುಟ ೪೭).

ಬಳಿಕ ದ್ರೋಣಾಚಾರ್ಯನು ಕೌರವರ ಸೇನಾಪತಿಯಾಗಿ ಐದುದಿನ ಕಾದಿ ಮಡಿದನು. ಅರ್ಜುನನನ್ನು ದೂರ ಕಳುಹಿಸಿದರೆ ತಾನು ಧರ್ಮರಾಯನನ್ನು ಸೆರೆಹಿಡಿಯುವೆನೆಂದು ಹೇಳಿದುದರಿಂದ ದ್ರೋಣನ ಮಾತಿನಂತೆ ತ್ರಿಗರ್ತದೇಶಾಧಿ ಪತಿಯಾದ ಸುಶರ್ಮನೂ ಸಂಶಪ್ತಕರೆಂಬ ಅವನ ಕಡೆಯ ಯೋಧರೂ ಅರ್ಜುನ ನನ್ನು ರಣರಂಗದ ಬೇರೆಕಡೆಗೆ ಕರೆದುಕೊಂಡು ಹೋಗಿ ಅವನೊಂದಿಗೆ ಯುದ್ಧಮಾಡಿದ್ದರು. ಅರ್ಜುನನು ಅವರ ಮೇಲೆ ಬಾಣಗಳನ್ನು ಮಳೆಕರೆದು ಅವರ ಕೈಗಳು ಮುಖಕ್ಕೆ ಬಾಣಗಳಿಂದ ಕೀಲಿಸುವಂತೆ ನೋಯಿಸಿದನು. ಆಸಮಯದಲ್ಲಿ ಭಗದತ್ತನು ಸುಪ್ರತೀಕವೆಂಬ ತನ್ನ ಗಜದ ಮೇಲೆ ಕುಳಿತು ಭೀಮನ ಮೇಲೆ ಆನೆ ಯನ್ನು ಬಿಡಲು ಆ ಗಜವು ತನ್ನ ಸೊಂಡಿಲಲ್ಲಿ ಭೀಮನನ್ನು ಹಿಡಿದು ಮೇಲಕ್ಕೆಸೆಯಿತು. ಇದನ್ನು ದೂರದಿಂದ ನೋಡಿ ಕೃಷ್ಣಾರ್ಜುನರು ಭೀಮನ ರಕ್ಷಣೆಗೆ ಬಂದರು. ಆಗ ಭಗದತ್ತನು ತನ್ನಲ್ಲಿದ್ದ ವರಾಹಸ್ವಾಮಿಯ ಕೋರೆಯಹಲ್ಲನ್ನು (ಅಥವಾ ಅಂಕುಶವನ್ನು) ಮಂತ್ರಿಸಿ ಅರ್ಜುನನ ಮೇಲೆಸೆಯಲು ಕೃಷ್ಣನು ಆ ದಿವ್ಯಾಯುಧವನ್ನು ಚತುರ್ಭುಜ ಯುಕ್ತನಾಗಿ ತಡೆದನು. ಇದರಿಂದ ಅರ್ಜುನನಿಗೆ ರಕ್ಷಣೆಯುಂಟಾಯಿತು. ಬಳಿಕ

ಭೀಮನು ಆ ಆನೆಯನ್ನು ಕೊಂದನು. ಅರ್ಜುನನು ಭಗದತ್ತನನ್ನು ಸಂಹರಿಸಿದನು. ಮಾರನೆಯ ದಿನ ದ್ರೋಣನು ಅಭೇದ್ಯವಾದ ಚಕ್ರವ್ಯೂಹವನ್ನು ರಚಿಸಿ ಅದರ ಮುಂದೆ ಸೈಂಧವನನ್ನು ನಿಲ್ಲಿಸಿ ತಾನೂ ರಕ್ಷಣೆಮಾಡುತ್ತಾ ಯುದ್ಧಸನ್ನದ್ಧನಾದನು. ಆವ್ಯೂಹ ವನ್ನು ಭೇದಿಸಲು ಅರ್ಜುನನ ಮಗನಾದ ಅಭಿಮನ್ಯುವು ಮಾತ್ರ ಪಾಂಡವರಕಡೆಯ ವೀರರಲ್ಲಿ (ಅರ್ಜುನನ ಹೊರತು) ಸಮರ್ಥನಾಗಿದ್ದುದರಿಂದ ಅವನು ಯುದ್ಧಕ್ಕಾಗಿ ವ್ಯೂಹದ ಮಧ್ಯದೊಳಕ್ಕೆ ನುಗ್ಗಿ ಅನೇಕಮಂದಿ ಕೌರವಸೈನಿಕರನ್ನು ಕೊಂದು ಕೊನೆಗೆ ಕೌರವವೀರರು ಒಟ್ಟಾಗಿ ಅವನ ಮೇಲೆ ಒಟ್ಟಾಗಿ ಬಾಣಪ್ರಯೋಗ ಮಾಡಿದ್ದರಿಂದ ಮೈಯಲ್ಲೆಲ್ಲಾ ಬಾಣಗಳು ನಾಟಿ ಪ್ರಾಣಬಿಟ್ಟನು. ಅವನ ಸಹಾಯಕ್ಕೆ ಹೋಗಿದ್ದ ಭೀಮನೇ ಮೊದಲಾದವರು ವ್ಯೂಹವನ್ನು ಭೇದಿಸಲಾರದೆ ಹಿಂದೆಯೇ ನಿಂತರು. ಕೃಷ್ಣಾರ್ಜುನರು ಸಂಶಪ್ತಕರ ಯುದ್ಧವನ್ನು ಕೊನೆಗೊಳಿಸಿ ವಿಶ್ರಮಾರ್ಥವಾಗಿ ವೈಶಂಪಾಯನ (ದ್ವೈಪಾಯನ?) ಸರಸ್ಸಿನಲ್ಲಿ ಸ್ನಾನಮಾಡುತ್ತಿದ್ದಾಗ ಕೃಷ್ಣನು ಉಪಾಯವಾಗಿ ಅಭಿಮನ್ಯುವಿನ ಮರಣವು ಅರ್ಜುನನಿಗೆ ಕೇಳಿಬರುವಂತೆ ಹೇಳಿದನು.

ಅರ್ಜುನನು ಪಾಳೆಯಕ್ಕೆ ಬಂದು ತನ್ನಮಗನ ಮರಣಕ್ಕೆ ಸೈಂಧವನು ಕಾರಣ ನೆಂದು ತಿಳಿದು ಮಾರನೆಯ ದಿನ ಸಾಯಂಕಾಲದೊಳಗಾಗಿ ಸೈಂಧವನನ್ನು ಕೊಲ್ಲುವೆ ನೆಂದು ಶಪಥಮಾಡಿದನು. ಇದನ್ನು ದ್ರೋಣನು ಶಕಟವ್ಯೂಹವನ್ನು ರಚಿಸಿ ಅದರ ಹಿಂಭಾಗದಲ್ಲಿ ಸೈಂಧವನನ್ನು ಸಾವಿರಾರು ಮಂದಿ ವೀರರೊಂದಿಗೆ ನಿಲ್ಲಿಸಿ ವ್ಯೂಹದ ಮುಂಭಾಗದಲ್ಲಿ ತಾನೇ ನಿಂತನು. ಆದಗೆ ಅರ್ಜುನನೂ ಸಾತ್ಯಕಿಯೂ ದ್ರೋಣ ನನ್ನು ಬೇಡಿಕೊಂಡು ವ್ಯೂಹದೊಳಕ್ಕೆ ನುಗ್ಗಿ ಬಾಣಗಳ ಮಳೆಗರೆದು ಶತ್ರುವೀರರನ್ನು ಸಂಹರಿಸಿದರು. ಸ್ವಲ್ಪ ಹೊತ್ತಿನ ಮೇಲೆ ಭೀಮನೂ ದ್ರೋಣನ ರಥವನ್ನು ಮೇಲಕ್ಕೆ ಸೆದು ವ್ಯೂಹದೊಳಕ್ಕೆ ನುಗ್ಗಿ ಭಯಂಕರವಾದ ಯುದ್ಧವನ್ನು ಮಾಡಿದನು. ಆದರೆ ಭೀಮನಿಗೂ ಕರ್ಣನಿಗೂ ಸಂಭವಿಸಿದ ಕಾಳಗದಲ್ಲಿ ಭೀಮನು ಹಲವು ವೇಳೆ ಜಯ ಶಾಲಿಯಾದರೂ ಕೊನೆಗೆ ಪರಾಭವವನ್ನು ಹೊಂದಿ ನಿರಾಯುಧನಾಗಿ ಕುಳಿತುಕೊಳ್ಳಲು ಕರ್ಣನು ಅವನ ಕುತ್ತಿಗೆಗೆ ತನ್ನ ಬಿಲ್ಲಿನ ಹೆದೆಯನ್ನು ಹಾಕಿ ಜರಿದು ಮಾತನಾಡಿದನು. ಹೀಗೆ ಗಾಸಿಯಾದ ಭೀಮನನ್ನು ಅರ್ಜುನನು ರಕ್ಷಿಸಿ ಕರ್ಣನನ್ನು ಬಾಣಗಳಿಂದ ನೋಯಿಸಿದನು. ಸಾತ್ಯಕಿ ಭೂರಿಶ್ರವನೆಂಬ ರಾಜನೊಡನೆ ಯುದ್ಧಕ್ಕೆ ತೊಡಗಿ ಸೋತು ನಿಲ್ಲಲು ಭೂರಿಶ್ರವನು ತನ್ನ ಖಡ್ಗವನ್ನು ಸೆಳೆದು ಅವನನ್ನು ಕೊಲ್ಲುವುದಕ್ಕೆ ತೊಡಗಿದನು. ಆದರೆ ಅರ್ಜುನನು ಇದನ್ನು ನೋಡಿ ದೂರದಿಂದ ಬಾಣವೆಸೆದು ಖಡ್ಗಸಹಿತವಾದ ಅವನ ಕೈಯನ್ನು ಕತ್ತರಿಸಿದನು. ಭೂರಿಶ್ರವನು ನೊಂದು ಯೋಗಾ ಸನದಲ್ಲಿ ಕುಳಿತು ಶ್ವಾಸಧಾರಣೆಯನ್ನು ಮಾಡುತ್ತಿರಲು ಸಾತ್ಯಕಿ ಅವನ ತಲೆಯನ್ನು ಕತ್ತರಿಸಿದನು.

ಸಂಜೆಯಾದರೂ ಅರ್ಜುನನಿಗೆ ಸೈಂಧವನನ್ನು ಕೊಲ್ಲಲಾಗಲಿಲ್ಲ. ಆಗ ಕೃಷ್ಣನು ತನ್ನ ಯೋಗಸಾಮರ್ಥ್ಯದಿಂದ ಕತ್ತಲುಂಟಾಗುವಂತೆ ಮಾಡಲು ಸೈಂಧವನು

ಧೈರ್ಯದಿಂದ ಮುಂದೆ ಬಂದು ಅರ್ಜುನನ ಇದಿರಲ್ಲಿ ನಿಂತನು. ಅರ್ಜುನನು ಕೂಡಲೇ ಪಾಶುಪತಾಸ್ತ್ರವನ್ನು ಪ್ರಯೋಗಿಸಿ ಅವನ ತಲೆಯನ್ನು ಕತ್ತರಿಸಿ ರಣರಂಗದಾಚೆ ಸಂಧ್ಯಾವಂದನೆಮಾಡುತ್ತ ಕುಳಿತಿದ್ದ ಅವನ ತಂದೆಯ ತೊಡೆಯ ಮೇಲೆ ಬೀಳಿಸಿದನು. ಅವನು ಹಠಾತ್ತಾಗಿ ಅದನ್ನು ಭೂಮಿಯಮೇಲೆ ಕೆಡಹಲು ತನ್ನ ವರದಂತೆಯೇ ಅವನ ಶಿರಸ್ಸು ಸಹಸ್ರ ಹೋಳಾಗಿ ಅವನು ಪ್ರಾಣಬಿಟ್ಟನು. ಬಳಿಕ ಸೂರ್ಯಾಸ್ತಮಯವಾಯತು·

ದ್ರೋಣನು ವಿಫಲಪ್ರಯತ್ನನಾಗಿ ಕೋಪಗೊಂಡು ರಾತ್ರಿ ಹಗಲೂ ಎಡೆಬಿಡದೆ ಕಾದಿ ಕೊನೆಗೆ ಅಶ್ವತ್ಥಾಮನು ಮೃತನಾದನೆಂಬ ಸುಳ್ಳುಸುದ್ದಿಯನ್ನು ಕೇಳಿ ವಿರಕ್ತಿ ಹೊಂದಿ ಯೋಗಾಭ್ಯಾಸದಿಂದ ಪ್ರಾಣವನ್ನು ತೊರೆಯಬೇಕೆಂದಿರಲು ಧೃಷ್ಟದ್ಯುಮ್ನನು ಇದನ್ನು ತಿಳಿಯದೆ ವಿಸಂಜ್ಞನಾದ ಅವನ ತಲೆಯನ್ನು ಕತ್ತರಿಸಿದನು. ಇಲ್ಲಿಗೆ ದ್ರೋಣ ಪರ್ವವು ಮುಗಿಯಿತು.

ಮೇಲೆ ಹೇಳಿದ ಸಂಗತಿಗಳೆಲ್ಲವೂ ಬಹುಮಟ್ಟಿಗೆ ಹಳೆಯಬೀಡಿನ ಹೊಯ್ಸಳೇಶ್ವರ ದೇವಾಲಯದ ಹೊರಭಿತ್ತಿಯಲ್ಲಿ ಚಿತ್ರಿತವಾಗಿವೆ. (೧೯೩೦ನೆಯ ವರ್ಷದ ವರದಿ, ಪುಟ ೪೨,೪೫,೪೬) ಬೇಲೂರಿನ ಕೇಶವದೇವಾಲಯದ ನವರಂಗದ ಭುವನೇಶ್ವರಿಯಲ್ಲಿ ಕರ್ಣನು ಭೀಮನನ್ನು ಪರಾಭವಗೊಳಿಸುವುದೂ ಭೀಮ ಭಗದತ್ತರ ಯುದ್ಧವೂ ಚಿತ್ರಿತವಾಗಿವೆ. ಕೇಶವದೇವಾಲಯದ ಆವರಣದಲ್ಲಿರುವ ಅದೇ ಕಾಲದ ವೀರ ನಾರಾಯಣ ದೇವಾಲಯದ ಹೊರಭಿತ್ತಿಯಲ್ಲಿ ಭೀಮನನ್ನು ಭಗದತ್ತನ ಗಜವು ಹಿಡಿದು ಎಸೆಯುವ ಚಿತ್ರವಿದೆ (೧೯೩೧ನೆಯ ವರ್ಷದ ವರದಿ, ಪುಟ ೪೫;೩೧ ಅದೇ ೩೧ನೆಯ ಪುಟದ ಪಕ್ಕದಲ್ಲಿ ಈ ಚಿತ್ರದ ಪಡಿಯಚ್ಚು ಮುದ್ರಿತವಾಗಿದೆ). ಭೀಮ ಭಗದತ್ತರ ಯುದ್ಧವೂ ಸಂಶಪ್ತಕರ ಹೋರಾಟವೂ ಭೂರಿಶ್ರವನ ಶಿರಚ್ಛೇದನವೂ ಅಭಿಮನ್ಯುವು ಚಕ್ರವ್ಯೂಹದಲ್ಲಿ ಮರಣವನ್ನೆಯ್ದುವುದೂ ಸೈಂಧವನ ಸಂಹಾರವೂ ದ್ರೋಣನ ಮರಣವೂ ಹೊಸ ಹೊಳಲಿನ ಲಕ್ಷ್ಮೀನಾರಾಯಣದೇವಾಲಯದ ಹೊರ ಭಿತ್ತಿಯಲ್ಲಿ ಚಿತ್ರಿತವಾಗಿವೆ. (೧೯೩೩ನೆಯ ವರ್ಷದ ವರದಿ, ಪುಟ ೬. ಅದೇ ಪುಟದಲ್ಲಿ ಚಕ್ರವ್ಯೂಹವೆಂಬ ಸಣ್ಣ ಆಕಾರವನ್ನು ದಿನ ತುಂಬಿದ ಗರ್ಭಿಣಿಯರು ಎಣ್ಣೆಮೆತ್ತಿ ಪೂಜೆಮಾಡುತ್ತಾರೆಂದು ಹೇಳಿದೆ. ಸೈಂಧವನ ಮರಣದ ಚಿತ್ರದ ಪಡಿಯಚ್ಚು ಅದೇ ವರದಿಯ ೧೪ನೆಯ ಪುಟದಲ್ಲಿ ಮುದ್ರಿತವಾಗಿದೆ). ಬಸ್ರಾಳಿನ ಮಲ್ಲಿಕಾರ್ಜುನದೇವಾಲಯದ ಹೊರಭಿತ್ತಿಯಲ್ಲಿ ಭೀಮ ಭಗದತ್ತರ ಯುದ್ಧವೂ ಚಕ್ರವ್ಯೂಹವೂ ಧೃಷ್ಟದ್ಯುಮ್ನನಿಂದ ದ್ರೋಣನ ಮರಣವೂ ಚಿತ್ರಿತವಾಗಿವೆ. (೧೯೩೪ನೆಯ ವರ್ಷದ ವರದಿ, ಪುಟ ೩೯) ಭಗದತ್ತನ ಗಜವನ್ನೂ ಭಗದತ್ತನನ್ನೂ ಅರ್ಜುನನು ಕೊಂದನೆಂದು ವ್ಯಾಸ ಭಾರತದಲ್ಲಿಯೂ ಕುಮಾರವ್ಯಾಸ ಭಾರತದಲ್ಲಿಯೂ ಕಾಣುವುದು. ಚಿತ್ರಗಳಲ್ಲಿ ಭೀಮನೇ ಆನೆಯನ್ನು ಕೊಂದಂತೆ ಕೆತ್ತಲ್ಪಟ್ಟಿದೆ. ಕೃಷ್ಣನು ಅರ್ಜುನನಿಗೆ ಅಭಿಮನ್ಯುವಿನ ಮರಣವನ್ನು ಸರೋವರದಲ್ಲಿ ಸ್ನಾನಮಾಡುತ್ತಿದ್ದಾಗ ತಿಳಿಸಿದುದು ವ್ಯಾಸಭಾರತದಲ್ಲಿಲ್ಲ. ಪಂಪಭಾರತದಲ್ಲೂ ಕುಮಾರವ್ಯಾಸನ ಭಾರತದಲ್ಲೂ ಉಕ್ತವಾಗಿದೆ.

ದ್ರೋಣನ ಮರಣಾನಂತರ ಕರ್ಣನು ಸೇನಾಪತಿಯಾಗಿ ಯುದ್ಧಮಾಡಿದನು. ಪಾಂಡವ ಸೇನೆಯನ್ನು ನಾಶಮಾಡುತ್ತ ಅರ್ಜುನನೊಡನೆ ಅನೇಕ ವೇಳೆ ಕಾದಿದನು. ಆದರೆ ಯುದ್ಧ ಮಧ್ಯದಲ್ಲಿ ಭೀಮನು ವಿಜೃಂಭಿಸುತ್ತ ತನ್ನ ಇದಿರಾದ ದುಷ್ಟನಾದ ದುಶ್ಶಾಸನನನ್ನು ವಿರಥನನ್ನಾಗಿ ಮಾಡಿ ತಾನೂ ರಥದಿಂದಿಳಿದು ಗದೆಯಿಂದಪ್ಪಳಿಸಿ ಗಂಟಲನ್ನು ಮೆಟ್ಟಿನಿಂತು ಹಿಂದಿನ ಕೆಟ್ಟಮಾತುಗಳಿಗಾಗಿ ಅವನನ್ನು ಹಂಗಿಸಿ ಎದೆಯನ್ನು ಬಗಿದು ರಕ್ತವನ್ನುಚಪ್ಪರಿಸುತ್ತ ತನ್ನ ಪತ್ನಿಯಾದ ದ್ರೌಪದಿಯನ್ನು ರಣರಂಗಕ್ಕೆ ಬರಿಸಿ ತನ್ನ ಪ್ರತಿಜ್ಞೆಯಂತೆ ಅವನ ಕರುಳನ್ನು ಕಿತ್ತು ಅವಳ ತುರುಬಿಗೆ ಮುಡಿಸಿದನು. ಈ ಸಂಗತಿ ಹಳೆಯಬೀಡಿನ ಹೊಯ್ಸಳೇಶ್ವರ ದೇವಾಲಯದ ಹೊರ ಭಿತ್ತಿಯಲ್ಲಿ ದಕ್ಷಿಣಭಾಗದಲ್ಲೂ ಉತ್ತರಭಾಗದಲ್ಲೂ ಚಿತ್ರಿತವಾಗಿದೆ. (೧೯೩೦ನೆಯ ವರ್ಷದ ವರದಿ ಪುಟ ೪೩. ಅದೇ ವರದಿಯ ೪೪ನೆಯ ಪುಟದ ಪಕ್ಕದಲ್ಲಿ ದುಶ್ಶಾಸನನ ವಧೆಯ ಚಿತ್ರದ ಪಡಿಯಚ್ಚು ಮುದ್ರಿತವಾಗಿದೆ. ಎರಡನೆಯ ಚಿತ್ರದಲ್ಲಿ ದುಶ್ಶಾಸನವಧ ವೆಂಬ ಚಿತ್ರದ ಹೆಸರು ಕನ್ನಡಕ್ಷರದಲ್ಲೂ ವೈಜಲನೆಂಬ ಶಿಲ್ಪಿಯ ಹೆಸರು ನಾಗರಾಕ್ಷರ ದಲ್ಲೂ ಕೆತ್ತಲ್ಪಟ್ಟಿವೆ.) ಕರ್ಣಾರ್ಜುನರ ಯುದ್ಧವೂ ದುಶ್ಶಾಸನ ಸಂಹಾರವೂ ಹೊಸ ಹೊಳಲಿನ ಲಕ್ಷ್ಮೀನಾರಾಯಣದೇವಾಲಯದ ಹೊರಭಿತ್ತಿಯಲ್ಲಿ ಚಿತ್ರಿತವಾಗಿವೆ. (೧೯೩೧ನೆಯ ವರ್ಷದ ವರದಿ, ಪುಟ ೬)

ದುಶ್ಶಾಸನನ ಸಂಹಾರಾನಂತರ ಕರ್ಣನು ಅರ್ಜುನನೊಡನೆ ಕಾದಿ ಅವನಿಂದ ಹತನಾದನು. ಬಳಿಕ ಶಲ್ಯ ಶಕುನಿ ಮೊದಲಾದವರು ಯುದ್ಧಮಾಡಿ ಮಾರನೆಯ ದಿನ ಮಡಿದರು. ಕೌರವ ಸೈನ್ಯವೆಲ್ಲವೂ ನುಗ್ಗುನುಚ್ಚಾಗಿ ಉಳಿದವರೆಲ್ಲರೂ ಓಡಿ ಹೋದರು. ಆಗ ದುರ್ಯೋಧನನು ರಣರಂಗದಿಂದ ಹೊರಟು ವೈಶಂಪಾಯನ (ಅಥವಾ ದ್ವೈಪಾಯನ)ವೆಂಬ ಸರಸ್ಸನ್ನೊಳಹೊಕ್ಕನು. ಆದರೆ ಇದನ್ನರಿತ ಪಾಂಡ ವರು ಅಲ್ಲಿಗೆ ಹೋಗಿ ಮೂದಲೆಯ ಮಾತುಗಳಿಂದ ಹಂಗಿಸಿ ಅವನು ಹೊರಗೆ ಹೊರಡು ವಂತೆ ಮಾಡಿದರು. ಸ್ವಲ್ಪ ಉಪಚಾರಾನಂತರ ದುರ್ಯೋಧನನು ಭೀಮನೊಡನೆ ಗದಾಯುದ್ಧನ ಹಿಂದಣ ಪ್ರತಿಜ್ಞೆಯನ್ನು ಜ್ಞಾಪಿಸಿದನು. ಆ ಸನ್ನೆಯನ್ನರಿತು ಭೀಮನು ಕೂಡಲೇ ತನ್ನ ಗದೆಯಿಂದ ಬಲವಾಗಿ ತೊಡೆಗಳಿಗೆ ಹೊಡೆಯಲು ದುರ್ಯೋಧನನು ತೊಡೆಮುರಿದು ನಿಶ್ಚೇಷ್ಟನಾಗಿ ಬಿದ್ದನು. ಆಗ ಭೀಮನು ಅವನ ಕಿರೀಟವನ್ನು ಕಾಲಿ ನಿಂದೊದೆದು ಭಂಗಿಸಿದನು. ಅನಂತರ ಜಯಶೀಲರಾದ ಪಾಂಡವರು ಕೃಷ್ಣಸಾತ್ಯಕಿಯ ರೊಡನೆ ಹೊರಟು ತಮ್ಮ ಪಾಳೆಯವನ್ನು ಹೊಗದೆ ಕೃಷ್ಣನ ಅಪ್ಪಣೆಯಂತೆ ಓಘವತೀ ನದಿಯ ತೀರದಲ್ಲಿ ಸುರಕ್ಷಿತವಾಗಿ ರಾತ್ರಿಯನ್ನು ಕಳೆದರು. ಅಶ್ವತ್ಥಾಮನು ಕೃಪಕೃತ ವರ್ಮರೊಡನೆ ದುರ್ಯೋಧನನಿದ್ದಲ್ಲಿಗೆ ಬಂದು ಭೀಮನು ಅವನಿಗೆ ಗದಾಯುದ್ಧ ರೀತಿಗೆ ವಿರುದ್ಧವಾಗಿ ತೊಡೆಗಳಿಗೆ ಗದೆಯಿಂದ ಹೊಡೆದು ಕೊಂದುದಕ್ಕಾಗಿ ಕೋಪ ಗೊಂಡು ತಕ್ಕ ಪ್ರತೀಕಾರವನ್ನು ಮಾಡುವೆನೆಂದು ಪ್ರತಿಜ್ಞೆಮಾಡಿ ರಾತ್ರಿ ಪಾಂಡವರ ಸೈನ್ಯದ ಶಿಬಿರದಲ್ಲಿ ನಿದ್ರೆಹೋಗುತ್ತಿದ್ದ ಧೃಷ್ಟದ್ಯುಮ್ನಾದಿ ಸಕಲ ಯೋಧರನ್ನೂ

ಕೊಂದು ದ್ರೌಪದಿಯಲ್ಲಿ ಪಾಂಡವರಿಗೆ ಮಕ್ಕಳಾದ ಐವರು ಉಪಪಾಂಡವರ ಛಿನ್ನವಾದ ಶಿರಸ್ಸುಗಳನ್ನು ದುರ್ಯೋಧನನಿಗೆ ತೋರಿಸಿದನು. ಅವನು ಕೂಡಲೇ ಪ್ರಾಣಬಿಟ್ಟನು.

ಅಶ್ವತ್ಥಾಮನು ಬಳಿಕ ವ್ಯಾಸಮುನಿಯ ಆಶ್ರಮಕ್ಕೆ ಹೋಗಿರಲು ಅವನ ದುಷ್ಕಾರ್ಯವನ್ನರಿತ ಅರ್ಜುನನು ಭೀಮನೊಡನೆ ಅಲ್ಲಿಗೆ ಸೇರಿ ತಕ್ಕ ಪ್ರತೀಕಾರವನ್ನು ಮಾಡಬೇಕೆಂದು ಯೋಚಿಸುತ್ತಿರುವಲ್ಲಿ ಅಶ್ವತ್ಥಾಮನು ಅವನ ಮೇಲೆ ಬ್ರಹ್ಮ ಶಿರಸ್ಸೆಂಬ ಮಹಾಸ್ತ್ರವನ್ನು ಬಿಟ್ಟನು. ಅರ್ಜುನನೂ ಅದಕ್ಕೆ ಪ್ರತಿಯಾಗಿ ಅದೇ ಅಸ್ತ್ರ ವನ್ನು ಬಿಟ್ಟನು. ಆದರೆ ಅದರಿಂದ ಲೋಕಕ್ಷೋಭೆಯುಂಟಾಗುವುದೆಂದು ವ್ಯಾಸ ಮುನಿ ಹೇಳಲು ಅರ್ಜುನನು ಅಸ್ತ್ರವನ್ನು ಹಿಂದಕ್ಕೆ ತೆಗೆದುಕೊಂಡನು. ಅಶ್ವತ್ಥಾ ಮನು ಮಾತ್ರ ಪಾಂಡವರು ನಿಸ್ಸಂತಾನರಾಗಲೆಂದು ಹೇಳಿ ಅರ್ಜುನನ ಸೊಸೆಯಾದ ಉತ್ತರೆಯ ಗರ್ಭದ ಮೇಲೆ ಅಸ್ತ್ರವನ್ನು ಬಿಟ್ಟು ಪರಾಜಿತನಾಗಿ ಹೊರಟು ಹೋದನು. ಹೀಗೆ ಅಸ್ತ್ರಪ್ರಭಾವದಿಂದ ನಾಶವಾಗುತ್ತಿದ್ದ ಉತ್ತರಯ ಗರ್ಭವನ್ನು ಕೃಷ್ಣನು ತನ್ನ ಚಕ್ರದಿಂದ ರಕ್ಷಿಸಿ ಉತ್ತರೆಯ ಶಿಶು ಸುಖವಾಗಿರುವಂತೆ ಮಾಡಿದನು.

ಪಾಂಡವರು ವಿರೋಧಿಗಳನ್ನೆಲ್ಲಾ ಜಯಿಸಿದ ಮೇಲೆ ಹಸ್ತಿನಾವತಿಗೆ ಹೋಗಿ ನೆಲಸಿದರು. ಶುಭಮುಹೂರ್ತದಲ್ಲಿ ಯುಧಿಷ್ಠಿರನಿಗೆ ಪಟ್ಟಾಭಿಷೇಕವಾಯಿತು. ಆದರೆ ಪಾಂಡವರು ತಮ್ಮ ವೈಭವಕಾಲದಲ್ಲಿ ಶರತಲ್ಪದಲ್ಲಿ ಮಲಗಿದ್ದ ಭೀಷ್ಮನನ್ನು ಮರೆಯದೆ ಅವನ ಬಳಿಗೆ ಹೋಗಿ ಸತ್ಕಾರಮಾಡಿ ಧರ್ಮಗಳನ್ನರಿತು ಅವನ ಮರಣಾನಂತರ ಶಾಸ್ತ್ರೋಕ್ತವಾಗಿ ಸಂಸ್ಕಾರಮಾಡಿ ಸುಖದಿಂದ ರಾಜ್ಯವನ್ನಾಳಿದರು.

ಮೇಲಣ ಸಂಗತಿಗಳು ಹೊಸಹೊಳಲಿನ ಲಕ್ಷ್ಮೀನಾರಾಯಣ ದೇವಾಲಯದ ಹೊರಭಿತ್ತಿಯಲ್ಲಿ ಚಿತ್ರಿತವಾಗಿವೆ. (೧೯೩೩ನೆಯ ವರ್ಷದ ವರದಿ, ಪುಟ ೬) ಭೀಮನು ದುರ್ಯೋಧನನನ್ನು ಗದೆಯಿಂದ ಹೊಡೆದು ಕೆಡಹುವುದೂ ಉಪಪಾಂಡವರ ತಲೆಗಳನ್ನು ಅಶ್ವತ್ಥಾಮನು ತೋರುವುದೂ ಬಸ್ರಾಳಿನ ಮಲ್ಲಿಕಾರ್ಜುನ ದೇವಾಲಯದ ಹೊರಭಿತ್ತಿ ಯಲ್ಲಿ ಚಿತ್ರಿತವಾಗಿದೆ. (೧೯೩೪ನೆಯ ವರ್ಷದ ವರದಿ, ಪುಟ ೩೯). ಅಶ್ವತ್ಥಾಮನು ದುರ್ಯೋಧನನಿಗೆ ಉಪಪಾಂಡವರ ಶಿರಸ್ಸನ್ನು ತೆಗೆದುಕೊಂಡು ಹೋಗಿ ತೋರಿಸಿದುದು ವ್ಯಾಸ ಭಾರತದಲ್ಲಾಗಲಿ ಕುಮಾರವ್ಯಾಸನ ಭಾರತದಲ್ಲಾಗಲಿ ಉಕ್ತವಾಗಿಲ್ಲ. ಪಂಪ ಭಾರತದಲ್ಲಿ ಮಾತ್ರ ದುರ್ಯೋಧನನು ಅಶ್ವತ್ಥಾಮನು ತಂದು ಶಿರಸ್ಸುಗಳನ್ನು ನೋಡಿ ಇವು ಪಾಂಡವರ ತಲೆಗಳಲ್ಲ, ಬಾಲಕರ ತಲೆಗಳು, ಅದಕ್ಕಾಗಿ ಅಶ್ವತ್ಥಾಮನು ಹಿಮ ವತ್ಪರ್ವತದಲ್ಲಿ ತಪಶ್ಚರಣಗೆಯ್ಯಬೇಕೆಂದಪದೇಶಿಸಿದಂತೆ ಹೇಳಿದೆ(ತ್ರಯೋದಶಾಶ್ವಾಸ).

ಒಟ್ಟಿನ ಮೇಲೆ ಮಹಾಭಾರತದ ಮುಖ್ಯ ಕಥಾವಸ್ತುವಾದ ಕೌರವ ಪಾಂಡವರ ಜಗಳವೂ ಪಾಂಡವರ ವಿಜಯವೂ ಈ ದೇವಸ್ಥಾನಗಳಲ್ಲಿ ಚಿತ್ರಿತವಾಗಿದೆ. ಕುಮಾರವ್ಯಾಸನ ಭಾರತದಲ್ಲಿಯೂ ಯುಧಿಷ್ಠಿರನ ಪಟ್ಟಾಭಿಷೇಕಕ್ಕೆ ಕಥೆ ಮುಗಿಯುವುದು. ಈ ಚಿತ್ರಗಳ ಜೊತೆಯಲ್ಲೇ ಸಾಮಾನ್ಯವಾಗಿ ರಾಮಾಯಣ ಭಾಗವತಗಳ ಚಿತ್ರಗಳೂ ಕಾಣಬರುವುವು. ನಮ್ಮ ದೇಶದ ದೇವಸ್ಥಾನಗಳಲ್ಲಿ

ದೊರೆಯುವ ಕೆಲವು ಚಿತ್ರಗಳನ್ನು ಮಾತ್ರ ಆರ್ಕಿಯಲಾಜಿಕಲ್ ಇಲಾಖೆಯವರು ತಮ್ಮ ವರದಿಗಳಲ್ಲಿ ಪ್ರಕಟಿಸಿರುವರು. ಆದ್ದರಿಂದ ಈ ಚಿತ್ರಗಳ ವಿಚಾರದಲ್ಲಿ ಇನ್ನೂ ಹೆಚ್ಚು ಸಂಶೋಧನೆ ಅಗತ್ಯ.

ಮಹಾಭಾರತದ ಕಥಾಸಂದರ್ಭಗಳನ್ನು ವಿವರಿಸುವಾಗ ನನ್ನ ಮಿತ್ರರಾದ ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳಿಂದ ರಚಿತವಾಗಿ ಪಂಡಿತ ಪಾಮರೆಲ್ಲರಿಗೂ ಆದರಣೀಯವಾಗಿರುವ ವಚನಭಾರತವನ್ನೇ ಬಹುಮಟ್ಟಿಗೆ ಅನುಸರಿಸಿದ್ದೇನೆ. ಆ ಗ್ರಂಥಕ್ಕೂ ಚಿತ್ರಗಳಲ್ಲಡಕವಾದ ಭಾರತ ಕಥೆಗೂ ವ್ಯತ್ಯಾಸ ಕಂಡುಬಂದಾಗ ಚಿತ್ರದಿಂದ ಸೂಚಿತವಾದ ಕಥೆಗೆ ಸಾಧ್ಯವಾದ ಮಟ್ಟಿಗೂ ಆಧಾರವನ್ನು ತಿಳಿಸಿರುತ್ತೇನೆ.

ಈ ಪ್ರಬಂಧವನ್ನು ಶ್ರೀ ಕೃಷ್ಣಶಾಸ್ತ್ರಿಗಳ ಸಂಭಾವನಾಗ್ರಂಥಕ್ಕಾಗಿ ಬರೆಯಲು ಅವಕಾಶಕೊಟ್ಟ ಮಹನೀಯರೆಲ್ಲರಿಗೂ ಕೃತಜ್ಞನಾಗಿದ್ದೇನೆ.

ಆರ್. ರಾಮರಾವ್

# ಪಂಪನ ಆಶ್ರಯದಾತನಾದ ಅರಿಕೇಸರಿಯ ವಂಶ

ಕನ್ನಡ ಕವಿಗಳಲ್ಲಿ ಅಗ್ರಗಣ್ಯನಾದ ಮಹಾಕವಿ ಪಂಪನು ತನ್ನ ಆಶ್ರಯದಾತನಾದ ಚಾಲುಕ್ಯ ವಂಶದ 'ಅರಿಕೇಸರಿಯನ್ನು ವಿಕ್ರಮಾರ್ಜುನವಿಜಯ'ದಲ್ಲಿ ಬಹಳವಾಗಿ ಸ್ತುತಿಸಿದ್ದಾನೆ. ಆದರೆ ಇದುವರೆಗೂ ನಮಗೆ ತಿಳಿದಿರುವ ಚಾಲುಕ್ಯವಂಶದ ಶಾಖೆಗಳಿಗೂ ಅರಿಕೇಸರಿಯ ವಂಶಕ್ಕೂ ಇರುವ ಸಂಬಂಧವನ್ನು ಈತನು ಎಲ್ಲಿಯೂ ಸೂಚಿಸಿಲ್ಲ. 'ವಿಕ್ರಮಾರ್ಜುನ ವಿಜಯ'ದ ಪ್ರಕಟಣೆಯಾದನಂತರ ಕೆಲವು ತಾಮ್ರ ಶಾಸನಗಳೂ ಶಿಲಾಶಾಸನಗಳೂ ದೊರಕಿವೆ. ಇವುಗಳಿಂದಲೂ ಇದುವರೆಗೆ ನಮಗೆ ಗೊತ್ತಾಗಿರುವ ಚಾಲುಕ್ಯ ವಂಶಗಳಿಗೂ ಮತ್ತು ಅರಿಕೇಸರಿಯ ವಂಶಕ್ಕೂ ಇರುವ ಸಂಬಂಧವು ನಿರ್ದಿಷ್ಟವಾಗಿ ತಿಳಿಯುವುದಿಲ್ಲ. ಕೆಲವು ವಿದ್ವಾಂಸರು ಈ ವಂಶದ ವಿನಿಯಾದಿತ್ಯ ಯುದ್ಧಮಲ್ಲನೂ, ಗುಜರಾತ್ ಚಾಲುಕ್ಯವಂಶದ ಶ್ರಿಯಾಶ್ರಯ ಶೀಲಾದಿತ್ಯನ ತಮ್ಮನಾದ ವಿನಯಾದಿತ್ಯ ಯುದ್ಧಮಲ್ಲನೂ ಒಬ್ಬನೇ ಎಂದು ಭಾವಿಸುತ್ತಾರೆ. ಅರಿಕೇಸರಿಯ ವಂಶದ ಅರಸರುಗಳಲ್ಲಿ ನಮಗೆ ಇದುವರೆಗೆ ತಿಳಿದಮಟ್ಟಿಗೆ ಮೊಟ್ಟ ಮೊದಲನೆಯವನು[1] ವಿನಯಾದಿತ್ಯ ಯುದ್ಧಮಲ್ಲ. ಈತನೂ ಗುಜರಾತ್ ಚಾಲುಕ್ಯ ವಂಶದ ವಿನಯಾದಿತ್ಯ ಯುದ್ಧಮಲ್ಲನೂ ಒಂದೇ ವ್ಯಕ್ತಿಯೆಂದು ಭಾವಿಸಲು ಇರುವ ಕಾರಣಗಳು ಎರಡೇ ಎರಡು. ಮೊದಲನೆಯದೇನೆಂದರೆ ಇಬ್ಬರಿಗೂ ಇರುವ ಒಂದೇ ಹೆಸರು ಮತ್ತು ಒಂದೇ ಬಿರುದು. ಎರಡನೆಯದು, ಇವರಿಬ್ಬರೂ ಹೆಚ್ಚೂ ಕಡಮೆ ಒಂದೇ ಕಾಲದಲ್ಲಿ ಜೀವಿಸಿದ್ದುದು. ಆದರೆ ಗುಜರಾತ್ ದೇಶದ ರಾಜಕುಮಾರನೊಬ್ಬನು ಹೈದರಾಬಾದ್ ದೇಶದಲ್ಲಿಯ ಒಂದು ಮುಖ್ಯಪಟ್ಟಣವಾದ ಪ್ರೋದನದಲ್ಲಿ (ಈಗಿನ ಬೋಧನ್) ತನ್ನ ರಾಜ್ಯವನ್ನು ಸ್ಥಾಪಿಸಲು ಒದಗಿದ ಸಂದರ್ಭವೇನೆಂಬುದನ್ನು ಯಾರೂ ವಿಶದಪಡಿಸಿಲ್ಲ. ನಿಜವಾಗಿ ನೋಡಿದರೆ ಇವರಿಬ್ಬರೂ ಒಂದೇ ಎಂದು ಹೇಳುವುದಕ್ಕೆ ಸರಿಯಾದ ಆಧಾರಗಳೇ ಇಲ್ಲ. ಮುಂದೆ ವಿವರಿಸಿರುವ ವೇಮುಲವಾಡ ವಂಶದ ವಿನಯಾದಿತ್ಯ ಯುದ್ಧಮಲ್ಲನು ಕ್ರಿ.ಶ. ೭೫೦ಕ್ಕಿಂತ ಮುಂಚೆ ಬದುಕಿದ್ದನೆಂದು ಹೇಳಲು ಸಾಧ್ಯವಿಲ್ಲ. ಆದರೆ ಕ್ರಿ.ಶ. ೭೩೮ನೆಯ ವರ್ಷಕ್ಕೆ ಮೊದಲೇ ಗುಜರಾತ್ ಚಾಲುಕ್ಯ ಶಾಖೆಯ ವಿನಿಯಾದಿತ್ಯ ಯುದ್ಧಮಲ್ಲನು ಸತ್ತುಹೋಗಿರಬೇಕೆಂದು ತಿಳಿದು ಬಂದಿದೆ.

ವೇಮುಲವಾಡ ವಂಶದ ವಿನಯಾದಿತ್ಯ ಯುದ್ಧಮಲ್ಲನ ಮತ್ತು ಅವನ ವಂಶೀಯರ ಕಾಲಗಳನ್ನು ಸೂಚಿಸುವ ಗ್ರಂಥಗಳಾಗಲೀ ಶಾಸನಗಳಾಗಲೀ ಎರಡ

---

1 ಕೊಲ್ಲಿಪಾರ ತಾಮ್ರಶಾಸನವು ಯುದ್ಧಮಲ್ಲನ ಪೂರ್ವಜರ ಹೆಸರುಗಳನ್ನು ಕೊಡುತ್ತದೆ. ಆದರೆ ಈ ಶಾಸನವು ಕೃತಕ ಶಾಸನವಾಗಿರುವುದರಿಂದ ಇದರಲ್ಲಿ ಕೊಟ್ಟಿರುವ ಹೆಸರುಗಳು ಗಮನಾರ್ಹವಲ್ಲ.

ನೆಯ ಅರಿಕೇಸರಿಯ ಕಾಲದವರೆಗೂ ದೊರೆತಿಲ್ಲ. ಈ ಎರಡನೆಯ ಅರಿಕೇಸರಿಯೇ ಕನ್ನಡ ಮಹಾಕವಿ ಪಂಪನ ಆಶ್ರಯದಾತನು. ಪಂಪನು ತನ್ನ 'ಆದಿಪುರಾಣ'ವನ್ನು ಕ್ರಿ.ಶ. ೯೪೧ರಲ್ಲಿ ಬರೆದನು. ಎರಡನೆಯ ಅರಿಕೇಸರಿಯ ಮಗನಾದ ಬದೆಗನು ಕ್ರಿ.ಶ. ೯೫೯ರಲ್ಲಿ ರಾಜ್ಯಭಾರ ಮಾಡುತ್ತಿದ್ದನೆಂಬ ವಿಷಯವು ಸೋಮದೇವನ 'ಯಶಸ್ತಿಲಕ'ದ[1] ಕೊನೆಯ ಭಾಗದಿಂದ ತಿಳಿಯುತ್ತದೆ. ಎರಡನೆಯ ಅರಿಕೇಸರಿಯ ತಂದೆಯಾದ ಇಮ್ಮಡಿ ನರಸಿಂಹನು ಗೂರ್ಜರ ರಾಜನಾದ ಮಹೀಪಾಲನನ್ನು ಗೆದ್ದನೆಂದು ಪಂಪಕವಿಯು ಹೇಳಿದ್ದಾನೆ. ಈ ಮಹೀಪಾಲನು ಕ್ರಿ.ಶ. ೯೧೪ರಲ್ಲಿ ಪಟ್ಟಕ್ಕೆ ಬಂದನು. ಈ ನರಸಿಂಹನೇ ರಾಷ್ಟ್ರಕೂಟ ಅರಸನಾದ ಇಂದ್ರನ ಮಗಳೊಬ್ಬಳನ್ನು ಮದುವೆಯಾಗಿದ್ದನೆಂದು ವೇಮುಲವಾಡ ಶಾಸನವು ತಿಳಿಸುತ್ತದೆ. ಬಹುಶಃ ಈ ಇಂದ್ರನು ರಾಷ್ಟ್ರಕೂಟದ ರಾಜನಾದ ಮುಮ್ಮಡಿ ಇಂದ್ರನೇ (ಕ್ರಿ.ಶ. ೯೧೫-೯೨೭) ಇರಬೇಕು. ಇದರಿಂದ ನರಸಿಂಹನು ಸುಮಾರು ಕ್ರಿ.ಶ. ೯೧೦ರಿಂದ ೯೩೫ರವರೆಗೆ ರಾಜವಾಳುತ್ತಿದ್ದನೆಂದು ಹೇಳಬಹುದು. ಈ ಕಾಲಕ್ಕಿಂತ ಮೊದಲು ಇಮ್ಮಡಿ ನರಸಿಂಹನ ಐದನೆಯ ಪೂರ್ವಜನಾದ ಮೊದಲನೆಯ ಅರಿಕೇಸರಿಯ ವಂಶಾವಳಿಗೂ ಕಾಲಸಮನ್ವಯವು (Chronological synchronism) ದೊರಕುವುದಿಲ್ಲ. ಮೊದಲನೆಯ ಅರಿಕೇಸರಿಯೂ ಮತ್ತು ರಾಷ್ಟ್ರಕೂಟ ಧ್ರುವನೂ (ಕ್ರಿ.ಶ. ೭೭೫-೭೯೪) ಸಮಕಾಲೀನರು. ಇಮ್ಮಡಿ ನರಸಿಂಹನು ಕ್ರಿ.ಶ. ೯೧೦ರಿಂದ ೯೩೫ರವರೆಗೆ ರಾಜ್ಯಭಾರ ಮಾಡುತ್ತಿದ್ದರಬಹುದೆಂದು ಮೇಲೆಯೇ ಹೇಳಿದೆ. ಮೊದಲನೆಯ ಅರಿಕೇಸರಿಯ ಕಾಲದಿಂದ ಇಮ್ಮಡಿ ನರಸಿಂಹನ ಕಾಲದ ವರೆಗೆ ಐದು ಜನ ರಾಜರುಗಳು ಆಳಿದರು. ನರಸಿಂಹನ ತಮ್ಮನಾದ ಭದ್ರದೇವನನ್ನುಳಿದು ಮಿಕ್ಕ ಅರಸರುಗಳ ರಾಜ್ಯಭಾರವನ್ನೆಲ್ಲ ಸರಾಸರಿ ತಲೆಗೆ ಇಪ್ಪತ್ತೈದು ವರ್ಷಗಳಂತೆ ಎಣಿಸಬಹುದು. ಭದ್ರದೇವನು ತನ್ನ ಅಣ್ಣನ ತರುವಾಯ ಪಟ್ಟಕ್ಕೆ ಬಂದುದರಿಂದ ಆತನು ರಾಜ್ಯವಾಳಿದ ಕಾಲವು ಹತ್ತು ವರ್ಷಗಳೆಂದು ಭಾವಿಸಬಹುದು. ಇವೆಲ್ಲವುಗಳನ್ನೂ

---

1. ವಿಕ್ರಮ ಸಂವತ್ ೧೪೬೪ರ ಒಂದು ಹಸ್ತಲಿಖಿತ ಪ್ರತಿಯಲ್ಲಿ ಈ ರಾಜಕುಮಾರನ ಹೆಸರನ್ನು 'ವದ್ಯಗರಾಜ' ಎಂದು ಕೊಟ್ಟಿದೆ. (ನಥುರಾಮ ಪ್ರೇಮಿಯವರ 'ಜೈನಸಾಹಿತ್ಯ ಔರ್ ಇತಿಹಾಸ್' [೧೯೪೨] ಪುಟ ೭೬ನ್ನು ನೋಡಿರಿ.) ಈ ಹೆಸರು ಸರಿಯಾದ ಹೆಸರೆಂದು ಪ್ರೊ. ನೀಲಕಂಠಶಾಸ್ತ್ರಿ, ಡಾ. ರಾಘವನ್ ಇತ್ಯಾದಿ ವಿದ್ವಾಂಸರುಗಳನೇಕರು ಒಪ್ಪಿಕೊಂಡಿದ್ದಾರೆ. ಆದರೂ ಸಹ ನಮ್ಮ ವಿದ್ವಾಂಸ_ಮಿತ್ರರಾದ ಡಾ. ಎ. ವೆಂಕಟರಮಣಯ್ಯನವರು ನಿರ್ಣಯಸಾಗರ ಮುದ್ರಣಾಲಯದ ಯಶಸ್ತಿಲಕದ ಪ್ರತಿಯಲ್ಲಿರುವ 'ವಾಗರಾಜ' ಎಂಬ ಹೆಸರೇ ಸರಿಯೆಂದು ಸಾಧಿಸುತ್ತಿರುವುದು ಆಶ್ಚರ್ಯಕರವಾಗಿದೆ. ಇಷ್ಟೇ ಅಲ್ಲದೆ ಭದ್ರದೇವನೆಂಬ ಹೆಸರುಳ್ಳ ತಮ್ಮನೊಬ್ಬನನ್ನು ಈ ರಾಜಪುತ್ರನಿಗೆ ಕಲ್ಪಿಸಿರುವುದು ವಿಚಿತ್ರವಾಗಿದೆ. ವಾಸ್ತವವಾಗಿ ನೋಡಿದರೆ ಭದ್ರದೇವ ಎನ್ನುವ ಹೆಸರೇ ಬದ್ದೆಗ ಅಥವಾ ಬದ್ಯಗ ಎಂಬ ಹೆಸರುಗಳ ಸಂಸ್ಕೃತ ರೂಪಾಂತರ.

ಲೆಕ್ಕಕ್ಕೆ ತೆಗೆದುಕೊಂಡರೆ ಮೊದಲನೆಯ ಅರಿಕೇಸರಿಯ ಕೊಟ್ಟಕೊನೆಯ ದಿನಗಳಿಗೂ ಎರಡನೆಯ ನರಸಿಂಹನ ರಾಜ್ಯಭಾರದ ಪ್ರಾರಂಭ ಕಾಲಕ್ಕೂ ೧೧೦ ವರ್ಷಗಳ ಅಂತರ ವಿರುತ್ತದೆ. ಅಂದರೆ ಮೊದಲನೆಯ ಅರಿಕೇಸರಿಯ ಕೊನೆಯ ದಿನಗಳು ಕ್ರಿ.ಶ. ೮೦೦ (೯೧೦–೧೧೦ = ೮೦೦) ಎಂದು ಭಾವಿಸಬಹುದು. ಆದ್ದರಿಂದ ಮೊದಲನೆಯ ಅರಿಕೇಸರಿಯು ಬಹುಶಃ ಕ್ರಿ.ಶ. ೭೭೫ರಿಂದ ಕ್ರಿ.ಶ. ೮೦೦ರ ವರೆಗೆ ರಾಜ್ಯವಾಳಿರಬೇಕು. ಈತನ ತಂದೆಯಾದ ವಿನಯಾದಿತ್ಯ ಯುದ್ಧಮಲ್ಲನು ಸುಮಾರು ಕ್ರಿ.ಶ. ೭೫೦ರ ಹೊತ್ತಿಗೆ ಬಲಿಷ್ಠನಾಗಿರಬೇಕು. ಆದರೆ ಇದೇ ಹೆಸರುಳ್ಳ ಗುಜರಾತ್ ಚಾಲುಕ್ಯ ಮನೆತನದ ಅರಸನು ಕ್ರಿ.ಶ. ೭೩೮ಕ್ಕಿಂತ ಮುಂಚೆಯೇ ಸ್ವರ್ಗಸ್ಥನಾಗಿ ಈತನ ತಮ್ಮನಾದ ಅವನಿಜನಾಶ್ರಯ ಪುಲಕೇಶಿಯು ರಾಜ್ಯಭಾರ ಮಾಡುತ್ತಿದ್ದನೆಂದು ನಮಗೆ ನಿರ್ದಿಷ್ಟವಾಗಿ ಗೊತ್ತಿದೆ. ಗುಜರಾತಿನ ವಿನಯಾದಿತ್ಯ ಯುದ್ಧಮಲ್ಲನ ಮನೋರ್ ತಾಮ್ರಶಾಸನದ ಕಾಲವು ಶಕ ೬೧೩ (ಕ್ರಿ.ಶ. ೬೯೧) ಆದ್ದರಿಂದ ಕ್ರಿ.ಶ. ೬೯೯ರ ಹೊತ್ತಿಗೇನೇ ಈತನು ಪಟ್ಟಕ್ಕೆ ಬಂದಿದ್ದನೆಂದು ತಿಳಿಯುತ್ತದೆ. ಈ ಗುಜರಾತ್ ಚಾಲುಕ್ಯರಾಜನು ಕನಿಷ್ಠಪಕ್ಷ ಕ್ರಿ.ಶ. ೬೯೦ರಿಂದ ೭೩೮ ರವರೆಗೆ ರಾಜ್ಯವಾಳಿರಬಹುದೆಂದು ನಾವು ತಿಳಿಯಬಹುದು. ಈ ಕಾರಣಗಳಿಂದ ಈತನೇ ಪೋದನ (ಈಗಿನ ಬೋಧನ್)ದ ವಿನಯಾದಿತ್ಯ ಯುದ್ಧಮಲ್ಲನಾಗಿದ್ದನೆಂದು ಹೇಳುವುದು ಸಮಂಜಸವಲ್ಲ. ಮೇಲೆ ತಿಳಿಸಿರುವಂತೆ ಪೋದನದ ವಿನಯಾದಿತ್ಯ ಯುದ್ಧಮಲ್ಲನ ಚಟುವಟಿಕೆಗಳು ಕ್ರಿ.ಶ. ೭೫೦ಕ್ಕಿಂತ ಮೊದಲು ಪ್ರಾರಂಭವಾಗಿರುವುದು ಅಸಂಭವ. ಈತನು ರಾಜ್ಯ ಕಟ್ಟುವಷ್ಟು ಪ್ರಬಲನಾಗಲು ಸಂದರ್ಭವು ಹೇಗೆ ಒದಗಿತೆಂಬುದು ತಿಳಿದಿಲ್ಲ. ಆದರೆ ಈತನ ಮಗನಾದ ಅರಿಕೇಸರಿಯು ರಾಷ್ಟ್ರಕೂಟ ಧ್ರುವನ ಸಾಮಂತನಾಗಿದ್ದನೆಂದು ತಿಳಿದಿರುವುದರಿಂದ ಒಂದು ಊಹೆಯು ಸ್ಫುರಿಸುತ್ತದೆ. ನಮಗೆ ತಿಳಿದಮಟ್ಟಿಗೆ ಯಾರ ಸಾಮಂತನೂ ಆಗಿಲ್ಲದಿದ್ದ ಯುದ್ಧಮಲ್ಲನು ಬಾದಾಮಿಯ ಚಾಲುಕ್ಯರ ಅಳಿಗಾಲದಲ್ಲಿ ಅವರ ರಾಜ್ಯಸೂತ್ರಗಳು ಸಡಿಲವಾದ ಸಮಯವನ್ನು ಕಾಯುತ್ತಿದ್ದು ಸ್ವತಂತ್ರನಾಗಿರಬಹುದು.

ಸೌಲಭ್ಯಕ್ಕಾಗಿ ಈ ಮನೆತನದ ರಾಜರ ವಂಶವೃಕ್ಷವನ್ನು ಇಲ್ಲಿ ಕೊಟ್ಟಿದೆ.

ಮೊದಲನೆಯ ಯುದ್ಧಮಲ್ಲ—ವಿನಯಾದಿತ್ಯ (ಸುಮಾರು ಕ್ರಿ.ಶ. ೭೫೦–೭೭೫)

|

ಮೊದಲನೆಯ ಅರಿಕೇಸರಿ (ಸುಮಾರು ಕ್ರಿ.ಶ. ೭೭೫–೮೦೦)

|

ಮೊದಲನೆಯ ನರಸಿಂಹ–ರಾಜಾದಿತ್ಯ (ಸುಮಾರು ಕ್ರಿ.ಶ. ೮೦೦-೮೩೫

ಮೊದಲನೆಯ ಭದ್ರದೇವ (ಬದ್ದೆಗ) (ಸುಮಾರು ಕ್ರಿ.ಶ. ೮೩೫-೮೪೫)

|

ಇಮ್ಮಡಿ ಯುದ್ಧಮಲ್ಲ (ಸುಮಾರು ಕ್ರಿ.ಶ. ೮೪೫-೮೬೦)

|

ಇಮ್ಮಡಿ ಬದ್ದೆಗ (ಸುಮಾರು ಕ್ರಿ.ಶ. ೮೬೦-೮೮೫)

|

ಮುಮ್ಮಡಿ ಯುದ್ಧಮಲ್ಲ–ಸ್ತಂಭ (ಸುಮಾರು ಕ್ರಿ.ಶ. ೮೮೫–೯೧೦)

|

ಇಮ್ಮಡಿ ನರಸಿಂಹ (ಸುಮಾರು ಕ್ರಿ.ಶ. ೯೧೦–೯೩೫) ಈತನು ಜಾಕವ್ವೆಯನ್ನು ಮದುವೆಯಾದನು.

|

ಇಮ್ಮಡಿ ಅರಿಕೇಸರಿ (ಸುಮಾರು ಕ್ರಿ.ಶ. ೯೩೫-೯೪೧)

|

ಮುಮ್ಮಡಿ ಬದ್ದೆಗ (ಕ್ರಿ.ಶ. ೯೫೯)

|

ಮುಮ್ಮಡಿ ಅರಿಕೇಸರಿ (ಕ್ರಿ.ಶ. ೯೬೬)

ಇನ್ನು ರಾಜರ ಚರಿತ್ರೆ. ಶಾಸನಗಳು, ಯುದ್ಧಮಲ್ಲನನ್ನು ಈ ವಂಶದ ಅತ್ಯಂತ ಕೀರ್ತಿವಂತನಾದ ಅರಸನೆಂದೂ ಈತನು ಇತರರಿಗೆ ಆಳಲು ಅಶಕ್ಯವಾಗಿದ್ದಂತಹ ಸಪಾದಲಕ್ಷ ದೇಶವನ್ನು ಆಳುತ್ತಿದ್ದನೆಂದೂ ಸ್ತುತಿಸುತ್ತವೆ. ಇದೇ ಸ್ತುತಿಯನ್ನೇ ಪಂಪನೂ ಮಾಡುತ್ತಾನೆ. ನಮಗೆ ತಿಳಿದವರಲ್ಲಿ ಈ ವಂಶದ ಮೊಟ್ಟ ಮೊದಲನೆಯ ಅರಸನು ಯುದ್ಧಮಲ್ಲನೆಂದು ಆಗಲೇ ಹೇಳಿದೆ. ಈತನ ಇನ್ನೊಂದು ಮಹತ್ಕಾರ್ಯವು ಶಾಸನಗಳಲ್ಲಿಯೂ ಕನ್ನಡ ಸಾಹಿತ್ಯದಲ್ಲಿಯೂ ವಿಶೇಷವಾಗಿ ಹೊಗಳಲ್ಪಟ್ಟಿದೆ. ಇವನು ಪ್ರತಿನಿತ್ಯವೂ ನೂರಾರು ಆನೆಗಳನ್ನು ಪೋದನದಲ್ಲಿ ಎಣ್ಣೆಯಿಂದ ತುಂಬಿದ ಕೊಳಗಳಲ್ಲಿ (tanks) ಮಜ್ಜನ ಮಾಡಿಸುತ್ತಿದ್ದನಂತೆ. ಅತ್ಯಾಶ್ಚರ್ಯಕರವಾದ ಈ ದೃಶ್ಯವನ್ನು ಪೋದನದಲ್ಲಿ ತಾನು ಸಪಾದಲಕ್ಷದ ರಾಜನಾಗಿದ್ದಾಗ ಮನೋರಂಜನೆಗಾಗಿ ಏರ್ಪಡಿಸಿದನೆಂದು ಪರಭಣಿ ತಾಮ್ರಶಾಸನವು ಒತ್ತಿ ಹೇಳುತ್ತಿದೆ. ಸಪಾದಲಕ್ಷದ ಅರಸನು ಸತತವಾಗಿ ಪೋದನದಲ್ಲಿ ತನ್ನ ಆನೆಗಳಿಗೆ ಎಣ್ಣೆ ಮಜ್ಜನದ ಏರ್ಪಾಡನ್ನು ಮಾಡಿರಬೇಕಾದರೆ ಪೋದನವು ಸಪಾದ ಲಕ್ಷದೇಶದಲ್ಲಿಯೇ ಇದ್ದಿರಬೇಕೆಂಬ ಅಂಶವು ಸ್ಪಷ್ಟವಾಗುತ್ತದೆ. ಇಲ್ಲಿ ಹೇಳಿರುವ ಪೋದನವು ಹೈದರಾಬಾದ್ ಸಂಸ್ಥಾನದ ನಿಜಾಮಾಬಾದ್ ಜಿಲ್ಲೆಯ ಆಧುನಿಕ ಬೋಧನ್ ಎಂಬ ಊರು ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ ಮೊದಲನೆಯ ಯುದ್ಧಮಲ್ಲನು ಆಳುತ್ತಿದ್ದ ಸಪಾದಲಕ್ಷ ದೇಶವೂ ಮತ್ತು ರಾಜಸ್ಥಾನದಲ್ಲಿರುವ ಶಾಕಂಬರೀ ದೇಶವೂ ಒಂದೇ ಎಂಬ ಕೆಲ ವಿದ್ವಾಂಸರ ಮತವು ಅಷ್ಟು ಸರಿಯಾಗಿಲ್ಲ. ಏಕೆಂದರೆ ಮೊದಲನೆಯದಾಗಿ ಯುದ್ಧಮಲ್ಲನ ಕಾರ್ಯಕ್ಷೇತ್ರವಾದ ಬೋಧನದ ಸಮೀಪದಲ್ಲೇ ಸಪಾದಲಕ್ಷವೆಂಬ ಹೆಸರಿನ ರಾಜ್ಯವೊಂದು ಇರುವಾಗ ಇತರ ಸಪಾದಲಕ್ಷ ರಾಜ್ಯಗಳನ್ನು (ಸಪಾದಲಕ್ಷ ಅಂದರೆ ಒಂದೂಕಾಲುಲಕ್ಷ ಗ್ರಾಮಗಳನ್ನೊಳಗೊಂಡಿದ್ದ ಅನೇಕ ರಾಜ್ಯ ಭಾಗಗಳು ಪೂರ್ವಕಾಲದಲ್ಲಿ ಇದ್ದವು) ನಾವು ಹುಡುಕುವುದು ಅನಾವಶ್ಯಕ. ವಿಶೇಷತಃ ಬೋಧನದಿಂದ ಸುಮಾರು ೬೦೦ಮೈಲಿ ದೂರವಿರುವ ರಾಜಸ್ಥಾನಕ್ಕೆ ಸಪಾದಲಕ್ಷವನ್ನು ಹುಡುಕಿಕೊಂಡು ಹೋಗಬೇಕಾಗಿಲ್ಲ. ಬೋಧನ್ನಿನ ಸಮೀಪದಲ್ಲಿ

ಸಪಾದಲಕ್ಷವೆಂಬ ಹೆಸರುಳ್ಳ ಒಂದು ರಾಜ್ಯವು ಇದ್ದಿತೆಂಬುದಕ್ಕೆ ಶಾಸನಾಧಾರವಿದೆ. ಕರೀಮ್ ನಗರ ಜಿಲ್ಲೆಯ ವೇಮುಲವಾಡ ಎಂಬ ಊರಿನಲ್ಲಿ ಕ್ರಿ.ಶ. ೧೧ನೆಯ ಶತಮಾನದ ೬ನೆಯ ವಿಕ್ರಮಾದಿತ್ಯನ ಶಾಸನವೊಂದಿದೆ. ಈ ಶಾಸನವು ವಿಕ್ರಮಾದಿತ್ಯನ ಸಾಮಂತನಾದ ರಾಜಾದಿತ್ಯನೆಂಬಾತನು ಕೋಸವಳಂ ಸವಲಕ್ಷ (ಅಂದರೆ ಸಪಾದಲಕ್ಷ) ಮತ್ತು ಇತರ ರಾಜ್ಯಾಂಗಗಳನ್ನು ತನ್ನ ರಾಜಧಾನಿಯಾದ ಲೇಂಬುಳವಾಡಿ (ಅಂದರೆ ವೇಮುಲವಾಡ) ಯಿಂದ ಆಳುತ್ತಿದ್ದನೆಂದು ಹೇಳುತ್ತದೆ. ಇದರಿಂದ ಸಪಾದ ಲಕ್ಷವು ವೇಮುಲವಾಡಕ್ಕೆ ಅತ್ಯಂತ ಸಮೀಪದಲ್ಲಿದ್ದ ರಾಜ್ಯಾಂಗವೆಂದು ತಿಳಿಯುತ್ತದೆ. ಬೋಧನನಗರವು ವೇಮುಲವಾಡದ ಹತ್ತಿರದಲ್ಲೇ ಇದೆಯಾದ್ದರಿಂದ (ನಿಜಾಮಾಬಾದ್ ಕರೀಮ್ ನಗರಗಳು ಅಕ್ಕಪಕ್ಕದ ಜಿಲ್ಲೆಗಳು) ಸಪಾದಲಕ್ಷವು ಇವೆರಡಕ್ಕೂ ಸಮೀಪವಾಗಿತ್ತೆಂಬ ಅಂಶವೂ ಸ್ಪಷ್ಟವಾಗುತ್ತವೆ. ವೇಮುಲವಾಡದಲ್ಲಿರುವ ಇನ್ನೊಂದು ಶಾಸನವು ಬದ್ದೆಗನು ಗೌಡಸಂಘದ ಸೋಮದೇವ ಸೂರಿಯ ಉಪಯೋಗಕ್ಕಾಗಿ ಶುಭಧಾಮ ಜಿನಾಲಯವನ್ನು ಕಟ್ಟಿಸಿದನೆಂದೂ ಸಪಾದಲಕ್ಷದ ಅರಸನಾದ ಯುದ್ಧಮಲ್ಲನಿಂದ ಬದ್ದೆಗನು ಐದನೆಯ ವಂಶಜನೆಂದೂ ಹೇಳುತ್ತದೆ. ಶುಭದಾಮ ಜಿನಾಲಯದ ಸೋಮದೇವ ಸೂರಿಯೇ ಮೂರನೆಯ ಅರಿಕೇಸರಿಯ ಪರಭಣಿ ತಾಮ್ರ ಶಾಸನದಲ್ಲಿ ಉಕ್ತವಾದ ದಾನವನ್ನು ಪಡೆದ ಜೈನಾಚಾರ್ಯನಾದ್ದರಿಂದ ಈ ಬದ್ದೆಗನೂ ಪರಭಣಿ ತಾಮ್ರಶಾಸನದ ಮೂರನೆಯ ಅರಿಕೇಸರಿಯ ತಂದೆಯಾದ ಬದ್ದೆಗನೂ ಒಂದೇ ವ್ಯಕ್ತಿಯೆಂದು ನಿಸ್ಸಂದೇಹವಾಗಿ ಹೇಳಬಹುದು ಆದ್ದರಿಂದ ಈ ಬದ್ದೆಗನ ಐದನೆಯ ಪೂರ್ವಜನಾದ ಯುದ್ಧಮಲ್ಲನೂ ಸಪಾದಲಕ್ಷದ ಅರಸನಾಗಿದ್ದನೆಂದು ವ್ಯಕ್ತವಾಯಿತು. ಯುದ್ಧಮಲ್ಲನೆಂಬ ಹೆಸರುಳ್ಳವರಲ್ಲಿ ಈತನು ಎರಡನೆಯವನಾದ ಕಾರಣ ಮೊದಲನೆಯ ಯುದ್ಧಮಲ್ಲನು ಮಾತ್ರವಲ್ಲದೆ, ಎರಡನೆಯ ಯುದ್ಧಮಲ್ಲನೂ ಸಹ ಸಪಾದಲಕ್ಷದ ರಾಜನಾಗಿದ್ದನೆಂಬುದು ಸ್ಪಷ್ಟ. ಕ್ರಿ.ಶ. ೮೩೫ರಿಂದ ೮೬೦ರ ವರೆಗೆ ರಾಜ್ಯವಾಳಿದ ಎರಡನೆಯ ಯುದ್ಧಮಲ್ಲನು ಮೊದಲನೆಯ ಯುದ್ಧಮಲ್ಲನ ತರುವಾಯ ಸುಮಾರು ಒಂದು ಶತಮಾನದ ಮೇಲೆ ಇದ್ದುದರಿಂದ ಸಪಾದಲಕ್ಷದೇಶವು ಈ ವಂಶದವರ ಆಡಳಿತದಲ್ಲಿಯೇ ಇದ್ದಿತೆಂದು ವ್ಯಕ್ತವಾಗುವುದು. ಆದುದರಿಂದ ಈ ವಂಶದವರಿಗೂ ರಾಜಸ್ಥಾನದಲ್ಲಿರುವ ಶಾಕಂಭರಿಗೂ ಸಂಬಂಧವಿದ್ದಿತೆಂಬುದು ಉಚಿತವಲ್ಲ. ಈ ಕಾರಣಗಳಿಂದ ಈ ವಂಶದವರು ರಾಜ್ಯವಾಳುತ್ತಿದ್ದ ಸಪಾದ ಲಕ್ಷವು ಹೈದರಾಬಾದ್ ಸಂಸ್ಥಾನದಲ್ಲಿರುವ ಬೋಧನ್ ಮತ್ತು ವೇಮುಲವಾಡಗಳ ಸಮೀಪದಲ್ಲಿ ಇತ್ತೆಂದು ನಿಷ್ಕೃಷ್ಟವಾಗುತ್ತದೆ. ಶಾಸನಗಳ ಆಧಾರದಮೇಲೆ ಮಾಡಿದ ಈ ನಿರ್ಧಾರಕ್ಕೆ ಸಾಹಿತ್ಯದ ಬೆಂಬಲವೂ ಇದೆ. 'ಯಶಸ್ತಿಲಕ ಚಂಪೂ'ವಿನ ವ್ಯಾಖ್ಯಾನಕಾರನಾದ ಶ್ರುತಸಾಗರನು 'ಅಶ್ಮಂತಕ' ಎಂಬ ಶಬ್ದವನ್ನು 'ಸಪಾದ ಲಕ್ಷ ಪರ್ವತ ನಿವಾಸಿನ್' ಎಂದು ವಿವರಿಸುತ್ತಾನೆ. ಅಶ್ಮಂತಕವೂ ಅಶ್ಮಕವೂ ಎರಡೂ ಒಂದೇ ಎನ್ನುವುದರಲ್ಲಿ ಸಂದೇಹವಿಲ್ಲ. ಅಶ್ಮಕವು ಹೈದರಾಬಾದ್ ಸಂಸ್ಥಾನದಲ್ಲಿ

ಇತ್ತೆಂಬುದು ಎಲ್ಲರಿಗೂ ತಿಳಿದ ವಿಷಯ. ಅದರ ರಾಜಧಾನಿಯು ಪೋದನ (ಬೋಧನ್). ಶ್ರುತಸಾಗರನು ಈ ರಾಜ್ಯವನ್ನೂ ಸಪಾದಲಕ್ಷವನ್ನೂ ಒಂದೇ ಎಂದು ಭಾವಿಸಿರುವುದರಿಂದ ಸಪಾದಲಕ್ಷ ದೇಶವು ಬೋಧನ್ನಿನ ಸಮೀಪದಲ್ಲಿಯೇ ಇದ್ದಿತೆಂಬುದಕ್ಕೆ ಇನ್ನೊಂದು ಆಧಾರವನ್ನು ಕೊಟ್ಟಂತಾಯಿತು. ಬೇರೊಂದೆಡೆಯಲ್ಲಿ[1] ನಾನು ತೋರಿಸಿರುವಂತೆ ಈ ಸಪಾದಲಕ್ಷ ರಾಜ್ಯವು ಕನಿಷ್ಠಪಕ್ಷ ಈಗಿನ ಹೈದರಾಬಾದ್ ಸಂಸ್ಥಾನದ ಪೂರ್ವ ಮತ್ತು ಮಧ್ಯಭಾಗಗಳನ್ನಾದರೂ ಒಳಕೊಂಡಿರಬೇಕು. ಇಷ್ಟು ಆಧಾರಗಳಿದ್ದರೂ ಸಹ ನಾವು ಮೊದಲನೆಯ ಯುದ್ಧಮಲ್ಲನು ಸಪಾದಲಕ್ಷವನ್ನು (ಅಂದರೆ ರಾಜಸ್ಥಾನದ ಶಾಕಂಭರಿಯನ್ನು) ರಾಷ್ಟ್ರಕೂಟರ ದಂತಿದುರ್ಗನ ಸೇನಾನಾಯಕನಾಗಿ ಗೆದ್ದನೆಂದು ಹೇಳುವುದು ಅಷ್ಟು ಸರಿಯಾಗಿ ತೋರುವುದಿಲ್ಲ. ಇನ್ನೊಂದು ವಿಷಯವೇನೆಂದರೆ ದಂತಿದುರ್ಗನು ಸಪಾದಲಕ್ಷವನ್ನು ಗೆದ್ದನೆಂದೂ ಅಥವಾ ಯುದ್ಧಮಲ್ಲನು ಅವನ ಸೇನಾನಾಯಕನಾಗಿದ್ದನೆಂದೂ ಎಲ್ಲಿಯೂ ಹೇಳಿಲ್ಲ. ಇಷ್ಟೇ ಅಲ್ಲದೆ ಮೊದಲನೆಯ ಯುದ್ಧಮಲ್ಲನ ಕಾಲದಲ್ಲಿ (ಅಂದರೆ ೮ನೆಯ ಶತಮಾನದ ಮಧ್ಯದಲ್ಲಿ) ಶಾಕಂಭರಿ ದೇಶಕ್ಕೆ ಸಪಾದಲಕ್ಷವೆಂಬ ಹೆಸರಿದ್ದಿತೆಂಬುದೇ ಸಂದೇಹವಾಗಿದೆ.

ಈ ಅರಸನ ಮತ್ತೊಂದು ಮುಖ್ಯವಾದ ಸಾಹಸವು ಚಿತ್ರಕೂಟದ ವಿಜಯ. ಈ ಚಿತ್ರಕೂಟವು ' ಸ್ವಭಾವದುರ್ಗ 'ವೆಂದು ವೇಮುಲವಾಡ ಶಾಸನದಲ್ಲಿ ವರ್ಣಿಸಲ್ಪಟ್ಟಿದೆ. (ಅಂದರೆ ದೈವ ಕಲ್ಪಿತವಾದ ದುರ್ಗ, ಮಾನವ ಕಲ್ಪಿತವಲ್ಲ). ಕೆಲವರು ಈ ದುರ್ಗವು ರಾಜಸ್ಥಾನದಲ್ಲಿರುವ ಚಿತೋಡಗಢವೆಂದು ಭಾವಿಸಿದ್ದಾರೆ. ಈ ಭಾವನೆಯು ಈ ಅರಸನು ಆಳುತ್ತಿದ್ದ ಸಪಾದಲಕ್ಷವು ರಾಜಸ್ಥಾನದಲ್ಲಿಯ ಶಾಕಂಭರಿ ದೇಶವೆಂಬ ಊಹೆಗೆ ಬೆಂಬಲವನ್ನು ಕೊಡುತ್ತದೆಂದೂ ತಿಳಿದಿದ್ದಾರೆ. ಆದರೆ ಮೇಲೆ ತೋರಿಸಿರುವಂತೆ ಯುದ್ಧಮಲ್ಲನ ರಾಜ್ಯವಾದ ಸಪಾದಲಕ್ಷಕ್ಕೂ ಶಾಕಂಭರಿಯ ದೇಶಕ್ಕೂ ಸಂಬಂಧವನ್ನು ಕಲ್ಪಿಸಬೇಕಾದ ಆವಶ್ಯಕತೆಯೇ ಇಲ್ಲ. ಆದುದರಿಂದ ಯುದ್ಧಮಲ್ಲನು ಜಯಿಸಿದಂತಹ ಚಿತ್ರಕೂಟದುರ್ಗವೂ ಮತ್ತು ರಾಜಸ್ಥಾನದ ಚಿತೋಡ್‌ಗಢವೂ ಒಂದೇ ಎಂದು ತಿಳಿಯುವುದು ಅಸಮಂಜಸ. ಪ್ರತ್ಯುತ ವೇಮುಲವಾಡ ಶಾಸನದಲ್ಲಿ ಹೇಳಿರುವ ಚಿತ್ರಕೂಟವು ಬುಂದೇಲಖಂಡದಲ್ಲಿ ಕಾಲಂಜರ್ ಸಮೀಪದಲ್ಲಿರುವ ಚಿತ್ರಕೂಟವಾಗಿರಬಹುದಾದ ಸಂಭವ ಹೆಚ್ಚು.

ಈತನ ಮಗನಾದ ಮೊದಲನೆಯ ಅರಿಕೇಸರಿಯು ಬಾಲ್ಯದಲ್ಲಿಯೇ ಅಖಿಲ ವೇಂಗಿ ದೇಶವನ್ನು ಜಯಿಸಿ ಪೃಥಿವಿಯನ್ನು ಆಳುತ್ತಿದ್ದನೆಂದು ವೇಮುಲವಾಡ ಶಾಸನವು ಹೇಳುತ್ತದೆ. ಪರಭಣಿ ತಾಮ್ರ ಶಾಸನವೂ ' ವಿಕ್ರಮಾರ್ಜುನ ವಿಜಯ'ವೂ ವೇಂಗಿಯೊಡನೆ ತ್ರಿಕಲಿಂಗವನ್ನು ಈತನು ಗೆದ್ದನೆಂದು ತಿಳಿಸುತ್ತವೆ. ಈ ದಿಗ್ವಿಜಯಗಳೆಲ್ಲವೂ

1. Journal of Oriental Research Vol XVIII pp 39 ff.

ನಿರುಪಮ (ಅಂದರೆ ರಾಷ್ಟ್ರಕೂಟ ಧ್ರುವ)ನ ಕಾಲದಲ್ಲಿ ಸಂಭವಿಸಿದುವೆಂದು 'ವಿಕ್ರಮಾರ್ಜುನ ವಿಜಯ'ದಲ್ಲಿ ನಿಸ್ಸಂದೇಹವಾಗಿ ಹೇಳಲ್ಪಟ್ಟಿದೆ. ಅಣ್ಣ ತಮ್ಮಂದಿರಾದ ರಾಷ್ಟ್ರಕೂಟ ಇಮ್ಮಡಿ ಗೋವಿಂದನೂ, ಧ್ರುವನೂ ತಮ್ಮ ಪಿತ್ರಾರ್ಜಿತವಾದ ರಾಜ್ಯಕ್ಕಾಗಿ ತಮ್ಮ ತಮ್ಮಲ್ಲಿಯೇ ಹೊಡೆದಾಡುತ್ತಿದ್ದಾಗ ಬಹುಶಃ ಈ ವಿಜಯಗಳಿಗೆ ಅವಕಾಶವು ದೊರಕಿರಬೇಕು. ಗೋವಿಂದನೂ ಪರರಾಜ ಸಹಾಯವನ್ನು (ಧ್ರುವನೊಡನೆ ಹೋರಾಡುವುದಕ್ಕಾಗಿ) ಕೋರಿದನೆಂಬ ವಿಷಯವು ಎಲ್ಲರಿಗೂ ಗೊತ್ತು. ಈ ಪರರಾಜರುಗಳಲ್ಲಿ ವೇಂಗಿಯ ಅರಸನೂ ಒಬ್ಬನು. ಪ್ರಾಯಶಃ ಈ ಯುದ್ಧಕಾಲದಲ್ಲಿಯೇ ವೇಂಗಿಯ ರಾಜನನ್ನು ಸೋಲಿಸಿ ತ್ರಿಕಲಿಂಗವನ್ನೊಳಗೊಂಡ ಅವನ ರಾಜ್ಯವನ್ನು ಧ್ರುವನ ಪರವಾಗಿ ಮೊದಲನೆಯ ಅರಿಕೇಸರಿಯು ಕಿತ್ತುಕೊಂಡಿರಬೇಕು. ಕ್ರಿ. ಶ. ೭೭೫ರಲ್ಲಿ ರಾಷ್ಟ್ರಕೂಟ ರಾಜ್ಯಕ್ಕೆ ಧ್ರುವನೇ ಅರಸನಾಗಿದ್ದನೆಂಬ ಸಂಗತಿಯು ಧ್ರುವನ ಪಿಂಪರಿ ತಾಮ್ರಶಾಸನದಿಂದ ತಿಳಿಯುತ್ತದೆ. ಇಂತು ಇಮ್ಮಡಿ ಗೋವಿಂದನಿಗೆ ಸಹಾಯ ಮಾಡಿದ ರಾಜರುಗಳ ಪರಾಜಯವು ಕ್ರಿ. ಶ ೭೭೫ಕ್ಕೆ ಮೊದಲೇ ಆಗಿರಬೇಕು. ಕ್ರಿ. ಶ. ೭೭೫ರಿಂದ ಕ್ರಿ. ಶ. ೮೦೦ವರೆಗೆ (ಈ ಲೇಖನದಲ್ಲಿ ಕೊಟ್ಟಿರುವ ಕಾಲಗಣನೆಯ ರೀತ್ಯಾ) ರಾಜ್ಯಭಾರ ಮಾಡಿದ ಅರಿಕೇಸರಿಯು ಹುಡುಗನಾಗಿದ್ದಾಗಲೇ ವೇಂಗಿಯನ್ನು ಗೆದ್ದನೆಂಬ ವೇಮುಲವಾಡ ಶಾಸನದ ಮಾತು ಈತನು ಚಿಕ್ಕವನಾಗಿದ್ದಾಗಲೇ ರಾಜ್ಯಸೂತ್ರಗಳನ್ನು ವಹಿಸಿದನೆಂಬ ಅಂಶವನ್ನು ಸೂಚಿಸುತ್ತದೆ.

ಮೊದಲನೆಯ ಅರಿಕೇಸರಿಯ ಇಬ್ಬರು ಮಕ್ಕಳುಗಳಾದ ರಾಜಾದಿತ್ಯನಾದ ನರಸಿಂಹ ಮತ್ತು ಭದ್ರದೇವನ ವಿಷಯವಾಗಿ ಸಾಂಪ್ರದಾಯಕವಾದ ಸ್ತುತಿಯು ಮಾತ್ರ ದೊರಕಿದೆ. ಆದ್ದರಿಂದ ನರಸಿಂಹನ ಮಗನಾದ ಇಮ್ಮಡಿ ಯುದ್ಧಮಲ್ಲನ ವಿಷಯದಲ್ಲಿ ಗೊತ್ತಾಗಿರುವ ಸಂಗತಿಗಳನ್ನು ಅವಲೋಕಿಸೋಣ. ಈತನ ಸಾಹಸ ಕಾರ್ಯಗಳ ವಿಷಯವಾಗಿ ಎಲ್ಲಿಯೂ ವರ್ಣನೆಗಳಿಲ್ಲದಿದ್ದರೂ ಈತನನ್ನು ಕುರಿತು ಒಂದು ಮುಖ್ಯ ಅಂಶವು ನಮಗೆ ದೊರಕಿದೆ. ಅದೇನಂದರೆ ಈತನು ಸಪಾದಲಕ್ಷವನ್ನು ಆಳುತ್ತಿದ್ದುದು. ಬದ್ದೆಗನ ಒಂದು ಶಾಸನದಲ್ಲಿ ಈ ವಿಷಯಕ್ಕೆ ಗಣ್ಯಸ್ಥಾನವನ್ನು ಕೊಟ್ಟಿದೆ. ಈ ಬದ್ದೆಗನು ಇಮ್ಮಡಿ ಯುದ್ಧಮಲ್ಲನಿಂದ ೫ನೆಯ ವಂಶಜನೆಂದು ಹೇಳಿಕೊಳ್ಳುತ್ತಾನೆ. ಇಮ್ಮಡಿ ಯುದ್ಧಮಲ್ಲನನ್ನು ಕುರಿತು ವೇಮುಲವಾಡ ಶಾಸನವು ಈ ರೀತಿಯಾಗಿ ಹೇಳುತ್ತದೆ. 'ಶತ್ರು ರಾಜರುಗಳು ಈತನ ಭಯಕ್ಕಾಗಿ ಗುಹೆಗಳಲ್ಲಿಯೂ ಅಡವಿಗಳಲ್ಲಿಯೂ ಅಡಗಿಕೊಳ್ಳುತ್ತಿದ್ದರು.' ಅಂದರೆ ಇವನ ಶೌರ್ಯಕ್ಕೆ ಶತ್ರುಗಳು ನಡುಗುತ್ತಿದ್ದರು.

ಇಮ್ಮಡಿ ಯುದ್ಧಮಲ್ಲನ ಮಗನಾದ ಇಮ್ಮಡಿ ಬದ್ದೆಗನು ಈ ವಂಶದ ರಾಜರುಗಳಲ್ಲಿ ಬಲಿಷ್ಠನಾದ ರಾಜನಾಗಿದ್ದಿರಬೇಕು. ಪರಾಕ್ರಮದಲ್ಲಿ ಕಾರ್ತವೀರ್ಯನನ್ನೂ ಮೀರಿಸಿದ್ದನೆಂದು ವರ್ಣಿಸಲ್ಪಟ್ಟಿದ್ದಾನೆ. ವಸ್ತುತಃ ಅತ್ಯಂತ ಶೂರನಾಗಿದ್ದುದರಿಂದಲೇ ಈತನಿಗೆ 'ಸೋಲದ ಗಂಡ'ನೆಂಬ ಬಿರುದು ಬಂದಿರಬೇಕು. ಬಿರುದಿಗೆ ತಕ್ಕಂತೆ

ಈತನು ನಲವತ್ತೆರಡು ಯುದ್ಧಗಳಲ್ಲಿ ಜಯಶಾಲಿಯಾಗಿ ಮೊಸಳೆಯು ತನ್ನ ಭಕ್ಷ್ಯ ಪ್ರಾಣಿಗಳನ್ನು ನೀರಿನಲ್ಲಿ ಹಿಡಿಯುವಂತೆ, ಯುದ್ಧದಲ್ಲಿ ಪರಾಕ್ರಮಶಾಲಿಯಾದ ಭೀಮ ನೆಂಬ ಅರಸನೊಬ್ಬನನ್ನು ಸೆರೆ ಹಿಡಿದನಂತೆ. ಈ ಭೀಮನೂ ಮತ್ತು ಕ್ರಿ.ಶ.೮೯೨ರಲ್ಲಿ ಕಿರೀಟಧಾರಣೆಯನ್ನು ಮಾಡಿದ ವೇಂಗಿಯ ಅರಸನಾದ ಮೊದಲನೆಯ ಚಾಲುಕ್ಯ ಭೀಮನು ಒಬ್ಬನೇ ಎಂದು ಕೆಲ ಪಂಡಿತರ ಅಭಿಪ್ರಾಯ. ನಮ್ಮ ಕಾಲ ಗಣನೆಯ ಪ್ರಕಾರ ಬದ್ದೆಗನು ಕ್ರಿ. ಶ. ೮೭೦ರಿಂದ ೮೮೫ರ ವರೆಗೆ ರಾಜ್ಯವಾಳಿದನು. ಆದರೆ ವೇಮುಲವಾಡ ವಂಶದ ಪ್ರತಿಯೊಬ್ಬ ಅರಸನೂ ಹೆಚ್ಚು ಕಡಮೆ (ಖಚಿತವಾಗಿ ಅಲ್ಲ) ಇಪ್ಪತ್ತೈದು ವರ್ಷ ರಾಜ್ಯವಾಳಿದನೆಂದು ನಾವು ಅಭಿಪ್ರಾಯಪಟ್ಟಿರುವುದರಿಂದ ಬದ್ದೆಗನು ಇನ್ನೂ ಕೆಲವು ವರ್ಷಗಳು (ಅಂದರೆ ಕ್ರಿ. ಶ. ೮೮೫ ಆದಮೇಲೆ) ರಾಜ್ಯವಾಳಿ ಮೊದಲನೆಯ ಚಾಲುಕ್ಯ ಭೀಮನ ಸಮಕಾಲೀನನಾಗಿದ್ದಿರುವುದು ಅಸಂಭವವೇನೂ ಅಲ್ಲ. ಈತನು ಪರಾಕ್ರಮದಲ್ಲಿ ಮಾತ್ರವಲ್ಲದೆ ಔದಾರ್ಯದಲ್ಲಿಯೂ ಸಹ ಪ್ರಸಿದ್ಧ ನಾಗಿದ್ದನು. ಈತನನ್ನು ಕಾಮಧೇನು, ಕಲ್ಪತರು, ಎಂದು ವರ್ಣಿಸಿದೆ.

ಈತನ ಮಗನಾದ ಮುಮ್ಮಡಿ ಯುದ್ಧಮಲ್ಲನ ಗಣ್ಯವಾದ ಕಾರ್ಯಗಳು ಯಾವುದೂ ತಿಳಿದು ಬಂದಿಲ್ಲ ಆದರೂ ಇಮ್ಮಡಿ ಅರಿಕೇಸರಿಯ ವೇಮುಲವಾಡ ಶಾಸನದಲ್ಲಿ ಇರುವ ಒಂದು ಶ್ಲೋಕವು ಶ್ಲೇಷಾರ್ಥದಿಂದ ಈತನಿಗೆ ಸ್ತಂಭನೆಂಬ ಅಡ್ಡ ಹೆಸರು ಇದ್ದಿತೆಂದು ಸೂಚಿಸುತ್ತದೆ. ಈತನ ಮಗನಾದ ಪುರುಷಸಿಂಹನಾದ ನರಸಿಂಹನು ನರಸಿಂಹಾವತಾರದ ವಿಷ್ಣುವಿನಂತೆ ಸ್ತಂಭದಿಂದ (ಅಥವಾ ಸ್ತಂಭನಿಂದ) ಲೋಕಹಿತಕ್ಕಾಗಿ ಜನಿಸಿದನು ಎಂದು ಶ್ಲೋಕವು ಹೇಳುತ್ತದೆ. ಈ ನರಸಿಂಹನು ಅನೇಕ ದೂರ ದೇಶಗಳಿಗೆ ದಂಡಯಾತ್ರೆ ಮಾಡಿ ವಿಜಯಶಾಲಿಯಾದನೆಂದು ಹೇಳಿದೆ. ಈ ದಿಗ್ವಿಜಯಗಳಲ್ಲಿ ಲಾಟರ ಮೇಲಿನ ದಿಗ್ವಿಜಯವು 'ವಿಕ್ರಮಾರ್ಜುನ ವಿಜಯ'ದಲ್ಲಿ ಮಟ್ಟಿಗೆ ನಿರ್ದೇಶಿಸಲ್ಪಟ್ಟಿದೆ. ಆದರೆ ಇವನಿಂದ ನಿರ್ಜಿತರಾದ ಲಾಟೇಶರ ಹೆಸರನ್ನು ಹೇಳಿಲ್ಲವಾದ್ದರಿಂದ ಈತನು ಯಾವಾಗ ಲಾಟರ ಮೇಲೆ ಯುದ್ಧಮಾಡಿದನೆಂದಾಗಲೀ ಅಥವಾ ಈತನನ್ನು ಪ್ರತಿಭಟಿಸಿದ ಲಾಟ ಶತ್ರುಗಳು ಯಾರೆಂಬುದಾಗಲೀ ಹೇಳಲು ಸಾಧ್ಯವಿಲ್ಲ. ಈ ಸಂದರ್ಭದಲ್ಲಿ ರಾಷ್ಟ್ರಕೂಟ ಅರಸನಾದ ಇಮ್ಮಡಿ ಕೃಷ್ಣನು ತನ್ನ ಶತ್ರುಗಳನ್ನೂ ಅವರ ಸೇನೆಗಳನ್ನೂ ಅವರ ಸೇನಾನಾಯಕರನ್ನೂ ಖೇಟಕದಿಂದ ಹೊಡೆದಟ್ಟಿದನೆಂಬ ವಿಷಯವನ್ನು ನಾವು ಗಮನಿಸಬೇಕು. ಖೇಟಕವು ಲಾಟ ದೇಶ ದಲ್ಲಿ ಪ್ರಖ್ಯಾತವಾದ ಕೈರ ಎಂಬ ಪಟ್ಟಣ. ಅಲ್ಲಿದ್ದ ಇಮ್ಮಡಿ ಕೃಷ್ಣನ ಕೆಲ ಶತ್ರು ಗಳನ್ನು ಹೊಡೆದೋಡಿಸುವುದರಲ್ಲಿ ನರಸಿಂಹನು ತನ್ನ ಪ್ರಭುವಿಗೆ ಸಹಾಯವನ್ನಿತ್ತಿರ ಬೇಕು. 'ವಿಕ್ರಮಾರ್ಜುನ ವಿಜಯ'ವೂ ವೇಮುಲವಾಡ ಶಾಸನವೂ ಈತನ ಸಪ್ತ ಮಾಳವ ವಿಜಯವನ್ನು ವರ್ಣಿಸುತ್ತದೆ. ಸಪ್ತಮಾಳವ ಎಂದರೆ ಏಳು ಭಾಗಗಳನ್ನೊಳ ಗೊಂಡ ಮಾಳವ ದೇಶ. ನರಸಿಂಹನು ಯುದ್ಧದಲ್ಲಿ ಏಳು ರಾಜರುಗಳನ್ನು ಸೋಲಿಸಿ ಅವರು ಗಳನ್ನು ಅಧೀನರನ್ನಾಗಿ ಮಾಡಿದನೆಂದು ಈ ಶಾಸನವು ಹೇಳುತ್ತದೆ. ಮಾಳವದ

ಈ ದಿಗ್ವಿಜಯದ ವರ್ಣನೆಯನ್ನು ಪಂಪನು ಬಹು ಪ್ರೌಢವಾಗಿ ಚಿತ್ರಿಸಿ ನರಸಿಂಹನು ಸಪ್ತ ಮಾಳವಗಳಲ್ಲಿ ಅನೇಕ ಪ್ರದೇಶಗಳನ್ನು ಭಸ್ಮ ಮಾಡಿದನೆಂದು ಹೇಳಿದ್ದಾನೆ. ಈ ದಿಗ್ವಿಜಯದ ಕಾಲವನ್ನು ನಿರ್ಧರಿಸಲು ತಕ್ಕ ಆಧಾರಗಳಿಲ್ಲ. ಆದರೆ ರಾಷ್ಟ್ರಕೂಟ ಇಮ್ಮಡಿ ಕೃಷ್ಣನೂ ಮುಮ್ಮಡಿ ಇಂದ್ರನೂ ಮಾಳವ ದೇಶವನ್ನು ಮುತ್ತಿದ್ದರೆಂಬ ವಿಷಯವು ಎಲ್ಲರಿಗೂ ತಿಳಿದಿದೆ. ಕ್ರಿ. ಶ. ೮೮೮ರ ಬಾಗುಮ್ರ ತಾಮ್ರ ಶಾಸನದಲ್ಲಿ [1] ಕೃಷ್ಣನ (ಈ ವಂಶದ ಗುಜರಾತ ಶಾಖೆಯ ಅರಸನಾದ ಕೃಷ್ಣ) ಉಜ್ಜಯಿನಿಯ ಮುತ್ತಿಗೆಯು ಉಕ್ತವಾಗಿರುವುದರಿಂದ ಕ್ರಿ. ಶ. ೯೧೦ರಿಂದ ೯೩೫ರ ವರೆಗೆ ರಾಜ್ಯ ವಾಳುತ್ತಿದ್ದ ನರಸಿಂಹನಿಗೂ ಉಜ್ಜಯಿನಿಯ ಈ ಮುತ್ತಿಗೆಗೂ ಯಾವ ಸಂಬಂಧವೂ ಇಲ್ಲ. ಆದುದರಿಂದ ಮುಮ್ಮಡಿ ಇಂದ್ರನು ಉಪೇಂದ್ರ ರಾಜ[2]ನೊಡನೆ ಹೋರಾಡುವುದಕ್ಕಾಗಿ ಮಾಳವಕ್ಕೆ ಹೋಗಿದ್ದಾಗ ನರಸಿಂಹನು ಅವನ ಜೊತೆಯಲ್ಲಿ ಹೋಗಿರಬೇಕು. ಮಾಳವದ ಪರಮಾರ ಅರಸನಾದ ಕೃಷ್ಣರಾಜನೂ ಉಪೇಂದ್ರರಾಜನೂ ಒಬ್ಬನೇ ಎಂದು ವಿದ್ವಾಂಸರ ಮತ. ನರಸಿಂಹನು ಗೂರ್ಜರರ ಮೇಲೂ ದಂಡೆತ್ತಿ ಹೋಗಿದ್ದನೆಂದು ತಿಳಿಯ ಬಂದಿದೆ. ಆ ಅನೇಕ ಅರಸರುಗಳ ನೇತೃತ್ವದಲ್ಲಿ ಇದ್ದಂತಹ ಅತಿ ಪರಾಕ್ರಮಶಾಲಿಯಾದ ಗೂರ್ಜರ ಸೇನೆಯನ್ನು ನರಸಿಂಹನು ಸದೆಬಡಿದನೆಂದೂ ತನ್ನ ಶೌರ್ಯದ್ಯೋತಕವಾದ ಒಂದು ಕೀರ್ತಿಸ್ತಂಭವನ್ನು ಕಾಳಪ್ರಿಯದಲ್ಲಿ ಸ್ಥಾಪಿಸಿದ್ದನೆಂದೂ, ವೇಮುಲವಾಡದ ಶಾಸನವು ಹೇಳುತ್ತದೆ. 'ವಿಕ್ರಮಾರ್ಜುನ ವಿಜಯ'ವು ಈ ಗೂರ್ಜರ ವೈರಿಯು ಮಹೀಪಾಲನೆಂದು ಹೇಳಿ ನರಸಿಂಹನು ತನ್ನ ಕುದುರೆಗಳನ್ನು ಗಂಗಾನದಿಯಲ್ಲಿ ಮಿಸಿಸಿದನೆಂಬ ವಿಷಯವನ್ನೂ ತಿಳಿಯಪಡಿಸುತ್ತದೆ. ಗೂರ್ಜರ ರಾಜನಾದ ಮಹೀಪಾಲನ ಹೆಸರನ್ನು ಇಲ್ಲಿ ಹೇಳಿರುವುದರಿಂದ ಈ ಯುದ್ಧದ ಕಾಲವು ಕ್ರಿ.ಶ. ೯೧೪ರ ತರುವಾಯ ಇದ್ದಿರಬೇಕೆಂದು ನಾವು ಭಾವಿಸಬಹುದು. ಏಕೆಂದರೆ ಮಹೀಪಾಲನು ಕ್ರಿ.ಶ. ೯೧೪ಕ್ಕಿಂತ ಮುಂಚೆ ಇದ್ದಂತೆ ಕಂಡುಬಂದಿಲ್ಲ. ರಾಷ್ಟ್ರಕೂಟರ ಮುಮ್ಮಡಿ ಇಂದ್ರನು ಶತ್ರುನಗರವಾದ ಮಹೋದಯ (ಅಂದರೆ ಕನ್ಯಕುಬ್ಜ)ವನ್ನು ಧೂಳಿಪಾಲು ಮಾಡಿದನೆಂದು ಕ್ಯಾಂಬೇ ತಾಮ್ರಶಾಸನದಿಂದ [3] ನಮಗೆ ತಿಳಿಯುತ್ತದೆ. ಕನ್ಯಕುಬ್ಜದ ಅರಸನಾದ ಮಹೀಪಾಲನ ಮೇಲೆ ಮುಮ್ಮಡಿ ಇಂದ್ರನು ದಂಡೆತ್ತಿ ಹೋದಾಗ ನರಸಿಂಹನು ತನ್ನ ಪ್ರಭುವಾದ ಮುಮ್ಮಡಿ ಇಂದ್ರನನ್ನು ಹಿಂಬಾಲಿಸಿರಬೇಕು. ನರಸಿಂಹನು ತನ್ನ ಕೀರ್ತಿಸ್ತಂಭವನ್ನು ನೆಡಿಸಿದ ಕಾಳಪ್ರಿಯವು ಯಾವುದೆಂದು ಗೊತ್ತಿಲ್ಲ. ನಾಲ್ಮಡಿ ಗೋವಿಂದನ ಕ್ಯಾಂಬೇ ತಾಮ್ರ ಶಾಸನದಲ್ಲಿ ಒಂದು ಕಾಳಪ್ರಿಯವು ಉಕ್ತವಾಗಿದೆ. ಮುಮ್ಮಡಿ ಇಂದ್ರನ ಆನೆಗಳು ಕಾಳಪ್ರಿಯಪ್ರಾಂಗಣವನ್ನು ತಮ್ಮ ದಂತ ಘಾತದಿಂದ ವಿಷಮಮಾಡಿದುವೆಂದು ಅದರಲ್ಲಿ ಹೇಳಿದೆ. ಡಾ. ಡಿ. ಆರ್. ಭಂಡಾರಕರವರು ಉಜ್ಜ

1. Ind. Ant., Vol XIII, pp 65 ff.
2. Ep. Ind., Vol IX pp 32, text-lines 40-41
3. Ep. Ind. Vol VII, p 38 Text-line 21.

ಯಿನಿಯಲ್ಲಿರುವ ಮಹಾಕಾಳನ ದೇವಸ್ಥಾನವೇ ಈ ಕಾಳಪ್ರಿಯವೆಂದು ಹೇಳಿದ್ದಾರೆ. ನರಸಿಂಹನು ಜಯಸ್ತಂಭವನ್ನು ನಾಟಿದ ಕಾಳಪ್ರಿಯವು ಮತ್ತು ಕ್ಯಾಂಬೇ ತಾಮ್ರ ಶಾಸದಲ್ಲಿ ಹೇಳಲ್ಪಟ್ಟಿರುವ ಕಾಳಪ್ರಿಯವೂ ಒಂದೇ ಆಗಿದ್ದರೆ, ಡಾ. ಭಂಡಾರಕರರ ಸೂಚನೆಯಂತೆ ಈ ಕಾಳಪ್ರಿಯವು ಉಜ್ಜಯಿನಿಯೇ ಆಗಿರಬೇಕು. ಈ ಎರಡು ವಿವರಣೆ ಗಳಲ್ಲಿಯೂ ಹೇಳಿರುವ ಕಾಳಪ್ರಿಯವು ಉತ್ತರ ಪ್ರದೇಶದಲ್ಲಿ ಯಮುನಾನದಿಯ ತೀರ ದಲ್ಲಿರುವ ಕಾಲ್ಪಿಯೆಂದು ಕೆಲ ವಿದ್ವಾಂಸರ ಅಭಿಪ್ರಾಯ. ಆದರೆ ಶಾಸನಗಳಲ್ಲಿ ಯಾಗಲೀ ಅಥವಾ ಸಾಹಿತ್ಯದಲ್ಲಾಗಲೀ ಕಾಲ್ಪಿಗೆ ಕಾಳಪ್ರಿಯವೆಂಬ ಹೆಸರಿದ್ದುದು ಕಂಡು ಬಂದಿಲ್ಲ. ತಕ್ಕ ಆಧಾರಗಳು ಸಿಕ್ಕುವವರಿಗೆ ಈ ಕಾಳಪ್ರಿಯವು ಕಾಲ್ಪಿಯೇ ಅಥವಾ ಉಜ್ಜಯಿನಿಯೇ ಎಂದು ಹೇಳುವುದು ಕಷ್ಟಕರವಾದ ವಿಷಯ. ಈ ಅರಸನ ನಂತರ ಪಟ್ಟಕ್ಕೆ ಬಂದ ಇಮ್ಮಡಿ ಅರಿಕೇಸರಿಯು ಶರಣಾಗತನಾದ ಬಿಜ್ಜನನ್ನು ರಕ್ಷಿಸಿದನೆಂದು ವೇಮುಲವಾಡ ಶಾಸನವು ಹೇಳುತ್ತದೆ. ಬಿಜ್ಜನು ಆರ್ಯ ಪದ್ಮಾರ್ಯ್ಯ ನನ್ನು ಕೊಂದು ಅನೇಕ ಸೇನಾನಾಯಕರನ್ನೂ ಅವರ ವಿಪುಲವಾದ ಗಜಸೇನೆಯನ್ನೂ ಅಶ್ವಸೇನೆಯನ್ನೂ ಪದಾತಿ ಸೇನೆಯನ್ನೂ ಧ್ವಂಸಮಾಡಿ ಗೋವಿಂದರಾಜನ ಕೋಪಕ್ಕೆ ಗುರಿಯಾದನೆಂದೂ, ಗೋವಿಂದರಾಜನ ಸಿಟ್ಟಿಗೆ ಅಂಜಿ, ಇಮ್ಮಡಿ ಅರಿಕೇಸರಿಯನ್ನು ಮರೆಹೊಕ್ಕನೆಂದೂ ಶಾಸನದಲ್ಲಿ ವಿವರಿಸಲ್ಪಟ್ಟಿದೆ. ಈ ಪದ್ಮಾರ್ಯ್ಯನು ಯಾರೆಂಬುದು ಗೊತ್ತಾಗಿಲ್ಲ. ಅರಿಕೇಸರಿಯು ತನಗೆ ಶರಣಾಗತನಾದ ಬಿಜ್ಜನನ್ನು ಕಾದನೆಂದು ಪಂಪನೂ ಸಹ ಹೇಳುತ್ತಾನೆ. ಅಷ್ಟೇ ಅಲ್ಲದೆ ಪಂಪನು ಬಿಜ್ಜನಿಗೆ ವಿಜಯಾದಿತ್ಯನೆಂಬ ಪೂರ್ಣನಾಮಧೇಯವನ್ನು ಕೊಟ್ಟು ಈತನು ಚಾಲುಕ್ಯ ಕುಲತಿಲಕನಾಗಿದ್ದನೆಂದು ಹೇಳುತ್ತಾನೆ. ಕಕ್ಕಲನ ತಮ್ಮನಾದ ಬಪ್ಪುವನು ಅರಿಕೇಸರಿಯನ್ನು ಎದುರಿಸಿದಾಗ ಈತನು ಬಪ್ಪುವನನ್ನು ಹೊಡದೋಡಿಸಿದನೆಂದೂ ಪಂಪನು ಹೇಳುತ್ತಾನೆ. ಆದರೆ ಪಂಪನು ವರ್ಣಿಸಿರುವ ಇಮ್ಮಡಿ ಅರಿಕೇಸರಿಯ ಪರಾಕ್ರಮಗಳಲ್ಲಿ ಮುಖ್ಯವಾದುದು ಯಾವುದೆಂದರೆ ಈತನು ಗೋವಿಂದರಾಜನನ್ನು ಸೋಲಿಸಿ ತನ್ನನ್ನು ನಂಬಿಬಂದ ಬದ್ದೆಗನನ್ನು (ಅಂದರೆ ರಾಷ್ಟ್ರಕೂಟ ಮುಮ್ಮಡಿ ಅಮೋಘವರ್ಷ) ಪಟ್ಟಕ್ಕೆ ತಂದುದು. ಇಮ್ಮಡಿ ಅರಿಕೇಸರಿಯು ಗೋವಿಂದನನ್ನು ಸೋಲಿಸಿ ಮುಮ್ಮಡಿ ಅಮೋಘವರ್ಷ ನನ್ನು ಸಿಂಹಾಸನಾರೂಢನನ್ನಾಗಿ ಮಾಡಿ ಚಾಲುಕ್ಯ ವಿಜಯಾದಿತ್ಯನಿಗೆ ಆಶ್ರಯವನ್ನು ಕೊಟ್ಟ ಕಾಲವನ್ನು ನಾವು ಸುಲಭವಾಗಿ ಕಂಡು ಹಿಡಿಯಬಹುದು. ಗೋವಿಂದನು ಭೋಗಲೋಲನಾಗಿದ್ದುದರಿಂದ ಆತನು ಪದಚ್ಯುತನಾದನೆಂಬುದು ಎಲ್ಲರಿಗೂ ವಿದಿತ ವಾದ ವಿಷಯವೇ. ಈತನ ಕೊನೆಯ ಕಾಲವು (ನಮಗೆ ತಿಳಿದಿರುವ ಮಟ್ಟಿಗೆ) ಕ್ರಿ.ಶ. ೯೩೪. ಆದುದರಿಂದ ಈ ಎಲ್ಲ ವಿಶೇಷಕಾರ್ಯಗಳು (ಪದಚ್ಯುತಿಯೊಂದನ್ನು ಳಿದು) ಸುಮಾರು ಕ್ರಿ ಶ. ೯೩೪ರಲ್ಲಿ ಜರುಗಿರಬೇಕು. ಈ ವಿವರಣೆಗಳಲ್ಲಿ ಚಾಲುಕ್ಯ ವಿಜಯಾದಿತ್ಯನ ವಂಶಾವಳಿಯಾಗಲೀ, ಆತನ ರಾಜ್ಯದ ವಿಸ್ತಾರವಾಗಲೀ ಕೊಟ್ಟಿಲ್ಲ. ರಾಷ್ಟ್ರಕೂಟ ಸಾಮ್ರಾಜ್ಯದ ಅನೇಕ ಭಾಗಗಳನ್ನು ಚಾಲುಕ್ಯವಂಶದ ಅನೇಕ

ಸಾಮಂತರು ನೋಡಿಕೊಳ್ಳುತ್ತಿದ್ದುದರಿಂದ ಈ ರಾಜಪುತ್ರನು ಯಾರೆಂಬುದನ್ನು ನಿರ್ಧಾರ ಮಾಡುವುದು ಕಷ್ಟವಾಗಿದೆ. ಕೆಲವು ವಿದ್ವಾಂಸರು ಈತನು ಪೂರ್ವ ಚಾಲುಕ್ಯರ ವಂಶದವನೆಂದು ಭಾವಿಸುತ್ತಾರೆ. ಇನ್ನೊಬ್ಬ ವಿದ್ವಾಂಸರು ಮುದುಗೊಂಡ ಚಾಲುಕ್ಯವಂಶದ ಇದೇ ಹೆಸರುಳ್ಳ ಒಬ್ಬ ಅರಸನೇ ಇವನು ಎಂದು ಹೇಳುತ್ತಾರೆ. ಅಣ್ಣತಮ್ಮಂದಿರಾದ ಕಕ್ಕಲ ಮತ್ತು ಬಪ್ಪುವರು ಯಾವ ಕುಲದವರೆಂದಾಗಲೀ. ಅಥವಾ ಅವರು ಎಲ್ಲಿ ರಾಜ್ಯಭಾರ ಮಾಡುತ್ತಿದ್ದರೆಂದಾಗಲೀ ಎಲ್ಲಿಯೂ ಹೇಳಿಲ್ಲ. ಆದರೆ, ಪ್ರೊ. ನೀಲಕಂಠಶಾಸ್ತ್ರಿಯವರು ಅಪ್ರಕಟಿತ ಶಿಲಾಹಾರ ಶಾಸನವೊಂದರಲ್ಲಿ ಮುಮ್ಮಡಿ ಅಮೋಘವರ್ಷನಿಂದ ಸೋಲಿಸಲ್ಪಟ್ಟನೆಂದು ಹೇಳಿರುವ ಕರ್ಕರನೂ ಮತ್ತು 'ವಿಕ್ರಮಾರ್ಜುನವಿಜಯ'ದ ಕಕ್ಕಲನೂ ಒಬ್ಬನೇ ಆಗಿರಬೇಕೆಂದು ಸೂಚಿಸಿದ್ದಾರೆ.

ಪ್ರಖ್ಯಾತ ಯೋಧನು ಮಾತ್ರವಲ್ಲದೆ ಇಮ್ಮಡಿ ಅರಿಕೇಸರಿಯು ಸ್ಫುರದ್ರೂಪಿಯೂ ವಿದ್ಯಾವಂತನೂ ಆಗಿದ್ದನು. ಈತನು ಕರೇಣುಪುತ್ರ (ಅಂದರೆ ಪಾಲಕಾಪ್ಯ)ನಂತೆ ಗಜಚಿಕಿತ್ಸಾಕೋವಿದನೂ, ಗೌತಮನಂತೆ ಕಥಾಬಂಧ ಕುಶಲನೂ, ಸಕಲ ಕಲಾನಿಲಯನೂ, ಅತಿಚತುರನೂ, ತೇಜಸ್ವಿಯೂ ಆಗಿದ್ದನೆಂದು ವೇಮುಲವಾಡ ಶಾಸನವು ಹೇಳುತ್ತದೆ. ಶಾಸನಗಳಿಂದಲೂ ಮತ್ತು 'ವಿಕ್ರಮಾರ್ಜುನ ವಿಜಯ'ದಿಂದಲೂ ಈತನಿಗೆ ಈ ಕೆಳಗೆ ಕೊಟ್ಟಿರುವ ಬಿರುದುಗಳು ಇದ್ದುವೆಂದು ತಿಳಿಯುತ್ತದೆ. ಗುಣಾರ್ಣವ, ಆರೂಢಸರ್ವಜ್ಞ, ಉದಾತ್ತನಾರಾಯಣ, ಶಾಂಬರಾಂಕುಶ, ಪ್ರಿಯಗಳ್ಳ, ತ್ರಿಭುವನಮಲ್ಲ ಸಾಮಂತಚೂಡಾಮಣಿ, ಜಗದೇಕಮಲ್ಲ, ನೋಡುತ್ತೆ ಗೆಲ್ವೊಂ, ಸಾಹಸಾರ್ಜುನ—ಇತ್ಯಾದಿ.

ವೇಮುಲವಾಡದ ಶಾಸನದ ಪ್ರಕಾರ ಮೊದಲನೆಯ ಅರಿಕೇಸರಿಯು ಇಂದ್ರರಾಜನ (ಅಂದರೆ ರಾಷ್ಟ್ರಕೂಟ ಮುಮ್ಮಡಿ ಇಂದ್ರನ) ಮಗಳಾದ ರೇವಕನಿಮ್ಮಡಿಯನ್ನು ಮದುವೆಯಾಗಿದ್ದನು. ರಾಷ್ಟ್ರಕೂಟ ವಂಶದ ಲೋಕಾಂಬಿಕೆಯು ಈತನ ಹೆಂಡತಿಯಾಗಿದ್ದಳೆಂದು ಪರಭಣಿ ತಾಮ್ರ ಶಾಸನವು ಹೇಳುತ್ತದೆ. ಈ ಎರಡು ಹೆಸರುಗಳು ಒಬ್ಬ ರಾಜಕುಮಾರಿಗೆ ಇದ್ದುವೋ ಅಥವಾ ಇಬ್ಬರೂ ಬೇರೆ ಬೇರೆ ವ್ಯಕ್ತಿಗಳೋ ತಿಳಿಯದು. ಆದರೆ ಈತನ ಮಗನಾದ ಬದ್ದೆಗನು ಲೋಕಾಂಬಿಕೆಯ ಮಗನೆಂದು ಗೊತ್ತಿದೆ. ಪೆದ್ದಣಾರ್ಯನೆಂಬಾತನು ಎರಡನೆ ಅರಿಕೇಸರಿಯ ತಂತ್ರಪಾಲನಾಗಿದ್ದನೆಂದು, ವೇಮುಲವಾಡದ ಶಾಸನದಿಂದ ಗೊತ್ತಾಗುತ್ತದೆ. ಆತನು ಬದ್ದೆಗರಾಜನ ತಂತ್ರಾಧಿಪನಾಗಿದ್ದ ನಾಗಮಾರ್ಯನ ಮಗನೆಂದು ಅದರಲ್ಲಿಯೇ ಹೇಳಿದೆ. ಈ ಬದ್ದೆಗನು ಇಮ್ಮಡಿ ಅರಿಕೇಸರಿಯ ಮುತ್ತಾತನಾದ ಸೋಲದಗಂಡ ಬದ್ದೆಗನಾಗಿರಬೇಕು.

ಅರಿಕೇಸರಿಯು ಪಂಪನನ್ನು ಅವನ ಭಾರತ ರಚನೆಗಾಗಿ ಯಾವ ರೀತಿಯಲ್ಲಿ ಗೌರವಿಸಿದನೆಂದು ಹೇಳುವ ಸಂದರ್ಭದಲ್ಲಿ ಈ ಕವಿಯು ಉಲ್ಲೇಖಿಸಿರುವ ಒಂದು ಸಂಗತಿಯು ಗಮನಾರ್ಹವಾಗಿದೆ. ಗುಣಾರ್ಣವನು (ಅಂದರೆ ಇಮ್ಮಡಿ ಅರಿಕೇಸರಿಯು

ಕವಿತಾಗುಣಾರ್ಣವನನ್ನು (ಅಂದರೆ ಪಂಪನನ್ನು) ಬಲ್ಲಹನೂ (ಬಹುಶಃ ಮುಮ್ಮಡಿ ಕೃಷ್ಣ) ಅರಿಯುವಂತೆ ವಿಶೇಷವಾಗಿ ಕೊಂಡಾಡಿದನೆಂದು ಪಂಪನು ಹೇಳುತ್ತಾನೆ. ಇದರಿಂದ ಅರಿಕೇಸರಿಯು ಕೃಷ್ಣನ ಮಾಂಡಲಿಕನಾಗಿದ್ದನೆಂಬುದು ಮಾತ್ರವಲ್ಲದೆ ಪಂಪನ ಕವಿತಾಚಾತುರ್ಯವೂ ಪ್ರತಿಭೆಯೂ ಸಾರ್ವಭೌಮನಿಗೆ ನಿವೇದಿಸುವಷ್ಟು ಉನ್ನತವಾಗಿದ್ದುವೆಂದು ವ್ಯಕ್ತವಾಗುತ್ತದೆ. ಇದಕ್ಕೆ ತಕ್ಕಂತೆ ಇಮ್ಮಡಿ ಅರಿಕೇಸರಿಯು ಪಂಪನ ಕವಿತಾಶಕ್ತಿಯನ್ನು ಮೆಚ್ಚಿ ಬಚ್ಚೆಸಾಸಿರದಲ್ಲಿರುವ ಧರ್ಮಪುರಂ ಎಂಬ ಅಗ್ರಹಾರವನ್ನು ಪಂಪನಿಗೆ ದಾನವಾಗಿ ಕೊಟ್ಟನು. ಪಂಪ ಭಾರತದ ಸಂಪಾದಕರು ಈ ರಾಜ್ಯಭಾಗದ ಹೆಸರನ್ನು ಕುರಿತು ಚಚ್ಚೆ ಮತ್ತು ಚರ್ಚೆ ಎಂಬ ಎರಡು ಪಾಠಾಂತರಗಳನ್ನು ಕೊಟ್ಟಿದ್ದಾರೆ. ಮುಮ್ಮಡಿ ಅರಿಕೇಸರಿಯ ಪರಭಣಿ ತಾಮ್ರ ಶಾಸನದಲ್ಲಿಯೂ ಇತರ ಕೆಲ ಶಾಸನಗಳಲ್ಲಿಯೂ ಸಬ್ಬಿಸಾಯಿರವೆಂಬ ಒಂದು ರಾಜ್ಯಭಾಗವು ಉಲ್ಲೇಖಿಸಲ್ಪಟ್ಟಿದೆ. ಬಚ್ಚೆ (ಚಚ್ಚೆ, ಚರ್ಚೆ) ಎಂಬುದು 'ಸಬ್ಬಿ'ಯ ರೂಪಾಂತರವಾದ 'ಚಬ್ಬಿ'ಗೆ ತಪ್ಪು ಪಾಠಾಂತರವಾಗಿರಬೇಕೆಂದು ನನ್ನ ಅಭಿಪ್ರಾಯ. ಚಬ್ಬಿ (೨೧೦೦೦) ಎಂಬ ಒಂದು ರಾಜ್ಯಭಾಗವಿದ್ದಿತೆಂದು ೧೧ನೆಯ ಶತಮಾನದ ಶಾಸನವೊಂದರಿಂದ ತಿಳಿಯುತ್ತದೆ. ಸಬ್ಬಿಯು ಒಂದು ೧೦೦೦ದ ರಾಜ್ಯಭಾಗವೆಂಬ ವಿಷಯವು ನಮಗೆ ಗೊತ್ತೇ ಇದೆ ಇದರಲ್ಲಿ ರೇಪಾಕ ೧೨ ಎಂಬ ಮಾಗಣೆ (ಸಣ್ಣ ವಿಭಾಗ) ಇತ್ತು. ಈ ರೇಪಾಕ ೧೨ರಲ್ಲಿ ವನಿಕಟುಪುಲು, ಇಳಿಂದಿಕುಂಟೆ, ಕಟ್ಟಾಕೂರು, ಮತ್ತು ವೆಳ್ಳಾಳಪಟ್ಟು ಎಂಬ ಗ್ರಾಮಗಳು ಇದ್ದುವು. ಈ ಗ್ರಾಮಗಳು ಹೈದರಾಬಾದ್ ಸಂಸ್ಥಾನದ ಕರೀಮ್‌ನಗರ ಜಿಲ್ಲೆಯ ಸಿರಸಿಲ್ಲಾ ತಾಲುಕಿನಲ್ಲಿ ಇವತ್ತಿಗೂ ಹೆಚ್ಚೂ ಕಡಿಮೇ ಇವೇ ಹೆಸರುಗಳಿಂದ ಕರೆಯಲ್ಪಡುತ್ತವೆ. ಕೀರ್ತಿಶೇಷರಾದ ರಾ, ಬ. ಹೊಸಕೋಟೆ ಕೃಷ್ಣಶಾಸ್ತ್ರಿಗಳು ಹನುಮಕೊಂಡ ಮತ್ತು ವಾರಂಗಲ್ ಗ್ರಾಮಗಳು ಸಬ್ಬಿ ಸಾಯಿರದಲ್ಲಿ ಇದ್ದಿರಬಹುದೆಂದು ಅಭಿಪ್ರಾಯ ಪಟ್ಟಿದ್ದಾರೆ. ಬಚ್ಚೆ ಸಾಯಿರವೂ, ಸಬ್ಬಿ ಸಾಯಿರವೂ ಒಂದೇ ಎಂಬ ನಮ್ಮ ಸೂಚನೆಯು ಸರಿಯಾಗಿದ್ದರೆ ಪಂಪನಿಗೆ ದಾನವಾಗಿ ಕೊಟ್ಟಂತಹ ಧರ್ಮಪುರ ಅಗ್ರಹಾರವು ಈ ಪ್ರಾಂತದಲ್ಲಿ ಇದೇ ಹೆಸರಿನಿಂದ ಇವತ್ತಿಗೂ ಕರೆಯಲ್ಪಡುತ್ತಿರುವ ಅನೇಕ ಹಳ್ಳಿಗಳಲ್ಲಿ ಯಾವುದಾದರೂ ಒಂದಾಗಿರಬೇಕು.

ಇಮ್ಮಡಿ ಅರಿಕೇಸರಿಯ ಮಗನಾದ ಮುಮ್ಮಡಿ ಬದ್ದೆಗನ ವಿಷಯವಾಗಿ ವೇಮುಲವಾಡ ಶಾಸನದಿಂದಲೂ ಮತ್ತು ಬದ್ದೆಗನು ಆಶ್ರಯವಿತ್ತ ಸೋಮದೇವ ಸೂರಿಯ 'ಯಶಸ್ತಿಲಕ ಚಂಪು'ವಿನಿಂದಲೂ ಕೆಲವು ಅಂಶಗಳು ತಿಳಿಯುತ್ತದೆ. ಗೌಡಸಂಘಕ್ಕೆ ಅಧಿಪನಾದ ಸೋಮದೇವ ಸೂರಿಯ ಉಪಯೋಗಕ್ಕಾಗಿ ಬದ್ದೆಗನು ಶುಭಧಾಮ ಜಿನಾಲಯವನ್ನು ಕಟ್ಟಿಸಿದನೆಂಬ ಸಂಗತಿಯನ್ನು ಮೊದಲೇ ಹೇಳಿದ್ದೇವೆ. ಬದ್ದೆಗನ ಮಗನಾದ ಮುಮ್ಮಡಿ ಅರಿಕೇಸರಿಯ ಪರಭಣಿ ಶಾಸನದಲ್ಲಿಯೂ ಬದ್ದೆಗನು ಈ ಜಿನಾಲಯವನ್ನು ಕಟ್ಟಿಸಿದ ಸಂಗತಿಯು ಉಕ್ತವಾಗಿದೆ. ಯಾರ ಉಪಯೋಗಕ್ಕಾಗಿ ಬದ್ದೆಗನು ಈ ಜಿನಾಲಯವನ್ನು ಕಟ್ಟಿ

ಸಿದನೋ ಆ ಸೋಮದೇವ ಸೂರಿಯೇ 'ಯಶಸ್ತಿಲಕ ಚಂಪು'ವಿನ ಗ್ರಂಥಕರ್ತನು. ಈ ಚಂಪುವಿನ ಕೊನೆಯ ಭಾಗದಲ್ಲಿ ಈ ಜೈನಮುನಿಯು, ತಾನು ಈ ಗ್ರಂಥವನ್ನು ಇಮ್ಮಡಿ ಅರಿಕೇಸರಿಯ ಮಗನಾದ ಬದ್ದೆಗನ ಆಶ್ರಯದಲ್ಲಿ ಶಕ. ೮೮೧ ಅಥವಾ ಕ್ರಿ. ಶ. ೯೫೯ರಲ್ಲಿ ಗಂಗಾಧಾರಾ ಎಂಬ ಸ್ಥಳದಲ್ಲಿ ಪೂರ್ತಿಗೊಳಿಸಿದನೆಂದು ಹೇಳುತ್ತಾನೆ. ಆ ಸಮಯದಲ್ಲಿ ರಾಷ್ಟ್ರಕೂಟ ಮುಮ್ಮಡಿ ಕೃಷ್ಣನು ಮೇಲ್ಪಾಟಿಯ ಬೀಡಿನಲ್ಲಿದ್ದನೆಂದು ಹೇಳಿದ್ದಾನೆ. ಕೃಷ್ಣನು ಚೋಳರ ಮೇಲೆ ದಂಡೆತ್ತಿ ಹೋದಾಗ ಮೇಲ್ಪಾಟಿ (ಚಿತ್ತೂರು ಜಿಲ್ಲೆಯಲ್ಲಿ) ಯಲ್ಲಿದ್ದನೆಂಬ ಸಂಗತಿಗೆ ಆಧಾರವು ಕ್ರಿ.ಶ.೯೫೯ರ ಕೃಷ್ಣನ ಕರ್ಹಾಡ್ ತಾಮ್ರ ಶಾಸನದಲ್ಲಿ ದೊರಕುತ್ತದೆ. ಯಶಸ್ತಿಲಕವು ರಚಿತವಾದ ಗಂಗಾಧಾರಾ ಪಟ್ಟಣವು ರಾಜಧಾನಿ ವೇಮುಲವಾಡದ ಸಮೀಪದಲ್ಲಿ ಇವತ್ತಿಗೂ ಅದೇ ಹೆಸರಿನಿಂದ ಕರೆಯಲ್ಪಡುತ್ತಿದೆ.

ಈ ವಂಶದ ಅರಸರುಗಳಲ್ಲಿ ಕೊನೆಯವನು (ಇದುವರೆಗೆ ತಿಳಿದಿರುವ ಹಾಗೆ) ಬದ್ದೆಗನ ಮಗನಾದ ಮುಮ್ಮಡಿ ಅರಿಕೇಸರಿ. ಈತನ ವಿಷಯವಾಗಿ ತಿಳಿದಿರುವ ಸಮಾಚಾರವೆಲ್ಲವೂ ಪರಭಣಿ ತಾಮ್ರಶಾಸನ ಒಂದರಿಂದಲೇ. ಈ ಶಾಸನವು ಈತನನ್ನು ಕೃಷ್ಣರಾಜನ ಸಾಮಂತನೆಂದು (ಪಾದಪದ್ಮೋಪಜೀವಿ) ವರ್ಣಿಸುತ್ತದೆ. ಶಾಸನದಲ್ಲಿ ಕೊಟ್ಟಿರುವ ಈತನ ಪ್ರಶಸ್ತಿಯಿಂದ ಈತನಿಗೆ ಪಾಂಬರಾಂಕುಶ, ಉದಾತ್ತನಾರಾಯಣ, ತ್ರಿಭುವನಮಲ್ಲ, ಪ್ರಿಯಗಳ್ಳ, ಪ್ರತ್ಯಕ್ಷವಾದ್ವಳಿ, ವಿಕ್ರಮಾರ್ಜುನ ಮತ್ತು ಗುಣಾರ್ಣವ ಎಂಬಿವೇ ಮೊದಲಾದ ಬಿದುದುಗಳು ಇದ್ದುವೆಂದು ಗೊತ್ತಾಗುತ್ತದೆ. ಈತನ ಅಜ್ಜನಿಗೂ ಸ್ವಲ್ಪ ಕಡಿಮೆ ಈ ಬಿರುದುಗಳೆಲ್ಲವೂ ಇದ್ದುವೆಂಬುದನ್ನು ನಾವು ಜ್ಞಾಪಕದಲ್ಲಿಡಬೇಕು. ಶ.ಕ. ೮೮೮ರಲ್ಲಿ (ಕ್ರಿ.ಶ. ೯೬೬) ಸಬ್ಬಿ ೧೦೦೦ದಲ್ಲಿದ್ದ ವನಿಕಟುಪುಲು ಎಂಬ ಗ್ರಾಮವು ಜೈನಾಚಾರ್ಯನಾದ ಸೋಮದೇವ ಸೂರಿಗೆ ಶುಭದಾಮ ಜಿನಾಲಯ ಎಂಬ ವಸತಿಯ (ಬಸದಿಯ) ಖಂಡಸ್ಫುಟಿತ ನವಸುಧಾಯಕರ್ಮ ಬಲಿನಿವೇದ್ಯರ್ಥವಾಗಿ ಕೊಡಲ್ಪಟ್ಟಿತೆಂದು ಈ ಶಾಸನದಲ್ಲಿ ಹೇಳಿದೆ ಈ ಶುಭದಾಮ ಜಿನಾಲಯವು ಈ ಅರಸನ ತಂದೆಯಾದ ಬದ್ದೆಗನಿಂದ ಲೇಂಬುಳಪಾಟಕದಲ್ಲಿ ಕಟ್ಟಿಸಲ್ಪಟ್ಟಿತೆಂದೂ ಈ ಶಾಸನದಲ್ಲಿ ಹೇಳಿದೆ. ಸೋಮದೇವ ಸೂರಿಯ ಗುರು ಪರಂಪರೆಯು ಶಾಸನದಲ್ಲಿ ಈ ರೀತಿಯಾಗಿ ವರ್ಣಿಸಲ್ಪಟ್ಟಿದೆ. ಗೌಡಸಂಘದಲ್ಲಿ ಯಶೋದೇವನೆಂಬ ಮುನಿಯು ವಿರಾಜಿಸುತ್ತಿದ್ದನು. ಆತನ ಶಿಷ್ಯನು ನೇಮಿದೇವ. ನೇಮಿದೇವನ ಶಿಷ್ಯರಲ್ಲಿ ಅಗ್ರಗಣ್ಯನು ಸೋಮದೇವ. ಯಶೋಧರಚರಿತೆ, ಸ್ಯಾದ್ವಾದೋಪನಿಷತ್ ಮತ್ತು ಅನೇಕ ಸುಭಾಷಿತಗಳ ಗ್ರಂಥಕರ್ತನೆಂದು ಸೋಮದೇವನು ಹೊಗಳಲ್ಪಟ್ಟಿದ್ದಾನೆ. ಅನೇಕ ರಾಜರುಗಳಿಂದ ಈತನು ಮರ್ಯಾದೆಯನ್ನು ಹೊಂದುತ್ತಿದ್ದನು. ಈ ಶಾಸನವು ಕವಿ ಪೆದ್ದಣ್ಣನಿಂದ ಬರೆಯಲ್ಪಟ್ಟಿತೆಂದು ಹೇಳಿದೆ. ಈ ಪೆದ್ದಣ್ಣನು ಇಮ್ಮಡಿ ಅರಿಕೇಸರಿಯ ತಂತ್ರಾಧಿಪನಾದ ಪೆದ್ದಣ್ಣಾರ್ಯನೋ ಅಥವಾ ಬೇರೊಬ್ಬನೋ ಎಂದು ನಿರ್ಧರಿಸುವುದಕ್ಕೆ ತಕ್ಕ ಆಧಾರಗಳಿಲ್ಲ. ಇಬ್ಬರಿಗೂ ಒಂದೇ ಹೆಸರೇನೋ ಇದೆ; ಅಷ್ಟೆ.

ಈ ಲೇಖನದ ಮುಖ್ಯಾಂಶಗಳು ಇಮ್ಮಡಿ ಅರಿಕೇಸರಿಯ ವೇಮುಲವಾಡ ಶಾಸನದಲ್ಲಿ ಕಂಡುಬಂದ ಸಂಗತಿಗಳ ಆಧಾರದ ಮೇಲೆ ಬರೆಯಲ್ಪಟ್ಟಿವೆ. ಈ ಶಾಸನದ ಪ್ರಕಟಣೆಯು ಅನೇಕ ಬಾರಿ ಆಗಿದ್ದರೂ ಸಹ ಪ್ರಕಟಿತವಾದ ಶಾಸನ ಪಾಠಗಳು ಸಮರ್ಪಕವಾಗಿಲ್ಲ. ಶಾಸನವಿರುವ ಸ್ಥಳಕ್ಕೆ ನಾನು ಹೋಗಿ ಮೂಲ ಶಾಸನವನ್ನೇ ಪರೀಕ್ಷಿಸಲು ಅವಕಾಶವೊದಗಿದ್ದರಿಂದ ಮೊದಲಿಗಿಂತ ತೃಪ್ತಿಕರವಾಗಿ ಶಾಸನವನ್ನೋದಿ ಅದರ ಪಾಠವನ್ನು ಕೆಳಗೆ ಕೊಟ್ಟಿದ್ದೇನೆ.

## ಎರಡನೆಯ ಅರಿಕೇಸರಿಯ ವೇಮುಲವಾಡ ಶಿಲಾಶಾಸನ

1 ಶ್ರೀಮಾನ್ಭಾನುಸ್ತಮೋಹಂತಾ ದೈತ್ಯದರ್ಪ್ಪಹರಃಪ್ರ[ರಃ।]
2 ಲೋಕೈಕಲೋಚನಃಪ್ರಾಯಾದವಾಯಾದ್ಭುವನತ್ರಯಂ ॥
3 ಸ್ವಸ್ತಿ ಸಮಸ್ತವಿಬುಧಾ(ಧ)[1] ಜನಸಂಸ್ತೂಯಮಾನಸ್ಸಕ-
4 ಳಕಳಾಕಮಳೈಕರಾಜಹಂಸಃ ಕಂಸಮಥನ್ನೈವ(ನ ಇವ)
5 ಕಮಳಾಕರೀಕೃತವಕ್ಷಸ್ಥಳ[ಃ[2] *] ಸ್ಥಾಣುರಿವಭಾ(ಭ)ಸ್ಮ-
6 ಸಾತ್ಕೃತಸಮಸ್ತಾರಿಪು[ರ][3] ಪ್ರ[ಬ]ನ್ಧಃ ಪ್ರವೃ[ದ್ಧೋ]ದಯ
ಪ್ರಬೋಧಿತಾ-
7 ಶೇಷಪ್ರವಾಹಾಂಭೋಜಾನ್ವರ್ತ್ಥೀಕೃತವಿನಯಾದಿತ್ಯ-
8 ನಾಮಧೇಯಃಪ್ರಸಾಧಿತಾಶೇಷದಿಗ್ಮ(ಙ್ಮ)ಣ್ಡಳಶ್ಚ ಪ[ರ]-
9 ಮಣ್ಡಳೈಕರಾಮಶ್ಚಾಳುಕ್ಯಕುಳತಿಳಕಃ ಶ್ರೀಯುದ್ಧ-
10 ಮಲ್ಲೋ ನಾಮ ರಾಜಾ ಬಭೂವ ॥ ಸೋಯಂ ಕಿಳಾಶಾಸದ-
11 ನನ್ಯಶಾಸ್ಯಾಂ ಸವಾದಲಕ್ಷಾಂಕ್ಷಿತಿಮಕ್ಷತಾಜ್ಞಃ[।*] ಸ-
12 ಮಸ್ತರಾಜೇನ್ದ್ರಕಿರೀಟಕೋಟಿಮಾಣಿಕ್ಯರಾ(ರ)ಶ್ಮಿಪ್ರಕ-
13 ರ(ರಾ)ರ್ಚ್ಚಿತಾಂಘ್ರಿಃ ॥ ಯಃಪ್ರಾದನೇ ಸೌಧಮಯೀಂ[ಂ]-
ಗಜಾನಾ[ಂ]ವಿ-
14 ಧಾಯವಾಪೀಮಪಿ ತೈಲಪೂರ್ಣೈ[ಃ।*]ಸ್ಸ [ಸ]ಸರ್ವ್ವಸೇಕಂ ಸ-
15 ತತಂ ವಿತೇನೇ ಚಾಸ್ರೈಃ ಕುಚಾನಾಮರಿಸುನ್ದರೀಣಾಂ ॥
16 ಸ ಚಿತ್ರಕೂಟಂ ಬಹುಚಿತ್ರಕೂಟಂ ಶಕ್ಯಾ(ಕ್ಯಂ)ಸುರೇನ್ದ್ರೈರಪಿ

1 (  ) ಎಂಬ ಆವರಣ ಚಿಹ್ನೆಗಳ ನಡುವೆ ಇರುವ ಅಕ್ಷರಗಳನ್ನು ತಿದ್ದುಪಡಿಯೆಂದು ತಿಳಿಯಬೇಕು.

2 [ * ] ಎಂಬ ಚಿಹ್ನೆಗಳ ನಡುವೆ ಇರುವ ಅಕ್ಷರಗಳು ಮೂಲದಲ್ಲಿಲ್ಲ.

3 [  ] ಎಂಬ ಚಿಹ್ನೆಗಳ ನಡುವೆ ಇರುವ ಅಕ್ಷರಗಳು ಮೂಲದಲ್ಲಿ ಸಂದೇಹಾಸ್ಪದವಾಗಿವೆ.

17 ನೋಪಯಾತುಂ[।*] ತ್ರಿವರ್ಗ್ಗಯುಕ್ತಃಪ್ರಣತಾರಿವರ್ಗ್ಗ-
18 ಸ್ಸ್ವಭಾವದುರ್ಗ್ಗಂ ಕಿಳ ತಂ ಜಹಾರ ॥ ತಸ್ಯಾತ್ಮಜೋ ದ-
19 ಕ್ಷಿಣಬಾಹುದಣ್ಡಚಣ್ಡಾಸಿಧಾರಾಹತವೈರಿ
20 ಷಣ್ಡಃ[।*] ಬಾಳೋದ್ಗೃಹೀತಾಖಿಳವೇಙ್ಗಿದೇಶಃಪ್ಪಾ-
21 ತಿ ಸ್ಮ ಪೃಥ್ವೀಮರಿಕೇಸರೀಶಃ [॥*]ಭೂಯೋಸ್ಮಾನ್ನ-
22 ರಸಿಂಹವರ್ಮ್ಮನೃಪತಿರ್ಭೂಮಿಂ ಸಮಾಪಾಳಯ-
23 ನ್ರಾ(ದ್ರಾ)ಜಾದಿತ್ಯ ಇತಿ ಕ್ಷಮಾಪತಿರತಾ (ತಃ) ಶ್ರೀಯುದ್ಧಮ-
24 ಲ್ಲೋ ನೃಪಃ [॥*] ತ್ಯಕ್ತಾ ಯೇನ ದರೀವಿವರ್ಣ್ಣವಿಪಿ [ನ]ಸ್ತ್ರಾತ್ರೈನ್ಯೈಃ [ವೃತಾ]
25 ಭೂಭುಜಃಪ್ರಶ್ಚಾದ್ಬದ್ದೆಗಕಲ್ಪದಾರುರಪರಃ ಶ್ರೀಯುದ್ಧ-
26 ಮಲ್ಲಃಪ್ಪನಃ ॥ ತತಸ್ಸ ರಾಜನ್ಯಶಿರೋಮಣೀನಾಮ್ಪುದಾರ-
27 ವಿನ್ದೇನ ರುಚೋ ಹರದ್ಯಃ[।*] ಬಭೂವ ನಾಮ್ನಾನರಸಿಂಹದೇವ[ಃ] ಸ್ತಂ-
28 ಭಾತ್ಪುಮಾನ್ಲೋಕವೃತಾವಿ(ದಿ)ವಾದ್ಯಃ ॥ ಯ[ಃ*] ಸಪ್ತದುಸ್ಸಾಧತರಂ ನೃ-

## Second Face

29 ಪಾಣಾನ್ನಿರ್ಜ್ಜಿತ್ಯ ಸದ್ಯಸ್ಸಮರಾಂಗ-
30 ಣೇಷು[।*] ವಿನ್ಯಸ್ಯಕೇ ಹಸ್ತಮತೋ ನತಾನಾಂ
31 ಸ್ತಾ(ತಾ)ನ್ಮಾಳವ(ವಾ)ನ್ಯಃ ಕರ[ದೀ]ಚಕಾರ ॥ ಪ್ರತ್ಯುದ್ಗತಾಂ
32 ಗೂರ್ಜ್ಜರರಾಜಸೇನಾಂ ನಿರ್ಜ್ಜಿತ್ಯ ರಾಜಾ ಸ್ವಯ[ಮೇ]ಕ
33 ಏವ[।*] ಕಾಳಪ್ರಿಯೇ ರಾಜಕದಂಬಕಸ್ಯ ಸ್ತಂಭೇ ಸ್ವಶೌ-
34 ರ್ಯ್ಯಂ ವಿಲಿಲೇಖ ಶೈಲೇ ॥ ತಸ್ಯೋದಪಾದಿ ಬಳವ-
35 ತ್ಪರಚಕ್ರಕುಂಭಿಕುಂಭಸ್ಥಳೋದ್ದಳನದಕ್ಷಕೃ-
36 ಪಾಣಪಾಣಿಃ[।*] ಭೀತಾನತಾರಿನರಪಾಳಕಿರೀ-
37 ಟಕೋಟಿ ಸಂಘಟ್ಟಿತಾಂಘ್ರಿಸರಸೀಜ[ವಿ]ರಾಜಶೋ-
38 ಭಃ ॥ ಶ್ರೀಮಾನ್ಮಹೀಪತಿಸ್ಸಾಕ್ಷಾನ್ನಾಮ್ನಾ ವೀರೋ-
39 ರಿಕೇಸರೀ [।*] ಪ್ರಾದುರ್ಬ್ಬಭೂವ ತೇಜಸ್ವೀ ಪ್ರಾತೋ(ತ)-
40 ರ್ಭಾನುರಿವೋದಯಾಂ(ಯಂ) [॥*] ಸಮಸ್ತ ಸಾಮನ್ತ ಶಿಖಾ-
41 ಮಣೀನಾಂ ಪ್ರಭಾಪ್ರಪಾತಾಯಿತಶಾರ್ವ್ವರಾಸ್ವಃ (ಶಾರ್ವ್ವರಸ್ಸಃ?) [।*]-
42 ಸದಾರಿನಾರೀನಯನಾಂಬುಜಾನಾಂ ಲಕ್ಷ್ಮೀಂ ಹಿ-
43 ಮಾಸಾರ ಇವಾಹರದ್ಯಃ ॥ ಸಾಮನ್ತಾನ್ದಣ್ಡಮು-
44 ಖ್ಯಾನ್ನಿಜಭುಜಪರಿಘಾ[ನ್*]ಪ್ರಸ್ಫುರತ್ಖಡ್ಗಧಾರಾ
45 ನೀ[ನ್ನೀ]ರಾಂಭೋರಾಶಿಮಗ್ನಾಂಸ್ತುರಗಕರಿಘಟಾಪತ್ತಿ[ಸಂ]-
46 ಪತ್ತಿಯುಕ್ತಾನ್[।*] ಕೃತ್ವಾ ಪ[ದ್ಮಾಕ್ಷ್ಮೀ]ರ್ಯ್ಯಮಾರ್ಯ್ಯಂ ಸ್ವಜನಪರಿ-

47 ಜನ್ಯೈಸ್ಸನ್ನಿಹತ್ಯಾಜಿರಂಗೇ ಕ್ರುದ್ಧೇ ಗೋವಿನ್ದರಾಜೇ [ಶ]ರಣ-
48 ಮುಪಗತೋ ರಕ್ಷಿತೋ ಯೇನ ಬಿಜ್ಜಃ[||*] ದೇವೀಂ ರೇವಕನಿಮ್ಮ-
49 ಡೀ[ಂ] ಕ್ಷಿತಿಪತೇರಿನ್ದ್ರಸ್ಯ ಪುತ್ರೀನ್ನುತಾಂ ಪೌಲೋಮೀಮಿವ
50 ವಾಸವ[ಃ*] ಶ್ರಿಯಮಿವ ಶ್ರೀಮನ್ಮುರಧ್ವಂಸಕಃ[।*] ಸ್ತ್ರೀರತ್ನಂ
51 ಪರಿಣೀಯ ಯೇನ [ನಿ]ತರ(ರಾ)ಂ ತಸ್ಯಾಸ್ಸಪತ್ನೀಕೃತಾ ನೂ-
52 ನಾ(ನಂ) ಸಪ್ತಸಮುದ್ರ ಮುದ್ರಿತಮಹೀ ಮ್ಮಾ(ಮಾ)ನೋನ್ನತೇನಾಧು
53 ನಾ|| ತೇನ ಭೀತಾನತಾಖಿಳಬಳವದಿಳಾಪಾಳಮೌ-
54 ಳಿಮಾಣಿಕ್ಯರಶ್ಮಿಮಾಳಾಲಾಳಿತಚರಣಕಮ-
55 ಳಯುಗಳೇನ ಶರಣಾಯಾತಕ್ಷಿತಿಪಾಳಪ್ರಾಣಿ(ಣ)-

**Third Face**

56 ರಕ್ಷಣದಕ್ಷಕೌಕ್ಷೇಯಕೋಪಲತೀಕ್ಷ್ಯಣ (ಕ್ಷ್ಣ)ದಕ್ಷಿಣ-
57 ಭುಜಾಗ್ರಳೇನ [ಕ]ನ್ತುಕಾನ್ತಕಾನ್ತಾಜನಮನೋನಯ-
58 ನವಲ್ಲಭೇನ ಕರೇಣುಪುತ್ರೇ(ಣೇ)ವ ಸ್ವ(ಸ)ಕಳ-
59 ಗಜಚಿಕಿತ್ಸಾಕೋವ (ವಿ)ದೇನ [ಗೌತಮೇನೇವೇಕೆ(ಕಾ)ಶೀತಿರ(ಕ)ಧಾ] ವಂ(ಬಂ)-
60 ಧವಿಧಿಕುಶಳೇನ ರಾಜಾತ್ಮಜೇನೇವ ಪರೀಕ್ಷಾ-
61 ವಿಧಾನದಕ್ಷೇಣ ಪಾದ್ವಳಿನೇವ ಬನ್ಧುರಕರ್ಮ-
62 ಸ್ಕನ್ಧಸಂಬನ್ಧಪರಾಯಣೇನ ಈಶ್ವರೇ [ಣೇ]ವ
63 ವಿಜಿತಮನೋಜೇನೋಮಾಪ್ರಿಯೇಣ ಚ
64 ನಾರಾಯಣೇನೇವ ಗೋವರ್ದ್ಧನೇವ ಧರೇಣ ಚ
65 ಚತುರಾನನೇನ(ನೇ)ವ ಚತುರಾನನೇನ[ಚ]ಸಕ-
66 ಳಕಳಾನಿಳಯೇನ ಚ ಕಳಾಧಿ(ಧ)ರವತ್ಕು-
67 ಮುದಾನನ್ಧ(ನ್ದ) ಕರೇಣ ಕಾನ್ತಿಮತಾ ಚ ವನಜಾ-
68 ಬನ್ಧುನೇವ ಪ್ರಬೋಧಿತಬನ್ಧುರಬನ್ಧುವ-
69 ದನವನಜೇನ । ನಿರಸ್ತಾರಾತಿತಿಮಿರೇಣ
70 ಚ ಸಹಸ್ರಕಿರಣವದತುಳತೇಜಸಾ
71 ಶ್ರೀಮದರಿಕೇಸರಿಮಹಾರಾಜೇನ ||
72 ಸ್ವಸ್ತಿ ಸಮಧಿಗತಪಞ್ಚಮಹಾಶಬ್ದ ಮಹಾ-
73 ಸಾಮನ್ತಾಧಿಪತಿ ಸಮಸ್ತಭುವನಸಂಸ್ತೂಯಮಾ-
74 ನಚಾಳುಕ್ಯವಂಶೋದ್ಭವಂ ಪಾಂಬರಾಂಕುಶನಮ್ಮನಗ-
75 ನ್ದವಾರಣಂ ಗನ್ದೇಭವಿದ್ಯಾಧರನಾರೂಡ(ಢ)ಸರ್ವ್ವಜ್ಞ-
76 ನುದಾತ್ತನಾರಾಂಣಂ(ರಾಯಣಂ) ನೋಡುತ್ತಿಗೆಲ್ವೊಂ ಗುಣನಿಧಿ ಗುಣಾ-

77 ರ್ಣ್ನವಂ·ಶರಣಾಗತವಜ್ರಪಂಜರಂ ಪ್ರಿಯಗಳ್ಳಂ-
78 ತ್ರಿಭುವನಮಲ್ಲಸಾಮನ್ತಚೂಡಾಮಣಿ ಶ್ರೀ-
79 ಮದರಿಕೇಸರಿಯರಸರ ತತ್ಪಾದಪದ್ಮೋಪ-
80 ಜೀವಿ ಸಮಸ್ತರಾಜ್ಯಭರನಿರೂಪಿತ ಮಹಾ-
81 ಸನ್ಧಿವಿಗ್ರಹಪದವೀಪ್ರತಿಷ್ಠಿತಂ ಸಮಸ್ತ-
82 ಶಾಸ್ತ್ರಪಾರಗಂ ಶ್ರೀಮತ್ಸನ್ಧಿವಿಗ್ರಹಿ ಗುಣಾಂಕು-
83 ಶೇನ ||| ೧

**Fourth Face**

84 ಶ್ರೀಮಾನ್ಪೃಥೀರ್ಬ್ಬದ್ದೆಗಭೂಮಿಭರ್ತ್ತುಸ್ತ[ಂ]-
85 ತ್ರಾಧಿಪಾಲೋಜನಿ ನಾಗಮಾರ್ಯ್ಯಃ ಗುಣಾರ್ಣ್ಣ-
86 ವೋರ್ವ್ವೀಪತಿತಂತ್ರಪಾಳಸ್ತಸ್ಯಾತ್ಮಜೋಜಾಯ-
87 ತಪೆದ್ದಣಾರ್ಯ್ಯಃ[||*] ತೇನಾಭ್ಯರ್ತ್ಥಿತೋ ದೇವತಾವನ್ದ-
88 ನನಿಮಿತ್ತಮಾಗತ[ಃ*] ಸ್ವನಿರ್ಮಾಪಿತಾದಿತ್ಯಗೃಹಾ-
89 ಯಾಗತಾಭ್ಯಾಗತಜನಸತ್ರನಿಮಿತ್ತಮುತ್ತರಾ-
90 ಯಣಪುಣ್ಯಸಂಕ್ರಾನ್ತಿದಿವಸೇ ಶತನಿವರ್ತ್ತನಸಂ-
91 ಖ್ಯಾತಭೂಮಿಕ್ಷೇತ್ರಮಷ್ಟನಿವರ್ತ್ತನಸಂಖ್ಯಾತ-
92 ಪಾನೀಯಭೂಮಿಕ್ಷೇತ್ರಂ ಚ ಲೇಂಬುಳಪಾಟ-
93 ಕಪತ್ತನೈಶಾನಕೋಣೇ ಶ್ರೀಮದರಿಕೇಸರಿಕ್ಷಿತಿ-
94 ಪತಿರದಾತ್ || ತತ್ರ ರಾಜೇಶ್ವರಾದಿತ್ಯಗೃಹಬದ್ದೆ-
95 [ಗೇ]ಶ್ವರನಗರೇಶ್ವರಪ್ರಭೃತಿಚತು [ಃ*] ಸ್ಥಾನಾದಿ(ಧಿ)ಪಾ-
96 ಸಸ್ಸಾಕ್ಷೇ(ಕ್ಷೀ) ಮಲ್ಲಿಕಾರ್ಜ್ಜುನವ್ಯಕ್ತಲಿಂಗಿವಿದ್ಯಾರಾಶಿ-
97 ವ್ಯಾಖ್ಯಾನಿಭಟ್ಟಾರಕಾಶ್ಚ ಸಾಕ್ಷಿಣಃ || ಚನ್ದ್ರಶ್ರೇಷ್ಠಿಪ್ರಭೃ-
98 ತಯೋ ನವಶ್ರೇಷ್ಠಿನಶ್ಚ ಸಾಕ್ಷಿಣಃ [||*]
99 ನಿಸ್ಪೃಹೈಕಾಗ್ರಣೀಸ್ಸೂರಿ [ಃ*] ಸ್ಥಾನಾಧಿಷ್ಠಾಯಕ [ಃ*] ಸ್ವಯಂ-
100 ಧಾತವೀಯಾನ್ವಯೋ ಜಾತಃ ಪಣ್ಡಿತಮುನೀಶ್ವರಃ೨[||*]
101 to 106 Verses exhorting the future kings to protect the gift
107 ತಸ್ಯಕ್ಷೇತ್ರಸ್ಯ ದ್ವಾದಶದ್ರಮ್ಮಾಸಿದ್ಧಾಯಃ [||*]

**ಎನ್. ಲಕ್ಷ್ಮೀನಾರಾಯಣರಾವ್**

---

೧ ಮೂಲಶಾಸನ ಬರೆದ ಕೆಲಕಾಲಾನಂತರ ಬರೆದ ಕೆಳಗಿನ ಪಂಕ್ತಿಗಳು ಇಲ್ಲಿವೆ.
1 ತಳಾಱ ಬಿಲ್ಲೆಯಂ ಪ-
2 ನ್ನಜನ ಪೀಸಟಯ ಆದಿತ್ಯ-
3 ಗೆ ಬಿಟ್ಟ

೨ ಈ ಪಾದದಲ್ಲಿ ಎರಡಕ್ಷರಗಳು ಕಡಮೆ.

# ಸಂಪ್ರದಾಯ ಮತ್ತು ಸಾಹಿತ್ಯ

*'The old order changeth yielding place to new'*

—*Tennyson*

'ಪುರಾಣಮಿತ್ಯೇವ ನ ಸಾಧು ಸರ್ವಂ। ನ ಚಾಪಿ ಕಾವ್ಯಂ ನವಮಿತ್ಯವದ್ಯಂ।'

—ಕಾಳಿದಾಸ

'ವಿನೂತನ ಕವಿತೆಯೆಂದು ಕುಂದಿಟ್ಟು ಜರೆದೊಡೆ ಪೇಳ್ದವನೊಳಾವು
ದೂಣೆಯಂ ಜಾಣರಿದನರಿದು ಮತ್ಸರವಳಿನುದಾಲಿಸುವುದು'

—ಲಕ್ಷ್ಮೀಶ

ಯಾವ ಕಲಾಪ್ರಪಂಚವನ್ನು ಪ್ರವೇಶಿಸಿದರೂ ನಮಗೆ ಅದು ಸಂಕೇತ ಸೂಚಿತವಾದದ್ದು ಎಂದು ವ್ಯಕ್ತವಾಗುತ್ತದೆ. ಆ ಸಂಕೇತದ ಅರ್ಥಜ್ಞಾನವಿಲ್ಲದೆ ಆ ಕಲಾಪ್ರಪಂಚವು ಸುತರಾಂ ವೇದ್ಯವಾಗುವುದಿಲ್ಲ. ಎಲ್ಲಿ ಸಂಕೇತ, ಸಂಜ್ಞೆ, ಸೂಚನೆಗಳಿಗೆ ಒಂದು ನಿರ್ದಿಷ್ಟವಾದ ಬೆಲೆಯುಂಟೋ ಅಲ್ಲಿಯೇ ಸಂಪ್ರದಾಯದ ಜನನವಾಗುತ್ತದೆ. ಆದ್ದರಿಂದ, ಸಂಪ್ರದಾಯವೆಂದರೆ ಕಲಾರಾಧಕನು ಪರಂಪರಾನುಗತಿಕವಾಗಿ ಮನವೊಪ್ಪಿ ಗ್ರಹಿಸಿರುವ ಕೆಲವು ಸಂಕೇತಗಳು ಎಂದು ಹೇಳಬಹುದು. ಉದಾಹರಣೆಯನ್ನು ಕೊಡುವುದಾದರೆ, ಚಿತ್ರಕಾರನು, ಸಮುದ್ರದ ಆಳವನ್ನು ತನ್ನ ಚಿತ್ರದಲ್ಲಿ ನಿರೂಪಿಸಲು ಅಶಕ್ತನಾದರೂ, ಚಿತ್ರಪ್ರೇಮಿಗಳು ಅದನ್ನು ಕಲ್ಪನಾಬಲದಿಂದ ಗ್ರಹಿಸಿಕೊಳ್ಳಬಲ್ಲರು. ಅದೇ ರೀತಿಯಾಗಿ ರಂಗಮಂದಿರದ ಮೇಲೆ ಯಾವುದಾದರೂ ಒಂದು ನಾಟಕವು ವರ್ಷವರ್ಷಗಳಲ್ಲಿ ನಡೆಯುವ ಘಟನೆಗಳನ್ನು ಕೇವಲ ಕೆಲವು ಪರಿಮಿತ ಘಂಟೆಗಳಲ್ಲಿಯೇ ಅಭಿನಯಿಸಿದರೂ, ಪ್ರೇಕ್ಷಕನು ಅದನ್ನು ಮರೆತು ನೈಜವಾದ ಕಾಲ ಪ್ರಮಾಣವನ್ನೇ ಊಹಿಸಿಕೊಳ್ಳುತ್ತಾನೆ. ಈ ರೀತಿ, ಕಲೆಗೂ ಸಂಪ್ರದಾಯಕ್ಕೂ ನಿಕಟ ಸಂಬಂಧವುಂಟು. ಪ್ರಕೃತದಲ್ಲಿ ಸಾಹಿತ್ಯವನ್ನು ತೆಗೆದುಕೊಂಡರೂ ಈ ಮಾತು ಅಕ್ಷರಶಃ ಸತ್ಯ. ಸಾಹಿತ್ಯದಲ್ಲಿ ಮುಖ್ಯ ಸಾಧನ ಪದಗಳು. ಪದಗಳಿಗೂ ಮೂಲವಸ್ತು ಅಥವಾ ಮೂಲ ಭಾವನೆಗಳಿಗೂ ಸಾದೃಶ್ಯವಂತೂ ಇಲ್ಲವೇ ಇಲ್ಲ. ಇತರ ಕಲೆಗಳಲ್ಲಿ ಸಹಜವಾದ ಗುಣಸಾಮ್ಯವಿಲ್ಲದಿದ್ದರೂ ಸ್ವರೂಪ ಸಾಮ್ಯವಾದರೂ ಉಂಟು. ಸಾಹಿತ್ಯದಲ್ಲಿಯಾದರೋ ಅದನ್ನೂ ಕಲ್ಪನಾಶಕ್ತಿಯಿಂದಲೇ ತಿಳಿದುಕೊಳ್ಳಬೇಕು. ಆದರೂ, ಅನೇಕ ವರ್ಷಗಳ ಬಳಕೆಯಿಂದಲೂ, ಕಲಾರಾಧಕರ ಕಲ್ಪನಾವಿಶೇಷದಿಂದಲೂ, ಪ್ರತಿಯೊಂದು ಪದಕ್ಕೂ ಒಂದು ಅರ್ಥವುಂಟು. ಪ್ರತಿಯೊಂದು ಪದದೊಂದಿಗೂ ಒಂದು ಭಾವನಾ ಪ್ರಪಂಚವೇ ಮೂಡಿ ನಿಲ್ಲುತ್ತದೆ. ಈ ಪದಶಕ್ತಿಯನ್ನು ಅರಿತೇ ಪ್ರಾಚೀನರು ವಾಣಿಗೆ ಅಮೂಲ್ಯಸ್ಥಾನವನ್ನು ಕೊಟ್ಟಿರುತ್ತಾರೆ. ವಾಗರ್ಥಗಳು ಪಾರ್ವತೀಪರಮೇಶ್ವರರಂತೆ ಅಭಿನ್ನವೆಂಬುದಾಗಿ ಕಾಳಿದಾಸನು ಸ್ತುತಿಸಿರುತ್ತಾನೆ. ಈ ಎಲ್ಲ ವಿಚಾರದಿಂದ ಸಾಹಿತ್ಯದಲ್ಲಿ

ಸಂಪ್ರದಾಯಕ್ಕೆ ಎಂಥ ಗಣನೀಯವಾದ ಸ್ಥಾನವಿದೆಯೆಂಬುದು ವ್ಯಕ್ತವಾಗುತ್ತದೆ. ಸಂಪ್ರದಾಯದ ತಳಹದಿಯ ಮೇಲೆ ನಿರ್ಮಿತವಾಗಿರುವ ಸಾಹಿತ್ಯದ ಸ್ವರೂಪವನ್ನು ವಿಚಾರಮಾಡುತ್ತ ಹೋದಂತೆಲ್ಲ ಹೊಸ ಹೊಸ ಅಂಶಗಳು ವ್ಯಕ್ತವಾಗುತ್ತವೆ. ಸಂಪ್ರದಾಯ ಮತ್ತು ಸಾಹಿತ್ಯಗಳು ಸಂತತವಾಗಿ ಜೊತೆ ಜೊತೆಯಾಗಿಯೇ ಮುಂದು ವರಿಯುತ್ತ ಸಾಗುತ್ತವೆ. ಆದರೆ, ಈ ಎರಡರ ಅನ್ಯೋನ್ಯತೆ ಬಹು ಆಕರ್ಷಕ ವಾದುದು. ಕೆಲವು ಸಂದರ್ಭಗಳಲ್ಲಿ ಸಾಹಿತ್ಯವು ಸಂಪ್ರದಾಯವೆಂಬುದು ಸಾಹಿತ್ಯಕ್ಕೆ ಅಂಕುಶದಂತೆ ಕಂಡುಬಂದರೆ, ಹಲವು ಸಂದರ್ಭಗಳಲ್ಲಿ ಸಾಹಿತ್ಯವು ಸಂಪ್ರದಾಯವನ್ನು ತನ್ನ ದಾಸನನ್ನಾಗಿ ಮಾಡಿಕೊಂಡು ನೂತನ ಸಂಪ್ರದಾಯವೊಂದನ್ನು ಸ್ಥಾಪಿಸುತ್ತದೆ. ಆದ್ದರಿಂದ, ಈ ಎರಡನ್ನೂ ಪರಸ್ಪರ ಸಹಾಯಕವೆನ್ನಬಹುದೇ ಹೊರತು, ಪರಸ್ಪರ ಪ್ರತಿಸ್ಪರ್ಧಿಗಳು ಎನ್ನಲಾಗುವುದಿಲ್ಲ. ಈ ಸತ್ಯಾಂಶವನ್ನು ಕಾಣಬೇಕಾದರೆ, ಪುರಾತನ ಚರಿತ್ರೆಯುಳ್ಳ ಯಾವ ಸಾಹಿತ್ಯವನ್ನಾದರೂ ಪರಿಶೀಲಿಸಬಹುದು. ಇಲ್ಲಿ, ನಮ್ಮ ಕನ್ನಡ ಭಾಷೆಯನ್ನೇ ದೃಷ್ಟಿಯಲ್ಲಿಟ್ಟುಕೊಂಡು ಈ ಅಂಶವನ್ನು ಪ್ರತಿಪಾದಿಸಲು ಪ್ರಯತ್ನಿಸಲಾಗಿದೆ.

ಕನ್ನಡ ಸಾಹಿತ್ಯಕ್ಕೆ ಶಾಸನಗಳ ಕಾಲದಿಂದಲೂ ತೊಡಗಿ ಈವರೆಗೆ ಅಪೂರ್ವ ವಾದ ಮತ್ತು ಅಪಾರವಾದ ಚರಿತ್ರೆಯಿದೆಯೆಂಬುದು ಸರಿಯಷ್ಟೆ. ಸಾಹಿತ್ಯದ ಸ್ವರೂಪ ವನ್ನು ವಿಚಾರ ಮಾಡುವಲ್ಲಿ ಮೂರು ಅಂಶಗಳು ಪ್ರಮುಖವಾದುವು. ಮೊದಲನೆಯ ದಾಗಿ, ಕಾಲ ಕಾಲಕ್ಕೆ ಮಾರ್ಪಾಟಾಗುತ್ತಿರುವ ಭಾಷಾ ಸ್ವರೂಪ, ಎರಡನೆಯದಾಗಿ, ಆಯಾ ಕಾಲದ ಜನಜೀವನ್ನನುಸರಿಸಿ ಬದಲಾಗುವ ವಿವಿಧ ಭಾವನೆಗಳು ಮತ್ತು ಮೂರನೆಯದಾಗಿ, ವಿವಿಧ ಅಭಿಪ್ರಾಯ ನಿರೂಪಣೆಗಾಗಿ ಬಳಸುವ ವಿವಿಧ ಛಂದೋ ವಿನ್ಯಾಸಗಳು. ಈ ಮೂರು ಅಂಶಗಳೂ ಸಂಪ್ರದಾಯ ಬದ್ಧವೂ ಹೌದು; ಸಂಪ್ರ ದಾಯಾತೀತವೂ ಹೌದು.

ಕನ್ನಡವನ್ನು ವ್ಯಾಸಂಗ ಮಾಡುವಾಗ ತೊಡಕು ಉಂಟಾಗುತ್ತದೆಯಷ್ಟೆ! ಶಾಸನಗಳನ್ನು ಓದುತ್ತ ಓದುತ್ತ ಶತಶತಮಾನಗಳ ಹಿಂದಕ್ಕೆ ಹೊರಟರೆ, ಅನೇಕ ಪದಗಳ ರೂಪವಿನ್ಯಾಸಗಳು ಆಶ್ಚರ್ಯವನ್ನುಂಟುಮಾಡುತ್ತವೆ. ಕ್ರಿ. ಶ. ಸು. ೭೦೦ರಲ್ಲಿ ರಚಿತವಾಗಿರಬಹುದಾದ ಶ್ರವಣಬೆಳುಗೊಳದ ಈ ಶಾಸನವನ್ನೇ ನೋಡಬಹುದು.

ಶ್ರೀ ಮಾಸೇನರ್ ಪರಮಪ್ರಭಾವ ಋಷಿಯರ್ ಕಟ್ವಪ್ಪಿನಾವೆಟ್ಟುದುಳ್
ಶ್ರೀ ಸಂಗಂಗಳ ಪೇಟ್ದ್ರ ಸಿದ್ಧ ಸಮಯಂ ತಪ್ಪಾದೆ ನೋನ್ತಿಂಬಿಸಿನ್
ಪ್ರಾಸಾಂದಾಂತರಮಾನ್ ವಿಚಿತ್ರ ಕನಕ ಪ್ರಜ್ವಲ್ಕದಿನ್ ಮಿಕ್ಕುದಾನ್
ಸಾಸಿರ್ವರ್ ವರಪೂಜಿದಂದುಮಯಿ ಅವರ್ ಸ್ವರ್ಗಾಗ್ರಮಾನೇಱಿದಾರ್

ಈ ವೃತ್ತದಲ್ಲಿ ವ್ಯಕ್ತವಾಗುವ ಹಲವು ಮಾತಿನ ಪ್ರಯೋಗಗಳು ಹಳಗನ್ನಡ ವ್ಯಾಕರಣಕ್ಕೂ ಸುಲಭಸಾಧ್ಯವಾಗಿ ಒಳಪಡುವುದಿಲ್ಲ. ಇಂಥ ನಿದರ್ಶನಗಳನ್ನು

ಪ್ರಾಚೀನಶಾಸನಗಳಿಂದ ಬೇಕಾದಷ್ಟು ಆರಿಸಿಕೊಡಬಹುದು. ಈ ವೈಶಿಷ್ಟ್ಯವನ್ನು ಗಮನಿಸಿದ ವಿದ್ವಾಂಸರು ಇದನ್ನು ಕನ್ನಡ ಭಾಷಾಚರಿತ್ರೆಯಲ್ಲಿ ಪೂರ್ವದ ಹಳಗನ್ನಡ ವೆಂದು ಕರೆದಿರುತ್ತಾರೆ. ಈ ಪೂರ್ವದ ಹಳಗನ್ನಡ ಸಂಪ್ರದಾಯವನ್ನೇ ಅನುಸರಿಸಿ, ನಿರ್ದಿಷ್ಟವಾದ ಸ್ವರೂಪವನ್ನು ತಿಳಿಸಬಲ್ಲ ಗ್ರಂಥಗಳು ಈವರೆಗೂ ದೊರೆತಿಲ್ಲ. ಆದರೆ, ಶಾಸನಗಳ ಈ ಪ್ರಯೋಗಗಳನ್ನೇ ಹೋಲುವ ಪದಗಳನ್ನು ‘ ವಡ್ಡಾರಾಧನೆ ’ಯಲ್ಲಿ ಆಗಿಂದಾಗ್ಗೆ ಕಾಣಬಹುದು. ಕನ್ನಡ ಭಾಷಾಸಂಪ್ರದಾಯವು ಹೇಗೆ ಕ್ರಮಕ್ರಮವಾಗಿ ಒಂದು ಸ್ವರೂಪವನ್ನು ತಾಳುತ್ತಿದೆಯೆಂಬುದೇ ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶ. ಇಲ್ಲಿಂದ ಮುಂದೆ ಹೋದರೆ ಕವಿರಾಜಮಾರ್ಗ ಮತ್ತು ವಿಕ್ರಮಾರ್ಜುನವಿಜಯ ದಂಥ ಪ್ರಸಿದ್ಧ ಗ್ರಂಥಗಳು ದೊರೆಯುತ್ತವೆ. ಈ ವೇಳೆಗೆ ಕನ್ನಡ ಪದಗಳು ಸಿದ್ಧರೂಪ ವನ್ನು ತಾಳಿರುವುದನ್ನು ಕಾಣಬಹುದು ಸಾಹಿತ್ಯವು ವಿಪುಲವಾಗಿ ಬೆಳೆಯುವುದೇ ತಡ, ವೈಯಾಕರಣಿಗಳು ವ್ಯಾಕರಣಗಳನ್ನು ನಿರ್ಮಿಸಿ, ಸಂಪ್ರದಾಯದ ರೂಪರೇಖೆಗಳನ್ನು ನಿಯಮಿಸುತ್ತಾರೆ. ಆದ್ದರಿಂದ, ಸಂಪ್ರದಾಯದ ಸ್ವರೂಪವನ್ನು ವಿಚಾರ ಮಾಡುವುದಕ್ಕೆ ವ್ಯಾಕರಣಗಳು ಬಹಳ ಉಪಕಾರಿಯಾಗುತ್ತವೆ. ಕನ್ನಡದ ಪ್ರೌಢ ಕಾವ್ಯಗಳನ್ನು ಅಭ್ಯಾಸಮಾಡುವಾಗ ಭಾಷೆಯ ಬಗ್ಗೆ ಅನೇಕ ಸಮಸ್ಯೆಗಳು ಬರುತ್ತವೆ. ನಮಗೆ ಈಗ ಬಳಕೆಯಾಗಿರುವ ಕನ್ನಡಕ್ಕೂ ಆಗಿನ ಕಾಲದ ಕನ್ನಡಕ್ಕೂ ಅನೇಕ ರೀತಿಗಳಲ್ಲಿ ಅಂತರ ಗಳು ಕಂಡುಬರುತ್ತವೆ. ಕೇಶಿರಾಜನು ಆ ಹಳಗನ್ನಡದ ಕೆಲವು ಲಕ್ಷಣಗಳನ್ನು ಬಹಳ ಅರ್ಥವತ್ತಾಗಿ ನಿರೂಪಿಸಿದ್ದಾನೆ.

> ಗಮಕ ಸಮಾಸದಿಂ ಱಳಕುಳಕ್ಷಳದಿಂ ಶ್ರುತಿಸಹ್ಯಸಂಧಿಯಿಂ
> ಸಮುಚಿತಮಾಗಿ ಬರ್ಪ ಸತಿ ಸಪ್ತಮಿಯಿಂ ಸಮಸಂಸ್ಕೃತೋಕ್ತಿಯಿಂ
> ವಮಹಪಭೇದದಿಂ ವಿರಹಿತಾನ್ವಯ ಸಂಸ್ಕೃತಲಿಂಗದಿಂ ಪದೋ
> ತ್ತಮಶಿಥಿಲತ್ವದಿಂ ಯತಿವಿಲಂಘನದಿಂದರಿದಲ್ತೆ ಕನ್ನಡಂ

ಕೇಶಿರಾಜನು ಹಳಗನ್ನಡದ ಸ್ವರೂಪವನ್ನು ಇಷ್ಟರಮಟ್ಟಿಗೆ ಹೇಳಿದರೂ, ಅವನ ಕಾಲಕ್ಕಾಗಲೇ ಈ ಸಂಪ್ರದಾಯವು ಸಡಿಲವಾಗುತ್ತಿತ್ತೆಂಬುದು ಅವನು ಎತ್ತುವ ಆಕ್ಷೇಪಣೆಗಳ ಮೂಲಕ ಊಹಿಸಿಕೊಳ್ಳಬಹುದು. ಆತನು ಪ್ರತಿವಾದಿಸಿರುವ ‘ ಱಳ ಕುಳ ಕ್ಷಳ ’ಗಳ ಇತಿಹಾಸವೊಂದೇ ಇದನ್ನು ಸ್ಪಷ್ಟಪಡಿಸುತ್ತದೆ. ಈ ಮೂರು ಅಕ್ಷರಗಳನ್ನು ಹೇಗೆ ಉಪಯೋಗಿಸಬೇಕೆಂದು ಕೇಶಿರಾಜನು ಎಷ್ಟೇ ಹೇಳಲಿ, ಮಹಾ ಕವಿಯಾದ ಹರಿಹರನು ಈ ನಿಯಮೋಲ್ಲಂಘನೆಯನ್ನು ಮಾಡಿಯೇ ಮುಂದು ವರಿಯುತ್ತಾನೆ.

> ನೋಡುವೊಡೊಂದಕ್ಕರಮದು
> ಮಾಡುವೊಡುಚ್ಚರಣೆಗರಿದು ಮೂಱುಂ ತೆಱನಂ
> ಕೂಡೆ ಕವಿತತಿ ವಿಚಾರಿಸ
> ಬೇಡದಱಿಂ ಱಳ ಕುಳಕ್ಷಳಂಗಳನಿದಱೊಳ್ ॥

ಇದೀಗ ಸಂಪ್ರದಾಯದ ಸ್ವಾರಸ್ಯ. ಒಂದು ಕಾಲದಲ್ಲಿ ಕಟ್ಟುನಿಟ್ಟಾಗಿದ್ದದ್ದು ಇನ್ನೊಂದು ಕಾಲದಲ್ಲಿ ಸಡಿಲವಾಗಲೇ ಬೇಕು. ಕೇಶಿರಾಜನು ಸೂಚಿಸುವ ಒಂದೊಂದು ವೈಶಿಷ್ಟ್ಯವೂ ಹನ್ನೆರಡನೆಯ ಶತಮಾನದ ಅನಂತರ ಮಾರ್ಪಾಟಾಗುತ್ತದೆ. ಒಟ್ಟಿನಲ್ಲಿ, ಕೇವಲ ಭಾಷಾಚರಿತ್ರೆಯ ದೃಷ್ಟಿಯಿಂದ ನೋಡಿದರೆ, ಕನ್ನಡದಲ್ಲಿ ಆಯಾ ಶತಮಾನಕ್ಕನು ಗುಣವಾಗಿ ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡ ಎಂಬ ರೂಪಭೇದಗಳು ಕಂಡುಬರುತ್ತವೆ. ಒಂದು ಸಂಪ್ರದಾಯ ಇನ್ನೊಂದು ಸಂಪ್ರದಾಯಕ್ಕೆ ದಾರಿ ಮಾಡಿಕೊಟ್ಟಿದೆ. ಸಂಪ್ರದಾಯವು ಒಂದು ವಾಹಿನಿಯಂತೆ ಮುಂದೆ ಸಾಗುತ್ತಿದೆಯೇ ವಿನಾ ತಟಾಕದ ನೀರಿನಂತೆ ತಟಸ್ಥವಾಗಿಲ್ಲ.

ಕನ್ನಡದಲ್ಲಿ ಭಾಷಾಸ್ವರೂಪದಲ್ಲಿ ಹೇಗೆ ವೈವಿಧ್ಯವು ಕಂಡು ಬರುತ್ತದೆಯೋ, ಹಾಗೇಯೇ ಭಾಷಾಸಮನ್ವಯದಲ್ಲಿಯೂ ಒಂದು ಸಂಪ್ರದಾಯ ವೈವಿಧ್ಯವನ್ನು ಕಾಣಬಹುದು. ಸಂಸ್ಕೃತಭಾಷೆಯ ಸಹಾಯದಿಂದ ಪುಷ್ಟಿಪಡೆದ ಕನ್ನಡವು ದಿನಕ್ರಮೇಣ ಹೆಚ್ಚು ಸಂಸ್ಕೃತಮಯವಾಗಲು, ಕೆಲವು ಕನ್ನಡ ಕವಿಗಳು ಇದನ್ನು ಸಕಾಲದಲ್ಲಿ ಎಚ್ಚರಿಸಿದ್ದಾರೆ. 'ಶಬ್ದಮಣಿದರ್ಪಣ'ದ ಒಂದು ಉದಾಹರಣೆಯಲ್ಲಿ 'ಪಱಗನ್ನಡದೆ ಪುದುಂಗೊಳೆ। ಕೊಱೆ ಸಕ್ಕದಮಂ ತಗುಳ್ಚಿ ಜಾಣ್ಕಿಡೆ ಮುತ್ತುಂ। ಮೆಱಸುಂ ಕೋದಂತಿರೆ ಪೇ। ೞ್ವೞಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮೇ॥' ಎಂಬುದಾಗಿ ಕವಿಯೊಬ್ಬನು ವೀರಾಭಿಮಾನದಿಂದ ಪ್ರಶ್ನಿಸಿರುತ್ತಾನೆ. ನಯಸೇನನಂತೂ ತನ್ನ 'ಧರ್ಮಾಮೃತ'ದಲ್ಲಿ 'ಪೊಸಗನ್ನಡದಿಂ ವ್ಯಾವ। ರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮಂ ಚಿಂ। ತಿಸಿ ಕೂಡಲಾಱದಕ್ಕಟ। ಮಿಸುಕದ ಸಕ್ಕದಮನಿಕ್ಕುವವಂ ಕವಿಯೇ॥' 'ಸಕ್ಕದಮಂ ಪೇೞ್ವೊಡೆ ನೆಱೆ। ಸಕ್ಕದಮಂ ಪೇೞ್ಗೆ ಶುದ್ಧ ಕನ್ನಡದೊಳ್ತಂ॥ ದಿಕ್ಕುವುದೇ ಸಕ್ಕದಮಂ। ತಕ್ಕುದೇ ಬೆರಸಲ್ಕೆ ಘೃತಮುಮಂ ತೈಲಮುಮಂ॥' ಎಂದು ಹೇಳಿರುವುದೂ ಇದೇ ಅಭಿಪ್ರಾಯವನ್ನೇ ದೃಢಪಡಿಸುತ್ತದೆ. ಈ ಬಗ್ಗೆ ಆ ಕಾಲಕ್ಕಾಗಲೇ ಎಷ್ಟು ವಿವಾದವೆದ್ದಿತ್ತೋ ಏನೋ! ಆಂಡಯ್ಯನು ಹಟ ತೊಟ್ಟು ಅಚ್ಚಗನ್ನಡದಲ್ಲಿಯೇ ಕಾವ್ಯ ಬರೆಯಲು ಶಪಥಮಾಡಿ 'ಅಚ್ಚಗನ್ನಡಂ ಬಿಗಿವೊಂದಿರೆ ಕಬ್ಬಿಗರ ಕಾವನೊಲವಿಂದೊರೆದೆಂ' ಎನ್ನುತ್ತಾನೆ. ಇದೇ ಪ್ರಶ್ನೆಯನ್ನು ಅನೇಕ ಶತಮಾನಗಳ ಬಳಿಕ ಮುದ್ದಣನು ಮತ್ತೆ ಎತ್ತಿಕೊಂಡು 'ಸಕ್ಕದಮೊಂದೆ ರನ್ನವಣಿಯಂ ಪೊನ್ನಿಂ ಬಿಗಿದಂತೆಸೆಗುಂ' ಎಂಬುದಾಗಿ ಉಭಯಭಾಷೆಗಳ ಸಾಮರಸ್ಯವನ್ನು ಸಾಧಿಸುವುದಾಗಿ ಹೇಳಿರುತ್ತಾನೆ. ಇವುಗಳನ್ನೆಲ್ಲ ಪರಿಶೀಲಿಸಿದರೆ ಸಂಪ್ರದಾಯಕ್ಕೂ ಸಾಹಿತ್ಯಕ್ಕೂ ಹೇಗೆ ಘರ್ಷಣೆಯುಂಟಾಗಿ ಹೊಸಹೊಸ ದಾರಿಗಳು ಏರ್ಪಡುತ್ತವೆ ಎನ್ನುವುದನ್ನು ಕಾಣಬಹುದು. ಇದೇ ಸಂದರ್ಭದಲ್ಲಿ, ಇನ್ನೊಂದು ಅಂಶವನ್ನೂ ಗಮನಿಸಬಹುದು. ಗದ್ಯ ಪದ್ಯಗಳ ಭಾಷೆ ಹೇಗಿರಬೇಕೆಂಬುದೊಂದು ಹಳೆಯ ಪ್ರಶ್ನೆ. ಪ್ರಾಚೀನರು ಗದ್ಯವನ್ನು ಪದ್ಯಕ್ಕಿಂತ ಕಠಿನವೆಂಬ ಅರ್ಥದಲ್ಲಿ 'ಗದ್ಯಂ ಕವೀನಾಂ ನಿಕಷಂ ವದಂತಿ' ಎಂದು ಹೇಳಿರುತ್ತಾರೆ. ನಮ್ಮ ಚಂಪೂಗ್ರಂಥಗಳ ಗದ್ಯ

ಹೀಗಾದದ್ದೂ ಉಂಟು. ಆದರೆ, ಹರಿಹರನ ಕೈವಾಡದಿಂದಲೂ, ವಚನಗಳ ವಿಲಾಸ ದಿಂದಲೂ, ಇತ್ತೀಚೆಗೆ ಪಾಶ್ಚಾತ್ಯ ಸಾಹಿತ್ಯದ ಸಂಪರ್ಕದಿಂದಲೂ, ಈ ದಿನ ಗದ್ಯ ಬಹುಮುಖವಾಗಿ ಬೆಳೆದಿದೆ. ಆಡಂಬರಕ್ಕಿಂತ ಆಲೋಚನೆಯೇ ಮುಖ್ಯ ; ದೀರ್ಘ ದಂಡಕಗಳಿಗಿಂತ ಸರಳ ಶೈಲಿಯೇ ಸೊಗಸು ಎಂಬುದು ಇಂದಿನವರ ಅಭಿಮತ. ಹೀಗೆ, ಭಾಷಾವಿನ್ಯಾಸದಲ್ಲಿಯೂ ಕಾಲಕಾಲಕ್ಕೆ ಮಾರ್ಪಾಟು ಅನಿವಾರ್ಯ.

ಈಗ, ಎರಡನೆಯ ಅಂಶವಾದ ಭಾವನೆಯನ್ನು ಪರಿಶೀಲಿಸಬಹುದು. ಮೇಲೆ ಸೂಚಿಸಲಾದ ಒಂದೊಂದು ಕ್ರಾಂತಿಗೂ, ಒಂದೊಂದು ಹೊಸ ಭಾವನೆಯೇ ಮುಖ್ಯ ಕಾರಣವೆನ್ನಬಹುದು. ಕಾವ್ಯದ ಮುಖ್ಯಗುರಿಯನ್ನು ಕುರಿತು ನೃಪತುಂಗನು 'ಪಾಪಮಿದು ಪುಣ್ಯಮಿದು ಹಿತ। ರೂಪಮಿದಹಿತಪ್ರಕಾರಮಿದು ಸುಖಮಿದು ದುಃ। ಖೋಪಾತ್ತಮಿದೆಂದಱಿಪುಗು। ಮಾ ವರಮ ಕವಿ ಪ್ರಧಾನರಾ ಕಾವ್ಯಂಗಳ್ ॥' ಎಂದು ಹೇಳಿರುತ್ತಾನಷ್ಟೆ ಆ ಮೇರೆಗೆ ಕಾವ್ಯದಲ್ಲಿ ನೀತಿ ಬೋಧನೆಯೇ ಮುಖ್ಯ ಉದ್ದೇಶ ವೆಂದಂತಾಯಿತು. ಪಂಪನಂತಹ ಕವಿಗಳು ಧರ್ಮ ಮತ್ತು ಸಾಹಿತ್ಯಗಳ ಸಮನ್ವಯ ವನ್ನು ಮಾಡಿದರು. ರನ್ನನು ಮತ್ತಷ್ಟು ಖಚಿತವಾಗಿ 'ಕವಿ ಮಾರ್ಗದೊಳೊಳ ಪೊಕ್ಕುಂ ನವರಸಮುಂ ತೆಱೆಯೆ ನುಡಿದನೆನಿಸಿದ ಕವಿ ಸತ್ಕವಿಯೆನಿಕುಂ' ಎಂಬುದಾಗಿ ರಸ ಪ್ರಾಧಾನ್ಯವನ್ನು ಸಾರಿ ಹೇಳಿರುತ್ತಾನೆ. ಈ ಸತ್ಸಂಪ್ರದಾಯದ ಜೊತೆಗೆ ಉದ್ದಾಮ ಕವಿಗಳು ರಾಜಾಶ್ರಯವನ್ನು ಬಯಸುವುದೂ, ಅವರಿಗೆ ರಾಜರೆನಿಸಿದವರು ಪ್ರೋತ್ಸಾಹ ನೀಡುವುದೂ ಒಂದು ಪದ್ಧತಿಯಾಗಿ ಬೆಳೆಯಿತು. ಈ ನಲುವಾಗಿ ಮಹಾ ಕವಿಗಳು ಏನೇ ಬರೆಯಲಿ, ತಮ್ಮ ಕಾವ್ಯದ ಮಹಾನಾಯಕನನ್ನು ತಮ್ಮ ಆಶ್ರಯ ದಾತನೊಂದಿಗೆ ಹೋಲಿಸಿ ಹೇಳುವುದು ರೂಢಿಗೆ ಬಂತು ಸುಪ್ರಸಿದ್ಧರಾದ ಪಂಪ, ರನ್ನ ಮೊದಲಾದವರು ಈ ಕ್ರಮವನ್ನು ಅನುಸರಿಸಿದ್ದಾರೆ. ಉಳಿದ ಒಬ್ಬಿಬ್ಬರು ಈ ಕ್ರಮವನ್ನೇ ಅನುಸರಿಸಿರಬಹುದೇನೋ ಎಂಬುದಾಗಿ ವಿದ್ವಾಂಸರು ಊಹಿಸಿರುತ್ತಾರೆ. ರಾಜನ ಅಂಕಿತದಲ್ಲಿಯೇ ಕಾವ್ಯವನ್ನು ಬರೆದವರೂ ಉಂಟೆಂಬುದನ್ನು ಪ್ರತಿಪಾದಿಸಿ ನೃಪತುಂಗನ 'ಕವಿರಾಜಮಾರ್ಗ' ವನ್ನು ನಿದರ್ಶನವಾಗಿ ಹೇಳುವುದೂ ಉಂಟು. ಒಟ್ಟಿನಲ್ಲಿ ರಾಜ ಮಹಾರಾಜರುಗಳ ಕಥೆಯಷ್ಟೇ ಅಲ್ಲದೆ. ಮಾನವ ಸ್ತುತಿಯೂ ಪ್ರಾಸಂಗಿಕವಾಗಿ ಈ ಮೂಲಕ ಪ್ರಚಾರವಾಗಲಾರಂಭಿಸಿತು. ರಾಜಾಸ್ಥಾನದ ಆವರಣದಲ್ಲಿಯೇ ಬೆಳೆದ ಕಾವ್ಯಗಳಿಗೆ ಈ ಗತಿ ಅನಿವಾರ್ಯವೆನ್ನಿಸಿತು. ಆದರೆ, ಹರಿಹರನಂತಹ ಸ್ವತಂತ್ರ ಕವಿಯಿಂದ ಈ ಸಂಪ್ರದಾಯವೂ ಸಡಿಲಿತು. ರಾಜಾಸ್ಥಾನ ವನ್ನು ಬಿಟ್ಟು ಬಂದ ಆತನು, ಕಾವ್ಯದ ವಸ್ತುವನ್ನು ಕುರಿತು ಆಡುವ ಈ ಮಾತುಗಳು ತುಂಬ ಗಮನಾರ್ಹವಾದುವು.

**ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆ ಪದ್ಯಮಂ**
**ತನತನಗಿಂದ್ರ ಚಂದ್ರ ರವಿಕರ್ಣದಧೀಚಿ ಬಲೀಂದ್ರನೆಂದು ನೀ**

ನನವರತಂ ಪೊಗಳ್ದು ಕೆಡಬೇಡಲೆ ಮಾನವಾ ನೀನಹರ್ನಿಶಂ
ನೆನೆ ಪೊಗಳರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ ॥

ಸುಮಾರು ಹನ್ನೆರಡನೆಯ ಶತಮಾನಕ್ಕಾಗಲೇ ಈ ಭಾವನೆ ಬರಬೇಕೆಂದರೆ ಸಾಮಾನ್ಯ ವಲ್ಲ. ಆ ಕಾಲದಲ್ಲಿದ್ದ ಪ್ರಭುಭಕ್ತಿಯ ಹಿನ್ನೆಲೆಯಲ್ಲಿ ಇದನ್ನು ಊಹಿಸಿಕೊಂಡರೆ ಯಾರಿಗಾದರೂ ರೋಮಾಂಚವಾಗದೆ ಇರದು. ಇದು ಎಷ್ಟು ದೂರ ಹೋಯಿತೆಂದರೆ, ರಾಘವಾಂಕನು ಹರಿಶ್ಚಂದ್ರ ಮಹಾರಾಜನ ಮಾಹಾತ್ಮ್ಯೆಯನ್ನು ಕುರಿತು ಕಾವ್ಯ ಬರೆದುದೂ ಒಂದು ಮಹಾಪರಾಧವೆನ್ನಿಸಿತು. ಅದಕ್ಕಾಗಿ ಆತನಿಗೆ ಗುರುಗಳಿಂದ ಶಾಸ್ತಿಯಾಯಿತಂತೆ! ಇಷ್ಟಾದರೂ, ಹರಿಶ್ಚಂದ್ರ ಚಾರಿತ್ರ್ಯವೆಂದು ಗ್ರಂಥಕ್ಕೆ ಹೆಸರಿಟ್ಟರೂ, ರಾಘವಾಂಕನು 'ಕೃತಿಗೊಡೆಯನಮಳ ಪಂಪಾ ವಿರೂಪಾಕ್ಷನು' ಎಂದು ಹೇಳದೆ ಹೋಗಿಲ್ಲ. ಆತ ಯುಗಧರ್ಮವನ್ನು ಮರೆತಿಲ್ಲ. ಈ ಕ್ರಾಂತಿಯ ಪಥದಲ್ಲಿಯೇ ಮುಂದಿನ ಮಹಾಕಾವ್ಯಗಳು ಸಾಗುತ್ತವೆ. ಚಾಮರಸನು ತನ್ನ ಪ್ರಭುಲಿಂಗ ಲೀಲೆಯಲ್ಲಿ 'ಸತ್ತವರ ಕಥೆಯಲ್ಲ, ಜನನದ ಕುತ್ತದಲಿ ಕುದಿ ಕುದಿದು ಹೊತ್ತು ಹೋಗದೆ ಪುಂಡರಾಲಿಪ ಮತ್ತ ಮತಿಗಳ ಗೋಷ್ಠಿಯಲ್ಲ' ಎಂಬ ಹೇಳಿಕೆಯಲ್ಲಿ ರಾಮಾಯಣ ಮಹಾಭಾರತಗಳಲ್ಲಿನ ರಾಜರ ಕಥೆಗಳನ್ನೂ, ಜೈನ ಪುರಾಣಗಳನ್ನೂ ಟೀಕಿಸುವುದನ್ನು ಕಂಡು ಬಂದರೂ, ಅದರೊಂದಿಗೇ ಭಕ್ತಿ ಪ್ರಧಾನವಾದ ಕಾವ್ಯಗಳು ಯಾವ ಮಾರ್ಗವನ್ನನುಸರಿಸಿ ಸಾಗಿವೆ ಎಂದು ಊಹಿಸಬಹುದು. ಕುಮಾರವ್ಯಾಸನೂ ಸಹ ಭಗವಂತನನ್ನು ಕಥಾನಾಯಕನನ್ನಾಗಿ ಇಟ್ಟುಕೊಂಡು 'ಕೇಳುವ ಸೂರಿಗಳು ಸನಕಾದಿ ಸಜ್ಜನರು' ಎಂಬುದಾಗಿ ಭಕ್ತ ವೃಂದವನ್ನು ನಿರ್ದೇಶಿಸುತ್ತಾನೆ. ರಾಜಾಶ್ರಯದಿಂದ ಭಕ್ತಜನಾಶ್ರಯವನ್ನು ಪಡೆದ ಈ ಬದಲಾವಣೆ, ವಿಷಯ, ವಿಚಾರ ಮತ್ತು ವಿನ್ಯಾಸಗಳಲ್ಲಿಯೂ ಹೊಸ ಧೋರಣೆಯನ್ನು ಅನುಸರಿಸಬೇಕಾಯಿತು. ಇಂದಾದರೋ ಸರ್ವಜನ ಸಮ್ಮತವಾದ ನಿತ್ಯ ಜೀವನವೇ ಕಾವ್ಯದ ಸಾಮಗ್ರಿ. ಇದನ್ನು ಶ್ರೀ. ಕುವೆಂಪು ಅವರ 'ಕ್ರಾಂತಿಕಾಳಿ' ಎಂಬ ಕವಿತೆ ಈ ರೀತಿಯಾಗಿ ಸಮರ್ಥಿಸುತ್ತದೆ.

ಕ್ರಾಂತಿಕಾಳಿ ಕರಾರಿಯಂ ನನ್ನೆದೆಗೆ ಕುರಿತು
ಝಳಪಿಸುತೆ, ಬದ್ಧ ಭ್ರುಕುಟಿ ಕೋಪದಲಿ ನಿಂತು
ದಂಷ್ಟ್ರ ಘರ್ಷಣರವಂ ಪೊಣ್ಮೆ ಗಜರಿದಳಿಂತು.
ಓ, ದ್ರೋಹಿ ಕವಿಯೆ ! ನಿನಗಿತ್ತಾಣತಿಯ ಮರೆತು
ಕ್ಲೀಬತನದಲಿ ಹೆಣ್ಣು ಸೋಬಾನೆಗಳ ಹಾಡಿ
ಪಾಳ್ಗೆಯ್ದೆ ಕಜ್ಜಮಂ ! ಶುಕ, ಪಿಕ, ವಸಂತ, ಲತೆ,
ಮುಂಗುರುಳು, ತಂಗಾಳಿ, ದೊರೆಗಿರೆಗಳಜ್ಜಿ ಕಥೆ
ಬೆಳ್ದಿಂಗಳೆಂಬುವಂ ಸೂಕಾಚಿ ಹೆಂಬೇಡಿ !
ಬಡತನಂ, ಕತ್ತಿ, ಗುದ್ದಲಿ, ಹಾರೆ

ಬೆವರು ನೆತ್ತರ್ಗಳಂ ಗಾನಗೈವುದು ನಿನ್ನ
ಕರ್ತವ್ಯವಿಂದು ! ಹಾ, ಹೊಟ್ಟೆಗಿಲ್ಲದೆ ಅನ್ನ
ಬಡಜನರು ಸಾಯುತಿರೆ, ರಸಗಂಧವನು ತೋರೆ
ತಣಿವಹುದೆ ? ಕ್ರಾಂತಿ ಕಾಳಿಯು ನಾನು ಕೈಬೀಸಿ
ಕರೆಯೆ, ಬಾ, ಪೂಜೆಗೈ ಹೃದಯರಕ್ತವ ಸೂಸಿ.

ಈ ಎಲ್ಲ ಹಂತಗಳನ್ನು ನೋಡಿದರೆ, ಕನ್ನಡ ಸಾಹಿತ್ಯದಲ್ಲಿ ಭಾವನಾ ಸಂಪ್ರದಾಯವು ಕಾಲಕಾಲಕ್ಕೆ ಹೇಗೆ ಮಾರ್ಪಾಡಾಗುತ್ತದೆ ಎನ್ನುವುದು ವಿದಿತವಾಗುತ್ತದೆ.

ಇನ್ನು ಛಂದೋ ವಿನ್ಯಾಸದ ವಿಷಯದಲ್ಲಿಯೂ ಇದೇ ಅಂಶವು ವೇದ್ಯವಾಗುತ್ತದೆ. ಭಾಷೆ ಮತ್ತು ಭಾವನೆಗಳ ಸ್ವರೂಪವನ್ನು ಅವಲಂಬಿಸಿ ಛಂದಸ್ಸು ಹೊಸ ಹೊಸ ರೂಪವನ್ನು ತಾಳಬೇಕಾಗುತ್ತದೆ. ಸಂಸ್ಕೃತ ಸಾಹಿತ್ಯದ ಸಕಲ ಲಕ್ಷಣಗಳನ್ನೂ ಅಳವಡಿಸಿಕೊಂಡಿದ್ದ ಹಳಗನ್ನಡ ಕಾವ್ಯಗಳು ವೃತ್ತ ಮತ್ತು ಕಂದಗಳನ್ನು ಧಾರಾಳವಾಗಿ ಸ್ವೀಕರಿಸಿದುವು. ಆ ಮೂಲಕ ತಮ್ಮ ಪ್ರಾಶಸ್ತ್ಯವನ್ನು ಸಾರಿದುವು. ಈ ಭರದಲ್ಲಿ ಕನ್ನಡದ ಅನೇಕ ಮಟ್ಟುಗಳು ಹಿಂದುಳಿದುವು. ' ಮದನವತಿಯಕ್ಕರಂ ಚೌಪದಿ ಗೀತಿಕೆಯೇಳೆತಿವದಿಯುತ್ಸಾಹಂ ಷಟ್ಪದಿ ಅಕ್ಕರಿಕೆ ಛಂದೋವತಂಸಂ ' ಎಂಬುದಾಗಿ ನಾಗವರ್ಮನು ಹೇಳಿರುವ ದೇಶೀಯ ಮಟ್ಟುಗಳು ಯಾವುವು ಎನ್ನುವುದನ್ನು ಹುಡುಕಿ ನೋಡಬೇಕಾಯಿತು . ಪಂಪನಂತಹ ಮಹಾಕವಿ ರಗಳೆ ಮತ್ತು ಅಕ್ಕರಗಳನ್ನು ಬಳಸಿದ್ದರೂ, ಅವು ತುಂಬ ವಿರಳ. ಆದರೆ, ಈ ಮಟ್ಟುಗಳು ಹೇಗೋ ಉಳಿದುಕೊಂಡಿದ್ದು, ಹರಿಹರನಂತಹ ಪ್ರತಿಭಾಶಾಲಿಗಳಿಂದ ಪುನರುಜ್ಜೀವನವಾಗತೊಡಗಿದವು. ಭಕ್ತಿಸಾಹಿತ್ಯದ ಪ್ರಚಾರದೊಂದಿಗೆ, ರಗಳೆ, ಷಟ್ಪದಿ, ಸಾಂಗತ್ಯ ಮತ್ತು ತ್ರಿಪದಿಗಳು ಮೈಲುಗೈಯಾದುವು. ಭಾವನೆಯ ಆವೇಗಕ್ಕೆ ತಕ್ಕಂತೆ, ನಡುಗನ್ನಡದ ಸುಲಭರೂಪಕ್ಕೆ ಹೊಂದಿದಂತೆ, ಜನಸಾಮಾನ್ಯರ ತಿಳಿವಳಿಕೆಗೆ ಒಪ್ಪುವಂತೆ, ಹಿಂದೆ ಬಿದ್ದಿದ್ದ ಈ ಸಹಜವಾದ ಛಂದೋವಿಧಾನಗಳು ಪುನಃ ಪ್ರಾಶಸ್ತ್ಯಕ್ಕೆ ಬಂದುವು. ಹಾಡುಗಬ್ಬಕ್ಕೆ ಸ್ವಾತಂತ್ರ್ಯ ದೊರಕಿತು. ಈ ಮಾತ್ರಾಗಣಗಳ ಮಾಧುರ್ಯವೇ ಹೆಚ್ಚು ಹೆಚ್ಚಾಗಿ ಮನ ಸೆಳೆಯಲು ಆಧುನಿಕ ಗೀತಗಳೂ ಸಹ ಷಟ್ಪದಿಯ ಮಟ್ಟುಗಳನ್ನೇ ಅನುಸರಿಸಿ, ಪಾದವಿನ್ಯಾಸದಲ್ಲಿ ಹೆಚ್ಚು ಹೆಚ್ಚಾದ ಸ್ವಾತಂತ್ರ್ಯದಿಂದ ಕೂಡಿ ಇಂದು ವಿವಿಧ ರೀತಿಗಳು ವ್ಯಕ್ತವಾಗುತ್ತಿವೆ. ಹಲಕೆಲವು ಕೃತಿಗಳಲ್ಲಿ ಅಂಶಗಣಗಳೂ ಅವತಾರವೆತ್ತಿ ಬಂದಿವೆ. ಇತ್ತೀಚೆಗೆ ಸ್ವಚ್ಛಂದ ಛಂದವೊಂದು ಬಳಕೆಗೆ ಬರುತ್ತಿದೆ. ಈ ಎಲ್ಲ ಮಾರ್ಪಾಡುಗಳೂ ಕನ್ನಡದ ಕಾವ್ಯ ವಿಧಾನದ ಮುನ್ನಡೆಯನ್ನು ಸೂಚಿಸುತ್ತವೆ. ಪ್ರಾಚೀನ ಕಾಲದ ಕಾವ್ಯಸಮುದಾಯವನ್ನೂ ಮೀರಿಸುತ್ತವೆಯೋ ಎನ್ನುವಂತೆ ಇಂದು ಕನ್ನಡ ಗದ್ಯವು ಬಹು ಬೆಡಗಿನಿಂದ ಕೂಡಿ ಬೆಳೆಯುತ್ತಿದೆ. ನಾಟಕಗಳ ಮಾತು ಹಾಗಿರಲಿ ; ಕಥೆ, ಕಾದಂಬರಿ, ವಿಮರ್ಶೆ ಮತ್ತು ವಿಚಾರಭರಿತವಾದ ಕನ್ನಡದ ಗದ್ಯದ ನಡೆ ಗಮನಾರ್ಹವಾಗಿದೆ.

ಹೀಗೆ, ಕನ್ನಡ ಸಾಹಿತ್ಯದಲ್ಲಿ, ಸಂಪ್ರದಾಯ ಮತ್ತು ಸಾಹಿತ್ಯಗಳು ಹೇಗೆ ಪರಸ್ಪರ ಸಹಾಯಕವಾಗಿ ಸಾಗಿವೆ ಎಂಬುದು ವಿದಿತವಾಗುತ್ತದೆ. ಕಾಲಕಾಲಕ್ಕೆ ಹೊಸ ಹೊಸ ಸಂಪ್ರದಾಯಗಳು ಉದಿಸಿ, ತಮ್ಮ ತಮ್ಮ ವೈಶಿಷ್ಟ್ಯವನ್ನು ಬೆಳಗಿ, ಕನ್ನಡದ ಸಾಹಿತ್ಯವಾಹಿನಿ ಸಂತತವಾಗಿ ಪ್ರವಹಿಸಲು ನೆರವಾಗಿವೆ. ಚಂಪೂ ಸಂಪ್ರದಾಯದ ಪಂಪ, ರಗಳೆಯ ಹರಿಹರ, ಷಟ್ಪದೀ ಪ್ರಿಯನಾದ ರಾಘವಾಂಕ, ಸಾಂಗತ್ಯದ ರತ್ನಾಕರವರ್ಣಿ, ತ್ರಿಪದಿಯ ಸರ್ವಜ್ಞ —ಇವರುಗಳು ನಮ್ಮ ಸಾಹಿತ್ಯಕ್ಕೆ ದಿವ್ಯಶಕ್ತಿಗಳೆನಿಸಿದ್ದಾರೆ. ಆಧುನಿಕ ಸಾಹಿತ್ಯದಲ್ಲಿಯಂತೂ, ಅನೇಕ ವಿದ್ವಾಂಸರು ಹೊಸ ಹೊಸ ಹಾದಿಯನ್ನು ತೋರಿಸಿಕೊಟ್ಟಿರುತ್ತಾರೆ.

ಎಲ್ಲಿಯತನಕ ಸಂಪ್ರದಾಯವು ಸಾಹಿತ್ಯಕ್ಕೆ ಪೋಷಕವಾಗಿರುತ್ತದೆಯೋ ಅಲ್ಲಿಯವರೆಗೆ ಸಾಹಿತ್ಯದ ಸತ್ವಕ್ಕೆ ಚ್ಯುತಿಯಿಲ್ಲ. ನಿತ್ಯಜೀವಂತವಾದ ಸಾಹಿತ್ಯದ ಲಕ್ಷಣವಾದರೂ ಇಷ್ಟೆ. ಯಾವ ಸಂಪ್ರದಾಯವೂ ಸ್ಥಿರವಲ್ಲ. ಯಾವ ಸಾಹಿತ್ಯವೂ ಸಂಪ್ರದಾಯವನ್ನು ಪೂರ್ತಿಯಾಗಿ ನಿರಾಕರಿಸುವಂತಿಲ್ಲ. ಸಾಹಿತ್ಯವು ಒಂದಲ್ಲ ಒಂದು ದೃಷ್ಟಿಯಿಂದ ಪ್ರಗತಿಮುಖವಾಗಿರಬೇಕು. ಪ್ರಗತಿಗೆ ಅಡ್ಡಬರದಿರಬೇಕಾದರೆ, ಮಾನವ ನಿರ್ಮಿತವಾದ ಸಂಪ್ರದಾಯವು ಎಂದೆಂದಿಗೂ ಸಂಕೋಲೆಯಾಗಬಾರದು; ಸುಮ ಮಾಲೆಯಂತೆ ಸುಖಕರವಾಗಿರಬೇಕು ಇದಕ್ಕೆ ಸಾಹಿತಿಗಳಲ್ಲಿ, ಸಹೃದಯರಲ್ಲಿ, ಕಾಲಗತಿಯನ್ನರಿತು ನಡೆಯುವ ಸೌಹಾರ್ದವಿರಬೇಕು. ಒಂದು ಸಂಪ್ರದಾಯವು ಇನ್ನೊಂದು ಸಂಪ್ರದಾಯಕ್ಕೆ ದಾರಿ ಮಾಡಿಕೊಡಬೇಕೇ ವಿನಾ, ಯಾವ ಒಂದು ಸಂಪ್ರದಾಯವೂ ತಾನೇ ಸ್ಥಿರವೆಂದು ಭ್ರಮಿಸಬಾರದು. ಇದನ್ನು ಈ ಇಂಗ್ಲಿಷ್ ಹೇಳಿಕೆಯಲ್ಲಿ ಬಹು ಅರ್ಥವತ್ತಾಗಿ ನಿರೂಪಿಸಲಾಗಿದೆ.

Stop ! Careless youth, as you pass
As you are now, so once was I
As I am now, so you will be !

ಜಿ. ವರದರಾಜರಾವ್

# ಕವಿ ದೃಷ್ಟಿಯಲ್ಲಿ ರಾಜತ್ವ

ರಾಜತ್ವವು ಬಹಳ ಪುರಾತನವಾದ ಸಂಸ್ಥೆ. ಅದು ಎಂದು, ಹೇಗೆ ಆರಂಭವಾಯಿತೆಂಬುದು ತಿಳಿಯದು. ಪುರಾತನ ಮಾನವರು ತಮ್ಮ ತಮ್ಮಲ್ಲಿಯೇ ಹೊಡೆದಾಡಿ ಬಡಿದಾಡಿ ಬೇಸತ್ತು ತಮಗೆ ಒಬ್ಬ ನಾಯಕನಿಲ್ಲದಿದ್ದರೆ ನೆಮ್ಮದಿ ಲಭಿಸಲೆಂದು ಮನಗಂಡು ತಮ್ಮಲ್ಲಿಯೇ ಒಬ್ಬನನ್ನು ಮುಖಂಡನನ್ನಾಗಿ ಆರಿಸಿ ಅವನಿಗೆ ಕೆಲವು ಅಧಿಕಾರಗಳನ್ನು ಒಪ್ಪಿಸಿ ಅವನ ಆಜ್ಞಾಪಾಲನೆಗೆ ಕಟ್ಟುಬಿದ್ದರೆಂಬುದು ಒಂದು ಊಹೆ. ಜನರು ಪರಸ್ಪರ ಹೊಡೆದಾಡುತ್ತ ಅನಾಯಕತ್ವವು ತಾನೇ ತಾನಾಗಿ ತಾಂಡವ ನಡೆಸುತ್ತಿದ್ದಾಗ ಅವರಲ್ಲಿ ಪ್ರಬಲನೂ ಚಾಣಾಕ್ಷನೂ ಆದವನೊಬ್ಬನು ಉಳಿದವರನ್ನೆಲ್ಲ 'ಮಟ್ಟ'ಹಾಕಿ ತಾನೇ ಪ್ರಭುತ್ವವನ್ನು ಆಕ್ರಮಿಸಿಕೊಂಡಿರಬಹುದೆಂಬುದು ಎರಡನೆಯ ಊಹೆ. ಆದರೆ ಪ್ರಾಯಿಕವಾಗಿ ರಾಜರು ಈ ಯಾವ ಊಹೆಯನ್ನೂ ಒಪ್ಪುವುದಿಲ್ಲ ರಾಜಪದವಿ ದೇವದತ್ತವಾದುದೆಂದೇ ಅವರ ದೃಢವಾದ ನಂಬಿಕೆ. ದೇವರು ಭೂಲೋಕದ ಜನರ ಹಿತರಕ್ಷಣೆಗಾಗಿ ರಾಜರನ್ನು ಸೃಷ್ಟಿಸಿ ಇಲ್ಲಿಗೆ ಕಳುಹಿಸುವನೆಂದೇ ಅವರ ವಾದ. ದೇವರು ಕೊಟ್ಟ ಪದವಿಯಾದ್ದರಿಂದ ಬೇರೆ ಯಾರೂ ಅದನ್ನು ಕಸಿದುಕೊಳ್ಳಲಾಗದೆಂದು ಅವರ ಆಶಯ. ಆದರೆ ಕೆಲವು ಸಂದರ್ಭಗಳಲ್ಲಿ ಪ್ರಜೆಗಳು ಈ ತತ್ವವನ್ನು ಒಪ್ಪದೆ 'ಅರಸಿಂಗಂ ಪ್ರಜೆಯೆ ದೈವಂ' ಎಂದು ಸ್ಥಾಪಿಸಿರುವುದೂ ಉಂಟು. ಅಂತೂ ರಾಜತ್ವದ ಆರಂಭಕಥೆ ಚರ್ಚೆಗೆ ನಿಲುಕದ ಸಂಗತಿಯಾಗಿದೆ. ಈ 'ರಾಜಮೂಲ'ವನ್ನು ಬೆದಕಬಾರದು. ಇದು ದೇವಮೂಲ ಋಷಿಮೂಲ ನದೀ ಮೂಲಗಳಂತೆಯೇ ವಿಚಾರಕ್ಕೆ ಮೀರಿದ ಪರವಸ್ತು.

ರಾಜತ್ವದ ಆರಂಭಕಥೆ ನಿಶ್ಚಿತವಾಗಿ ತಿಳಿಯದೆ ಹೋದರೂ ಅದು ಬಳಕೆಗೆ ಬಂದಂದಿನಿಂದ ಮಾನವ ಜೀವನದ ಮೇಲೆ ನಾನಾ ರೀತಿಗಳಲ್ಲಿ ತನ್ನ ಪ್ರಭಾವವನ್ನು ವಿಶೇಷವಾಗಿ ಬೀರಿದೆ. ಮಾನವರಲ್ಲೆಲ್ಲ ರಾಜನೇ ಶ್ರೇಷ್ಠನೆಂಬ ಭಾವನೆ ಎಲ್ಲರಲ್ಲಿಯೂ ಬೇರೂರಿದೆ. ಆದ್ದರಿಂದಲೇ ರಾಜಶಬ್ದಕ್ಕೆ ಶ್ರೇಷ್ಠನೆಂಬ ಅರ್ಥ ಬಂದಿದೆ. ಗ್ರಂಥ ರಾಜಂ, ಎಂದರೆ ಶ್ರೇಷ್ಠಗ್ರಂಥವೆಂದೇ ಅರ್ಥ. ಮೃಗರಾಜ, ಪಕ್ಷಿರಾಜ, ಎಂಬ ಮಾತುಗಳೂ ಈ ಅರ್ಥವನ್ನೇ ಸಮರ್ಥಿಸುತ್ತವೆ. ಉತ್ತಮವಾದ ಊಟವನ್ನು ಸಾಮಾನ್ಯವಾಗಿ ನಾವು 'ರಾಜಭೋಜನ'ವೆಂದೇ ಕರೆಯುತ್ತೇವೆ. ಊರಿನ ಬೀದಿ ಗಳಲ್ಲಿ ದೊಡ್ಡವಕ್ಕೆ 'ರಾಜಬೀದಿ'ಗಳೆಂದೇ ಹೆಸರು. ಒಳ್ಳೆಯ ಬಾಳೆಹಣ್ಣು 'ರಾಜ ಬಾಳೆ.' ಹೀಗೆ ಆಯಾ ಜಾತಿಯಲ್ಲಿ ಶ್ರೇಷ್ಠವಾದ ವಸ್ತುವಿಗೆ ರಾಜಶಬ್ದವನ್ನು ಕೊಡು ವುದು ರೂಢಿಯಾಗಿದೆ. ಕೊನೆಗೆ ಮಾನವ ಲೋಕವನ್ನು ವಿಶೇಷವಾಗಿ ಹಿಂಸಿಸುವ ಅತ್ಯಂತ ಭಯಂಕರವಾದ ವ್ಯಾಧಿಗೆ 'ರಾಜಯಕ್ಷ್ಮ' ಎಂದು ಹೆಸರು ಬಂದಿದೆ. ರಾಜನು ಶ್ರೇಷ್ಠನೂ ಬಲಿಷ್ಠನೂ ಆಗಿದ್ದಾನೆ. ಅವನ ಅಧಿಕಾರವು ಅಪ್ರತಿಹತವಾದದ್ದು. ಆದ್ದ

ರಿಂದ ರಾಜನನ್ನು 'ನರಪತಿ'ಯೆನ್ನುತ್ತೇವೆ. ಅರಸನು ಶ್ರೀಮಂತ. ದೊರತನಕ್ಕೂ ಬಡತನಕ್ಕೂ ಪರಸ್ಪರ ವೈರವೆಂಬುದು ಗಾದೆಯ ಮಾತು. ಇಂದ್ರನಂತೆ ಐಶ್ವರ್ಯವಂತನೆಂದು ಭಾವಿಸಿ 'ನರೇಂದ್ರ'ನೆಂದೇ ರಾಜನನ್ನು ವರ್ಣಿಸಲಾಗುತ್ತಿದೆ. 'ನಾ ವಿಷ್ಣುಃ ಪೃಥ್ವೀಪತಿಃ' ಎಂದು ಹೇಳಿ ಮಹಾವಿಷ್ಣುವಿನ ಅಂಶವುಳ್ಳವರೇ ರಾಜರಾಗುವರೆಂದು ಜನ ನಂಬುತ್ತಾರೆ. ಆದ್ದರಿಂದ ವಿಷ್ಣುವಿನ 'ಅಂಶ' ಸಂಭೂತರಾದ ರಾಜರಿಗೆ ಪ್ರಜೆಗಳು ಆ ಮಹಾವಿಷ್ಣುವಿಗೆ ಸಲ್ಲಬಹುದಾದ ಭಕ್ತಿ ಗೌರವ ಪೂಜೆಗಳನ್ನು ಸಲ್ಲಿಸ ತೊಡಗಿದರು. 'ರಾಜಭಕ್ತಿ' ಪ್ರಜೆಯ ಪರಮ ಕರ್ತವ್ಯವಾಯಿತು. 'ರಾಜಧಿಕ್ಕಾರ' 'ರಾಜದ್ರೋಹ'ಗಳು ಗುರುತರವಾದ ಅಪರಾಧಗಳೆನಿಸಿಕೊಂಡುವು. ಪ್ರಜೆಗಳು ರಾಜರ 'ನಾಯಕ'ತ್ವದಲ್ಲಿ ನಡೆಯತಕ್ಕವರು; ಅವರ ಮೇಲ್ಪಂಕ್ತಿಯನ್ನು ಅನುಸರಿಸತಕ್ಕದ್ದು. ಆದ್ದರಿಂದಲೇ 'ಯಥಾ ರಾಜಾ ತಥಾ ಪ್ರಜಾಃ' ಎಂಬ ಹೇಳಿಕೆ ರೂಢಿಗೆ ಬಂದಿತು. ಉತ್ತಮವಾದ ರಾಜನು ಜನರಲ್ಲಿ ಮಾನ್ಯನೂ ಗೌರವಾರ್ಹನೂ ಪೂಜ್ಯನೂ ಆದ ಶ್ರೀಮಂತ ಮತ್ತು ಬಲಾಢ್ಯ. ಅವನು ಲೋಕಪ್ರಿಯನೂ ಹೌದು; ಲೋಕ ಭಯಂಕರನೂ ಹೌದು. 'ಜಲಜಂತುರತ್ನಂಗಳನಾಂತಬ್ಧಿವೋಲದೃಷ್ಯನು ಮಹನು ಸೇವ್ಯನುಂ ಅಹನು" ಎಂದು ಹಾಡಿ ಕವಿ ಕುಲಗುರು ಕಾಳಿದಾಸನು ರಾಜನನ್ನು ಸಮುದ್ರಕ್ಕೆ ಹೋಲಿಸಿದ್ದಾನೆ. ಸಮುದ್ರವು ಅದರೊಳಗೆ ಅಡಗಿರುವ ರತ್ನಗಳ ದೆಸೆಯಿಂದ ಆಕರ್ಷಕವಾದುದು. ಆದರೆ ಅದರಲ್ಲಿನ ಜಂತುಜಾಲದಿಂದ ಭಯಂಕರವಾದದ್ದು. ಅಂತೂ ಜನತೆಯ ದೃಷ್ಟಿಯಲ್ಲಿ ರಾಜತ್ವವು ಶ್ರೇಷ್ಠತೆ, ಪರಮಾಧಿಕಾರ ಮತ್ತು ದೇವತ್ವಗಳ ಒಂದು ಸಮ್ಮೇಳನದಂತಿದೆ.

ಕಾವ್ಯವು ಜೀವನದ ಪ್ರತಿಬಿಂಬವಷ್ಟೆ? ಜನರ ಅನುಭವಸಾರವನ್ನೇ ಕವಿಗಳು ತಮ್ಮ ಕಾವ್ಯಗಳಲ್ಲಿ ಚಿತ್ರಿಸುವುದು ಸಹಜ. ಕವಿಗಳೂ ಜನರಲ್ಲಿ ಸೇರಿದವರೇ ತಾನೆ! ಅನೇಕ ಕವಿಗಳು ರಾಜರ ಆಶ್ರಿತರು; ರಾಜರ ಗುಣಾತಿಶಯುಗಳನ್ನು ಕಂಡು ಬಹಳವಾಗಿ ಮೆಚ್ಚಿದವರು. ತಮಗೆ ಆಶ್ರಯದಾತರಾದ ರಾಜ ಮಹಾರಾಜರ ಕೀರ್ತಿಯನ್ನು 'ಆ ಚಂದ್ರಭೂತಾರಾರ್ಕ'ವಾಗಿ 'ನಿಲ್ಲಿಸುವ' ಉದ್ದೇಶದಿಂದ ಅವರನ್ನೇ ಕಥಾನಾಯಕರನ್ನಾಗಿ ಮಾಡಿಕೊಂಡು ಕೃತಿರಚನೆ ಮಾಡಿದ ಕವಿಗಳೂ ಅನೇಕರಿದ್ದಾರೆ. ತಮ್ಮ ಪ್ರೀತಿಯ ಕೃತಿಗಳನ್ನು ತಮ್ಮ ಅರಸರಿಗೆ 'ಅಂಕಿತ' ಮಾಡಿದ ಕವಿಗಳಂತೂ ಬೇಕಾದ ಹಾಗೆ ಇದ್ದಾರೆ. ಈ ಕವಿಗಳೂ ರಾಜರ, ಮತ್ತು ರಾಜತ್ವದ, ವಿಷಯವಾಗಿ ನುಡಿದಿರುವ ಹಲವು ಸೂಕ್ತಿಗಳು ವಿಚಾರ ಪ್ರಚೋದಕವಾಗಿವೆ.

ಮೊದಲನೆಯದಾಗಿ ಮಹಾಕವಿ ಕಾಳಿದಾಸನ ಒಂದು ಸೂಕ್ತಿಯನ್ನು ಗಮನಿಸೋಣ. ಅಭಿಜ್ಞಾನ ಶಾಕುಂತಳದಲ್ಲಿ ದುಷ್ಯಂತನು ಹೀಗೆ ಹೇಳಿಕೊಂಡಿದ್ದಾನೆ: 'ಸರ್ವಃ ಪ್ರಾರ್ಥಿತಮಧಿಮ್ಯುಸುಖೀ ಸಂಪದ್ಯತೇ ಜಂತುಃ। ರಾಜ್ಞಾಂತು ಚರಿತಾರ್ಥತಾ ದುಃಖೋತ್ತರೈವ.

ಔತ್ಸುಕ್ಯಮಾತ್ರಮವಸಾಯಯತಿ ಪ್ರತಿಷ್ಠಾ
ಕ್ಲಿಶ್ನಾತಿಲಬ್ಧಪರಿಪಾಲನವೃತ್ತಿರೇವ
ನಾತಿಶ್ರಮಾಪನಯನಾಯ ಯಥಾಶ್ರಮಾಯ
ರಾಜ್ಯಂ ಸ್ವಹಸ್ತಧೃತದಂಡಮಿವಾತಪತ್ರಮ್ ॥ '

ಜಗತ್ತಿನ ಸಮಸ್ತಜೀವಿಗಳೂ ತಮ್ಮ ಅಪೇಕ್ಷೆಸಾಧಿತವಾಗುತ್ತಲೇ ಸುಖಿಗಳಾಗುತ್ತಾರೆ. ಆದರೆ ರಾಜರಿಗೆ ಮಾತ್ರ ಹಾಗಲ್ಲ. ಅವರಿಗೆ ಇಷ್ಟಾರ್ಥಸಾಧನೆಯಾದ ಮೇಲೂ ಚಿಂತೆ ತಪ್ಪುವುದಿಲ್ಲ. ' ಲಬ್ಧಪರಿಪಾಲನ ' ಕಾರ್ಯದಿಂದ ಕ್ಲೇಶವುಂಟಾಗುತ್ತದೆ. ರಾಜ್ಯವು ಕೈಯಲ್ಲಿಯೇ ಹಿಡಿದುಕೊಂಡು ಛತ್ರಿಯ ಹಾಗೆ! ಅದು ಬಿಸಿಲನ್ನುತಪ್ಪಿಸಿದರೂ ಅದರ ಭಾರದಿಂದ ಆಯಾಸವೇ ಹೆಚ್ಚು. ರಾಜ್ಯಭಾರದ ಹೊಣೆಹೊತ್ತವನಿಗೆ ಮಿಕ್ಕವೈಭವ ವೇನಿದ್ದರೂ ಮನಶ್ಶಾಂತಿಯಿಲ್ಲ. ಅವನು ಸಂತತವೂ ಎಚ್ಚರದಿಂದಿರಬೇಕು. ಪ್ರಜಾ ರಂಜನೆಯ ಕೆಲಸ ಹಗುರವಲ್ಲ. ಆದ್ದರಿಂದಲೇ ' ಕಿರೀಟ ಹೊತ್ತ ತಲೆಗೆ ನೆಮ್ಮದಿ ಯಿಲ್ಲ ' ಎಂಬ ಗಾದೆ ಪ್ರಸಿದ್ಧವಾಗಿದೆ. ವಿಜಯನಗರದ ಸಾರ್ವಭೌಮನಾದ ಶ್ರೀಕೃಷ್ಣದೇವರಾಯನು ' ಆಮುಕ್ತಮಾಲ್ಯದ ' ಎಂಬ ತನ್ನ ಕಾವ್ಯದಲ್ಲಿ

' ಕನ್ನೊಕಟನಿದ್ರವೋ ಚೆರಕಂಟಬಾಗ
ರಂಬುಗಾವಿಂಚುಭೂರುಹಾಗ್ರಂಬುಮೀದಿ
ಯುಚ್ಚಭಲ್ಲಂಬುಗತಿ ಭೋಗಮನುಭವಮಿಂಚು
ನೆಡನು ಬಹಿರಂತರರುಲಪೈದೃಷ್ಟಿವಲಯು '

ಎಂದು ನುಡಿದಿದ್ದಾನೆ. ಮರದ ಮೇಲಿನ ಕರಡಿ ನಿದ್ರೆಹೋಗುವಾಗಲೂ ಒಂದು ಕಣ್ಣಲ್ಲಿ ಎಚ್ಚರವಾಗಿರುವಂತೆ ರಾಜನು ಭೋಗಗಳನ್ನು ಅನುಭವಿಸುವಾಗಲೂ ಬಹಿರಂತರರ ಮೇಲೆ ದೃಷ್ಟಿಯಿಡ್ಬೇರಬೇಕು. ಅವನು ಸದಾ ಎಚ್ಚರದಿಂದಿರಬೇಕು. ಇಲ್ಲದಿದ್ದರೆ ಅಂತಶ್ಶತ್ರುಗಳಾಗಲಿ, ಹೊರಗಿನ ವೈರಿಗಳಾಗಲಿ, ತೊಂದರೆಮಾಡಬಹುದು.

ರಾಜರು ತಮ್ಮ ರಾಜಧರ್ಮವನ್ನು ಎಚ್ಚರದಿಂದ ಕಾಪಾಡಿಕೊಳ್ಳದೆ ಮೈಮರೆತರೆ ತಮಗೂ ತಮ್ಮನ್ನು ನಂಬಿದ ಪ್ರಜಾಪರಿವಾರಗಳಿಗೂ ಹಲವು ಬಗೆಯ ತೊಂದರೆಗಳು ಒದಗುತ್ತವೆ. ಅಂಥಾ ರಾಜನ ವಿಷಯದಲ್ಲಿ ಜನಕ್ಕೆ ಗೌರವಭಾವ ಹುಟ್ಟುವುದಿಲ್ಲ. ಅಂಥಾ ' ಅರಸ 'ನನ್ನು ಕುರಿತು ಪಾಲ್ಕುರಿಕೆ ಸೋಮನಾಥನು ಹೀಗೆ ನುಡಿದಿದ್ದಾನೆ:—

ಪುರದುರ್ಗಂಗಳ ಬಲ್ಮೆಮಾಡದೆ ಪ್ರಜಾಕ್ಷೋಭಂಗಳಂ ನೋಡದೆ
ಲ್ಲರುವಿಶ್ವಾಸಿಗಳೆಂದು ನಂಬಿ ಬಹುದಂ ಪೋದಪ್ಪುದಂ ಕಾಣದಾ
ತುರದಿಂದುಂಡತಿನಿದ್ರೆಗೆಯ್ದು ಮದನಂಗಾಳಾಗಿಹಂ ಲೋಕದೊಳ್
ದೊರೆಯೇ ಸೊಕ್ಕಿದ ಕೋಣನೈ ಹರಹರಾ ಶ್ರೀ ಚನ್ನಸೋಮೇಶ್ವರಾ

ಬಹುಶಃ ಇಂಥಾ ರಾಜರನ್ನು ಕುರಿತು ಮನಸ್ಸಿನಲ್ಲಿ ಯೋಚಿಸುತ್ತಿದ್ದ ವೇಮನನು ' ರಾಚಮೂಕ ನಮ್ಮರಾದುರನ್ನ' (ರಾಜರ ಗುಂಪನ್ನು ನಂಬಬಾರದೋ ಅಣ್ಣ)

ಎಂದು ಹೇಳಿದ್ದಾನೆ. ಇಂಥಾ ರಾಜರು ಯುಕ್ತಾಯುಕ್ತಪರಿಜ್ಞಾನ ಶೂನ್ಯರಾಗಿರುವುದರಿಂದ ಅವರಿಗೆ ಯಾರನ್ನು ಹೇಗೆ ನೋಡಿಕೊಳ್ಳಬೇಕೆಂಬ ತಿಳಿವು ನಶಿಸಿಹೋಗಿಬಿಟ್ಟಿರುತ್ತದೆ. ಕನ್ನಡದ ಮೊದಲ ಕವಿಯೆನಿಸಿದ ಪಂಪನು ತನ್ನ 'ವಿಕ್ರಮಾರ್ಜುನ ವಿಜಯ'ದಲ್ಲಿ ಹೀಗೆ ಹೇಳಿದ್ದಾನೆ:

ಕಲಿಯನೆ ಪಂದೆ ಮಾಳ್ಪ ಕಡುಪಂದೆಯನೊಳ್ಗಲಿ ಮಾಳ್ಪ ತಕ್ಕನಂ
ಪೊಲೆಯನೆ ಮಾಳ್ಪ ಮುಂಪೊಲೆಯನಂ ನೆಱತಕ್ಕನೆ ಮಾಳ್ಪ ತಮ್ಮೊಳೊ
ಗ್ಗಲಿಸಿ ಪೊದಳ್ದ ಪರ್ವಿದವಿವೇಕತೆಯಿಂ ನೃಪಚಿತ್ತವೃತ್ತಿ ಸಂ
ಚಲಮದಱಂದಮೋಲಗಿಸಿಬಾಳ್ವುದೆ ಕಷ್ಟಮಿಳಾಧಿನಾಥರಂ

ಇಳಾಧಿನಾಥರನ್ನು ಓಲೈಸಿಬಾಳುವುದೇ ಕಷ್ಟವಂತೆ! ಏಕೆಂದರೆ ಅವರ ಚಿತ್ತ ಬಹಳ ಚಂಚಲ. ಅವರು ಕಲಿಯನ್ನು ಹೇಡಿಯಾಗಿಯೂ ಹೇಡಿಯನ್ನು ಕಲಿಯಂತೆಯೂ ಕಾಣಬಹುದು. ಅವರ ಮನಸ್ಸಿಗೆ ಬಂದ ಹೊಲೆಯ ಯೋಗ್ಯನಾಗುತ್ತಾನೆ; ಯೋಗ್ಯ ಹೊಲೆಯನಾಗುತ್ತಾನೆ. ಈ ಅವಿವೇಕ ಅವರಲ್ಲಿ ವಿಶೇಷವಾಗಿ ಹಬ್ಬಿರುವುದರಿಂದ ನೃಪಚಿತ್ತವೃತ್ತಿ ಚಂಚಲವಾಗುತ್ತದೆ.

ಸ್ವಯಂರಾಜನಾದ ಶಲ್ಯನೇ ಈ ಮಾತನ್ನು ಹೇಳಿದ್ದಾನೆ. ದುರ್ಯೋಧನ ಮಹಾರಾಜನು ತನ್ನ ಪ್ರಿಯಮಿತ್ರನಾದ ಅಂಗರಾಜನಿಗೆ ಸಾರಥಿಯಾಗಬೇಕೆಂದು ಕೇಳಿದ ಸಮಯದಲ್ಲಿ ಅವನ ಮನಸ್ಸಿಗೆ ಹೀಗೆ ತೋರುತ್ತದೆ. ಶುದ್ಧಕ್ಷತ್ರಿಯವಂಶದಲ್ಲಿ ಹುಟ್ಟಿದ ತನ್ನನ್ನು ಅಜ್ಞಾತಕುಲಗೋತ್ರನಾದ ಈ ಕರ್ಣನಿಗೆ ಸಾರಥಿಯಾಗೆಂದು ಕೇಳಬಹುದೆ? ದುರ್ಯೋಧನನ ವರ್ತನೆ ಶಲ್ಯನ ಮನಸ್ಸಿಗೆ ಬಹಳ ನೋವನ್ನುಂಟುಮಾಡಿತು. ಅವನ ದೃಷ್ಟಿಯಲ್ಲಿ ಅದು 'ತಕ್ಕನಂ ಪೊಲೆಯನೆ ಮಾಳ್ಪ' ಕ್ರಮ. ಆದರೆ ಕರ್ಣನ ಅಮಿತ ಪರಾಕ್ರಮ, ತ್ಯಾಗ, ನನ್ನಿ ಮುಂತಾದ ಗುಣಾತಿಶಯಗಳು ಆ ಸಮಯದಲ್ಲಿ ಶಲ್ಯನ ಮನಸ್ಸಿಗೆ ಬರುವುದಿಲ್ಲ. ಅಂಥಾ ಮಹಾಗುಣಭೂಷಿತನನ್ನು 'ಸೂತ್ರಪುತ್ರ'ನೆಂದು ಹಳಿಯುವುದೂ 'ತಕ್ಕನಂ ಪೊಲೆಯನೆ ಮಾಳ್ಪ' ಕ್ರಮವಾಗಬಹುದೆಂದು ಈ ಮದ್ರರಾಜನಿಗೆ ಹೊಳೆಯಲಿಲ್ಲ! ಹೀಗೆ ರಾಜರ ಮನಸ್ಸು ಅವಿವೇಕದಿಂದ ತುಂಬಿಹೋಗಿ ಸಂಚಲವಾಗುವುದಕ್ಕೆ ಪಂಪನು ಶಲ್ಯನ ಕೈಯಲ್ಲಿ ಹೇಳಿಸಿರುವ ಕಾರಣ ಬಹಳ ಸ್ವಾರಸ್ಯವಾಗಿದೆ:

ಅನುಪಮ ವಿಕ್ರಮಕ್ರಮಮುದಾರ ಗುಣಂ ಋತವಾಕ್ಯಮೆಂಬ ಪೆಂ
ಪೆನಲಿವು ಮೂಱು ನಾಲ್ಕೆ ಗುಣಮುತ್ತಮದಾನ್ವಿತರಾಜ ಬೀಜಸಂ
ಜನಿತಗುಣಂ ಮದಂ ಮದಮುನಾಳ್ಪವಿವೇಕತೆಯಿಂದಮುಲ್ತೆ ತೊ
ಟ್ಟಿನ ಮೊಲೆವಾಲನುಂಡಗುಣಮಿಂತಿವನಾರ್ ಕಿಡಿಪರ್ ನರೇಂದ್ರರೊಳ್

ಅರಿಕೇಸರಿ ಮಹಾರಾಜನ ಆಸ್ಥಾನದಲ್ಲಿ ಪಂಪಕವಿ ಈ ಪದ್ಯವನ್ನು ಓದಿದಾಗ ಕೇಳಿದ ಆ ದೊರೆ ಎಷ್ಟು ಸಂತೋಷಪಟ್ಟನೊ! ಅಥವಾ ಇದು ದುರ್ಯೋಧನನನ್ನು ಕುರಿತ ಹೇಳಿಕೆಯಾದ್ದರಿಂದ ಅರ್ಜುನನ 'ಅವತಾರ'ನೆನಿಸಿದ ಅರಿಕೇಸರಿ ಸಂತೋಷಪಡ ತಕ್ಕದ್ದೇ ಸರಿ!

ಯಾವ ರಾಜನ ಆಶ್ರಯವನ್ನೂ ಬಯಸದೆ ತನ್ನ ಇಷ್ಟದೈವನಾದ ವೀರ ನಾರಾಯಣನಿಗೇ ಕಿಂಕರನಾಗಿದ್ದುಕೊಂಡು ಕಾವ್ಯರಚನೆಮಾಡಿ ಕೀರ್ತಿಶಾಲಿಯಾದ ಕುಮಾರವ್ಯಾಸನು ಶ್ರೀಕೃಷ್ಣನ ಬಾಯಲ್ಲಿ ಹೇಳಿಸಿರುವ ಮಾತು ಇಲ್ಲಿ ಗಮನಾರ್ಹ ವಾಗಿದೆ. ದುರ್ಯೋಧನ ಪಾರ್ಥರಿಬ್ಬರೂ ಶ್ರೀಕೃಷ್ಣನ ಸಹಾಯಾರ್ಥಿಗಳಾಗಿ ದ್ವಾರಕಿಗೆ ಹೋಗಿದ್ದಾಗ ಅವನು ಹೀಗೆ ಹೇಳಿದನಂತೆ:—

> ಕೌರವೇಶ್ವರ ಕೇಳು ಧರಣೀ । ನಾರಿಯಾರೊಡನೊಕ್ಕತನವಿ
> ದ್ದಾರ ಮೆಚ್ಚಿದಳಾರ ಸಂಗಡವುರಿಯ ಹಾಯ್ದಪಳು
> ಭೂರಿ ಮಮಕಾರದೊಳು ನೃಪರು ವಿ । ಚಾರಿಸದೆ ಧರೆ ತಮ್ಮದೆಂದೇ
> ನಾರಕದ ಸಾಮ್ರಾಜ್ಯಕೈದುವರೆಂದು ಹರಿ ನುಡಿದ

ರಾಜರನ್ನು ಕವಿಗಳು ನರಪತಿ, ನರೇಂದ್ರ, ನರನಾಥ ಎಂದು ಮುಂತಾಗಿ ಹೊಗಳಿ ಜನರಿಗೆ ಅವರು ನಾಯಕರೆಂದು ಹೇಳಿ ತೃಪ್ತರಾಗದೆ, 'ಭೂಪತಿ' 'ಭೂಮಾನಿ ನೀರಮಣ' ಎಂದು ಹೊಗಳಿದರು. ಭೂವನಿತೆಯು ಅರಸನ ಮಡದಿಗೆ ಸವತಿ ಯೆಂದು ಹೇಳಿದವರೂ ಉಂಟು. ಈ ಮಾತುಗಳನ್ನು ಕೇಳಿದ ಕವಿ ಕುಮಾರ ವ್ಯಾಸನಿಗೆ ಬಹಳ ಬೇಸರವೆನಿಸಿರಬೇಕು. ಆ ಭಕ್ತಶಿರೋಮಣಿ ಇದನ್ನು ಸಹಿಸದೆ ಶ್ರೀ ಕೃಷ್ಣನಿಂದ ಈ ಮಾತನ್ನಾಡಿಸಿ ತನ್ನ ಸ್ವಂತ ಅಭಿಪ್ರಾಯವನ್ನು ವ್ಯಕ್ತಪಡಿಸಿರುವ ನೆಂದು ತೋರುತ್ತದೆ. ಧರಣೀನಾರಿಯು ಯಾವ ರಾಜನನ್ನು ವರಿಸಿದಳು? ಅವಳು ಯಾರ ಸಂಗಡ ಒಕ್ಕತನ ಮಾಡಿದಳು? ಯಾವ ರಾಜನು ಸತ್ತಾಗ ಅವನೊಡನೆ ಸಹ ಗಮನಮಾಡುತ್ತಾಳೆ? ವೃಥಾಮಮಕಾರವನ್ನು ಬೆಳೆಸಿಕೊಂಡು ಭೂಮಿ ತನ್ನದೇ ಎಂದು ಭಾವಿಸಿ ರಾಜರು ಕಡೆಗೆ ನರಕದ ಸಾಮ್ರಾಜ್ಯವನ್ನು ಪ್ರವೇಶಿಸುವರು. ಈ ಪದ್ಯವನ್ನು ರಚಿಸುವಾಗ ಕವಿಯ ಚಿತ್ತಭಿತ್ತಿಯ ಮೇಲೆ 'ರಾಜ್ಯಾಂತೇ ನರಕಂ ಧ್ರುವಂ' ಎಂಬ ಆರ್ಯೋಕ್ತಿಯು ಚಿತ್ರಿತವಾಗಿದ್ದಿರಬಹುದು. ರಾಜರು, ಎಂದರೆ, ರಾಜತ್ವವನ್ನು ನಡೆಸುವವರು, ತಮ್ಮ ಧರ್ಮವನ್ನು ಸರಿಯಾಗಿ ನಡೆಸದೆ ಪ್ರಜಾಹಿತವನ್ನು ಅಲಕ್ಷ್ಯ ಮಾಡಿ ಭೋಗನಿಮಗ್ನರಾಗಿದ್ದು ಬಿಟ್ಟರೆ, ಅಥವಾ ಪ್ರಜಾಕಂಟಕರೇ ಆಗಿಬಿಟ್ಟರೆ, ಅಂಥವರ ವಿಷಯವಾಗಿ ಜನ ಹೀಗೆ ಭಾವಿಸುವುದರಲ್ಲಿ ಆಶ್ಚರ್ಯವೇನಿದೆ? ರಾಜ ಪ್ರಜೆಗಳ ಸಂಬಂಧವನ್ನು ಒಬ್ಬ ಕನ್ನಡಕವಿ ತಕ್ಕಡಿಯ ಎರಡು ತಟ್ಟೆಗಳಿಗೆ ಹೋಲಿ ಸಿದ್ದಾನೆ. 'ತ್ರಾಸಿನ ಕೊಡನೊಂದು ಬೀಳಲೊಂದಿರ್ದಪುದೆ?' ತಕ್ಕಡಿಯ ಒಂದು ತಟ್ಟೆ ಬಿದ್ದುಹೋದರೆ ಇನ್ನೊಂದೂ ನಿಲ್ಲಲಾರದು. ರಾಜ ಕೆಟ್ಟರೂ, ಪ್ರಜೆಗಳು

ವಿದ್ರೋಹಿಗಳಾದರೂ ರಾಜ್ಯಕ್ಕೇ ಹಾನಿ. ರಾಜ್ಯ ಸುಖಶಾಂತಿಗಳಿಂದಿರಬೇಕಾದರೆ ರಾಜ ಪ್ರಜೆಗಳಿಬ್ಬರೂ ಸಮರಸದಿಂದಬೇಕು.

> ಸ್ವಸ್ತಿ ಪ್ರಜಾಭ್ಯಃ ಪರಿಪಾಲಯನ್ತಾಂ
> ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ।
> ಲೋಕಾಸ್ಸಮಸ್ತಾಸ್ಸುಖಿನೋಭವನ್ತು.

ಕೆ. ವೆಂಕಟರಾಮಪ್ಪ

# ಭಾಸಕೃತಿಗಳು ಮತ್ತು ಭಾರತೀಯ ಸಂಸ್ಕೃತಿ

ಭಾಸ ಮಹಾಕವಿಯು ರಚಿಸಿರತಕ್ಕವುಗಳೆಂದು ಪ್ರಸಿದ್ಧವಾಗಿರುವ ಹದಿನಾಲ್ಕು ರೂಪಕಗಳಲ್ಲಿ ಭಾರತೀಯ ಸಂಸ್ಕೃತಿಯು ಮನೋಹರವಾಗಿ ಚಿತ್ರಿತವಾಗಿದೆ. ಇಂದಿನವರೂ ಮುಂದಿನವರೂ ಆಚರಣೆಗೆ ತಂದುಕೊಂಡು ಚರಿತಾರ್ಥರಾಗಬಹುದಾದ ಅನೇಕ ವಿಚಾರಗಳು ಅವುಗಳಲ್ಲಿ ಅಡಕವಾಗಿವೆ. ಆ ರೂಪಕಗಳು ಭಾಸಕೃತವಲ್ಲವೆಂದು ಹಲವರು ವಿದ್ವಾಂಸರು ವಾದಿಸಿದ್ದಾರೆ. ಆದರೆ ಸದ್ಯದಲ್ಲೇನೋ ಅವು ಭಾಸಕೃತವಲ್ಲವೆಂಬುದಕ್ಕಿರುವ ಆಧಾರಗಳಿಗಿಂತ ಅವು ಭಾಸಕೃತವೆಂಬುದಕ್ಕಿರುವ ಆಧಾರಗಳೇ ಹೆಚ್ಚು ಪ್ರಬಲವಾಗಿವೆ. ಈ ವಿಚಾರವು ಹೇಗಾದರೂ ಇರಲಿ, ಭಾಸಕೃತಿಗಳೆಂದು ಪ್ರಸಿದ್ಧವಾಗಿರುವ ರೂಪಕಗಳು ಸಂಸ್ಕೃತ ಸಾಹಿತ್ಯಭಂಡಾರದ ಅನರ್ಘ್ಯರತ್ನಗಳೆನ್ನಲು ಸಂದೇಹವೇ ಇಲ್ಲ. ಭಾರತೀಯ ಜೀವಸ್ವರಗಳಂತಿರುವ ಅನೇಕ ತತ್ತ್ವಗಳು ಆ ರೂಪಕಗಳಲ್ಲಿ ಮಿನುಗುತ್ತಿವೆ. ಅವುಗಳನ್ನೆಲ್ಲ ಕೂಲಂಕಷವಾಗಿ ವಿಚಾರಮಾಡುವುದು ಈ ಪುಟ್ಟಲೇಖನದಲ್ಲಿ ಸಾಧ್ಯವಿಲ್ಲವಾದ ಕಾರಣ, ಕೆಲವು ಸಂಗತಿಗಳನ್ನು ಸಂಕ್ಷೇಪವಾಗಿ ಸೂಚಿಸುವಷ್ಟರಿಂದ ಮಾತ್ರವೇ ತೃಪ್ತಿಪಟ್ಟುಕೊಳ್ಳಬೇಕಾಗಿದೆ.

ವಿಜ್ಞಾನವು ವೃದ್ಧಿಹೊಂದಿದ ಪರಿಣಾಮವಾಗಿ ಮಾನವನ ತಿಳಿವಳಿಕೆಯು ಹೆಚ್ಚಿದೆ. ಭೋಗಸಾಧನಗಳು ಹೆಚ್ಚಿ, ನಾಗರಿಕತೆಯು ಬೆಳೆಯುತ್ತಿದೆ. ಅದರೊಡನೆ ಭಯಂಕರವಾದ ಯುದ್ಧಸಾಮಗ್ರಿಗಳು ಸಿದ್ಧವಾಗಿ ಮತ್ತೊಂದು ಘೋರಯುದ್ಧದಿಂದ ಮುಂದೆಲ್ಲಿ ಮಾವನ ವರ್ಗವೇ ನಾಶವಾಗುವುದೋ ಎಂಬ ಶಂಕಾತಂಕಗಳಿಂದ ಇಡೀ ಪ್ರಪಂಚವೇ ತಲ್ಲಣಿಸುತ್ತಿದೆ. ನಾಗರಿಕತೆಯು (Civilisation) ವೃದ್ಧಿಯಾದಂತೆಲ್ಲ ಮಾನವ ಹೃದಯದ ಕೋಮಲ ಗುಣಗಳು ಉಡುಗಿ ಹೋಗಿ, ಸಂಸ್ಕೃತಿಯು (culture) ಅಧೋಗತಿಗಿಳಿದುಹೋಗುತ್ತಿದೆ. ಪಾಶ್ಚಾತ್ಯ ಮೇಧಾವಿಗಳಲ್ಲೊಬ್ಬರು ಹೇಳಿದಂತೆ 'ಇಂದು ಮಾನವನು ಮೀನುಗಳಂತೆ ನೀರಿನಲ್ಲಿ ಈಜುವುದನ್ನು ಕಲಿತಿದ್ದಾನೆ; ಹಕ್ಕಿಗಳಂತೆ ಅಂತರಿಕ್ಷದಲ್ಲಿ ಹಾರುವುದನ್ನು ಕಲಿತಿದ್ದಾನೆ; ಆದರೆ ಮನುಷ್ಯನಂತೆ ಬಾಳುವುದನ್ನು ಮಾತ್ರ ಇನ್ನೂ ಕಲಿತಿಲ್ಲ.' ಅದನ್ನು ಕಲಿಯುವುದು ಸಾಧ್ಯವಾಗಬೇಕಾದರೆ, ನಾಗರಿಕತೆಯು ಹೆಚ್ಚುವುದರೊಡನೆ ಸಂಸ್ಕೃತಿಯೂ ವೃದ್ಧಿಯಾಗಬೇಕು; ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಹೇಳುವುದಾದರೆ, ನಾಗರಿಕತೆಗಿಂತ ಹೆಚ್ಚಾಗಿ ಸಂಸ್ಕೃತಿಯನ್ನು ವೃದ್ಧಿಪಡಿಸಿಕೊಳ್ಳಬೇಕು. ಮಿತಿಮೀರಿದ ಸ್ಪರ್ಧೆಯಿಂದಲೂ ರಾಗದ್ವೇಷಾದಿಗಳಿಂದಲೂ ತುಂಬಿರುವ ಪ್ರಪಂಚದ ನಾನಾ ರಾಷ್ಟ್ರಗಳಲ್ಲಿ ಸ್ನೇಹಸೌಹಾರ್ದಗಳಿಂದ ತುಂಬಿದ ಮಧುರ ಬಾಂಧವ್ಯವನ್ನು ಕುದುರಿಸಿ ಶಾಂತಿಸ್ಥಾಪನೆ ಮಾಡುವುದು ಶ್ರೇಷ್ಠವಾದ ಪ್ರಾಚೀನ ಸಂಸ್ಕೃತಿಯ ಅವಲಂಬನ ಭಾಗ್ಯವನ್ನು ಪಡೆದಿರುವ ಭಾರತದ ಸಹಾಯದಿಂದ ಮಾತ್ರವೇ ಸಾಧ್ಯವೆಂದು ಪಾಶ್ಚಾತ್ಯದೇಶದ ಜನನಾಯಕರೊಬ್ಬರು

ಈಚೆಗೆ ಸಾರಿ ಹೇಳಿದ್ದಾರೆ. ನಮ್ಮ ಪ್ರಾಚೀನ ಸಂಸ್ಕೃತಿಯ ಹಿರಿಮೆಯೆಷ್ಟೆಂಬುದೂ, ಜಗತ್ತಿನ ಕಲ್ಯಾಣಸಾಧನೆಗೆ ಅದರಿಂದ ಎಷ್ಟು ಸಹಾಯವಾಗಬಹುದೆಂಬುದೂ, ಅವರ ಮಾತುಗಳಿಂದ ಚೆನ್ನಾಗಿ ವ್ಯಕ್ತವಾಗುತ್ತವೆ. ಭಾರತೀಯ ಸಂಸ್ಕೃತಿಯ ಶ್ರೇಷ್ಠ ಧ್ಯೇಯಗಳು ವಿಶೇಷವಾಗಿ ನಮ್ಮ ಪ್ರಾಚೀನ ಗ್ರಂಥಗಳಲ್ಲಿ ಬೆಳಗುತ್ತಿವೆ. ಭಾಸಕೃತಿಗಳೆಂದು ಪ್ರಸಿದ್ಧವಾಗಿರುವ ಹದಿನಾಲ್ಕುರೂಪಕಗಳೂ ಅವುಗಳ ಗುಂಪಿಗೆ ಸೇರಿವೆ. ಭಾರತದ ಮೇಧಾವಿಗಳಲ್ಲೊಬ್ಬರಾದ ಶ್ರೀಮಾನ್ ಕೆ. ಎಂ. ಮುನ್ಷಿಯವರು ಹೇಳಿರುವಂತೆ, ನಮ್ಮ ನಾಡಿನ ಪ್ರಾಚೀನ ಗ್ರಂಥಗಳಲ್ಲಿ ಚಿತ್ರಿತರಾಗಿರುವ ಮಹಾ ವ್ಯಕ್ತಿಗಳಿಗಿಂತ ನಾಗರಿಕತೆಯಲ್ಲಿ ನಾವು ಮುಂದುವರಿದಿರುವುದು ನಿಜವಾದರೂ ಸಂಸ್ಕೃತಿಯಲ್ಲಿ ಮಾತ್ರ ನಾವು ಅವರಿಗಿಂತಲೂ ಬಹಳ ಕೆಳಮಟ್ಟದಲ್ಲಿದ್ದೇವೆ. ನಾವು ಮೇಲು ಮಟ್ಟಕ್ಕೇರಬೇಕಾದರೆ, ಅವರ ಅಮೋಘ ಸದ್ಗುಣಗಳನ್ನೂ, ಅವರ ಸೌಜನ್ಯವನ್ನೂ, ಅವರ ಶೀಲ ಶುದ್ಧಿಯನ್ನೂ ಅನುಕರಿಸುವುದರಿಂದಲೇ ಸಾಧ್ಯ. ಇಂದಿಗೂ ಅನುಕರಣ ಯೋಗ್ಯವಾದ ಅನೇಕ ಸನ್ನಿವೇಶಗಳು ಭಾಸ ಮಹಾಕವಿಯ ಕೃತಿಗಳಲ್ಲಿ ಚಿತ್ರಿತವಾಗಿವೆ.

ಮೊದಲು, ದೇಶಭಕ್ತಿಯ ವಿಚಾರವನ್ನೇ ತೆಗೆದುಕೊಳ್ಳೋಣ. ದೇಶಭಕ್ತಿ ಮತ್ತು ದೇಶಸೇವೆಗಳೆಂಬ ಮಾತುಗಳು ಈಗ ಎಲ್ಲರ ಮನಸ್ಸನ್ನೂ ಆಕರ್ಷಿಸಿವೆ. ಅದು ಯುಕ್ತವೇ. ಒಂದು ರಾಷ್ಟ್ರವು ಪ್ರಗತಿಹೊಂದಿ ಉದ್ಧಾರವಾಗಬೇಕಾದರೆ ಆ ರಾಷ್ಟ್ರದಲ್ಲಿ ವಾಸವಾಗಿರುವ ಪ್ರತಿಯೊಬ್ಬರೂ ಭೋಗಸಾಧಕವಾದ ಸ್ವಾರ್ಥಪರತೆಯನ್ನು ಬಿಟ್ಟು ತ್ಯಾಗಮಯವಾದ ಸಾತ್ವಿಕ ಸೇವಾಬುದ್ಧಿಯಿಂದ ವರ್ತಿಸಬೇಕು. ಕೇವಲ ಹಕ್ಕುಗಳಿಗಾಗಿ ಮಾತ್ರವೇ ಹೋರಾಡುವುದನ್ನು ಬಿಟ್ಟು ಕರ್ತವ್ಯಪಾಲನೆಗಾಗಿಯೂ ಶ್ರಮಿಸಬೇಕು–ಎಂದು ಇಂದಿನ ಮೇಧಾವಿ ಶ್ರೇಷ್ಠರು ಒತ್ತಿಹೇಳಿ ವಾದಿಸತೊಡಗಿದ್ದಾರೆ. ವೇದಗಳ ಮತ್ತು ಉಪನಿಷತ್ತುಗಳ ಕಾಲದಿಂದಲೂ ಭರತಖಂಡದ ಮಹಾಪುರುಷರೆಲ್ಲರೂ ಒತ್ತಿ ಹೇಳುತ್ತಿರುವುದು ಇದೇ ತತ್ತ್ವವನ್ನೇ. ಭಾರತೀಯ ಸಂಸ್ಕೃತಿಯ ಗಂಗಾಪ್ರವಾಹದಲ್ಲಿ ಮಿಂದು ಪರಿಶುದ್ಧನಾದ ಭಾಸ ಮಹಾಕವಿಯೂ ತನ್ನ ರೂಪಕಗಳಲ್ಲಿ ಅದೇ ಉದಾತ್ತ ತತ್ತ್ವವನ್ನೇ ವಿವಿಧರೂಪಗಳಲ್ಲಿ ಚಿತ್ರಿಸಿ ಸಾರಿ ಹೇಳಿದ್ದಾನೆ. ಕರ್ತವ್ಯ ಪಾಲನೆಗಿಂತಲೂ ಹಕ್ಕುಗಳ ಸ್ಥಾಪನೆಗೆ ಗಮನಕೊಡುವುದು ಹೆಚ್ಚಿದಂದಿನಿಂದಲೇ ಭರತಖಂಡದ ಅವನತಿಯು ಪ್ರಾರಂಭವಾಯಿತು. ಇತರ ಅನೇಕ ಮಹಾಕವಿಗಳಂತೆಯೇ ಭಾಸಮಹಾಕವಿಯೂ ಈ ರೋಗಕ್ಕೆ ಸಿದ್ಧೌಷಧವನ್ನು ಸೂಚಿಸಿದ್ದಾನೆ. ಅವನು ರೂಪಿಸಿರುವ ಅನೇಕ ಪಾತ್ರಗಳು ಕರ್ತವ್ಯನಿಷ್ಠೆಯಿಂದ ಉದ್ದೀಪಿತವಾಗಿವೆಯೇ ಹೊರತು ಸ್ವಪ್ರಯೋಜನದ ಆಕಾಂಕ್ಷೆಯಿಂದಲ್ಲ. ದೇಶಭಕ್ತಿ, ರಾಜಭಕ್ತಿ ಮತ್ತು ಪ್ರಜಾಪ್ರೇಮದ ತ್ರಿವೇಣೀಸಂಗಮದಂತೆ ಅವನು (ಪ್ರತಿಜ್ಞಾ ಯೌಗಂಧರಾಯಣ ಮತ್ತು ಸ್ವಪ್ನವಾಸವದತ್ತ ರೂಪಕಗಳಲ್ಲಿ) ಯೌಗಂಧರಾಯಣ ಪಾತ್ರವನ್ನು ಚಿತ್ರಿಸಿದ್ದಾನೆ. ಉಜ್ಜ್ವಲ ದೇಶಾಭಿಮಾನವು ಭಾರತೀಯ

ಸಂಸ್ಕೃತಿಯ ವೈಶಿಷ್ಟ್ಯಗಳಲ್ಲೊಂದು. ಭಾರತವು ‘ ಜನನಿಯೂ ಜನ್ಮಭೂಮಿಯೂ ಸ್ವರ್ಗಕ್ಕಿಂತಲೂ ಶ್ರೇಷ್ಠ ’ (‘ ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ ’) ಎಂದು ಉದ್ಘೋಷಿಸಿ, ಅದನ್ನು ಆಚರಣೆಗೆ ತಂದ ದೇಶ. ಯೌಗಂಧರಾಯಣನು ಪ್ರಜೆಗಳ ಕ್ಷೇಮಾಭ್ಯುದಯಗಳೇ ತನ್ನ ಕ್ಷೇಮಾಭ್ಯುದಯಗಳಿಗಿಂತ ಹೆಚ್ಚೆಂದು ಭಾವಿಸಿ ಶ್ರಮಿಸಿದ ಸಚಿವ ಶ್ರೇಷ್ಠ. ಮೃತ್ಯುಮುಖದಲ್ಲಿ ಕೂಡ ಸಂತೋಷದಿಂದ ಅವನೊಡನೆ ಕೆಲಸಮಾಡಲು ಪ್ರಜೆಗಳು ಸಿದ್ಧವಾಗಿದ್ದಾರೆ. ಅಷ್ಟುಮಟ್ಟಿಗೆ ಅವನು ಪ್ರಜೆಗಳ ಪ್ರೇಮವನ್ನು ಗಳಿಸಿದ್ದಾನೆ. ಜೀವನದಲ್ಲಿ ಅವನಿಗಿರುವ ಪರಮೋಚ್ಚಧ್ಯೇಯವು ಕೌಶಾಂಬೀರಾಜ್ಯದ ಸೇವೆಯೊಂದೇ. ರಾಷ್ಟ್ರದ ಹಿತಕ್ಕಾಗಿ ಮತ್ತು ತನ್ನ ರಾಜನಾದ ಉದಯನನ ಹಿತಕ್ಕಾಗಿ ಪ್ರಾಣವನ್ನರ್ಪಿಸುವುದಕ್ಕೂ ಅವನು ಸಂತೋಷದಿಂದ ಸಿದ್ಧವಾಗಿದ್ದಾನೆ. ರಾಜನ ಹಿತಕ್ಕಿಂತಲೂ ರಾಜ್ಯದ ಹಿತವು ಹೆಚ್ಚಿನದೆಂಬುದು ಯೌಗಂಧರಾಯಣನ ಉದಾತ್ತ ಭಾವನೆ. ರಾಷ್ಟ್ರದ ಹಿತಕ್ಕಾಗಿ ರಾಜನ ಸುಖವನ್ನು ಬಲಿಕೊಡುವುದಕ್ಕೂ ಅವನು ಸಿದ್ಧ; ರಾಷ್ಟ್ರ ಸೇವೆಗಾಗಿ—ರಾಜ್ಯದ ದೊಡ್ಡ ಹೆಸರನ್ನುಳಿಸುವುದಕ್ಕಾಗಿ— ರಾಜನ ಕ್ರೋಧಕ್ಕೆ ಪಾತ್ರನಾಗುವುದಕ್ಕೂ ಅವನು ಸಿದ್ಧ. ರಾಜ್ಯದ ಹಿತಕ್ಕಾಗಿ ಪ್ರಾಣವನ್ನರ್ಪಿಸುವುದಕ್ಕಿಂತಲೂ ಹೆಚ್ಚು ಸಂತೋಷಕರವಾದುದು ಮತ್ತಾವುದೂ ಅವನಿಗಿಲ್ಲ. ರಾಜನೀತಿ ಕೋವಿದನಾಗಿರುವಂತೆಯೇ ರಣಪಂಡಿತನೂ ಆಗಿರುವ ಅವನ ಸಮಸ್ತ ಶಕ್ತಿ ಸಾಮರ್ಥ್ಯಗಳೂ ಸ್ವದೇಶ ಸೇವೆಗಾಗಿ ಮೀಸಲು. ರಾಜಮಾತೆಯು ಅವನಿಗೊಂದು ಸಂದೇಶವನ್ನು ಕಳುಹಿಸುವಾಗ್ಗೆ ತನ್ನ ಮಗ ಉದಯನನಂತೆಯೇ ಅವನೂ ತನಗೆ ಮಗನೆಂದು ಹೇಳುವ ಕಾರಣ, ಬಹಳ ಹೆಚ್ಚೆಂದರೆ ಯುವಕನಾದ ಉದಯನನಿಗಿಂತ ಅವನು ಕೆಲವು ವರ್ಷಗಳು ದೊಡ್ಡವನಾಗಿರಬೇಕೆಂದು ತೋರುವುದು; ಅಥವಾ ಅವನಿಗೆ ಉದಯನನಷ್ಟೇ ವಯಸ್ಸಾಗಿದ್ದರೂ ಇರಬಹುದು. ಯೌಗಂಧರಾಯಣನಿಗೆ ಹೆಂಡತಿಯಿರಲಿಲ್ಲವೆಂಬುದನ್ನೇನೊ ಕವಿಯು ಸ್ಪಷ್ಟಪಡಿಸಿದ್ದಾನೆ. ಅವನು ಮದುವೆಯನ್ನೇ ಮಾಡಿಕೊಳ್ಳದೆ ಸ್ವದೇಶ ಸೇವೆಗಾಗಿ ತನ್ನ ಜೀವನವನ್ನು ಮೀಸಲಾಗಿಟ್ಟನೋ ಅಥವಾ ಹೆಂಡತಿಯು ಮೃತಳಾದ ಮೇಲೆ— ತಾನು ಇನ್ನೂ ಚಿಕ್ಕವಯಸ್ಸಿನವನಾಗಿದ್ದೂ—ಮತ್ತೆ ವಿವಾಹ ಮಾಡಿಕೊಳ್ಳದೆ ತನ್ನ ಜೀವನವನ್ನೇ ದೇಶಸೇವೆಗೆ ಮೀಸಲಾಗಿ ಸಮರ್ಪಿಸಿದನೋ ತಿಳಿಯದು. ಇವೆರಡರಲ್ಲಿ ಯಾವುದು ನಿಜವಾಗಿದ್ದರೂ ಯೌಗಂಧರಾಯಣನು ತನ್ನ ಸ್ವಂತ ಸುಖಕ್ಕಿಂತಲೂ ದೇಶಸೇವೆಯು ಹೆಚ್ಚೆಂದು ಭಾವಿಸಿದ ದೇಶವತ್ಸಲನೆಂಬುದು ವ್ಯಕ್ತವಾಗುತ್ತದೆ. ಅವನನ್ನು ಅಲ್ಪ ಸ್ವಲ್ಪ ಅನುಕರಣ ಮಾಡಿ ಸ್ವದೇಶ ಪ್ರೇಮವನ್ನು ತೋರಿಸಿದರೂ ನಾವು ಧನ್ಯರಾಗುತ್ತೇವೆ.

ಯೌಗಂಧರಾಯಣನಿಗೆ ತಕ್ಕ ರಾಜನಾಗಿದ್ದಾನೆ, ಉದಯನ; ಉದಯನನಿಗೆ ತಕ್ಕ ಮುಖ್ಯ ಸಚಿವನಾಗಿದ್ದಾನೆ, ಯೌಗಂಧರಾಯಣ. ಅವರಿಬ್ಬರ ಸದ್ಗುಣಗಳ ಪರಿಣಾಮವಾಗಿ ಒಟ್ಟು ಪ್ರಜಾವರ್ಗವೇ ಅವರಿಗೆ ಬೆಂಬಲವಾಗಿ ನಿಂತಿದೆ. ಸಣ್ಣ

ರಾಜ್ಯವಾದ ಕೌಶಾಂಬೀ ರಾಜ್ಯವು ಮಹಾಸೇನನೆಂದು ಪ್ರಸಿದ್ಧನಾದ ಪ್ರಚಂಡ ಪ್ರದ್ಯೋತನ ಅಪಾರ ಸೈನ್ಯದಿಂದಲೂ ಅಜೇಯವಾಗಿರುವುದು, ಅದರ ಪರಿಣಾಮ ಫಲ. ಕೊನೆಗೂ ಪ್ರಚಂಡ ಪ್ರದ್ಯೋತನು ಶೌರ್ಯದಿಂದ ಸಾಧ್ಯವಲ್ಲದುದನ್ನು ಮೋಸ ದಿಂದ ಸಾಧಿಸುತ್ತಾನೆ; ಅವನ ಕಡೆಯವರು ಉದಯನನನ್ನು ಸೆರೆ ಹಿಡಿದುಕೊಂಡು ಹೋಗುತ್ತಾರೆ ಶತ್ರುವಿನ ಕುಟಿಲೋಪಾಯದ ವಿಚಾರವನ್ನು ಕಂಡುಹಿಡಿದು (ಬೇಟೆಗೆ ಹೋಗಿರುವ) ಉದಯನನಿಗೆ ಅವನ್ನು ತಿಳಿಸಲು ಅವನು ಪತ್ರವನ್ನು ಬರೆದು ಸಿದ್ಧಗೊಳಿಸುವುದರೊಳಗಾಗಿ ಅದು ನಡೆದು ಹೋಗುತ್ತದೆ. ಆದರ ವಾರ್ತೆಯು ಬಂದಾಗ ಅವನು 'ವತ್ಸರಾಜ ಸಚಿವರ (ನಮ್ಮೆಲ್ಲರ) ಅಸಾಮರ್ಥ್ಯವು ಇದರಿಂದ ಸುಪ್ರತಿಷ್ಠಿತವಾಯಿತು.' ('ಸುಪ್ರತಿಷ್ಠಿತಮಸಾಮರ್ಥ್ಯಂ ವತ್ಸರಾಜ ಸಚಿವಾನಾಮ್') ಎಂದು ಹೇಳುತ್ತಾನೆ. ಶತ್ರುಸೈನಿಕರು ಉದಯನನನ್ನು (ಎಂದರೆ, ವತ್ಸರಾಜನನ್ನು) ಘಾತಿಸಿ ಹಿಂಸಿಸಿದ ವಿವರವನ್ನು ಕೇಳಿ ಸಂಕಟಪಡುತ್ತಾನೆ. ವಿಪತ್ತು ಒದಗಿದಾಗ ಅವನಿಗೆ ಅಸೀಮಧೈರ್ಯ; ಅವನದು ಸೋಲನ್ನರಿಯದ ಕ್ರಿಯಾಶಕ್ತಿ. ತನ್ನ ಪ್ರಯ ತ್ನವು ವಿಫಲವಾಗುವುದೆಂಬ ಶಂಕೆಯೇ ಅವನಿಗಿಲ್ಲ; ಅವನ ದೃಷ್ಟಿಯಲ್ಲಿ ಅಸಾಧ್ಯ ವೆಂಬುದೇ ಇಲ್ಲ. 'ಮಥಿಸಿದರೆ ಮರದ ತುಂಡಿನಿಂದಲೂ ಬೆಂಕಿಯು ಹೊರಟೇ ಹೊರಡುವುದು, ಅಗೆದರೆ ಭೂಮಿಯಿಂದ ನೀರು ದೊರೆತೇ ದೊರೆಯುವುದು. ಉತ್ಸಾಹ ಶಾಲಿಗಳಾದ ಮನುಷ್ಯರಿಗೆ ಅಸಾಧ್ಯವಾದುದಾವುದೂ ಇಲ್ಲ. ಸರಿಯಾದ ಮಾರ್ಗಗಳಲ್ಲಿ ಹೂಡಿದ ಸರ್ವಪ್ರಯತ್ನಗಳೂ ಫಲಿಸಿಯೇ ಫಲಿಸುತ್ತವೆ' (ಕಾಷ್ಠಾದಗ್ನಿರ್ಜಾಯತೇ ಮಥ್ಯಮಾನಾ। ದ್ಭೂಮಿಸ್ತೋಯಂ ಖನ್ಯಮಾನಾ ದದಾತಿ॥ ಸೋತ್ಸಾಹಾನಾಂ ನಾಸ್ತ್ಯ ಸಾಧ್ಯಂ ನರಾಣಾಂ। ಮಾರ್ಗಾರಬ್ಧಾಃ ಸರ್ವಯತ್ನಾಃ ಫಲನ್ತಿ॥') ಎಂಬ ವೀರವಾಣಿ ಗಳನ್ನಾಡಿ, ರಾಜನನ್ನು ಬಿಡಿಸಿಕೊಂಡು ಬರಲು ಅವನು ತನ್ನವರೊಡನೆ ವೇಷಾಂತರ ತಾಳಿ ಶತ್ರುವಾದ ಮಹಾಸೇನನ ರಾಜಧಾನಿಯಾದ ಉಜ್ಜಯಿನಿಗೇ ಹೊರಡುತ್ತಾನೆ. ಉದಯನನು ಮಹಾಸೇನಪುತ್ರಿ ವಾಸವದತ್ತೆಯಲ್ಲಿ ಅನುರಕ್ತನಾಗಿದ್ದಾನೆಂಬುದು ತಿಳಿದಾಗಲೂ ಅವನ ಉತ್ಸಾಹವು ಕಡಮೆಯಾಗುವುದಿಲ್ಲ. ಅವರಿಬ್ಬರನ್ನೂ ಕೌಶಾಂಬಿಗೆ ಕರೆದೊಯ್ಯುವುದಾಗಿ ಅವನು ಪ್ರತಿಜ್ಞೆಮಾಡುತ್ತಾನೆ. ತಾವು ಮುದುಕರಾಗುವವರೆಗೂ ವೇಷಧಾರಿಗಳಾಗಿ ಶತ್ರುರಾಜ್ಯದಲ್ಲೇ ಅಲೆದಾಡುತ್ತಿರಬೇಕಾದೀತೆಂದು ಗೊಣಗಿದ ವಿದೂಷಕನೊಡನೆ ಹಾಗಾಗುವುದೂ ಅಪೇಕ್ಷಣೀಯವೆಂದು ಅವನು ಹೇಳುತ್ತಾನೆ. ತಾವೆಲ್ಲರೂ ಕಷ್ಟಪಡುತ್ತಿರುವುದು ಯಾರಿಗಾಗಿಯೋ ಅವರಿಗೆ (ಎಂದರೆ ಉದಯನನಿಗೆ) ತಮ್ಮ ಕಷ್ಟವೆಷ್ಟೆಂಬುದು ತಿಳಿದಿಲ್ಲವೆಂಬುದು ವಿದೂಷಕನು ಸೂಚಿಸಿದಾಗ, ಯೌಗಂಧ ರಾಯಣನು ಮತ್ತಾರಿಗಾದರೂ ತಿಳಿಯಬೇಕೆಂಬ ಉದ್ದೇಶದಿಂದ ತಾವು ಕಷ್ಟಪಡುತ್ತ ಸೇವೆಯನ್ನರ್ಪಿಸಬೇಕಾಗಿಲ್ಲವೆಂದು ಉತ್ತರ ಹೇಳುತ್ತಾನೆ. ಫಲಾಪೇಕ್ಷೆಯಿಲ್ಲದ ನಿಷ್ಕಾಮ ಪ್ರವೃತ್ತಿಯಿಂದ ದೇಶಸೇವೆಗೂ ರಾಜಸೇವೆಗೂ ನಿಂತಿರುವ ಸಾತ್ವಿಕ ಕರ್ತ ನಾಗಿದ್ದಾನೆ, ಯೌಗಂಧರಾಯಣ. ಅವನಿಗೆ ಸಹಾಯಕರಾಗಿ ಅಸಂಖ್ಯಾತ ಮಂದಿ

ಯೋಧರು ಕೌಶಾಂಬಿಯಿಂದ ಬಂದು ಬಗೆಬಗೆಯ ವೇಷಗಳನ್ನು ಧರಿಸಿ ಉಜ್ಜಯಿನಿಯಲ್ಲಿ ನೆಲಸಿರುತ್ತಾರೆ. ಯೌಗಂಧರಾಯಣನೂ, ಉದಯನನೂ ಪ್ರಜೆಗಳ ಪ್ರೀತಿ ವಿಶ್ವಾಸಗಳನ್ನು ಎಷ್ಟುಮಟ್ಟಿಗೆ ಗಳಿಸಿದ್ದಾರೆಂಬುದಕ್ಕೆ ಇದಕ್ಕಿಂತ ಹೆಚ್ಚಿನ ನಿದರ್ಶನವೇ ಅಗತ್ಯವಿಲ್ಲ. ಅವರಾರೆಂಬುದು ಹೊರಬಿದ್ದರೆ ಅವರಿಗೆ ಶತ್ರುಗಳಿಂದ (ಎಂದರೆ ಮಹಾಸೇನನ ಕಡೆಯವರಿಂದ) ಸಾವು ತಪ್ಪುವಂತೆಯೇ ಇಲ್ಲ. ಯೌಗಂಧರಾಯಣನೂ—ಅವಶ್ಯಬಿದ್ದರೆ ಸಾವಿಗೂ ಸಿದ್ಧನಾಗಿ—ಹುಚ್ಚನ ವೇಷವನ್ನು ಧರಿಸಿ ಬಂದಿದ್ದಾನೆ; ಅವರೂ ಬಗೆ ಬಗೆಯ ವೇಷಗಳನ್ನು ಧರಿಸಿ, ಸಾವಿಗೆ ಸಿದ್ಧರಾಗಿ ಅವನನ್ನು ಹಿಂಬಾಲಿಸಿ ಶತ್ರುರಾಜನ ರಾಜಧಾನಿಗೆ ಬಂದಿದ್ದಾರೆ. ಕೊನೆಗೆ ಯೌಗಂಧರಾಯಣನ ತಂತ್ರದಿಂದ ಉದಯನನು ವಾಸವದತ್ತೆಯೊಡನೆ ಉಜ್ಜಯಿನಿಯನ್ನು ಬಿಟ್ಟು ಹೊರಟುಹೋದಮೇಲೆ ಮಹಾಸೇನನ ಸೈನಿಕರೊಡನೆ ಯುದ್ಧವು ಕೈಗಟ್ಟಿದಾಗ ನಾಗರ ಹಾವುಗಳು ಪರೆಯನ್ನು ಬಿಟ್ಟು ಓಡಾಡುವಂತೆ ಅಸಂಖ್ಯಾತಮಂದಿ ಯೋಧರು ತಮ್ಮ ತಮ್ಮ ವೇಷಗಳನ್ನು ತೊರೆದು ಉತ್ಸಾಹದಿಂದ ಯುದ್ಧೋನ್ಮುಖರಾಗಿ ಓಡಾಡುತ್ತಾರೆ. ಅದನ್ನು ಕಂಡು ವಿಸ್ಮಿತರಾದ ಶತ್ರುಸೈನಿಕರು, ತೋರಣಪ್ರಾಕಾರರಹಿತವಾಗಿ ಒಟ್ಟು ಕೌಶಾಂಬಿಯೇ ಉಜ್ಜಯಿನಿಗೆ ಬಂದಂತಾಗಿದೆಯೆಂದು ಹೇಳುತ್ತಾರೆ. ಅಷ್ಟು ಜನರೂ ಸಾವಿಗೆ ಸಿದ್ಧರಾಗಿ ಯೌಗಂಧರಾಯಣನನ್ನು ಹಿಂಬಾಲಿಸಿದುದರಿಂದಲೇ ಅವನ ಸಂಘಟನ ಸಾಮರ್ಥ್ಯವೂ, ಅವನು ಗಳಿಸಿರುವ ಪ್ರಜಾಪ್ರೇಮವೂ ವ್ಯಕ್ತವಾಗುತ್ತವೆ. ಯುದ್ಧರಂಗದಲ್ಲಿ ಹೋರಾಡುತ್ತಿರುವಾಗ ಆನೆಯ ದಂತದ ಆಘಾತದಿಂದ ತನ್ನ ತೋಳು ಮುರಿದು ಸೆರೆಸಿಕ್ಕಿದಾಗಲೂ ದೇಶವತ್ಸಲ ಯೌಗಂಧರಾಯಣನು ಸಂತೋಷವಾಗಿಯೇ ಇರುತ್ತಾನೆ. ಮಹಾಸೇನನು ಅವನಲ್ಲಿ ಮೆಚ್ಚಿಕೆಯನ್ನು ತೋರಿಸಿ, ಅವನಿಗೆ ಪಾರಿತೋಷಿಕವನ್ನು ಕೊಟ್ಟು ಸನ್ಮಾನಿಸಿ, ಸೆರೆಯಿಂದ ಬಿಡುಗಡೆಮಾಡಿ ಕೌಶಾಂಬಿಗೆ ಕಳುಹಿಸುತ್ತಾನೆ.

ಮುಂದೆ, ವಾಸವದತ್ತೆಯನ್ನು ವರಿಸಿ ಅವಳ ರೂಪದಿಂದಲೂ ಗುಣದಿಂದಲೂ ಮೋಹಿತನಾದ ಉದಯನನು ಭೋಗವಶನಾಗಿ ರಾಜಕಾರ್ಯಗಳಲ್ಲಿ ಅಶ್ರದ್ಧೆಯನ್ನು ತೋರಿಸಿದ ಫಲವಾಗಿ ಕೌಶಾಂಬೀರಾಜ್ಯದ ನಾನಾಭಾಗಗಳೂ ಆರುಣಿಯಂತಹ ಸಾಮಾನ್ಯ ರಾಜನ ವಶವಾಗುತ್ತವೆ. ಮಹಾಸೇನ ಪ್ರಚಂಡ ಪ್ರದ್ಯೋತನಿಂದಲೂ ಪರಾಜಿತವಾಗದಿದ್ದ ರಾಜ್ಯವೆಂಬ ಅದರ ಖ್ಯಾತಿಯು ನಿರ್ನಾಮವಾಗುತ್ತದೆ. ಬಹುಕಾಲದಿಂದ ಗಳಿಸಿದ್ದ ಉದಯನನ ಪ್ರಜಾಪ್ರೇಮವು ಕಡಮೆಯಾಗುತ್ತದೆ. ಆಗ ಯೌಗಂಧರಾಯಣನು ರಾಜನ ಸುಖಕ್ಕಿಂತಲೂ ರಾಷ್ಟ್ರ ಹಿತಸಾಧನೆಯು ಹೆಚ್ಚೆಂದು ಭಾವಿಸಿ, ಉದಯನನು ಬೇಟೆಗೆ ಹೋಗಿರುವಾಗ (ಅವನಿಗೆ ಅರಿವಿಲ್ಲದಂತೆ) ವಾಸವದತ್ತೆಯನ್ನು (ಬ್ರಾಹ್ಮಣ ವೇಷಧಾರಿಯಾದ) ತನ್ನೊಡನೆ ಕರೆದುಕೊಂಡು ಹೋಗಿ ಮಗಧರಾಜನ ಸಹೋದರಿಯಾದ ಪದ್ಮಾವತಿಯ ಬಳಿಯಲ್ಲಿ ನ್ಯಾಸವಾಗಿಡುವನು. ಅವಳು ತನ್ನ ತಂಗಿಯೆಂದೂ, ಅವಳ ಗಂಡನು ದೇಶಾಂತರಕ್ಕೆ ಹೋಗಿದ್ದಾನೆಂದೂ, ಅವಳು ಶೀಲವತಿಯಾದ ಸಾಧ್ವಿಯೆಂದೂ, ತಾನು ಸ್ವಲ್ಪ ಕಾಲದ ಮೇಲೆ ಅವಳನ್ನು

ಹಿಂದಕ್ಕೆ ಕರೆದೊಯ್ಯುವುದಾಗಿಯೂ, ಪದ್ಮಾವತಿಯೊಡನೆ ತಿಳಿಸಿ ಹೊರಟುಹೋಗುವನು. ಅತ್ತ, ಲಾವಾಣಕ ಗ್ರಾಮದಲ್ಲಿ ಬೇಟೆಯಿಂದ ಹಿಂದಿರುಗಿದ ಉದಯನನೊಡನೆ ರುಮಣ್ವಂತನೇ ಮುಂತಾದವರು, ಆಕಸ್ಮಿಕವಾಗಿ ಅರಮನೆಗೆ ಬೆಂಕಿ ಹೊತ್ತಿದ ಕಾರಣ ವಾಸವದತ್ತೆಯೂ, ಅವಳನ್ನು ರಕ್ಷಿಸಲು ನುಗ್ಗಿದ ಯೌಗಂಧರಾಯಣನೂ ಅಗ್ನಿದಗ್ಧರಾದರೆಂದು ಹೇಳುವರು. ಹೀಗೆ, ಮಹಾರಾಣಿಯು ಬದುಕಿದ್ದೂ ಅವಳು ಸತ್ತಳೆಂದು ಸುಳ್ಳು ಸುದ್ದಿಯನ್ನು ಹುಟ್ಟಿಸಿ ದಂಪತಿಗಳನ್ನು ಅವನು ಅಗಲಿಸುತ್ತಾನೆ ಆ ರೀತಿ ಮಾಡಿದುದಕ್ಕಾಗಿ ಮುಂದೆ ರಾಜನ ಆಗ್ರಹಕ್ಕೆ ಪಾತ್ರನಾಗಿ ಮರಣಕ್ಕೆ ಗುರಿಯಾಗುವುದಕ್ಕೂ ಸಿದ್ಧನಾಗಿ, ಅವನು ವೇಷಾಂತರದಿಂದ ತಲೆ ಮರೆಸಿಕೊಂಡು ರಾಜನ ಅಭ್ಯುದಯಕ್ಕಾಗಿ ಮತ್ತು ಕೌಶಾಂಬಿಯ ಮೇಲ್ಮೆಗಾಗಿ ಪ್ರಯತ್ನಮಾಡುತ್ತಿರುತ್ತಾನೆ. ಅವನ ದೇಶಭಕ್ತಿಯೆಷ್ಟು ಗಾಢವೆಂಬುದನ್ನು ಹೇಳಬೇಕಾದ ಅಗತ್ಯವೇ ಇಲ್ಲ.

ಇದನ್ನೆಲ್ಲ ಅರಿತು, ತನ್ನ ಪ್ರಿಯವಲ್ಲಭನನ್ನಗಲಿ, ಪರಗೃಹವಾಸಕ್ಕೆ ಸಮ್ಮತಿಸಿರುವ ವಾಸವದತ್ತೆಯ ರಾಷ್ಟ್ರ ಪ್ರೇಮವೂ, ತನ್ನ ದಾಂಪತ್ಯ ಸೌಖ್ಯಕ್ಕಿಂತ ಮತ್ತು ತನ್ನ ಪತಿಯ ಸಂತೋಷಕ್ಕಿಂತ ರಾಷ್ಟ್ರದ ಮೇಲ್ಮೆಯೇ ಹೆಚ್ಚೆಂಬ ಅವಳ ಉದಾತ್ತ ಭಾವನೆಯೂ ಅಸಾಧಾರಣವಾದವುಗಳೇ ಸರಿ. ತನ್ನ ಪತಿಯು ಪದ್ಮಾವತಿಯನ್ನು ವರಿಸುವುದನ್ನು ಕೇಳಿ 'ಆರ್ಯಪುತ್ರನೂ ಪರಕೀಯನಾದನು' ಎಂದು ಸಂಕಟಪಡುವಾಗಲೂ—ಯೌಗಂಧರಾಯಣನು ವೇಷಾಂತರದಲ್ಲಿದ್ದು ನಡೆಯಿಸುತ್ತಿರುವ ಪ್ರಯತ್ನಗಳಿಗೆ ತನ್ನಿಂದ ಭಂಗಬರಕೂಡದೆಂಬ ಸ್ಥಿರಸಂಕಲ್ಪದ ದೆಸೆಯಿಂದ—ಅವಳು ನಿಜಸ್ಥಿತಿಯನ್ನು ಹೇಳುವುದಕ್ಕಿಲ್ಲ. ಕೊನೆಗೆ ಆರುಣಿಯನ್ನು ಯುದ್ಧದಲ್ಲಿ ಸೋಲಿಸಿ ಅವನ ವಶದಲ್ಲಿದ್ದ ಪ್ರದೇಶಗಳನ್ನೆಲ್ಲ ಸ್ವಾಧೀನಪಡಿಸಿಕೊಂಡ ಮೇಲೆ, ಯೌಗಂಧರಾಯಣನು ಬ್ರಾಹ್ಮಣವೇಷದಲ್ಲಿ ಉದಯನ ಪದ್ಮಾವತಿಯರ ಬಳಿಗೆ ಬಂದು ತನ್ನ ನ್ಯಾಸವನ್ನು ಹಿಂದಕ್ಕೆ ಕೇಳಿದಾಗ ಎಲ್ಲ ಸಂಗತಿಗಳೂ ಹೊರಬೀಳುವುವು. ಉದಯನನು ತನ್ನನ್ನು ವಾಸವದತ್ತೆಯಿಂದ ಅಗಲಿಸಿದುದೇಕೆಂದು ಕೇಳಿದಾಗ ಕೌಶಾಂಬಿಯ ಮೇಲ್ಮೆಯನ್ನು ಸಾಧಿಸಿ ಅದನ್ನು ರಕ್ಷಿಸುವ ಉದ್ದೇಶದಿಂದ ಹಾಗೆ ಮಾಡಿದುದಾಗಿ ('ಕೌಶಾಂಬೀ ಮಾತ್ರಂ ಪಾಲಯಾಮಿತಿ।') ತಿಳಿಸಿ ರಾಜನ ಕ್ಷಮೆಯನ್ನು ಬೇಡುವನು. ರಾಜನ ಸಂತೋಷಕ್ಕೆ ಇತಿಮಿತಿಯೇ ಇಲ್ಲದಂತಾಗುವುದು. ಶುದ್ಧವಾದ ಮತ್ತು ನಿಷ್ಕಾಮವಾದ ಸಾತ್ವಿಕ ರಾಷ್ಟ್ರಪ್ರೇಮದ ಪ್ರತೀಕಗಳಂತೆ ಭಾಸ ಮಹಾಕವಿಯು ಯೌಗಂಧರಾಯಣ ಪಾತ್ರವನ್ನೂ, ವಾಸವದತ್ತೆಯ ಪಾತ್ರವನ್ನೂ ಚಿತ್ರಿಸಿ ಕೃತಾರ್ಥನಾಗಿರುವನು. ಭಾಸ ಮಹಾಕವಿಯು ಚಿತ್ರಿಸಿರುವ ಇವೆರಡು ಪಾತ್ರಗಳಿಂದ ದೇಶಸೇವೆಗೆ ಸ್ಫೂರ್ತಿ ದೊರೆಯಲು ಪೂರ್ಣಾವಕಾಶವುಂಟು.

ಭಾರತೀಯ ಸಂಸ್ಕೃತಿಯು ಧರ್ಮಪರಾಯಣತೆಯ ಆಧಾರದ ಮೇಲೆ ಅಳವಟ್ಟಿದೆ. ರಾಜನು ಧರ್ಮರಕ್ಷಕನಾದ ಕಾರಣ, ಅವನಿಗೆ ಧರ್ಮಗೋಪ್ತನೆಂಬ

ಹೆಸರು. ರಾಜನಿಂದ ಹಿಡಿದು ಸಾಮಾನ್ಯರವರೆಗೆ ಸಮಸ್ತರೂ ಧರ್ಮವನ್ನುಳಿಸಿ ಕೊಂಡು ಬರಬೇಕೆಂಬುದೂ, ಧರ್ಮವನ್ನು ರಕ್ಷಿಸಿದರೆ ಧರ್ಮವು ನಮ್ಮನ್ನು ರಕ್ಷಿಸುತ್ತ ದೆಂಬುದೂ (' ಧರ್ಮೋ ರಕ್ಷತಿ ರಕ್ಷಿತಃ) ಭಾರತೀಯ ಸಂಸ್ಕೃತಿಯ ಉದಾತ್ತ ತತ್ತ್ವ ಗಳು. ನಮ್ಮ ದೇಶದ ಪ್ರಾಚೀನ ಗ್ರಂಥಗಳಲ್ಲಿ ಸೂಚಿತವಾಗಿರುವ ರಾಜಧರ್ಮವು ಚಿತ್ತಾಕರ್ಷಕವಾಗಿದೆ. ಪ್ರಜಾಧಿಕಾರದ ಇಂದಿನ ನೂತನಯುಗದಲ್ಲಿ ಆ ಹಿಂದಿನ ಮಾತೇಕೆಂದು ಕೆಲವರಿಗೆ ತೋರಬಹುದು. ಪ್ರಜಾಧಿಕಾರದ ನೂತನ ಯುಗದಲ್ಲಿ ರಾಜ್ಯಾಧಿಕಾರವು ಪ್ರಜೆಗಳಿಗೆ ಸೇರಿರುವುದು ನಿಜವೇ. ಆದರೆ, ರಾಜಧರ್ಮದ ಲೋಕೋತ್ತರ ತತ್ತ್ವಗಳು ಪ್ರಜೆಗಳಲ್ಲಿ ಪರಿಸ್ಫುಟವಾದಲ್ಲದೆ, ಪ್ರಜಾಧಿಕಾರವು ಯಶ ಸ್ವಿಯಾಗಲಾರದು ; ರಾಜ್ಯಾಡಳಿತವು ಪ್ರಗತಿಪರವಾಗಿ ಶ್ರೇಷ್ಠ ರೀತಿಯಲ್ಲಿ ನಡೆಯಲಾ ರದು. ಪ್ರಜಾಧಿಕಾರ ವ್ಯವಸ್ಥೆಗಾಗಿ ಹೋರಾಡಿ ಅದನ್ನು ನೆಲೆಗೊಳಿಸಿದ ಮಹಾತ್ಮಾ ಗಾಂಧಿಯವರೇ ಚಕ್ರವರ್ತಿ ರಾಮಚಂದ್ರನ ರಾಜ್ಯಭಾರದ ಧ್ಯೇಯವನ್ನು ಎತ್ತಿ ಹಿಡಿದು ರಾಮರಾಜ್ಯಸ್ಥಾಪನೆಯಾಗಬೇಕೆಂದು ಬಯಸಿದರೆಂಬುದನ್ನೂ ನಾವು ಮರೆಯ ಬಾರದು. ಮಹಾಭಾರತದಲ್ಲಿ ಹೇಳಿರುವಂತೆ, ಪ್ರಜಾರಂಜನೆಯೂ, ಸತ್ಯರಕ್ಷಣೆಯೂ, ವ್ಯವಹಾರದಲ್ಲಿ ಆರ್ಜವ ಪೋಷಣೆಯೂ ರಾಜನ ಅವಶ್ಯ ಕರ್ತವ್ಯಗಳು. ' ದೇಶವನ್ನೇ ದೇವರೆಂದು ಭಾವಿಸಿ ಪ್ರಜೆಗಳಿಗೆ ಯಾವ ಶಂಕಾತಂಕಗಳೂ ಬಾರದಂತೆ ಧರ್ಮರತ ನಾಗಿಯೂ ನೀತಿಯುಕ್ತನಾಗಿಯೂ ರಾಜ್ಯಭಾರವನ್ನು ನಿರ್ವಹಿಸುತ್ತೇನೆ ' ಎಂಬುದು ಪಟ್ಟಾಭಿಷೇಕ ಕಾಲದ ಪ್ರತಿಜ್ಞಾವಚನ; ಪಟ್ಟಾಭಿಷೇಕವೊಂದು ದೀಕ್ಷೆ. ' ರಾಜಾ ಕಾಲಸ್ಯ ಕಾರಣಮ್ ' ಎಂಬುದಂತೂ ಪ್ರಸಿದ್ಧ. ರಾಜನೇ ಕಾಲಕರ್ತ. ಭೀಷ್ಮಾಚಾರ್ಯರು ' ಕೃತಯುಗವೂ, ತ್ರೇತಾಯುಗವೂ, ದ್ವಾಪರಯುಗವೂ, ಕಲಿ ಯುಗವೂ, ರಾಜನ ವರ್ತನೆಗನುಸಾರವಾಗಿ ರೂಪಿತವಾಗುತ್ತವೆ, ಯುಧಿಷ್ಠಿರ. ರಾಜನೇ ಯುಗ; ರಾಜನಿಗೇ ಯುಗವೆಂಬ ಹೆಸರುಬಂದಿದೆ ' (' ಕೃತಂ ತ್ರೇತಾ ದ್ವಾಪರಶ್ಚ ಕಲಿಶ್ಚ ಭರತರ್ಷಭ । ರಾಜವೃತ್ತಾನಿ ಸರ್ವಾಣಿ ರಾಜೈವ ಯುಗ ಉಚ್ಯತೇ॥') ಎಂದು ಹೇಳಿರುವುದೂ ಅರ್ಥಗರ್ಭಿತವಾಗಿದೆ. ಭಾಸಮಹಾಕವಿಗಿಂತ ಕೆಲವು ಶತ ಮಾನಗಳ ಹಿಂದೆ ಜೀವಿಸಿದ್ದ ರಾಜನೀತಿಕೋವಿದನಾದ ಚಾಣಕ್ಯನಂತೂ, ' ಪ್ರಜೆಗಳ ಸುಖವೇ ರಾಜನ ಸುಖ. ಪ್ರಜೆಗಳ ಹಿತವೇ ರಾಜನ ಹಿತ. ರಾಜನಿಗೆ ಪ್ರಿಯವಾದು ದಲ್ಲ, ರಾಜನ ಹಿತ. ಪ್ರಜೆಗಳಿಗೆ ಪ್ರಿಯವಾದುವೇ ರಾಜನ ಹಿತ ' (' ಪ್ರಜಾಸುಖೇ ಸುಖಂ ರಾಜ್ಞಃ ಪ್ರಜಾನಾಂ ಚ ಹಿತೇ ಹಿತಮ್ । ನಾತ್ಮ ಪ್ರಿಯಂ ಹಿತಂ ರಾಜ್ಞಃ ಪ್ರಜಾನಾಂ ತು ಪ್ರಿಯಂ ಹಿತಮ್ ॥ ') ಎಂದು ಉದ್ಘೋಷಿಸಿದ್ದನು. ಭಾರತೀಯ ಸಂಸ್ಕೃತಿ ಸಮ್ಮತವಾದ ಈ ಅಮೋಘ ತತ್ತ್ವಗಳಿಗನುಸಾರವಾಗಿ ಭಾಸ ಮಹಾಕವಿಯು ತನ್ನ ರೂಪಕಗಳಲ್ಲಿ ರಾಜಧರ್ಮವನ್ನು ನಿರೂಪಿಸಿ ಪಾತ್ರಪೋಷಣ ಮಾಡಿದ್ದಾನೆ. ಅವಿಮಾರಕ ರೂಪಕದ ರಾಜನು ತನ್ನ ಕರ್ತವ್ಯವನ್ನು ಕುರಿತು ' ಧರ್ಮವನ್ನು ಕುರಿತು ಮೊದಲು ಚಿಂತಿಸಿ ಧರ್ಮಕ್ಕೆ ಗಮನವನ್ನು ಕೊಡಬೇಕು.

ಮಂತ್ರಿಯ ಮನೋಗತವು ಹೇಗಿದೆಯೆಂಬುದನ್ನು ಸ್ವಬುದ್ಧಿಯಿಂದ ಪರಿಶೀಲಿಸುತ್ತಿರ ಬೇಕು. ಪ್ರೀತಿಯನ್ನಾಗಲಿ ರೋಷವನ್ನಾಗಲಿ ವಿಜೃಂಭಿಸದೆ ಗುಪ್ತವಾಗಿಡಬೇಕು. ಕಾಠಿನ್ಯವನ್ನೂ ದಯೆಯನ್ನೂ ಸಮಯವರಿತು ಪ್ರದರ್ಶಿಸಬೇಕು. ಪ್ರಜೆಗಳ ನಡೆಯೂ ಒಲವೂ ಹೇಗಿವೆಯೆಂಬುದನ್ನರಿತುಕೊಳ್ಳಬೇಕು. ರಾಜಮಂಡಲದ ವಾರ್ತೆಗಳನ್ನು ಗೂಢಚಾರರಿಂದ ತಿಳಿದುಕೊಳ್ಳಬೇಕು. ಪ್ರಯತ್ನಪೂರ್ವಕವಾಗಿ ದೇಹರಕ್ಷಣೆಮಾಡಿ ಕೊಳ್ಳಬೇಕು; ರಣರಂಗದಲ್ಲಿ ಸೇನೆಯ ಮುಂದಾಳಾಗಿ ಯುದ್ಧಕ್ಕೆ ನಿಂತಾಗ ಅದೇ ದೇಹವನ್ನೀಡಾಡುವುದಕ್ಕೂ ಹಿಂದೆಗೆಯಬಾರದು' ಎಂದು ವಿವರಿಸುವ ಮಾತುಗಳು ಆಣಿಮುತ್ತುಗಳಂತಿವೆ. ಪ್ರತಿಜ್ಞಾಯೌಗಂಧರಾಯಣರೂಪಕದಲ್ಲಿ ಮಹಾಸೇನನು ತನ್ನ ಶತ್ರುವಾದ ಉದಯನನು ತನಗೆ ಅಜೇಯನಾಗಿರುವುದನ್ನು ಕುರಿತು ಪ್ರಸ್ತಾಪಿಸಿ ತನ್ನ ಆತಂಕವನ್ನು ತೋಡಿಕೊಳ್ಳುತ್ತಿರುವಾಗಲೂ ಅವನನ್ನು 'ಗುಣಶಾಲೀ' ಎಂದು ಕೊಂಡಾಡುವುದನ್ನು ಕಂಡು ನಮ್ಮ ಮನಸ್ಸೇ ಕರಗಿಹೋಗುವುದು. ಈ ಬಗೆಯ ಮನೋಧರ್ಮವು ಇಂದು ಕೂಡ ಒಟ್ಟು ಪ್ರಪಂಚಕ್ಕೆ ಮಾರ್ಗದರ್ಶಕವಾಗಿದೆ. ಉದಯ ನನ ಪ್ರಜಾರಂಜನ ಪರಾಯಣತೆಯನ್ನಂತೂ, ಮೊದಲೇ ವಿವರಿಸಲಾಗಿದೆ. ರಾಜನು ಪ್ರಜೆಗಳನ್ನು ತನ್ನ ಮಕ್ಕಳಂತೆ ಕಾಪಾಡಬೇಕೆಂದು ಭಾಸನು ತನ್ನ ಹಲವು ರೂಪಕಗಳಲ್ಲಿ ನಿರೂಪಿಸಿದ್ದಾನೆ. ಯಜ್ಞಫಲವೆಂಬ ರೂಪಕದಲ್ಲಿ ದಶರಥನ ರಾಜ್ಯಭಾರ ವೈಖರಿಯ ವರ್ಣನೆಯಿದೆ. ದಶರಥನು ಪ್ರಜೆಗಳಿಗೆ ಶತ್ರುಭೀತಿಯನ್ನು ತಪ್ಪಿಸಿ ವ್ಯವಸಾಯಾಭಿ ವೃದ್ಧಿ ಮುಂತಾದುವುಗಳಿಂದ ರಾಜ್ಯದ ಸಂಪತ್ತನ್ನು ವೃದ್ಧಿಗೊಳಿಸಿದ್ದನಂತೆ; ಪ್ರಜೆಗಳು ರೋಗಗಳಿಗೂ ಅಪಮರಣಕ್ಕೂ ಗುರಿಯಾಗದಂತೆಮಾಡಿದ್ದನಂತೆ, ಮೇಲಾಗಿ ಪ್ರಜೆ ಗಳು ಧನಾಢ್ಯರೂ ಧರ್ಮನಿರತರೂ ಆಗಿರುವಂತೆ ರಾಜ್ಯದಲ್ಲಿ ವ್ಯವಸ್ಥೆಮಾಡಿದ್ದನಂತೆ. ಹೆಚ್ಚೇಕೆ? ದಶರಥನು ಪ್ರಜೆಗಳು ತನ್ನ ಮಕ್ಕಳೇ ಆಗಿದ್ದಂತೆ ಅವರನ್ನು ಸುಖವಾಗಿ ಕಾಪಾಡಿದನಂತೆ ('ಪ್ರಜಾಃ ಪ್ರಜಾಃ ಸ್ವಾ ಇವ ಪಾಲಿತಾಶ್ಚ'); ರಾಗದ್ವೇಷ ವಿವರ್ಜಿತ ವಾದ ಮನಸ್ಸಿನಿಂದ—ಎಂದರೆ ನಿಷ್ಪಕ್ಷಪಾತವಾಗಿ—ಆತನು ಪ್ರಜಾಪಾಲನಮಾಡಿದ ನಂತೆ. ಧರ್ಮಾತ್ಮನಾಗಿದ್ದ ಅವನ ವ್ಯಕ್ತಿತ್ವದ ಪ್ರಭಾವದಿಂದ ಪ್ರಜೆಗಳು ಧರ್ಮದಲ್ಲಿ ದೃಢಬುದ್ಧಿಯುಳ್ಳವರಾಗಿದ್ದರಂತೆ. ದಶರಥನ ಮೇಲ್ಪಂಕ್ತಿಯನ್ನನುಸರಿಸಿದ ಅವನ ಮಕ್ಕಳೂ ಸುಸಂಸ್ಕೃತರೂ, ವಿನಯಗುಣಸಂಪನ್ನರೂ, ಪ್ರಜಾರಂಜನ ಪರಾಯಣರೂ ಆಗಿದ್ದರಂತೆ. ರಾಜನು ಮಾತ್ರವೇ ಅಲ್ಲದೆ ಸಮಸ್ತ ಪ್ರಜೆಗಳೂ ಧರ್ಮನಿರತರಾಗಿ ಕರ್ತವ್ಯ ನಿಷ್ಠೆಯಿಂದ ವರ್ತಿಸಬೇಕೆಂಬುದು ಭಾಸಮಹಾಕವಿಯ ಆಶಯ. ಬ್ರಾಹ್ಮಣ ಧರ್ಮವಾದ ಶಮದಮಾದಿಗಳನ್ನು ಅಭ್ಯಾಸಮಾಡದ ಬ್ರಾಹ್ಮಣರಲ್ಲಿಯೂ, ತಮ್ಮ ಮತಧರ್ಮವನ್ನು ಪಾಲಿಸದ ಜೈನರಲ್ಲಿಯೂ ಭಾಸಮಹಾಕವಿಗೆ ಸಹಾನುಭೂತಿಯಿಲ್ಲ. ಆದುದರಿಂದಲೇ, ಅವನು ವಿದೂಷಕನಿಂದ, 'ಜನಿವಾರವಿದ್ದುಬಿಟ್ಟರೆ ಬ್ರಾಹ್ಮಣ' ಎಂದೂ, 'ಬಟ್ಟೆಗಳನ್ನೆಲ್ಲ ಬಿಚ್ಚಿಬಿಟ್ಟರೆ ಶ್ರಮಣ' ಎಂದೂ ಹೇಳಿಸಿರುವುದು; ಯಜ್ಞ ಫಲ ರೂಪಕದಲ್ಲಿ ವಿದೂಷಕನಿಗೆ ಹಣದ ಮೇಲಿನ (ಸುವರ್ಣದ ಮೇಲಿನ)

ಆಶೆಯೇ ಇಲ್ಲದಂತೆ ಚಿತ್ರಿಸಿ, 'ಚಿನ್ನವು ನನಗೆ ಪ್ರಿಯವಾಗುವುದಕ್ಕೆ ನಾನೇನು ರಾಜನೆ ಅಥವಾ ವರ್ತಕನೆ?' ('ಕಿಮಹಂ ರಾಜಾ ವಾ ವಣಿಗ್ವಾ ಯೇನ ಸುವರ್ಣಾನಿ ಮಮ ಪ್ರಿಯಾಣಿ ಭವನ್ತಿ?') ಎಂದು ವಿದೂಷಕನು ಪ್ರಶ್ನಿಸುವಂತೆ ಮಾಡಿರುವುದು.

ಅಸಾಧಾರಣವಾದ ಹೃದಯ ವೈಶಾಲ್ಯವೂ, ತ್ಯಾಗ ಬುದ್ಧಿಯೂ ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯಗಳು. ಭಾಸ ಮಹಾಕವಿಯು ಅವುಗಳನ್ನೂ ತನ್ನ ರೂಪಕಗಳಲ್ಲಿ ಸ್ಫೂರ್ತಿದಾಯಕವಾಗಿ ಚಿತ್ರಿಸಿದ್ದಾನೆ. ಜೀವನ ವಿಧಾನವು ಸರಳವಾಗಿಯೂ, ಸುಂದರವಾಗಿಯೂ, ಪ್ರೇಮಮಯವಾಗಿಯೂ ಇರಬೇಕೆಂಬುದು ಅವನ ಆಶ್ರಯ. ಗುಣವೂ ಯೋಗ್ಯತೆಯೂ ಪೂಜಾಸ್ಥಾನವೇ ಹೊರತು ಜಾತಿಯಲ್ಲವೆಂಬುದನ್ನು ಪಂಚರಾತ್ರವೆಂಬ ರೂಪಕದಲ್ಲಿ ಭಾಸ ಮಹಾಕವಿಯು ಮನೋಹರವಾಗಿ ಚಿತ್ರಿಸಿದ್ದಾನೆ. ಜಾತಿಯಲ್ಲಿ ಬ್ರಾಹ್ಮಣನಾಗಿ, ಕ್ಷತ್ರಾಚಾರ್ಯನಾಗಿರುವ ದ್ರೋಣಾಚಾರ್ಯನು ಭೀಷ್ಮನನ್ನು ಬಿಟ್ಟು ತನಗೇ ಮೊಟ್ಟಮೊದಲು ನಮಸ್ಕಾರ ಮಾಡಿದ ತನ್ನ ಶಿಷ್ಯ ದುರ್ಯೋಧನನೊಡನೆ ಅದು ಅಕ್ರಮವೆಂದು ('ವತ್ಸ! ಅಯಮಕ್ರಮಃ।' ಎಂದು) ಹೇಳುತ್ತಾನೆ; ಜಾತಿಯಲ್ಲಿ ಕ್ಷತ್ರಿಯನಾದರೂ ಗುಣದಲ್ಲಿ ತನಗಿಂತ ಶ್ರೇಷ್ಠನಾದ ಮಹಿಮಾನ್ವಿತ ಭೀಷ್ಮಾಚಾರ್ಯನಿಗೇ ಮೊಟ್ಟಮೊದಲು ದುರ್ಯೋಧನನು ನಮಸ್ಕಾರ ಮಾಡಬೇಕಾಗಿದ್ದಿತೆಂದು ತಿಳಿಸಿ, ಮೊದಲು ಭೀಷ್ಮಾಚಾರ್ಯನಿಗೆ ನಮಸ್ಕಾರ ಮಾಡಬೇಕೆಂದು ಸೂಚಿಸುತ್ತಾನೆ. ಉದಾರಹೃದಯನಾದ ಭೀಷ್ಮಾಚಾರ್ಯನು ಅದಕ್ಕೊಪ್ಪದೆ 'ನೀನು ಬ್ರಾಹ್ಮಣ. ನಾವು ಕ್ಷತ್ರಿಯ ವಂಶಜರು. ನೀನು ಗುರು. ನಾವು ಶಿಷ್ಯರು' ('ದ್ವಿಜೋ ಭವಾನ್ ಕ್ಷತ್ರಿಯವಂಶಜಾ ವಯಂ। ಗುರುರ್ಭವಾನ್ ಶಿಷ್ಯ ಮಹತ್ತರಾವಯಂ॥') ಎಂದು ಹೇಳುತ್ತಾನೆ. ದ್ರೋಣಾಚಾರ್ಯನು ತಮ್ಮನ್ನು ತಾವು ಅಲ್ಪರೆಂದು ಭಾವಿಸುವುದೇ ಮಹಾತ್ಮರ ಲಕ್ಷಣವೆನ್ನುತ್ತಾನೆ. ಯಜ್ಞಫಲ ರೂಪಕದಲ್ಲಿ, ವಿಶ್ವಾಮಿತ್ರನಿಗೆ ನಮಸ್ಕಾರಮಾಡುವಂತೆ ವಸಿಷ್ಠನು ಬಾಲಕ ಶ್ರೀರಾಮನಿಗೆ ಆಜ್ಞಾಪಿಸುತ್ತಾನೆ. ಶ್ರೀರಾಮನು, 'ಆತನು ಕ್ಷತ್ರಿಯ. ಬ್ರಾಹ್ಮಣರಿಗೆ ನಮಸ್ಕಾರಮಾಡುವಂತೆ (ಕ್ಷತ್ರಿಯರಾದ ನಾವು) ಕ್ಷತ್ರಿಯನಾದ ಆತನ ಚರಣಗಳ ಮೇಲೆ ತಲೆಯನ್ನಿಟ್ಟು ಹೇಗೆತಾನೆ ನಮಸ್ಕಾರಮಾಡಲಾದೀತು?' ಎಂದು ಕೇಳುತ್ತಾನೆ. ಅದಕ್ಕೆ ಉತ್ತರವಾಗಿ ವಸಿಷ್ಠನು 'ವಿಶ್ವಾಮಿತ್ರನು ಮಹಾತಪಸ್ವಿ. ಅವನ ತಪಃಪ್ರಭಾವದಿಂದ ಅವನು ಮಾತ್ರವೇ ಅಲ್ಲದೆ ಅವನ ತಂದೆಯೂ ಅವನ ತಾತನೂ ಋಷಿತ್ವವನ್ನೂ ಬ್ರಹ್ಮತ್ವವನ್ನೂ ಪಡೆದರು' ಎಂದು ಹೇಳುತ್ತಾನೆ. ಹದಿನಾರಾಣೆಯ ಕ್ಷತ್ರಿಯನಾದ ಮಹಾಸೇನನ ಆಸ್ಥಾನದಲ್ಲಿ ಜೈನರಿಗೆ ದೊಡ್ಡ ಹುದ್ದೆಗಳು ದೊರೆಯಲು ಆತಂಕವಿರಲಿಲ್ಲವೆಂಬ ಸನ್ನಿವೇಶವನ್ನು ಭಾಸನು ಚಿತ್ರಿಸಿದ್ದಾನೆ; ಇಂಗ್ಲೆಂಡಿನಲ್ಲಿ ತೀರ ಈಚಿನವರೆಗೂ ಯೆಹೂದ್ಯರಿಗೆ (ಎಂದರೆ 'ಜ್ಯೂ' ಗಳಿಗೆ) ಸರ್ಕಾರಿ ಉದ್ಯೋಗಗಳು ದೊರೆಯಲು ಅವಕಾಶವೇ ಇರಲಿಲ್ಲವೆಂಬುದನ್ನು ಹಿನ್ನೆಲೆಯಲ್ಲಿಟ್ಟು ಪರಿಶೀಲಿಸಿದರೆ, ಈ ವಿಚಾರವೆಷ್ಟು ಹೆಮ್ಮೆಗೆ ಯೋಗ್ಯವಾದುದೆಂಬುದು ಗೊತ್ತಾಗುವುದು. ಭಾಸನು

ಚಿತ್ರಿಸಿರುವ ವಾಸವದತ್ತೆ, ಪದ್ಮಾವತಿ, ಸುಮಿತ್ರೆ ಮುಂತಾದ ಮಹಾಮಾನಿನಿಯರು ಸವತಿಯರನ್ನು ಕೂಡ ಸೋದರಿಯರಂತೆ ಪ್ರೀತಿಸುವ ಮಧುರ ವೃತ್ತಿಯ ತ್ಯಾಗಜೀವಿಗಳು. ಯಜ್ಞಫಲ ರೂಪಕದಲ್ಲಿ ಚಿತ್ರಿತಳಾಗಿರುವ ಸುಮಿತ್ರೆಯು ಸರ್ವಮಿತ್ರೆ; ಅವಳು ಕೋಪವನ್ನೇ ಅರಿಯದವಳು. ದುರಹಂಕಾರವಂತೂ ಅವಳ ಬಳಿಗೆ ಸುಳಿಯದು. ರಾಮನಿಗೆ ಅರ್ಧರಾಜ್ಯವನ್ನೂ ಭರತನಿಗೆ ಅರ್ಧರಾಜ್ಯವನ್ನೂ ಹಂಚಿಕೊಡಬೇಕೆಂಬುದು ದಶರಥನಿಗೆ ಅವಳ ಸಲಹೆ. ದಶರಥನು ಅದರಿಂದ ಆಶ್ಚರ್ಯ ಚಕಿತನಾಗಿ 'ನಿನ್ನ ಈರ್ವರು ಪುತ್ರರಿಗೂ ಏನನ್ನು ಕೊಡಲಿ?' ಎಂದು ಕೇಳಿದಾಗ 'ಏನೂ ಬೇಡ. ರಾಮನ ಸೇವೆಯಿಂದ ಲಕ್ಷ್ಮಣನೂ, ಭರತನ ಸೇವೆಯಿಂದ ಶತ್ರುಘ್ನನೂ ಸರ್ವದಾ ಪೂರ್ಣಸೌಖ್ಯವನ್ನು ಪಡೆಯುತ್ತಾರೆ' ಎಂಬುದು ಆ ತ್ಯಾಗಸೌಜನ್ಯ ಪುತ್ಥಳಿಯ ಪ್ರತ್ಯುತ್ತರ. ಆ ಉತ್ತರವನ್ನು ಕೇಳಿ ದಶರಥನೂ ಕೈಕಾದೇವಿಯೂ ಅವಳನ್ನು ಮಹಾದೇವಿಯೆಂದು ಕರೆದು ಅವಳ ತ್ಯಾಗ ಸಂತೋಷಗಳಿಗಾಗಿ ಆಶ್ಚರ್ಯಪಡುವರು. ಚಾರುದತ್ತರೂಪಕದಲ್ಲಿ ಅತ್ಯಂತ ಧನಿಕನಾಗಿದ್ದ ಚಾರುದತ್ತನು ಸಮಸ್ತವನ್ನೂ ಬಡವರಿಗೆ ದಾನಮಾಡಿ ದರಿದ್ರನಾದಂತೆ ನಿರೂಪಿತವಾಗಿದೆ. ದಾರಿದ್ರ್ಯವನ್ನು ಅನುಭವಿಸಿ ತನ್ನ ಸುಖ ಸಂತೋಷಗಳು ಕಡಮೆಯಾದುದಕ್ಕಾಗಿ ಅವನು ವ್ಯಥೆಪಡುವುದಿಲ್ಲ, ಇತರರಿಗೆ ಉಪಕಾರ ಮಾಡುವುದು ತಪ್ಪಿಹೋಯಿತಲ್ಲಾ ಎಂಬುದು ಅವನ ದುಃಖ. ಕ್ರಿಮಿಕೀಟಗಳಿಗೂ ಪಕ್ಷಿಗಳಿಗೂ ಮೊದಲಿನಂತೆ ಯಥೇಷ್ಟವಾಗಿ ಧಾನ್ಯಗಳನ್ನು ಹಾಕುವುದು ತಪ್ಪಿಹೋಗಿ ಕೆಲವೇ ಹಿಡಿಗಳಷ್ಟು ಕಾಳುಗಳನ್ನೆರಚಿ ತೃಪ್ತಿಪಡಬೇಕಾಯಿತಲ್ಲಾ ಎಂಬುದು ಅವನ ಸಂಕಟ. ಕೌರವರಿಗೂ ಪಾಂಡವರಿಗೂ ಆಚಾರ್ಯನಾದ ದ್ರೋಣಾಚಾರ್ಯನು ಶಿಷ್ಯರಿಂದ ಏನನ್ನೂ ಪರಿಗ್ರಹಿಸದೆ ದರಿದ್ರನಾಗಿಯೇ ಉಳಿದು ಸಂತೋಷಚಿತ್ತನಾಗಿರುತ್ತಾನೆ ಸಂಪತ್ತಿನ ಮೇಲಿನ ಆಶೆಯೇ ಅವನಿಗಿಲ್ಲ. ದುರ್ಯೋಧನನು ತನ್ನ ಗದೆಯೊಂದನ್ನು ತನಗಾಗಿ ಉಳಿಸಿಕೊಂಡು ಮಿಕ್ಕ ಸಮಸ್ತ ಸಂಪತ್ತನ್ನೂ ಸಮರ್ಪಿಸಲು ಸಿದ್ಧನಾಗಿದ್ದರೂ ದ್ರೋಣಾಚಾರ್ಯನು ಅದನ್ನು ಸ್ವೀಕರಿಸಲು ಸಮ್ಮತಿಸನು.

ಸ್ತ್ರೀಯರಲ್ಲಿ ಗೌರವವನ್ನು ತೋರಿಸುವುದು ಭಾರತೀಯ ಸಂಸ್ಕೃತಿಯ ಒಂದು ವಿಶೇಷ ಲಕ್ಷಣ. ಭಾರತವು ಮೊದಲು 'ಮಾತೃದೇವೋ ಭವ' ಎಂದು ಆ ಬಳಿಕ 'ಪಿತೃದೇವೋ ಭವ' ಎಂದ ದೇಶ, ಆಚಾರ್ಯನು ತಂದೆಗಿಂತ ಶ್ರೇಷ್ಠನೆಂದೂ, ಆಚಾರ್ಯನಿಗಿಂತ ಮಾತೆಯು ಶ್ರೇಷ್ಠಳೆಂದೂ ಹೇಳಿದ ದೇಶ. ಈಚಿನ ನ್ಯೂನಾತಿರೇಕಗಳಿಗೆ ಹಿಂದಿನವರನ್ನು ತೆಗಳುವುದು ಯುಕ್ತವಲ್ಲ. ಸ್ತ್ರೀತ್ವವನ್ನು ದೇವತ್ವಕ್ಕೆ ಮುಟ್ಟಿಸಿದ ದೇಶವೆಂದರೆ ಪ್ರಪಂಚದಲ್ಲಿ ಭಾರತವೊಂದೇ. ಭಾಸ ಮಹಾಕವಿಯೂ ಭಾರತೀಯ ಸಂಸ್ಕೃತಿಯ ಅಮೃತ ಪುತ್ರರಲ್ಲೊಬ್ಬನು. ಆತನ ಕೃತಿಗಳಲ್ಲಿ ರಾಕ್ಷಸ ಸ್ತ್ರೀಯರಿಗೂ ಸಹಾನುಭೂತಿಯು ಪ್ರದರ್ಶಿಸಲ್ಪಟ್ಟಿದೆ. ಹಿಡಿಂಬಾದೇವಿಯ ವಿಚಾರವಾಗಿ 'ಹುಟ್ಟಿನಲ್ಲಿ ರಾಕ್ಷಸಿ, ನಡೆನುಡಿಗಳಲ್ಲಲ್ಲ' ಎಂದು ಆತನು ಭೀಮನಿಂದ ಹೇಳಿಸಿದ್ದಾನೆ. ಭೀಮನು ಅವಳನ್ನು ಕೊಂಡಾಡುವಂತೆ ಮಾಡಿದ್ದಾನೆ. ಉದಯನನು ಅಂಗಾರವತಿ

ಯನ್ನು ನಗರ ದೇವತೆಯಂತಿರುವ ಪುಣ್ಯಾತ್ಮಳೆಂದು ವರ್ತಿಸುತ್ತಾನೆ ಭಾಸಮಹಾಕವಿಯು ಚಿತ್ರಿಸಿರುವ ಸೀತೆಯೂ, ವಾಸವದತ್ತೆಯೂ, ಪದ್ಮಾವತಿಯೂ, ಯಾವ ಕಾಲದ ಯಾವ ಜನಾಂಗದವರಾದರೂ ಹೆಮ್ಮೆ ಪಡುವಂತಿರುವ ಲೋಕೋತ್ತರ ಸ್ವಭಾವದವರು. ಭಾರತೀಯ ಸಂಸ್ಕೃತಿಯ ಅಮೃತಪುತ್ಥಳಿಗಳು. 'ಹೆಣ್ಣು ಮಗುವು ಹುಟ್ಟಿತೆಂದರೆ ಮುಂದೆ ಅದನ್ನು ಯಾರಿಗೆ ಕೊಟ್ಟು ವಿವಾಹಮಾಡಬೇಕೆಂಬ ಮಹತ್ತರ ಚಿಂತೆ' ಎಂಬ ಗೋಳಾಟಕ್ಕೂ ಭಾಸಕೃತಿಗಳಿಗೂ ಬಹುದೂರ. 'ಕನ್ಯಾಪಿತೃತ್ವವು ಬಹಳ ವಂದನೀಯ' ('ಕನ್ಯಾಪಿತೃತ್ವಂ ಬಹು ವಂದನೀಯಮ್') ಎಂಬುದು ಅವುಗಳಿಂದ ಕೇಳಿಬರುವ ಮಂಜುಳ ಸ್ವನ.

ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯಗಳಂತಿರುವ ಇತರ ಅನೇಕ ವಿಚಾರಗಳ ಸಂಬಂಧದಲ್ಲಿ ಕೂಡ, ಇಂದಿಗೂ ಸ್ಫೂರ್ತಿದಾಯಕವಾಗಿರುವಂತೆ ಭಾಸ ಮಹಾಕವಿಯು ತನ್ನ ಕೃತಿಗಳಲ್ಲಿ ಮನೋಹರವಾದ ಸನ್ನಿವೇಶಗಳನ್ನು ಕಲ್ಪಿಸಿದ್ದಾನೆ. ಅವುಗಳನ್ನು ಸಮಷ್ಟಿಯಾಗಿ ಆತನ ಕೃತಿಗಳ ವ್ಯಾಸಂಗದಿಂದಲೇ ಗ್ರಹಿಸಿ ಆನಂದಿಸಬೇಕೇ ಹೊರತು ಅವುಗಳ ವಿವರಣೆಯನ್ನು ಒಂದು ಲೇಖನದಲ್ಲಿ ಒದಗಿಸಿ ಮುಗಿಸುವುದೆಂದಿಗೂ ಸಾಧ್ಯವಿಲ್ಲ.

**ಸಿ. ಕೆ. ವೆಂಕಟರಾಮಯ್ಯ**

# ಸತಿಯ ಪುತ್ರ—ಶಬ್ದಾರ್ಥ ವಿಚಾರ

ಸಂಸ್ಕೃತ ವಾಙ್ಮಯದಲ್ಲಿ ಮಹಾಭಾರತಾದಿ ಗ್ರಂಥಗಳಲ್ಲಿ ಭಾರತ ಹಾಗೂ ಕರ್ಣಾಟಕದ ಹಲವು ಕಡೆಗಳ ಹೆಸರುಗಳು ಹೇಳಿವೆಯೆಂದು ಚಾರಿತ್ರಿಕ ವಿದ್ವಾಂಸರು ಒಪ್ಪುವರು.

ಅಶೋಕ ಮಹಾರಾಜನು ಸುಮಾರು ಕ್ರಿ. ಪೂ. ಮೂರನೆಯ ಶತಕದಲ್ಲಿದ್ದನೆಂದು ಹೇಳುವರು. ಅವನಷ್ಟು ವಿಶಾಲವಾದ ಸಾಮ್ರಾಜ್ಯವನ್ನು ಆಳಿದವರು ವಿರಳ. ಅವನು ಕೆತ್ತಿಸಿದ ಶಾಸನಗಳು ಮಾಸ್ಕಿ, ಚಿತ್ರದುರ್ಗ ಜಿಲ್ಲೆಯ ಸಿದ್ಧಾಪುರ, ಬ್ರಹ್ಮಗಿರಿ, ಜಟಿಂಗ ರಾಮೇಶ್ವರ, ಎರ್ರಗುಡಿ, ಅಪರಾಂತದ (ಠಾಣಾ ಜಿಲ್ಲೆಯ) ಸುಪಾರಗಳ ತನಕ ದಕ್ಷಿಣ ಭಾರತದಲ್ಲಿ ಹಬ್ಬಿವೆ. ಆತನ ಶಿಲಾಲೇಖವಿರುವ ಇವೆಲ್ಲಾ ಪ್ರದೇಶಗಳು ಆತನ ರಾಜ್ಯಕ್ಕೆ ಸೇರಿದ್ದುವೆಂದು ತಿಳಿಯುವುದು. ಒಟ್ಟಿನಲ್ಲಿ 'ಮೌರ್ಯ ಸಾಮ್ರಾಜ್ಯದ ದಕ್ಷಿಣಭಾಗದ ರಾಜಧಾನಿಯೇ ಕರ್ಣಾಟಕದ ಉತ್ತರ ಭಾಗದಲ್ಲಿದ್ದುದರಿಂದ ಕರ್ಣಾಟಕದ ಈ ಭಾಗವು ಮೌರ್ಯರ ಕೈಯಲ್ಲಿದ್ದಿತೆಂಬುದರಲ್ಲಿ ಸಂಶಯವಿಲ್ಲ'ವೆಂದು ಇತಿಹಾಸ ಸಂಶೋಧಕರು ಅಭಿಪ್ರಾಯಪಡುತ್ತಾರೆ.

ಇದರಿಂದ ಕನ್ನಡದ ದಕ್ಷಿಣಭಾಗವು ಆತನ ಆಳ್ವಿಕೆಗೆ ಸೇರಿರಲಿಲ್ಲವೆಂದು ವ್ಯಕ್ತವಾಗುತ್ತದೆ. 'ಯೇಚ ಅಂತ, ಏವಮುವ ಪ್ರಚಂತೇಸು' ಇತ್ಯಾದಿ ನಿರೂಪಿಸಿದ ಚೋಳ, ಪಾಂಡ್ಯ, ಸತಿಯಪುತ್ರ, ಕೇರಲಪುತ್ರಗಳು ಆತನ ರಾಜ್ಯದ ಹೊರವಳಯದಲ್ಲಿದ್ದುವೆಂದು—ಆತನ ಎರಡನೆಯ ಶಿಲಾಶಾಸನದಿಂದ ಸ್ಪಷ್ಟವಾಗಿ ತಿಳಿಯುವುದೆಂಬುದಕ್ಕೆ—ವಿದ್ವಾಂಸರಲ್ಲಿ ಮತ ಭೇದವಿಲ್ಲ. ಪರಂತು, ಅಲ್ಲಿ ಹೇಳಿದ ಸತಿಯ ಪುತ್ರವೆಂದರೆ ಅದಾವ ಪ್ರದೇಶವೆಂದು, ಆ ಶಬ್ದಾರ್ಥವಿಚಾರವೇನೆಂದು ಅನೇಕರಲ್ಲಿ ಮತಭೇದವಿದೆ ಪ್ರಸ್ತುತ, ಕೆಲವು ಹೇಳಿಕೆಗಳು ಅದೇಕೆ ಸರಿಬರುವುದಿಲ್ಲವೆಂದು, ಆ ಬಗೆಗೆ ನಮ್ಮ ಆಶಯವೇನೆಂದು ವಿವೇಚಿಸಬೇಕು.

I **ಇತರರ ಹೇಳಿಕೆಗಳು** ೧) ಸತಿಯ ಪುತ್ರವೆಂಬ ಜನತೆಯಾಗಲೀ, ರಾಜ್ಯವಾಗಲೀ, ಅಥವಾ ವಿಭಾಗವಾಗಲೀ ಬೇರೆ ಅದೆಲ್ಲೂ ಹೇಳಿಲ್ಲ. ಅದು ಬಹುಶಃ ತುಳು ಅಥವಾ ಕೊಯಮುತ್ತೂರು ಜಿಲ್ಲೆಯ 'ಸತ್ಯಮಂಗಲ' ತಾಲ್ಲೋಕಿನ ಪ್ರದೇಶವನ್ನು ಹೇಳಿರಬಹುದೆಂದು ಒಂದು ಹೇಳಿಕೆಯಿದೆ.

ಅಶೋಕನ ಶಾಸನಕ್ಕೊಳಪಟ್ಟ ಕಾರಣ ಆತನ ಶಿಲಾಶಾಸನಗಳಿರುವ ಅಪರಾಂತದ (ಉತ್ತರ ಕೊಂಕಣದ) ಭಾಗದಿಂದ ಕೊಯಮುತ್ತೂರಿನ ಸತ್ಯಮಂಗಲದವರೆಗೆ ಇರುವ ಪ್ರದೇಶದ ಪ್ರಶ್ನೆಯೊಂದು ಇಲ್ಲಿ ಬರುವುದು. ಹಾಗೂ 'ಸತಿಯ' ವೆಂಬುದು 'ಸತ್ಯ'ವೆಂಬ ಸಂಸ್ಕೃತ ಶಬ್ದದ ರೂಪಾಂತರವಿರಬೇಕೆಂದು ಭಾವಿಸಿ ಹಾಗೆ ಹೇಳಿದ್ದಿರಬಹುದು! ಆದರೆ ಸತ್ಯವೆಂಬುದು 'ಶಚ,ಸಚ,ಸಚ್ಚ'ವೆಂದು ತಾನೇ ರೂಪಾಂ

ತರವಾಗುವುದನ್ನು - 'ಸತಿಯ' ವೆಂದು ಅದೆಲ್ಲೂ ಹೇಳಿರದುದನ್ನು—ನಾವು ಅಗತ್ಯ ತಿಳಿದಿರಬೇಕು. (ಹೇಮಚಂದ್ರನ ಪ್ರಾಕೃತವ್ಯಾಕರಣ 2-13, ಕುಮಾರಪಾಲ ಚರಿತೆ. 1-63, ಶ್ರೀ. ಮೆಹಂದಲೆಯವರ ಗ್ರಂಥ, ಇತ್ಯಾದಿ ನೋಡಿರಿ). ಆದುದರಿಂದ ಈ ಮೇಲಿನ 'ಸತ್ಯಮಂಗಲ' ವೆಂಬ ಹೇಳಿಕೆಯನ್ನು ನೀಗಿಬಿಡಬೇಕು. ಇನ್ನು, ಅರೆನುಡಿಯಲ್ಲಿರುವ ತೌಳವವಿಚಾರ ಮುಂದೆ ಮಾಡಲಿದೆ.

೨) ಕಾಂಚೀ ಪಟ್ಟಣದ ಒಂದು ಶಿಲಾ ಶಾಸನದಲ್ಲಿ 'ಸತ್ಯಾವ್ರತನಾಮಾಂಕಿತ ಕಾಂಚೀ ದಿವ್ಯಕ್ಷೇತ್ರ'ವೆಂದು ಹೆಸರಿಸಿರುವುದರಿಂದ, ಸತಿಯ ಪುತ್ರವೆಂದರೆ ಕಾಂಚಿಯಿರಬಹುದೆಂದು ಇನ್ನೊಂದು ಗ್ರಹಿಕೆಯಿದೆ. ಇದೂ ಈ ಮೇಲಿನ ವಿವರಣೆಯಂತೆ ಬಿಡಬೇಕಾಗುವುದು.

೩) 'ಸತಿಯ ಪುತ್ರ'ವೆಂದು ಸತ್ಯ ಪುತ್ರವೆಂಬುದರ ರೂಪಾಂತರ; ಸತ್ಯಪುತ್ರರೆಂದರೆ ತುಳುನಾಡಿನ ಪ್ರಾಚೀನ ಜನರಾದ ಕೊರಗ (ಇಂದಿನ ಹರಿಜನ ಬಳಗ)ರು. ಇವರು ಸತ್ಯನಿಷ್ಠರಾದುದರಿಂದ ಆ ಹೆಸರು ಸಾರ್ಥಕ್ಯವೆಂದು ಮತ್ತೊಂದು ನಿರೂಪಣವಿದೆ.

ಅಶೋಕನು ಪಟ್ಟಾಭಿಷಕ್ತನಾದ ಹದಿಮೂರನೆಯ ವರುಷದಲ್ಲಿ ಸ್ವದೇಶ ಹಾಗೂ ಪರದೇಶಗಳಲ್ಲಿ ಬೌದ್ಧಧರ್ಮವನ್ನು ಹಬ್ಬಿಸಲು ಧರ್ಮ ಮಹಾಮಾತ್ರರನ್ನು ಕಳುಹಿಸಿದನೆಂದಿರುವ ಆತನ ಐದನೆಯ ಶಿಲಾಲೇಖದಲ್ಲಿ 'ಯೇವಾಽಪ್ಯನ್ಯೇಽಪರಾಂತಾಃ' ಎಂದು ಬಹುವಚನಾಂತವಾಗಿ ನಿರೂಪಿಸಿದ್ದಾನೆಂಬುದು (ಶ್ರೀ. ಆರ್. ಜಿ ಭಾಂಡಾರ್ಕರರ ಆಶಯ) ಸರಿಯಾದರೆ, ಅದು ಉತ್ತರ ಕೊಂಕಣ ಮಾತ್ರವಲ್ಲ, ಅದರ ತೆಂಕಲಿಗೂ ಸಮನ್ವಯಿಸಬರುವುದು. ಆತನು ಚೋಳ ಮೊದಲಾದ ಆ ನಾಲ್ಕು ಪ್ರದೇಶಗಳಲ್ಲಿ ಮನುಷ್ಯರ ಮತ್ತು ಪಶುಗಳ ಚಿಕಿತ್ಸೆಗೆ ತಕ್ಕ ಏರ್ಪಾಟು ಮಾಡಿದನೆಂದು ಎರಡನೆಯ ಶಿಲಾಲೇಖದಲ್ಲೇ ಹೇಳಿದೆ. ಅಂದರೆ, 'ಸತಿಯ ಪುತ್ರ'ವೆಂಬ ಪ್ರದೇಶದಲ್ಲಿ ಆಗ ಕೊರಗರು ಮಾತ್ರ ವಾಸಿಸುತ್ತಿದ್ದರೆಂದಲ್ಲ, ಅಲ್ಲಿ ಪಶುಪಾಲನೆ ಮೊದಲಾದ ಆ ನಾಡಿಗರ ಜೀವಿಕೆಯನ್ನು ಕೈಗೊಂಡಿದ್ದವರೇ ವಾಸಿಸುತ್ತಿದ್ದರೆಂದು ತಿಳಿಯಬೇಕಾಗುತ್ತದೆ. ಇನ್ನು ಇಲ್ಲಿನ ಕೊರಗರು ಭಾರತದೆಲ್ಲೆಡೆಯ ಆದಿಕುಲದ ಅದೊಂದು ಶಾಖೆಯವರೆಂದು ಭಾವಿಸಲಾಗಿದೆ. ಹಾಗೂ 'ಸತ್ಯ—ಸತಿಯ' ಶಬ್ದಗಳಿಗೆ ಪರಸ್ಪರ ರೂಪ ಸಂಬಂಧವಿಲ್ಲವೆಂದು ಈ ಮೊದಲೇ ಹೇಳಿದ್ದೇವೆ. ಒಟ್ಟಾರೆ, ಈ ಹೇಳಿಕೆ ಸಾಧಾರವಲ್ಲವೆಂದು ತಿಳಿಯಬೇಕು.

೪) ಪ್ಟೋಲೆಮಿಯೆಂಬ ಗ್ರೀಕ್ ಪ್ರವಾಸಿಯ ಗ್ರಂಥದಲ್ಲಿ 'ಅಯ್ ಒಯ್' ಎಂದುದೇ—ಶಬ್ದಾದಿಯ ಸಕಾರಲೋಪದ ವಿಕಲ್ಪದಂತೆ—ಸೈಒಯ್ ಹಾಗೂ ಸಾತಿಯವೆಂದು ಆಗಿರಬೇಕೆಂದು ಅದೊಂದು ವಿವರಣೆ ಇದೆ.

ಪ್ಟೋಲೆಮಿಯ ಗ್ರಂಥದಲ್ಲಿ 'ಐಒಯ್' ಎಂಬ ಅಂದೊಂದೇ ಹೆಸರಿನ ಎರಡು ಅನ್ಯಾನ್ಯ ಸ್ಥಳಗಳಿವೆ (ಪುಟ. 53-54, 180, 182). ಒಂದು 'ಕೊಮರಿಯಾ

(ಕನ್ಯಾಕುಮಾರಿ)' ಯೊಂದಿಗೆ ಹೇಳಿದೆ. ಇನ್ನೊಂದು ' ಒಲೊಖೊ ಇರಾ ' (ಆಲುವ ಖೇಡ) ದೊಂದಿಗೆ ಹಾಗೂ ' ಮೊರೊಂಡಾ (ಮುರಡೇಶ್ವರ) ' ವಿರುವಂತಹುದೆಂದು ಹೇಳಿದೆ. ಗ್ರೀಕ್ ಭಾಷೆಯಲ್ಲಿ ಹಕಾರವು ಉಚ್ಚಾರದಲ್ಲಿ ಮಾತ್ರ ಇತ್ತಲ್ಲದೆ ಅದಕ್ಕೆ ನಿಯತವಾದ ಪ್ರತ್ಯೇಕ ವರ್ಣವಿದ್ದಿಲ್ಲ. ಆದುದರಿಂದ ಇದು ಮೂಲತಃ ' ಹೈಹಯ ' ವೆಂದೇ ಇದ್ದಿರಬೇಕೆಂದು ಹೇಳುವರು. ಪ್ರಕೃತ ಸತಿಯ ಪುತ್ರ ಶಬ್ದವು ಕೇರಲಕ್ಕಿಂತ ಬೇರೆಯಾಗಿರಬೇಕಾಗಿ, ' ಅಯ್ ಒಯ್ ' ಶಬ್ದಕ್ಕೂ ' ಸತಿಯ ' ಶಬ್ದಕ್ಕೂ ಸಾಮ್ಯವಾದವು ಒಪ್ಪತಕ್ಕುದಲ್ಲ.

೫) ಸತಿಯ ಪುತ್ರಕ್ಕೂ ' ಸಾತ್ವತೇ 'ಅಥವಾ ಕೊಂಕಣದೇಶಕ್ಕೂ, ' ಸಾತ್ವತ ' ರಿಗೂ ಸಂಬಂಧೀಕರಣದ ವಿವರಣೆ ಅಷ್ಟೊಂದು ಸಬಲಾತ್ಮಕ ವ್ಯಾಕರಣಾಧಾರವಾಗಿ ತೋರುವುದಿಲ್ಲೆಂದು ನೀಗಿ ಬಿಡಬೇಕು.

೬) ಮಾರ್ಕಂಡೇಯ ಪುರಾಣ ಹಾಗೂ ಬೃಹತ್ಸಂಹಿತೆಗಳಲ್ಲಿ ಅಪರಾಂತದೊಂದಿಗೆ ಹೇಳಿದ ' ಶಾಂತಿಕ 'ವೆಂಬ ದೇಶವಾಚಕ ಸಂಸ್ಕೃತ ಶಬ್ದದ ರೂಪಾಂತರವೇ 'ಸತಿಯ' ವೆಂದು ಬೇರೆಯೊಂದು ವಿವರಣೆಯಿದೆ.

' ಶಾಂತಿ ' ಶಬ್ದದ ರೂಪಾಂತರವು ' ಸಂತಿ 'ಯೆಂದು ಮಾತ್ರ ಹೇಳಿದೆ. (ಹೇಮಚಂದ್ರನ ವ್ಯಾಕರಣ. 4–441). ಇದರ ಪ್ರಾಯೋಗಿಕ ಪಾಠಾಂತರಗಳಲ್ಲೂ ಅನುಸ್ವಾರಲೋಪವಿಲ್ಲ. ಹಾಗಾಗಿ, ' ಸಂಸ್ಕೃತದ ಅನುನಾಸಿಕವು ಪ್ರಾಕೃತದಲ್ಲಿ ಅನುಸ್ವಾರವಾಗುತ್ತದೆ. ಆ ಅನುಸ್ವಾರವನ್ನು ಸೂಚಿಸುವ ತಲೆಗಡೆಯ ಬಿಂದುವು ಕೆಲವೊಮ್ಮೆ ಕೆತ್ತಲ್ಪಡುವುದಿಲ್ಲೆಂದು ' ಹೇಳುವುದು ಇಲ್ಲಿ ಸಾಧುವಲ್ಲ. ಅಶೋಕನ ಎರಡನೆಯ ಶಿಲಾಲೇಖದ ಗಿರನಾರದ ಒಂದೆಡೆ ಮಾತ್ರ ಕೆತ್ತುಗನ ಕೈತಪ್ಪಿಂದಾಗಿ ' ಪಾಡಾ ' ಯೆಂದಿದ್ದರೂ, ಮಿಕ್ಕ ನಾಲ್ಕು ಕಡೆಯ ಪ್ರತಿಗಳಲ್ಲಿ ' ಪಂಡಿಯ 'ವೆಂದು ಅನುಸ್ವಾರವು ಕಾಣುವುದು. ಆದರೆ, ಸತಿಯ ಪುತ್ರವೆಂಬುದಕ್ಕೆ ಆ ಆಯ್ದು ಕಡೆಯ ಪ್ರತಿಗಳಲ್ಲೂ ಅನುಸ್ವಾರವು ಹೇಳಿಲ್ಲವಾಗಿ, ಅನುಸ್ವಾರಲೋಪದ ಆ ಶಂಕೆಯಿಲ್ಲಿ ಸರಿಯಲ್ಲ. ' ಶಾಂತಿಕ, ಸತಿಯ 'ಗಳು ರೂಪಾಂತರಿತಗಳೆನ್ನಲು ತಕ್ಕ ಆಧಾರಗಳಿಲ್ಲದೆ ನೀಗಲೇಬೇಕು.

II **ಸ್ವಾಶಯ :** ಸತಿಯ ಪುತ್ರವೆಂದರೇನೆಂದು ನಮ್ಮ ಆಶಯವು ಹೀಗಿದೆ–

ಮಹಾಭಾರತಗ್ರಂಥದ ಭೀಷ್ಮಪರ್ವದಲ್ಲಿ ಹಲವಾರು ದಾಕ್ಷಿಣಾತ್ಯ ಜನಪದಗಳ ಹೆಸರು ಹೇಳುವಲ್ಲಿ ' ಸತಿಯಾಃ ' ಎಂದು ಕಾಣುವುದು (೧೦-೬೨. ಪುಣೆಯ ಪ್ರತಿ).

ಸಭಾಪರ್ವದಲ್ಲಿ ಪಾಂಡವರ ರಾಜಸೂಯಕ್ಕೆ ಬಂದಿದ್ದ ಅನೇಕ ದೇಶದವರ ಹೆಸರುಗಳನ್ನು ದುರ್ಯೋಧನನು ತನ್ನ ತಂದೆಯೊಡನೆ ಹೇಳುವಲ್ಲಿ,

ಕರ್ಣಾಟಕಾಃ ಕಾಂಸ್ಯಕುಟ್ಟಾಃ ಪದ್ಮಜಾಲಾಃ ಸತೀನರಾಃ ।
ದಾಕ್ಷಿಣಾತ್ಯಾಃ ಪುಲಿಂದಾಶ್ಚ ಶವೇರಾಸ್ತಂಕಣಾಃ ಖಷಾಃ ॥
(ಕುಂಭಕೋಣ ಪ್ರತಿ. ೬೮-೯೮)

ಎಂದು ತೋರುವುದು. ಇವೆರಡು ಕಡೆಗಳಲ್ಲಿ ಪಾಠಾಂತರವಾಗಿ ಶಬ್ದಾಂತರಗಳು ಇರುತ್ತವೆ. ಅವುಗಳಲ್ಲಿ ಕೆಲವು ಈ ಮೇಲಿನ ಆಯಾ ಶಬ್ದಗಳಿಗೆ ಅನುಗುಣವಾಗಿವೆ ; ನಾರೀಯಾಃ, ಸತೀವರಾಃ, ಸತೀಪರಾಃ, ಇತ್ಯಾದಿ. (ಇವೆರಡು ವಿಷಯಾಂಶಗಳನ್ನು ಪತ್ರಮುಖೇನ ನನಗೆ ಕೃಪೆಯಿಂದ ತಿಳುಹಿದ, ಪುಣೆಯ ಭಾಂಡಾರ್ಕರ್ ಸಂಸ್ಥೆಯ ಮಹಾಭಾರತ ಪರಿಷ್ಕರಣಪ್ರತಿಯ ಪ್ರಧಾನಸಂಪಾದಕರಾದ ಶ್ರೀ. ಎಸ್. ಕೆ. ಬಿಲ್ವಾಲ್ಕರರಿಗೆ ನನ್ನ ಹಾರ್ದಿಕ ಕೃತಜ್ಞತೆ ಸಲ್ಲಬೇಕು).

ಇಲ್ಲಿರುವ ಕರ್ಣಾಟಕ, ದಾಕ್ಷಿಣಾತ್ಯ ಶಬ್ದಗಳ ಸ್ಪಷ್ಟಾರ್ಥವನ್ನು ಯಾರೂ ಅಲ್ಲಗಳೆಯುವಂತಿಲ್ಲ. ಮಿಕ್ಕವುಗಳಲ್ಲಿ ಖಷಾಃ ಎಂಬುದು 'ಖಸಾಃ' ಎಂದು ರೂಪಾಂತರವಾಗಿ ಪ್ರಾಚೀನ ಗ್ರಂಥ ಹಾಗೂ ಶಾಸನಪ್ರಪಂಚದಲ್ಲಿ ಕಾಣುವುದು—

ಕರಣಶ್ಚ ನಟಶ್ಚೈವ **ಖಸೋ** ದ್ರವಿಡ ಏವಚ |

(ಮನುಸ್ಮೃತಿ. ೧೦-೨೨)

ಸಾವಿರದ ಏಳರಲ್ಲಿ ಬರೆದ ಲಕ್ಕುಂಡಿಯ ಶಾಸನವೊಂದರಲ್ಲಿ ದಾನ ಚಿಂತಾಮಣಿ ಅತ್ತಿಮಬ್ಬೆಯ ಪತಿಯಾದ ನಾಗದೇವನನ್ನು ಕುರಿತು ವರ್ಣಿಸಿದ ಪದ್ಯದಲ್ಲಿ ಹೀಗಿದೆ—

ಧಾಳಿಯೊಳಂಧ್ರನಂ ಪಿಡಿದಪೆಂ ಮಗಧೇಶನನಿಕ್ಕಿ ಮೆಟ್ಟಪೆಂ ।
ಲಾಳನಗಂಟಲಂ ಮುರಿದಪೆಂ **ಖಸನಂ** ಪುಡಿಯೊಳ್ಪೊರಳ್ಚಿಪೆಂ ।
ಕೋಳದೊಳಿಕ್ಕಿಪೆಂ ಮಲೆವ ಪಾಂಡ್ಯನನಾಹವಮಲ್ಲದೇವನಿಂ ।
ಪೇಳೆನುತಿರ್ಪ್ಪನೀ ದೊರೆತು ಶೌರ್ಯಗುಣೋನ್ನತಿ ನಾಗದೇವನ (ನಾ) ॥

(ದ. ಭಾ. ಶಾ. ಸಂ. ೧೧_೧ರಲ್ಲಿ ೫೨)

ಸಾವಿರದ ಎಪ್ಪತ್ತೊಂದರಲ್ಲಿ ಬರೆದ ಎರಡನೆಯ ಸೋಮೇಶ್ವರನ ಕಾಲದ ಸೊರಟೂರಿನ ಶಾಸನದಲ್ಲಿ ಹೀಗಿದೆ—

ಅಂಗವರಾಳಸಿಂಗಳಿಕಗೂರ್ಜ್ಜರ ಮಾಳವ ಚೇರಪಾಂಡ್ಯ ಕಾ ।
ಳಿಂದ **ಖಷಾಂಧ್ರ**ಯಾದವಮಹೀಭುಜಮೌಳಿಮಣಿಬ್ರ(ಪ್ರ)ಜಪ್ರಭಾ ।
ಲಿಂಗಿತಪಾದಪೀರನಮರೇಂದ್ರವಿಳಾಸನವಾರ್ಯ್ಯವೀರ್ಯ್ಯನು ।
ತ್ತುಂಗಯಶಂ ಸಮಸ್ತಭುವನಾಶ್ರಯನಾಹವಮಲ್ಲನಂದನ(ನಾ) ॥

(ಅದೇ ಗ್ರಂಥ. ನಂ. ೧೧೧)

ಇದರಂತೆ ಆ ಭಾರತಶ್ಲೋಕದ ಉಳಿದ ಶಬ್ದಗಳ ಉಲ್ಲೇಖನದ ಬಗೆಯು ವಿಶ್ವಾಸಾರ್ಹವೆಂದು ಹೇಳಬಹುದು.

ಅದಾಗಿ, ಭೀಷ್ಮಪರ್ವದ ' ಸತಿಯಾಃ ' ಮತ್ತು ಸಭಾಪರ್ವದ ' ಸತೀನರಾಃ ' ಶಬ್ದಗಳು ಒಂದೇ ಅರ್ಥದಲ್ಲಿರಬಹುದು. ಸತಿಯರೇ ನರ(ಪುತ್ರ)ರಾಗಿ ಉಳ್ಳವರು ಸತೀನರರೆಂದು, ಸತೀಯರ ಪ್ರಾಚುರ್ಯ ವಿಶೇಷವುಳ್ಳ ದೇಶವು ಸತಿಯವೆಂದು ಬಗೆಯಲಾಗುವುದು. ಇಲ್ಲಿಯ ' ಸತಿಯಾಃ ' ಎಂಬುದೇ ಅಶೋಕನ ಶಾಸನದಲ್ಲಿ ಉಲ್ಲೇಖಿಸಿದೆ ಎನ್ನಬಹುದು.

ಇವೆರಡು ಶಬ್ದಗಳೂ ನಮ್ಮ ಕನ್ನಡ ಜಿಲ್ಲೆಯ ತೌಳವಭಾಗ (ಪ್ರದೇಶ)ವನ್ನು ತಾನೇ ನಿರ್ದೇಶಿಸುತ್ತವೆಯೆಂದರೆ ಅತಿಶಯೋಕ್ತಿಯಲ್ಲ. ಏಕೆಂದರೆ, ತುಳುವ ಜನಾಂಗ ದಲ್ಲಿ ಮಾತ್ರ ಅಳಿಯಕಟ್ಟು—ಸತೀಪ್ರಧಾನವಾದ ಕೌಟುಂಬಿಕ ಕ್ರಮವು—ಬಳಕೆ ಯಿದೆ. ಕುಟುಂಬದ ಆಸ್ತಿ ಹಣ ಮೊದಲಾದವುಗಳ ಹಕ್ಕೂ, ಅದು ಕಾರಣ ದಿಂದೆಂಬಂತೆ ಜನನ ಮರಣಗಳ ಆಶೌಚವೂ ಹೆಮ್ಮಕ್ಕಳಲ್ಲಿ—ಹೊಂದಿಕೊಂಡು—ಸಾಗುವುದು. ತೌಳವರಲ್ಲದವರು ಅಲ್ಲಿ ಇಂದಿಗೂ 'ಮಕ್ಕಳ ಕಟ್ಟನ್ನೇ' ಆಚರಿಸುವರು.

ಆವೊಂದು ಜನಾಂಗ ಹಾಗೂ ದೇಶಕ್ಕೆ ಅಲ್ಲಿನ ಆಚಾರ ಅಥವಾ ವಾಸಕ್ರಮಾದಿ ಗಳಿಂದ ಕಾಲಾನುಕ್ರಮದಲ್ಲಿ ಒಂದಾನೊಂದು ಹೆಸರು ಬಳಕೆಗೆ ಬರುವುದೆಂಬುದಕ್ಕೆ ಅನುಮಾನವಿಲ್ಲ: ಮಾಹಿಷ್ಮತಿ, ಮಹಿಷಮಂಡಲ, ಮಹಿಷಕವೆಂದು ಸಂಸ್ಕೃತ ದಲ್ಲೂ; ಎರಮೈನಾಡು ಎಂದು ತಮಿಳಿನಲ್ಲೂ ಮೈಸೂರಿನ ಹೆಸರಿವೆ. ಕರ್ಣಾಟಕ ವೆಂದು ಸಂಸ್ಕೃತದಲ್ಲಿಯೂ, ಕನ್ನಡವೆಂದು ಕನ್ನಡದಲ್ಲಿಯೂ, ಕರುನಾಡು ಎಂದು ತಮಿಳಿನಲ್ಲಿಯೂ ನಮ್ಮ ಕರ್ಣಾಟಕ ಪ್ರಾಂತಕ್ಕೆ ಹೆಸರಿವೆ. ಆಳ್ವ(ರ)ಖೇಟವೆಂದು ಗ್ರೀಕ್‌ಪ್ರವಾಸಿಯ ವರದಿ ಹಾಗೂ ಶಿಲಾಶಾಸನಗಳಲ್ಲಿ ಆ ತೌಳವಭಾಗವನ್ನು ಹೆಸರಿಸಿದೆ. ಇವುಗಳಂತೆ, ಹೆಮ್ಮಕ್ಕಳ ಕಟ್ಟನ್ನು ಆಧರಿಸಿದವರನ್ನು—ತೌಳವರನ್ನು—ಸತೀನರರೆಂದು, ಸತಿಯರೆಂದು ಮಹಾಭಾರತ ಗ್ರಂಥದಲ್ಲಿ ಹೇಳಿದೆ. ಈ 'ಸತಿಯ'ವನ್ನು ಅನುವದಿಸಿ, ತೌಳವ ಜನಾಂಗವನ್ನೇ ಅಶೋಕನ ಶಾಸನದಲ್ಲಿ 'ಸತಿಯಪುತ(ತ್ರ)' ವೆಂದು ಹೇಳಿದೆ ಯೆಂದರೆ ತಪ್ಪಲ್ಲ. (ಕೆತ್ತುಗನ ಪ್ರಮಾದದಿಂದ—ಕಾಲಸಿಯಲ್ಲಿರುವ—ಅದೊಂದು ಪ್ರತಿಯಲ್ಲಿ ಮಾತ್ರ 'ಸಾತಿಯ ಪುತ'ವೆಂದುದಕ್ಕೆ ಬೇರೆ ಅರ್ಥವಿರಲಿಕ್ಕಿಲ್ಲ). ಆ ಎರಡನೆಯ ಶಾಸನದಲ್ಲಿ ಹೆಸರಿಸಿದ 'ಚೋಡಾ' ಅಂದರ ಚೋಳವೆಂದೂ, 'ಪಂಡಿಯ' ಅಥವಾ 'ಪಾಡಾ' ಅಂದರೆ ಪಾಂಡ್ಯವೆಂದೂ, 'ಕೇರಲಪುತ'ವೆಂದರೆ ಮಲೆಯಾಳ ವೆಂದೂ ನಾವೆಲ್ಲಾ ತಿಳಿದುದೇ ಆಗಿದೆ. ಚೋಳ ಪಾಂಡ್ಯಗಳು ಹೇಗೆ ಒಂದಕ್ಕೊಂದು ತಾಗಿರುತ್ತವೋ, ಹಾಗೆಯೇ ಪಾಂಡ್ಯ ಕೇರಲಗಳು ಒಂದಕ್ಕೊಂದು ಸಂದುಗೂಡಿರುತ್ತವೆ- ಕೇರಲ ಸತಿಯಪುತ್ರಗಳೂ ಒಂದಕ್ಕೊಂದು ತಾಗಿದ ದೇಶಗಳಾಗಿರುತ್ತವೆ. ಚೋಳ ಪಾಂಡ್ಯ ಕೇರಳಗಳಂತೆ ಅಶೋಕನ ರಾಜ್ಯಭಾರಕ್ಕೊಳಪಡದ ಸತಿಯಪುತ್ರವು ಕೇರಳದ ಉತ್ತರಕ್ಕೂ, ಆತನ ರಾಜ್ಯಕ್ಕೆ ಸೇರಿದ ಅಪರಾಂತದ ದಕ್ಷಿಣಕ್ಕೂ ಇರುವ ಕನ್ನಡದ ಒಂದು ಪ್ರದೇಶವಾದ, ತುಳುವರೇ ಸೈ! 'ಚೋಳ ಪಾಂಡ್ಯ ಕೇರಳ ಎಂಬ ಮೂರು ಮುಖ್ಯ ಜನಾಂಗಗಳನ್ನು ಸೇರಿಸಿದರ, ದಕ್ಷಿಣಭಾರತದಲ್ಲಿ ಅಶೋಕನ ಪ್ರತ್ಯಂತದವ ರಾಗಿ ಉಳಿಯುವುದು ತುಳುವ ದೇಶವೇ ಎಂದು ತೋರುತ್ತದೆ. ಆದ್ದರಿಂದ, ಸತ್ಯ ಪುತ್ರರು ತುಳುವರೆಂಬ ವಾದವೇ ಸಮಂಜಸವಾಗಿ ಕಾಣುತ್ತದೆ' ಈ ಮೇಲೆಂದ ಅರ್ಥವು ತಾನೇ ಅಲ್ಲಿಗೆ ಸಮನ್ವಯಿಸುತ್ತದೆಯಲ್ಲದೆ, ಬೇರೆಯಲ್ಲ!

ಹೆಮ್ಮಕ್ಕಳ ಕಟ್ಟು—'ಮರುಮಕ್ಕತ್ತಾಯಂ' ಎಂದು—ಕೇರಳದಲ್ಲಿ ಇರುವುದ ರಿಂದ, ಸತೀನರ ಸತಿಯಗಳೆಂದು ಕೇರಳವನ್ನೇ ಮಹಾಭಾರತಗ್ರಂಥದಲ್ಲಿ ಹೇಳಿರಬಹು

ದೆಂದು ಒಮ್ಮೆಗೆ ಕಾಣುವುದು. ಆದರೆ, ಅಶೋಕನ ಶಿಲಾಶಾಸನದಲ್ಲಿ ಕೇರಲಪುತ್ರ ದೊಂದಿಗೆ ಸತಿಯಪುತ್ರವೆಂದು ಪ್ರತ್ಯೇಕವಾಗಿ ಹೆಸರಿಸಿರುವುದರಿಂದ, ಆ ಶಿಲಾಶಾಸನ ದನಕ ಕೇರಳದಲ್ಲಿ 'ಮರುಮಕ್ಕತ್ತಾಯಂ' ಕ್ರಮವು ಬಳಕೆಯಿದ್ದಿಲ್ಲೆಂದು ಹೇಳ ಬಹುದು.

ತೌಳವರಲ್ಲಿರುವ ಈ ಹೆಮ್ಮಕ್ಕಳ ಕಟ್ಟು—ಅಳಿಯ ಸಂತಾನ ಕ್ರಮ–ಸುಮಾರು ಕ್ರಿ. ಶ. ಒಂದನೆಯ ಶತಕದಲ್ಲಿದ್ದಿರಬಹುದೆಂದು ಭೂತಾಳ ಪಾಂಡ್ಯನಿಂದ ಪ್ರಾರಂಭ ವಾಯಿತೆಂದು ಕೆಲವರು ಹೇಳುವರು. ಆದರೆ ಮಹಾಭಾರತದ ಎರಡು ಕಡೆಗಳಲ್ಲಿ ಹಾಗೂ ಅಶೋಕನ ಶಿಲಾಶಾಸನದಲ್ಲಿ 'ಸತೀನರ—ಸತಿಯ'ರೆಂದು ಸ್ಪಷ್ಟವಾಗಿ ಹೇಳಿರುವುದರಿಂದ, ಈ ಕ್ರಮವು ಆ ಭೂತಾಳಪಾಂಡ್ಯನಿಗಿಂತ ಮೊದಲಲ್ಲೇ–ಅಶೋಕನ ಕಾಲದಲ್ಲೇ—ತೌಳವರಲ್ಲಿ ಇತ್ತೆಂದು ತಿಳಿಯಬೇಕು.

**ಸಾರಾಂಶ** : ಮಹಾಭಾರತದಲ್ಲಿ ಹೇಳಿದ 'ಸತೀನರ,, ಸತಿಯ' ಶಬ್ದಗಳೇ ಅಶೋಕನ ಶಿಲಾಶಾಸನದಲ್ಲಿ 'ಸತಿಯಪುತ್ರ'ವೆಂಬುದಕ್ಕೆ ಮೂಲರೂಪಗಳೆಂದೂ, ಹೆಮ್ಮಕ್ಕಳ ಕಟ್ಟು (ಅಳಿಯ ಸಂತಾನ ಕ್ರಮ) ಬಳಕೆಯಿರುವ ತೌಳವರನ್ನೇ ಹಾಗೆ ನಿರೂಪಿಸಿರಬೇಕೆಂದೂ ತಿಳಿಯುವುದು ಸಾಧುತಮ!

**ಕೆ. ವೆಂಕಟರಾಯಾಚಾರ್ಯ**

---

ವಿ. ಸೂ: ಈ ಬರಹಕ್ಕಾಗಿ ನೋಡಿದವುಗಳು : ೧) ವಿನ್ಸೆಂಟ್‌ಸ್ಮಿತ್ತರ 'ಅಶೋಕ' ೨) ಡಾ. ಡಿ. ಆರ್. ಭಾಂಡಾರ್ಕರರ 'ಅಶೋಕ.' ೩) ಕರ್ಣಾಟಕ ಅರಸುಮನೆತನ ಗಳು. ೪) ಡಾ. ಬಿ. ಎ. ಸಾಲೆತ್ತೂರರ 'ಪ್ರಾ. ಕರ್ಣಾಟಕ, ಭಾಗ ೧.' ೫) ಶ್ರೀ. ಎಂ. ಗೋವಿಂದಪೈಯವರ ಲೇಖನ (ಕೃ. ಸ್ವಾ. ಅಯ್ಯಂಗಾರ್ ಸ್ಮಾರಕಗ್ರಂಥ, ತೆಂಕನಾಡು). ೬) ಕನ್ನಡಕವಿ ಚರಿತ್ರೆ. ೭) ಶ್ರೀ. ಎಂ. ಎ. ಮೊಹಂದಲೆಯವರ 'ಭಾ. ಅ. ಶಾ.' ೮) ಶ್ರೀ. ನಾ. ಕಸ್ತೂರಿಯವರ 'ಅಶೋಕ.' ೯) ಶ್ರೀ. ಡಿ. ಎನ್. ವಾಸುದೇವರಾಯರ ಬಹುಮಾನಿತ ಗ್ರಂಥ (ಅಮುದ್ರಿತ).

# ವಸುಭಾಗನ ಪಂಚತಂತ್ರ

ಚಾಲುಕ್ಯ ಚಕ್ರವರ್ತಿ ಜಯಸಿಂಹ ಜಗದೇಕಮಲ್ಲನ ಆಸ್ಥಾನದಲ್ಲಿ ಮಹಾಸಂಧಿ ವಿಗ್ರಹಿಯಾಗಿದ್ದ ದುರ್ಗಸಿಂಹನು ಕನ್ನಡದಲ್ಲಿ ಒಂದು ಪಂಚತಂತ್ರವನ್ನು ಬರೆದಿದ್ದಾನೆ. ಈ ಚಕ್ರವರ್ತಿಯು ಕ್ರಿ.ಶ. ೧೦೧೫-೧೦೪೨ ರಲ್ಲಿ ಆಳುತ್ತಿದ್ದನು. ಉತ್ತರ ದೇಶದ ಆರಾ ನಗರದಲ್ಲಿನ ಜೈನ ಪುಸ್ತಕಭಂಡಾರದಲ್ಲಿರುವ ಈ ಗ್ರಂಥದ ಒಂದು ಹಸ್ತಲಿಖಿತ ಪ್ರತಿಯಲ್ಲಿ ದೊರೆಯುವ—

ಅತಿಸಂಪನ್ನತೆವೆತ್ತ ಸದ್ಗುಹಸಿವಾಸಸ್ಥಾನಮೋದಾ ಪ್ರಜಾ
ಪತಿಸಂವತ್ಸರ ಚೈತ್ರಮಾಸಸಿತಪಕ್ಷದ್ವಾದಶೀ ತಾರಕಾ
ಪತಿವಾರಂ ಬರೆ ಪಂಚತಂತ್ರಮೆಸಸದತ್ತೀಧಾತ್ರಿಯೊಳ್ ದುರ್ಗನಿ
ರ್ಮಿತ . . . ಮದಲೀಲಾಪುಷ್ಟಿತಾಮ್ರದ್ರುಮಂ

ಎಂಬ (ಅಬದ್ಧ) ಪದ್ಯದಿಂದ ಶ್ರೀ ಮಂಜೇಶ್ವರಂ ಗೋವಿಂದ ಪೈ ಅವರು ಈ ಗ್ರಂಥವು ಕ್ರಿ. ಶ. ೧೦೩೧ನೇ ಮಾರ್ಚಿ ೮ನೇ ತಾರೀಖು ಸೋಮವಾರದಂದು ರಚಿಸಲ್ಪಟ್ಟಿತೆಂದು ನಿರ್ಣಯಿಸಿರುತ್ತಾರೆ (ಮಂಗಳೂರಿನ ರಾಷ್ಟ್ರಬಂಧು ಪತ್ರಿಕೆ, ೨೩ ನೇ ಫೆಬ್ರುವರಿ ೧೯೩೧).

ಈ ಗ್ರಂಥದ ಉಪಕ್ರಮದಲ್ಲಿ ದುರ್ಗಸಿಂಹನು—'ವಿದ್ವದ್ವೃಂದಂ ಬಗೆಗೊಂಡಾಗ್ರಹದಿಂದಂ ಪೇಟಲ್ಕೆವೇಟೆ ತದನುಗ್ರಹದಿಂ–ವಸುಭಾಗಭಟ್ಟಕೃತಿಯಂ ವಸುಧಾಧಿಪಹಿತಮನಖಿಳ ವಿದ್ವತ್‌ಸ್ತುತಮಂ ಪೊಸತಾಗಿರೆ ವಿರಚಿಸುವೆಂ ವಸುಮತಿಯೊಳ್ ಪಂಚತಂತ್ರಮಂ ಕನ್ನಡದಿಂ—'ಎಂದು ಹೇಳಿಕೊಂಡಿದ್ದಾನೆ.

ಈ ಗ್ರಂಥವನ್ನು ೧೯೭೮ ರಲ್ಲಿ ಪ್ರಕಾಶಿಸಿದ ಶ್ರೀ ಎಸ್. ಜಿ ನರಸಿಂಹಾಚಾರ್ ಮತ್ತು ಶ್ರೀ ಮ. ಆ. ರಾಮಾನುಜೈಯಂಗಾರ್ ಅವರುಗಳು ಪೀಠಿಕೆಯಲ್ಲಿ—'ಈ ಪಂಚತಂತ್ರಕ್ಕೂ ಪ್ರಕೃತದಲ್ಲಿ ಪ್ರಚಾರದಲ್ಲಿರುವ ವಿಷ್ಣುಶರ್ಮನ ಪಂಚತಂತ್ರಕ್ಕೂ ತಂತ್ರಗಳ ಹೆಸರುಗಳಲ್ಲಿಯೂ ಆಂತರಾಳಿಕ ಕಥಾಭಾಗಗಳಲ್ಲಿಯೂ ಉದ್ಧೃತವಾಗಿರುವ ಶ್ಲೋಕಗಳಲ್ಲಿಯೂ ಹಲವು ಭೇದಗಳಿವೆ. ಈ ಕವಿ ವಿಷ್ಣುಶರ್ಮನ ಪ್ರಸಿದ್ಧವಾದ ಪಂಚತಂತ್ರವನ್ನು ಬಿಟ್ಟು ವಸುಭಾಗಭಟ್ಟನ ಪಂಚತಂತ್ರವನ್ನು ಕನ್ನಡಿಸುವದಕ್ಕೆ ಕಾರಣವೇನೋ ತಿಳಿಯಲಿಲ್ಲ' ಎಂದು ಬರೆದಿರುತ್ತಾರೆ.

ಈ ಪೀಠಿಕೆಯನ್ನು ಬರೆದ ಕಾಲದಲ್ಲಿ ಎಂದರೆ ೧೯೭೮ನೇ ವರ್ಷದಲ್ಲಿ ಪಂಚತಂತ್ರ ಗ್ರಂಥದ ವಿಷಯವಾಗಿ ತಿಳಿದಿದ್ದ ಅಂಶಗಳು ಅಲ್ಪವಾಗಿಯೇ ಇದ್ದವು. ಆ ಕಾಲದಿಂದೀಚೆಗೆ ಡಾ. ಯೋಹಾನ್ನೆಸ್ ಹೆರ್ಟೆಲ್‌ರವರು ಮಾಡಿದ ಸಂಶೋಧನೆಗಳಿಂದ ಮೂಲಪಂಚತಂತ್ರವು ಬರೆಯಲ್ಪಟ್ಟ ಸಂಸ್ಕೃತ ಭಾಷೆಯಲ್ಲಿಯೇ ಪಂಚತಂತ್ರದ

ಅನೇಕ ಪಾಠಭೇದಗಳು ಇರುವವೆಂದು ಸ್ಪಷ್ಟವಾಯಿತು. ಇಂತಹ ಪಾಠಭೇದಗಳಲ್ಲಿ ಪ್ರಾಚೀನವಾದ ಮೂರನ್ನು ಡಾ. ಹೆರ್ಟೆಲ್‌ರವರೇ ಪ್ರಕಾಶಿಸಿದ್ದಾರೆ. ಅವು ಯಾವ ವೆಂದರೆ—(೧) ದಾಕ್ಷಿಣಾತ್ಯ ಪಂಚತಂತ್ರ (೨) ಕಾಶ್ಮೀರ ಪಂಚತಂತ್ರ (ಇದಕ್ಕೆ ತಂತ್ರಾಖ್ಯಾಯಿಕಾ ಎಂದು ಹೆಸರು (೩) ಲಾಟೀಯ ಪಂಚತಂತ್ರ (ಬೃಹತ್)—ಇದು ಬೊಂಬಾಯಿ ಸಂಸ್ಕೃತ ಗ್ರಂಥಾವಳಿಯಲ್ಲಿ (Bombay Sanskrit Series) ಡಾ. ಕೀಲ್‌ಹೋರನ್ ಮತ್ತು ಡಾ. ಬೂಲರ್ ಅದರಿಂದ ಪ್ರಕಾಶಿತವಾದ ಪಂಚತಂತ್ರದ (ಈ ಪಂಚತಂತ್ರ ಪಾಠಕ್ಕೆ ಡಾ. ಹೆರ್ಟೆಲ್‌ರವರು Textus Simplicion ಎಂದು ಹೆಸರಿಟ್ಟಿರುವರು. ಇದು ಸೌರಾಷ್ಟ್ರ, ಲಾಟೀಯ ದೇಶಗಳಲ್ಲಿ ದೊರೆಯುವ ಪಂಚತಂತ್ರ ಪಾಠವಾದ್ದರಿಂದ ನಾವು ಇದನ್ನು ಲಾಟೀಯ ಪಂಚತಂತ್ರವೆಂದು ಹೇಳುತ್ತೇವೆ.) ಬೃಹತ್‌ಪಾಠ. ಈ ಪಂಚತಂತ್ರಪಾಠವು ಪೂರ್ಣಭದ್ರನೆಂಬ ಜೈನಗುರುವಿನಿಂದ ಪರಿಷ್ಕರಿಸಲ್ಪಟ್ಟಿದ್ದರಿಂದ ಇದಕ್ಕೆ ಪೂರ್ಣಭದ್ರನ ‘ಪಂಚತಂತ್ರ’ ಎಂಬ ಹೆಸರನ್ನು ಡಾ. ಹೆರ್ಟೆಲ್‌ರವರು ಇಟ್ಟಿರುವರು.

ಮೇಲೆ ಹೇಳಿದ ಪೂರ್ಣಭದ್ರನು ಲಾಟೀಯ ಪಂಚತಂತ್ರದ ಬೃಹತ್‌ಪಾಠವನ್ನು ಪರಿಷ್ಕರಿಸಿದನಂತರ ಅದನ್ನು ಕ್ರಿ. ಶ. ೧೧೯೯ ನೇ ಫೆಬ್ರುವರಿ ೧೪ ನೇ ತಾರೀಖು ಭಾನುವಾರದ ದಿವಸ ಪ್ರತಿಷ್ಠೆ ಮಾಡಿದನು. ಕ್ರಿ. ಶ. ೧೨೦೦ ನೇ ವರ್ಷವನ್ನು ನಾವು ಅವಧಿಯನ್ನಾಗಿ ಮಾಡಿಕೊಂಡು ಅಲ್ಲಿಂದ ಈಚೆಗೆ ಹುಟ್ಟಿದ ಪಂಚತಂತ್ರ ಪಾಠಭೇದ ಗಳನ್ನು ಅರ್ವಾಚಿನವೆಂದೂ, ಅದಕ್ಕಿಂತ ಹಿಂದೆ ಹುಟ್ಟಿದ ಪಂಚತಂತ್ರಪಾಠಭೇದ ಗಳನ್ನು ಪ್ರಾಚೀನವೆಂದೂ ವ್ಯವಹರಿಸುವೆವಾದರೆ ಈ ವ್ಯವಹಾರಕ್ಕನುಸಾರವಾಗಿ ನಮಗೆ ತಿಳಿದಿರುವ ಪ್ರಾಚೀನ ಪಂಚತಂತ್ರ ಪಾಠಭೇದಗಳಲ್ಲಿ ವಿಷ್ಣುಶರ್ಮನ ಹೆಸರು (೧) ಕಾಶ್ಮೀರ ಪಂಚತಂತ್ರ (೨) ಲಾಟೀಯ ಪಂಚತಂತ್ರ (೩) ಲಾಟೀಯ ಪಂಚತಂತ್ರದ ಬೃಹತ್ಪಾಠ (೪) ದಾಕ್ಷಿಣಾತ್ಯ ಪಂಚತಂತ್ರ (೫) ದಾಕ್ಷಿಣಾತ್ಯ ಪಂಚತಂತ್ರದ ಒಂದು ಬೃಹತ್ಪಾಠ (ಈ ಪಂಚತಂತ್ರ ಪ್ರಭೇದದಲ್ಲಿ ರುವ ವಿಷಯಗಳನ್ನು ಡಾ. ಹೆರ್ಟೆಲ್‌ರವರು ZDMG ಪತ್ರಿಕೆಯ ೬೦, ೬೧ ನೇ ಸಂಪುಟಗಳಲ್ಲಿ ಸಂಗ್ರಹವಾಗಿ ವರ್ಣಿಸಿದ್ದಾರೆ) (೬) ಕಲಿಲಪದಮ್ನ ಎಂಬ ಹೆಸರಿನಿಂದ ಅರಬ್ಬೀಭಾಷೆಯಲ್ಲಿ ಪ್ರಸಿದ್ಧವಾಗಿರುವ ಪಂಚತಂತ್ರ ಪ್ರಭೇದಗಳಿಗೆ ಮೂಲವಾದ ಪಾಲವಿ ಪಂಚತಂತ್ರ—ಈ ಆರು ಪಂಚತಂತ್ರಗಳಲ್ಲಿ ಹೇಳಲ್ಪಟ್ಟಿರುವದು. ವಸು ಭಾಗನ ಹೆಸರನ್ನು ಹೇಳುವ ಪಂಚತಂತ್ರ ಪ್ರಭೇದಗಳು ಎರಡು ಮಾತ್ರ-(೧) ದುರ್ಗ ಸಿಂಹನ ಪಂಚತಂತ್ರ (೨) ಯವದ್ವೀಪದಲ್ಲಿನ ಭಾಷೆಯಲ್ಲಿ ಸುಮಾರು ಕ್ರಿ.ಶ. ೧೨ನೇ ಶತ ಮಾನದಲ್ಲಿ ಬರೆಯಲ್ಪಟ್ಟ ತಂತ್ರಿ, ತಂತ್ರಿ ಕಾಮಂದಕ-ತಂತ್ರವಾಕ್ಯ ಅಥವಾ ತಂತ್ರಿಚರಿತ ಎಂಬ ಹೆಸರಿನ ಕಥಾಪುಸ್ತಕ. ಈ ತಂತ್ರಿ ಗ್ರಂಥವು ಪಂಚತಂತ್ರದ ಭಾಷಾಂತರವಲ್ಲ. ಆದರೆ ಇದರಲ್ಲಿರುವ ಕಥೆಗಳೆಲ್ಲವೂ ಪಂಚತಂತ್ರದಲ್ಲಿನ ಕಥೆಗಳೇಯೆ. ಈ ಗ್ರಂಥವು ಮೂರು ವಿಧವಾಗಿರುವುದು-(೧) ಗದ್ಯಮಯ (೨) ಕದಿರಿ ಛಂದಸ್ಸಿನಲ್ಲಿ ಬರೆದದ್ದು

(೩) ಡೆಮುಂಗ್ ಛಂದಸ್ಸಿನಲ್ಲಿ ಬರೆದದ್ದು. ವಸುಭಾಗನು ಗ್ರಂಥದ ಕರ್ತೃವೆಂದು ೩ನೇ ವಿಧದ ತಂತ್ರಿಯಲ್ಲಿರುವ 'ಒನ್ಯಂಗ್ ಚರಿತ ಶ್ಲೋಕ ವೆಕಾಸ್ ಇಂಗ್ ತಂತ್ರಿ, ಪಕ್ರಿಯಾಶ್ರೀ ಬಸುಭಾಗ ನಂದಕಕರಣಾರನಿಪುನ್' ಎಂಬ ಪದ್ಯದಲ್ಲಿ ಹೇಳಲ್ಪಟ್ಟಿರುವದು. ಇತರ ಎರಡು ವಿಧವಾದ ತಂತ್ರಿ ಗ್ರಂಥದಲ್ಲಿ ವಸುಭಾಗನ ಹೆಸರು ಸುಮಾರು ೨೦ಸಲ ಹೇಳಲ್ಪಟ್ಟಿದ್ದರೂ ಅವನು ಆ ಗ್ರಂಥದ ಕರ್ತೃವೆಂದು ಆ ಪ್ರಕರಣಗಳಿಂದ ಹೊರಪಡುವದಿಲ್ಲ.*

ಮೇಲ್ಕಂಡ ಗ್ರಂಥದಲ್ಲಿ ಡಾ. ಹೋಯ್ಕ್ಯಾಸ್ ಅವರು ತಂತ್ರಿ ಗ್ರಂಥದಲ್ಲಿನ ಕಥೆಗಳ ಸಾರವನ್ನೂ, ಈ ತಂತ್ರಿಯಂತಿರುವ ಲೆಯಾಸ್ ಸೀಮೆಯಲ್ಲಿ ದೊರೆಯುವ 'ಮುನ್ಲಾ ತಂತ್ರೈ' ಎಂಬ ಗ್ರಂಥದಲ್ಲಿನ ಕಥೆಗಳ ಸಾರವನ್ನೂ ಕೊಟ್ಟಿರುತ್ತಾರೆ. ಮೇಲ್ಕಂಡ ಈ ಎರಡು ಗ್ರಂಥಗಳೂ ದುರ್ಗಸಿಂಹನ ಪಂಚತಂತ್ರದಂತೆ ವಸುಭಾಗ ವಿರಚಿತವಾದ ಒಂದು ಸಂಸ್ಕೃತ ಮೂಲಗ್ರಂಥದ ಆಧಾರದ ಮೇಲೆ ಬರೆಯಲ್ಪಟ್ಟಿರುವದರಿಂದ ಈ ಮೂರು ಗ್ರಂಥಗಳಿಗಿರುವ ಸಾಮ್ಯವೂ ವಿಷ್ಣುಶರ್ಮರಚಿತವಾದ ಗ್ರಂಥವೇ ಆಧಾರವಾಗಿರುವ ಮೇಲೆ ಹೇಳಿದ ಆರು ಪ್ರಾಚೀನ ಪಂಚತಂತ್ರ ಪ್ರಭೇದಗಳಿಗೂ ಈ ಮೂರು ಗ್ರಂಥಗಳಿಗೂ ಇರುವ ವ್ಯತ್ಯಾಸವೂ ಈ ಕೆಳಗೆ ಕೊಟ್ಟಿರುವ ಪಟ್ಟಿಕೆಯಿಂದ ಸ್ಪಷ್ಟವಾಗುವುದು.

[ಪಾಲವಿಯಲ್ಲಿ ಬರೆದ ಪಂಚತಂತ್ರವು ದೊರೆಯುವುದಿಲ್ಲ. ಈ ಪಂಚತಂತ್ರವು ಸಿರಿಯಾ ಭಾಷೆಯಲ್ಲಿಯೂ ಅರಬ್ಬೀಭಾಷೆಯಲ್ಲಿಯೂ ಪರಿವರ್ತಿಸಲ್ಪಟ್ಟಿತು. ಈ ಎರಡು ಪರಿವರ್ತನೆಗಳಿಗೂ ಪರಸ್ಪರ ವ್ಯತ್ಯಾಸವಿರುವದರಿಂದ ನಾನು ಪಟ್ಟಿಕೆಯಲ್ಲಿ ಅರಬ್ಬೀ ಪರಿವರ್ತನದಲ್ಲಿರುವದನ್ನು ಪ್ರ. ಫ್ರಾಂಕ್ಲಿನ್ ಎಡ್ಜರ್‌ಟನ್ ಅವರ 'ಪಂಚತಂತ್ರ ರಿಕಂಸ್ಟ್ರಕ್ಟೆಡ್' ಎಂಬ ಗ್ರಂಥದ 1. 190–191ರಲ್ಲಿರುವ ಪಟ್ಟಿಕೆಯನ್ನನುಸರಿಸಿ ಕೊಟ್ಟಿರುತ್ತೇನೆ. ಈ ಪಟ್ಟಿಕೆಯಲ್ಲಾದರೆ ಪ್ರ. ಎಡ್ಜರ್‌ಟನ್ ಅವರು ಅರಬ್ಬೀ ಪಂಚತಂತ್ರದಲ್ಲಿರುವ ಕಥೆಗಳೆಲ್ಲವನ್ನೂ ತೋರಿಸಿಲ್ಲ. ಮೇಲ್ಕಂಡ ತಮ್ಮ ಗ್ರಂಥದಲ್ಲಿ ತಾವು ಮೂಲ ಪಂಚತಂತ್ರದ ಕಥೆಗಳು ಯಾವುವೆಂದು ಆರಿಸಿರುವರೋ ಆ ಕಥೆಗಳಿಗೆ ಸಂವಾದಿಯಾದ ಇತರ ಪಂಚತಂತ್ರಗಳ ಕಥೆಗಳನ್ನು ಮಾತ್ರ ತೋರಿಸಿರುತ್ತಾರೆ.]

---

* ಡಾ. ಸಿ. ಹೋಯ್ಕ್ಯಾಸ್‌ರವರು ಬರೆದಿರುವ Tantri, de Middel-Javaansche Paṇcatantra bewerking ಎಂಬ ಗ್ರಂಥದ ಎರಡನೇ ಅಧ್ಯಾಯವನ್ನು ನೋಡಿ.

| ದುರ್ಗಸಿಂಹನ ಪಂಚತಂತ್ರ | ತಂತ್ರಿ | ತಂತ್ರೈ | ದಾಕ್ಷಿಣಾತ್ಯ ಪಂ. | ದಾಕ್ಷಿಣಾತ್ಯ ಪಂ. ಬೃಹತ್ | ಲಾಟೀಯ ಪಂ. | ಲಾಟೀಯ ಪಂ. ಬೃಹತ್ | ಕಾಶ್ಮೀರ ಪಂ. | ಪಾಲವಿ ಪಂ. |
|---|---|---|---|---|---|---|---|---|
| ಕಥಾಮುಖ | | | ಕಥಾ ಮುಖ | ಕಥಾ ಮುಖ | ಕಥಾ ಮುಖ | ಕಥಾ ಮುಖ | ಕಥಾ ಮುಖ | |
| ತಂತ್ರ ೧. ಸಿಂಹವೂ ಎತ್ತೂ | | I ಮುಖ್ಯ ಕಥೆ | ತಂತ್ರ ೧ | ತಂತ್ರ ೧ | ತಂತ್ರ ೧ | ತಂತ್ರ ೧ | ತಂತ್ರ ೧ | ತಂತ್ರ ೧ |
| ೧. ೧. ಕಚದ್ರುಮನ ಕಥೆ | ೨ ಕ | ೧.೨ ಕ | | | | | | |
| ೧. ೨. ಕೀಲನುರ್ಚಿದ ಕಪಿ | | ೨. ೬ | ೧. ೧ | ೧. ೨ | ೧. ೧ | ೧. ೧ | ೧. ೧ | ೧. ೧ |
| ೧. ೩. ನರಿಯೂ ಮಾತನಾಡುವ ಗುಹೆಯೂ | | | | | ೩. ೪ | ೩. ೧೫ | ೩. ೧೧ | |
| ೧. ೪. ನರಿಯೂ ತಮಟೆಯೂ | ೧ | ೧. ೧. | ೧. ೨ | ೧. ೧೫ | ೧. ೨ | ೧. ೨ | ೧. ೨ | ೧. ೨ |
| ೧. ೫. ಸಂಜೀವಕ ಪಿಂಗಳಕರ ಹಿಂದಿನ ಜನ್ಮದ ಕಥೆ | | | | | | | | |
| ೧. ೬. ವರರುಚಿಯೂ ಬ್ರಹ್ಮರಾಕ್ಷಸನೂ | | | | | | | | |
| ೧. ೭. ವ್ಯಾಸನೂ ವಾಲ್ಮೀಕಿಯೂ | | | | | | | | |
| ೧. ೮. ಆಷಾಢಭೂತಿಯ ಕಥೆ—ಕ, ಖ, ಗ | | ೨. ೧೪ ಗ, ಚ. | ೧. ೩ ಕ,ಖ,ಗ | ೧. ೧೭ ಕ, ಖ, ಗ | ೧. ೪ ಕ,ಖ,ಗ | ೧. ೪ ಕ, ಖ, ಗ | ೧. ೩ ಕ,ಖ,ಗ | ೧. ೩ ಕ,ಖ,ಗ |

| ದುರ್ಗಸಿಂಹನ ಪಂಚತಂತ್ರ | ತಂತ್ರಿ | ತಂತ್ರೈ | ದಾಕ್ಷಿಣಾತ್ಯ ಪಂ. | ದಾಕ್ಷಿಣಾತ್ಯ ಪಂ. ಬೃಹತ್ | ಲಾಟೀಯ ಪಂ. | ಲಾಟೀಯ ಪಂ. ಬೃಹತ್ | ಕಾಶ್ಮೀರ ಪಂ. | ಪಾಲವಿ ಪಂ. |
|---|---|---|---|---|---|---|---|---|
| ೧. ೧೯. ಕಾಗೆಯೂ ಕೃಷ್ಣಸರ್ಪವೂ | ೨೨ | | ೧. ೪ | ೧. ೧೮ | ೧. ೬ | ೧. ೫ | ೧. ೪ | ೧. ೪ |
| ೧. ೧೦. ಬಕನೂ ಏಡಿಯೂ | ೫ | ೧. ೫ | ೧. ೫ | ೧. ೧೯ | ೧. ೭ | ೧. ೬ | ೧. ೫ | ೧. ೫ |
| ೧. ೧೧. ಸಿಂಹವೂ ಮೊಲವೂ | | | ೧. ೬ | ೧. ೨೧ | ೧. ೮ | ೧. ೭ | ೧. ೬ | ೧. ೬ |
| ೧. ೧೨. ಕಪಿಯೂ ಕೃತಘ್ನನಾದ ಬೇಡನೂ | ೭ | ೧. ೮ | | | | | | |
| ೧. ೧೩. ಶಿವಭೂತಿಯ ಕಥೆ (ಕೃತಜ್ಞರಾದ ಪ್ರಾಣಿಗಳು. ಕೃತಘ್ನನಾದ ಮನುಷ್ಯ) | ೮ | ೧. ೯ | | ೧. ೩೯ | | ೧. ೯ | | |
| ೧. ೧೪. ಎರಡು ಗಿಣಿಗಳು | ೨೩ | ೧. ೨೩ | | | | ೧. ೨೯ | | |
| ೧. ೧೫. ತಿಗುಣೆ ಮತ್ತು ಕೂಱೆ | ೪ | ೧. ೪ | ೧. ೭ | ೧. ೨೦ | ೧. ೯ | ೧. ೧೦ | ೧. ೭ | ೧. ೮ |
| ೧. ೧೬. ಕೃಷ್ಣೋರಗನನ್ನೊಳಕೊಂಡ ಒಳ್ಳೆಗಳ ಕಥೆ | | | | | | | | |
| ೧. ೧೭. ಹಂಸನೂ ಗೂಬೆಯೂ | | | | | | ೧. ೧೨ | | |

| ದುರ್ಗಸಿಂಹನ ಪಂಚತಂತ್ರ | ತಂತ್ರಿ | ತಂತ್ರೈ | ದಾಕ್ಷಿಣಾತ್ಯ ಪಂ. | ದಾಕ್ಷಿಣಾತ್ಯ ಪಂ. ಬೃಹತ್ | ಲಾಟೀಯ ಪಂ. | ಲಾಟೀಯ ಪಂ. ಬೃಹತ್ | ಕಾಶ್ಮೀರ ಪಂ. | ಪಾಲವಿ ಪಂ. |
|---|---|---|---|---|---|---|---|---|
| ೧. ೧೮. ಒಂಟೆಯೂ ಸಿಂಹನ ಪರಿವಾರವೂ | ೮ | ೧. ೬ | ೧ ೮ | ೧. ೪೫ | ೧. ೧೧ | ೧. ೧೩ | ೧. ೯ | ೧. ೯ |
| ೧. ೧೯. ನಾಳೀಜಂಘನೂ ಗೌತಮಋಷಿಯೂ | | | | | | | | |
| ೧. ೨೦. ಬ್ರಾಹ್ಮಣನೂ ಧೂರ್ತರೂ | | | ೩. ೫ | ೩. ೧೧ | ೩. ೩ | ೩. ೪ | ೩. ೫ | ೪. ೪ |
| ೧. ೨೧. ಟಿಟ್ಟಿಭವೂ ಸಮುದ್ರನೂ | ೧೮ | ೧. ೭ | ೧. ೯ | ೧. ೪೬ | ೧. ೧೨ | ೧. ೧೫ | ೧. ೧೦ | ೧. ೧೦ |
| ೧. ೨೨. ಹಂಸಗಳೂ ಆಮೆಯೂ | ೩ | ೧. ೩ | ೧. ೧೦ | ೧. ೪೭ | ೧. ೧೩ | ೧. ೧೬ | ೧. ೧೧ | ೧. ೧೧ |
| ೧. ೨೩. ದೇವದತ್ತನೂ ಕುಂಟಣಿಯೂ | | | | | | | | |
| ೧. ೨೪. ಅತ್ತೆಯೂ ಸೊಸೆಯೂ | | | | | | | | |
| ೧. ೨೫. ಮೂರು ಮತ್ಸ್ಯಗಳು | ೨೩ | ೧. ೧೯ | ೧. ೧೧ | ೧. ೪೮ | ೧. ೧೪ | ೧. ೧೭ | ೧. ೧೨ | ೧. ೭ |
| ೧. ೨೬. ರಾವಣನೂ ವಿಭೀಷಣನೂ | | ೨. ೧೦ | | | | | | |
| ೧. ೨೭. ದುಷ್ಟಬುದ್ಧಿಯೂ ಧರ್ಮಬುದ್ಧಿಯೂ | | | ೧. ೧೪ | ೧. ೫೧ | ೧. ೧೯ | ೧. ೨೬ | ೧. ೧೫ | ೧. ೧೩ |

| ದುರ್ಗಸಿಂಹನ ಪಂಚತಂತ್ರ | ತಂತ್ರ | ತಂತ್ರೈ | ದಾಕ್ಷಿಣಾತ್ಯ ಪಂ. | ದಾಕ್ಷಿಣಾತ್ಯ ಪಂ. ಬೃಹತ್ | ಲಾಟೇಯ ಪಂ. | ಲಾಟೇಯ ಪಂ. ಬೃಹತ್ | ಕಾಶ್ಮೀರ ಪಂ. | ಪಾಲವಿ ಪಂ. |
|---|---|---|---|---|---|---|---|---|
| ೧. ೨೮. ಬಕನ ತತ್ತಿಗಳೂ ಸರ್ಪವೂ ಮುಂಗಿಸಿಯೂ | | | ೧. ೧೫ | ೧. ೫೨ | ೧. ೨೦ | ೧. ೨೭ | ೧. ೧೬ | ೧. ೧೪ |
| ೧. ೨೯. ತಗರು ಮತ್ತು ತೊತ್ತಿನ ಕಲಹದಿಂದ ಕಪಿಗಳು ಕೆಟ್ಟ ಕಥೆ | | ೨. ೧ ಕ | | | ೫. ೧೦ ಕ | | | |
| ೨ ನೇ ತಂತ್ರ | | | ೫ | ೫ | ೫ | ೫ | ೫ | ೬ |
| ಬ್ರಾಹ್ಮಣನು ಮುಂಗಿಸಿಯನ್ನು ಕೊಂದ ಕಥೆ | | ೪. ೧೪ ಕ | ಮುಖ್ಯ ಕಥೆ | ಮುಖ್ಯ ಕಥೆ | ೫. ೧ | ೫. ೧ | ಮುಖ್ಯ ಕಥೆ | ಮುಖ್ಯ ಕಥೆ |
| ೨. ೧. ಸೋಮಶರ್ಮನ ಕಥೆ | | | ೫. ೧ | | ೫. ೯ | ೫. ೭ | ೫. ೧ | ೬. ೧ |
| ೨. ೨. ಭಿಕ್ಷುಗಳನ್ನು ಕೊಂದ ವರ್ತಕನ ಕಥೆ | | | ೫. ೨ | ೫. ೩ | ಮುಖ್ಯ ಕಥೆ | ಮುಖ್ಯ ಕಥೆ | ೫. ೨ | |
| ೨. ೩. ಆಜಿತನ ಕಥೆ | | ೪. ೧೪ ಖ | | | | | | |
| ೨. ೪. ವೃದ್ಧಗೌತಮಿಯ ಕಥೆ | | | | | | | | |

| ದುರ್ಗಸಿಂಹನ ಪಂಚತಂತ್ರ | ತಂತ್ರಿ | ತಂತ್ರೈ | ದಾಕ್ಷಿಣಾತ್ಯ ಪಂ. | ದಾಕ್ಷಿಣಾತ್ಯ ಪಂ. ಬೃಹತ್ | ಲಾಟೀಯ ಪಂ. | ಲಾಟೀಯ ಪಂ. ಬೃಹತ್ | ಕಾಶ್ಮೀರ ಪಂ. | ಪಾಲವಿ ಪಂ. |
|---|---|---|---|---|---|---|---|---|
| ತಂತ್ರ ೩ | | | ೩ | ೩ | ೩ | ೩ | ೩ | ೪ |
| ಕಾಗೆಗಳೂ ಗೂಬೆಗಳೂ | | | ಮುಖ್ಯ ಕಥೆ | ಮುಖ್ಯಕಥೆ | | ಮುಖ್ಯ ಕಥೆ | ಮುಖ್ಯ ಕಥೆ | |
| ೩. ೧. ಪಕ್ಷಿಗಳು ರಾಜನನ್ನು ವರಿಸುವವು | | IV ಮುಖ್ಯ ಕಥೆ | ೩. ೨ | | ಮುಖ್ಯ ಕಥೆ | ೩. ೧ | ೩. ೨ | ೪. ೧ |
| ೩. ೨. ಕಪಿಂಜಲನೂ, ಮೊಲವೂ, ಹುಲಿಯೂ | | ೪. ೨ | ೩. ೪ | ೩. ೮ | ೩. ೨ | ೩. ೩ | ೩. ೪ | ೪. ೩ |
| ೩. ೩. ನಾರಾಯಣಭಟ್ಟನ ಕಥೆ—ಕ, ಖ, ಗ, ಘ | | ೨.೧೪ ಕ<br>,, ಖ<br>,, ಘ | | | | | | |
| ೩. ೪. ಶಿಶುಪಾಲನ ಕಥೆ | | | | | | | | |
| ೩. ೫. ಬುದ್ಧಿಹೇಳಿದ ಪಕ್ಷಿಯನ್ನು ಕಪಿಯು ಕೊಂದ ಕಥೆ | | | ೧. ೧೩ | | ೧. ೧೬ | ೧. ೨೫ | ೧. ೧೪ | ೧. ೧೨ |
| ೩. ೬. ಕಪಿಯೂ ಪಕ್ಷಿಯ ಗೂಡೂ | ೧ ೨ | ೧. ೧೧ | | | ೪. ೧೨ | ೪. ೧೯ | | |
| ೩. ೭. ಆತ್ಮತ್ಯಾಗವನ್ನು ಮಾಡಿದ ಕಪೋತದ ಕಥೆ | | | | | | ೧. ೮ | | |

| ದುರ್ಗಸಿಂಹನ ಪಂಚತಂತ್ರ | ತಂತ್ರಿ | ತಂತ್ರೈ | ದಾಕ್ಷಿಣಾತ್ಯ ಪಂ. | ದಾಕ್ಷಿಣಾತ್ಯ ಪಂ. ಬೃಹತ್ | ಲಾಟೀಯ ಪಂ. | ಲಾಟೀಯ ಪಂ. ಬೃಹತ್ | ಕಾಶ್ಮೀರ ಪಂ. | ಪಾಲವಿ ಪಂ. |
|---|---|---|---|---|---|---|---|---|
| ೩. ೮. ಬ್ರಾಹ್ಮಣನೂ, ಕಳ್ಳನೂ, ಬ್ರಹ್ಮರಾಕ್ಷಸನೂ | | | ೩. ೭ | ೩. ೧೫ | | ೩. ೧೦ | ೩. ೬ | ೪. ೬ |
| ೩. ೯. ತುಂಗಭುಜನ ಕಥೆ | | | | | ೫. ೪ | | | |
| ೩. ೧೦. ಸತ್ತ ಹುಲಿಯನ್ನು ಬದುಕಿಸಿದ ಗಾರುಡಿಗನ ಕಥೆ | ೧೦ | ೧. ೧೦ | | | | | | |
| ೩. ೧೧. ಮೂಷಿಕ ಕನ್ಯೆಯ ಕಥೆ | | | ೩. ೯ | ೩. ೧೭ | ೪. ೮ | ೩. ೧೩ | ೩. ೯ | ೪. ೮ |
| ೩. ೧೨. ದೂರ್ವಾಸನೂ ನಾಯಿಯೂ | | ೪. ೧೩ | | | | | | |
| ೩. ೧೩. ಸರ್ಪವು ಕಪ್ಪೆಗಳನ್ನು ಹೊತ್ತ ಕಥೆ | | ೪. ೧೫ | ೩. ೧೦ | ೩. ೧೮ | ೩. ೯ | ೩. ೧೬ | ೩. ೧೦ | ೪. ೯ |
| ೩. ೧೪. ಘೃತಾಂಧನಾದ ಬ್ರಾಹ್ಮಣನ ಕಥೆ | | | | | | ೩. ೧೭ | | |

| ದುರ್ಗಸಿಂಹನ ಪಂಚತಂತ್ರ | ತಂತ್ರಿ | ತಂತ್ರೈ | ದಾಕ್ಷಿಣಾತ್ಯ ಪಂ. | ದಾಕ್ಷಿಣಾತ್ಯ ಪಂ. ಬೃಹತ್ | ಲಾಟೀಯ ಪಂ. | ಲಾಟೀಯ ಪಂ. ಬೃಹತ್ | ಕಾಶ್ಮೀರ ಪಂ. | ಪಾಲವಿ ಪಂ. |
|---|---|---|---|---|---|---|---|---|
| ತಂತ್ರ ೪ | | | ೪ | ೪ | ೪ | ೪ | ೪ | ೫ |
| ಮೊಸಳೆಯೂ ಕಪಿಯೂ | | ೪. ೧೧ | ಮುಖ್ಯ ಕಥೆ | ಮುಖ್ಯ ಕಥೆ | ಮುಖ್ಯ ಕಥೆ | ಮುಖ್ಯ ಕಥೆ | ಮುಖ್ಯ ಕಥೆ | ಮುಖ್ಯ ಕಥೆ |
| ೪. ೧. ಬೆಳ್ಗತ್ತಿಯ ಕಥೆ | | ೪. ೧೦ | ೪. ೧ | ೪. ೩ | ೪. ೧ | ೪. ೨ | ೪. ೨ | ೫. ೧ |
| ತಂತ್ರ ೫ | | | ೨ | ೨ | ೨ | ೨ | ೨ | ೩ |
| ಇಲಿ, ಕಾಗೆ, ಆಮೆ ಮತ್ತು ಜಿಂಕೆಗಳ ಕಥೆ | ೨೫ | | ಮುಖ್ಯ ಕಥೆ | ಮುಖ್ಯ ಕಥೆ | ಮುಖ್ಯ ಕಥೆ | ಮುಖ್ಯ ಕಥೆ | ಮುಖ್ಯ ಕಥೆ | ಮುಖ್ಯ ಕಥೆ |
| ೫. ೧. ವೃದ್ಧಪಕ್ಷಿಯು ಉಪದೇಶದಿಂದ ಪಕ್ಷಿಗಳನ್ನು ರಕ್ಷಿಸುವದು | | | ೨. ೧ | ೨. ೧ | ೨. ೧ | ೧. ೧೯ | ೩. ೧೧ | |
| ೫. ೨. ಇಲಿಗಳು ಆನೆಯ ಬಂಧವನ್ನು ಬಿಡಿಸಿದ ಕಥೆ | | ೪. ೧೬ | | ೧. ೧೦ | | ೨. ೮ | | |
| ೫. ೩. ಬ್ರಾಹ್ಮಣನೂ, ಏಡಿಯೂ, ಕಾಗೆಯೂ | ೧೧ | | | ೧. ೯ | ೫. ೧೫ | | | |
| ೫. ೪. ಇಬ್ಬರು ಗೊರವರ ಕಥೆ | | | ೨. ೧ | ೨. ೧ | ೨. ೧ | ೨. ೧ | ೨. ೧ | ೩. ೧ |
| ೫. ೫. ಅತಿ ಲೋಭಿಯಾದ ನರಿಯ ಕಥೆ | | ೨. ೪ | ೧. ೩ | ೨. ೩ | ೨. ೩ | ೨. ೪ | ೨. ೩ | ೩. ೩ |
| ೫. ೬. ಕಪ್ಪೆಯ ಕಥೆ | | | | | | | | |

೧೪ನೇ ಕಥೆಯನ್ನು ಮೂರುಕಥೆಗಳೆಂದೂ ೩,೩ನ್ನು ನಾಲ್ಕು ಕಥೆಗಳೆಂದೂ ನಾವು ಎಣಿಸಿದರೆ ಮೇಲೆ ಕೊಟ್ಟಿರುವ ಪಟ್ಟಿಕೆಯಲ್ಲಿರುವ ಕಥೆಗಳೂ ಕಥಾ ಮುಖವೂ ಐದು ತಂತ್ರಗಳ ಮುಖ್ಯಕಥೆಗಳೂ ಸೇರಿ ದುರ್ಗಸಿಂಹನ ಪಂಚತಂತ್ರದಲ್ಲಿ ಒಟ್ಟು ೬೫ ಕಥೆಗಳಿರವು. ಈ ಕಥೆಗಳನ್ನು ನಾವು ಮೂರು ವರ್ಗಗಳಲ್ಲಿ ವಿಭಾಗಿಸಬಹುದು. (೧) ದುರ್ಗಸಿಂಹನ ಪಂಚತಂತ್ರದಲ್ಲಿ ಮಾತ್ರ ದೊರೆಯುವುವಂಥವು; ಎಂದರೆ, ಮೇಲೆ ಹೇಳಿದ ಇತರ ಯಾವ ಪಂಚತಂತ್ರದಲ್ಲಿಯೂ ದೊರೆಯದ ಕಥೆಗಳು (೨) ದುರ್ಗಸಿಂಹನ ಪಂಚತಂತ್ರದಲ್ಲಿಯೂ ಮತ್ತು ವಿಷ್ಣುಶರ್ಮನ ಹೆಸರನ್ನು ಹೇಳುವ ಮೇಲೆ ಹೇಳಿದ ೬ತಂತ್ರಗಳಲ್ಲಿ ಒಂದರಲ್ಲಿಯಾದರೂ ದೊರೆಯುವ ಕಥೆಗಳು (೩) ಉಳಿದ ಕಥೆಗಳು, ಎಂದರೆ ದುರ್ಗಸಿಂಹನ ಪಂಚತಂತ್ರದಲ್ಲಿಯೂ ತಂತ್ರಿ ಅಥವಾ ಮತ್ತು ತಂತ್ರೈಯಲ್ಲಿಯೂ ದೊರೆಯುವ ಕಥೆಗಳು. ಮೇಲ್ಕಂಡ ೬೫ ಕಥೆಗಳಲ್ಲಿ ಹನ್ನೊಂದು ಕಥೆಗಳು (೧. ೫,೬,೭,೧೬,೧೯,೨೩,೨೪,೨.೪; ೩.೩೧, ೨.೪, ೪, ೫.೬) ೧ನೆಯ ವರ್ಗಕ್ಕೂ, ೪೬ ಕಥೆಗಳೂ ಎರಡನೆಯ ವರ್ಗಕ್ಕೂ ಮತ್ತು ಎಂಟು ಕಥೆಗಳು (೧.೧,೧೨, ೨೬; ೨.೩; ೩.೩ ಕ, ಖ, ಘ, ೧೦) ಮೂರನೇ ವರ್ಗಕ್ಕೂ ಸೇರುವವು. ಈ ಎಂಟು ಕಥೆಗಳಲ್ಲಿಯೂ ಕೂಡ ಐದು ಕಥೆಗಳು ತಂತ್ರಿಯಲ್ಲಿಲ್ಲದೆ ತಂತ್ರೈಯಲ್ಲಿ ಮಾತ್ರ ದೊರೆಯುತ್ತವೆಂಬುದು ಗಮನಾರ್ಹವಾದ ವಿಷಯ.

**ಅ. ವೆಂಕಟಸುಬ್ಬಯ್ಯ**

# ಕೃತಿಚೌರ್ಯ

ಸಾಹಿತ್ಯಕ್ಷೇತ್ರದಲ್ಲಿ ಕೆಲಸಮಾಡಿ ಮನ್ನಣೆ ಪಡೆಯಬೇಕೆಂಬ ಆಸೆ ಕೆಲವರಿಗೆ ಜೀವನದಲ್ಲಿ ಬಹು ಮುಂಚೆಯೇ ಉಂಟಾಗುತ್ತದೆ. ಇಂತಹವರು ಕೇವಲ ಕೀರ್ತಿ ಕಾಮದಿಂದ ಮೋಹಿತರಾಗಿರುತ್ತಾರೆನ್ನುವುದು ಸರಿಯಲ್ಲ. ಅವರ ವಂಶಪಾರಂಪರ್ಯ ವಾಗಿ ಬಂದ ಕಾವ್ಯಾಸಕ್ತಿಯೋ, ವಿದ್ವತ್ಸಂಪ್ರದಾಯವೋ, ಸಂಸ್ಕೃತ ಆವರಣವೋ ಇಲ್ಲವೇ ಸ್ವಂತ ಅಧ್ಯಯನದಿಂದ ಉದ್ಭವಿಸಿದ ನೂತನಾನುಭವದ ಆಕರ್ಷಣೆಯೋ ಅಂತಹವರ ಮನಸ್ಸನ್ನು ಅಪಹರಿಸಿ ಅವರನ್ನು ಸಾಹಿತ್ಯಲೋಕದ ಪ್ರಜೆಗಳನ್ನಾಗಿ ಮಾಡಿಬಿಟ್ಟಿರುತ್ತದೆ. ಆ ಲೋಕದ ಪ್ರಜಾಧರ್ಮವನ್ನನುಸರಿಸಿ ತನ್ನ ಚೈತನ್ಯಸಾಕ್ಷಿ ಯಾಗಿ ಇತರರಿಗೆ ಸಂತೋಷದಾಯಕನಾಗಿ, ಸಹಾಯಕನಾಗಿ ಕಾರ್ಯನಿರ್ವಹಣೆ ಮಾಡುವುದು ಅಂತಹ ಒಬ್ಬ ವ್ಯಕ್ತಿಯ ಕರ್ತವ್ಯವಾಗುತ್ತದೆ. ಕಾವ್ಯರಚನೆ ಗ್ರಂಥ ರಚನೆ, ವಿಮರ್ಶೆ, ಲೇಖನ ಇವೇ ಮುಂತಾದುವು ಆ ಕರ್ತವ್ಯವು ಕಾರ್ಯೋನ್ಮುಖ ವಾಗುವ ಬೇರೆ ಬೇರೆ ಮಾರ್ಗಗಳು.

ಯುವಕನಾದವನ ಮೊತ್ತಮೊದಲ ಕಲಾಸೃಷ್ಟಿ ಅನ್ಯಸೃಷ್ಟಿಯಿಂದ ಪ್ರೇರಿತ ವಾಗಿರುವುದು ಆಶ್ಚರ್ಯವಲ್ಲ. ಅದು ಅವಮಾನಕರವೂ ಅಲ್ಲ. ಆದರೆ ಈ ಬಾಲಭಾಷೆ ಗಳನ್ನೇ ಉಪನಿಷದ್ವಾಕ್ಯಗಳೆಂದೂ, ಪ್ರತಿಭಾಜನ್ಯವಾದ ಅಮರಕೃತಿಗಳೆಂದೂ ಯಾರಾ ದರೂ ಡಂಗುರ ಹೊಡೆಯಲು ಮೊದಲು ಮಾಡಿದರೆ ಅದು ಎಲ್ಲರಿಗೂ ಅಪಚಾರ ವಾದೀತು. ಕಲೆಗಾರನ ದೃಷ್ಟಿಯಿಂದಲೂ ಇದು ಅನ್ಯಾಯವೇ ಆಗುತ್ತದೆ. ಅವನ ಚೈತನ್ಯದ ಪೂರ್ಣಾವಿಷ್ಕರಣಕ್ಕೆ ಇದೊಂದು ಬೃಹತ್ಪ್ರತಿ ಬಂಧಕವಾಗಿ ಬಿಡುತ್ತದೆ. ಯಾವ ಸಾಹಿತ್ಯದಲ್ಲಿಯೂ ಇದೇ ಸತ್ಯ. ವೃತ್ತಪತ್ರಿಕೆಗಳ ಜಾಹಿರಾತುಗಳಿಂದಲೂ, ಹತ್ತಿರದವರ ಕೈವಾರದಿಂದಲೂ ಬಂದ ಹೆಸರು ನಿಜವಾಗಿ ಬಾರದ ಹೆಸರು. ಕಲೆ ಗಾರನು ಈ ತೊಂದರೆಯನ್ನು ಬೇಗ ಅರಿತುಕೊಳ್ಳದೆ ಹೋದರೆ ಅವನಿಗೂ ಅವನ ಶಕ್ತಿಗೂ ಅಪಾಯಕರ.

ಈ ಮಾತುಗಳನ್ನು ಹೇಳಬೇಕಾದ ಅಗತ್ಯ ನಮ್ಮ ಸಾಹಿತ್ಯದಲ್ಲಿ ಇಂದು ಹೆಚ್ಚಾ ಗಿದೆ—ಎಂದಿಗಿಂತ. ಹಿರಿಯರಾಗಿರುವವರು ಕಿರಿಯರ ಸಾಹಿತ್ಯದಲ್ಲಿ ಬಹುಭಾಗ ಅನ್ಯಪ್ರೇರಿತವಲ್ಲದೆ, ಅಪಹರಣವೆಂದೂ ಆರೋಪಿಸುತ್ತಿದ್ದಾರೆ. ಇದರಲ್ಲಿ ಸ್ವಲ್ಪಮಟ್ಟಿಗೆ ಸತ್ಯಾಂಶವೂ ಇದೆ. ಇದು—ಈ ಪ್ರೇರಣೆ, ಅಪಹರಣ, ಪ್ರಭಾವ—ಇವುಗಳಲ್ಲಿ ಯಾವುದು ಎಷ್ಟು ಸರಿಯೆನ್ನುವುದು, ಯಾವಾಗ ಸರಿ ಎನ್ನುವುದು ವೀಕ್ಷಿಸುವವನ ದೃಷ್ಟಿಯನ್ನು ಅನುಸರಿಸುತ್ತದೆ.

ಅಪಹರಣವು ಅಪರಾಧವೇ ಸರಿ ಇದನ್ನು '**ಕೃತಿಚೌರ್ಯ**'ವೆಂಬ ಹೆಸರಿನಿಂದ ಕರೆಯುತ್ತಾರೆ—ಸಾಮಾನ್ಯವಾಗಿ. ಅಪಹರಣ, ಚೌರ್ಯಗಳಲ್ಲಿ ಒಬ್ಬರ ವಸ್ತುವನ್ನು

**ಅವರಲಿಲ್ಲದಂತೆ** ಎತ್ತಿಹಾಕಿ ದಕ್ಕಿಸಿಕೊಳ್ಳುವುದು ಸೂಚ್ಯವಾಗಿದೆ. ಕೃತಿಚೌರ್ಯದಲ್ಲಿ ಇದು ಸಾಧ್ಯವಿಲ್ಲ. ಆದರೂ ಇದು ಸಾಧುವಲ್ಲ. ಪ್ರಸಿದ್ಧ ಲೇಖಕರಿಂದ ಈ ರೀತಿ ವಸ್ತುವನ್ನು ಅಪಹರಿಸಿ, ಉಪಯೋಗಿಸಿ ದಕ್ಕಿಸಿಕೊಳ್ಳುವುದು ಈಗಂತೂ ಕನ್ನಡದಲ್ಲಿ ಸಾಧ್ಯವಿಲ್ಲ. ವಿದ್ವತ್ತಿನ ವೈಶಾಲ್ಯ ಹೆಚ್ಚಿದೆ. ಸಾಮಾನ್ಯರಲ್ಲಿಯೂ ಗ್ರಂಥಾವಲೋಕನಾ ಸಕ್ತಿ ಎಂದಿಗಿಂತಲೂ ಹೆಚ್ಚಾಗಿದೆ. ಪ್ರಪಂಚದ ವಿವಿಧರಾಷ್ಟ್ರಗಳ ಸಾಹಿತ್ಯಗಳ ಪರಿಚಯ ಹೆಚ್ಚುತ್ತಾ ಇದೆ. ಆದುದರಿಂದಲೇ ನಮ್ಮವರು ಬಹುಬೇಗ ಈ ಕೃತಿಚೌರ್ಯಗಳನ್ನು ಕಂಡುಹಿಡಿಯಲು ಸಾಧ್ಯವಾಗುತ್ತಾ ಇದೆ. ಒಬ್ಬರಿಗೆ ಸಿಕ್ಕದವನು ಮತ್ತೊಬ್ಬರಿಗೆ ಸಿಕ್ಕಿಬೀಳುತ್ತಾನೆ. ಈ ಕಾರಣದಿಂದ ಕೆಲವರು ಅಪ್ರಸಿದ್ಧ ಲೇಖಕರ ಕೃತಿಗಳ ಮರೆ ಹೋಗುತ್ತಾರೆ. ಇಂತಹವರು ಎರಡು ವಿಧವಾಗಿ ಪತನ ಹೊಂದುತ್ತಾರೆ. ಒಂದು ಕಳ್ಳತನವನ್ನು ಮುಚ್ಚಿಮರೆಮಾಡಬೇಕೆಂಬ ಮೋಸದೃಷ್ಟಿ. ಎರಡು ಅಲ್ಪದರಲ್ಲಿಯೇ ತೃಪ್ತಿಪಡುವ ಆಶಾರಾಹಿತ್ಯ. ಸಿಕ್ಕಿಬೀಳುವುದಕ್ಕಿಂತ ಹೆಚ್ಚು ಅವಮಾನಕರವೂ ವಿನಾಶಕರವೂ ಆದುದು ಈ ಮನೋಭಾವ.

ಮತ್ತೊಬ್ಬರಿಂದ ವಸ್ತುವಿನ, ಕತೆಯ ಅಪಹರಣದಲ್ಲಿ ಈ ಕಷ್ಟವಿದ್ದೇ ಇದೆ. ಆದರೆ ಲೇಖನಕಲೆಯನ್ನು ಅಭ್ಯಾಸಮಾಡುವವರು ಪೂರ್ವಕೃತಿರತ್ನಗಳ, ಕವಿ ಚಕ್ರ ವರ್ತಿಗಳ ಶೈಲಿ, ವರ್ಣನೆ, ಉಪಮಾನಾದಿ ಅಲಂಕಾರಗಳು ಮುಂತಾದುವುಗಳಿಗೆ ಮಾರುಹೋಗಿ ಅವನ್ನು ಉಪಯೋಗಿಸುತ್ತಾರೆ. ಇವುಗಳು ಕೃತಿಚೌರ್ಯಗಳಲ್ಲ.

ಅಷ್ಟೇಕೆ, ನಮ್ಮ ಕನ್ನಡಕವಿ ಚಕ್ರವರ್ತಿಗಳ ಗ್ರಂಥಗಳನ್ನು ಪರಿಶೀಲನೆಮಾಡಿದರೆ ಅವರಿಗಿಂತ ಹಿಂದೆ ಇದ್ದ ಸಂಸ್ಕೃತಕನ್ನಡಕವಿಗಳ ಸಂವಾದಿಯಾದ ವೃತ್ತಕಂದಗಳು ಅನೇಕವಾಗಿ ದೊರಕುತ್ತವೆ. ಇವೂ 'ಕೃತಿಚೌರ್ಯ'ವೆಂದರೆ ದೊಡ್ಡತಪ್ಪು. ಒಬ್ಬ ಕವಿಯಿಂದ ಆತನ ಪೂರ್ವಕವಿಗಳಿಗೆ ದೊರೆತ ಗೌರವದ ಲಾಂಛನಗಳು ಈ ವೃತ್ತ ಕಂದಗಳು. ಒಂದೆರಡು ದೃಷ್ಟಾಂತಗಳಿಂದ ಇವನ್ನು ಸಮರ್ಥಿಸಬಹುದು.

ಪಂಪನಿಗಿಂತ ಹಿರಿಯ ಕವಿಬೇಕೇ! ಆತನ ಗ್ರಂಥಗಳನ್ನು ಅಭ್ಯಾಸಮಾಡುವಾಗ ಅಲ್ಲಲ್ಲಿ ಭಾಸ, ಭವಭೂತಿ, ಕಾಳಿದಾಸ, ಮಾಘ, ಭಟ್ಟನಾರಾಯಣ, ಭಾರವಿ ಮುಂತಾದವರ ಗ್ರಂಥಗಳಿಂದ ಶ್ಲೋಕಗಳನ್ನು **ಅನಾಮತ್ತಾಗಿ** ಎತ್ತಿರುವುದು ಕಂಡು ಬರುತ್ತದೆ. ಪಂಪಭಾರತದಲ್ಲಿ ಸುಭದ್ರೆಯ ಸೌಂದರ್ಯವನ್ನು ವರ್ಣಿಸುವ

ಜಗಮಂ ಮಾಡಿದ ಪದ್ಮಜಂ ಪಡೆದನಿಲ್ಲೀ ಕನ್ನೆಯಂ ಮಾಡುವ
ಲ್ಲಿಗೆ ಚಂದ್ರಂ ಮಳಯಾನಿಳಂ ಮಳಯಜಂ ನೀರೇಜವಿಮ್ಮಾವು ಮ
ಲ್ಲಿಗೆಯೆಂದಿಂತಿವನಟ್ಟಿ ಬಿಂದಮರ್ದಿಸೊಳ್ ತಾನಟ್ಟಿಯಿಂ ತೊಯ್ದುದಮೆ
ಲ್ಲಗೆ ಸಂದಂಗಜನೆಂಬಜಂ ಪಡೆದನಂತಾಕಾಂತಿಯಿಂ ಕಾಂತೆಯಂ ಆ.೪.ಪ.೭೫.

ಎಂಬ ಮತ್ತೇಭವಿಕ್ರೀಡಿತ ವೃತ್ತವನ್ನು ಓದುವಾಗ, "**ಮಾಲತೀ ಮಾಧವ**"ದ ಮೊದಲ ಅಂಕದಲ್ಲಿ ಬರುವ :

ಸಾ ರಾಮಣೀಯಕನಿಧೇರಧಿದೇವತಾ ವಾ
ಸೌಂದರ್ಯಸಾರಸಮುದಾಯನಿಕೇತನಂ ವಾ
ತಸ್ಯಾಸ್ಸಖೀ ನಿಯತಮಿನ್ದುಕಲಾ ಮೃಣಾಲ
ಜ್ಯೋತ್ಸ್ನಾದಿಕಾರಣಮಭೂನ್ಮದನಶ್ಚ ವೇಧಾಃ ॥

ಎಂಬುದೂ, “**ವಿಕ್ರಮೋರ್ವಶೀಯ**”ದ ಮೊದಲನೆಯ ಅಂಕದಲ್ಲಿ ಬರುವ

ಅಸ್ಯಾಸ್ಸರ್ಗವಿಧೌ ಪ್ರಜಾಪತಿರಭೂಚ್ಚನ್ದ್ರೋನುಕಾನ್ತಿಪ್ರದಃ
ಶೃಂಗಾರೈಕರಸಃ ಸ್ವಯಂ ನು ಮದನೋ ಮಾಸೋನುಪುಷ್ಪಾಕರಃ
ವೇದಾಭ್ಯಾಸಜಡಃ ಕಥಂ ನು ವಿಷಯವ್ಯಾವೃತ್ತಕೌತೂಹಲೋ
ನಿರ್ಮಾತುಂ ಪ್ರಭವೇನ್ಮನೋಹರಮಿದಂ ರೂಪಂ ಪುರಾಣೋ ಮುನಿಃ

ಎಂಬುದೂ ಯಾರಿಗೆ ತಾನೇ ನೆನಪಿಗೆ ಬರುವುದಿಲ್ಲ ? ಆದರೂ ಈ ಎರಡು ಪದ್ಯಗಳ ಸಾರವನ್ನು ತೆಗೆದು ಅದನ್ನು ‘ಅಮೃತದಲ್ಲಿ ತೋಯಿಸಿ’ ಅವೆರಡಕ್ಕಿಂತಲೂ ನೂತನವೂ ಮನೋಹರವೂ ಆದ ಈ ವೃತ್ತರಚನೆಯಲ್ಲಿ ನಮಗೆ ಗೌರವವೇ ಉಂಟಾಗುತ್ತದೆ.

ಧರ್ಮರಾಜನನ್ನು ರಾಜಸೂಯಯಾಗಮಾಡುವಂತೆ ಪ್ರೇರಿಸಲು ಅವನ ಬಳಿಗೆ ನಾರದ ಮಹರ್ಷಿ ಬರುವುದನ್ನು ವರ್ಣಿಸುವ

ಬೆಳಗುಗಳೆಲ್ಲಮೊಂದುರುಳಿಯಾಗಿ ನಭಸ್ಥಳದಿಂದಮೀ ಮಹೀ
ತಳಕಿೞಿತರ್ಪುದೆಂದು ಮನುಜಾಕೃತಿಯೆಂದು ಮುನೀಂದ್ರನೆಂದು ಕ
ಣ್ಗೊಳಿಸೆ ಮುನೀಂದ್ರರೊಳ್ ಕಮಳಸಂಭವನಂದನನೆಂದು ನೋಟಕರ್
ತಳವೆಳಗಾಗೆ ಸಾರೆವರೆ ನೀರದಮಾರ್ಗದಿನಂದು ನಾರದಂ    ಆ. ೬. ಪ ೬.

ಎಂಬುದನ್ನು ಮನಸ್ಸಿನಲ್ಲಿಯೇ ಚಿತ್ರಿಸಿಕೊಳ್ಳುವಾಗ **ಮಾಘನ ‘ಶಿಶುಪಾಲವಧ’ದ**

ಚಯಸ್ತ್ವಿಷಾಮಿತ್ಯವಧಾರಿತಂ ಪುರಾ ತತಃ ಶರೀರೀತಿ ವಿಭಾವಿತಾಕೃತಿಃ
ವಪುರ್ವಿಭಕ್ತಾವಯವಂ ಪುಮಾನಿತಿ ಕ್ರಮಾದಮುಂ ನಾರದ ಇತ್ಯಬೋಧಿ ಸಃ

೧.೩

ಎಂಬ ಪದ್ಯದ ಚಿತ್ರವು ತಾನಾಗಿ ಕಣ್ಮುಂದೆ ಕಟ್ಟಿ ನಿಲ್ಲುತ್ತದೆ. ಇವೆರಡು ಪದ್ಯಗಳ ಸೊಗಸನ್ನೂ, ಸನ್ನಿವೇಶ ವರ್ಣನೆಯ ರಾಮಣೀಯಕತೆಯನ್ನೂ ಅರಿತು ಆಸ್ವಾದಿಸಿದ ಕುಮಾರವ್ಯಾಸನು ಇದೇ ಸಂದರ್ಭವನ್ನು ಚಿತ್ರಿಸುವಾಗ

ಲಲಿತ ತೇಜಃಪುಂಜಮಿಗೆ ಥಳ
ಥಳಿಸಿತತಿ ದೂರದಲಿ ಬೆಳಗಿನ
ಗೊಳಸನುಡಿದಂತಾದುದಾಗಲೆ ತೋಱಿತಾಕಾರ
ತಳಿತುದವಯವ ಶುದ್ಧವರ್ಣ
ಸ್ಥಳವು ನಿಮಿಷಕೆ ಮುನಿವರಾಕೃತಿ
ಹೊಳೆದುದಾಕ್ಷಣವೀತ ನಾರದನೆಂದುದಖಿಳಜನ

ಸಭಾಪರ್ವ ಸಂ. ೧ ಪ ೩೫

ಇಲ್ಲಿ ಯಾರು ಯಾರು ಕಳ್ಳರೆನ್ನೋಣ. ಹಾಗೆಯೇ ವಿಮರ್ಶಿಸಿದರೆ ಶಿಶುಪಾಲ ವಧೆಯ ಸನ್ನಿವೇಶವು ಈ ಮೂರರಲ್ಲಿಯೂ ಹೆಚ್ಚು ಕಡಿಮೆ ಒಂದೇ ರೀತಿಯಲ್ಲಿದೆ. ಎಷ್ಟೋ ಪದಗಳು ಎಲ್ಲರಲ್ಲಿಯೂ ಸಮನಾಗಿ ಕಾಣಬರುತ್ತವೆ.

ಹೀಗೆಯೇ ಪಂಪನು ಕರ್ಣಾರ್ಜುನರ ಕಾಳೆಗವನ್ನು ವರ್ಣಿಸುವಾಗ ರಚಿಸಿರುವ

ಮಹಾಪ್ರಳಯ ಭೈರವ ಕ್ಷುಭಿತ ಪುಷ್ಕಳಾವರ್ತಮಾ
ಮಹೋಗ್ರರಿಪು ಭೂಭುಜ ಶ್ರವಣ ಭೈರವಾಡಂಬರಂ
ಗುಹಾ ಗಹನ ಗಹ್ವರೋದರ ವಿಶೀರ್ಣಮಾದಂದದೇಂ
ಮುಹುಃ ಪ್ರಕಟಮಾದುದಾ ರವಿತನೂಭವ ಜ್ಯಾರವಂ

ಆ ೧೨, ಪ ೧೪೬

ಎಂಬ ಪದ್ಯವು '**ವೇಣೀಸಂಹಾರ**' ದ ಮೂರನೆಯ ಅಂಕದಲ್ಲಿ ಬರುವ

ಮಹಾಪ್ರಲಯ ಮಾರುತ ಕ್ಷುಭಿತ ಪುಷ್ಕಲಾವರ್ತಕ
ಪ್ರಚಂಡ ಘನಗರ್ಜಿತ ಪ್ರತಿರವಾನುಕಾರೀ ಮುಹುಃ
ರವ ಶ್ರವಣ ಭೈರವಃ ಸ್ಥಗಿತ ರೋದಸೀ ಕಂದರಃ
ಕುತೋದ್ಯ ಸಮರೋದಧೇರಯಮಭೂತ ಪೂರ್ವೋದಯಃ

ಎಂಬುದನ್ನೂ

ನುಡಿವೊಡೆ ರಾಜಕಾರ್ಯ ನಯಮೆತ್ತಬಲಾ ಜನದೊಂದು ಬುದ್ಧಿಯೆ
ತ್ತುಡುಪತಿವಂಶ ನೋಡುವೊಡಿದೊಂದಘಟಂ ಬಗೆವಾಗಳೆಂತು ಕೇಳ್
ನುಡಿಯದೆ ಕೆಮ್ಮಗಿರ್ದೊಡವಿರಲ್ಕಣಮಾಯದೆ ನಿಮ್ಮೊಳಿನ್ನುಮಂ
ನುಡಿಯಿಸಿದಪ್ಪುವಾ ಕುರುಕುಳರ್ಕಳ ಗೆಯ್ದಪರಾಧ ಕೋಟಿಗಳ್

ಆ ೭, ಪ ೪೫

ಎಂಬುದು '**ಕಿರಾತಾರ್ಜುನೀಯ**' ದ ಮೊದಲ ಸರ್ಗದ

ಭವಾದೃಶೇಷು ಪ್ರಮದಾಜನೋದಿತಂ
ಭವತ್ಯಧಿಕ್ಷೇಪ ಇವಾನುಶಾಸನಂ
ತಥಾಪಿ ವಕ್ತುಂ ವ್ಯವಸಾಯಯನ್ತಿ ಮಾಂ
ನಿರಸ್ತ ನಾರೀ ಸಮಯಾ ದುರಾಧಯಃ

ಎಂಬುದನ್ನೂ ಜ್ಞಾಪಿಸಿಕೊಡುತ್ತವೆ.

ಇವು ಯಾವುದರಿಂದಲೂ ಪಂಪನ ಮಹಿಮೆಗೆ ಯಾವ ಕಳಂಕವೂ ತಟ್ಟುವುದಿಲ್ಲ. ಇಲ್ಲಿ ನಾವು ಗಮನಿಸಬೇಕಾದುದು ಕವಿಗಳ ಮನೋಭಿಲಾಷೆಯನ್ನು ಮಾತ್ರ. ಇಲ್ಲಿ ತಾವು ಸವಿದ ರುಚಿಯೊಂದರ ಪರಿಚಯವನ್ನು ತಮ್ಮ ಕಾವ್ಯದ ಮೂಲಕ ಮಾಡಿಕೊಡಲು ಕವಿಗಳು ಪ್ರಯತ್ನಿಸಿದ್ದಾರೆ. ಇದರಿಂದ ಅವರ ಕಾವ್ಯಕ್ಕೂ ಕಾವ್ಯದಲ್ಲಿ ಬರುವ ಸನ್ನಿವೇಶಕ್ಕೂ ಮೆರುಗು ಬಂದಿದೆ. ಅಲ್ಲದೆ ತಮ್ಮ ಋಣವನ್ನು ಮುಚ್ಚಿಡಬೇಕೆಂಬ ಪ್ರಯತ್ನ ಇಲ್ಲಿ ಲವಲೋಶವೂ ಕಂಡುಬರುವುದಿಲ್ಲ.

ಇದೇ ದೃಷ್ಟಿಯಿಂದಲೇ, ರನ್ನನ ಕಾವ್ಯವನ್ನು ಪಂಪನ ಛಾಯೆಯೆಂದು ಕರೆಯುವುದು ತಪ್ಪಾಗುತ್ತದೆ. ಷೇಕ್ಸ್ಪಿಯರನಂತಹ ಪ್ರತಿಭಾಶಾಲಿ ತನ್ನ ನಾಟಕಗಳಿಗೆ ವಸ್ತುಗಳನ್ನು ಯಾವ ಯಾವ ಕಡೆಗಳಿಂದಲೋ ಆರಿಸಿಕೊಂಡಿರುವುದು ಲೋಕವಿಶ್ರುತವಾಗಿದೆ. ಅಷ್ಟೇ ಅಲ್ಲದೆ ನಮ್ಮ ಕವಿಗಳ ಹಾಗೆಯೇ ಆತನೂ ಎಷ್ಟೋ ವಾಕ್ಯಗಳನ್ನು ಹಾಗೆ ಹಾಗೆಯೇ ಎತ್ತಿ ಹಾಕಿಕೊಂಡಿದ್ದಾನೆ. ಆದರೆ ಆತನು ನಿರ್ಮಿಸಿರುವ

ವೈಭವಪೂರ್ಣವಾದ ಕಲಾಕೃತಿಗಳಿಗೆ, ಮೊದಲು ಆತನಿಗೆ ದೊರಕಿದ ಒಪ್ಪವಿಲ್ಲದ, ಮಸುಕಾಗಿದ್ದ ವಸ್ತುವಿಗೂ ಏನು ಅಂತರ! ಇಂತಹವನ್ನು ಕೃತಿಚೌರ್ಯವೆನ್ನುವುದು ಹೇಗೆ?

ಕವಿಯು ತನ್ನ ಸಾರಸ್ವತ ಪ್ರಯಾಣದಲ್ಲಿ ಅನೇಕ ಭವ್ಯನಗರಗಳನ್ನೂ, ರಮ್ಯ ಹರ್ಮ್ಯಗಳನ್ನೂ ಪರ್ವತಸಾನು ನದೀನದಗಳನ್ನೂ, ಕಾನನಪ್ರಾಂತವನ್ನೂ ವ್ಯಕ್ತಿ ವೈಚಿತ್ರ್ಯಗಳನ್ನೂ ಕಂಡು ಪರಿಚಯ ಮಾಡಿಕೊಂಡಿರುತ್ತಾನೆ. ಅವರ ವರ್ಣನೆ, ವ್ಯವಹಾರಗಳು ಅವನ ಮನಸ್ಸಿನಲ್ಲಿ ನೆಲೆಯಾಗಿಬಿಟ್ಟಿರುತ್ತವೆ. ಸಮಯ ಬಂದಾಗ, ಕೆಲವು ಸಲ ಅವನಿಗೇ ಅರಿವಿಲ್ಲದೆ ಅವು ಅವನ ಮಾತುಗಳಲ್ಲಿ ಕೃತಿಗಳಲ್ಲಿ ಮೈದಳೆಯ ಬಹುದು—ರಕ್ತಗತವಾಗಿದ್ದ ನೊರೆ ಹಾಲು ಮಾನವನ ಸಾಹಸಕಾರ್ಯದಲ್ಲಿ ಹೊರ ಹೊಮ್ಮುವಂತೆ. ವರ್ಣನೆ, ಭಾಷೆ, ಶೈಲಿ, ಪಾತ್ರ, ಘಟನೆ, ತಂತ್ರ ಮುಂತಾದುವು ಯಾವುದಾದರೂ, ಕೆಲವುವೇಳೆ ವಾಕ್ಯ ಸಮುದಾಯಗಳೂ, ಈ ರೀತಿಯಲ್ಲಿ ನೂತನ ಕೃತಿಯೊಂದರಲ್ಲಿ ಸೇರಿ ಬರಬಹುದು. ಇದು ಕಲಾ ಸೃಷ್ಟಿಯ ರೀತಿ-ನೀತಿ. ಶ್ರೀ ಕುವೆಂಪು ಅವರ ಕಾವ್ಯದಲ್ಲಿ ಎಲ್ಲೋ ಷೆಲ್ಲಿಯ ವರ್ಡ್ಸ್ವರ್ತ್ನ ಎರಡು ಸಾಲುಗಳ ಪ್ರತಿ ಧ್ವನಿ ಮೊಳಗಿದರೆ,ಶ್ರೀ ಬೇಂದ್ರೆಯವ ಕವನಗಳಲ್ಲಿ ಜನಪದ ಸಾಹಿತ್ಯದ ನಾದ ಮಾಧುರ್ಯವೂ ಪದಬಂಧವೂ ಕೂಡಿಬಂದಿದ್ದರೆ, ಶ್ರೀಗೋಕಾಕರ ಭಾವ ಗೀತೆಗಳಲ್ಲಿ ಆಂಗ್ಲನವ್ಯ ಕವಿಯೊ ಬ್ಬನ ಸಾಲೊಂದು ಸುಳಿದರೆ ಶ್ರೀಕಾರಂತರ ಕಾದಂಬರಿಯೊಂದರಲ್ಲಿ ಇಂಗ್ಲಿಷ್ ಕಾದಂಬರಿ ಯೊಂದರ ತಂತ್ರ ಕೌಶಲ ಪ್ರತಿ ಫಲಿತವಾಗಿದ್ದರೆ ಅದರ ಅರ್ಥವೂ ಅಷ್ಟೇ!

ಆದರೆ ನಮ್ಮಲ್ಲಿ ಈಗ 'ಕೃತಿಚೌರ್ಯ'ದ ಹೆಸರಿಗೆ ಗೌರವ ತರದ ಮತ್ತೊಂದು ಮಾರ್ಗ ಹಾವಳಿ ಮಾಡುತ್ತಾ ಇದೆ. ಬೇರೊಬ್ಬರಿಂದ, ಬೇರೊಂದು ಭಾಷೆಯಿಂದ ನೇರವಾಗಿ ಅನುವಾದ ಮಾಡಿ ಅದನ್ನು ತಮ್ಮದೆನ್ನುವ ಸಾಹಸಮಾಡುವುದು ಕಾಣ ಬರುತ್ತಾ ಇದೆ. ಕೆಲವರು ತಮಿಳಿನಿಂದ ಅನುವಾದಿಸಿ ತಮ್ಮದನ್ನಾಗಿಮಾಡುತ್ತಾ ಇದ್ದಾರೆ ಎನ್ನುವುದು ಒಂದು ಅಪವಾದ. ಇಂಗ್ಲಿಷಿನಿಂದ ಹೆಸರು ಬದಲಾಯಿಸಿ ವ್ಯಕ್ತಿಗಳನ್ನು ಕನ್ನಡಕ್ಕೆ ತಂದಿದ್ದಾರೆನ್ನುವುದು ಮತ್ತೊಂದು. ಹಿಂದಿಯಿಂದ ಕದಿಯು ತ್ತಿದ್ದಾರೆನ್ನುವುದು ಮೂರನೆಯದು. ನಮ್ಮಲ್ಲಿ ಜನರಿಗೆ ಸಾಮಾನ್ಯವಾಗಿ ಇಂಗ್ಲಿಷ್ ಸಾಹಿತ್ಯ ಗೊತ್ತಿರುವಷ್ಟು ಅಕ್ಕಪಕ್ಕದ ಭಾಷಾ ಸಾಹಿತ್ಯಗಳ ಪರಿಚಯವಿಲ್ಲ. 'Woman in white' ಎನ್ನುವುದನ್ನು 'ಶ್ವೇತಾಂಬರೀ' ಎಂದೋ, 'Man in Black' ಎನ್ನುವುದನ್ನೂ 'ಕರಾಳ ವಸನ'ವೆಂದೋ ಅನುವಾದ ಮಾಡಿ ಸ್ವಂತ ವನ್ನಾಗಿಸುವ ಮೂರ್ಖತನಕ್ಕೆ ಸರಿಯಾವುದಿದೆ? ಇದರ ವಿಚಾರವಾಗಿ ಹೆಚ್ಚು ಹೇಳು ವುದು ಕಷ್ಟ. ಯಾವ ಉದಾಹರಣೆ ಕೊಟ್ಟರೂ ಯಾರನ್ನೋ ನೋಯಿಸಿದಂತಾಗು ತ್ತದೆ. ಇರುವ ಸ್ಥಿತಿಯನ್ನು ಸೂಚಿಸುವುದರಿಂದ ಕಷ್ಟವೂ ಇಲ್ಲ; ನಷ್ಟವೂ ಇಲ್ಲ.

ಇಂಗ್ಲಿಷ್‌ಭಾಷೆಯಲ್ಲಿರುವ, ಇತರ ಭಾಷೆಗಳಿಂದ ಆ ಭಾಷೆಗೆ ಇಳಿದುಬಂದಿ ರುವ ಸುಪ್ರಸಿದ್ಧ ನಾಟಕಗಳೇ ಆಧಾರವಾಗಿ ಇರುವ ಕನ್ನಡ ನಾಟಕಗಳಿವೆ. ಅವುಗಳಲ್ಲಿ

ಕೆಲವುದರಲ್ಲಿ ಎಲ್ಲಿಯೂ ಈ ಮೂಲವನ್ನು ಸೂಚಿಸಿಲ್ಲ. ಅಮೇರಿಕದ, ರಷ್ಯಾದ ಸುಪ್ರಸಿದ್ಧ ಸಣ್ಣಕಥೆಗಳೇ ಆಧಾರವಾಗಿರುವ ಕನ್ನಡ ಕತೆಗಳಿವೆ. ಕಾದಂಬರಿಗಳಲ್ಲಂತೂ—ಒಟ್ಟು ಕತೆಯನ್ನು ಆರಿಸದಿದ್ದರೂ—ಮುಖ್ಯಪಾತ್ರಗಳನ್ನು ಪ್ರತ್ಯೇಕಿಸಿ ತೆಗೆದು ನಮ್ಮ ಆವರಣಕ್ಕೆ ಹೊಂದಿಸಿರುವ ಅನೇಕ ಉದಾಹರಣೆಗಳಿವೆ. ತಂತ್ರ ಕೌಶಲ್ಯದಲ್ಲಿ ಇಂತಹ ಅನುಸರಣೆಗೂ ದೃಷ್ಟಾಂತಗಳು ಕಡಿಮೆಯಿಲ್ಲ.

ಇವುಗಳಲ್ಲಿ ಮಾಡಬಾರದ ಕೆಲಸ ಯಾವುದೂ ಇಲ್ಲ. ಮಾಡಿರುವ ಕೆಲಸವನ್ನು ವಿವರಿಸಿದರೆ ಮೂಲವನ್ನು ಸಂಪೂರ್ಣವಾಗಿ ನಿರ್ದೇಶಿಸಿದರೆ ಈ ಬರೆಹಗಳಿಗೆ ಯಾವ ವಿಧವಾಗಿಯೂ ಗೌರವ ಕಡಿಮೆಯಾಗುವುದಿಲ್ಲ. ಹೀಗಿದ್ದೂ ಮುಚ್ಚುಮರೆಗೆ ಕಾರಣ ತಿಳಿಯದಾಗಿದೆ. ಇನ್ನಾದರೂ ಪ್ರಾಮಾಣಿಕತೆಯಿಂದ ಒಳ್ಳೆಯದಾಗುತ್ತದೆಯೆನ್ನುವುದನ್ನು ನಾವು ಅರಿಯಬೇಕು. ನಮ್ಮ ಋಣವನ್ನು ಎಲ್ಲ ಕಡೆಯೂ ಹೆಸರಿಸುವುದರಿಂದ ಓದುಗರಿಗೂ ಸಹಾಯವಾಗುತ್ತದೆ. ವಿಮರ್ಶಕರಿಗೂ ಇದರಿಂದ ಒಳ್ಳೆಯ ಕೈಮರವಾಗುತ್ತದೆ. ಅಲ್ಲದೆ ತಮ್ಮ ಮನಸ್ಸಿನ ಮೇಲೆ ಇಷ್ಟು ಗಾಢವಾಗಿ ಪ್ರಭಾವವನ್ನು ಬೀರಬಲ್ಲ ಉತ್ತಮ ಕೃತಿಗಳ ಕಡೆಗೆ ನಮ್ಮ ಜನರ ಮನಸ್ಸನ್ನು ಸೆಳೆದಂತಾಗುತ್ತದೆ. ಮೈತುಂಬಿ ಬೆಳೆಯುವ ಮಗುವಿಗೆ ಕುಡಿಸುವುದು ಯಾವ ಪುಷ್ಟಿಕರವಾದ ಆಹಾರ, ತೊಡಿಸುವುದು ಯಾವ ಸುಖೋಷ್ಣವಾದ ಬಟ್ಟೆಯೆಂಬುದು ತಿಳಿದರೆ ಇನ್ನೂ ಕೆಲವು ಮಕ್ಕಳು ಚೆನ್ನಾಗಿ ಬೆಳೆದಾವು.

ಜಿ. ವೆಂಕಟಸುಬ್ಬಯ್ಯ

# ಭಾರತೀಯ ನಾಟಕಗಳ ಮೇಲಿನ ಕೆಲವು ಆರೋಪಣೆಗಳಿಗೆ ಉತ್ತರ

ಪಾಶ್ಚಾತ್ಯರು ಅಥವಾ ಪಾಶ್ಚಾತ್ಯ ಭಾವನೆಗಳಿಂದ ಪ್ರಚೋದಿತರಾದವರು ಭಾರತೀಯ ನಾಟಕಸಾಹಿತ್ಯದ ಮೇಲೆ ಕೆಲವು ಆರೋಪಣೆಗಳನ್ನು ಹೊರಿಸಿ, ಅವುಗಳನ್ನು ತೆಗಳುವುದು ರೂಢಿಯಾಗಿದೆ. ಅವುಗಳನ್ನು ವಿಮರ್ಶಕರು ಒರೆಗಲ್ಲಿನ ಮೇಲೆ ಉಜ್ಜಿ ಸತ್ಯಾಸತ್ಯತೆಯ ಬಣ್ಣವನ್ನು ನಿರ್ಧರಿಸಬೇಕಾದುದು ಅಗತ್ಯ. ಅದರೊಡನೆ ನಮ್ಮ ನಾಟಕ ಕಲೆಯಲ್ಲಿ ಕಾಣಬರುವ ಕೆಲವು ಮಹದ್ವಿಶೇಷಗಳನ್ನು ಸ್ಥೂಲವಾಗಿ ವಿಚಾರಮಾಡಲು ಈಗ ಪ್ರಯತ್ನಪಡೋಣ.

೧. ಭಾರತೀಯ ನಾಟಕಗಳಲ್ಲಿ ವಿಷಾದಾಂತ ನಾಟಕಗಳಿಲ್ಲ—ಎಂಬುದು ಪ್ರತಿಯೊಬ್ಬ ಪಾಶ್ಚಾತ್ಯ ವಿಮರ್ಶಕನ ಕಣ್ಣಿಗೂ ಎದ್ದುಕಾಣುವ ವಿಷಯ. ಪಾಶ್ಚಾತ್ಯರ ನಾಟಕ ಸಾಹಿತ್ಯದಲ್ಲಿ 'ವಿಷಾದಾಂತ' ಎಂಬುದು ಶಿಖರಪ್ರಾಯವಾಗಿದೆ. ವಿಷಾದಾಂತ ನಾಟಕಗಳು ನಮ್ಮಲ್ಲಿ ಬರದೆಯೇ ಹೋಗಿಲ್ಲ ಭಾಸನ ನಾಟಕಗಳು ದೊರೆತ ಮೇಲೆ 'ನಮ್ಮಲ್ಲಿ ದುರಂತ ನಾಟಕಗಳು ಇಲ್ಲವೇ ಇಲ್ಲ' ಎಂಬ ಹೇಳಿಕೆ ಅಳಿಸಿಹೋಗಿದೆ. ಆದರೂ ದುರಂತ ನಾಟಕಗಳಿಗೆ ನಾವು ಹೆಚ್ಚು ಪ್ರಾಮುಖ್ಯವನ್ನು ಕೊಟ್ಟಿಲ್ಲ. ಮರಣವೆಂದರೇನು? ಅದು ಒಂದು ಜೀವನದ ಕೊನೆ; ಅಲ್ಲದೆ ಸಾವಿನಿಂದ ಮನುಷ್ಯರ ಆಶೋತ್ತರಗಳೆಲ್ಲಾ ಮುರಿದುಹೋಗುವುವೆಂಬುದು ಪಾಶ್ಚಾತ್ಯರ ಗ್ರೀಕರ, ಮತ. ಭಾರತೀಯರ ದೃಷ್ಟಿಯಲ್ಲಿಯಾದರೋ ಮರಣವೆಂಬುದು ಜನನದ ಆದಿ. ನಮಗೆ ಪುನರ್ ಜನ್ಮದಲ್ಲಿ ನಂಬಿಕೆಯಿರುವುದರಿಂದ ಮರಣಕ್ಕಾಗಿ ಭಯವಾಗಲಿ ಕಾತರವಾಗಲಿ ಬರುವುದಿಲ್ಲ. ಆದ್ದರಿಂದ ಪಾಶ್ಚಾತ್ಯರಿಗಿಂತಲೂ ನಾವು ಹೆಚ್ಚು ಆಶಾವಾದಿಗಳು. ಈ ಜನ್ಮದಲ್ಲಿ ದುಃಖ ಬಂದರೂ ಜನ್ಮಾಂತರದಲ್ಲಿಯಾದರೂ ಸುಖದೊರೆಯುವುದೆಂಬ ಆಶೆ ಇದೆ. ಕಾಳಿದಾಸ ಮಹಾಕವಿ ತನ್ನ 'ರಘುವಂಶ' ದಲ್ಲಿ ಬರುವ ಅಜವಿಲಾಪ ಸಂದರ್ಭದಲ್ಲಿ ವಸಿಷ್ಠರಿಂದ ಹೇಳಿಸಿರುವ ಈ ಉಪದೇಶವಾಣಿಯನ್ನು ಕೇಳಿ–'ಮರಣಂ ಪ್ರಕೃತಿಶ್ಶರೀರಿಣಾಂ ವಿಕೃತಿ ಜೀವಿತಮುಚ್ಯತೇ ಬುಧೈಃ'. ಪ್ರಾಣಿಗಳಿಗೆ ಮರಣವೇ ಪ್ರಕೃತಿಸಿದ್ಧವಾದುದು, ಸ್ವಾಭಾವಿಕವಾದುದು; ಜೀವನ ಅಸ್ವಾಭಾವಿಕ (Rule is death and life is only an exception) ಆದ್ದರಿಂದ ಎಷ್ಟು ವರ್ಷ ಬದುಕಿದ್ದರೆ ಅಷ್ಟಕ್ಕೇ ಭಗವಂತನಿಗೆ ಕೃತಜ್ಞರಾಗಿರಬೇಕು. ಬದುಕಿನಲ್ಲಿ ಬರುವ ಮರಣಕ್ಕಾಗಿ ಅಳಬಾರದು.

(i) ಜೀವನದಲ್ಲಿ ವ್ಯಥೆ ಬಂದರೆ ಅಳಬೇಡವೆ? ಈ ದುಃಖವನ್ನು ಸಹಿಸಿಕೊಂಡು ಬಾಳುವುದು ಹೇಗೆ? ಏತಕ್ಕೆ ಬಾಳಬೇಕು? ದುಃಖ ಹೆಚ್ಚಾದಾಗ ಅದರಿಂದ ತಪ್ಪಿಸಿಕೊಳ್ಳಲು ಆತ್ಮಹತ್ಯಕ್ಕೆ ಶರಣಾಗಬಾರದೆ? 'ಕವಿಕುಲಗುರು'ವಾದ ವಾಲ್ಮೀಕಿಯ

ಅಮರವಾಣಿಯನ್ನು ಕೇಳಿ—'ಏತಿ ಜೀವಂತಮಾನಂದಃ ನರಂ ವರ್ಷಶತಾದಪಿ' ಸಂಕಟದಿಂದ ಜೀವನದಲ್ಲಿ ಜುಗುಪ್ಸೆಗೊಂಡಿರುವ ಯಕ್ಷನ ಬಾಯಲ್ಲಿ ಕಾಳಿದಾಸ ಕವಿ ಹೇಳಿಸಿರುವುದೇನು? 'ಕಸ್ಯಾತ್ಯಂತಂ ಸುಖಮುಪನತಂ ದುಃಖಮೇಕಾಂತತೋ ವಾ। ನೀಚೈರ್ಗಚ್ಛತ್ಯುಪರಿಚದಶಾ ಚಕ್ರನೇಮಿ ಕ್ರಮೇಣ'. ಭಾಸ ಮಹಾಕವಿಯೂ 'ಚಕ್ರಾರ ಪಙ್ಕ್ತಿರಿವ ಗಚ್ಛತಿ ಭಾಗ್ಯ ಪಙ್ಕ್ತಿಃ' ಎಂದು ಸಂಕಟದಿಂದ ಕುದಿಯುತ್ತಿರುವ ವಾಸವದತ್ತೆಯನ್ನು ಸಮಾಧಾನ ಪಡಿಸಿದ್ದಾನೆ. ಇವರ ಸಾಲಿನಲ್ಲಿಯೇ ನಿಂತಿರುವ ಆಧುನಿಕ ಕವಿತಿಲಕ 'ಕುವೆಂಪು'-'ಶಿವಶಿವಾ! ಸಾವಿನ ಮೌನಕಿಂತಲೂ ಬಾಳಿನ ಗೋಳೆ ಲೇಸಲ್ತೆ' ಎಂದು ಮಗನನ್ನು ಕಳೆದುಕೊಂಡ ನಿರ್ಭಾಗ್ಯ ಮಾತೆಯೊಬ್ಬಳ ಬಾಯಲ್ಲಿ ಹೇಳಿಸಿದ್ದಾರೆ. ಇದು ನಮ್ಮ ಸಂಸ್ಕೃತಿ. ಸಂಕಟ ಬಂದಾಗ ಈಡಿಪಸ್ ಅಥವಾ ಅಂತಿಗೊನೆ ಆತ್ಮಹತ್ಯೆಮಾಡಿಕೊಳ್ಳುತ್ತಾರೆ. ಅಷ್ಟೇ ಸಂಕಟಕ್ಕೊಳಗಾದ ಸೀತೆ, ದ್ರೌಪದಿಯರು ಆತ್ಮಹತ್ಯೆಮಾಡಿಕೊಳ್ಳಬೇಕೆನಿಸಿದರೂ ಮಾಡಿಕೊಳ್ಳುವುದಿಲ್ಲ. ಪಾಶ್ಚಾತ್ಯರಲ್ಲಿ ಸತ್ತಮೇಲೆ ಶಾಶ್ವತವಾದ ಸ್ವರ್ಗ ಅಥವಾ ಶಾಶ್ವತವಾದ ನರಕ ಅವರ ಪಾಲಿಗೆ ಬರುತ್ತದೆ; ಪುನರ್ಜನ್ಮದ ಪ್ರಸಕ್ತಿ ಇಲ್ಲ. ಆದ್ದರಿಂದ ಅವರಲ್ಲಿ ಜೀವನಕ್ಕೆ ಒಂದು ಅತಿಯಾದ ಮಹತ್ವ ದೊರೆಯುತ್ತದೆ. ಹೀಗೆ ಭಿನ್ನವಾದ ಜೀವನ ದೃಷ್ಟಿಯಿರುವುದರಿಂದ ಆ ದೃಷ್ಟಿಗನುಸಾರವಾಗಿ ಒಬ್ಬ ಮಹಾಪುರುಷನ ಚರಿತ್ರೆಯನ್ನು ವರ್ಣಿಸುವಾಗ ಭಿನ್ನಕಾರ್ಯಗಳು ನಡೆಯುವುದು ಸಹಜವಾಗಿಯೇ ಇದೆ.

(ii) ದುರಂತಕ್ಕೆ ಮುಖ್ಯ ಕಾರಣವಾದ ನಾಯಕನ 'ತಪ್ಪಿಗೆ ತಕ್ಕ ಶಿಕ್ಷೆ' ಎಂಬ ಕಾವ್ಯ ನಿಯಮ (Poetic Justice) ಅವರಲ್ಲಿ ಉದಿಸಿರುವುದು ಸಹಜವಾಗಿಯೇ ಇದೆ. ತಪ್ಪಿನ ಪ್ರಮಾಣ, ಶಿಕ್ಷೆಯ ಪ್ರಮಾಣ ಇವುಗಳ ಅಂತರದ ಮೇಲೆ ಘೋರವಾದ ಆಂತರಿಕ ಹೋರಾಟವೊಂದು ಗ್ರೀಕ್ ರುದ್ರ ನಾಟಕಗಳಲ್ಲಿ ನಮಗೆ ಗೋಚರವಾಗುತ್ತದೆ. ನಮ್ಮಲ್ಲಿ ಇದು ಪ್ರತಿನಾಯಕನಲ್ಲಿ ಸ್ವಲ್ಪಮಟ್ಟಿಗೆ ಕಂಡು ಬರುವುದಾದರೂ ನಾಯಕನಲ್ಲಿ ಕಾಣಬರುವುದಿಲ್ಲ. ನಾಟಕದ ನಾಯಕನು ಯಾವಾಗಲೂ ಉದಾತ್ತನಾದವನು. ಆತನಲ್ಲಿ ಲವಲೇಶ ತಪ್ಪಿಗೂ ಆಸ್ಪದವಿಲ್ಲ. ಆತನು ಒಬ್ಬ ಆದರ್ಶ ವ್ಯಕ್ತಿ. ನಮ್ಮ ಗುರಿ ನೀತಿಬೋಧೆ. ಇದರಿಂದ ಬರುವ ಪಾತ್ರಗಳು ಒಳ್ಳೆಯವರು, ಕೆಟ್ಟವರು ಎಂಬ ಎರಡು ವಿರುದ್ಧ ಗುಂಪುಗಳಾಗಿ ವಿಂಗಡಿಸಿಗೊಂಡು ಒಳ್ಳೆಯವರು ಸದ್ಗತಿಯನ್ನೂ, ನೀಚರು ಅಧೋಗತಿಯನ್ನೂ ಪಡೆಯುತ್ತಾರೆ. ಒಂದೇ ವ್ಯಕ್ತಿಯಲ್ಲಿಯೇ ಗುಣಾವಗುಣಗಳೆರಡೂ ಪೂರ್ಣಪ್ರಕಾಶಕ್ಕೆ ಬರುವಂತೆ ಚಿತ್ರಿಸಿರುವುದು ನಮ್ಮ ನಾಟಕಗಳಲ್ಲಿ ಕಂಡು ಬರುವುದಿಲ್ಲ. ನಾಯಕನ ಉದಾತ್ತ ಗುಣವನ್ನು ತೋರಿಸುವುದಕೋಸ್ಕರ ಶಕಾರನಂತಹ ನೀಚನನ್ನು ಕೂಡ ಚಾರುದತ್ತನು ಕ್ಷಮಿಸಿದನೆಂದು ವರ್ಣಿಸಲಾಗಿದೆ. ಹೀಗಾಗಿ ಪಾಶ್ಚಾತ್ಯರ ಲೋಪ, ದೋಷ, ಪಾಪ, ವಿಧಿಯ ಕೆರಳಿಕೆ, ಪ್ರಾಯಶ್ಚಿತ್ತ ಎಂಬ ಸೂತ್ರಕ್ಕೆ ಬದಲಾಗಿ ನಮ್ಮಲ್ಲಿ ಸದ್ಗುಣ, ಪ್ರತಿಕೂಲ ದೈವದ ಪ್ರಸನ್ನತೆ, ಸುಖಪ್ರಾಪ್ತಿ ಎಂಬ ಸೂತ್ರ ಕಾಣಿಸುತ್ತದೆ.

ನಮ್ಮಲ್ಲಿ ದುರಂತ ನಾಟಕಗಳಿಲ್ಲ ನಿಜ; ಆದರೆ ವಿಷಾದಾತ್ಮಕವಾದ ಸನ್ನಿವೇಶಗಳಿಗೇನೂ ಕೊರತೆಯಿಲ್ಲ. ನಾಟ್ಯಶಾಸ್ತ್ರದಲ್ಲಿ ಮರಣವನ್ನು ಪ್ರತ್ಯಕ್ಷವಾಗಿ ತೋರಿಸಬಾರದು-ಎಂದು ಹೇಳಿದ ಮಾತ್ರಕ್ಕೆ ಅದರ ಪ್ರಸಕ್ತಿಯನ್ನೇ ಎತ್ತಬಾರದೆಂಬ ಅರ್ಥವೇನೂ ಇಲ್ಲ. ಮರಣದ ಸೂಚನೆ ಎಷ್ಟೋ ಕಡೆಗಳಲ್ಲಿ ಬರುತ್ತದೆ. ನಾಟಕದ ಪರ್ಯವಸಾನ ಮಂಗಳದಲ್ಲಿ ನಡೆದರೂ ಕರುಣರಸವನ್ನಾಗಲಿ ಅಥವಾ ವಿಪ್ರಲಂಭ ಶೃಂಗಾರವನ್ನಾಗಲಿ ನಾಟಕದಲ್ಲಿ ಚಿತ್ರಿಸಿರುವಾಗ ನಾಟಕದ ಉದ್ದಕ್ಕೂ ಶೋಕದ ಛಾಯೆ ಬೆನ್ನಂಟಿರುತ್ತದೆ. ಈ ಬಗೆಯಾದ 'ದುರಂತ ವಸ್ತು ವಿನ್ಯಾಸ'ವನ್ನು 'ಶಾಕುಂತಲ' ಅಥವಾ 'ಮೃಚ್ಛಕಟಿಕ'ದ ಮಧ್ಯದಲ್ಲಿಯೂ 'ಉತ್ತರರಾಮಚರಿತ'ದ ಆರಂಭದಿಂದ ಅಂತ್ಯದವರೆಗೂ ನಾವು ಕಾಣಬಹುದು. ಭಾರತೀಯರ ಪ್ರಕಾರ ದುರಂತತೆ ಕೇವಲ ಜುಗುಪ್ಸಾವಹವಾದ ಘೋರಮರಣದಲ್ಲಿ ಅಲ್ಲ ಇರುವುದು; ಅದಕ್ಕೂ ಹೆಚ್ಚಾಗಿ ಮರಣಕ್ಕೂ ಪೂರ್ವದಲ್ಲಿ ಅಥವಾ ಮರಣಾನಂತರ ಆ ದುರಂತತೆ ಪ್ರಕಟಗೊಳ್ಳುವುದೆಂದು. ಮನ್ಮಥನ ಮರಣದಲ್ಲಿ ಕರುಣರಸವಿಲ್ಲ; ಆದರೆ ರತಿ ವಿಲಾಪದಲ್ಲಿ ಅದನ್ನು ನಾವು ಕಾಣುತ್ತೇವೆ. ಪಾಶ್ಚಾತ್ಯ ನಾಟಕಗಳಲ್ಲಿ ಕಾಣಬರುವ ದುರಂತನಾಯಕನ ಆಂತರಿಕ ಹೋರಾಟ ಅಥವಾ ನಾಯಕನ ಪತನಕಾಲದಲ್ಲಿ ಕೋರಸ್ಸಿನವರಾಡುವ ಮಾತು-ಇವುಗಳಲ್ಲಿ ಸ್ರವಿಸುವ ಕರುಣರಸ ನಮ್ಮಲ್ಲಿಯೂ ಯಥೇಷ್ಟವಾಗಿದೆ. 'ಉತ್ತರ ರಾಮ ಚರಿತೆ'ಯಲ್ಲಿ ರಾಮನ ಧರ್ಮಸಂಕಟವನ್ನು ಚಿತ್ರಿಸುವಾಗಲೂ, ಶಾಕುಂತಲದಲ್ಲಿ ಶಕುಂತಲೆ ಗಂಡನಿಂದ ತಿರಸ್ಕೃತಳಾದಾಗಲೂ, ಗ್ರೀಕ್ ನಾಟಕಗಳಲ್ಲಿ ಕಾಣಬರುವ ಕರುಣ ರಸವೇ ನಮ್ಮಲ್ಲಿಯೂ ಕಾಣ ಬರುತ್ತದೆ. ಶಕಾರನು ವಸಂತಸೇನೆಯ ಕತ್ತು ಹಿಸುಕಿ ಹಾಕುವ ಸಂದರ್ಭ, ಚಾರುದತ್ತನನ್ನು ವಧ್ಯಸ್ಥಾನಕ್ಕೆ ಎಳೆದುಕೊಂಡು ಹೋಗುವುದು-ಇಂತಹ ದುರಂತ ವಸ್ತುವಿನ್ಯಾಸಗಳು ಯಾರ ಹೃದಯದಲ್ಲಿ ತಾನೇ ಕರುಣೆಯನ್ನು ಚಿಮ್ಮಿಸವು? ನಮ್ಮಲ್ಲಿ ದುರಂತ ನಾಟಕಗಳಿಲ್ಲದಿದ್ದರೆ ಅದಕ್ಕೆ ಕಾರಣ ನಮ್ಮ ಕಲಾ ದೃಷ್ಟಿಯ ಅಭಾವವಲ್ಲ. ವೈರಾಗ್ಯ ದೃಷ್ಟಿಯನ್ನು ಕಳೆದು ಆಶಾಭಾವನೆಯನ್ನು ಜನರಲ್ಲಿ ನಾಟಬೇಕೆಂಬ ಉದಾತ್ತ ದೃಷ್ಟಿ. ಗ್ರೀಕ್ ನಾಟಕಗಳಲ್ಲಿಯಾದರೋ ದುರಂತ ವಸ್ತು ವಿನ್ಯಾಸಕ್ಕೆ ಇರುವಷ್ಟು ಪ್ರಾಮುಖ್ಯ ದುರಂತ ಪರ್ಯವಸಾನಕ್ಕೇನೂ ಇಲ್ಲ. ಈಸ್ಕಿಲೀಸನ 'ಪಾರಸೀಕರು' ಮೊದಲಾದ ನಾಟಕಗಳಲ್ಲಿ ದುರಂತವಿಲ್ಲದ ರುದ್ರನಾಟಕಗಳನ್ನು ನಾವು ಕಾಣುವುದಿಲ್ಲವೇನು?

ಜೀವನದ ಗುರಿಯೇನು? ಎಂಬ ಪ್ರಶ್ನೆಗೆ ಪುರುಷಾರ್ಥದ ಸಾಧನೆ ಎಂಬುದು ಭಾರತೀಯರ ಉತ್ತರ. ಮನುಷ್ಯನ ಧ್ಯೇಯಗಳಿಗೂ, ವಿಧಿಯ ಉದ್ದೇಶಗಳಿಗೂ ಒಂದು ಘರ್ಷಣೆ ಯಾವಾಗಲೂ ಅನಿವಾರ್ಯವೆಂದು ಗ್ರೀಕರ ಸಿದ್ಧಾಂತ. ಆದ್ದರಿಂದ ವಿಧಿಗೆ ಇದಿರಾಗಿ ನಿಂತು, ಹೋರಾಡಿ, ಜೀವನದಲ್ಲಿ ಸೌಖ್ಯವನ್ನು ಪಡೆಯಬೇಕೆಂದು ಗ್ರೀಕ್ ಮಹಾಪುರುಷರು ನಿರಂತರವಾಗಿ ಪ್ರಯತ್ನಿಸಿರುತ್ತಾರೆ. ಗ್ರೀಕರ ದೇವತೆಗಳು ಕಾಮಕ್ರೋಧಾದಿಗಳಿಂದ ತುಂಬಿದವರು. ಅವರನ್ನು ಪೂಜಿಸುವವರೂ ಅಂತೆಯೇ.

ವಿಧಿ ಅಪ್ರತಿಹತವಾದುದು; ಮಾನವನನ್ನು ಮುರಿಯುತ್ತದೆ–ಎಂಬ ಭಯದಿಂದ ಅವರು ವಿಧಿಗೆ ಪೂಜೆ ಸಲ್ಲಿಸುತ್ತಿದ್ದರು. ಅಧರ್ಮಕ್ಕೆ ಕೈಯಿಟ್ಟು ದೈವವನ್ನು ಪ್ರತಿಭಟಸಿದಾಗ ವಿಧಿ ಅವರನ್ನು ಮೆಟ್ಟಿ ತುಳಿಯುತ್ತದೆ; ಇದನ್ನು ಕಂಡು ಜನ ಹೆದರಿ ದೈವಭಕ್ತರಾಗಬೇಕು. ಆದರೆ ನಮ್ಮಲ್ಲಿ ಭಕ್ತಿ ಉದಯವಾಗುವುದು ಭಯದಿಂದಲ್ಲ, ನಂಬಿಕೆಯಿಂದ(faith). ಪ್ರಕೃತಿಗೆ ಹೊಂದಿಕೊಂಡೇ, ವಿಧಿ ನಿಯಮಗಳಿಗೆ ಪ್ರತಿಭಟಿಸಿ ನಿಲ್ಲದೆ, ಕೇವಲ ಪುರುಷ ಪ್ರಯತ್ನದಿಂದಲೇ ಆದರೂ ದೈವಭಕ್ತಿಯಿಂದ ಇಷ್ಟಾರ್ಥ ಸಿದ್ಧಿಯನ್ನು ಪಡೆಯಬೇಕು–ಎಂಬುದು ಭಾರತೀಯರ ಮತ. ದೈವಕ್ಕೆ ಇದಿರಾಗಿ ನಿಲ್ಲುವವರು ಮಹಾಪುರುಷರಲ್ಲ, ಅಸುರರು. ಆಸುರೀಪ್ರವೃತ್ತಿಗಳನ್ನು ದಮನ ಮಾಡುವುದು ಮಹಾಪುರುಷರ ಲಕ್ಷಣ. ಸದುದ್ದೇಶದಿಂದ ಹೊರಟ ಉದಾತ್ತ ವ್ಯಕ್ತಿಗಳೇ ನಮ್ಮ ನಾಟಕಗಳ ನಾಯಕರು. ಆಸುರೀ ಪ್ರವೃತ್ತಿಗಳಿರುವವರು ಪ್ರತಿನಾಯಕರಾಗಬಹುದು. ಇತಿಹಾಸ ಪುರಾಣಗಳಲ್ಲಿ ಅವರನ್ನು ನಾಯಕರಾಗಿ ಒಂದು ವೇಳೆ ಗ್ರಹಿಸಿದರೂ ನಾಟಕದಲ್ಲಿ ಮಾತ್ರ ಬಳಸಕೂಡದೆಂದು ದಂಡಿ ಮತ್ತು ಅಭಿನವಗುಪ್ತರ ಅಭಿಪ್ರಾಯ. ನಾಟಕವನ್ನು ನೋಡುವ ಪ್ರಾಕೃತರು ಅವುಗಳನ್ನು ಅನುಕರಿಸಿಯಾರೆಂಬ ಭಯವೋ ಏನೋ!

೨ ಭಾರತೀಯ ನಾಟಕಗಳ ಮೇಲೆ ಎರಡನೆಯ ಪ್ರಬಲ ಆಪಾದನೆಯೆಂದರೆ ಅವುಗಳೆಲ್ಲವೂ ಅವಾಸ್ತವಿಕತೆಯ ಮುದ್ದೆಗಳು-ಎಂಬುದು. ಶ್ರೀಮಾನ್ ಕುವೆಂಪುರವರು ತಮ್ಮ 'ಪ್ರತಿಮಾ ಮತ್ತು ಪ್ರತಿಕೃತಿ' ಎಂಬ ಲೇಖನದಲ್ಲಿಯೂ, 'ನಾಟಕದಲ್ಲಿ ಪ್ರತಿಮಾ ಪ್ರತಿಕೃತಿ ವಿಧಾನಗಳು' ಎಂಬ ಲೇಖನದಲ್ಲಿಯೂ ಈ ವಾದವನ್ನು ಹೂಡುವವರ ಬಾಯಿಯನ್ನು ಮುಚ್ಚಿಸಿದ್ದಾರೆ. ನಮ್ಮ ಸಾಂಪ್ರದಾಯಿಕ ದೃಷ್ಟಿಯಲ್ಲಿ 'ವಾಸ್ತವಿಕತೆ'ಯ ವಾದಕ್ಕೆ ಹೆಚ್ಚು ಮಹತ್ವವಿಲ್ಲ. ಔಚಿತ್ಯವು ನಾಟಕದ ಮುಖ್ಯ ನಿಯಮವೇ ಹೊರತು ನೀರಸ ವಾಸ್ತವಿಕತೆಯಲ್ಲ. ಲೋಕದ ನೀರಸವಸ್ತುಗಳು ಸರಸವಾಗ ಬೇಕಾದರೆ ಸ್ವಲ್ಪ ಹೆಚ್ಚೋ ಕಡಿಮೆಯೋ ಅವಾಸ್ತವಿಕತೆಯ ಛಾಯೆಯನ್ನು ಪಡೆಯಲೇಬೇಕು. ದೀರ್ಘಪ್ರವಾಸ, ಕುಸ್ತಿ, ಯುದ್ಧ, ದಂಗೆ, ಮುತ್ತಿಗೆ, ಊಟ, ಸ್ನಾನ, ಸಂಭೋಗ, ಅಭ್ಯಂಜನ, ವಸ್ತ್ರಧಾರಣೆ–ಇವುಗಳನ್ನೆಲ್ಲಾ ಪ್ರತ್ಯೇಕವಾಗಿ ಪ್ರದರ್ಶಿಸಲೇ ಕೂಡದು ಎಂಬುದು ಭಾರತೀಯ ನಾಟ್ಯಶಾಸ್ತ್ರದ ನಿಯಮ. ಮುತ್ತಿಗೆ ಇತ್ಯಾದಿಗಳನ್ನು ಇಂದಿನ ರಂಗಸ್ಥಳದಲ್ಲಿ ಪ್ರದರ್ಶಿಸಿದಂತೆ ಪ್ರದರ್ಶಿಸುವುದು ಹಿಂದಿನ ರಂಗಸ್ಥಳದಲ್ಲಿ ಅಸಾಧ್ಯವಾಗಿದ್ದುದು ಮಾತ್ರವೇ ಅಲ್ಲ; ವಾಸ್ತವಿಕತೆಯ ಹೆಸರಿನಲ್ಲಿ ಮಾನವನ ನೀಚ ಪ್ರವೃತಿಗಳಿಗೆ ಸ್ಥಾನವನ್ನು ಕೊಡಕೂಡದೆಂಬುದೂ, ಇದರಿಂದ ಕಾವ್ಯ ಸೌಂದರ್ಯವೇನೂ ಹುಟ್ಟುವುದಿಲ್ಲವೆಂಬುದೂ ನಮ್ಮ ಪ್ರಾಚೀನರ ದೃಷ್ಟಿ. ಇದು ಅವರ ಅಭಿರುಚಿಯ ಉನ್ನತ ಮಟ್ಟವನ್ನು ಅಥವಾ ಕಲಾದೃಷ್ಟಿಯ ಉದಾತ್ತತೆಯನ್ನು ತೋರಿಸುವುದೇ ಹೊರತು ಅವರ ಅಶಕ್ತತೆಯನ್ನಲ್ಲ.

೩. ವಾಸ್ತವಿಕತೆ ಅಥವಾ ಪ್ರತಿಕೃತಿ ದೃಷ್ಟಿ ಪ್ರಬಲವಾಗಿರುವುದರಿಂದಲೇ

ಪಾಶ್ಚಾತ್ಯರಲ್ಲಿ ಐತಿಹಾಸಿಕ ಅಥವಾ ಸಾಮಾಜಿಕ ನಾಟಕಗಳು ಕೆಲಗಾಲ ಮಳೆಗಾಲದ ನಾಯಿ ಕೊಡೆಗಳಂತೆ ಹುಟ್ಟಿ ಹೆಚ್ಚಿಕೊಂಡಿದ್ದುವು. ಅವುಗಳತ್ತ ಬೆರಳುಮಾಡಿ ನಮ್ಮ ನಾಟಕದಲ್ಲಿ ವೈವಿಧ್ಯವೇ ಇಲ್ಲವೆಂದು ಹೇಳುವವರು ಸ್ವಸ್ವರೂಪ ಜ್ಞಾನವಿಲ್ಲದವರು. ಪಾಶ್ಚಾತ್ಯರ ನಾಟಕಗಳನ್ನೆಲ್ಲಾ ಮುಖ್ಯವಾಗಿ ಎರಡು ಪಂಗಡಗಳಾಗಿ ವಿಂಗಡಿಸುವುದುಂಟು—ಲಲಿತ ನಾಟಕಗಳು ಮತ್ತು ದುರಂತ ನಾಟಕಗಳು ಎಂದು. ಲಲಿತ ನಾಟಕ ಹದಮೀರಿದ ಹಾಸ್ಯಕ್ಕೆ ಎಡೆಗೊಟ್ಟಾಗ ಅದನ್ನು ಪ್ರಹಸನ (Burlesque) ಎಂದು ಕರೆಯುತ್ತಾರೆ. ರೋಮಾಂಚಕಾರಕವಾದ ಘಟನೆಗಳು ಹೆಚ್ಚಾಗಿ ರುದ್ರನಾಟಕದಲ್ಲಿರಬೇಕಾದ ಒಂದು ಔಚಿತ್ಯಕ್ಕೆ ಅಪೋಹ ಬಂದಾಗ ಅದನ್ನು ಉದ್ಭಟನಾಟಕ (Melodrama) ಎಂದು ವ್ಯವಹರಿಸುತ್ತಾರೆ. ಈ ನಾಲ್ಕು ಭೇದಗಳಲ್ಲಿಯೇ ಐತಿಹಾಸಿಕ, ಸಾಮಾಜಿಕ, ಗೀತರೂಪಕ, ಅಣಕವಾಡು, ಛಾಯಾ ನಾಟಕ-ಇತ್ಯಾದಿ ರೂಪಕ ಪ್ರಕಾರಗಳು ಹುಟ್ಟಿಕೊಳ್ಳುತ್ತವೆ. ಇತಿಹಾಸ ನಾಟಕಗಳಲ್ಲಿ ವ್ಯಕ್ತಿ ಪ್ರಾಧಾನ್ಯ ಬಂದಾಗ ಅದನ್ನು ವೀರನಾಟಕ(Heroic Play) ಎಂದೂ, ಸಾಮಾಜಿಕ ನಾಟಕದಲ್ಲಿ ಸಮಸ್ಯೆ ಪ್ರಮುಖವಾಗಿದ್ದಾಗ ಸಮಸ್ಯಾನಾಟಕ (Problem Play) ಎಂದೂ ವಿಂಗಡಿಸಿಕೊಳ್ಳಬಹುದು. ಇವರ ಈ ವಿಭಜನಾಶಕ್ತಿ ಭಾರತೀಯರ ಮುಂದೆ ಅತ್ಯಲ್ಪ ಎಂದು ಹೇಳಬಹುದು. ನಮ್ಮ ದಶರೂಪಕಗಳು, ಅಷ್ಟಾದಶ ಉಪರೂಪಕಗಳಲ್ಲಿ ಅಡಕವಾಗದ ರೂಪಕಗಳು ಅವರಲ್ಲಿ ಹುಟ್ಟಿಲ್ಲ, ಮುಂದೆ ಹುಟ್ಟಲಾರವು. ನಮ್ಮ ಜನಕ್ಕೆ ಚಾರಿತ್ರಿಕ ದೃಷ್ಟಿ ಶೂನ್ಯ; ಸಮಾಜದ ಆಗುಹೋಗುಗಳಿಗೆ ಸಾಹಿತ್ಯದಲ್ಲಿ ಸ್ಥಾನವೇ ಇಲ್ಲ; ಭಾರತೀಯ ಸಾಹಿತ್ಯವೆಲ್ಲ ಮಡಿ ಸಾಹಿತ್ಯ—ಇತ್ಯಾದಿ ಇತ್ಯಾದಿ ಆರೋಪಣೆಗಳೆಲ್ಲಾ ಅತ್ಯಲ್ಪ ಅಂಶ ಸತ್ಯಗಳು. ಸಮಸ್ಯಾತ್ಮಕವಾದ ಸಾಮಾಜಿಕ ನಾಟಕಗಳಾಗಲಿ, ನಾಯಕಪ್ರಮುಖ ಐತಿಹಾಸಿಕವಾಗಲಿ ತತ್ಕಾಲದ ಪ್ರಖ್ಯಾತಿಯನ್ನು ಪಡೆಯಬಲ್ಲುದೇ ಹೊರತು ಚಿರಕಾಲಿಕವಾಗಲಾರದು. ನಮ್ಮಲ್ಲಿ ಇವು ಹುಟ್ಟದೇ ಹೋಗಿಲ್ಲ, ಆದರೆ ಇವುಗಳಿಗೆ ಪ್ರಾಮುಖ್ಯವಿಲ್ಲ. ಮಲ್ಲಿನಾಥ ಪಂಡಿತನು 'ಏಕಾವಲೀ' ಗ್ರಂಥದ ವ್ಯಾಖ್ಯಾನ 'ತರಳ' ದಲ್ಲಿ 'ಕಾವ್ಯಲಾಪಾಂಶ್ಚ ವರ್ಜಯೇತ್ ಇತಿ ನಿಷೇಧೋಕ್ತಿಃ ಮುದ್ರಾರಾಕ್ಷಸಾದ್ಯ ಸತ್ಕಾವ್ಯವಿಷಯಕಾಮಂತವ್ಯಾ' ಎಂದು ಹೇಳಿದ್ದಾನೆ. ಇದರಿಂದ ಮಾನವನ ಚಿರ ಸಮಸ್ಯೆಗಳಾವುವೂ ಅದರಲ್ಲಿ ಅಡಕವಾಗಿಲ್ಲದಿರುವುದರಿಂದ ಬಾಳಿಗೆ ಬೆಳಕಾವುದೂ ದೊರೆಯುವುದಿಲ್ಲ; ಅಂತಹುದನ್ನು ಓದಿ ಏನು ಪ್ರಯೋಜನ? ಎಂದು ನಾವು ಅರ್ಥಮಾಡಿಕೊಳ್ಳಬೇಕು. ಇದೇ ಮಾತನ್ನೇ Alledrice Nichol ತನ್ನ 'world drama' ಎಂಬ ಪುಸ್ತಕದಲ್ಲಿ ಹೇಳಿದ್ದಾನೆ. ಹಿಟ್ಲರನ ನಾಟಕ ಅತ್ಯಂತ ರಸವತ್ತಾದುದೆಂದು ತೋರುತ್ತಿದ್ದುದು ಕೆಲವು ಕಾಲದ ಮೇಲೆ ನಮ್ಮ ಆಸಕ್ತಿಗೆ ಹೊರತಾದುದಾಗುತ್ತದೆ. ಆದ್ದರಿಂದ ಚಾರಿತ್ರಿಕ ನಾಟಕಗಳ ಬೆಲೆ, ಅದು ಬರಿಯ ಚರಿತ್ರೆಯಾಗಿರುವುದರಿಂದಲೇ ಅಲ್ಲ; ಚಾರಿತ್ರಿಕ ಘಟನೆಯಲ್ಲಿ ಒಂದು ಆಯ್ಕೆ, ಅದರೊಡನೆ ಕಾಲ್ಪನಿಕಾಂಶಗಳ ಜೋಡಣೆ, ಆ ಮೂಲಕ ನಿತ್ಯ ಸತ್ಯ

ವೊಂದನ್ನು ದರ್ಶನ ಮಾಡಿಸಬಲ್ಲ ಉನ್ನತ ಕಲೆ—ಇವು ಸೇರಿದಾಗ ಉತ್ತಮ ನಾಟಕವೋ ಕಾವ್ಯವೋ ಆಗುತ್ತದೆ. ಉದಯನನ ಅಥವಾ ಅಗ್ನಿಮಿತ್ರನ ಜೀವಿತ ಘಟನೆಗಳನ್ನು ಒಳಗೊಂಡ ನಮ್ಮ ನಾಟಕಗಳು ಐತಿಹಾಸಿಕವೇಕಾಗಬಾರದು ? ಮೃಚ್ಛ ಕಟಿಕಕ್ಕಿಂತಲೂ ಉತ್ತಮ ಸಾಮಾಜಿಕ ನಮಗೆಲ್ಲಿ ದೊರೆಯುತ್ತದೆ ? ಧರ್ಮ ಶ್ರದ್ಧೆಯೇ ಜೀವಸೂತ್ರವಾಗಿದ್ದ ನಮ್ಮ ಪ್ರಾಚೀನ ಸಮಾಜದಲ್ಲಿ ಯಾವ ಸಮಸ್ಯೆಗಳು ತಲೆದೋರಿ ಬಹುದಾಗಿತ್ತೋ ಅಂತಹ ಸಮಸ್ಯೆಗಳೆಲ್ಲವೂ ಅಂದಿನ ಪ್ರಹಸನಗಳಲ್ಲಿ ಕಂಡು ಬರುತ್ತವೆ. ಸಾಮಾಜಿಕ ಜೀವನ ಸರಳವಾಗಿಯೂ ತೃಪ್ತವಾಗಿಯೂ ಇದ್ದಾಗ ಹುಟ್ಟುತ್ತಿದ್ದ ಪ್ರಮುಖ ಸಮಸ್ಯೆಗಳೆಂದರೆ ಲೌಕಿಕ ಮತ್ತು ಧಾರ್ಮಿಕ ಪ್ರವೃತ್ತಿಗಳಿಂದ ಹುಟ್ಟುತ್ತಿದ್ದ ಸಮಸ್ಯೆಗಳು. ಆಚಾರಕ್ಕೂ ಸಿದ್ಧಾಂತಕ್ಕೂ ಇದ್ದ ಅಂತರ, ಗೃಹ ಜೀವನಕ್ಕೂ ವೇಶ್ಯಾವಾಟಿಗೂ ಇದ್ದ ವಿರೋಧ ಇತ್ಯಾದಿಗಳು ಭಾಣ, ಪ್ರಹಸನಗಳಲ್ಲಿ ಮೈವೆತ್ತಿವೆ. ಇಂದಿನ ನವನಾಗರಿಕ ವಿಶ್ವದಲ್ಲಿ ಉದ್ಭವಿಸುತ್ತಿರುವ ಸಮಸ್ಯೆಗಳಿಗೆ ಅಲ್ಲಿ ಎಡೆ ಇರಲಿಲ್ಲ. ಪಾಶ್ಚಾತ್ಯರಲ್ಲಿಯಾದರೂ ಇಂತಹ ಸಮಸ್ಯಾತ್ಮಕ ನಾಟಕಗಳು ಈಗ ನೂರು ವರ್ಷಗಳ ಹಿಂದೆ ಎಲ್ಲಿದ್ದುವು ? ಈ ಬಗೆಯಾದ ಚಾರಿತ್ರಿಕ ಮತ್ತು ಸಾಮಾಜಿಕ ನಾಟಕಗಳ ಎಲ್ಲೆ ಕಟ್ಟುಗಳನ್ನು ಪಾಶ್ಚಾತ್ಯರು ಅರಿತುಕೊಂಡು ಎಚ್ಚರಗೊಳ್ಳುತ್ತಿರುವಾಗ ವಾಸ್ತವಿಕತೆ ಯೆಂಬ ಆ ಗಾಳಿ ನಮ್ಮಲ್ಲಿ ಈಗ ಬೀಸ ಹತ್ತಿದೆ. ನಾಟಕ ವಿಮರ್ಶಕರಲ್ಲಿ ಅಗ್ರಗಣ್ಯ ರೆಂದು ಪ್ರಸಿದ್ಧನಾಗಿರುವ Alledrice Nichol ರ ಮಾತುಗಳನ್ನು ಕೇಳಿ–

Exact realism is a thing impossible and cast beyond the moon. The drama must be a focussing mirror which instead of making weaker, collects and condenses the coloured rage, which will make of a gleam a light, of a light a flame.

ಪಾಶ್ಚಾತ್ಯರಲ್ಲಿ ಕಾಣಬರುವ ರೂಪಕ ಪ್ರಕಾರಗಳೆಲ್ಲವೂ ಕೆಲ ಕೆಲವು ಕಾಲ ಜನ ಪ್ರಿಯವಾಗಿದ್ದು ಕ್ರಮೇಣ ಹಿಂದೆ ಬಿದ್ದುಹೋಗುತ್ತಿರುವುದನ್ನು ಅವರ ನಾಟಕ ಚರಿತ್ರೆಯನ್ನು ಓದಿದವರು ಅರ್ಥಮಾಡಿಕೊಳ್ಳಬಹುದು.

ಇನ್ನು ಭಾರತೀಯ ನಾಟ್ಯ ಶಾಸ್ತ್ರದ ಮತ್ತು ನಾಟಕಗಳ ಹಿರಿಮೆಯನ್ನು ಕುರಿತು ಎರಡು ಮಾತುಗಳು. ನಮ್ಮ ನಾಟಕಗಳೆಲ್ಲವೂ ನಮ್ಮ ರಸತತ್ವ (Theory of Rasa) ದ ಮೇಲೆ ನಿಂತಿವೆ. ಜಗತ್ತಿನ ನಾಟಕಗಳನ್ನೆಲ್ಲಾ ತನ್ನಲ್ಲಿ ಅಡಕಮಾಡಿಕೊಳ್ಳು ವಂತಹ ಭಾರತೀಯ ಸಿದ್ಧಾಂತವೆಂದರೆ ಈ ರಸಪ್ರಕ್ರಿಯೆಯೇ. ಮನಶ್ಶಾಸ್ತ್ರದ ತತ್ವಗಳನ್ನೊಳಗೊಂಡಿರುವುದರಿಂದ ಅದು ತಪ್ಪು ಹೆಜ್ಜೆಯನ್ನಿಡುವುದೇ ಅಸಂಭವ. ಶೃಂಗಾರದ ಬೇರೆ ಬೇರೆ ಅವಸ್ಥೆಗಳು ಹಾಸ್ಯದ ಜೊತೆಯಲ್ಲಿ ಬೆರೆತಾಗ ಪಾಶ್ಚಾತ್ಯರು ಲಲಿತ (Comedy) ಎಂಬ ಹೆಸರಿನಿಂದ ಕರೆಯುವ ಅನೇಕ ರೂಪಕ ಪ್ರಕಾರಗಳನ್ನು ವಿವರಿಸಬಹುದು. ಹಾಗೆಯೇ ವೀರ, ರೌದ್ರ, ಭಯಾನಕ ಮತ್ತು ಕರುಣಗಳ ಒಂದು ಪಾಕವಿಶೇಷದಲ್ಲಿ ರುದ್ರನಾಟಕದ ಪ್ರಕಾರವನ್ನು ನಿರೂಪಿಸಬಹುದು. ಕೇವಲ ರೌದ್ರ

ಅದ್ಭುತಗಳು ಬಂದರೆ ಉದ್ಭಟ (Melodrama) ವಾಗುತ್ತದೆ; ಕೇವಲ ಹಾಸ್ಯ ಪ್ರಹಸನವಾಗುತ್ತದೆ. ಕರುಣ ಮಿಶ್ರವಾದ ಶೃಂಗಾರ ವಿಷಾದಾತ್ಮಕ ವಿನೋದಕ್ಕೆ (Tragic Comedy) ಮೂಲವಾಗುತ್ತದೆ. ಇದಕ್ಕೂ ಹೆಚ್ಚಾಗಿ ಸಂಚಾರಿ ಭಾವಗಳ ಬಾಹುಳ್ಯದಿಂದ ಇದುವರೆಗೆ ಹುಟ್ಟಿರುವ ಅಥವಾ ಹುಟ್ಟಬಹುದಾದ ಯಾವ ನಾಟಕದ ಆನಂದವನ್ನಾದರೂ ಸಮರ್ಪಕವಾಗಿ ವಿವರಿಸಬಹುದು. ರಸಾನುಭವಕ್ಕೆ ಸಾಧಕವಾದರೆ ನಾಟಕವು ಉತ್ತಮ. ರಸಾಭಾಸವಾದರೆ ನಾಟಕ ಕೀಳು. ಕಥಾವಸ್ತು ಸಂವಿಧಾನದಲ್ಲಿ ಸಂಧಿನಿಯಮಗಳನ್ನು ಉಲ್ಲಂಘಿಸಿ ಸಮಷ್ಟಿದೃಷ್ಟಿ ತಪ್ಪಿದಾಗ ಅಥವಾ ಪಾತ್ರ ನಿರೂಪಣೆಯಲ್ಲಿ ಪೂರ್ವಾಪರ ವಿರೋಧ ಬಂದಾಗ ಅಥವಾ ಶೈಲಿಯಲ್ಲಿ ಅನೌಚಿತ್ಯ ಕಂಡುಬಂದಾಗ ನಾವು ರಸಾಭಾಸವಾಯಿತೆಂದೂ ಕಾವ್ಯ ಕೆಟ್ಟಿತೆಂದೂ ಹೇಳಬಹುದು. ಹೀಗೆ ರಸ ಸಿದ್ಧಾಂತವು ನಾಟಕಕ್ಕೆ ಮೂಲಭೂತವಾದ ಎಲ್ಲ ಅಂಗಗಳನ್ನು ವ್ಯಾಪಿಸಿದೆಯೆನ್ನುವುದರಲ್ಲಿ ಅಡ್ಡಿಯಿಲ್ಲ.

ಇನ್ನು ನಮ್ಮ ನಾಟಕಗಳಲ್ಲಿ ಇವುಗಳೆಲ್ಲವೂ ಸಾಮಾನ್ಯವಾಗಿ ಅಡಕವಾದ ಪ್ರಮಾಣವುಳ್ಳವುಗಳಾದುದರಿಂದ ಕಥೆಯ ಏಕಮುಖತೆಗೆ ಸ್ವಲ್ಪವೂ ಭಂಗವನ್ನು ತಂದುಕೊಳ್ಳುವುದಿಲ್ಲ. ಕಾಲೈಕ್ಯ, ದೇಶೈಕ್ಯಗಳ ನಿರ್ಬಂಧವಿಲ್ಲದಿದ್ದರೂ ಇವುಗಳ ಏಕಮುಖತೆಗೆ ಯಾವ ಅಪೋಹವೂ ಇಲ್ಲ. ಅದು ಹಾಗಿರಲಿ, ನಮ್ಮ ನಾಟಕಗಳಲ್ಲಿ ಕಾಣಬರುವ ನುಡಿ ಜಾಣ್ಮೆ (wit) ಮನೋಹರವಾದುದು. ಇದರ ಬಂಧ ಎಷ್ಟು ಸರಳವೋ ಅಷ್ಟು ಬಿಗಿ, ಅಷ್ಟು ಪ್ರಭಾವಶಾಲಿ. ಸಂಸ್ಕೃತ ಗದ್ಯದ ಸೌಂದರ್ಯವನ್ನು ಕಾಣಬೇಕಾದರೆ ಅದರ ನಾಟಕಕ್ಕೆ ಹೋಗಬೇಕು. ಭಾಸನಂತಹ ದೊಡ್ಡ ನಾಟಕಕಾರನ ಗದ್ಯ ಶೈಲಿ ಭುವನಮೋಹಕವಾಗಿದೆ.

ಪಾಶ್ಚಾತ್ಯ ನಾಟಕಗಳಲ್ಲಿ ಎಲ್ಲಿಯೂ ಕಾಣಬರದ ಒಂದು ಮಹದ್ಗುಣವೆಂದರೆ ಪಾತ್ರಗಳ ಸುಖದುಃಖಗಳೊಡನೆ ಪ್ರಕೃತಿಗಿರುವ ಒಂದು ಸಂಬಂಧ. ವಿಶ್ವದ ಅಣುರೇಣು ತೃಣಕಾಷ್ಠಗಳಲ್ಲೆಲ್ಲಾ ಒಂದೇ ದಿವ್ಯಶಕ್ತಿಯ ಪ್ರಭಾವವು ತುಂಬಿಕೊಂಡಿರುವುದೆಂಬ ಭಾರತೀಯರ ನಂಬಿಕೆ ನಾಟಕದಲ್ಲಿಯೂ ಕಾಣಿಸಿಕೊಂಡಿದೆ. ಮೃಗಪಕ್ಷಿಗಳು, ತರುಲತೆಗಳು, ಪುಷ್ಪ ಫಲಗಳು, ಸೂರ್ಯ ಚಂದ್ರ ನಕ್ಷತ್ರಾದಿಗಳು, ಗಿರಿನದಿಗಳು —ಇವೆಲ್ಲ ಮನುಷ್ಯನ ಜೀವನದಲ್ಲಿ ನಿಕಟವಾದ ಒಂದು ಬಾಂಧವ್ಯವನ್ನು ಬೆಳೆಸಿಕೊಂಡಿವೆ. ಶಕುಂತಲೆಯ ರಾಗಜೀವನಕ್ಕೆ ಆ ರಮ್ಯವಾದ ತಪೋವನ, ಏಕಲವ್ಯನ ಭವ್ಯಜೀವನಕ್ಕೆ ದೈವ ಸದೃಶವಾದ ಆ ದಿವ್ಯವನ, ಇವು ರಸದುಣಿಸಿಟ್ಟು ಬಾಳನ್ನು ಬೆಳಸಿವೆ. ಆ ರಮ್ಯ ಪ್ರದೇಶಗಳಿಂದ ಹೊರಗೆ ತಂದಾಗ ಅವರ ಬಾಳು ಬರಿದಾದೀತು. ಮಾನವ ಮತ್ತು ಪ್ರಕೃತಿಗಳಿಗಿರುವ ಈ ಬಾಂಧವ್ಯದ ಫಲವಾಗಿ ಪಾಶ್ಚಾತ್ಯರಲ್ಲಿ ಕಾಣಬರದ ನೂತನ ಸೌಂದರ್ಯವೊಂದು ಭಾರತೀಯ ನಾಟಕಗಳಲ್ಲಿ ಮೂಡುತ್ತದೆ. ನಾಟಕಗಳಲ್ಲಿನ ಕಾವ್ಯಶಕ್ತಿ ಹೆಚ್ಚಾಗುತ್ತದೆ. ಸಂಗೀತದ ಮಾಧುರ್ಯ ಈ ಕಾವ್ಯ ಜ್ಯೋತ್ಸ್ನೆಯೊಡನೆ ಸಂಗಮವಾಗಿ ಅಭಿನಯದೊಡನೆ ನಾಟಕದ ಚಲನೆ ಮುಂದುವರಿ

ದಾಗ ಇದನ್ನು ಕಂಡ ಮಾನವ ಅಲೌಕಿಕ ಆನಂದವನ್ನು ಅನುಭವಿಸುತ್ತಾನೆ.

ನಮ್ಮ ನಾಟಕಗಳನ್ನು ರಂಗಸ್ಥಳದಲ್ಲಿ ಪ್ರದರ್ಶಿಸುವುದಕ್ಕೆ ಮಾತ್ರವೇ ಅಲ್ಲದೆ ಓದುವುದಕ್ಕೆ ಯೋಗ್ಯವಾಗಿರುವಂತೆಯೂ ಬರೆದಿವೆ. ಆದ್ದರಿಂದ ನಾಟಕದ ಮಧ್ಯ ದಲ್ಲಿ ನಮಗೆ ಅನೇಕ ಮನೋಹರವಾದ ಭಾವಗೀತೆಗಳು ಸಿಕ್ಕುತ್ತವೆ. ನಾಟಕದ ಶ್ರೇಷ್ಠತೆಗೆ ಅದರಲ್ಲಿನ ಪಾತ್ರ ಬಾಹುಳ್ಯವೂ ಒಂದು ಕಾರಣವೆಂದು ಒಪ್ಪುವುದಾದರೆ ನಮ್ಮ ನಾಟಕಗಳಲ್ಲಿ ಕಾಣಬರುವಷ್ಟು ಹೆಚ್ಚು ಸಂಖ್ಯೆಯ ಪಾತ್ರಗಳು ಮತ್ತೆಲ್ಲಿಯೂ ಕಾಣಬರದುದನ್ನು ನಾವು ಗಮನಿಸಬಹುದು. ಬರಿಯ ಸಂಖ್ಯೆಯಲ್ಲಿ ಮಾತ್ರವೇ ಅಲ್ಲ; ಅವುಗಳಲ್ಲಿ ವೈವಿಧ್ಯವೂ ಬೇಕಾದಷ್ಟು ಕಂಡುಬರುತ್ತದೆ. ಅದರಲ್ಲಿಯೂ ಶೃಂಗಾರ ಮಯವಾದ ಕಾಲ್ಪನಿಕ ಲೋಕಕ್ಕೆ ಸಹಕಾರಿಯಾಗಿ ಅನೇಕ ಬಗೆಯ ಸ್ತ್ರೀಯರ ಅಭಿ ನಯವನ್ನು ನಾವು ಕಾಣಬಹುದು. ಅಲ್ಲದೆ ನಮ್ಮ ನಾಟಕಗಳಲ್ಲಿ ಕಲ್ಪನೆಗೆ ಪ್ರಾಮುಖ್ಯವೇ ಹೊರತು ವಾಸ್ತವ ವರ್ಣನೆಗಲ್ಲ. ಸಾಹಿತ್ಯದಲ್ಲಿ ನಿಜವಾದ ರಸಾಸ್ವಾದನಕ್ಕೆ ಕಲ್ಪನೆಯ ಪ್ರತಿಭಾವಿಲಾಸವೇ ಹೆಚ್ಚು ಸಹಕಾರಿಯಾದುದು. ಇದಲ್ಲೆಕ್ಕೂ ಹೆಚ್ಚಾಗಿ ಒಂದು ಜೀವನ ಸಿದ್ಧಾಂತ—ಸಾರವತ್ತಾದ ನೀತಿಯನ್ನು ಒಳಗೊಂಡ ಜೀವನ ಸಿದ್ಧಾಂತ ನಮ್ಮ ನಾಟಕಗಳಲ್ಲಿ ಕಾಣಿಸಿಕೊಂಡು ಇವುಗಳ ಮಹೋನ್ನತಿಗೆ ಸಹಕಾರಿಯಾಗಿದೆ. ಆದರೂ ಇದು ವ್ಯಕ್ತೋಪದೇಶವಾಗಿಲ್ಲದೆ ನಾಟಕದ ಆನಂದಕ್ಕೆ ಚ್ಯುತಿ ತರುವುದಿಲ್ಲ. ಹಾಗೆ ಚ್ಯುತಿ ಬರುವಂತಿದ್ದರೆ ಅವನು ಕಲೆಗಾರನೇ ಅಲ್ಲ. ಅವನನ್ನು ಕುರಿತು ದಶ ರೂಪಕಕಾರನು ಹೇಳಿರುವ

> ಆನಂದ ನಿಸ್ಯಂದಿಷು ರೂಪಕೇಷು ವ್ಯುತ್ಪತ್ತಿಮಾತ್ರಫಲಮಲ್ಪಬುದ್ಧಿಃ
> ಯೋಽಪೀತಿಹಾಸಾದಿವದಾದಿ ಸಾಧುಸ್ತಸ್ಮೈ ನಮಃ ಸ್ವಾದುಪರಾಙ್ಮುಖಾಯ
>
> —ದಶರೂಪಕ I–೬

ನಮ್ಮ ನಾಟಕ ಕಲೆ ಚಲನಚಿತ್ರಗಳ ಪ್ರಸಾರದಿಂದ ಬಹುಮಟ್ಟಿಗೆ ಕುಗ್ಗಿ ಹೋಗುತ್ತಿದೆ. ಇದನ್ನು ಕಂಡು ಕೆಲವು ಕಲಾಭಿಮಾನಿಗಳಿಗೆ ಸಂಕಟವಾಗಿದೆ. 'ಸಿನಿಮಾದಿಂದ ನಾಟಕ ಕಲೆಗೆ ವಿಪತ್ತು ಬಂದಿದೆ. ನಾಟಕ ನಿರ್ನಾಮವಾಗುವು ದೇನೋ ಎಂಬ ಭಯ ಕಲಾವಿದರ ಮನಸ್ಸಿನಲ್ಲಿ ಮೂಡಿದೆ' ಎಂದು ಅಂತಹವರು ಉದ್ಗಾರ ತೆಗೆಯುವುದುಂಟು.[1] ಈ ಹೇಳಿಕೆ ಸ್ವಲ್ಪಮಟ್ಟಿಗೆ ನಿಜ. ಆದರೆ ಈ ಪರಿ ಸ್ಥಿತಿಗೆ ಕಾರಣವೇನು? ನಮ್ಮ ನಾಟಕಗಳು ಜನರ ಅಭಿರುಚಿಯನ್ನು ಎತ್ತುವುದಕ್ಕೆ ಬದಲಾಗಿ ಅವರ ಇಚ್ಛೆಗೆ ತಕ್ಕಂತೆ ಕುಣಿಯ ಹೊರಟವೆ. ನಮ್ಮ ನಾಟಕಗಳಲ್ಲಿ ನಾವು ಕಾಣುತ್ತಿರುವುದೇನು? ವಾಸ್ತವಿಕತೆಯ ಹೆಸರಿನಲ್ಲಿ ನಗ್ನತೆಯಿಂದ ನರ್ತನ ಮಾಡು ತ್ತಿರುವ ಲಘುವಿನೋದಗಳು, ಅಗ್ಗದ ಉದ್ರೇಕಗಳು. ಇದುವರೆಗೆ ನಾಟಕ ಸಂಸ್ಥೆ

---

[1] ಸಿನಿಮಾಗಳು ಮತ್ತು ನಾಟಕಗಳು: ಶ್ರೀ. ಸಿ. ಕೆ. ವೆಂಕಟರಾಮಯ್ಯ 'ಕನ್ನಡ ನುಡಿ' ಸಂ ೩–೧೧

ಗಳು ನಡೆಸ ಹೊರಟ ಕೆಲಸವನ್ನೇ ಚಲನಚಿತ್ರಗಳೂ ನಡೆಸುತ್ತಿವೆ. ಇಲ್ಲಿನ ಕವಿಗಳೂ ಅಲ್ಲಿಯೂ, ಇಲ್ಲಿಯ ನಟರೇ ಅಲ್ಲಿಯೂ ಇಲ್ಲಿನ ಪ್ರೇಕ್ಷಕರೇ ಅಲ್ಲಿಯೂ. ಮಾಲೀಕನಿಗೆ ರಂಗಪರಿಕರಗಳಿಗಾಗಿ ಹೆಚ್ಚು ವೆಚ್ಚ, ಆದ್ದರಿಂದ ಹೆಚ್ಚು ಲಾಭ. ಹೀಗೆ ವ್ಯಾಪಾರದಲ್ಲಿ ಸ್ಪರ್ಧೆಗೆ ನಿಂತಿರುವ ಇಬ್ಬರು ಧನಾಪೇಕ್ಷಿಗಳನ್ನು ಕಂಡು ಕಲಾವಿದರು ವ್ಯಥೆಪಡುವುದಕ್ಕೆ ಯಾವ ಕಾರಣವೂ ಕಾಣಬರುತ್ತಿಲ್ಲ. ತಪಸ್ವಿಗಳ ಶಾಂತರಸವನ್ನು ಗ್ರಹಿಸಲು ರಂಗದಲ್ಲಿರುವ ಒಂದು ಪರ್ಣಶಾಲೆ ಸಾಕು. ಅದಕ್ಕೆ ಬದಲಾಗಿ ನೆಗ್ಗಲಮುಳ್ಳು, ಹಾವು, ಚೇಳು–ಎಲ್ಲವನ್ನೂ ತೋರಿಸಬೇಕೆಂದು ನಾಟಕ ರಂಗದವರು ಹೊರಟರೆ ಗತಿಯೇನು? ಚಲನ ಚಿತ್ರಗಳಲ್ಲಿ ಆ ಕೆಲಸವನ್ನು ಮಾಡಲು ಅವರಿಗೆ ಅನುಕೂಲವಿದೆ. ಪದಾರ್ಥ ಗಳಿರುವ ಸ್ಥಳಕ್ಕೇ ಒಮ್ಮೆ ಹೋಗಿ ಅವರು ಚಿತ್ರಗಳನ್ನು ಎತ್ತಿಕೊಂಡು ಬರುತ್ತಾರೆ. ಆ ಗೊಂಬೆಗಳನ್ನು ಅಚ್ಚು ಹೊಡೆದು ಬೇಕಾದಂತೆ ಜೋಡಿಸಿ ನಾಡು ನಾಡಿಗೆ ಹಂಚು ತ್ತಾರೆ. ಅವರು ಮಾಡಿದಂತೆ ನಾಟಕಕಾರರೂ ಮಾಡಹೊರಟರೆ ನಡೆಯಬಲ್ಲುದೇ? ಅವರೊಡನೆ ಇವರು ಸ್ಪರ್ಧಿಸಬಲ್ಲರೇ?

ನಾಟಕಗಳು ಅಳಿಯದೆ ಬೆಳೆಯಬೇಕಾದರೆ ನಾಟಕಕಲಾವಿದರ ದೃಷ್ಟಿ ಬದಲಾವಣೆಯಾಗಬೇಕು. ಅಗ್ಗದ ವಿನೋದಗಳನ್ನು ಕೈಬಿಟ್ಟು ರಸಸ್ಫೂರ್ತಿಯ ಕಡೆ ಅವರು ಗಮನ ಕೊಡಬೇಕು. ಚಲನ ಚಿತ್ರಗಳಲ್ಲಿ ಎಂತಹ ಕಲಾಕೋವಿದನಿಗೂ ರಸ ಸ್ಫೂರ್ತಿಗೆ ಚೇತನದಾಯಕವಾದ ಸೂಕ್ಷ್ಮಾಭಿನಯವನ್ನು ಪ್ರದರ್ಶಿಸುವುದು ಸಾಧ್ಯ ವಿಲ್ಲ. ಗ್ರಾಮೋಫೋನು ಸಂಗೀತದಲ್ಲಿ ಹೇಗೆ ನಾದದ ಸೂಕ್ಷ್ಮ ತರಂಗ ವಿನ್ಯಾಸಗಳು ಕರ್ಣಕ್ಕೆ ಗೋಚರಿಸಲಾರವೋ ಹಾಗೆಯೇ ಛಾಯಾಯಂತ್ರದಲ್ಲಿ ಸಾಕ್ಷಾತ್ತಾದ ಸೂಕ್ಷ್ಮ ಅಭಿನಯ ನಮ್ಮ ದೃಗ್ಗೋಚರವಾಗಲಾರದು. ನಟನು ಅದ್ಭುತ ಪ್ರತಿಭಾಶಾಲಿ ಯಾದರೂ ನಾವು ನೋಡುತ್ತಿರುವುದು ಅವನ ಛಾಯೆಯನ್ನು ಮಾತ್ರವೇ ಆದ್ದರಿಂದ ಅವನ ಅಭಿನಯದಿಂದ ದೊರೆಯುವುದೂ ರಸಚ್ಛಾಯೆಯೇ. ಅದೂ ಹಾಗಿರಲಿ. ಇಂದಿನ ಅಭಿನಯ ಚೆನ್ನಾಗಿಲ್ಲದಿದ್ದರೆ ರಂಗ ನಟನು ನಾಳೆ ಅದನ್ನು ಸರಿಮಾಡಿಕೊಳ್ಳ ಬಲ್ಲ. ಚಲನಚಿತ್ರದ ನಟನೋ? ಹಾಡಿದ್ದೇ ಹಾಡುವ (ಆಡಿದ್ದೇ ಆಡುವ ಕೂಡ) ಕಿಸಿವಾಯ್ದಾಸ ಅವನು. ಆದ್ದರಿಂದ ಒಮ್ಮೆ ಅವನನ್ನು ಕಂಡಮೇಲೆ ಪುನಃ ನೋಡುವ ರಕ್ತಿ ನಮಗೆ ಹುಟ್ಟುವುದಿಲ್ಲ. 'ಹೀಗಾಗುವುದರಿಂದ ರಸೋಪಾಸನೆ ಮಾಡುವ ವಿಷಯದಲ್ಲಿ ನಾಟಕಗಳೊಡನೆ ಸಿನಿಮಾಗಳು ಪೋಟಾಪೋಟಿಗೆ ನಿಲ್ಲಲಾರವು'.[2] ಅದರಂತೆಯೇ ದ್ರವ್ಯಾರ್ಜನೆಯ ವಿಚಾರದಲ್ಲಿ ನಾಟಕಗಳಾದರೂ ಚಲನ ಚಿತ್ರದೊಡನೆ ನಿಲ್ಲುವುದು ಅಸಾಧ್ಯ. ಚಲನ ಚಿತ್ರಗಳು ಪ್ರೇಕ್ಷಕರಿರುವ ಬಳಿಗೇ ಹೋಗಿ ಅವರನ್ನು ಸಂತೋಷಗೊಳಿಸಬಲ್ಲವು. ಆದರೆ ರಂಗಸ್ಥಳಕ್ಕೆ ಅದು ಸಾಧ್ಯವಿಲ್ಲದ ಮಾತು. ಹೀಗಾಗಿ ಇವೆರಡಕ್ಕೂ ಒಂದು ಸ್ಪರ್ಧೆಯನ್ನು ಇಟ್ಟುಕೊಳ್ಳುವುದೇ ಅನುಚಿತ.

---

2. ಈಗಿನ ನಾಟಕಗಳು—ತೆ. ಸು. ಶಾ. (ಅನುವಾದ)

ಚಲನ ಚಿತ್ರಗಳೊಡನೆ ಹೋಲಿಸಿದಾಗ ರಂಗಸ್ಥಳದ ಆದಾಯ ಅತ್ಯಲ್ಪವೆನಿಸ ಬಹುದು. ಆದರೆ ಆದಾಯವೇ ಇಲ್ಲದೆ ಹೋಗುವಂತಹ ದೀನಸ್ಥಿತಿ ನಮ್ಮ ನಾಡಿಗೆ ಎಂದಿಗೂ ಉಂಟಾಗದು. ಕಲೋಪಾಸಕರಾದ ಕವಿಗಳೂ, ನಟರೂ ನಮ್ಮ ದೇಶದಲ್ಲಿ ಇಲ್ಲವೇ ಇಲ್ಲವೆನ್ನುವಷ್ಟು ಅಭಿಮಾನ ಶೂನ್ಯರಾಗುವ ದೌರ್ಭಾಗ್ಯ ನಮ್ಮ ದೇಶಕ್ಕೆ ಎಂದಿಗೂ ಪ್ರಾಪ್ತವಾಗುವುದಿಲ್ಲ. ಕಲಾಭಿಮಾನಿಗಳಿಗೆ, ರಸ ಋಷಿಗಳಿಗೆ ಆದಾಯ ಮುಖ್ಯವಾಗಬಾರದು, ಆಗುವುದಿಲ್ಲ. ಚಲನ ಚಿತ್ರ ಬರುತ್ತಿದ್ದಕ್ಕಿಂತ ಮುಂಚೆ ಕಲಾ ವಿಲಾಸಿಗಳೆಲ್ಲರೂ ಕುಬೇರರಾಗಿರಲಿಲ್ಲ. ಹೇಗೋ ಕಾಲಯಾಪನೆ ಮಾಡುತ್ತಿದ್ದರು. ಕಲೆಗಾಗಿ ತಮ್ಮ ತನುಮನಧನಗಳನ್ನು ತೆತ್ತ ಉದಾಹರಣೆಗಳು ನಮ್ಮ ನಾಡಿನಲ್ಲಿ ಬೇಕಾದಷ್ಟು ಕಂಡು ಬರುತ್ತದೆ ಸಾಹಿತ್ಯ, ಕಲೆ, ವಿಜ್ಞಾನಗಳಲ್ಲಿ ಸಿದ್ಧಿಗಂಡ ಮಹಾ ಪುರುಷರು ಇಂದು ಮಾತ್ರವಲ್ಲ, ಹಿಂದು ಮುಂದೆ ಎಂದೂ ಆದಾಯವೆಂಬುದನ್ನು ಗೌಣವಾಗಿ ಪರಿಗಣಿಸುವವರೇ 'ಉಪರ್ಯುಪರಿ ಪಶ್ಯನ್ತಃ ಸರ್ವ ಏವ ದರಿದ್ರತಿ। ಅದೋಧಃ ಕಸ್ಯ ಮಹಿಮಾನೋಪಜೀಯತೇ' ಎಂಬ ಸೂಕ್ತಿ ಇಂತಹವರ ಆಚರಣೆ ಯಿಂದಲೇ ಸರ್ವಸತ್ಯವಾಗಿರುವುದು.

"ಜನರನ್ನು ರಸಿಕರನ್ನಾಗಿ ಮಾಡುವುದು, ಮಾಡ ಪ್ರಯತ್ನಿಸುವುದು, ರಸೋ ಪಾಸಕ ಕವಿ, ನಟ, ಸಭ್ಯರ ಧರ್ಮ. ಪದೇ ಪದೇ ಒತ್ತಿಹೇಳಿ ಜನರ ಚಿತ್ತವನ್ನೂ ರುಚಿಯನ್ನೂ ಸಂಸ್ಕರಿಸಬೇಕು." ಇದು ಕಷ್ಟ ಸಾಧ್ಯವಾದರೂ ಅತ್ಯಗತ್ಯವಾದ ಕೆಲಸ. ಈ ಕೆಲಸದಲ್ಲಿ ಸಾರ್ವಜನಿಕರು ಮಾತ್ರವೇ ಅಲ್ಲದೆ ಸರ್ಕಾರದವರೂ ಸಹಾಯಕ್ಕೆ ನಿಲ್ಲಬೇಕು. ಜನರಲ್ಲಿ ನಿರಕ್ಷರತೆಯನ್ನು ತೊಡೆದು ಹಾಕುವುದಕ್ಕಾಗಿ ಬದ್ಧಕಂಕಣರಾಗಿ ನಿಂತಿರುವ ನಮ್ಮ ಸರ್ಕಾರ ನಮ್ಮ ಜನರಲ್ಲಿ ಜ್ಞಾನಪ್ರಸಾರಕ್ಕೆ ನಾಟಕವು ಎಂತಹ ಅದ್ಭುತ ಸಾಧನವೆಂಬುದನ್ನು ಇನ್ನೂ ಗಮನಿಸಿಲ್ಲ. 'ರಂಗಸ್ಥಳ ವೆಂಬುದು ಜನ ಸಾಮಾನ್ಯರ ವಿಶ್ವವಿದ್ಯಾಲಯ' ಎಂಬುದಾಗಿ ಶ್ರೀಮತಿ ಸರೋಜಿನೀ ದೇವಿಯವರು ತಮ್ಮ ಭಾಷಣವೊಂದರಲ್ಲಿ ಹೇಳಿದ್ದಾರೆ. ಅದರ ಅರ್ಥವನ್ನು ಗ್ರಹಿಸ ಬೇಕು. ವಿಶ್ವವಿದ್ಯಾಲಯದವರೂ ಇದುವರೆಗೆ ಇತ್ತ ತಮ್ಮ ಗಮನವನ್ನು ತಕ್ಕಷ್ಟು ತಿರುಗಿಸಿಲ್ಲ. ಅವರ ದೃಷ್ಟಿಯೆಲ್ಲವೂ ಹುಡುಗನ ಬುದ್ಧಿಗೆ ಮೂಟೆಗಟ್ಟಲೆ ವಿಷಯ ಗಳನ್ನು ತುಂಬುವುದು ಅಥವಾ ಅದಕ್ಕೂ ಹೆಚ್ಚೆಂದರೆ ಹೊಟ್ಟೆಗಾಗಿ ವೃತ್ತಿ ಶಿಕ್ಷಣ ವನ್ನು ಕೊಡುವುದು. ಇದರಿಂದ ವಿದ್ಯಾರ್ಥಿಗಳ ಕಲಾಶಕ್ತಿಯೆಲ್ಲವೂ ಪೋಲಾಗುತ್ತದೆ. ವಿಶ್ವವಿದ್ಯಾಲಯದವರು ಪ್ರಾಚೀನ ನಾಟಕಗಳನ್ನು ಪಾಠ ಹೇಳುತ್ತಿರುವರಾದರೂ ಆ ಚಿರಕಾವ್ಯಗಳ ಪರಿಚಯವನ್ನು ಪ್ರದರ್ಶನಗಳ ಮೂಲಕ ಮಾಡಿಕೊಡುತ್ತಿಲ್ಲ. ಕಾವ್ಯ ವಿಮರ್ಶೆಯಲ್ಲಿ ತೊಡಗುವ ಬುದ್ಧಿ ಎಷ್ಟೇ ಪ್ರಖರವಾಗಿದ್ದರೂ ಅನುಭವಿಸುವ ಅಂತ ರಂಗದ ಸ್ವರೂಪವನ್ನು ಚಾಚೂ ತಪ್ಪಿಲ್ಲದಂತೆ ಅದು ಅರ್ಥಮಾಡಿಕೊಳ್ಳುತ್ತದೆಯೆಂದು ಭಾವಿಸುವುದು ಧಾರ್ಷ್ಟ್ಯವೇ ಸರಿ. ಆದ್ದರಿಂದ ವಿಶ್ವವಿದ್ಯಾಲಯಗಳಲ್ಲಿ ನಾಟಕ ರಂಗ ಗಳು ಅನಿವಾರ್ಯವಾದ ಒಂದು ಅಂಗವಾಗಿ ಏರ್ಪಡಬೇಕು. ಅವು ನಾಟಕ ಸಾಹಿತ್ಯ

ಬೋಧನೆಗೆ ಪ್ರಯೋಗ ಶಾಲೆಗಳಾಗಬೇಕು. ಹೀಗೆ ಸರ್ಕಾರ ಮತ್ತು ಸಮಾಜದಲ್ಲಿ ಗಣ್ಯರಾದವರ ನೆರವು ದೊರೆತು, ನಟರಾದವರು ತಮ್ಮ ಶರೀರ ಶಾರೀರ ಪ್ರದರ್ಶನದಲ್ಲಿ ತೃಪ್ತರಾಗದೆ ಕಲೋಪಾಸಕರಾದಾಗ, ನಮ್ಮ ಮಹಾ ಕವಿಗಳ ಕಾವ್ಯಗಳನ್ನು ಜನರು ನೋಡುವ ಸಂಪ್ರದಾಯ ಮೂಡಿಬಂದಂದು ನಾಟಕ ಕಲೆ ಉದ್ಧಾರವಾಗುತ್ತದೆ. ಆದರೊಡನೆ ಜನರ, ಜನಸಾಮಾನ್ಯರ ಕಲಾಭಿರುಚಿ ಉತ್ತಮಗೊಳ್ಳುತ್ತದೆ; ನಾಡು ಧನ್ಯವಾಗುತ್ತದೆ.

ತ. ಸು. ಶಾಮರಾಯ

# ಅಗ್ರಹಾರಗಳು ಅಥವಾ ವೈದಿಕ ಸಂಪತ್ತು

(ಒಂದು ಸವಿನೆನಪು)

೧

ಮಾಘ ಶುದ್ಧ ಸಪ್ತಮಿ. ರಥಸಪ್ತಮಿ. ನಾಲ್ವಡಿ ಕೃಷ್ಣರಾಜ ಒಡೆಯರು ಪಟ್ಟಾಭಿಷಿಕ್ತರಾದ ದಿನ. ಮೈಸೂರಿನಲ್ಲಿ ಎಲ್ಲಿ ನೋಡಿದರೂ ಸಂಭ್ರಮ. ಅರಮನೆಯಲ್ಲಿ ಪಟ್ಟಾಭಿಷೇಕದ ದಿನವಾದ್ದರಿಂದ ಬೆಳಿಗ್ಗೆ ಒಂದು ದರ್ಬಾರು. ಚತುರಂಗ ಸೈನ್ಯಗಳೂ ಅರಮನೆಯ ಅಂಗಳದಲ್ಲಿ ನೆರೆದಿವೆ. ವೈದಿಕರೂ ಲೌಕಿಕರೂ ನಿಯತವಾದ ಉಡುಪುಗಳನ್ನು ಧರಿಸಿ ಅರಮನೆಗೆ ಸಾಲು ಸಾಲಾಗಿ ಹೋಗುತ್ತಿದಾರೆ. ವೈದಿಕರ ಕೈಯಲ್ಲಿ ಅರಿಸಿನ ಸವರಿದ ಒಂದು ತೆಂಗಿನಕಾಯಿ. ಇದು ಸಿಂಹಾಸನಾರೂಢರಾಗಿರುವ ಮಹಾರಾಜರಿಗೆ ಫಲ ಮಂತ್ರಾಕ್ಷತೆಗಳ ಪೂರ್ವಕ ಆಶೀರ್ವಾದವನ್ನು ಮಾಡುವುದಕ್ಕೆ. ರಥಸಪ್ತಮಿಯಾದ್ದರಿಂದ ಅರಮನೆಯ ಸುತ್ತು ಮುತ್ತಿನ ದೇವಾಲಯಗಳಲ್ಲಿ ರಥಪೂಜೆ. ಅನಂತರ ಸೂರ್ಯಮಂಡಲ ಅಥವಾ ಚಂದ್ರಮಂಡಲದೊಡನೆ ಕಂಗೊಳಿಸುತ್ತಿರುವ ರಥೋತ್ಸವ. ಒಂದೊಂದು ಗುಡಿಯಿಂದ ರಥ ಸಮಸ್ತರಾಜ ಮರ್ಯಾದೆಗಳಿಂದ ಕೂಡಿ ಭಕ್ತರಿಂದ ತುಂಬಿದ ಬೀದಿಗಳಲ್ಲಿ ಉತ್ಸವವನ್ನು ಮಾಡಿಕೊಂಡು ಪುನಃ ಗುಡಿಗೆ ಹಿಂತಿರುಗುತ್ತಿತ್ತು. ದಾರಿಯುದ್ದಕ್ಕೂ ಅಲ್ಲಲ್ಲಿ ಉತ್ಸವಮೂರ್ತಿಗೆ ಭಕ್ತರು ಮಂಗಳಾರತಿಗೆ ಏರ್ಪಡಿಸಿಕೊಂಡು ತಮ್ಮ ಕೈಂಕರ್ಯವನ್ನು ಸಲ್ಲಿಸುತ್ತಿದ್ದರು. ಅರಮನೆಯ ಮುಂದೆ ಇಂಥ ಪೂಜೆಗೆ ವಿಶೇಷ ಏರ್ಪಾಡಿರುತ್ತಿತ್ತು. ಅರ್ಧ ಶತಮಾನಕ್ಕೂ ಹಿಂದಿನ ಮಾತಿದು.

ಮತ್ತೊಂದು ಕಡೆ ಮೈಸೂರಿನ ಒಂದು ದೊಡ್ಡ ಅಗ್ರಹಾರದ ಮುಂದಿನ ಬೀದಿಯಲ್ಲಿ ಚಿಕ್ಕ ಮಕ್ಕಳ ಗುಂಪು ಒಂದು ಸೇರಿತ್ತು. ಐದು-ಆರು ವರ್ಷದ ಮಕ್ಕಳೇ ಹೆಚ್ಚು. ಕೆಲವರು ಹುಡುಗರಿಗೆ ಮತ್ತಷ್ಟು ವಯಸ್ಸಾಗಿತ್ತು. ದೊಡ್ಡವರೆನ್ನಿಸಿಕೊಳ್ಳುವವರು ಐದಾರು ಮಂದಿ ಇದ್ದರು. ಎಲ್ಲರೂ ಮಗುಟ ಇತ್ಯಾದಿ ಮಡಿ ಬಟ್ಟೆಗಳನ್ನು ಉಟ್ಟಿದ್ದರು. ಚಿಕ್ಕಮಕ್ಕಳು ಉತ್ಸಾಹದಿಂದ ನಾನಾ ವಿಧವಾಗಿ ಕಿರಿಚಿಕೊಳ್ಳುತ್ತಿದ್ದರು. ಅಗ್ರಹಾರದಲ್ಲಿ ದೇವರ ಮನೆಗಳಲ್ಲಿದ್ದ ಎಲ್ಲಾ ಘಂಟೆಗಳೂ ಜಾಗಟೆಗಳೂ ಈಗ ಬೀದಿಯಲ್ಲಿ ಚಿಕ್ಕ ಮಕ್ಕಳ ಕೈಯಲ್ಲಿ ಮೊಳಗುತ್ತಿದ್ದವು. ಗುಂಪಿನ ಮಧ್ಯದಲ್ಲಿ ಐದಾರು ಪುಟ್ಟ ಪುಟ್ಟ ರಥಗಳಿದ್ದವು. ರಥಗಳ ಹಿಂಭಾಗದಲ್ಲಿ ಥಳಥಳ ಪ್ರಕಾಶಿಸುತ್ತಿರುವ ಚಿನ್ನದ ಕಾಗದದಲ್ಲಿ ಮಾಡಿದ ಸೂರ್ಯಚಂದ್ರ ಮಂಡಳಗಳು. ರಥಗಳಲ್ಲಿಟ್ಟಿದ್ದ ವಿಗ್ರಹಗಳನ್ನೆಲ್ಲಾ ಸಮಸ್ತ ವಿಧವಾದ ಪೂಜಾಸಾಮಗ್ರಿಗಳಿಂದಲಂಕರಿಸಿದ್ದರು. ಒಂದು ರಥದಲ್ಲಿ ಅಲಂಕಾರಕ್ಕೋಸ್ಕರ ಎರಡು ಕಲಾಪತ್ತಿನ ರವಿಕೆ ಕಣಗಳನ್ನು ತ್ರಿಕೋಣಾಕಾರವಾಗಿ ಮಡಿಸಿ ದೇವರ ಎರಡು ಭಾಗದಲ್ಲೂ ಇಟ್ಟಿದ್ದರು. ಅಗ್ರಹಾರದ ಮಕ್ಕಳು

ತಮ್ಮದೇ ಆದ ವಿಶೇಷ ರಥೋತ್ಸವವನ್ನು ವಿಜೃಂಭಣೆಯಿಂದ, ಉತ್ಸಾಹದಿಂದ, ತಮ್ಮ ವಯಸ್ಸಿಗನುಗುಣವಾದ ಭಕ್ತಿಯಿಂದ ನಡೆಸುತ್ತಿದ್ದರು. ಅಗ್ರಹಾರದ ಪ್ರತಿಮನೆಯ ಮುಂಭಾಗದಲ್ಲೂ ದೊಡ್ಡವರು ಗುಂಪು ಗುಂಪಾಗಿ ನಿಂತು ಸಂತೋಷದಿಂದ ಈ ದೃಶ್ಯ ವನ್ನು ನೋಡಿ ನೋಡಿ ಹಿಗ್ಗುತ್ತಿದ್ದರು. ದಿವ್ಯದೃಶ್ಯ! ನೋಡಲು ಎರಡು ಕಣ್ಣು ಸಾಲದು!

೨

ಶತಮಾನಾರ್ಧದ ಹಿಂದೆ ಮೈಸೂರು ನಗರದಲ್ಲಿ ಅಗ್ರಹಾರಗಳಲ್ಲಿ ವೈದಿಕರು ತಮ್ಮ ಜೀವನವನ್ನು ಹೇಗೆ ನಡೆಸುತ್ತಿದ್ದರೆಂಬುದನ್ನು ಅಲ್ಪಸ್ವಲ್ಪವಾಗಿಯಾದರೂ ನೆನಪಿಗೆ ತಂದುಕೊಳ್ಳುವ ಉದ್ದೇಶದಿಂದ ಪುಟ್ಟ ಪೀಠಿಕೆಯಾಗಿ ಮೇಲೆ ವಿವರಿಸಿದ ದೃಶ್ಯಗಳನ್ನು ಕೊಟ್ಟದ್ದಾಯಿತು.

ಪೂರ್ವಕಾಲದಲ್ಲಿ ರಾಜರುಗಳು ಬ್ರಾಹ್ಮಣರ ಬದುಕು ಸುಲಭವಾಗಿ ಸಾಗಲು ಅವರಲ್ಲಿ ಯೋಗ್ಯರಾದವರುಗಳಿಗೆ ದವಸ ಧಾನ್ಯಗಳಿಗೋಸ್ಕರ ಭೂಮಿಕಾಣಿಗಳನ್ನೂ ವಸತಿಸೌಕರ್ಯಕ್ಕೋಸ್ಕರ ಗೃಹಗಳನ್ನೂ ದಾನವಾಗಿ ಕೊಡುತ್ತಿದ್ದರು. ಇದು ಪುರಾಣ ಪ್ರಸಿದ್ಧವಾದ ವಿಷಯ. ಇವುಗಳಿಗೆ 'ಅಗ್ರಹಾರ' ಗಳೆಂದು ಹೆಸರು. ಮೈಸೂರು ರಾಜರುಗಳೂ ರಾಜ ಬಂಧುಗಳೂ ಈ ಧರ್ಮಕಾರ್ಯವನ್ನು ಯಥಾ ವತ್ತಾಗಿ ನಡೆಸಿಕೊಂಡು ಬಂದಿದ್ದರು. ೧೯೦೦ನೇ ಇಸವಿಯಲ್ಲಿ ಮೈಸೂರು ಪಟ್ಟಣ ದಲ್ಲಿಯೇ ಇಪ್ಪತ್ತರ ಮೇಲೆ ಅಗ್ರಹಾರಗಳಿದ್ದವು (ಗೃಹ ಶ್ರೇಣಿಗಳು). ನಾನಾ ಕಾರಣ ಗಳಿಂದ ಜೀವನೋಪಾಯಕ್ಕಾಗಿ ಹಳ್ಳಿಗಾಡುಗಳಿಂದಲೂ ಕ್ಷೇತ್ರ ಸ್ಥಳಗಳಿಂದಲೂ ಬಂದು ಸಾವಿರಾರು ಮಂದಿ ವೈದಿಕರು ಮೈಸೂರಿನಲ್ಲಿ ನೆಲಸಿದ್ದರು ಇವರಲ್ಲಿ ಯೋಗ್ಯತಾಸಂಪನ್ನರಾಗಿ ಗಣ್ಯರಾದವರಿಗೆ ಅಗ್ರಹಾರಗಳಲ್ಲಿ ಆಸರೆ ದೊರಕಿತ್ತು. ಇವರಲ್ಲಿ ತ್ರಿಮಸ್ಥರೂ ಇದ್ದರು.

ಈ ಅಗ್ರಹಾರಗಳಲ್ಲಿ ವಾಸಿಸುತ್ತಿದ್ದ ವೈದಿಕರು ಎಂತಹವರು? ಅವರ ದಿನಚರಿ ಯೇನು? ಅವರ ವೃತ್ತಿ ಅಥವಾ ಕಸಬು ಏನು? ಅವರ ನಿಯಮಿತ ಕಾರ್ಯಗಳು ಯಾವುವು? ಅವರು ಗೃಹಕೃತ್ಯ ಕೆಲಸಗಳಲ್ಲಿ ಅನುಸರಿಸುತ್ತಿದ್ದ ವಿಧಿ ವಿಧಾನಗಳಾವವು? ಅವರ ಮನೆಯಲ್ಲಿ ದೇವಕಾರ್ಯಗಳ ಪರಿಯೇನು? ಹಬ್ಬ ಹರಿದಿನಗಳ ಮತ್ತು ವಿವಾಹೇತ್ಯಾದಿ ಉತ್ಸವ ಕಾಲಗಳ ಸಂಭ್ರಮಗಳೇನು-ಇತ್ಯಾದಿ ಇತ್ಯಾದಿ ಅಂದರೆ ವೈದಿಕರ ಬಾಳಿನ ಬಗೆಯೇನು ಎಂಬುದನ್ನು ಸ್ವಲ್ಪ ವಿಚಾರಿಸೋಣ.

ಇವರು ಸಾಧು ಮನುಷ್ಯರು ಇವರದು ಸಾತ್ತ್ವಿಕ ಜೀವನ. ಇವರಲ್ಲಿ ಪ್ರತಿ ಯೊಬ್ಬನೂ ಸುಶಿಕ್ಷಿತ ಪಂಡಿತ. ವೇದಶಾಸ್ತ್ರ ಪುರಾಣೇತಿಹಾಸಗಳ ಯಾವುದಾದರೂ ಒಂದು ಶಾಖೆಯಲ್ಲಿಯಾದರೂ ಇವರು ಘನ ವಿದ್ವಾಂಸರಾಗಿರುತ್ತಿದ್ದರು. ಒಬ್ಬ ಋಗ್ಯಜುರ್ವೇದಗಳಲ್ಲಿ ಘನಪಾಠಿ, ಮತ್ತೊಬ್ಬ ಸಾಹಿತ್ಯರತ್ನ, ಮಗುದೊಬ್ಬ ಪ್ರಸಿದ್ಧ ನಾದ ವೇದಾಂತಿ. ಒಬ್ಬ ತರ್ಕತೀರ್ಥ, ಒಬ್ಬ ಕವಿತಿಲಕ,—ಹೀಗೆಯೇ ದ್ವೈತಾದ್ವೈತ

ವಿಶಿಷ್ಟಾದ್ವೈತ ಸಿದ್ಧಾಂತಿಗಳು, ವೈಯಾಕರಣಿಗಳು, ಜ್ಯೋತಿಶ್ಶಾಸ್ತ್ರ ವಿಶಾರದರು, ಋತ್ವಿಜರು, ಪುರೋಹಿತ ಪ್ರಮುಖರು ಇತ್ಯಾದಿ. ಹೀಗೆ ಎಲ್ಲರೂ ನೆರೆಹೊರೆಯವ ರಾಗಿ ಒಂದೇ ಅಗ್ರಹಾರದಲ್ಲಿ ವಾಸಿಸುತ್ತಿದ್ದರೆ ಆ ಅಗ್ರಹಾರವು ಒಂದು ವಿದ್ಯಾಪೀಠ ದಂತೆ, ಒಂದು ಗುರುಕುಲದಂತೆ ಇರುತ್ತಿದ್ದವು. (like a college with many faculties or a small residential University to use a modern name)

ನಮ್ಮ ಅಗ್ರಹಾರದ ಗೃಹಸ್ಥರು ತ್ರಿಮತಾವಲಂಬಿಗಳಾದರೂ ಮೂಲಾಧಾರವಾದ ಕೆಲವು ವೈದಿಕಧರ್ಮಗಳು ಎಲ್ಲರಿಗೂ ಸಾಮಾನ್ಯವಾಗಿದ್ದವು. ಅವರು ಎಲ್ಲರೂ ಒಂದು ವಿಧದಲ್ಲಿ ವ್ರತಿಗಳು, ನಿತ್ಯ ವ್ರತಿಗಳು, ಸತ್ಯವ್ರತಿಗಳು. ಬಾಲ್ಯದಿಂದಲೂ ತಮ್ಮ ಮಾತಾಪಿತೃಗಳಿಂದಲೂ ಅನಂತರ ಗುರು ಶಿಕ್ಷಣದಿಂದಲೂ–ಶ್ರೌತ ಸ್ಮಾರ್ತ ನಿತ್ಯ ಕರ್ಮಾನುಷ್ಠಾನಕ್ಕೆ ಪೂರ್ವಸಿದ್ಧತೆಯಾದ ದೇಹೇಂದ್ರಿಯ ಮನಃಸಂಸ್ಕಾರಗಳನ್ನು ಪಡೆದವರು. ಇವುಗಳಲ್ಲಿ ನಮ್ಮ ಧರ್ಮಶಾಸ್ತ್ರಜ್ಞರು ಶೌಚಾಚಾರಗಳಿಗೆ ಪ್ರಥಮ ಸ್ಥಾನವನ್ನು ಕೊಟ್ಟಿದ್ದಾರೆ. ಅವುಗಳ ಅನುಸರಣೆಯಿಂದ ಅಂತಃಶುದ್ಧಿ ಬಹಿಃಶುದ್ಧಿ ಗಳನ್ನು ಪಡೆದು ವಿಹಿತವಾದ ಕರ್ಮಗಳನ್ನು ನಿಯತ ರೀತಿಯಿಂದ ಮಾಡಲು ಅರ್ಹತೆ ಯುಂಟಾಗುತ್ತದೆ.

ಶೌಚಾಚಾರಗಳು ಸುಸೂತ್ರವಾಗಿ ಪ್ರತಿನಿತ್ಯವೂ ನಡೆಯಲು ಮನೆಯಲ್ಲಿ ಹೆಂಗಸರು—ಅದರಲ್ಲೂ ಯಜಮಾನಿ—ಬೆಳಗಿನ ಜಾವದಿಂದ ಏಕಪ್ರಕಾರವಾಗಿ ಶ್ರಮಿಸಬೇಕಾಗುತ್ತದೆ. ಮನೆಯನ್ನು ಕೊಳಕಿಲ್ಲದೆ ಶುಚಿಯಾಗಿ ಇಟ್ಟುಕೊಂಡಿರಬೇಕು. ಮನೆಯ ಎಲ್ಲಾ ಭಾಗಗಳನ್ನೂ ಗುಡಿಸಿ, ಕೆಲವು ಭಾಗಗಳನ್ನು ಪ್ರತಿನಿತ್ಯವೂ ಗೋಮಯದಿಂದ ಸಾರಿಸಿ ಶುದ್ಧಿಮಾಡಿ ರಂಗವಲ್ಲಿಯನ್ನಿಡುವುದು ಮತ್ತು ಬೃಂದಾವನದ ರಕ್ಷಣೆ ಮತ್ತು ಪಾಲನೆ ಹೆಂಗಸರಿಗೆ ಮನೆಯಲ್ಲಿ ಮೊದಲನೆಯ ಕೆಲಸ. ಬೆಳಗಿನ ಜಾವದಲ್ಲಿ ಈ ಕೆಲಸಗಳನ್ನು ಮಾಡುತ್ತಿರುವಾಗ ಹಿರಿಯ ಹೆಂಗಸರು ಉದಯರಾಗದಲ್ಲಿ ಬಹಳ ಇಂಪಾಗಿ ದೇವರ ಸ್ತೋತ್ರಗಳನ್ನು ನಿರಾಯಾಸವಾಗಿ ಕಿರುದನಿಯಲ್ಲಿ ಹಾಡಿ ಕೊಳ್ಳುವ ಪದ್ಧತಿಯಿತ್ತು. ಮಲಗಿದ್ದ ಮಕ್ಕಳನ್ನು ಎಚ್ಚರಗೊಳಿಸಿ ಉಪ್ಪವಡಿಸು ವುದಕ್ಕೆ ದೇವರ ನಾಮಗಳೇ ಮೊದಲನೆಯ ಕೂಗು, ಪ್ರಥಮಧ್ವನಿ! ಇದನ್ನು ನೆನಸಿ ಕೊಂಡರೆ ಈಗಲೂ ಅತ್ಯಾನಂದವಾಗುತ್ತದೆ. ಯಜಮಾನನಿಗೆ ಸ್ನಾನ ಸಂಧ್ಯಾವಂದನೆ ಅಗ್ನಿಹೋತ್ರ (ಔಪಾಸನ) ದೇವತಾರ್ಚನೆಗಳಿಗೆ ಆಗಬೇಕಾದ ಪೂರ್ವಸಿದ್ಧತೆಗಳನ್ನೆಲ್ಲಾ ಮಡಿಯುಟ್ಟುಕೊಂಡು ಗೃಹಿಣಿಯೇ ಮಾಡಬೇಕು. ಸಂಧ್ಯಾಪಾತ್ರೆಗಳು, ಪೂಜಾ ಪಾತ್ರೆಗಳು ಮತ್ತು ಉಪಕರಣಗಳು ಬೆಳಗಿ ಹೊಳೆಯುತ್ತಿರಬೇಕು. ಸಕಾಲದಲ್ಲಿ ದೇವರಿಗೆ ನಿವೇದನಕ್ಕೆ ಅನ್ನ ಪಾಯಸ ಹಣ್ಣುಕಾಯಿ—ಯಾವುದಾದರೂ ಒಂದು ಸಿದ್ಧವಾಗಿರಬೇಕು. ಅಡಿಗೆಯ ಮನೆಯನ್ನು ಪ್ರತಿದಿನವೂ ಚೊಕ್ಕಟವಾಗಿ ಸಾರಿಸಿ ಗುಡಿಸಿ ಕೊಳೆ ಕಶ್ಮಲವಿಲ್ಲದಂತೆ ನೋಡಿಕೊಳ್ಳಬೇಕು. ಅಡಿಗೆ ಮತ್ತು ಊಟದ ಪಾತ್ರೆಗಳು ದೇವರ ಪೂಜಾ ಪಾತ್ರೆಗಳಂತೆಯೇ ಪ್ರತಿನಿತ್ಯವೂ ತೊಳೆಯಲ್ಪಡುತ್ತವೆ.

ವೈದಿಕರ ಮನೆಯಲ್ಲಿ ಹತ್ತುವರ್ಷದ ಮಕ್ಕಳಿಂದ ಮೇಲಕ್ಕೆ ಎಲ್ಲರೂ ಪ್ರತಿದಿನವೂ ಒಗೆದು ಮಡಿ ಮಾಡಿದ ಬಟ್ಟೆಯನ್ನು ಉಡುವ ಪದ್ಧತಿ ಇದೆ. ಮುಖ್ಯವಾದ ಅಂಶ ವೇನೆಂದರೆ ವೈದಿಕ ಪದ್ಧತಿಯಂತೆ ಎಲ್ಲವೂ ಶುಚಿಯಾಗಿರಬೇಕು, ನಿರ್ಮಲವಾಗಿರ ಬೇಕು. ಹೊರಗಿನಿಂದ ಮನೆಗೆ ಬಂದರೆ ಕೈಕಾಲು ತೊಳೆದುಕೊಂಡು ಒಳಗೆ ಹೋಗ ಬೇಕು ; ಮನೆಯಲ್ಲೇ ಇದ್ದರೂ ಕೂಡ ಊಟಕ್ಕೆ ಮುಂಚೆ ಪುನಃ ಕೈಕಾಲು ತೊಳೆದು ಕೊಳ್ಳಬೇಕು. ಈ ಶೌಚೌಚಾರಗಳು ಶಿಷ್ಟಾಚಾರಗಳಿಗೆ ಅಡಿಗಲ್ಲಿನಂತೆ !

ಎಲ್ಲ ಬ್ರಾಹ್ಮಣರ ಮನೆಯಲ್ಲೂ ಮೇಲೆ ಹೇಳಿದ ವಿವರಗಳನ್ನು ಸಾಧಾ ರಣವಾಗಿ ಅನುಸರಿಸುತ್ತಾರೆ. ಆದ್ದರಿಂದ ಏನು ಕಾರಣದಿಂದ ಅಗ್ರಹಾರಗಳಲ್ಲಿ ವೈದಿಕರು ಈ ನಿಬಂಧನೆಗಳನ್ನು ಅನುಸರಿಸುತ್ತಾರೆಂದು ವಿಶೇಷವಾಗಿ ಹೇಳ ಲಾಯಿತು ?—ಎಂಬ ಪ್ರಶ್ನೆ ಏಳುತ್ತದೆ. ಆ ಪ್ರಶ್ನೆಗೆ ಉತ್ತರವಿದು : ಕಾಲ ಕ್ರಮೇಣ ಚಾರಿತ್ರಿಕ ಐತಿಹಾಸಿಕ ಸಾಮಾಜಿಕ ಮತ್ತು ಆರ್ಥಿಕ ದುರ್ದಶೆಯ ಕಾರಣಗಳಿಂದ ಮನುಸ್ಮೃತಿಯಲ್ಲಿ ಹೇಳಿರುವ ಶೌಚೌಚಾರ ಪದ್ಧತಿಗಳು ಶಿಥಿಲವಾಗುತ್ತಾ ಬರು ತ್ತಿದ್ದವು. ಏಕಕಾಲದಲ್ಲಿ ಏಕಸ್ಥಳದಲ್ಲಿ ಮುವತ್ತು ವೈದಿಕರು ಮುವ್ವತ್ತು ಸಂಸಾರ ಗಳನ್ನು ಮಾಡಿಕೊಂಡಿದ್ದರೆ (ಮೈಸೂರಲ್ಲಿ ಚಾಮರಾಜ ಅಗ್ರಹಾರ), ಅವರಲ್ಲಿ ಒಬ್ಬರ ಆಚಾರ ವ್ಯವಹಾರ ನಡತೆಗಳ ಪರಿಣಾಮ ಉಳಿದವರ ಮೇಲೂ ವ್ಯಾಪಿಸಿ, ಶಿಥಿಲ ವಾಗುತ್ತಿದ್ದ ಶಿಷ್ಟಾಚಾರಗಳನ್ನು ಭದ್ರಪಡಿಸಿ,—ಅದರಲ್ಲೂ ಲೌಕಿಕ ಮಾರ್ಗವನ್ನು ಅನುಸರಿಸಲು ಅಭಿಲಾಷೆಪಡುತ್ತಿದ್ದ ಯುವಕರ ಮೇಲೆ ಪರಿಣಾಮವನ್ನುಂಟುಮಾಡಿ, ಆ ಯುವಕರು ಉದರಭರಣಕ್ಕೋಸ್ಕರ ಲೌಕಿಕರಾದರೂ ಮನೆಯಲ್ಲಿ ಆರ್ಯಪದ್ಧತಿ ಗಳನ್ನು ಬಿಡದೆ ಶಿಷ್ಟಾಚಾರ ಪ್ರವರ್ತಕರಾಗಿ ಧರ್ಮಮಾರ್ಗದಲ್ಲಿ ಆಸಕ್ತರಾಗಿ ಬಾಳಲು ಸಹಾಯವಾಯಿತು- ೧೯೦೦ನೆಯ ಇಸವಿಯ ಕಾಲವನ್ನು ಕುರಿತು ಆಗ ಮೈಸೂರಲ್ಲಿ ಕಾಣ ಬರುತ್ತಿದ್ದ ವಿಷಯಗಳನ್ನು ಸೂಚಿಸುವುದು ಪ್ರಸ್ತುತ ಪ್ರಯತ್ನ. ಆಗ ವೈದಿಕ ಸಂಸಾರಗಳು ಇಬ್ಭಾಗವಾಗಿ ಕವಲು ಒಡೆಯಲು ಪ್ರಾರಂಭವಾಗಿತ್ತು. ಒಂದು ವೈದಿಕ ಶಾಖೆ, ಮತ್ತೊಂದು ಲೌಕಿಕ ಶಾಖೆ.

ತ್ರಿಕಾಲ ಸಂಧ್ಯಾ ದೇವತಾರ್ಚನೆಗಳಲ್ಲದೆ, ಶಾಸ್ತ್ರೋಕ್ತವಾಗಿ ನಿತ್ಯವೂ ನಡೆಸಲ್ಪಡ ಬೇಕಾದ ಪಂಚ ಯಜ್ಞಗಳಲ್ಲಿ—ಬ್ರಹ್ಮಯಜ್ಞ, ದೇವಯಜ್ಞ, ಪಿತೃಯಜ್ಞ, ಭೂತ ಯಜ್ಞ, ಮನುಷ್ಯಯಜ್ಞ (ಅತಿಥಿ ಸತ್ಕಾರ)—ಕೆಲವು ಹಿರಿಯ ವೈದಿಕರು ಮಾತ್ರ ತಮಗೆ ಶ್ರಮಸಾಧ್ಯವಾದ ಯಜ್ಞಗಳನ್ನು ನಡೆಸುತ್ತಿದ್ದರು. ಮನೆಯಲ್ಲೇ ವಾಸ ಮಾಡುತ್ತಿದ್ದ ವಿದ್ಯಾರ್ಥಿಗಳಿಗೆ ಅನ್ನದಾನ ವಿದ್ಯಾದಾನ ನಿತ್ಯವೂ ನಡೆಯುತ್ತಿತ್ತು. ಭಿಕ್ಷಾನ್ನ ಮತ್ತುವಾರದ ಹುಡುಗರಿಗೆ ಕೊಡುಗೈ ಭಿಕ್ಷವೂ ಸಾದರ ಭೋಜನವೂ ದೊರಕುತ್ತಿದ್ದವು. ವಾರದ ಹುಡುಗ ಊಟಕ್ಕೆ ಬರಲು ಹೊತ್ತಾದರೆ, ಗೃಹಿಣಿ ಅವನಿಗೋಸ್ಕರ ಕಾದಿದ್ದು ಅವನು ಮನೆಗೆ ಬಂದು ಉಂಡಮೇಲೆ ತಾನು ಊಟ ಮಾಡುತ್ತಿದ್ದಳು. ಇದು ದೈವಭಕ್ತಿಯೋ, ಅಥವಾ ಮಾತೃ ಪ್ರೇಮವೋ ? ಕಾಮ

ಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳನ್ನು ಅದುಮಿ ಹತೋಟಿಯಲ್ಲಿಟ್ಟು ಕೊಂಡು ಸನ್ಮಾರ್ಗಪ್ರವರ್ತಕರಾಗಿ ನಾಲ್ಕು ಪುರುಷಾರ್ಥಗಳನ್ನೂ— ಧರ್ಮ, ಅರ್ಥ ಕಾಮ ಮತ್ತು ಮೋಕ್ಷ—ಸಾಧಿಸಬೇಕೆಂಬುದೇ ಈ ಸಾಧುಮಣಿಗಳ ಜೀವನದ ಗುರಿ ಯಾಗಿತ್ತು. 'ನಿಮಗೆ ಏನು ಬೇಕು ತಾತ?' ಎಂಬ ಪ್ರಶ್ನೆಗೆ 'ನನಗೆ ಏನು ಬೇಕು? ನನಗೆ ಬೇಕಾದ್ದು ಒಂದೇ! ಸದ್ಗತಿ, ಅಷ್ಟೇ!' ಎಂಬ ಉತ್ತರ ಸಾಧಾರಣ ವಾಗಿ ದೊರಕುತ್ತಿತ್ತು.

ಸಂಸ್ಕಾರಗಳಲ್ಲಿ ನಾಮಕರಣ, ಅನ್ನಪ್ರಾಶನ, ಚೌಲ, ಉಪನಯನ ಮತ್ತು ವಿವಾಹ— ಇವುಗಳನ್ನು ಮುಖ್ಯವಾಗಿ ಅನುಸರಿಸುತ್ತಿದ್ದರು. ಹೆಂಗಸರು ತಮ್ಮೊಳಗೆ 'ಸೀಮಂತೋನ್ನಯನ'ವೆಂಬ ಸಂಸ್ಕಾರವನ್ನು ಸೀಮಂತ ಪ್ರಸ್ತ, ಹೂ ಮುಡಿಸುವುದು ಅಥವಾ ಬಳೆ ತೊಡಿಸುವುದು ಎಂಬ ಹೆಸರುಗಳಲ್ಲಿ ಅತ್ಯಂತ ಸಡಗರದಿಂದ ನಡೆಸು ತ್ತಿದ್ದರು. ಉಪನಯನ ಮತ್ತು ವಿವಾಹ ಕಾಲದಲ್ಲಿ ಅಗ್ರಹಾರದ ಪ್ರತಿ ಮನೆಯವರೂ ತಪ್ಪಿಸಿಕೊಳ್ಳದೆ ಶುಭಮುಹೂರ್ತಕಾಲದಲ್ಲಿ ಹಾಜರಿರುತ್ತಿದ್ದರು. ಮಂತ್ರಲೋಪ ಕ್ರಿಯಾಲೋಪಗಳಿಲ್ಲದೆ ಶಾಸ್ತ್ರೋಕ್ತಕರ್ಮಗಳೂ ಸಾಂಪ್ರದಾಯಿಕ ಕಾರ್ಯಗಳೂ ಉತ್ಸವಗಳೂ ಆವಸರವಿಲ್ಲದೆ ನಡೆಯುತ್ತಿದ್ದವು. ಮಂತ್ರೋಚ್ಚಾರಣೆ ಪದಚ್ಯುತಿ ಸ್ವರಚ್ಯುತಿಗಳಿಲ್ಲದೆ ಸ್ವಚ್ಛವಾಗಿರುತ್ತಿತ್ತು. ಈ ಸಮಯಗಳಲ್ಲಿ ಎರಡು ವಿಶೇಷ ಸಂಗತಿಗಳು. ಮೊದಲನೆಯದು ಮುತ್ತೈದೆಯರ ಹಾಡುಗಳು. ಹಿರಿಯ ಸುಮಂಗ ಲಿಯರು ಒಂಟೊಂಟಿಯಾಗಿಯೋ ಜಂಟಿಯಾಗಿಯೋ ಸುಶ್ರಾವ್ಯವಾಗಿ ಜೊತೆಗೂಡಿ ಗಂಭೀರವಾಗಿ ಹಳೆಯ ಕಾಲದ ಹಾಡುಗಳನ್ನು ಹೇಳುತ್ತಿದ್ದರು. ಈ ಹಾಡು ಗಳಲ್ಲಿ ಪುರಾಣೇತಿಹಾಸ ಪುರುಷರುಗಳ ಮತ್ತು ದೇವ ದೇವತೆಗಳ ಜೀವನ ಚರಿತ್ರೆಯ ಕಥೆಗಳು ಸಮಯೋಚಿತವಾಗಿ ತುಂಬಿರುತ್ತಿದ್ದವು. ಎರಡನೆಯದು ವೇದಘೋಷ. ಶಾಸ್ತ್ರೋಕ್ತ ಕರ್ಮಗಳು ಮುಗಿದ ಮೇಲೆ ಆಶೀರ್ವಾದ ಪೂರ್ವಕವಾಗಿ, ಕಡೆಯ ಪಕ್ಷ ಇಪ್ಪತ್ತು ವಿದ್ವಾಂಸರು ಜೊತೆಯಾಗಿ ವೇದೋಕ್ತಾಶೀರ್ವಾದಗಳನ್ನು ಅನುಗ್ರಹಿಸು ತ್ತಿದ್ದರು ಅದರ ಪರಿಣಾಮ ಕೇಳುವವರ ಮೇಲೆ ಅದ್ಭುತವಾಗಿರುತ್ತಿತ್ತು. ಎಲ್ಲರೂ ನಿಶ್ಶಬ್ದರಾಗಿರುತ್ತಿದ್ದರು. ಅಳುವ ಮಕ್ಕಳು ಅಳುವುದನ್ನು ನಿಲ್ಲಿಸುತ್ತಿದ್ದವು. ಮೈ ಜುಂ ಅನ್ನುತ್ತಿತ್ತು. ಕ್ರಮೇಣ ಮೈಮರೆತು ತಲ್ಲೀನನಾಗಿ ಸುತ್ತುಮುತ್ತಿನ ಪ್ರಜ್ಞೆಯೇ ನನಗಿರುತ್ತಿರಲಿಲ್ಲ, ಅಂಥಾ ಸಮಯಗಳಲ್ಲಿ! ಮೈಸೂರಲ್ಲಿ ದೊಡ್ಡ ಪಾಠಶಾಲೆಯಲ್ಲಿ ವಿನಾಯಕನನ್ನು ಕೆರೆಗೆ ಬಿಡುವ ಮುನ್ನ ಮಹಾಮಂಗಳಾರತಿಯಾದನಂತರ ಈ ವಿಧವಾದ ವೇದಘೋಷವನ್ನು (ಪಾಠಶಾಲೆಯಲ್ಲಿ ನೂರಾರು ಜನ ಒಟ್ಟಿಗೆ ಹೇಳು ತ್ತಿದ್ದರು) ಕೇಳಿ ಧನ್ಯನಾಗಿದ್ದೇನೆ. ಅದೇ ಪಾಠಶಾಲೆಯಲ್ಲಿ, ಶ್ರೀ ಶೃಂಗೇರಿ ಸ್ವಾಮಿ ಗಳು ಮೈಸೂರಿಗೆ ಬಂದಿದ್ದಾಗ್ಯ ಸ್ವಾಮಿಗಳ ಸನ್ನಿಧಿಯಲ್ಲಿ ಈ ವಿಧವಾದ ವೇದ ಘೋಷವನ್ನು ಕೇಳಿ ಪುನೀತನಾಗಿದ್ದೇನೆ. ಇಂತಹ ವೇದಘೋಷಗಳ ಶ್ರವಣವಾದ ಮೇಲೆ, ನಮ್ಮ ಪವಿತ್ರವಾದ 'ಶ್ರುತಿ' ಎಂಬ (ವೇದ) ಪದಕ್ಕೆ ಅರ್ಥವು ಮತ್ತಷ್ಟು

ಅರ್ಥಗರ್ಭಿತವಾಗುತ್ತದೆ. ಅಗ್ರಹಾರಗಳಲ್ಲಿ ವಾಸಿಸುತ್ತಿದ್ದ 'ವೈದಿಕರು' ಅನ್ವರ್ಥ ನಾಮಾಂಕಿತರಾಗಿದ್ದರು. 'ನಮೋ ಮಹದ್ಭ್ಯಃ ತೇಭ್ಯಃ'

ತಮ್ಮ ಮನೆ ಸಂಪ್ರದಾಯಗಳಂತೆ ಎಲ್ಲರೂ ಹಬ್ಬಗಳನ್ನೂ ವ್ರತಗಳನ್ನೂ ನಡೆಸುತ್ತಿದ್ದರು. ಮಂಗಳಾರತಿ ಪ್ರಸಾದಗಳಿಗೆ ನೆರೆಹೊರೆಯವರನ್ನು ಆಹ್ವಾನಿಸುವ ಪದ್ಧತಿಯಿತ್ತು. ಅದರಲ್ಲೂ ಹೆಂಗಸರಲ್ಲಿ ಈ ಪದ್ಧತಿ ವಿಶೇಷವಾಗಿ ಹರಡಿತ್ತು. ಸಮಾನ ಆಚಾರ ವ್ಯವಹಾರಗಳನ್ನು ಅನುಸರಿಸುತ್ತಲಿದ್ದ ಒಂದೇ ಅಗ್ರಹಾರದಲ್ಲಿ ಇಪ್ಪತ್ತು ಮುವ್ವತ್ತು ಸಂಸಾರಗಳು ಇಂಥಾ ಶುಭಸಮಯಗಳಲ್ಲಿ ಕಲೆತು ಸಂತೋಷಪಡಲು ಸುಲಭವಾಗಿತ್ತು. ಇದೇ ಸೌಕರ್ಯ ಅಗ್ರಹಾರದ ಗಂಡು ಹೆಣ್ಣು ಮಕ್ಕಳು ಕೆಲವು ಹಬ್ಬಗಳಲ್ಲಿ ಜೊತೆಗೂಡಿಕೊಂಡು ತಮ್ಮ ಆಟ ಮತ್ತು ಪೂಜೆಗಳನ್ನು ನಡೆಸಲು ಅನುಕೂಲವಾಗಿತ್ತು. ಉದಾಹರಣೆಗಳು :—ನವರಾತ್ರಿಯಲ್ಲಿ ಬೊಂಬೆ ಕೂರಿಸಿ ಪ್ರತಿನಿತ್ಯವೂ ಸಂಗಾತಿಯರೊಡನೆ ಬೊಂಬೆ ಆರತಿ ಮಾಡಿ ಬೊಂಬೆಬಾಗಿನವನ್ನು ಹಂಚಿ ಅಲಂಕಾರ ಮಾಡಿಕೊಂಡು ಹೊಸ ಬಟ್ಟೆಗಳನ್ನು ಉಟ್ಟು ಮನೆಯಿಂದ ಮನೆಗೆ ಮಿಂಚಿನ ಮರಿಗಳಂತೆ ಓಡಾಡುತ್ತಿದ್ದ ಹೆಣ್ಣುಮಕ್ಕಳ ಪೈಪೋಟಿ ಉತ್ಸಾಹ ಸಂಭ್ರಮಗಳು ಚಾಮರಾಜ ಅಗ್ರಹಾರದ ಒಂದು 'ಸ್ಪೆಷಲ್' (Special) ನೋಟ! ಅಗ್ರಹಾರದ ತಾತಂದಿರು ಈ ಹೆಣ್ಣುಮಕ್ಕಳನ್ನು ತಮಗೂ ಬೊಂಬೆ ಬಾಗಿನ ಕೊಡಬೇಕೆಂದು ಅಡ್ಡಕಟ್ಟಿ ವಿನೋದವಾಗಿ ಕೆಣಕುತ್ತಿದ್ದರು. ಹುಡುಗಿಯರು ಸಂತೋಷ ತುಂಬಿಕೊಂಡು ತಾತನ ಕೈತಪ್ಪಿಸಿಕೊಂಡು ಚೆಲ್ಲಾಪಿಲ್ಲಿಯಾಗಿ ಓಡಿಹೋಗುತ್ತಿದ್ದರು. ನೋಡಲು ಬಲು ಸೊಗಸು! ಅಂತೆಯೇ ಸಂಕ್ರಾಂತಿ ಹಬ್ಬದಲ್ಲಿ ತಾಯಂದಿರು ಮಕ್ಕಳಿಗೆ ಎರೆದು ಭಕ್ಷದ ಊಟ ಮಾಡಿಸಿ ಸಾಯಂಕಾಲ ಹಸೆಯ ಮೇಲೆ ಕೂರಿಸಿ ಆರತಿಯನ್ನೆತ್ತಿ ಬದರಿ ಫಲವನ್ನು ಆಶೀರ್ವಚನಗಳೊಡನೆ ಮಕ್ಕಳ ತಲೆಯ ಮೇಲೆ ವರ್ಷಿಸಿ ಸಂತೋಷಪಡುವ ತಾಯಿಯರಂತೆಯೇ ಮನೆಯ ಸಣ್ಣ ಹೆಣ್ಣುಮಕ್ಕಳು ಬೊಂಬೆಗಳಿಗೆ ಆರತಿ ಮಾಡಿ ಆ ಬೊಂಬೆಗಳನ್ನು ಕಂಕುಳಲ್ಲಿ ಎತ್ತಿಕೊಂಡು ಅಗ್ರಹಾರದ ಮನೆಗಳಲ್ಲಿ ಇರುವ ಸಂಗಾತಿಯರಿಗೆ ಬೊಂಬೆ ಎಳ್ಳುಬೀರುತ್ತಿದ್ದರು. ಈ ಮಕ್ಕಳ ಸಡಗರ ಆಸಕ್ತಿ ಉತ್ಸಾಹ ಉಲ್ಲಾಸಗಳನ್ನು ನೋಡಲು ಪರಮಾನಂದವಾಗುತ್ತಿತ್ತು. ಗಣೇಶನ ಹಬ್ಬದ ಚರುಪು ದಿನಗಳು ; ಗಣೇಶನನ್ನು ಕೆರೆಗೆ ಬಿಡುವ ದಿನ ಬುತ್ತಿ ತಿಂಡಿ ಕಟ್ಟಿಕೊಂಡು ಕೆರೆಗೆ ಸ್ನೇಹಿತರೊಡನೆ ಹೋಗುವುದು, ಪಟದ ಹಬ್ಬದ ಉತ್ಸಾಹಗಳು, ದೀಪಾವಳಿ ಹಬ್ಬದ ಪಟಾಕಿ ಬಾಣ ಬಿರುಸುಗಳ ಕೋಲಾಹಲ—ಇವುಗಳೆಲ್ಲಾ ಗಂಡುಮಕ್ಕಳ ಸಾಮೂಹಿಕ ಸಂಭ್ರಮಗಳ ಉದಾಹರಣೆಗಳು. ಅಗ್ರಹಾರದ ವೈದಿಕ ಬಾಳಿನ ಬೆಡಗುಗಳು ಇವು!

ಮೈಸೂರಲ್ಲಿ ವೈದಿಕ ವೃತ್ತಿ ನಾನಾಮುಖವುಳ್ಳದ್ದಾಗಿತ್ತು. ಜೀವನೋಪಾಯಕ್ಕೋಸ್ಕರ ವೈದಿಕರು ದೇವಸ್ಥಾನಗಳಲ್ಲಿ, ಮಠಗಳಲ್ಲಿ, ಅರಮನೆಯಲ್ಲಿ, ರಾಜಬಂಧುಗಳ ಮನೆಗಳಲ್ಲಿ, ಸಂಸ್ಕೃತ ಪಾಠಶಾಲೆಗಳಲ್ಲಿ, ಇತರ ಸ್ಕೂಲು ಕಾಲೇಜುಗಳಲ್ಲಿ, ಪೌರೋಹಿತ್ಯದಲ್ಲಿ—ಇತ್ಯಾದಿ ವಿಧವಿಧವಾದ ವೃತ್ತಿಗಳಲ್ಲಿ ಮಾಸಾಶನ (ತಿಂಗಳ

ಸಂಬಳ) ಕ್ಕೆ ಒಪ್ಪಿಕೊಂಡು ಕಾಲ ತಳ್ಳುತ್ತಿದ್ದರು. ಕೆಲವು ವೇಳೆ ಇದು ಕಷ್ಟ ಕಾರ್ಪಣ್ಯ ಗಳಿಗೆ ಒಳಗಾಗಿದ್ದ ಜೀವನವಾಗಿತ್ತು.

ಯಜನ ಯಾಜನ ಅಧ್ಯಯನ ಅಧ್ಯಾಪನ ದಾನ ಪರಿಗ್ರಹ—ಇವುಗಳಲ್ಲಿ ನಿರತ ನಾಗಿದ್ದ ಬ್ರಾಹ್ಮಣನಿಗೆ ತನ್ನ ಉದರ ಪೋಷಣೆಯ ಯೋಚನೆ ಇರುತ್ತಿರಲಿಲ್ಲ. ಆದರೆ ಇದು ಶ್ರೀರಾಮ ಧರ್ಮರಾಜರ ಕಾಲದ ಮಾತು. ನಾವಿರುವುದು ಕಲಿಯುಗದಲ್ಲಿ! ಆದರೂ ಅಗ್ರಹಾರದ ಆಗಿನ ವೈದಿಕರ ಜೀವನವು ಹೆಚ್ಚಾದ ಕಷ್ಟವಿಲ್ಲದೆ ನಡೆಯುತ್ತಿತ್ತು. ಇದಕ್ಕೆ ಕಾರಣ ಅವರ ಸಾತ್ವಿಕ ಸ್ವಭಾವ, ಲೌಕಿಕ ಹವ್ಯಾಸಗಳಿಂದ ದೂರವಾಗಿರು ವುದು, ನಿತ್ಯಾನಿತ್ಯ ಪರಿಜ್ಞಾನ, ವಿರಕ್ತಿಭಾವ—ಮೇಲಾಗಿ ವೈದಿಕ ಧರ್ಮಾಚರಣೆ ಯಲ್ಲಿ ಶ್ರದ್ಧೆ ಮತ್ತು ಲಬ್ಧಸಂತೃಪ್ತಿ! ಸಮಾಜದಲ್ಲಿ ಇವರಿಗೆ ಅಪಾರವಾದ ಗೌರವ ವಿತ್ತು. ಆ ಗೌರವಕ್ಕೆ ಅರ್ಹತೆಯನ್ನು ಕೊಡುವ ಶೀಲ ಸ್ವಭಾವ ಮತ್ತು ನಡತೆಗಳು ಇವರಲ್ಲಿ ಸ್ವಾಭಾವಿಕವಾಗಿರುತ್ತಿದ್ದವು. ಇವರದು ಸಮಾಧಾನ ಚಿತ್ತ. ನಿಧಾನವಾಗಿ ನಡೆಯುವರು, ಮೆಲ್ಲನೆ ಮಾತಾಡುವರು. ಪರೇಂಗಿತವನ್ನು ತಿಳಿದು ಉತ್ತರ ಕೊಡು ವುದು ಇವರ ಪದ್ಧತಿ. ಉಡುವುದು ಒಂದು ಪಂಚೆ, ಹೊದೆಯುವುದು ಒಂದು ಪಂಚೆ ಅಥವಾ ಶಾಲು; ಇವುಗಳನ್ನು ನಿರಾಡಂಬರವಾಗಿ, ಆದರೆ ಸುಂದರವಾಗಿ ಮೈತುಂಬ ಧರಿಸುವ 'ಚಾಲೋಕು' ಇವರಲ್ಲಿತ್ತು. ಹಣೆಯಲ್ಲಿ ಗಂಧಾಕ್ಷತೆಗಳು ಅಥವಾ ಅಂಗಾ ರಾಕ್ಷತೆಗಳು ಅಥವಾ ಊರ್ಧ್ವ ಪುಂಡ್ರಗಳು—ಇವುಗಳನ್ನು ಒಪ್ಪವಂತೆ ತಿದ್ದಿ ಇಟ್ಟು ಕೊಳ್ಳುತ್ತಿದ್ದರು. ವಿಶೇಷತಃ ಇವರ ಮುಖದಲ್ಲಿ ಗಾಂಭೀರ್ಯ, ನಿಷ್ಕಪಟ ಮತ್ತು ನಿರ್ಭಯವಾದ ದೃಷ್ಟಿ, ಮತ್ತು ಒಂದು ವಿಧವಾದ ತೇಜಸ್ಸು ಶೋಭಿಸುತ್ತಿದ್ದವು. ನೋಡಿದವರ ಮನಸ್ಸಿನಲ್ಲಿ ಇವರು 'ಪೂಜಾರ್ಹರು' ಎಂಬ ಭಾವನೆ ಸ್ವಪ್ರೇರಿತವಾಗಿ ಮೂಡುತ್ತಿತ್ತು.

ಮಧ್ಯಾಹ್ನದ ವೇಳೆಯಲ್ಲಿ ಸೂರ್ಯಾಸ್ತದ ತನಕ ಇವರುಗಳಿಗೆ ವಿರಾಮವಿರು ತ್ತಿತ್ತು. ಆ ಕಾಲವನ್ನು ಇವರು ತಿಳಿದ ವಿಷಯಗಳನ್ನು ಚಿಂತನೆ ಮಾಡುವುದು, ಗ್ರಂಥಾವ ಲೋಕನ, ಮನೆಗೆ ಬಂದ ವಿದ್ಯಾರ್ಥಿಗಳಿಗೆ ಪಾಠ ಹೇಳುವುದು, ಸ್ವತಃ ಕವಿತ್ವಮಾಡು ವುದು ಅಥವಾ ಗ್ರಂಥರಚನೆಯಲ್ಲಿ ತೊಡಗಿರುವುದು ಇಂತಹ ಸದ್ವ್ಯಾಸಂಗದಲ್ಲಿ ಕಳೆಯುತ್ತಿದ್ದರು. ಆಗಿಂದಾಗ್ಗೆ ಸ್ನೇಹಿತರುಗಳು, ಆರೇಳು ಮಂದಿ ಪಂಡಿತರುಗಳು, ಒಟ್ಟಿಗೆ ಸೇರಿ ವಿನೋದವಾಗಿ ಕಾಲಕಳೆಯುತ್ತಿದ್ದರು. ನಸ್ಯೋಪಾಸನೆ ತಡೆಯಿಲ್ಲದೆ ನಡೆಯುತ್ತಿತ್ತು. ಚತುರಂಗ ಆಟವಾಡುವುದೂ ಇವರಲ್ಲಿ ವಾಡಿಕೆಯಾಗಿತ್ತು. ಸಲಿಗೆಯಿಂದ ಕೂಡಿದ ಮಾತುಕತೆಗಳು ಮೃದು ಹಾಸ್ಯದೊಡನೆ ನಡೆಯುತ್ತಿದ್ದವು. ಕೆಲವು ವೇಳೆ ಕಾವ್ಯ ರಸಾಸ್ವಾದ, ಸ್ಫೂರ್ತಿದಾಯಕವಾದ ಪಂಡಿತ ಸಂಭಾಷಣೆ, ಗಹನವಾದ ವಿಷಯದಲ್ಲಿ ವಾಕ್ಯಾರ್ಥ, ಸ್ವಕವಿತಾನಿವೇದನ—ಇವುಗಳು ನಡೆಯುತ್ತಿದ್ದವು. ದೊಡ್ಡವರೊಡನೆ ಸರಿಸಮಾನಸ್ಕಂಧರಾಗಿ ಇಂಥಾ ಸಂದರ್ಭಗಳಲ್ಲಿ ಭಾಗವಹಿಸಲು ಅವಕಾಶವಿಲ್ಲದಿದ್ದರೂ ಸುತ್ತುಮುತ್ತಲಿರುತ್ತಿದ್ದ ಚಿಕ್ಕವರಿಗೆ ನಾನಾವಿಧಗಳಲ್ಲಿ ಜ್ಞಾನ ವಿಸ್ತಾರವಾಗುತ್ತಿತ್ತು. ಸುಲಲಿತವಾಗಿ ವಿದ್ಯಾರ್ಜನೆ! ಆ ಕಿರಿಯ ಪಂಡಿತರು ಧನ್ಯರು; ಅಲ್ಲವೆ?

ಕೆಲವು ಪಂಡಿತರಿಗೆ ಸಂಗೀತ ಜ್ಞಾನವಿತ್ತು. ಮಧ್ಯಾಹ್ನ ದೇವತಾರ್ಚನೆ ಮುಗಿದ ಮೇಲೆ ಅವರು ಶ್ರೀಮದ್ರಾಮಾಯಣ ಪಾರಾಯಣವನ್ನು ಕಥಾಸಂದರ್ಭಾನುಸಾರ ವಾಗಿ ಬೇರೆ ಬೇರೆ ರಾಗಗಳಲ್ಲಿ ಮಾಡುತ್ತಿದ್ದರು. ವಿಶೇಷತಃ ಸಾಯಂಸಂಧ್ಯಾ ಮುಗಿದ ಮೇಲೆ ದೇವತಾಸ್ತೋತ್ರಗಳನ್ನು ಮಧುರವಾಗಿ ಭಕ್ತಿರಸವನ್ನು ಸೂಸುತ್ತಿರುವ ಮುಕ್ತಕಂಠದಿಂದ ಹಾಡುತ್ತಿದ್ದರು. ಅನೇಕ ವೇಳೆ ತಾವೇ ರಚಿಸಿದ ಸ್ತೋತ್ರಗಳನ್ನು ನಿವೇದನ ಮಾಡುತ್ತಿದ್ದರು. ಉದ್ದಿಷ್ಟ ದೇವರುಗಳು ಆ ಸಮಯದಲ್ಲಿ ಅಂತರಿಕ್ಷದಲ್ಲಿ ಅದೃಶ್ಯವಾಗಿದ್ದುಕೊಂಡು ಸ್ತೋತ್ರಗಳನ್ನು ಕೇಳಿ ಸುಪ್ರೀತರಾಗುತ್ತಿದ್ದರಂತೆ!

ಸಮಾಜದಲ್ಲಿ ಇತರರೊಡನೆ ವ್ಯವಹರಿಸುವಾಗ ತಮ್ಮ ಸ್ವಂತ ನಂಬಿಕೆ ಮತ್ತು ಅಭಿಪ್ರಾಯಗಳಿಗೆ ವ್ಯತಿರಿಕ್ತವಾದ ನಂಬಿಕೆ ಮತ್ತು ಅಭಿಪ್ರಾಯಗಳನ್ನು ಇತರರು ವ್ಯಕ್ತಗೊಳಿಸಿದರೆ ನಮ್ಮ ಪಂಡಿತರುಗಳು ಕುಪಿತರಾಗದೆ ತಾಳ್ಮೆ ಮರ್ಯಾದೆಗಳೊಡನೆ ಪ್ರತಿಪಕ್ಷದ ಮತಸ್ಥಾಪನೆಗೆ ಆಧಾರವಾದ ತರ್ಕವಾದಗಳನ್ನು ಸೈರಣೆಯಿಂದ ಕೇಳು ತ್ತಿದ್ದರು. ತಾಳ್ಮೆಯನ್ನು ತೋರಿಸುವುದಲ್ಲದೆ ಪ್ರತಿವಾದಿಯ ತೇಜೋವಧೆಯನ್ನು ಎಂದಿಗೂ ಮಾಡುತ್ತಿರಲಿಲ್ಲ. ಇದು ಗುಣಗ್ರಾಹಿಗಳ ಉದಾರಸ್ವಭಾವ.

ವೈದಿಕ ಧರ್ಮಾಚರಣೆಯ ಪ್ರತಿ ಭಾಗವಿಭಾಗವೂ ಸಮುಚ್ಚಯ ಭಾವನೆ ಯಿಂದ 'ವೈದಿಕ ಸಂಪತ್ತು' ಎಂದು ಹೇಳಬಹುದು ನೆನಪಿಗೆ ಬಂದ ಆ ಸಂಪತ್ತಿನ ಕೆಲವು ಅಂಶಗಳನ್ನು ಸಂಕ್ಷೇಪವಾಗಿ ನಿರೂಪಿಸಿದ್ದಾಯಿತು. ಇನ್ನೂ ಅನೇಕ ಸ್ವಾರಸ್ಯ ವಾದ ವಿಷಯಗಳನ್ನು ಬರೆಯಬಹುದು. ಆದರೆ ಈಗ ಕೊಟ್ಟಿರುವ ಸ್ಥಳಮಿತಿಯನ್ನು ಮೀರುವುದು ಅನುಚಿತ.

೩

೧೮೮೮ರಿಂಭ ೧೯೦೮ನೇ ಇಸವಿ—ಹತ್ತು ವರ್ಷಗಳನ್ನು, ನನ್ನ ಬಾಲ್ಯದ ಮುಖ್ಯಭಾಗವನ್ನು, ಮೈಸೂರಿನಲ್ಲಿ ನಾನು ನನ್ನ ಪೂಜ್ಯರಾದ ತಂದೆಯವರ ರಕ್ಷಣೆ ಯಲ್ಲಿ ಅಗ್ರಹಾರಗಳಲ್ಲಿ ಕಳೆದೆ. ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳ ಸಂಭಾವನಾ ಗ್ರಂಥ ಪ್ರಕಟನ ಸಮಿತಿಯವರು ನಾನೂ ಒಂದು ಲೇಖನವನ್ನು ಬರೆದುಕೊಡಬೇ ಕೆಂದು ಆಹ್ವಾನವಿತ್ತರು. ಗಾಢವಾದ ವಿಷಯಗಳ ಮೇಲೆ ಪ್ರಬಂಧಗಳನ್ನು ಬರೆ ಯಬಲ್ಲ ಪಂಡಿತರು ನೂರಾರುಮಂದಿ ಇದ್ದಾರೆ ಶ್ರೀ ಕೃಷ್ಣಶಾಸ್ತ್ರಿಗಳಿಗೆ ಅಲ್ಪಸ್ವಲ್ಪ ವಾದರೂ ಸಂತೋಷವಾಗುವ ಯಾವುದಾದರೂ ಒಂದು ವಿಷಯದಲ್ಲಿ ನಾಲ್ಕು ಪಂಕ್ತಿ ಗಳನ್ನು ಬರೆಯಬೇಕೆಂಬ ಉದ್ದೇಶದಿಂದ, ನನ್ನಂತೆಯೇ ಮೈಸೂರಿನಲ್ಲಿ ಶ್ರೀ ಕೃಷ್ಣಶಾಸ್ತ್ರಿ ಗಳು ತಮ್ಮ ಬಾಲ್ಯದಲ್ಲಿ ಅನೇಕ ವರ್ಷಗಳನ್ನು ಅಗ್ರಹಾರಗಳಲ್ಲಿ ಕಳೆದಿರಬೇಕೆಂದು ಊಹಿಸಿ ನನ್ನ ಬಾಲ್ಯದ ಕೆಲವು ನೆನಪುಗಳನ್ನು ಬರೆದದ್ದಾಯಿತು. ಈ ನನ್ನ ಅಲ್ಪ ಕಾಣಿಕೆಯನ್ನು ಸ್ವೀಕರಿಸಬೇಕೆಂದು ಅವರನ್ನು ಪ್ರಾರ್ಥಿಸುತ್ತೇನೆ.

ತಸ್ಮೈ ಶ್ರೀಗುರವೇ ನಮಃ

ಎಸ್. ಜಿ. ಶಾಸ್ತ್ರಿ

# ನಾಟಕಗಳ ಪುನರುಜ್ಜೀವನ

ನಮಗೆ ಎಲ್ಲ ಪ್ರಾಚೀನ ನಾಗರಿಕತೆಗಳಲ್ಲಿನ ನಾಟಕದ ಇತಿಹಾಸ ಸಂಪೂರ್ಣ ತಿಳಿಯದಾದರೂ ಚೀನ, ಗ್ರೀಸ್, ರೋಮ್ ಭಾರತ ದೇಶಗಳ ಇತಿಹಾಸ ಪರಂಪರೆಯನ್ನು ಪರಿಶೀಲಿಸಿದಲ್ಲಿ, ಈ ಕಲೆಗೆ ಎರಡು ಸಾವಿರ ವರ್ಷಗಳ ಅಥವಾ ಹೆಚ್ಚಿನ ಹಿನ್ನೆಲೆ ಇರುವಂತೆ ಕಾಣುತ್ತದೆ. ನಾಟಕದ ಕಥಾವಸ್ತುಗಳನ್ನು ಸಾಹಿತ್ಯ ದೃಷ್ಟಿಯಿಂದ ಓದುವ ಪರಿಪಾಠವೂ, ತಿರುಗಿ ಅದನ್ನು ದೃಶ್ಯ ಚಿತ್ರವನ್ನಾಗಿ ತೋರಿಸುವ ಪರಿಪಾಠವೂ ಬಹು ಹಿಂದಿನಿಂದ ಬಂದಿವೆ. ಗ್ರೀಕ್ ದುರಂತ ನಾಟಕಗಳೆಂಬುವು, ಆಗಿನ ಕಾಲದ ಗ್ರೀಸ್ ದೇಶದ ಸಂಸ್ಕೃತಿಯ ಹೆಗ್ಗುರುತು ಎನಿಸಿಕೊಂಡಿದ್ದವು. ಅನಂತರ ಯುರೋಪಿನಲ್ಲೆಲ್ಲಾ ಬೆಳೆದು ಉಳಿದುಕೊಂಡಿರುವ ನಾಟಕ ಕಲೆಗೆ ಇದೇ ಸ್ಫೂರ್ತಿಯಾಗಿತ್ತು. ಯುರೋಪು ಈ ಪ್ರಾಚೀನ ಪರಂಪರೆಯನ್ನು ತನ್ನ ಜೀವನದ ಅಂಗವೆಂಬಷ್ಟು ಶ್ರದ್ಧೆಯಿಂದ ಇಂದಿಗೂ ಬೆಳೆಸಿ ಉಳಿಸಿಕೊಂಡು ಬಂದಿದೆ. ಜನಗಳ ತಿಳಿವಿಗೂ, ಆನಂದಕ್ಕೂ, ಸತ್ಯದರ್ಶನಕ್ಕೂ ಅದೊಂದು ಪ್ರಮುಖ ಕಲಾಸಾಧನವಾಗಿ ಉಳಿದಿದೆ. ಗ್ರೀಸಿನ ವೈಭವದ ಕಾಲದಿಂದಲೂ ಇಂದಿನ ತನಕ ನಾಟಕಗಳ ವಿಕಾಸ, ಬೆಳವಣಿಗೆಗಳೆಲ್ಲ ಒಂದೇ ಗತಿಯಿಂದ ಬೆಳೆದು ಬಂದಿದೆ—ಎಂಬುದು ಈ ಮಾತಿನ ಅರ್ಥವಲ್ಲ. ಕಲೆ, ಸಾಹಿತ್ಯ ಮೊದಲಾದುವು ಒಂದೊಂದು ಜನಾಂಗದ, ಒಂದೊಂದು ಪರ್ವಕಾಲದಲ್ಲಿ ವಿಶೇಷ ಆದರ, ಪ್ರಗತಿ ಹೊಂದುತ್ತವೆ. ಇನ್ನು ಎಷ್ಟೋ ಕಾಲ, ಕೆಲವು ಶತಮಾನಗಳ ತನಕವೂ, ಅವು ಬರಿದೆ ಜೀವವನ್ನು ಹಿಡಿದುಕೊಂಡು ಉಸಿರಾಡುತ್ತವೆ. ಅದನ್ನು ಜನರು ಸಂಪೂರ್ಣವಾಗಿ ಮರೆತರೆ, ಆ ಸಂಪ್ರದಾಯವೇ ಸತ್ತು ಪ್ರಗತಿಯ ಹಾದಿ ಇನ್ನಷ್ಟು ಕಷ್ಟವಾಗುತ್ತದೆ. ಗ್ರೀಕ್ ಟ್ರೆಜಡಿಗಳ ಕಾಲಕ್ಕೂ ಕಾಲಗತಿಯಿಂದುಂಟಾದ ವ್ಯತ್ಯಾಸ ಎಷ್ಟೋ ಇದೆ. ನಾಟಕಗಳ ರಚನೆಯಲ್ಲಿ, ಅವು ಪ್ರತಿಪಾದಿಸುವ ವಸ್ತುವಿನಲ್ಲಿ, ಅವನ್ನು ರಂಗಭೂಮಿಗೆ ತರುವ ಪ್ರಯೋಗದಲ್ಲಿ ಹಲವು ಮಾರ್ಗಗಳು ಹುಟ್ಟಿಕೊಂಡಿವೆ. ಎಷ್ಟೋ ಹಳೆಯ ರೂಪಗಳು ಸತ್ತಿವೆ. ಆದರೆ ಇಂದು ಉಳಿದಿರುವ ಅವರ ನಾಟಕಗಳನ್ನು ನೋಡುವಾಗ, ಅವುಗಳ ಪ್ರಭೇದಗಳನ್ನು ಎಣಿಸುವಾಗ, ಒಟ್ಟಿನಿಂದ ಆದ ಹಾನಿಗಿಂತಲೂ ದೊರೆತ ಲಾಭವು ಎಷ್ಟೋ ಹೆಚ್ಚೆಂದು ಕಾಣುತ್ತದೆ. ಜಪಾನು, ಚೀನಾ ದೇಶಗಳಲ್ಲಿ ಹಳೆಯ ಸಂಪ್ರದಾಯದ ನಾಟಕಗಳನ್ನು ಇಂದಿಗೂ ಪ್ರದರ್ಶಿಸುತ್ತಿದ್ದಾರೆ. ಅವನ್ನು ಜನ ಮೆಚ್ಚುತ್ತಿದ್ದಾರೆ. ಹಾಗೆಯೇ ಚೀನದ ನಾಟಕಗಳಿಗೂ ಸಾವಿರಾರು ವರ್ಷಗಳ ಬೆಳವಣಿಗೆ ಇದೆ. ಆದರೆ ನನಗೆ ಅವುಗಳ ಅನುಭವ ಸಾಲದು ; ನಾನು ಹೆಚ್ಚಿಗೆ ಹೇಳುವಂತಿಲ್ಲ.

ಭಾರತ ದೇಶದಲ್ಲಿ ನಾಟಕದ ಮೂಲವನ್ನು, ಗ್ರೀಸಿನ ಜನಗಳಂತೆಯೆ ಋಷಿ, ದೇವತೆಗಳಿಗೆ ಒಯ್ಯುತ್ತಿದ್ದುದುಂಟು. ಆಗ ನಾಟಕ ಹೇಗೆ ಆಡುತ್ತಿದ್ದರು ಎಂಬ

ಕಲ್ಪನೆ, ಇಂದಿನ ನಮಗೆ ದೊರೆಯುವುದು ಶಕ್ಯವಿಲ್ಲ. ಆದರೆ ನಮ್ಮ ಪಾಲಿಗೆ ಉಳಿದು ದೊರಕಿರುವ ಸಂಸ್ಕೃತ ನಾಟಕಗಳ ಕಾವ್ಯ ಸೌಂದರ್ಯವನ್ನಾಗಲಿ, ಭಾವರಸ ವಿಲಾಸ ಗಳನ್ನಾಗಲೀ ಕಾಣುತ್ತಿರುವ ನಮಗೆ ಈ ನಾಟಕ ಪರಂಪರೆಯನ್ನು ಕುರಿತು ಹೆಮ್ಮೆ ಯುಂಟಾಗಬೇಕು. ಸಾಹಿತ್ಯದ ದೃಷ್ಟಿಯಿಂದ ಅವುಗಳ ಅಧ್ಯಯನವನ್ನು ನಡೆಯಿಸು ತ್ತಿರುವ ಜನರು ನಮ್ಮಲ್ಲಿ ಸಾಕಷ್ಟು ಮಂದಿ ಇದ್ದಾರೆ. ನಮ್ಮ ಕಣ್ಣಿಗೆ ಕಾಣಿಸದಿರುವ ಭಾಗವೆಂದರೆ—ಅವರ ರಂಗಪ್ರಯೋಗ. ರಂಗಭೂಮಿಯ ದೃಷ್ಟಿಯಿಂದ ಕಾಳಿದಾಸ, ಭಾಸ, ಶೂದ್ರಕ ಮೊದಲಾದವರೆಲ್ಲರೂ ಬರಿಯ ಹೆಸರುಗಳಾಗಿದ್ದಾರೆ ನಮಗೆ. ಇಂಗ್ಲಿಷ್ ನಾಟಕಗಳಿಗೆ ಇಷ್ಟೊಂದು ಪ್ರಾಚೀನ ಪರಂಪರೆ ಇಲ್ಲ ಎಂಬುದು ನಿಜವಾದ ಮಾತು. ಆದರೆ ಇಂಗ್ಲಿಷ್ ಜನಗಳ ಪಾಲಿಗೆ ಶೇಕ್ಸ್‌ಪಿಯರ್ ಇನ್ನೂ ಜೀವಂತ ನಾಟಕ ಕಾರನಾಗಿದ್ದಾನೆ. ಫ್ರಾನ್ಸ್, ಇಟಲಿ ದೇಶಗಳು ಸಹ ತಮ್ಮ ರಂಗಭೂಮಿಯನ್ನು ಬಹು ಸುಂದರವಾಗಿ ಕಾಯ್ದು ಬಂದಿವೆ.

ನಮ್ಮ ದೇಶದಲ್ಲಿ ಅನೇಕ ಕಾರಣಗಳಿಂದ, ಸಂಸ್ಕೃತಕ್ಕಿದ್ದ ಮನ್ನಣೆ ಹೋಯಿತು. ಜನಸಾಮಾನ್ಯರ ಮಾತು ಸಂಸ್ಕೃತವಲ್ಲವಾದುದೊಂದು ಮುಖ್ಯ ಕಾರಣ. ಇದರಿಂದ ಸಂಸ್ಕೃತ ರಂಗಭೂಮಿ ಕಣ್ಮರೆಯಾಯಿತು. ಆದರೆ ಸಂಸ್ಕೃತ ನಾಟಕಗಳೇ ನಮ್ಮ ದೇಶಭಾಷೆಗಳಲ್ಲಿನ, ನಾಟಕಗಳಿಗೆ ಪ್ರೇರಕವಾದುವು. ಅವಿಲ್ಲದಿದ್ದರೆ ಕನ್ನಡದಲ್ಲಂತು ನಾಟಕಗಳು ಹುಟ್ಟುತ್ತಿದ್ದುವೋ, ಇಲ್ಲವೋ! ಆದರೆ ನಮ್ಮ ದೇಶ ಭಾಷೆಗಳಲ್ಲಿ— ನಮ್ಮ ಮಹಾಕವಿಗಳ ನಾಟಕಗಳನ್ನು ಆಡುತ್ತಿರುವುದನ್ನು ನಾವು ಇಂದೇತಕ್ಕೆ ಕಾಣ ಲಾರೆವು?

ಕನ್ನಡನಾಡಿನ ಕೆಲವಾದರೂ ಹಳೆಯ ಸ್ಮರಣೆಗಳನ್ನು ತಂದುಕೊಳ್ಳೋಣ. 'ಮಿತ್ರವಿಂದಾ ಗೋವಿಂದ' ನಾಟಕದಿಂದ ತೊಡಗಿ, ವೇಣೀಸಂಹಾರ, ಶಕುಂತಲಾ ಮೊದಲಾದ ನಾಟಕಗಳು – ನಮಗೂ ಸಂಸ್ಕೃತದಿಂದಲೇ ಬಂದುವು. ನಮ್ಮಲ್ಲಿಯೂ ಹಲವು ಶತಮಾನಗಳ ಬಳಿಕ ಕನ್ನಡದ ರಂಗಭೂಮಿ ಹುಟ್ಟಿಕೊಂಡಿತು. ನಮ್ಮ ಮಾರ್ಗಪದ್ಧತಿಯ ರಂಗರಚನೆಗೆ ಜಾನಪದ ನಾಟಕಗಳು ಮೂಲ ಪ್ರೇರಣೆಯನ್ನು ಕೊಟ್ಟುವು. ಭರತಮುನಿಯ ನಾಟ್ಯ ನಿರ್ದೇಶನ ಪದ್ಧತಿಯು ನಮಗೆ ಅಂದರೆ, ಹೊಸಗನ್ನಡ ನಾಟಕಕ್ಕೆ, ರಂಗಭೂಮಿಯ ದೃಷ್ಟಿಯಿಂದ ನಿರ್ದೇಶನ ಕಲ್ಪಿಸದೆ ಹೋದರೂ, ಜಾನಪದವಾದ ಯಕ್ಷಗಾನ, ಪಾರಿಜಾತ, ಕಿಲ್ಲಿಕೇತನ ಆಟ, ತೊಗಲು ಗೊಂಬೆಯ ಆಟಗಳು—ಕನ್ನಡ ರಂಗಭೂಮಿಯ ಜನ್ಮಕ್ಕೆ ಕಾರಣವಾದವು. ಯಕ್ಷ ಗಾನವು ಮಹಾರಾಷ್ಟ್ರ ರಂಗಭೂಮಿಗೆ ಪ್ರೇರಣೆಯನ್ನು ಕೊಟ್ಟಿತು. ಅಲ್ಲಿಂದ ಮರು ಪ್ರೇರಣೆ, ತಿರುಗಿ ಕನ್ನಡಕ್ಕೆ ಬಂದಿತು. ಇದರಿಂದ ಕನ್ನಡ ನಾಡಿನ ಹತ್ತೆಂಟು ಕಡೆ ಗಳಲ್ಲಿ ನಾಟಕ ಮಂಡಲಗಳು ಹುಟ್ಟಿಕೊಂಡುವು. ಅವುಗಳನ್ನೆಲ್ಲ ಹೆಸರಿಸುವುದು ಸದ್ಯಕ್ಕೆ ಅವಶ್ಯವಿಲ್ಲವಾದರೂ ಎ. ವಿ. ವರದಾಚಾರ್ಯರು ಸ್ಥಾಪಿಸಿದ 'ರತ್ನಾವಳಿ ನಾಟಕ ಮಂಡಲ'ವು ನಮ್ಮ ಪ್ರಾಚೀನ ಸಂಸ್ಕೃತಿಯ ಪರಂಪರೆಯ ನಾಟಕಗಳ,

ಅಪೂರ್ಣವಾದರೂ ಮಹತ್ವದ, ಪರಿಚಯವನ್ನುಂಟುಮಾಡಿ ಕೊಟ್ಟಿತು. ಆಸ್ಥಾನ ವಿದ್ವಾನ್ ಬಸಪ್ಪ ಶಾಸ್ತ್ರಿಗಳ ಶಾಕುಂತಲಾ ನಾಟಕವು ಕಾಳಿದಾಸನ ಮೂಲಕೃತಿಯ ಅನುವಾದವಷ್ಟೆ. ಅದನ್ನು ಕನ್ನಡ ಜನಕ್ಕೆ ಪರಿಚಯ ಮಾಡಿಕೊಟ್ಟ ಕೀರ್ತಿಯು ದಿ. ವರದಾಚಾರ್ಯರಿಗೆ ಸಲ್ಲಬೇಕು. ತೀರ ಎಳೆಯನಾಗಿದ್ದಾಗ ಅವರ ಹಲವಾರು ನಾಟಕಗಳನ್ನು ನೋಡಿದ ನಾನು, ಅವರು ಕನ್ನಡ ರಂಗಭೂಮಿಗೆ ಕೊಟ್ಟ ಪ್ರೇರಣೆಯನ್ನು ಎಂದೂ ಮರೆಯುವಂತಿಲ್ಲ. ಶಾಕುಂತಳ ಕಾವ್ಯದ ಸೊಗಸನ್ನು—ಕಂದ, ವೃತ್ತ, ನಟನೆಗಳ ಮೇಳದಿಂದ ಕನ್ನಡ ಜನಕ್ಕೆ ಒದಗಿಸಿ ಕೊಟ್ಟ ಹಿರಿಮೆ ಅವರದ್ದು. ಸಂಸ್ಕೃತ ನಾಟಕಗಳ ಉದಾತ್ತ ನಾಯಕ, ನಾಯಕಿ, ವಿದೂಷಕರ ಪರಂಪರೆಯ ರೂಪಗಳು ಹೇಗೆಂದು ತೋರಿಸಿದ ಹಿರಿಮೆ ಅವರದು. ಅವರ ರಂಗರಚನೆ—ಅಂದರೆ ದೃಶ್ಯಾವಳಿ, ಉಡುಗೆ ತೊಡುಗೆ ಇವೆಲ್ಲ ಕಾಳಿದಾಸನಿಗೆ ಅಪಚಾರ ಮಾಡಿದ್ದುವು. ಉರ್ದು, ಫಾರ್ಸಿ ನಾಟಕಗಳ ಪ್ರಭಾವದಿಂದ ಅವರ ರಂಗಭೂಮಿಯ ಸಲಕರಣೆಗಳು ಹುಟ್ಟಿದುವು. ಆ ಉರ್ದು ನಾಟಕಗಳು ವಿದೇಶೀಯ ರಂಗಭೂಮಿಯ ಕಸಿಗಳಾಗಿದ್ದುವು. ಹಾಗೆ ನೋಡ ಹೋದರೆ, ಇಂದಿಗೂ ನಮ್ಮ ರಂಗಭೂಮಿಯಲ್ಲಾಗಲೀ, ಚಲಚ್ಚಿತ್ರಗಳಲ್ಲಾಗಲೀ ಈ ವಿಷಯದಲ್ಲಿ ಸಮನಾದ ಜ್ಞಾನ ಬಂದಿಲ್ಲ. ಆದರೆ ಇಷ್ಟೊಂದು ಅಪಸ್ವರಗಳನ್ನು ಮೀರಿಸಿಯೂ, ನಮ್ಮ ಪ್ರಾಚೀನ ನಾಟಕಗಳ ಧರ್ಮ, ಕಾವ್ಯ ಸೌಂದರ್ಯ—ಎಂಥವು ಎಂದು ಅರಿವು ಮಾಡಿಕೊಟ್ಟವರು ವರದಾಚಾರ್ಯರು. ಅವರ ಶಕುಂತಲೆಯ ಸಾಲಿಗೆ ಬರಲಾರದಾದರೂ, ಅವರ 'ರತ್ನಾವಳಿ'ಯೂ ಕಡಿಮೆಯ ನಾಟಕವಲ್ಲ. ಹಳೆಯದಕ್ಕೆ ಕಣ್ಣು ತೆರೆದಂತೆ, ಬಿ.ಎ. ಕಲಿತ ಅವರಿಗೆ, ಹೊಸದಕ್ಕೂ ಕಣ್ಣು ತೆರೆದಿತ್ತು. ಶೇಕ್ಸ್‌ಪಿಯರಿನ 'ಒಥೆಲೊ'ವನ್ನು 'ಶೂರಸೇನ ಚರಿತ್ರೆ'ಯಾಗಿ ಅನುವಾದಿಸಿ, ಪಾಶ್ಚಾತ್ಯ ದುರಂತ ನಾಟಕದ ತೀವ್ರತೆಯನ್ನು ನಮಗೆ ಅವರೇ ತೋರಿಸಿಕೊಟ್ಟರು. ಆಗಿನ ಕಾಲಕ್ಕೆ 'ಇಂದಿರಾ ಮಾಧವ' ದಂತಹ (ಇದು ಅವರ ಸ್ವಂತ ಕೃತಿ) ಒಂದು ಬಗೆಯ ಹೊಸ ಪರಂಪರೆಯ ನಾಟಕವನ್ನು ತಂದು ಕೊಟ್ಟರು. ಇದೇ ವೇಳೆಗೆ ಧಾರವಾಡ ಮೊದಲಾದ ಭಾಗಗಳಲ್ಲಿ ಹಲವು ನಾಟಕ ಮಂಡಳಿಗಳು ಹುಟ್ಟಿಕೊಂಡವು. ಪ್ರಭಾವತಿ ದರ್ಬಾರ್, ಬಕಾವಲೀ, ವಿಕ್ರಮ ಶಶಿಕಲಾದಂತಹ ಪಾಮರ ರಂಜನೆಯ ನಾಟಕಗಳು ಪ್ರದರ್ಶನಕ್ಕೆ ಬಂದವು. ಅನಂತರ ಮಹಾರಾಷ್ಟ್ರದ ನಾಟಕಗಳ ಪ್ರಭಾವ, ದೃಶ್ಯಾವಳಿಗಳ ಪ್ರಭಾವ, ಇವೆಲ್ಲವೂ ನಮ್ಮ ನಾಡಿಗೆ ಬಂದು, ಅನೇಕ ನಾಟಕಗಳು ಹುಟ್ಟಿ, ಹಳ್ಳಿ ಹಳ್ಳಿಗಳಿಗೂ ನಾಟಕವೆಂಬುದು ಜನರ ಮನರಂಜನೆಯ ಸಾಧನವಾದುದನ್ನು ಬಲ್ಲೆವು. ಇದೇ ಪ್ರೇರಣೆ—ಅನೇಕ ಸಣ್ಣ ಪಟ್ಟಣಗಳಲ್ಲೂ, ದೊಡ್ಡ ನಗರಗಳಲ್ಲಿನ ನಾಟ್ಯವಿಲಾಸೀ (ameteur) ಸಂಘಗಳಿಗೆ ಜನ್ಮಕೊಟ್ಟಿತು. ಅವರಿಂದಲೂ ನಾಟಕಗಳು ಪ್ರದರ್ಶನಕ್ಕೆ ಬರತೊಡಗಿದುವು. ಈ ಎಲ್ಲಾ ಪ್ರಯತ್ನಗಳು ದೋಷಭರಿತವಾಗಿದ್ದರು ಕೂಡ, ರಂಗಭೂಮಿಯ ಬೆಳವಣಿಗೆಯ ದಾರಿಯಲ್ಲಿ ಅನಿವಾರ್ಯವೂ, ಅವಶ್ಯವೂ ಆಗಿದ್ದುವು. ಆದರೆ ನಮ್ಮ

ಕಾಲಕ್ಕೆ ಬಂದರೆ ಚಲಚ್ಚಿತ್ರಗಳ ಆಘಾತದಿಂದಾಗಿ ವ್ಯವಸಾಯ ರಂಗಭೂಮಿಗಳು ಮಾಯವಾಗುವಂತಾಗಿದೆ. ಅಲ್ಲಿ, ಇಲ್ಲಿ ಕೆಲವೊಂದು ಸಂಸ್ಥೆಗಳು ಬರಿದೇ ಉಸಿರಾಡಲು ಪ್ರಯತ್ನಿಸುತ್ತಿವೆಯಾದರೂ ಅವು ಉಸಿರು ಹಿಡಿದುಕೊಂಡು ಇರುವುದು ಕಷ್ಟವಾಗಿದೆ. ಜನರ ಪ್ರೋತ್ಸಾಹ ಅವರಿಗೆ ದೊರೆಯದಾಗಿದೆ. ಅದರಂತೆ ನಾಟ್ಯ ವಿಲಾಸಿಗಳಿಗೂ ಪ್ರೋತ್ಸಾಹವಿಲ್ಲ. ಅವರಲ್ಲಿ ಶ್ರದ್ಧೆಯೂ ಉಳಿದಿಲ್ಲ. ನಾಟಕ ತಿರುಗಿ ಶ್ರವ್ಯ ಕಾವ್ಯವಾಗಿ ಉಳಿಯುವಂತಾಗಿದೆ. ಈಗ ಇನ್ನಿತರ ಸಾಹಿತ್ಯ ಪ್ರಕಾರಗಳು ಶ್ರಾವಕನ ಮನರಂಜನೆ ಮಾಡುವುದಕ್ಕೆ ಇರುವಾಗ, 'ನಾಟಕ' ವೆಂಬ ಶ್ರವ್ಯ ಕಾವ್ಯವು ಎಷ್ಟು ದಿನ ಉಳಿದೀತು? ಎಂಬ ಪ್ರಶ್ನೆ ನಮ್ಮ ಎದುರಿಗೆ ಬರುತ್ತದೆ, ಉಳಿಯಬೇಕು ಎಂಬ ಆಸೆ ಹಲವರಲ್ಲಿ ಇರಬಹುದಾದರೂ, ಉಳಿಸುವ ಪ್ರಯತ್ನ ದೇಶದಲ್ಲಿ ಏನು ನಡೆದಿದೆ?

ನಮಗೆ ಚಲಚ್ಚಿತ್ರ ಕಲೆಯಲ್ಲಿ ಮಾರ್ಗದರ್ಶನವನ್ನು ಮಾಡಿದವರು ಪಾಶ್ಚಾತ್ಯರು. ಈ ಹೊತ್ತು ಮನೆ, ಮನೆಗೂ ಒಂದು ವಿಧದ ನಾಟಕವನ್ನು ಒಯ್ದು, ರಂಗಭೂಮಿಗೇ ಹೋಗಬೇಕಾಗಿಲ್ಲ, ಎಂದು ಟೆಲಿವಿಜನ್ ನಿರ್ಮಾಣಮಾಡಿ ತೋರಿಸುತ್ತಿರುವವರೇ ಅವರು. ಹೊಸತಾದ ಈ ಮನರಂಜನೆಯಲ್ಲಿ, ನಾಟಕರೂಪದ ಸಾಮುಗ್ರಿಗಳು, ಬಂದಿವೆ ಎಂದು ತಮ್ಮ ರಂಗಭೂಮಿಗೆ ಶರಣು ಹೊಡೆದಿಲ್ಲ. ಯುರೋಪಿನಲ್ಲಿ ತಮ್ಮ ನಾಡಿನ ಹಳೆಯ ನಾಟಕಗಳನ್ನು ಇನ್ನು ಆಡುತ್ತಿದ್ದಾರೆ. ನಮ್ಮಂತೆ ಎಂದೂ ಮಾಡಿಲ್ಲ. ಇದಕ್ಕೆ ಏನು ಕಾರಣ? ಅವರು ಸಾಂಪ್ರದಾಯ ಶರಣರೆನ್ನಬೇಕೆ? ಹಾಗಿದ್ದರೆ ಅಲ್ಲಿ ಹೊಸತು ಬರುವಂತೆಯೇ ಇರಲಿಲ್ಲ. ದಿನದಿನ ಅವರ ನಾಟಕಗಳಲ್ಲಿಯೂ ಪ್ರಗತಿ ಕಾಣುತ್ತಿದೆ. ಅವರ ಮನರಂಜನೆಯ ಇತರ ಸಾಧನೆಗಳಲ್ಲೂ ಪ್ರಗತಿ ಕಾಣುತ್ತಿದೆ. ಹಾಗಿದ್ದರೆ ಅವರು ಹಳೆಯದನ್ನು ಬಿಟ್ಟಿಲ್ಲವೇಕೆ? ಇಂಥ ಪ್ರಶ್ನೆಗಳನ್ನು ನಾವು ವಿಚಾರ ಮಾಡದೆ ಹೋದರೆ ನಮ್ಮ ರಂಗಭೂಮಿಯ ಉದ್ಧಾರವಾಗಲಾರದು; ನಮ್ಮ ಜೀವನಕ್ಕೂ ಕಳೆಬರಲಾರದು.

ನಮ್ಮಲ್ಲಿ ಚಲಚ್ಚಿತ್ರ ಬಂದಮೇಲೆ, ಜನರಿಗೆ ನಾಟಕ ಬೇಡವಾಯಿತು. ತೋರಿಕೆಗೆ ನಮ್ಮ ಜೀವನದ ಅನೇಕ ಅಂಗಗಳಲ್ಲಿ ಇನ್ನೂ ಸಾಂಪ್ರದಾಯಿಕತೆ ಉಳಿದಿದೆ. ಆದರೆ ಸಂಪ್ರದಾಯ ನಮ್ಮ ಪಾಲಿಗೆ ಆತ್ಮಕ್ಕಂಟಿಕೊಳ್ಳದ ತೊಗಟೆಯಂತಾಗಿದೆ. ಹೊಸ ಅಂಗಿ ಬಂದಿತೆಂದು, ಹಳೆಯ ಅಂಗಿಯ ಚೆಲುವನ್ನು ಮರೆತು ಬಿಟ್ಟವರು ನಾವು. ಹೊಸ ಬಾಳು ಹಳೆಯದನ್ನು ಬಿಟ್ಟು ಹುಟ್ಟಲಾರದು; ಬೆಳೆಯಲಾರದು. ನಮ್ಮ ಚಲಚ್ಚಿತ್ರಗಳಿಗಿಂತ, ನಿಕೃಷ್ಟಾವಸ್ಥೆಯಲ್ಲಿರುವ ರಂಗಭೂಮಿಯಾದರೂ ಬೇಕೆನಿಸುತ್ತಿದೆ—ನನಗೆ. ಈ ಚಲಚ್ಚಿತ್ರಗಳ ಆಭಾಸ ಬೇಡ, ಎನ್ನುವ ಸ್ಥಿತಿಗೆ ನಾವು ಬಂದಿದ್ದರೂ,—ನಮ್ಮಲ್ಲಿ ಅರಿವು ಹುಟ್ಟಿಲ್ಲ.

ಬಾಳಿನ ಗಿಡವು ಎಷ್ಟೋ ಹೊಸ ರೆಂಬೆ, ಕೊಂಬೆ, ಬೇರುಗಳನ್ನು ಪಡೆಯಬಹುದು. ಅದು ಪಡೆಯಬೇಕಾದದ್ದೇ. ಅದು ಬೆಳವಣಿಗೆಯ ಲಕ್ಷಣ. ಆದರೆ ತಾಯಿಬೇರನ್ನು ಕಳಚಿಕೊಂಡ ಗಿಡವು ಬಹುದಿನ ಬದುಕಲಾರದು, ಎಂಬುದನ್ನು

ನಾವು ಮರೆತುಬಿಡುತ್ತೇವೆ. ಹೊರಗಿನಿಂದ ತಂದ ಕಸಿಯ ಗಿಡದ ಗೆಲ್ಲು, ಮೊಗ್ಗು, ಕಾಯಿ, ಗಿಡದ ಕಾಂಡ ಬೇರುಗಳಿಲ್ಲದೆ ಬದುಕಲಾರದು—ಎಂಬುದನ್ನು ಮರೆತು ಬಿಟ್ಟದ್ದೇವೆ. ಸಂಪೂರ್ಣವಾದ ಹೊಸ ಬಾಳೆಂಬುದು ಎಲ್ಲಿಯೂ ಇಲ್ಲ. ಇಂದು ನಾಳೆಗೆ ಸೆರಗು ; ನಿನ್ನೆ ಇಂದಿನ ಸೆರಗು ; ಮೊನ್ನೆ ನಿನ್ನೆಗೆ ಸೆರಗು. ಇವುಗಳಲ್ಲಿ ಸಂದು ಕಡಿದ ಕಾಲವುಂಟೆ ? ಅದು ಸಾಧ್ಯವೇ ? ಇದನ್ನು ತಿಳಿದವರು ಅವರು ; ತಿಳಿಯದವರು ನಾವು—ಎನ್ನದೆ ಗತ್ಯಂತರವಿಲ್ಲ.

ಹಳೆಯ ನಾಟಕಗಳನ್ನು ಉಳಿಸಿಕೊಂಡ ಅವರು, ಅದರ ಇತಿಮಿತಿಗಳನ್ನೂ ತಿಳಿದಿದ್ದಾರೆ. ಅದರಿಂದಲೇ ಅವರಲ್ಲಿ ಹೊಸ ನಾಟಕಗಳು ಹುಟ್ಟವೆ, ಹುಟ್ಟುತ್ತಿವೆ ; ಉಳಿದಿವೆ. ಜನಸಮುದಾಯದ ನೆರವಿಲ್ಲದೆಯೆ, ರಂಗಭೂಮಿ ಉಳಿಯಲಾರದೆಂದು ಬಲ್ಲ ಅವರು ಜನರಂಜನೆಗೂ ಅಷ್ಟೇ ಗಮನ ಕೊಟ್ಟಿದ್ದಾರೆ. ಚಲಚ್ಚಿತ್ರದಂತಹ ಹೊಸ ವೈರಿ ಹುಟ್ಟಿದ್ದರೂ, ಅಲ್ಲಿನ ರಂಗಭೂಮಿ ಸ್ವಂತ ಶಕ್ತಿಯಿಂದ ತನ್ನ ಸ್ಥಾನ ಮಾನವನ್ನು ಉಳಿಸಿಕೊಳ್ಳಲು ಹೋರಾಡುತ್ತಿದೆ. ಆ ಧೀರತನ ನಮ್ಮಿಂದ ಕಳಚಿ ಹೋಗಿದೆ. ನಾವೀನ್ಯದ ಮೋಹ ಅವರಿಗೂ ಉಂಟು ; ನಮಗೂ ಉಂಟು. ಹಳೆಯ ಬೇಸರ ಹೋಗಲಾಡಿಸಲು ಅವರು ದಿನ ದಿನ ನಾವೀನ್ಯದ ಸೃಷ್ಟಿ ಮಾಡುತ್ತಾರೆ. ಸೃಷ್ಟಿ ಶಕ್ತಿಯನ್ನು ಕಳೆದುಕೊಂಡ ನಮ್ಮ ರಂಗಭೂಮಿಯು ಕನಿಷ್ಠ ದರ್ಜೆಯ ಅನು ಕರಣೆಯ ಮೇಲೆ, ಜೀವ ಹಿಡಿಯಲೆತ್ನಿಸಿ, ಈ ನಾವಿನ್ಯದ ಓಟದಲ್ಲಿಯೂ ಸೋತಿದೆ. ರಂಗಭೂಮಿಯು ಹಲವು ಕಲೆಗಳ ಒಂದು ಸಮಷ್ಟಿ ರೂಪ. ಅದರ ಒಂದೊಂದು ಅಂಗದಲ್ಲೂ ತಜ್ಞತೆಯನ್ನು ಪಡೆದರೆ, ಆಗ ಮಾತ್ರ ಹೊಸದಾರಿ, ಹೊಸ ಬೆಳಕು ಕಂಡೀತು. ಪರಾವಲಂಬಿಯಾದವನಿಂದ ಈ ಕಾರ್ಯ ಹೇಗೆ ಸಿದ್ಧಿಸೀತು ? ಹೀಗಾಗಿ —ನಮಗೆ ಉಚ್ಚ ಕಲೆಯ ಆದರ್ಶವಿಲ್ಲದಿದ್ದರೂ ಜನರಂಜನೆ ಮಾಡಿ ನಾಟಕ ವ್ಯವಸಾಯವನ್ನಾದರೂ ಉಳಿಸಿಕೊಳ್ಳೋಣ—ಎಂಬ ಹೋರಾಟದಲ್ಲಿಯೂ ಯಶಸ್ಸು ದೊರೆತಿಲ್ಲ. ಕಲೆಯ ಪುನರುಜ್ಜೀವನದ ಒಂದು ಮಹಾಸಂಗ್ರಾಮವೇ ನಮ್ಮ ಕಣ್ಣು ಮುಂದಿರುವಾಗ—ಪ್ರತಿಯೊಂದು ಕದನರಂಗದಲ್ಲಿಯೂ ನಾವು ಕಾಲ್ತೆಗೆಯುವುದನ್ನೇ ಕಾಣುತ್ತಿದ್ದೆವೆಯೇ ಹೊರತು ಹೋರಾಡುವುದನ್ನು ಕಾಣುವುದಿಲ್ಲ. ಗತ ವೈಭವದ ಜಪದಿಂದ, ನಮಗೆ ವಿಜಯ ದೊರಕುವಂತಿಲ್ಲ. ಕದನಕ್ಕೆ ತಕ್ಕ ಕಸವು, ಯುಕ್ತಿ, ಧೈರ್ಯ, ಸಲಕರಣೆಗಳನ್ನು ಒದಗಿಸಿಕೊಂಡಲ್ಲದೆ ನಮ್ಮ ರಂಗಭೂಮಿ ಚೇತನಗೊಳ್ಳ ಲಾರದು. ಅವೇನೆಂದು ಪರಿಶೀಲಿಸೋಣ.

ಒಂದು ನಾಟಕ ಮಂಡಳದ ಸಂಚಾರ, ಜೀವನ ನಿರ್ವಹಣ ಮೊದಲಾದ ಕಾರ್ಯಗಳು ಮೊದಲಿಗಿಂತ ಹಲವು ಪಾಲು ವೆಚ್ಚದ ಸಂಗತಿಯಾಗಿ ಬಂದುದರಿಂದ, ವ್ಯವಸಾಯ ನಾಟಕ ಸಂಸ್ಥೆಗಳು ಮೊದಲಿನಂತೆ ಊರೂರು ಸಂಚಾರ ಮಾಡಿಕೊಂಡು ಜೀವನ ಸಾಗಿಸುವುದು ಕಷ್ಟವಾಗಿ ಬಂದಿದೆ. ಅಂತಹ ಮಂಡಳಗಳ ಜೀವನವು ದೊಡ್ಡ ದಾದ ನಗರಗಳಲ್ಲಿ ಎರಡು ಮೂರು ತಿಂಗಳ ಕಾಲ ನಡೆಯುವಂತಿದ್ದರೆ ಮಾತ್ರ ಅವು

ಉಳಿಯುವುದು ಸಾಧ್ಯ. ಚಲಚ್ಚಿತ್ರಗಳನ್ನು ಅಗ್ಗವಾಗಿ ತೋರಿಸುವಂತೆ ನಟರೇ ಊರೂರಿಗೆ ಹೋಗಿ ಆಡಿತೋರಿಸಬೇಕಾದ ನಾಟಕಗಳು, 'ಅಗ್ಗ' ವಾಗುವುದಂತು ಶಕ್ಯವಿಲ್ಲ. ನಾಟಕಕ್ಕೆ ತೆರಬೇಕಾದ ಆರ್ಥಿಕ ಬೆಲೆ ಹೆಚ್ಚು. ಅದನ್ನು ಕೊಡುವುದಕ್ಕೆ ಸಮಾಜವು ಸಿದ್ಧವಾಗಿರಬೇಕು. ಅದಕ್ಕಿಂತ ಮೊದಲು ನಾಟಕವೆಂಬುದು ಚಲಚ್ಚಿತ್ರ ವಲ್ಲ, ಚಲಚ್ಚಿತ್ರ ನಾಟಕವೂ ಅಲ್ಲ, ಇವೆರಡರ ಶಕ್ತಿಯುಕ್ತಿಗಳು ಬೇರೆ—ಎಂಬುದನ್ನು ನಾವು ತಿಳಿಯಬೇಕಾದ ವಿಷಯ. ನಾಟಕದಲ್ಲಿ ನಟನು ಜೀವಂತನಾಗಿ ನಮ್ಮೆದುರಿಗೆ ನಿಲ್ಲುತ್ತಾನೆ. ಪಾತ್ರದ ಜೀವಂತರೂಪವನ್ನು ತೋರಿಸುವುದಕ್ಕೆ ನಟನಿಗೆ ಅವಕಾಶ ವಿದೆ ಒಂದು ಪಾತ್ರದ ಸಂಪೂರ್ಣ ಬೆಳವಣಿಗೆಯನ್ನು ಅವನು ಅನುಭವಿಸುವುದಕ್ಕೆ, ಅನುಭವಿಸಿದ ಮೇಲೆ ನಮಗೆ ತೋರಿಸುವುದಕ್ಕೆ–ಹೆಚ್ಚಿನ ಅವಕಾಶವಿವೆ. ಚಲಚ್ಚಿತ್ರ ದಲ್ಲಿ ಪಾತ್ರದ ಶೀಲ, ಘಟನೆಗಳನ್ನು ಕ್ರಮಗತವಾಗಿ ನಟಿಸದೆಯೇ, ನಾಳಿನದನ್ನು ಇಂದು ಮಾಡಿ, ಇಂದಿನದನ್ನು ನಾಳೆಮಾಡಿ—ಚಿತ್ರದ ತುಣಿಕುಗಳನ್ನು ಜೋಡಿಸುವ ಚಮತ್ಕಾರದಿಂದಾಗಿ ನಟನ ಶಕ್ತಿಯು ನಮಗೆ ಅರಿವಾಗಬೇಕು. ರಸ, ಭಾವಗಳ ಪ್ರಕಟಣೆಯ ರೂಪದಲ್ಲೂ ವ್ಯತ್ಯಾಸವಿದೆ. ನಾಟಕವು ರಸ, ಭಾವ ಪ್ರದರ್ಶನಕ್ಕೆ ಇನ್ನಷ್ಟು ಉಜ್ವಲ ಶಕ್ತಿಯೂ ಆಗಬಲ್ಲುದು. ಯೂರೋಪಿನಲ್ಲಿ ರಂಗಭೂಮಿಯಲ್ಲಿ ನುರಿತ, ಹೆಸರಾದ ನಟರನ್ನೇ ಚಲಚ್ಚಿತ್ರಗಳು ಆಕರ್ಷಿಸುತ್ತಿವೆಯಾದರೂ, ಅನೇಕ ನಟರು, ನಾಟಕದ ಸ್ವತಂತ್ರ ಶಕ್ತಿಯನ್ನು ಮರೆಯಲಾರದವರಾಗಿದ್ದಾರೆ, ನಾಟಕದಲ್ಲೇ ದುಡಿಯಲು ಇಚ್ಛಿಸುತ್ತಾರೆ.

ನಾಟಕಗಳು ಕಲೆಯ ಪ್ರತಿಪಾದನೆಯ ಜತೆಗೆ, ಮನರಂಜನೆಯ ಕೆಲಸವನ್ನೂ ಮಾಡುತ್ತವೆ. ನಮ್ಮ ರಂಗಭೂಮಿಯ ಜನಗಳು ಇದರ ವ್ಯಾಪ್ತಿ ವಿಸ್ತಾರಗಳನ್ನರಿತು ಸಾಕಷ್ಟು ಪ್ರಯೋಗಗಳನ್ನು ನಡೆಸಿಲ್ಲ. ಇದರಿಂದಲೂ ಅದು ಸೋಲುವ ಕಾಲ ಬಂದಿದೆ. ಪಾಶ್ಚಾತ್ಯರಲ್ಲಿ ಎಷ್ಟು ನಾಟಕ ಪ್ರಕಾರಗಳಿವೆಯೋ, ನಮ್ಮಲ್ಲಿ ಅಷ್ಟನ್ನು ನಾವು ಕಾಣುತ್ತಲಿಲ್ಲ. ಅಷ್ಟನ್ನು ಕಂಡು, ಸಾಧಿಸುವ ತನಕ—ನಮ್ಮ ಕೆಲಸ ಕಷ್ಟ. ನಮ್ಮಲ್ಲಿದ್ದ ನಾಟಕಗಳ ಕುಂದುಕೊರತೆಗಳನ್ನು ಏನೆಂದು ನೋಡಿ, ನಾವು ನಿವಾರಿಸ ಬೇಕಾಗಿತ್ತು. ಹಳೆಯ ಕವಿಗಳಾದ ಕಾಳಿದಾಸ, ಭಾಸ, ಶೂದ್ರಕ ಮೊದಲಾದವ ರನ್ನು ಕುರಿತು ಅಭಿಮಾನವುಳ್ಳ ನಾವು ಕಲಾತ್ಮಕವಾಗಿ ಅವರ ನಾಟಕಗಳನ್ನು ತೋರಿಸುವ ಪ್ರಯತ್ನಮಾಡಿದ್ದು ಸಾಲದು. ಅವರ ನುಡಿಗಳನ್ನು ನಟನೆಯಿಂದ ತೋರಿಸಿದರೆ ಸಾಲದಾಗುತ್ತದೆ. ಉದಾಹರಣೆಗೆ ಕಾಳಿದಾಸನ 'ಶಾಕುಂತಳ' ಇದೆ ಯೆಂದು ಯೋಚಿಸುವ. ವರದಾಚಾರ್ಯರು ಆಡುತ್ತಿದ್ದಂಥ ಆ ನಾಟಕದಲ್ಲಿ ನುಡಿ, ಗೀತ ಅಭಿನಯಗಳ ಭಾಗಗಳಿಗೆ ಗಮನಕೊಟ್ಟಿದ್ದರೂ ಉಡುಗೆ, ಹಿನ್ನೆಲೆಗಳ ವಿಚಾರ ದಲ್ಲಿ ಏನೂ ಗಮನಕೊಡಲಿಲ್ಲ. ಕಾಳಿದಾಸನ ಕಾಲಕ್ಕೂ, ಅಜಂತ ಚಿತ್ರಕಲೆಯ ಕಾಲಕ್ಕೂ ಬಹುವಾದ ವ್ಯತ್ಯಾಸವಿರಲಿಲ್ಲ. ಉಡುಗೆ, ಅಲಂಕಾರ, ಮುಖವರ್ಣಿಕೆ, ದೃಶ್ಯಾವಳಿ ಇವೆಲ್ಲವಕ್ಕೂ ಪೋಷಣೆಯನ್ನು ಕೊಡುವ ಶಕ್ತಿ ಆದಕ್ಕಿತ್ತು. ಕಾಲ,

ಆವರಣಗಳನ್ನು ಸೂಚಿಸುವ ಈ ಮುಖ್ಯ ಸಂಗತಿಗಳಿಗೆ ಗಮನವಿಟ್ಟು, ಈ ಎಲ್ಲ ಹಿನ್ನೆಲೆಯನ್ನು ವಾಸ್ತವಕವಾಗಿ ತೋರಿಸುವುದು ಸಾಧ್ಯವಿತ್ತು. ಭಾವಾತ್ಮಕವಾಗಿ ತೋರಿಸುವುದೆಂದರೆ—ಒಂದು ದೃಶ್ಯದ ಮುಂದೆ ನಡೆಯುವ ರಸ, ಭಾವನೆಗಳಿಗೆ ಸಮನಾದ ಹಿನ್ನೆಲೆಯನ್ನು ಕಲ್ಪಿಸುವುದು. ಶೃಂಗಾರಕ್ಕೆ ತಕ್ಕುದಾದ ಹಿನ್ನೆಲೆ (ದೃಶ್ಯ, ಗೀತರೂಪಗಳಲ್ಲಿ) ದುಃಖಕ್ಕೆ ತಕ್ಕುದಾದ ಹಿನ್ನೆಲೆ, ಇತರ ರಸಗಳಿಗೆ ತಕ್ಕುದಾದ ಹಿನ್ನೆಲೆ—ಇವನ್ನೆಲ್ಲ ನಾವು ತಿಳಿದವರಾಗಿಲ್ಲ. ಅಂಥ ವೇಳೆಯಲ್ಲಿ ಯಾವ ಹಿನ್ನೆಲೆಯೂ ಇಲ್ಲದೆ, ದೃಶ್ಯವನ್ನು ಪ್ರೇಕ್ಷಕನ ಊಹೆಗೇ ಬಿಟ್ಟು ಅಭಿನಯಿಸುವ ಕೆಲಸ ಉಚಿತವಾಗಿತ್ತು. ಬದಲು ಕಣ್ವನನ್ನು ಮುಂಬಯಿಯ ಬೀದಿಯ ಮುಂದೆ ನಿಲ್ಲಿಸುವುದು, ದುಷ್ಯಂತನನ್ನು ವರ್ಸತಿ ಅರಮನೆಯ ಮುಂದೆ ನಿಲ್ಲಿಸುವುದು ರೂಢಿಯಾಗಿ ಬಂದು—ರಸಾಭಾಸಕ್ಕೆ ಕಾರಣವಾಯಿತು.

ಮಹಾಭಾರತ, ರಾಮಾಯಣಗಳ ಕಥಾನಕಗಳು ತುಂಬ ರಂಗಭೂಮಿಗೆ ಬಂದುವು. ಇಲ್ಲಿಯೂ ಆ ಕೊರತೆ ಕಾಣುತ್ತೇವೆ. ಪುರಾಣಯುಗದ ಕಲ್ಪನೆಯನ್ನು ಕೊಡುವ, ಉಡುಗೆ, ತೊಡುಗೆ, ದೃಶ್ಯಗಳು ನಮ್ಮಲ್ಲಿ ಬರಲಿಲ್ಲ. ನಮ್ಮ ದೇವತೆಗಳು, ರಾಕ್ಷಸರು, ಅತಿಮಾನವ ವ್ಯಕ್ತಿಗಳು, ಅಮಾನುಷ ವ್ಯಕ್ತಿಗಳು ಪ್ರೇಕ್ಷಕರು ಮನಸ್ಸಿಗೆ ಸ್ವಯಂಪ್ರೇರಣೆ ಕೊಡಲಾರದಂತಹ ಬಡಪಾಯಿ 'ಮನುಷ'ರಾಗಿದ್ದರು. ಇಂಥಲ್ಲಿ ನಾವು, ನಮ್ಮ ಯಕ್ಷಗಾನದ ವೇಷಗಳಂತೆ ಜಾವಾ, ಬಾಲಿ, ಸಾಯಂ ದೇಶಗಳ ರಾಮಾಯಣ ಭಾರತಗಳ ಕಥಾನಕಗಳ ವೇಷಗಳಂತೆ 'ಅದ್ಭುತ' **(Fantasy)** ಚಿತ್ರಣಕ್ಕೆ ಬೇಕಾದ ಹೊಸಸೃಷ್ಟಿ ಮಾಡಬಹುದಿತ್ತು. ಜಾವಾ, ಬಾರಿ, ಜಪಾನ್, ಚೀನಾ ಮೊದಲಾದ ದೇಶಗಳಲ್ಲಿ ಇಂಥ ಅತಿಮಾನವ, ಅಮಾನುಷ ವ್ಯಕ್ತಿಗಳಿಗೆ ಸಾಂಕೇತಿಕವಾದ ಒಂದೊಂದು ಬಗೆಯ ಮುಖವಾಡಗಳನ್ನು ರಚಿಸಿ, ಅವನ್ನು ತೊಟ್ಟು ನಟಿಸುವ ಪರಂಪರೆಯು ಈಗಲೂ ಉಳಿದಿದೆ. ಅಪ್ರತಿಮವಾದ ವೇಷ ಭೂಷಣಗಳು ನಮ್ಮ ಯಕ್ಷಗಾನಕ್ಕಿದ್ದರೂ, ಆ ಜನಗಳೇ ಇಂದು ರಂಗಭೂಮಿಯ, ಅಥವಾ ಸಿನೇಮಾ ವೇಷಗಳ, ಆಭಾಸದ ಉಡುಗೆ ತೊಡುಗೆಗಳನ್ನು ಅನುಕರಿಸುವುದನ್ನು ಕಂಡರೆ, ನಮ್ಮಲ್ಲಿ ಕಲಾಪರಿಜ್ಞಾನ ಎಷ್ಟು ಶೂನ್ಯವಾಗಿದೆ—ಎಂಬುದನ್ನು ಕಾಣಬಹುದು. ಪಾಶ್ಚಾತ್ಯರು—ಮಾನವ ಕುಲಕ್ಕೆ ಸಂಬಂಧಿಸಿದ ಒಳಿತು ಕೆಟ್ಟುದುಗಳ ಚಿರಂತನ (eternal) ಪ್ರಶ್ನೆಗಳನ್ನು ನಾಟಕರೂಪವಾಗಿ ಚಿತ್ರಿಸುವಾಗ, ಈ ರೀತಿಯಲ್ಲಿ ಚಿತ್ರಿಸಿ ಬೆರಗುಂಟು ಮಾಡುತ್ತಾರೆ. ಇಲ್ಲಿ ರಂಗರಚನೆ, ಅಲಂಕಾರ, ಮುಖವರ್ಣಿಕೆ ಮೊದಲಾದ ಕಲೆಗಳಿಗೆ ಒಂದು ಹೊಸರಾಜ್ಯವೇ ತೆರವಿದೆ. ಯಕ್ಷಗಾನದ ಸುಂದರ ವೇಷಗಳು ಹುಟ್ಟಿದ ನಾಡಿನಲ್ಲೇ, ಇಂದು ಇಂಥ ಪ್ರಗತಿಯನ್ನು ನಾವು ಕಾಣುತ್ತಲಿಲ್ಲ; ಅದಕ್ಕೆ ಮೆಚ್ಚುಗೆಯೂ ಇಲ್ಲ—ಅಂದರೆ ಈ ಭಾಗದಲ್ಲಿ ನಮ್ಮ ದೃಷ್ಟಿ ಶಕ್ತಿ ಉಡುಗಿದೆ ಎಂಬುದೇ ಅರ್ಥ.

ಇನ್ನು ಜನರಂಜನೆಯ ವಿಚಾರವನ್ನು ಎತ್ತಿಕೊಳ್ಳುವ. ಜನರ ಅಭಿರುಚಿ ಒಂದೇ ಪ್ರಕಾರವಾಗಿ ಉಳಿಯುವುದಿಲ್ಲ. ಹೀಗಾಗಿ ಅವರನ್ನು ಮೆಚ್ಚಿಸುವ ನಾಟಕ

ಗಳು, ರಂಜಿಸುವ ನಾಟಕಗಳು ದಿನದಿನ ಹೊಸದಾರಿ ಹುಡುಕಬೇಕಾಗುತ್ತದೆ. ಹಾಸ್ಯವಿದೆ, ವಿಡಂಬನೆ ಇದೆ, ಪರಿಹಾಸ್ಯವಿದೆ, ವಿಕಟ ಹಾಸ್ಯವಿದೆ, ವಿನೋದವಿದೆ. ನಾಟಕದ ಬರವಣಿಗೆ, ನಟನೆ, ಉಡುಗೆ–ಇಲ್ಲೆಲ್ಲ ಒಂದೊಂದು ವಸ್ತುವಿನ ಪ್ರವೃತ್ತಿಗೆ ಸಮನಾಗಿ, ಹಲವು ರೂಪತಾಳಬಲ್ಲುದು. ನಾವೋ—ಗಂಭೀರವಾದ ಒಂದು ವಿಷಯವನ್ನು ಎತ್ತಿಕೊಂಡು, ಅದರಲ್ಲಿರುವ ರಸಗಳನ್ನು ಅತಿರೇಕಕ್ಕೇರಿಸಿ, ಹೊತ್ತಲ್ಲದ ಹೊತ್ತಿನಲ್ಲಿ ಅಸಂಬದ್ಧ ಹಾಸ್ಯಮಾಡಿ, ಎಲ್ಲ ರಸಗಳನ್ನು ಚರಂಡಿಗೆ ತಳ್ಳುತ್ತಿದ್ದೇವೆ. ಅವರೋ—ಘನ ಉದ್ದೇಶದಿಂದ ಉದಾತ್ತ ಭಾವದಿಂದ ಆಡುವ ನಾಟಕಗಳನ್ನು ಆಡುತ್ತಾರೆ. ಹುಚ್ಚರ ಆಸ್ಪತ್ರೆ, ಇದು ಎಂಬಷ್ಟು ಲಘುವಾದ ನಾಟಕಗಳನ್ನು ಆಡುತ್ತಾರೆ! ಈ ಎರಡು ವಿಷಮಗಳ ನಡುವೆ ಹಲವಾರು ಹೊಸಹೊಸ ವಿಧಾನಗಳನ್ನು ಹುಟ್ಟಿಸಿಕೊಂಡಿದ್ದಾರೆ, ಹುಟ್ಟಿಸುತ್ತಿದ್ದಾರೆ. ಕೇವಲ ಹಾಸ್ಯದಿಂದಲೇ, ಚಮತ್ಕಾರಿಕ ಮಾತುಗಳಿಂದಲೇ, ವಿಕಟ ಸನ್ನಿವೇಶಗಳಿಂದಲೇ ತುಂಬಿರುವ ಅದರ—ಮೈಮ್, ಬರ್ಲೆಕ್ಸ್, ಫಾರ್ಸ ಮೊದಲಾದುವುಗಳನ್ನು ನೋಡಿದರೆ–ನಮ್ಮಲ್ಲಿ ಆ ವಿಧಗಳ ನಾಟಕ ರೂಪಗಳ ಕೊರತೆ ಸ್ಪಷ್ಟವಾಗಿ ಕಾಣುತ್ತದೆ.

ಅದ್ಭುತ ದೃಶ್ಯಗಳಿಂದ ತೋರಿಸುವಂತಹ ನಾಟಕಗಳೂ, ಅವರಲ್ಲಿವೆ. ಆಗ ಅಲ್ಲಿನ ರಂಗಭೂಮಿಯ ವಿಶಾಲವಾದ ಆಯಪಾಯ, ಬೆಳಕು, ಬಣ್ಣ, ಉಡುಗೆ ತೊಡುಗೆ, ರಂಗಮಂಟಪದಲ್ಲಿ ಬಂದು ನಿಲ್ಲುವ, ನಲಿಯುವ ನೂರಾರು ಜನಗಳು– ಇವೆಲ್ಲ ಅದ್ಭುತವಾಗಿಯೇ ಕಾಣಿಸುತ್ತವೆ. 'ಸ್ಪೆಕ್ಟೇಕ್ಯುಲರ್ಸ್' ಎಂಬವು ಇವು. ಇಲ್ಲಿ ಕಲ್ಪನೆಗೆ ಅನಂತವಾದ ಸೀಮೆ ಇದೆ. ಪೇರಿಸ್ ನಗರದಲ್ಲಿ ನಡೆಯುತ್ತಿರುವ 'ಫಾಲೀಸ ಬರ್ಜರೆ' (**Follies Berger**) ಎಂಬ ನಾಟಕಗಳು ಈ ತೆರನವು ಇಂಥವನ್ನು ಊರೂರಿಗೆ ಕಿತ್ತು, ಒಯ್ದು ತೋರಿಸುವುದು ಕಷ್ಟ. ಅವು ಇರುವಲ್ಲಿಗೇನೆ ಜನಗಳು ಬಂದು ನೋಡಬೇಕು. ಹಾಗೆ ನೋಡಬೇಕಾದರೆ ಅವುಗಳಲ್ಲಿ ಅಂಥ ಆಕರ್ಷಣ ಶಕ್ತಿ ಇರಬೇಡವೆ?

ನಾವು—ಒಂದೇ ನಾಟಕರೂಪದಿಂದ ಎಲ್ಲಾ ಬಗೆಯ ಜನಗಳನ್ನು ಮನವೊಲಿಸಿ ಸಂತೋಷಗೊಳಿಸುತ್ತೇವೆ ಎಂಬುದನ್ನು ಮಾಡಹೋಗಿ, ಯಾರನ್ನೂ ತೃಪ್ತಿಗೊಳಿಸದ ಸ್ಥಿತಿಗೆ ಬಂದಿದ್ದೇವೆ. ಒಂದೇ ನಾಟಕದಲ್ಲಿ ಪಂಡಿತರನ್ನೂ, ಪಾಮರರನ್ನೂ ರಂಜಿಸಬೇಕು; ಸಂಗೀತವೂ ಬೇಕು; ನೃತ್ಯವೂ ಬೇಕು—ಎಂದು ಅವನ್ನೆಲ್ಲ ಕಲಬೆರಕೆಯಾಗಿ ಮಾಡಿ, ಒಂದರ ಶಕ್ತಿಯನ್ನು ಇನ್ನೊಂದರಿಂದ ಹಾಳುಮಾಡಿದ್ದೇವೆಯೇ ಹೊರತು, ಈ ಒಂದೊಂದು ಮಾಧ್ಯಮಕ್ಕೂ ಇರುವ ಶಕ್ತಿಯನ್ನು ಹೆಚ್ಚಿಸಿಕೊಂಡು, ಅವವುಗಳ ಇತಿಮಿತಿಯನ್ನು ತಿಳಿದುಕೊಂಡು, ಪ್ರಯೋಗ ನಡೆಸಲಿಲ್ಲ. ಗದ್ಯ, ಪದ್ಯ, ಗೀತಗಳೆಲ್ಲವೂ–ನಾಟಕವಸ್ತುವನ್ನು ಸ್ವತಂತ್ರವಾಗಿ ತೋರಬಲ್ಲ ಮಾಧ್ಯಮಗಳು. ಅವನ್ನು ಅಸಂಗತವಾಗಿ ಬೆರಕೆಮಾಡುತ್ತೇವೆ—ನಾವು ಯಾವ ನಾಟಕಕ್ಕೆ ಗೀತ ತಕ್ಕದು, ಯಾವುದಕ್ಕೆ ಗದ್ಯ ತಕ್ಕುದು, ಯಾವುದು ಪದ್ಯಕ್ಕೆ ಒಲಿಯುತ್ತದೆ– ಎಂದು ತಿಳಿಯುವುದು ನಮ್ಮ ಮೊದಲ ಕೆಲಸ. ಪಾಶ್ಚಾತ್ಯರು ಅಪೆರಾ (ಗೀತನಾಟಕ), ಸರಳನಾಟಕಗಳು

ಅಣಕವಾಡಗಳು (mime) ಗೊಂಬೆಯಾಟಗಳು (marionettie) ಇವನ್ನೆಲ್ಲ ಸ್ವತಂತ್ರ ವಾಗಿ ಉಳಿಸಿ, ಬೆಳೆಸಿ ಬಂದಿದ್ದಾರೆ. ನೃತ್ಯರೂಪದ ನಾಟಕಗಳೂ ಅವರಲ್ಲುಂಟು. ಅವರ ಬಾಲೆ (Ballet) ಈ ಬಗೆಯದು. ಇಂಥವನನ್ನು ಮಾಡುವುದಾದರೂಹಲವಾರು ಜನರು, ಕೆಲವು ಬಾರಿ ನೂರಾರು ಜನರು, ರಂಗನಿರ್ದೇಶಕನ ಕೆಳಗೆ ಕೆಲಸಮಾಡ ಬೇಕಾಗುತ್ತದೆ. ಒಂದೊಂದನ್ನೂ ಮೇಲಿಂದ ಮೇಲೆ ಅಭ್ಯಸಿಸಿ, ಒಂದೊಂದರ ಸ್ಥಾನವೂ ತಪ್ಪದಂತೆ ಪ್ರದರ್ಶಿಸಿ, ನೋಡುವವನ ಕಣ್ಣಿನ ಮೇಲೆ, ಮನಸ್ಸಿನ ಮೇಲೆ, ಕಿವಿಯ ಮೇಲೆ ಆಗುವ ಪರಿಣಾಮಗಳನ್ನು ವಿಮರ್ಶಿಸಿ, ತಿಳಿದು, ತಮ್ಮ ನಾಟಕ ಪ್ರಯೋಗಗಳನ್ನು ವಿದೇಶೀಯರು ಮಾಡುತ್ತಾರೆ. ನಮ್ಮ ನಾಟಕ ವ್ಯವಸಾಯ ಗಳಲ್ಲಾಗಲೀ, ವಿಲಾಸಿಗಳಲ್ಲಾಗಲೀ ಈ ಬಗೆಯ ಅಧ್ಯಯನ, ವ್ಯಾಸಂಗ, ಪ್ರಯೋಗ, ಪ್ರಯೋಗ ಪರಿಶೀಲನ—ಯಾವುದೂ ಚೆನ್ನಾಗಿ ನಡೆದಿಲ್ಲ. ವ್ಯವಸಾಯಗಳಿಗೆ ನಾಟಕ ಮಂಡಲದ ಯಜಮಾನನ ಭಯವಾದರೂ ಇರುತ್ತದೆ. ನಮ್ಮ ನಾಟ್ಯವಿಲಾಸಿಗಳಿಗೆ ರಂಗಭೂಮಿಯಲ್ಲಿ ಮರೆಯುವ ಚಾಪಲ್ಯವೊಂದಲ್ಲದೆ—ಇತರ ಧ್ಯೇಯಗಳಾಗಲೀ, ಶ್ರದ್ಧೆಯಾಗಲೀ ಕಂಡುಬರುವುದಿಲ್ಲ. ಹಿಂದೆ ಅಶಿಕ್ಷಿತರ ಕೈಯಲ್ಲಿ ನಾಟಕ ವ್ಯವಸಾಯ ಹಾಳಾಯಿತೆಂದು ನಾವು ಮರುಗುತ್ತಿದ್ದೇವಾದರೂ, ಶಿಕ್ಷಿತರಾದ ನಾಟ್ಯವಿಲಾಸಿಗಳು ಶಾಲೆಯ ಶಿಕ್ಷಣವುಳ್ಳವರಾಗಿರಬಹುದೇ ಹೊರತು, ರಂಗಭೂಮಿಗೆ ಬೇಕಾದ ಶಿಕ್ಷಣ, ಅಧ್ಯಯನ ಮಾಡಿದವರಲ್ಲ. ಕರ್ಣಾಟಕದ ವಿವಿಧ ಭಾಗಗಳಲ್ಲಿ ವ್ಯವಸಾಯಿಗಳ, ನಾಟಕಗಳನ್ನು ಬೇಕಷ್ಟು ಕಂಡೇ ಈ ಮಾತನ್ನು ಹೇಳುತ್ತಿದ್ದೇನೆ.

ನಾಟಕ ಸಮಷ್ಟಿಯಾದ ಕಲೆ. ನಾವು ಆಡುವ ನಾಟಕಗಳನ್ನು ಎಷ್ಟು ಅಭ್ಯಸಿಸಬೇಕೋ, ಅದನ್ನು ಪ್ರದರ್ಶಿಸುವುದಕ್ಕೆ ಬೇಕಾದ ಅಂಗ ಉಪಾಂಗಗಳನ್ನು ಅಷ್ಟೇ ಅಭ್ಯಸಿಸಬೇಕು. ಇದು ಒಂದೊಂದೂ ತಜ್ಞರ ಕ್ಷೇತ್ರ. ಮಾಡಿ ಮುಗಿಯಿತು ಎನ್ನದಷ್ಟು ಹೊಸತು. ಏನಿಲ್ಲ ಎನ್ನದಷ್ಟು—ವಿಶಾಲವಾದ ಕ್ಷೇತ್ರ ಅದರದು. ಇದನ್ನು ತಿಳಿದು ಪಾಶ್ಚಾತ್ಯರು ಕೆಲಸ ಮಾಡುತ್ತಿರುವುದರಿಂದಲೇ, ಅವರ ನಾಟಕ ಉಳಿದು ಕೊಂಡಿದೆ. ರೋಮ್‌ನಗರದಲ್ಲಿ 'ಕೆರೆಕಲಾ' ಎಂಬುದು ಪ್ರಾಚೀನಯುಗದ ಒಂದು ನಾಟ್ಯ ಶಾಲೆ. ಪ್ರಾಚೀನ ರೋಮಿನ ಈ ನಾಟ್ಯಶಾಲೆಯಲ್ಲಿ ಅವರ ಆನುವಂಶಿಕರಾದ ಇಟಲಿಯನರು ತಮ್ಮ ರಂಗಭೂಮಿಯನ್ನು ಇಂದಿಗೂ ನಡೆಸಿಕೊಂಡು ಬಂದಿದ್ದಾರೆ. ಫ್ರೆಂಚರು ಫ್ರೆಂಚ್ ನಾಟಕಗಳನ್ನೂ, ಬ್ರಿಟಿಷರು ಇಂಗ್ಲಿಷ್ ನಾಟಕಗಳನ್ನೂ ತಮ್ಮ ದೇಶಗಳಲ್ಲಿ ಇಂಥ ಶ್ರದ್ಧೆಯಿಂದ ಬೆಳೆಯಿಸಿಕೊಂಡು ಬಂದಿದ್ದಾರೆ. ಎವನ್ ನದೀ ತೀರದ ಸ್ಟ್ರೇಫರ್ಡ್‌ನಲ್ಲಿ ಶೇಕ್ಸ್‌ಪಿಯರಿನ ಸ್ಮಾರಕ ಭವನದಲ್ಲಿ, ವರ್ಷ, ವರ್ಷ ಅವನ ನಾಟಕಗಳನ್ನು ಆಡುತ್ತಿದ್ದಾರೆ. ಜನಗಳು ಹೋಗಿ ನೋಡುತ್ತಿದ್ದಾರೆ, ಎಂದರೆ ಅದು ಅವರ ಅಂಧ ಶ್ರದ್ಧೆಯಾಗಿ ಉಳಿದಿಲ್ಲ. ಸಂಸ್ಕೃತಿಯ ಸಜೀವ ಅಂಗವಾಗಿ ಉಳಿದಿದೆ. ಅವರಾಡುವ ನಾಟಕಗಳನ್ನು ನೋಡಲು ಯಾವತ್ತು ಇಂಗ್ಲೆಂಡಿನಿಂದ, ಯಾತ್ರೆ ಮಾಡುವಷ್ಟು ಶ್ರದ್ಧೆಯಿಂದ, ಜನ ಕಲೆಯುತ್ತಾರೆಂದರೆ ಅದು ಅವರ ಸಾಂಪ್ರದಾಯಿ

ಕಲೆಯ ಬರಿಯ ಮೋಹವಲ್ಲ, ಅದರಲ್ಲಿರುವ ಶಕ್ತಿ, ಸೌಂದರ್ಯಗಳನ್ನು ನಾಟಕ ಪ್ರದರ್ಶಕರೂ ತೋರಿಸುತ್ತಿದ್ದಾರೆ–ಎಂಬುದರಿಂದ. ಹಂಗೇರಿಯ 'ಓಬರ್‌ಮಾಗುವಿ'ನಲ್ಲಿ ಹತ್ತೆಂಟು ವರ್ಷಗಳಿಗೊಮ್ಮೆ ನಡೆಯುವ 'ಪೇಶನ್ ಪ್ಲೇ' ಅದನ್ನು ನೋಡುವುದಕ್ಕೂ, ಸ್ವಿಜರ್‌ಲೇಂಡಿನ ಇಂಟರ್‌ಲಾಕಿನ್ ನಗರದಲ್ಲಿ ವಿಲಿಯಂ ಟೆಲ್‌ನ ನಾಟಕ ನಡೆಯುವುದನ್ನು ನೋಡುವುದಕ್ಕೂ ಯೂರೋಪಿನ ಜನಗಳ ಯಾತ್ರೆಯೇ ಬರುತ್ತದೆ. ಈ ಬಹಿರಂಗ ನಾಟಕಗಳಲ್ಲಿ, ಒಂದೂರಿನ ಜನರೆಲ್ಲರೂ ಪಾತ್ರವರ್ಗವಾಗಿ ನಟಿಸುತ್ತಾರೆ. ಇದಕ್ಕಾಗಿ ವರ್ಷ ವರ್ಷಗಳ ತಯಾರಿ ಮಾಡುತ್ತಾರೆ. ಹಾಗೆ ಮಾಡುವರೆಂದೇ—ಪ್ರೇಕ್ಷಕನ ಮೇಲೆಯೂ ಅದ್ಭುತ ಪರಿಣಾಮ ಉಂಟಾಗುತ್ತದೆ.

ಪಾಶ್ಚಾತ್ಯರು—ಎಷ್ಟೋ ಪ್ರಾಚೀನ ಐತಿಹಾಸಿಕ ಘಟನೆಗಳನ್ನು ವರ್ಷದ ಹಬ್ಬವಾಗಿ, 'ಪೇಜಂಟ್' ಮಾದರಿಯಲ್ಲಿ, ಮೆರವಣಿಗೆ ಹೊರಡಿಸಿ, ಬಹಿರಂಗ ನಾಟಕವಾಗಿ ಪ್ರದರ್ಶಿಸುತ್ತಾರೆ. ಸ್ಪೇನಿನಲ್ಲಿ ಇಂತಹ ಹಬ್ಬಗಳುಂಟು. ಇಂಗ್ಲೆಂಡಿನಲ್ಲುಂಟು; ಇತರ ದೇಶಗಳಲ್ಲುಂಟು. ಅದಾಗುವ ಸ್ಥಳದಲ್ಲಿ, ಭಾಗಿಗಳಾಗುವ ಜನರು, (ಘಟನೆಗೆ ಸಂಬಂಧಿಸಿದ) ಗತಕಾಲದ ಉಡುಗೆ, ತೊಡುಗೆಗಳನ್ನು ಉಟ್ಟುಕೊಂಡು, ಅದನ್ನು ಆಡುತ್ತಾರೆ. ಭಾರತ ದೇಶದಲ್ಲಿ ರಾಮಚಂದ್ರ, ಅಶೋಕ, ಪುಲಿಕೇಶಿ, ಅಕ್ಬರರಂಥ ಹಿರಿಯ ಸಾಮ್ರಾಟರು ಆದರು. ಬುದ್ಧ, ಮಹಾವೀರ, ಮೊದಲಾದ ಸಾಧುಸಂತರೂ ಆಗಿಹೋದರು. ಕಾಳಿದಾಸಾದಿ ಮಹಾಕವಿಗಳೂ ಹುಟ್ಟಿ ತಮ್ಮ ಕಾಣಿಕೆಯನ್ನು ನಾಡಿಗೆ ಸಲ್ಲಿಸಿಹೋದರು. ಇಂದು–ಅಂಥವರ ಪುಣ್ಯದಿನವನ್ನು ಅಲ್ಲಿ, ಇಲ್ಲಿ ನಾವು ಆಚರಿಸುತ್ತಲೂ ಇದ್ದೇವೆ. ಆದರೆ–ಆ ದಿನಾಚರಣೆಗಳಲ್ಲಿ ನೀರಸವಾದ ಒಣಮಾತುಗಳು, ಉದ್ದುದ್ದ ಭಾಷಣಗಳು, ಗತವೈಭವಕ್ಕಾಗಿ—ಇಷ್ಟನ್ನು ಕಾಣುತ್ತಿದ್ದೇವೆಯೇ ಹೊರತು, ಪೂರ್ವ ಸಂಸ್ಕೃತಿಯ ಚಿತ್ರವು ಜನರ ಕಣ್ಣೆದುರಿಗೆ ನಿಂತು ನಮ್ಮ ಬಾಳನ್ನು ಬೆಳಗಿಸುವುದಕ್ಕೆ ಬೇಕಾದ ಮೂರ್ತ ಪ್ರಯತ್ನ ಮಾಡುತ್ತಿದ್ದೇವೆಯೇ ?

ನಾಟಕ ಕಲೆಯು ಉಳಿಯುವುದಕ್ಕೆ ಅಂಥ ಪ್ರೇಕ್ಷಕ ವರ್ಗಬೇಕು. ಮೇಲೆ ಹೇಳಿದಂತಹ ನಾಟಕಕಾರರೂ, ನಟವರ್ಗದವರೂ, ನಿರ್ದೇಶಕರೂ ಬೇಕು. ಅಷ್ಟಿದ್ದರೆ ನಾಟಕ, ಸಂಸ್ಕೃತಿ, ರಂಗಭೂಮಿ ಉಳಿಯುತ್ತದೆ; ಇಲ್ಲದೆ ಹೋದರೆ—ಉಳಿಯುವುದು ನೀರಸವಾದ ಮರುಭೂಮಿ.

**ಶಿವರಾಮ ಕಾರಂತ**

# ಪಂಪಭಾರತದ ಕೃಷ್ಣ : ಒಂದು ಚಿಕ್ಕ ಟಿಪ್ಪಣಿ

'ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ ಗಂಡಿನೊಳ್ ಭೀಮಸೇನಂ
ಬಲದೊಳ್ ಮದ್ರೇಶನತ್ಯುನ್ನತಿಯೊಳಮರಸಿಂಧೂದ್ಭವಂ ಚಾಪವಿದ್ಯಾ-
ಬಲದೊಳ್ ಕುಂಭೋದ್ಭವಂ ಸಾಹಸದ ಮಹಿಮೆಯೊಳ್ ಫಲ್ಗುಣಂ
ಧರ್ಮದೊಳ್ ನಿ-
ರ್ಮಲಚಿತ್ತಂ ಧರ್ಮಪುತ್ರಂ ಮಿಗಿಲಿವರ್ಗಳಿನೀ ಭಾರತಂ ಲೋಕಪೂಜ್ಯಂ॥'

ಪಂಪಭಾರತದ ಈ ಪದ್ಯ (೧೪–೬೪) ತುಂಬ ಪ್ರಸಿದ್ಧವಾಗಿದೆ. ಭಾರತಕಥೆಯಲ್ಲಿ ಬರುವ ಅನೇಕ ಪ್ರಮುಖವ್ಯಕ್ತಿಗಳನ್ನು ಪಂಪನು ಇಲ್ಲಿ ಹೆಸರಿಸಿ ಅವರವರ ಜೀವಗುಣವೇನೆಂಬುದನ್ನು ಎತ್ತಿಹಿಡಿದಿದ್ದಾನೆ. ತನ್ನ ಕಥಾವಸ್ತುವಿನ ನಾಯಕ ಪ್ರತಿನಾಯಕರನ್ನು ಮಾತ್ರವಲ್ಲದೆ, ಭೀಷ್ಮನಂಥ ಕುಲಪಿತಾಮಹನನ್ನು ಮಾತ್ರವಲ್ಲದೆ, ಅಷ್ಟೇನೂ ಪ್ರಧಾನನಲ್ಲದ ಶಲ್ಯನನ್ನೂ ಇಲ್ಲಿ ಸೇರಿಸಿ ಅವನ ಗುಣಗಾನ ಮಾಡಿದ್ದಾನೆ. ಮಹಾಭಾರತಪ್ರಪಂಚಕ್ಕೆ ಪ್ರೇರಕಶಕ್ತಿಯಾದ ದ್ರೌಪದಿಯ ಹೆಸರು ಇಲ್ಲಿ ಬರಲಿಲ್ಲವಲ್ಲ ಎಂಬ ಕೊರತೆ ಮನಸ್ಸಿನಲ್ಲಿ ಸುಳಿದರೂ, ಪಂಪನು ಇಲ್ಲಿ ಕೇವಲ ಪುರುಷಪಾತ್ರಗಳನ್ನಷ್ಟೇ ಗಣನೆಮಾಡಿದ್ದಾನೆ ಎಂದು ಬಹುಶಃ ಸಮಾಧಾನಮಾಡಿಕೊಳ್ಳಬಹುದು. ಆದರೆ ಒಬ್ಬ ಮಹಾವ್ಯಕ್ತಿಯ ಹೆಸರು ಈ ಪಟ್ಟಿಯಲ್ಲಿ ಕಾಣಿಸದಿರುವುದು ಮಾತ್ರ ಅನೇಕರನ್ನು ವಿಚಾರಕ್ಕೂ ಕೆಲವರನ್ನು ಅತೃಪ್ತಿಗೂ ಒಳಗುಮಾಡಿದೆ. ಕುಮಾರವ್ಯಾಸನ ಉತ್ಕೃಷ್ಟಕೃತಿಯನ್ನು ಕೇಳಿ, ಓದಿ, ಭಾರತಕಥೆಗೆ ಶ್ರೀಕೃಷ್ಣನೇ ಸೂತ್ರಧಾರನೆಂದು ಮನಗಂಡಿರುವ ರಸಜ್ಞರಿಗೆ, ಭಾವುಕರಿಗೆ—ಪಂಪನ ಪದ್ಯದಲ್ಲಿ ಕೃಷ್ಣನ ಸ್ಮರಣೆ ಕೂಡ ಇಲ್ಲದೆ ಹೋಯಿತಲ್ಲ; ಅವನು ಅಷ್ಟು ಅಮುಖ್ಯನಾದನೆ—ಎನ್ನಿಸುವುದು ಅಸಹಜವಲ್ಲ. ಈ 'ಲೋಪ'ಕ್ಕೆ ಕಾರಣವನ್ನು ಹುಡುಕುವುದೂ ಅನಿವಾರ್ಯ.

ಈ ವೀರಶ್ರೇಣಿಯ ಒಕ್ಕಣೆಗೆ ಒಂದು ವೃತ್ತವನ್ನು ಮಾತ್ರ ಪಂಪನು ವಿನಿಯೋಗಿಸಿದ್ದಾನೆ; ಅಲ್ಲಿ ಕಿಕ್ಕಿರಿದಿರುವ ಹೆಸರುಗಳ ನಡುವೆ ಕೃಷ್ಣನ ಹೆಸರನ್ನೂ ಸೇರಿಸಲು ಪಂಪನಿಗೆ ಜಾಗಸಾಲದೆ ಹೋಯಿತು ಎಂದು ತೇಲುನೋಟದ ಉತ್ತರಕೊಡುವುದು ಅನಭಿಜ್ಞತೆ. ಪಂಪನು ಪದ್ಯಬಂಧದಲ್ಲಿ ಅಷ್ಟೊಂದು ಅಶಕ್ತನೇನೂ ಅಲ್ಲ. ಹಾಗಾದರೆ, ಉದ್ದೇಶಪೂರ್ವಕವಾಗಿಯೇ ಅವನು ಕೃಷ್ಣನ ಹೆಸರನ್ನು ಕೈಬಿಟ್ಟಿರಬೇಕು ಪಂಪನು ಮತದಲ್ಲಿ ಜೈನ. ಜೈನಪುರಾಣದಂತೆ ಕೃಷ್ಣ (ವಾಸುದೇವ)ನು ತನ್ನ ಕಾಲದ ಪ್ರತಿವಾಸುದೇವನನ್ನು ಕೊಂದ ಪರಿಣಾಮವಾಗಿ ನರಕಕ್ಕೆ ಇಳಿಯಬೇಕಾಗುತ್ತದೆ. (ಭಾವಿತೀರ್ಥಂಕರರ ಸಾಲಿಗೆ ಆ ಬಳಿಕ ಅವನು ಏರುವನೆಂಬುದು ಬೇರೆಯ ಮಾತು.) ಆದಕಾರಣ ಪಂಪನಿಗೆ ಕೃಷ್ಣನ ವಿಷಯದಲ್ಲಿ ಭಕ್ತಿಯಿರಲಿಲ್ಲ.

ಉದಾಹರಣೆಗೆ, ನೋಡಿ: ದ್ರೌಪದಿಯ ಮಾನಪರೀಕ್ಷೆಯ ಪ್ರಸಂಗದಲ್ಲಿ, ದುಶ್ಶಾಸನನು ಆಕೆಯ ಸೀರೆಯನ್ನು ಎಷ್ಟೇ ಸೆಳೆಸೆಳೆದು ಹಾಕಿದರೂ ಶ್ರೀಕೃಷ್ಣನ ಅನುಗ್ರಹದಿಂದ ಅದು ಅಕ್ಷಯವಾಗಿ ಪರಿಣಮಿಸಿದ ಸಂಗತಿಯನ್ನೇ ಪಂಪನು ಹೇಳಿಲ್ಲ. ಆಕೆಯ ಮುಡಿಯನ್ನು ದುಶ್ಶಾಸನನು ಎಳೆದಾಡಿದ್ದಕ್ಕೇ ಪ್ರಾಮುಖ್ಯಕೊಟ್ಟು ಆಕೆ 'ಉಟ್ಟುದು ವರಂ ಕಯ್ದುಂದು' ಅವನು ನಿಂತನೆಂದಷ್ಟೇ ಹೇಳಿ ಪಂಪನು ಈ ಭಾಗವನ್ನು ತೇಲಿಸಿ ಬಿಟ್ಟಿದ್ದಾನೆ.—ಈ ರೀತಿಯಾಗಿ ಆಕ್ಷೇಪಿಸುವವರೂ ಇಲ್ಲದಿಲ್ಲ.

ಈ ಆಕ್ಷೇಪಣೆಯನ್ನು ಕೆಲಮಟ್ಟಿಗೆ ಪರಿಶೀಲಿಸಬೇಕು. ದ್ರೌಪದಿಗೆ ಅಕ್ಷಯ ವಸ್ತ್ರದ ವರವನ್ನು ಶ್ರೀಕೃಷ್ಣನು ದಯಪಾಲಿಸಿದನೆಂಬ ಅಂಶವನ್ನು ಪಂಪನು ಮರೆ ಮಾಡಿದ್ದಾನೆಂಬ ದೋಷ ಅವನಿಗೆ ನಿಜವಾಗಿ ತಟ್ಟುವುದಿಲ್ಲ. ಈ ಸಂಗತಿಯೇ ಮೂಲ ಮಹಾಭಾರತದಲ್ಲಿ ಇದ್ದಂತೆ ತೋರುವುದಿಲ್ಲ. (ಇದರ ವಿವರಣೆಗೆ ಇಲ್ಲಿ ಎಡೆಯಿಲ್ಲ. ಪುಣೆಯ ಭಾಂಡಾರ್‌ಕರ್ ಪ್ರಾಚ್ಯಸಂಶೋಧನಸಂಸ್ಥೆಯವರು ಪ್ರಕಟಿಸುತ್ತಿರುವ ಮಹಾಭಾರತದ ಪರಿಷ್ಕರಣದಲ್ಲಿ ಸಭಾಪರ್ವದೊಳಗಿನ ಈ ಭಾಗದ ಪಾಠಸಾಮಗ್ರಿ ಯನ್ನೂ ಇದನ್ನು ಕುರಿತ ಸಂಪಾದಕೀಯ ಟಿಪ್ಪಣಿಗಳನ್ನೂ ಕುತೂಹಲಿಗಳು ಓದಿ ನೋಡಬಹುದು.) ದ್ರೌಪದಿಯ ಸೀರೆಯನ್ನು ದುಶ್ಶಾಸನನು ಸೆಳೆದನೆಂಬ ವಿಷಯ ಮಹಾಭಾರತ ಕಥೆಯಲ್ಲಿ ಹಿಂದಿನಿಂದ ಇತ್ತು; ಪಂಪನಂತೂ ಅದನ್ನು ಅರಿತಿದ್ದನು; ಆದಕಾರಣವೇ ಅದನ್ನು ತನ್ನ ಕೃತಿಯಲ್ಲಿ ಎರಡು ಮಾತಿನಲ್ಲಿ ಸೂಚಿಸಿದ್ದಾನೆ. ಅವನ 'ಶಿಷ್ಯ'ನಾದ ರನ್ನನು 'ತುಱುವಂ ಕಳಿಸುವ ಕೃಷ್ಣೆಯ ನಿಱಿಯಂ ಪಿಡಿದುರ್ಚ ವೇೞ್ವ ...ದುರ್ನಯಂ' ಎಂದು ನಿರ್ದೇಶಿಸಿರುವುದನ್ನೂ (ಗದಾಯುದ್ಧ, ೬-೧೦) ಇಲ್ಲಿ ನೆನಪಿಗೆ ತಂದುಕೊಳ್ಳಬಹುದು. ಆದರೆ ಈ ಪ್ರಸಂಗದಲ್ಲಿ ಕೃಷ್ಣನ ಮಹಿಮೆಯ ಪ್ರಕಾಶನವು ಇತ್ತೀಚಿನ ಪ್ರಕ್ಷೇಪವೆಂದೇ ಹೇಳಬೇಕಾಗುತ್ತದೆ. ಸಂಸ್ಕೃತ ಮಹಾ ಭಾರತದ ಹಸ್ತಪ್ರತಿಗಳ ಸಾಕ್ಷ್ಯವನ್ನು ಗಮನಕ್ಕೆ ತಂದುಕೊಂಡ ಬಳಿಕ ಬೇರೆಯ ನಿರ್ಣಯಕ್ಕೆ ಬರುವುದು ಅತಿಕಷ್ಟ. ಹೀಗಿರುವುದರಿಂದ, ಪಂಪಭಾರತದ ಈ ಭಾಗ ದಲ್ಲಿ ಕೃಷ್ಣನ ಕೈವಾಡವಿಲ್ಲದಿರುವುದನ್ನು ಕುರಿತು, ಇದು ಪಂಪನಲ್ಲಿ ಒಂದು ಕುಂದು ಎಂದು ಹೇಳುವುದು ತಪ್ಪಿಹೋಗಿ, ಈ 'ಪವಾಡ' ಪಂಪನ ಕಾಲಕ್ಕಿಂತ ಈಚೆಗೇನಾದರೂ ಮಹಾಭಾರತದಲ್ಲಿ ಸೇರಿಕೊಂಡಿತೇ ಹೇಗೆ ಎಂಬ ಆಲೋಚನೆ ಮನಸ್ಸಿನಲ್ಲಿ ಮೂಡು ತ್ತದೆ.

ಇನ್ನು ಕೃಷ್ಣನ ಪ್ರಾಮುಖ್ಯ ಮಹತ್ತ್ವಗಳ ವಿಚಾರ. ಈ ಅತಿ ಸಂಕ್ಷಿಪ್ತವಾದ ಟಿಪ್ಪಣಿಯಲ್ಲಿ ಒಟ್ಟು ಭಾವನೆಯನ್ನು ಮಾತ್ರ ಉಲ್ಲೇಖಿಸುವುದು ಸಾಧ್ಯ. ಪಂಪ ಭಾರತದಲ್ಲಿ ಎಲ್ಲಿ ಕೂಡ ಕೃಷ್ಣನನ್ನು ಉದ್ದೇಶವಿಟ್ಟುಕೊಂಡಾಗಲಿ ಮರವಿನಿಂದಾಗಲಿ ಅವಜ್ಞೆಗೈದಿರುವಂತೆ ಆದರ ನಿಷ್ಪಕ್ಷಪಾತಿಯಾದ ಓದುಗನಿಗೆ ತೋರಲಾರದು; ಅಂಥ ಆಲೋಚನೆಯೇ ಪಂಪನ ಚಿತ್ತದಲ್ಲಿ ಸುಳಿದಂತೆ ಕಾಣುವುದಿಲ್ಲ. ಪಂಪಭಾರತದ ಮೊದಲನೆಯ ಮಂಗಳಪದ್ಯದಲ್ಲಿ 'ನಾರಾಯಣ'ನಿಗಿಂತ 'ಚಳುಕ್ಯನಾರಾಯಣ'ನು

ಒಂದು ಕೈ ಮೇಲೆಂದು ಸೂಚಿಸಿರುವುದು ನಿಜ; ಆದರೆ ಅದು ಪಂಪನ ಕಾವ್ಯವನ್ನು ಕವಿದಿರುವ 'ರಾಜಕೀಯಶ್ಲೇಷೆ'ಯ ಪ್ರಭಾವ; ಅವಹೇಳನದ ಕುರುಹೇನೂ ಅಲ್ಲ. ಪಂಪನಲ್ಲಿ ಶ್ರೀಕೃಷ್ಣನನ್ನು ಕುರಿತು ಭಕ್ತಿಯ ಉದ್ರೇಕವಿಲ್ಲವೆಂಬದು ದಿಟ; ಆದರೆ ಅವನ ಕಾವ್ಯದಲ್ಲಿ ಅದನ್ನು ನಿರೀಕ್ಷಿಸುವುದೇ ಅನುಚಿತ. ಇದೊಂದು ಅಂಶವನ್ನು ಬಿಟ್ಟರೆ ಸಾಕು. ಕೃಷ್ಣನು ಪುರುಷೋತ್ತಮ ಮಾತ್ರವಲ್ಲ, ಅವನು ಅವತಾರಪುರುಷ ನೆಂಬುದನ್ನೂ ಪಂಪನು ಅರಿತು ಅದೇ ರೀತಿಯಾಗಿ ನಿರೂಪಿಸಿರುವುದು ಅವನ ಕೃತಿ ಯಲ್ಲಿ ಎಷ್ಟೋ ಕಡೆ (ಉದಾಹರಣೆಗೆ, ೬ನೆಯ ಮತ್ತು ೯ನೆಯ ಆಶ್ವಾಸಗಳಲ್ಲಿ) ಗೋಚರವಾಗುತ್ತದೆ. ಕರ್ಣನ ಸಾರಥ್ಯವನ್ನು ಅರ್ಧದಲ್ಲಿ ಬಿಟ್ಟು, ಅರ್ಧದಿನದ ಸೇನಾಪತಿಯಾಗಿ ಕೊನೆಗೊಂಡ ಶಲ್ಯನಿಗಿಂತಲೂ 'ತ್ರೈಲೋಕ್ಯಗುರು' ಕೃಷ್ಣನು ಕಡಮೆಯೆಂಬ ಭಾವ ಪಂಪನ ಕನಸಿನಲ್ಲಿ ಕೂಡ ತೋರಿರಲಾರದು! ಅಷ್ಟೇ ಅಲ್ಲ. ಕೃಷ್ಣನನ್ನು ಕುರಿತು ಮಾತಾಡುವಾಗ 'ಅಜಿತ', 'ಅನಂತ' ಎಂಬ ಪರ್ಯಾಯ ಪದಗಳನ್ನು ಪಂಪನು ತನ್ನ ಕೃತಿಯಲ್ಲಿ ಒಂದೆರಡು ಕಡೆ (ಅಜಿತ: ೯-೨೬ವ.; ಅನಂತ: ೫-೫೮ವ., ೧೦-೪೬ವ.) ಉಪಯೋಗಿಸಿದ್ದಾನೆ. ಇವು ತೀರ್ಥಂಕರರಿಬ್ಬರ ಹೆಸರು ಗಳನ್ನು ನೆನಪಿಗೆ ತರುವುದಿಲ್ಲವೆ? 'ಅನಂತ' ಎಂಬುದೇನೋ 'ಅನಂತಪದ್ಮನಾಭ' ನನ್ನು ಸ್ಮರಣೆಗೆ ತಂದರೂ 'ಅಜಿತ' ಎಂಬುದಂತೂ ಕೃಷ್ಣನಿಗೆ ಪ್ರಚುರವಾದ ಹೆಸರಲ್ಲ ವಷ್ಟೆ. ಇಲ್ಲಿ ಪಂಪನು ಉದ್ದೇಶಪೂರ್ವಕವಾಗಿಯೇ ಈ ಹೆಸರುಗಳನ್ನು ಉಪಯೋಗಿ ಸಿದ್ದಾನೆಂದೂ, ಆ ಮೂಲಕ ಶ್ರೀಕೃಷ್ಣನಲ್ಲಿ ತನಗಿರುವ ಪೂಜ್ಯಭಾವವನ್ನು ಪ್ರಕಟಿಸಿದ್ದಾ ನೆಂದೂ ತೋರುತ್ತದೆ. ಈ ಮನ್ನಣೆಯನ್ನು ತನ್ನ ಕಥಾನಾಯಕನಾದ ಅರ್ಜುನ–ಅರಿಕೇಸರಿಗೂ ಅವನು ಸಲ್ಲಿಸಿಲ್ಲ.

ಈ ದೃಷ್ಟಿಯನ್ನು ಮುಂದುವರಿಸಿದರೆ, ಪಂಪನ ಪದ್ಯದಲ್ಲಿ ಕೃಷ್ಣನ ಹೆಸರು ಬಾರದಿರುವುದಕ್ಕೆ ಕಾರಣ ಹೊಳೆಯುತ್ತದೆ. ಅಲ್ಲಿ ಹೇಳಿರುವವರೆಲ್ಲ ಕೇವಲ ಲೌಕಿಕ ವೀರರು. 'ಬೆಳಗುವೆನಿಲ್ಲಿ ಲೌಕಿಕಮಂ' ಎಂದು ಪ್ರತಿಜ್ಞೆಮಾಡಿ ಬರೆದ ಕೃತಿಯಲ್ಲಿ ಈ ಲೌಕಿಕಪುರುಷರ ಚರಿತೆಗೆ ಹೆಚ್ಚು ಗಮನಕೊಟ್ಟು ಅವರ ಗುಣದೋಷಗಳನ್ನು ಪಂಪನು ನಿರೂಪಿಸಿದ್ದಾನೆ. ಶ್ರೀಕೃಷ್ಣನು 'ಲೌಕಿಕ'ವನ್ನು ಎಲ್ಲರಿಗಿಂತಲೂ ಚೆನ್ನಾಗಿ ಬಲ್ಲವನಾದರೂ, ಭಾರತಲೋಕದ ವ್ಯವಹಾರದ ನಡುವೆ ಸುಳಿದು ಅದರ ಎಳೆಗಳನ್ನು ಆಡಿಸಿದವನಾದರೂ, ಅವನು ಲೋಕದ ಮಟ್ಟಕ್ಕೆ ಮೀರಿದವನು, ದೇವತ್ವದ ನೆಲೆ ಯವನು. ಆದಕಾರಣವೇ ಈ ಮಿಕ್ಕವರ ಸಾಲಿನಲ್ಲಿ ಅವನನ್ನು ನಿಲ್ಲಿಸಲು ಪಂಪನ ಮನಸ್ಸು ಒಪ್ಪಲಿಲ್ಲ. ಪಂಪನ ಪದ್ಯದಲ್ಲಿ ಕೃಷ್ಣನ ಹೆಸರು ಕಾಣಿಸದಿರುವುದಕ್ಕೆ ಕಾರಣ ಅವನು ಈ ಪಂಕ್ತಿಗೆ ಕೆಳಗಿನ ಅಗಣ್ಯನೆಂದಲ್ಲ, ಅದಕ್ಕೆ ಮೀರಿದ ಮಹಾಮಹಿಮನೆಂದು. ಇಲ್ಲಿ ಪಂಪನ ಮೌನವು ಶ್ರೀಕೃಷ್ಣನ ಲೋಕೋತ್ತರತ್ವಕ್ಕೆ ಉತ್ತಮಧ್ವನಿಯ ಕಾಣಿಕೆ.

**ತೀ. ನಂ. ಶ್ರೀಕಂಠಯ್ಯ**

# ಕುಮುದೇಂದು ಕವಿಯ ‘ಭೂವಲಯ’

‘ಸಿರಿಭೂವಲಯ’ ನಾಮಾಂಕಿತವಾದ ಕುಮುದೇಂದು ಕವಿಯ ಅದ್ಭುತ ಗ್ರಂಥವನ್ನು ಸಂಪಾದಕರಾದ ಶ್ರೀಕರ್ಲಮಂಗಲಂ ಶ್ರೀಕಂಠಯ್ಯ ಮತ್ತು ಪಂಡಿತ ಎಲ್ಲಪ್ಪಶಾಸ್ತ್ರಿಗಳು ಬಹು ಪ್ರಯಾಸಪಟ್ಟು ಬೆಳಕಿಗೆ ತಂದಿರುವರು.[1] ಈ ಮಹಾ ಗ್ರಂಥದ ಪ್ರಥಮಭಾಗಕ್ಕೆ ಮುನ್ನುಡಿಯನ್ನು ಬರೆದ ಶ್ರೀ ಶ್ರೀಕಂಠಯ್ಯನವರು ಸಾಧ್ಯವಾದ ಮಟ್ಟಿಗೂ ಅನೇಕ ಸಮಸ್ಯೆಗಳಿಗೆ ಪರಿಹಾರವನ್ನು ಹೇಳಿ ಈ ಗ್ರಂಥದ ವಿಶ್ವಪ್ರಾಶಸ್ತ್ಯವನ್ನು ಸೂಚಿಸಿರುವರು. ಕೇವಲ ಭಾಷಾದೃಷ್ಟಿಯಿಂದ ಈ ಗ್ರಂಥವು ಆಧುನಿಕವೆಂದು ತೀರ್ಮಾನಿಸಿದರೆ ಉದ್ಭವಿಸುವ ಅನೇಕ ಸಮಸ್ಯೆಗಳಿಗೆ ಸದುತ್ತರ ಕೊಡುವುದು ದುಸ್ತರವಾದುದರಿಂದಲೂ, ಈ ಗ್ರಂಥವನ್ನು ಅಧ್ಯಯನ ಮಾಡಲು ಕನ್ನಡ ಭಾಷಾಶಾಸ್ತ್ರವೇ ಅಲ್ಲದೆ ಜೈನಸಿದ್ಧಾಂತ, ಜ್ಯೋತಿಷ, ಆಯುರ್ವೇದ, ರಸಾಯನ ಶಾಸ್ತ್ರ, ಜೈನಗಣಿತ ಪದ್ಧತಿ, ಪುರಾತತ್ತ್ವಶೋಧನೆ, ಕರ್ಣಾಟಕದ ಚರಿತ್ರೆ, ಅನೇಕ ಭಾಷೆಗಳಲ್ಲಿ ಪಾಂಡಿತ್ಯ, ಋಗ್ವೇದ, ರಾಮಾಯಣ, ಮಹಾಭಾರತ, ಭಗವದ್ಗೀತೆ ಇತ್ಯಾದಿಗಳ ಸಂಪೂರ್ಣ ಜ್ಞಾನ ಮುಂತಾದವು ಅತ್ಯವಶ್ಯಕ. ಇಂತಹ ಸರ್ವಜ್ಞತ್ವವಿಲ್ಲದೆ ಈ ಗ್ರಂಥದ ವಿಮರ್ಶೆಗೆ ಕೈಹಾಕಿ ಕೇವಲ ಕುತೂಹಲಜನಕವಾದ, ಮನೋರಂಜನೆಗಾಗಿ ಚಕ್ರಬಂಧ ಸ್ಪರ್ಧೆಗಾಗಿ ರಚಿಸಿದ ಗ್ರಂಥವೆಂದು ತಿರ್ಮಾನಿಸಿದರೆ, ಮಹಾ ಅಪಚಾರ ಮಾಡಿದಂತಾಗುವುದು. ಭಾರತೀಯ ಸಂಸ್ಕೃತಿಗೇ ಅಲ್ಲದೆ ವಿಶ್ವ ಸಂಸ್ಕೃತಿಗೂ ಈ ಗ್ರಂಥವು ಪರಮೋಪಕಾರ ಮಾಡುತ್ತದೆಯೆಂದು ಹೇಳಿದರೆ ಅತಿ ಶಯೋಕ್ತಿಯಾಗಲಾರದು. ಈಗ ಪ್ರಕಟವಾಗಿರುವ ಭೂವಲಯ ಸಿದ್ಧಾಂತದ ಪ್ರಥಮ ಮತ್ತು ದ್ವಿತೀಯ ಭಾಗದಲ್ಲಿ ಕಂಡುಬರುವ ಕೆಲವು ಅಂಶಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಗ್ರಂಥ ರಚನೆಯ ಕಾಲದ ವಿಷಯವಾಗಿ ಕುಮುದೇಂದು ತನ್ನ ವಿಷಯವನ್ನೇ ಹೇಳಿಕೊಂಡಿರುವದರಿಂದ ಸಂಪಾದಕರು ಸೂಚಿಸಿದಂತೆ ಕವಿಯು ವೀರಸೇನ, ಜಿನಸೇನ, ಅಮೋಘವರ್ಷ, ಶಿವಮಾರ ಗಂಗರ ಕಾಲದವನು ಆಗಬೇಕಾಗುವುದು. ವೀರಸೇನನ ಮತ್ತು ಜಿನಸೇನನ ಟೀಕೆಯನ್ನು ಉಲ್ಲೇಖಿಸಿರುವನು. ವೀರಸೇನನು ಧವಳ ಟೀಕಾ ಗ್ರಂಥದ ಉಪೋದ್ಘಾತದಲ್ಲಿ ಮಹಾವೀರ ತೀರ್ಥಂಕರನ ಕಾಲದಿಂದ ಅವಿಚ್ಛಿನ್ನವಾಗಿ ನಡೆದು ಬಂದ ಆಗಮ ಪರಂಪರೆಯನ್ನು ಉಲ್ಲೇಖಿಸಿರುವನು. ಮಹಾವೀರನ ಉಪದೇಶಗಳನ್ನು ಇಂದ್ರಭೂತಿ ಗೌತಮನು ಹನ್ನೆರಡು ಅಂಗಗಳಾಗಿ ವಿಂಗಡಿಸಿದನು.

---

1. ಸಿರಿಭೂವಲಯ—ಸರ್ವಾರ್ಥಸಿದ್ಧಿ ಸಂಘ, ಬೆಂಗಳೂರು ಭಾಗ ೧. ೧೯೫೩; ೨. ೧೯೫೫.

ಮಾಘಣಂದಿಯ ಶ್ರಾವಕಾಚಾರದಲ್ಲಿ ಗೌತಮನ ಅನಂತರ ೨೮ ಆಚಾರ್ಯರು ವೀರ ನಿರ್ವಾಣ ೬೮೩ವರೆಗೆ ಆಗಮಗಳನ್ನು ರಕ್ಷಿಸಿಕೊಂಡು ಬಂದರೂ, ಏಕಾಂಗಧರರಲ್ಲಿ ಕೊನೆಯವನಾದ ಲೋಹಾಚಾರ್ಯನ ಕಾಲಕ್ಕೆ ಒಂದೇ ಅಂಗವು ಉಳಿಯಿತೆಂದು ಹೇಳಿದೆ. ಅನಂತರ ಸ್ವಲ್ಪಕಾಲವಾದ ಮೇಲೆ ಗುಣಧರನ ಸಮಕಾಲೀನನಾದ ಧರಸೇನನು ಕೆಲವು ಭಾಗಗಳನ್ನು ಮಾತ್ರ ಕಲಿತಿದ್ದು ತನ್ನ ಶಿಷ್ಯರಾದ ಪುಷ್ಪದನ್ತ ಮತ್ತು ಭೂತ ಬಲಿಗಳಿಗೆ ಉಪದೇಶಿಸಲು ಅವರು ಸೂತ್ರರೂಪವಾಗಿ ರಚಿಸಿದರು. ಪುಷ್ಪದನ್ತನು ೧೭೭ ಸೂತ್ರ ಗಳನ್ನು ಮಿಕ್ಕ ಸೂತ್ರಗಳನ್ನು ಭೂತಬಲಿಯು ರಚಿಸಿದರು. ನಂದಿಸಂಘದ ಪ್ರಾಕೃತ ಪಟ್ಟಾವಳಿಗಳಲ್ಲಿ ಆಚಾರ್ಯರ ಕಾಲವನ್ನು ಹೇಳಿರುವದೇ ಅಲ್ಲದೆ ಧರಸೇನ ಗುಣಧರ ಪುಷ್ಪದಂತ ಭೂತಬಲಿಗಳ ಹೆಸರುಗಳನ್ನು ಸೇರಿಸಿ ವೀರನಿರ್ವಾಣ ಶಕ ೯೧೪-೯೮೩ ರಲ್ಲಿದ್ದರೆಂದು ಹೇಳಿದೆ. ಬೃಹಟ್ಟಿಪ್ಪಣಿಕಾ ಎಂಬ ಗ್ರಂಥದ ಪ್ರಕಾರ ವೀರಶಕ ೬೦೦ ರಲ್ಲಿ ಧರಸೇನನು ಜೋಣಿಪಾಹುಡವನ್ನೂ ರಚಿಸಿದನು.

ಪುಷ್ಪದಂತ ಭೂತಬಲಿಗಳ ಸೂತ್ರಗಳು ಮೊದಲು ಅರ್ಧಮಾಗಧಿಯಲ್ಲಿ ರಚಿತ ವಾಗಿದ್ದು ಅನಂತರ ಸೌರಾಷ್ಟ್ರೀ ಮತ್ತು ಮಹಾರಾಷ್ಟ್ರೀ ಪ್ರಾಕೃತ ರೂಪವಾದುವೆಂದು ಊಹಿಸಲಾಗಿದೆ. ವೀರಸೇನನ ಧವಳದಲ್ಲಿ ಹನ್ನೆರಡನೆಯ ಅಂಗವಾದ ದಿಟ್ಠಿವಾದದ ಮತ್ತು ಸೂತ್ರಗಳಲ್ಲಿ ಅಡಕವಾಗಿದ್ದ ಭಾಗಗಳ ನಿರ್ದೇಶವಿದೆ. ದಿಟ್ಠಿವಾದದಲ್ಲಿ ಐದು ಭಾಗಗಳಿದ್ದು ನಾಲ್ಕನೆಯದು ಪೂರ್ವಗತ ಎನಿಸಿಕೊಂಡಿತ್ತು. ಅದರಲ್ಲಿ ಹದಿನಾಲ್ಕು ವಿಭಾಗಗಳಿದ್ದು ಎರಡನೆಯದಕ್ಕೆ ಆಗ್ರಾಯಣೀಯ ಪೂರ್ವ ಎಂಬ ಹೆಸರಿದ್ದಿತು. ಈ ಆಗ್ರಾಯಣೀಯ ಪೂರ್ವದಲ್ಲಿ ಪುನಃ ಹದಿನಾಲ್ಕು ಭಾಗಗಳಿದ್ದು ಐದನೆಯದು ಚಯನ ಲಬ್ಧಿ. ಅದರಲ್ಲಿ ೨೦ ಪಾಹುಡಗಳಲ್ಲಿ ನಾಲ್ಕನೆಯ ಪಾಹುಡಕ್ಕೆ ಕಮ್ಮಪಯಡಿ (ಕರ್ಮ ಪ್ರಕೃತಿ) ಎಂದು ಹೆಸರು. ಈ ಕಮ್ಮಪಯಡಿ ಪಾಹುಡದ ೨೪ ವಿಷಯಗಳು ಸೂತ್ರಗಳಲ್ಲಿ ಅಡಕವಾಗಿದ್ದವು. ಒಂದು ಸಣ್ಣ ಭಾಗವು ಮಾತ್ರ ವಿಯಾಹ ಪನ್ನತ್ತಿ ಯನ್ನನುಸರಿಸಿದ್ದಿತು.[2]

ವೀರಸೇನನು ಈ ಸೂತ್ರಗಳನ್ನು ಷಟ್ಖಂಡ ಸಿದ್ಧಾಂತವೆಂದು ಕರೆದಿರುವನು. ಷಟ್ಖಂಡಾಗಮ ಎಂಬ ಹೆಸರು ಅನಂತರ ಬಂದಿತೆಂದು ಕಂಡುಬರುವದು. ಜೀವ ಠ್ಠಾಣ, ಖುದ್ದಾಬಂಧ, ಬಂಧ ಸಾಮಿತ್ತ ವಿಚಯ, ವೇದಣಾ, ವಗ್ಗಣಾ, ಮಹಾ ಬಂಧ ಎಂಬ ಆರುಖಂಡಗಳಲ್ಲಿ ಮೊದಲು ಐದು ಖಂಡಗಳು ೬೦೦೦ ಸೂತ್ರಗಳಲ್ಲಿ ಅಡಕವಾಗಿದ್ದು ಅವಕ್ಕೆ ವೀರಸೇನನು ೭೨೦೦೦ ಗ್ರಂಥಪರಿಮಿತಿಯ “ **ಧವಲ** ” ಎಂಬ ವ್ಯಾಖ್ಯಾನವನ್ನು ಬರೆದನು. ಕೊನೆಯದಾದ ಮಹಾಬಂಧಕ್ಕೆ ಭೂತಬಲಿಯೇ ಮೂವತ್ತು ಅಥವಾ ನಲ್ವತ್ತುಸಾವಿರ ಗ್ರಂಥವ್ಯಾಖ್ಯಾನ ಬರೆದಿದ್ದನೆಂದು ಅದಕ್ಕೆ **ಮಹಾಧವಲ** ಎಂಬ ಹೆಸರಿದ್ದಿತೆಂದು, ಆದುದರಿಂದ ತಾನು ಪುನಃ ವ್ಯಾಖ್ಯಾನ

---

2. *Jaina Antiquary* Vol. VI.

ಬರೆಯಲಿಲ್ಲವೆಂದು ವೀರಸೇನನು ಹೇಳಿರುವನು. ಈ ಭೂತಬಲಿಯ ಮಹಾಬಂಧವು [ಮಹಾಧವಲ] " ಪಡಿಯ. ಠ್ದಿದಿ, ಅಣುಭಾಗ, ಪದೇಶ " [ಪ್ರಕೃತಿ, ಸ್ಥಿತಿ, ಅನು ಭಾಗ, ಪ್ರದೇಶ] ಎಂಬ ನಾಲ್ಕು ವಿಧಾನಗಳನ್ನು ನಿರೂಪಿಸುತ್ತದೆಂದು ವೀರಸೇನನು ತನ್ನ ಧವಲ ಟೀಕೆಯಲ್ಲಿ ಹೇಳಿರುವನು.

ಧರಸೇನಾಚಾರ್ಯನ ಸಹಪಾಠಿಯಾದ ಗುಣಧರನು ದಿಟ್ಠಿವಾದದ ಮತ್ತೊಂದು ಭಾಗವನ್ನು ರಕ್ಷಿಸಿದನು. ಹದಿನಾಲ್ಕು ಪೂರ್ವಗಳಲ್ಲಿ ಐದನೆಯದು ಜ್ಞಾನಪ್ರವಾದ. ಅದರಲ್ಲಿ ಹನ್ನೆರಡು ವಸ್ತುಗಳಿದ್ದು, ಹತ್ತನೆಯ ವಸ್ತುವಿನಲ್ಲಿ ಇಪ್ಪತ್ತು ಪಾಹುಡಗಳಿದ್ದವು. ಅವುಗಳಲ್ಲಿ ಮೂರನೆಯದಾದ ಪೆಜ್ಜದೋಸಪಾಹುಡವನ್ನು ಗುಣಧರನು ೧೮೦ ಗಾಥೆ ಗಳಾಗಿ ರಚಿಸಿ ಕಷಾಯಪಾಹುಡವೆಂಬ ಹೆಸರನ್ನು ಕೊಟ್ಟನು. ಈ ಕಷಾಯಪಾಹುಡಕ್ಕೆ ಯತಿ ವೃಷಭನು ಚೂರ್ಣಿಸೂತ್ರವನ್ನು ರಚಿಸಿದನು. ಈ ಕಷಾಯ ಪಾವುಡಕ್ಕೆ 'ವೋಛಾಮಿ ಸತ್ತಕಮ್ಮೇ ಪಂಚಿಯ ರೂಪೇಣ ವಿವರಣಂ ಸುಮಹತ್ಥಂ' ಎಂದು ಆರಂಭವಾಗುವ ಒಂದು ಪ್ರಾಕೃತಪಂಜಿಕೆ ಇದೆ. ತುಂಬಲೂರಾಚಾರ್ಯನ ಚೂಡಾಮಣಿ ಕನ್ನಡದಲ್ಲಿದ್ದಂತೆ ತಿಳಿದುಬರುವದರಿಂದ ಈ ಪ್ರಾಕೃತ ಪಂಜಿಕೆ ಮತ್ತಾವ ಗ್ರಂಥಕಾರ ನದೊ ಆಗಿರಬೇಕು. ಈ ಸತ್ತಕಮ್ಮ ಅಥವಾ ಕಸಾಯಪಾಹುಡ ೬೨೦೦೦ ಸಾವಿರ ಗ್ರಂಥವೆಂದು ಧವಲದಲ್ಲಿ ಹೇಳಿದೆ. ಆದಕ್ಕೆ ವೀರಸೇನನೂ ಅವನ ಶಿಷ್ಯ ಜಿನಸೇನನೂ ೬೦,೦೦೦ ಗ್ರಂಥಪ್ರಮಾಣದ **ಜಯಧವಲ** ಎಂಬ ಟೀಕೆಯನ್ನು ರಚಿಸಿದರು. ಹಿಂದೆ ಗುಣಧರನ ಶಿಷ್ಯರಾದ ನಾಗಹಸ್ತಿ ಮತ್ತು ಆರ್ಯಮಂಗು[ಮಂಕ್ಷು](೨) ನಾಗಹಸ್ತಿಯ ಶಿಷ್ಯಯತಿ ವೃಷಭ [ಚೂರ್ಣೀ ಸೂತ್ರಕರ್ತೃ], ಅವನ ಶಿಷ್ಯ ಉಚ್ಚಾರಣಾಚಾರ್ಯ [ವೃತ್ತಿಕಾರ] ಇದ್ದರು.

ವೀರಸೇನನು ತನಗಿಂತಲೂ ಪೂರ್ವದಲ್ಲಿ ಸೂತ್ರಗಳ ಮೇಲೆ ರಚಿತವಾಗಿದ್ದ ವ್ಯಾಖ್ಯಾನಗಳ ಹೆಸರುಗಳನ್ನು ಉದಾಹರಿಸಿರುವನು. ಕುಂಡಕುಂದನ 'ಪರಿಕ್ರಮ.' [೧೬೦೦೦ ಗ್ರಂಥ] (೨) ಶ್ಯಾಮಕುಂದನ " ಪದ್ಧತಿ" [೧೨೦೦೦], ತುಂಬಲೂರಾಚಾ ರ್ಯನ 'ಚೂಡಾಮಣಿ' [ಕನ್ನಡ, ೧೧೦೦೦], ಸಮಂತಭದ್ರನ 'ಭಾಷ್ಯ' [?೪೮,೦೦೦],ಬಪ್ಪದೇವನ ವ್ಯಾಖ್ಯಾಪ್ರಜ್ಞಪ್ತಿ [ಪ್ರಾಕೃತ, ೭೩೦೦೦ ಶ್ಲೋಕ], ಅಲ್ಲದೆ ಪೂಜ್ಯಪಾದನ ಸಾರಸಂಗ್ರಹ, ಭೇದಸುತ್ತ, ಕಮ್ಮಪವಾದ, ದಶಕರಣಿ ಸಂಗ್ರಹ, ಜೋಣಿ ಪಾಹುಡ ಇತ್ಯಾದಿಗಳ ಉಲ್ಲೇಖನೆಯಿದೆ. ವೀರಸೇನನ ಧವಲಟೀಕೆಯಲ್ಲಿ[ಅಮ ರಾವತಿ ಪ್ರತಿ, ಪುಟ ೩೯೭] ಧನಂಜಯನ ಅನೇಕಾರ್ಥನಾಮಮಾಲೆಯ 'ಹೇತಾ ವೇವಂ ಪ್ರಕಾರಾದ್ಯೈಃ ವ್ಯವಚ್ಛೇದೇ ವಿಪರ್ಯಯೇ । ಪ್ರಾದುರ್ಭಾವೇ ಸಮಾಪ್ತೌ ಚ ಇತಿ ಶಬ್ದಂ ವಿದುರ್ಬುಧಾಃ ॥' ಎಂಬ ನಿಘಂಟು ಉಕ್ತವಾಗಿದೆ. ಕುಂಡಕುಂದಪುರದ ಪದ್ಮನಂದಿ ಕರ್ಮಪ್ರಾಭೃತ ಮತ್ತು ಕಷಾಯಪ್ರಾಭೃತಗಳನ್ನು ಅರಿತಿದ್ದು ಷಟ್ಖಂಡಾಗ ಮದ ಮೊದಲು ಮೂರು ಖಂಡ [ಜೀವವಿಭಾಗ]ಗಳಿಗೆ ವ್ಯಾಖ್ಯಾನವನ್ನು ರಚಿಸಿದ ನೆಂದು ಶ್ರುತಾವತಾರವು ಹೇಳುವುದು. ವಿಬುಧ ಶ್ರೀಧರನು ಕುಂಡಕುಂದನ ಶಿಷ್ಯನಾದ

ಕುಂದಕೀರ್ತಿ ಈ ಟೀಕೆಯನ್ನು ರಚಿಸಿದನೆಂದು ಹೇಳುವನು.

ವೀರಸೇನನು ಚಿತ್ರಕೂಟಾಮ್ನಾಯದ ಏಲಾಚಾರ್ಯನ ಮತ್ತು ಪಂಚಸ್ತೂಪಾಮ್ನಾಯದ ಚಂದ್ರಸೇನನ ಶಿಷ್ಯನಾದ ಆರ್ಯನಂದಿಯ ಶಿಷ್ಯನೆಂದು, ‘ಆನತೇಂದ್ರ’ನಿಂದ ವಾಟಗ್ರಾಮದಲ್ಲಿ ನಿರ್ಮಿತವಾದ ಬಸದಿಯಲ್ಲಿ ಗ್ರಂಥರಚನೆಮಾಡಿದನೆಂದು ಧವಳಗ್ರಂಥದಿಂದಲೂ ಇಂದ್ರನಂದಿಯ ಶ್ರುತಾವತಾರದಿಂದಲೂ ತಿಳಿದುಬರುವುದು. ವೀರಸೇನನು ಧವಳ ಟೀಕಾ ಗ್ರಂಥರಚನಾಕಾಲವನ್ನು ಹೀಗೆ ಸೂಚಿಸಿರುವನು.

ಆರತೀಸಮ್ಹಿ ಸತಸಏ ವಿಕ್ಕಮರಾಯಂ ಕಿ[ಹಿ] ಏಸುಸಗಣಾಮೇ |
ವಾಸೇಸುತೇರಸಿಯೇ ಭಾಣುವಿಲಗ್ಗೇ ಧವಲಪಕ್ಖೇ ||
[ಅಮರಾವತಿಪ್ರತಿ]

ಅಟ್ಠತೀಸಮ್ಹಿ ಸಾಸಿಯವಿಕ್ಕಮರಾಯಮ್ಹಿ ಏಸು ಸಂಗರಮೋ |
ಪಾ[ಪೋ]ಸೇ ಸುತೇರಸಿಯೇ ಭಾವವಿಲಗ್ಗೇ ಧವಲಪಕ್ಖೇ || ೬ ||

ಜಗತ್ತುಂಗದೇವರಜ್ಜೇ ರಿಯಮ್ಹಿ ಕುಂಭಮ್ಹಿರಾಹುಣಾಕೋಣೇ |
ಸೂರೇತುಲಾಯೇಸನ್ತೇ ಗುರುಮ್ಹಿಕುಲವಿಲ್ಲಯೆ ಹೋನ್ತೇ || ೭ |

ಚಾವಮ್ಹಿವರಣವುತ್ತೇ ಸಿಂಘೇ[ಗ್ಧೇ ?]ಸುಕ್ಕಮ್ಮಿ ಮಿಣೇಚಂದಮ್ಮಿ |
ಕತ್ತಿಯಮಾಸೇಏಸಾಟೀಕಾ ಹುಸಮಾಣಿಲಾ ಧವಲಾ || ೮ ||

ವೋದ್ದಣರಾಯಣರಿಂದೇ ಣರಿಂದಚೂಡಾಮಣಿಮ್ಹಿಭುಂಜಂತೇ |
ಸಿದ್ಧನ್ತಗನ್ಥಮತ್ಥಿಯ ಗುರುಪ್ಪಸಾಯೇಣ ವಿಗತ್ತಾಸಾ || ೯ ||
[ನಿರ್ಣಯಸಾಗರಪ್ರತಿ]

ಹೀರಾಲಾಲರು ವಿಕ್ರಮರಾಯನ ಕಾಲದ ೭೮೪ ಎಂದಿದ್ದರೂ ಶಾಲಿವಾಹನಶಕಕ್ಕೆ (ಸಗಣಾಮೇ) ಅನ್ವಯಿಸಿ, ಧವಲಗ್ರಂಥ ಸಮಾಪ್ತಿ ಕ್ರಿ.ಶ. ೮೧೬, ಕಾರ್ತಿಕಶುದ್ಧ ೧೩ (ಅಕ್ಟೋಬರ್ ೮) ಎಂದು, ಆಗ ಜಗತ್ತುಂಗನ ರಾಜ್ಯ ಮುಗಿದು ‘ ಬೊದ್ದನರಯ ’ [ಬದ್ದಿಗ—ಅಮೋಘವರ್ಷ]ನ ಆಳಿಕೆ ಆರಂಭವಾಗುತ್ತಿದ್ದಿತೆಂದು ನಿರ್ಧರಿಸಿದರು. ಆದರೆ ಜೆ. ಪಿ. ಜೈನರು [3] ವಿಕ್ರಮಸಂವತ್ ೮೩೮ [ಕ್ರಿ.ಶ. ೭೮೦] ಕಾರ್ತಿಕಶುದ್ಧ ೧೩ [ಸೋಮವಾರ, ಅಕ್ಟೋಬರ್ ೮] ಎಂದು ಅಭಿಪ್ರಾಯಪಡುವರು. ಹೀರಾಲಾಲರ ಅಭಿಪ್ರಾಯದಲ್ಲಿ ‘ ವಿಕ್ರಮರಾಯಂಹಿ ’ ಎಂಬುದಕ್ಕೆ ಸಮರ್ಪಕವಾದ ಅರ್ಥವಿಲ್ಲ. ಜೆ. ಪಿ. ಜೈನರ ಊಹೆಯಲ್ಲಿ ‘ ಸಗಣಾಮೇ ’ ಅಥವಾ ‘ ಸಂಗರಮೋ ’ ಎಂಬುದಕ್ಕೆ ಉತ್ತರವಿಲ್ಲ. ವೀರಸೇನನು ಹೇಳಿರುವ ಗ್ರಹಸ್ಫುಟದಲ್ಲಿ ಅನೇಕ ಸಮಸ್ಯೆಗಳಿವೆ. ಸಾಮಾನ್ಯವಾಗಿ ಜೈನಗ್ರಂಥಗಳಲ್ಲಿ ವಿಕ್ರಮ ಶಕದ ಉಲ್ಲೇಖನೆಯೇ ಕಂಡುಬರುವದು. ಆದರೆ ಜೆ. ಪಿ. ಜೈನ್ ಅವರು ಹೇಳಿದಂತೆ ಕಾರ್ತಿಕ ಶು. ೧೩ ಕ್ರಿ.ಶ. ೭೮೦ರಲ್ಲಿ ಅಕ್ಟೋಬರ್ ೮ ಆಗುವುದಿಲ್ಲ. ಅಕ್ಟೋಬರ್ ೧೬ ಸೋಮವಾರವಾಗುತ್ತದೆ. ಆದರೂ ಗ್ರಹಗತಿಗಳು ಸರಿಹೋಗುವದಿಲ್ಲ. ವೀರಸೇನನು ಹೇಳಿದಂತೆ ಕುಂಭದಲ್ಲಿ ರಾಹು,

---

3 *Jaine Antiquary, Jan.* 1949, Vol 15.

ಕೋಣ [ಶನಿ ?], ತುಲೆಯಲ್ಲಿ ರವಿ, ಕುಲವಿಲ್ಲ [ಕುಳೀರ]ದಲ್ಲಿ ಗುರು, ವರಣವೃತ್ತ [ಕುಜ?] ಧನುಸ್ಸಿನಲ್ಲಿ, ಶುಕ್ರ ಸಿಂಹದಲ್ಲಿ, ಚಂದ್ರ ಮೀನದಲ್ಲಿದ್ದರು. ತುಲಾಮಾಸ ಕಾರ್ತಿಕ ಶು. ೧೩ರಲ್ಲಿ ಚಂದ್ರನು ರೇವತಿಯಲ್ಲಿರಬಹುದು.

| ಕ್ರಿ.ಶ. ೭೮೦ ಅಕ್ಟೋಬರ್ ೧೯ ಸೋಮವಾರ | | | ಕ್ರಿ.ಶ. ೮೧೯. ಅಕ್ಟೋಬರ್ ೮ ಬುಧವಾರ | | |
|---|---|---|---|---|---|
| ರವಿ | ೧೯೩° | ತುಲ | ರವಿ | ೧೯೪° | ತುಲ |
| ಚಂದ್ರ | ೩೫೬° | ಮೀನ | ಚಂದ್ರ | ೩೫೬° | ಮೀನ |
| ಬುಧ | ೧೭೨° | ಕನ್ಯಾ | ಬುಧ | ೨೦೮° | ತುಲ |
| ಕುಜ | ೨೫೬° | ಧನುಸ್ | ಕುಜ | ೨೬೫° | ಧನುಸ್ |
| ಗುರು | ೧೦೬° | ಕಟಕ | ಗುರು | ೧೧೯° | ಕಟಕ |
| ಶುಕ್ರ | ೧೯೧° | ತುಲಾ | ಶುಕ್ರ | ೧೪೮° | ಸಿಂಹ |
| ಶನಿ | ೨೪೧° | ಧನುಸ್ | ಶನಿ | ೩೧೫° | ಕುಂಭ |
| ರಾಹು | ೩೫೦° | ಮೀನ | ರಾಹು | ೩೨೫° | ಕುಂಭ |
| ಕೇತು | ೧೭೦° | ಕನ್ಯಾ | ಕೇತು | ೧೪೫° | ಸಿಂಹ |

| ರಾ ಚ | | | |
|---|---|---|---|
| | ಕ್ರಿ. ಶ. ೭೮೦ | | ಗು |
| | | | |
| ಕು ಶ | | ಲ ರ ಬು ಶು | ಕೇ |

| ಚ | | | |
|---|---|---|---|
| ರಾ ಶ | ಕ್ರಿ. ಶ. ೮೧೬ | | ಗು |
| | | | ಕೇ ಶು |
| ಕು | | ಲ ರ ಬು | |

ಕ್ರಿ. ಶ. ೭೮೦ರಲ್ಲಿ ಉಕ್ತತಿಥಿಯಲ್ಲಿ ಶುಕ್ರನು ಸಿಂಹದಲ್ಲಿರುವದಿಲ್ಲ ಮತ್ತು ಕುಂಭದಲ್ಲಿ ಕೋಣ (ಶನಿ) ಇರುವದಿಲ್ಲ. ಕ್ರಿ. ಶ. ೮೧೬ ಕಾರ್ತಿಕ ಶುದ್ಧ ೧೩ರಲ್ಲಿ ಗ್ರಹಗಳು ಸಾಮಾನ್ಯವಾಗಿ ವೀರಸೇನನು ಹೇಳಿದಂತೆಯೇ ಇದ್ದರೂ ವಿಕ್ರಮರಾಯನ ಶಕಕ್ಕೆ ಅನ್ವಯಿಸಲಾಗುವದಿಲ್ಲ.

ಇನ್ನು 'ಜಗತ್ತುಂಗ ದೇವರಾಜ್ಯ' 'ವೋದ್ದಣರಾಯಣರಿಂದ' ಎಂಬುದರ ಆಧಾರದ ಮೇಲೆಯೂ ವೀರಸೇನನ ಶಿಷ್ಯರ ಗ್ರಂಥಗಳ ಆಧಾರದ ಮೇಲೆಯೂ ವೀರಸೇನನ ಕಾಲ ನಿರ್ಣಯವನ್ನು ಮಾಡಬಹುದು. 'ತುಂಗ' ಎಂಬುದು ರಾಷ್ಟ್ರಕೂಟ ಚಕ್ರವರ್ತಿಗಳ ಚಿಹ್ನೆ. ರಾಷ್ಟ್ರಕೂಟರಲ್ಲಿ ಇಮ್ಮಡಿ ಗೋವಿಂದ (ಕ್ರಿ. ಶ. ೭೭೩-೭೭೯)ನಿಗೆ ಈ ಜಗತ್ತುಂಗ ಎಂಬ ಬಿರುದಿದ್ದಿರಬಹುದಾದರೂ ಈಗ ಸಿಕ್ಕಿರುವ ಶಾಸನಗಳಲ್ಲಿ ಕಂಡುಬಂದಿಲ್ಲ. ಅನಂತರ ಆಳಿದ ಧ್ರುವನಿರುಪಮ (೭೭೯–೭೯೩)ನ

ಕಾಲದಲ್ಲಿ ಹರಿವಂಶಕರ್ತೃವಾದ ಜಿನಸೇನನು ವೀರಸೇನನ ಹೆಸರನ್ನು ಹೇಳಿರುವನು. ಈ ಧ್ರುವನಿರುಪಮನಿಗೆ ಜಗತ್ತುಂಗನೆಂಬ ಬಿರುದಿತ್ತೆಂದು ನಿಶ್ಚಿತವಾಗಿಲ್ಲ. ಬಾದಿ ಪೊದ್ದಿಯ ಪಟ್ಟದಕಲ್‌ಶಾಸನ ಇಮ್ಮಡಿ ಗೋವಿಂದನದೆಂದು ಫ್ಲೀಟ್ ಊಹಿಸಿದ್ದು ದನ್ನು ಕೀಲ್‌ಹೋರ್ನ್ ಅಂಗೀಕರಿಸಿಲ್ಲ. ವಾಮನನ ಲಿಂಗಾನುಶಾಸನದಲ್ಲಿ ' ಜಗತ್ತುಂಗ ಸಭಾ ' ಉಲ್ಲೇಖನೆಯಿದೆ.

ಹರಿವಂಶವನ್ನು ರಚಿಸಿದ ಬೃಹತ್ಪುನ್ನಾಟಸಂಘದ [ಒಂದನೆಯ] ಜಿನಸೇನನು ವೀರಸೇನ, ಕೀರ್ತಿಷೇಣ ಗುರುಗಳನ್ನು ತನ್ನ ಸಮಕಾಲೀನ[ಶಕ ೭೦೫= ಕ್ರಿ.ಶ. ೭೮೩] ರಾಜರನ್ನು ಉಲ್ಲೇಖಿಸಿರುವನು.[4]

ಜಿತಾತ್ಮಪರಲೋಕಸ್ಯ ಕವೀನಾಂ ಚಕ್ರವರ್ತಿನಃ |
ವೀರಸೇನಗುರೋಃ ಕೀರ್ತಿರಕಲಂಕಾವಭಾಸತೇ ॥

ಯಾಮಿತೋಽಭ್ಯುದಯೇ ತಸ್ಯ ಜಿನೇಂದ್ರಗುಣಸಂಸ್ತುತಿಃ |
ಸ್ವಾಮಿನೋಜಿನಸೇನಸ್ಯ ಕೀರ್ತಿಸಂಕೀರ್ತಯತ್ಯಸೌ ॥ ೧. ೩೯-೪೦

ತಪೋಮಯೀಂಕೀರ್ತಿಮಶೇಷದಿಕ್ಷುಯಃ ಕ್ಷಿಪನ್ ಬಭೌ ಕೀರ್ತಿತಕೀರ್ತಿಷೇಣಃ|
ತದಗ್ರಶಿಷ್ಯೇಣಶಿವಾಗ್ರಸೌಖ್ಯಭಾಗರಿಷ್ಟನೇಮೀಶ್ವರಭಕ್ತಿಭಾವಿನಾ ॥
೬೬_೩೩.

ಸ್ವಶಕ್ತಿಭಾಜಾ ಜೀನಸೇನಸೂರಿಣಾ ಧಿಯಾಲ್ಪಯೋಕ್ತಾ ಹರಿವಂಶಪದ್ಧತಿಃ |
ಯದತ್ರಕಿಂಚಿದ್ರಚಿತಂ ಪ್ರಸಾದತಃ ಪರಂಪರಾವ್ಯಾಹೃತಿದೋಷದೂಷಿತಮ್ ॥
೬೬-೩೪.

ಶಾಕೇಷ್ವಬ್ಧಶತೇಷು ಸಪ್ತಸು ದಿಶಂಪಂಚೋತ್ತರೇಷೂತ್ತರಾಮ್ ।
ಪಾತೀಂದ್ರಾಯುಧನಾಮ್ನಿ ಕೃಷ್ಣನೃಪಜೇಶ್ರೀವಲ್ಲಭೇ ದಕ್ಷಿಣಾಮ್ |
ಪೂರ್ವಾಂ ಶ್ರೀಮದವನ್ತಿಭೂಭೃದಿನೃಪೇ ವತ್ಸಾಧಿರಾಜೇಽಪರಾಮ್ |
ಸೌರ್ಯಾಣಾಮಧಿಮಂಡಲಂ ಜಯುತೇ ವೀರೇವರಾಹೋವತಿ ॥

ಕಲ್ಯಾಣೈಃ ಪರಿವರ್ಧಮಾನವಿಪುಲಶ್ರೀ ವರ್ಧಮಾನೇಪುರೇ ।
ಶ್ರೀಪಾರ್ಶ್ವಾಲಯನನ್ನರಾಜವಸತೌ ಪರ್ಯಾಪ್ತಿಶೇಷಃಪುರಾ |
ಪಶ್ಚಾದ್ದೌಸ್ತಟಿಕಾಪ್ರಜಾಪ್ರಜನಿತ ಪ್ರಾಜ್ಯಾರ್ಚನಾವರ್ಜನೇ ।
ಶಾಂತೇಶಾಂತಗೃಹೇ ಜಿನೇಶರಚಿತೋ ವಂಶೋಹರೀಣಾಮಯಮ್ ॥

ವ್ಯುತ್ಸೃಷ್ಟಾಖಿಲ ಸಂಘಸನ್ತತಿ ಬೃಹತ್ಪುನ್ನಾಟ ಸಂಘಾನ್ವಯೇ ।
ಪ್ರಾಪ್ತಶ್ರೀ ಜಿನಸೇನಸೂರಿಕವಿನಾ ಲಾಭಾಯ ಬೋಧೇಃ ಪುನಃ |
ದೃಷ್ಟೋಽಯಂ ಹರಿವಂಶಪುಣ್ಯಚರಿತಃ ಶ್ರೀಪಾರ್ಶ್ವತಃ ಸರ್ವತೋ |
ವ್ಯಾಪ್ತಾಶಾಮುಖಮಣ್ಡಲಃ ಸ್ಥಿರತರಃ ಸ್ಥೇಯಾತ್ಪೃಥಿವ್ಯಾಂ ಚಿರಮ್ ॥
೬೬ ೫೨-೫೫.

ಇಲ್ಲಿ ಹೇಳಿರುವ ವೀರಸೇನನು ಬಹುಶಃ ಧವಳ ಗ್ರಂಥಕಾರನಾದುದರಿಂದ ಕ್ರಿ. ಶ. ೭೮೩ಕ್ಕೆ ಹಿಂದೆಯೇ ಪ್ರಸಿದ್ಧನಾಗಿದ್ದನೆಂದು ಊಹಿಸಬಹುದು. ಈ ಒಂದನೆಯ

---

4, *Sources of Karnataka History*. Vol I. P. 67,

ಜಿನಸೇನನು ಕೀರ್ತಿಷೇಣನ ಅಗ್ರಶಿಷ್ಯನೆಂದು, ವರ್ಧಮಾನಪುರದಲ್ಲಿ ನನ್ನ ರಾಜನಿಂದ ನಿರ್ಮಿತವಾದ ಪಾರ್ಶ್ವನಾಥ ಬಸದಿಯಲ್ಲಿ ಗ್ರಂಥವನ್ನು ರಚಿಸಿದನೆಂದೂ ಹೇಳಿಕೊಂಡಿರುವನು. ದ್ವಿತೀಯ ಜಿನಸೇನನು ವೀರಸೇನ ಮುನಿಯ ಶಿಷ್ಯನಾದ ವಿನಯಸೇನನ ಪ್ರಚೋದನೆಯಿಂದ ಪಾರ್ಶ್ವಾಭ್ಯುದಯವೆಂಬ ವೇಷ್ಟಿತಕಾವ್ಯವನ್ನು ರಚಿಸಿದನು.

ಇತಿವಿರಚಿತಮೇತತ್ಕಾವ್ಯಮಾವೇಷ್ಟ್ಯಮೇಘಂ
    ಬಹುಗುಣಮಪದೋಷಂ ಕಾಲಿದಾಸಸ್ಯ ಕಾವ್ಯಮ್ |
ಮಲಿನಿತ ಪರಕಾವ್ಯಂ ತಿಷ್ಠತಾದಾಶಶಾಂಕಂ
    ಭುವನಮವತು ದೇವಃ ಸರ್ವದಾಮೋಘವರ್ಷಃ ॥

ಶ್ರೀ ವೀರಸೇನ ಮುನಿಪಾದಪಯೋಜ ಭೃಂಗಃ
    ಶ್ರೀಮಾನಭೂದ್ವಿನಯಸೇನ ಮುನಿರ್ಗರೀಯಾನ್ ।
ತಚ್ಚೋದಿತೇನ ಜಿನಸೇನ ಮುನೀಶ್ವರೇಣ
    ಕಾವ್ಯಂ ವ್ಯಧಾಯಿ ಪರಿವೇಷ್ಟಿತ ಮೇಘದೂತಮ್ ॥

ಇತ್ಯಮೋಘವರ್ಷ ಪರಮೇಶ್ವರ ಪರಮಗುರು ಶ್ರೀ ಜಿನಸೇನಾಚಾರ್ಯ
ವಿರಚಿತೇ ಮೇಘದೂತವೇಷ್ಟಿತೇ ಪಾರ್ಶ್ವಾಭ್ಯುದಯೇ—

ಇದರಿಂದ ಅಮೋಘವರ್ಷನ ಪರಮಗುರು ಜಿನಸೇನನು ವೀರಸೇನನ ಶಿಷ್ಯನಾದ ವಿನಯಸೇನನ ಸಮಕಾಲೀನನು. ಮಹಾಪುರಾಣದಲ್ಲಿ ವೀರಸೇನನು ತನ್ನ ಗುರುವೆಂದೂ ಧವಲ ಗ್ರಂಥಕರ್ತೃವೆಂದೂ ಜಿನಸೇನನು ಸೂಚಿಸಿರುವನು.[6]

ಶ್ರೀವೀರಸೇನ ಇತ್ಯಾಪ್ತ ಭಟ್ಟಾರಕ ಪೃಥುಪಥಃ ।
ಸನಃ ಪುನಾತುಪೂತಾತ್ಮಾಕವಿವೃಂದಾರಕೋ ಮುನಿಃ ॥
ಲೋಕವಿತ್ತ್ವಂ ಕವಿತ್ವಂಚ ಸ್ಥಿತಂ ಭಟ್ಟಾರಕೇ ದ್ವಯಮ್ ।
ವಾಙ್ಮಿತಾ ವಾಗ್ಮಿತಾ ಯಸ್ಯ ವಾಚಾವಾಚಸ್ಪತೇರಪಿ ॥
ಸಿದ್ಧಾನ್ತೋಽಪಿನಿಬದ್ಧಾನಾಂ ವಿಧಾತುರ್ಮದ್ಗುರೋಶ್ಚಿರಂ ।
ಮನ್ಮನಃ ಸರಸಿಸ್ಥೇಯಾನ್ ಮೃದುಪಾದ ಕುಶೇಶಯಮ್ ।
ಧವಲಾಂ ಭಾರತೀಂ ತಸ್ಯ ಕೀರ್ತಿಂಚ ವಿಧು ನಿರ್ಮಲಾಂ ।
ಧವಲೀಕೃತ ನಿಃಶೇಷಭುವನಾಂ ತಾಂ ನಮಾಮ್ಯಹಮ್ ॥

(೧.೫೫_೫೮)

ಇದೇ ಜಿನಸೇನನು ವೀರಸೇನನ ಧವಳದ ಸಮಾಪ್ತಿಯಾಗಿ ಜಯ ಧವಳವನ್ನು ಶಕ ೭೫೯, ಫಾಲ್ಗುಣ ಶುದ್ಧ ದಶಮೀ, ನಂದೀಶ್ವರ ಮಹೋತ್ಸವದ ದಿನಪೂರ್ತಿಮಾಡಿದನು. ಶ್ರೀಪಾಲನು ಈ ಗ್ರಂಥ ಸಂಪಾದನೆ ಮಾಡಿದನೆಂದೂ, ಅಮೋಘವರ್ಷನು ಆಳುತ್ತಿದ್ದಾಗ ಗೂರ್ಜರಾರ್ಯನಿಗೆ ಸೇರಿದ್ದ ವಾಟಗ್ರಾಮದಲ್ಲಿ ಬರೆಯಲ್ಪಟ್ಟಿತೆಂದು ಜಿನಸೇನನು ಜಯಧವಳ ಪ್ರಶಸ್ತಿಯಲ್ಲಿ ಹೇಳಿರುವನು.[7]

---

5. *Sources* Vol. I. p. 68
6. *Sources.* Vol. I. p. 74
7. *Sources.* Vol. I. p. 77

ಇತಿ ಶ್ರೀವೀರಸೇನೀಯಾಟೀಕಾ ಸೂತ್ರಾರ್ಥಬೋಧಿನೀ ।
ವಾಟಗ್ರಾಮಪುರೇಶ್ರೀಮದ್ಗೂರ್ಜರಾರ್ಯಾನುಪಾಲಿತೇ ॥
ಫಾಲ್ಗುನೇಮಾಸಿಪೂರ್ವಾಹ್ನೇ ದಶಮ್ಯಾಂ ಶುಕ್ಲಪಕ್ಷಕೇ ।
ಪ್ರವರ್ಧಮಾನಪೂಜಾಯಾಂ ನಂದೀಶ್ವರಮಹೋತ್ಸವೇ ॥
ಅಮೋಘವರ್ಷರಾಜೇಂದ್ರಪ್ರಾಜ್ಯರಾಜ್ಯಗುಣೋದಯಾ ।
ನಿಷ್ಠಿತ ಪ್ರಚಯಂ ಯಾಯಾದಾಕಲ್ಪಾಂತ ಮನಲ್ಪಿಕಾ ॥
ಷಷ್ಠಿರೇವಸಹಸ್ರಾಣಿ ಗ್ರಂಥಾನಾಂ ಪರಿಮಾಣತಃ।
ಶ್ಲೋಕೇನಾನುಷ್ಟುಭೇನಾತ್ರ ನಿರ್ದಿಷ್ಟಾನ್ಯನುಪೂರ್ವಶಃ ॥
ವಿಭಕ್ತಿಃ ಪ್ರಥಮಸ್ಕನ್ಧೋ ದ್ವಿತೀಯಃ ಸಂಕ್ರಮೋದಯಃ ।
ಉಪಯೋಗಶ್ಚಶೇಷಾಸ್ತು ತೃತೀಯಸ್ಕನ್ಧ ಇಷ್ಯತೇ ॥
ಏಕಾನ್ನಷಷ್ಠಿಸಮಧಿಕಸಪ್ತಶತಾಬ್ದೇಷು ಶಕನರೇನ್ದ್ರಸ್ಯ ।
ಸಮತೀತೇಷು ಸಮಾಪ್ತಾ ಜಯಧವಲಾ ಪ್ರಾಭೃತವ್ಯಾಖ್ಯಾ ॥
ಗಾಥಾಸೂತ್ರಾಣಿ ಸೂತ್ರಾಣಿ ಚೂರ್ಣಿಸೂತ್ರಂತು ವಾರ್ತಿಕಮ್ ।
ಟೀಕಾ ಶ್ರೀವೀರಸೇನಾಯಾಽಶೇಷಾ ಪದ್ಧತಿಪಂಜಿಕಾ ॥
ಶ್ರೀವೀರಪ್ರಭುಭಾಷಿತಾರ್ಥಘಟನಾ ನಿರ್ಲೋಡಿತಾನ್ಯಾಗಮ–
ನ್ಯಾಯಾ ಶ್ರೀ ಜಿನಸೇನ ಸನ್ಮುನಿವರೈರಾದೇಶಿತಾರ್ಥಃಸ್ಥಿತಿಃ ।
ಟೀಕಾ ಶ್ರೀಜಯ ಚಿಹ್ನಿತೋರುಧವಲಾ ಸೂತ್ರಾರ್ಥಸಂಬೋಧಿನೀ ।
ಸ್ಥೇಯಾದಾರವಿಚನ್ದ್ರಮುಜ್ಜ್ವಲತಮಾ ಶ್ರೀಪಾಲಸಂಪಾದಿತಾ ॥

ಜಯಧವಲವು ಕ್ರಿ.ಶ ೮೩೭, ಫೆಬ್ರವರಿ ೧೯, ಸೋಮವಾರ ಸಮಾಪ್ತಿಯಾಯಿತು. ಬಹುಶಃ ಜಿನಸೇನನು ಮಹಾಪುರಾಣ ಗ್ರಂಥರಚನೆಯನ್ನು ಅನಂತರ ಆರಂಭಿಸಿ ಅಸಂಪೂರ್ಣವಾಗಿ ಬಿಟ್ಟಿದ್ದನ್ನು ಅವನ ಶಿಷ್ಯನಾದ ಗುಣಭದ್ರಾಚಾರ್ಯನು ಬಂಕಾಪುರದಲ್ಲಿ ಕ್ರಿ.ಶ. ೧೯೮, ಮಾರ್ಚಿ ೨ ಗುರುವಾರ ಶ್ರೀಪಂಚಮಿ ದಿನ ಉತ್ತರ ಪುರಾಣರೂಪವಾಗಿ ಪೂರ್ತಿಮಾಡಿದನು.

ವೀರಸೇನ— ಕೀರ್ತಿಷೇಣ.

ಹರಿವಂಶದ ಜಿನಸೇನ ಕ್ರಿ.ಶ. ೭೮೩.

ವೀರಸೇನನಧವಲ. ಕ್ರಿ.ಶ. ೮೧೬.

ವಿನಯಸೇನ— ಜಿನಸೇನ—ಪಾರ್ಶ್ವಭ್ಯುದಯ.

ಜಿನಸೇನ—ಜಯಧವಲ ಕ್ರಿ.ಶ. ೮೩೭.

ಶ್ರೀಪಾಲ

ಜಿನಸೇನ—ಮಹಾಪುರಾಣ—ಆದಿಪುರಾಣ.

ಗುಣಭದ್ರ—ಉತ್ತರಪುರಾಣ—ಕ್ರಿ ಶ. ೮೯೮.

ವೀರಸೇನ ಮತ್ತು ಎರಡನೆಯ ಜಿನಸೇನರು ಬಹು ದೀರ್ಘಕಾಲ ಜೀವಿಸಿದ್ದರೆಂದು ಊಹಿಸಬೇಕಾಗಿದೆ. ಹರಿವಂಶದ ಜಿನಸೇನನು ತನ್ನ ಗ್ರಂಥವನ್ನು ನನ್ನ ರಾಜನಿಂದ

---

8. Sources. Vol I, P. 109.
9. E. I. IX. P. 193.

ನಿರ್ಮಿತವಾದ ಬಸದಿಯಲ್ಲಿ ಬರೆದನೆಂದು ಹೇಳಿರುವದರಿಂದ ಬಹುಶಃ ಈ ನನ್ನ ರಾಜನು ಕ್ರಿ.ಶ. ೭೯೩ರಲ್ಲಿದ್ದ ಶಂಕರಗಣನ ತಂದೆಯೂ ಕಕ್ಕನ ಮಗನೂ ಆದ ನನ್ನ ರಾಜನಾಗಿರಬೇಕು. ರಾಷ್ಟ್ರಕೂಟ ಮುಮ್ಮಡಿ ಗೋವಿಂದ [ಕ್ರಿ.ಶ. ೭೯೩–೮೧೪]ನಿಗೆ ಜಗತ್ತುಂಗನೆಂಬ ಬಿರುದಿದ್ದಿತೆಂದು [ಸು. ಕ್ರಿ.ಶ. ೮೦೦] ಬನವಾಸಿಯ ರಾಜಾದಿತ್ಯ ಪರಮೇಶ್ವರನ ಶಾಸನದಿಂದಲೂ [10] ಹೂಲಿಹಳ್ಳಿ ಶಾಸನದಿಂದಲೂ ತಿಳಿದುಬರುವದು. ಈ ಹೂಲಿಹಳ್ಳಿಶಾಸನದಲ್ಲಿ [11] ಜಗತ್ತುಂಗನು ಆಳುತ್ತಿದ್ದಾಗ ಸಲುಕಿಕವಂಶದ ಮಣಿ ನಾಗನ ಮೊಮ್ಮಗನೂ ಬನವಾಸಿಯ ರಾಜಾದಿತ್ಯನ ಮಗನೂ ಆದ ಸಾಮಂತ ಬುದ್ಧ ರಸನುಎರೆಯಮ್ಮರಸನೊಡನೆ ದಾನಮಾಡಿದಂತೆ ಹೇಳಿದೆ. ವೀರಸೇನನು ಜಗತ್ತುಂಗ ದೇವರಾಜ್ಯವೆಂದು ಹೇಳಿ ವೊದ್ದಣರಾಯನರೇನ್ದ್ರನೆಂದು ಬಹುಶಃ ಒಬ್ಬ ಸಾಮಂತನ ಹೆಸರನ್ನು ಹೇಳಿರುವನು. ಮುಮ್ಮಡಿ ಗೋವಿಂದನ ಮಗನಾದ ಅಮೋಘವರ್ಷ [ನೃಪತುಂಗ]ನೇ ‘ ಬೊದ್ದನ ನರಯ ’[ಬದ್ದೆಗ ನರಪ]ಎಂಬ ಹಿರಾಲಾಲರ ಪಾಠಾಂತರ ದಿಂದ, ಅಮೋಘವರ್ಷನಿಗೂ ಬದ್ದೆಗ ಎಂಬ ಹೆಸರಿದ್ದಿತೆಂದು ಕೆಲವರೂ ಊಹಿಸಿರು ವರು ಕ್ರಿ.ಶ. ೯೩೭ರಲ್ಲಿದ್ದ ಇಮ್ಮಡಿ ಕೃಷ್ಣನ ಮೊಮ್ಮಗನೂ ಯುವರಾಜನಾಗಿಯೇ ಗತಿಸಿದ ಜಗತ್ತುಂಗನ ದ್ವಿತೀಯಪುತ್ರನೂ ಆದ ಮುಮ್ಮಡಿ ಅಮೋಘವರ್ಷನಿಗೆ ಬದ್ದೆಗ ಎಂಬ ಹೆಸರೂ ಇದ್ದಿತು. ಆದರೆ ಅವನ ಹಿಂದಿನ ಇಬ್ಬರು ಅಮೋಘವರ್ಷ ರಿಗೂ ಬದ್ದೆಗ ಎಂಬ ಹೆಸರಿದ್ದಿತೆಂಬುದಕ್ಕೆ ಸಾಕಷ್ಟು ಆಧಾರಗಳಿಲ್ಲ. ಕೇವಲ ನರೇಂದ್ರ ಎಂದು ಹೇಳಿರುವದರಿಂದ ಸಾಮಂತ ಬುದ್ಧರಸನ ಹೆಸರನ್ನೇ ‘ ವೊದ್ದಣರಾಯ ’ ಎಂದು ವೀರಸೇನನು ಹೇಳಿರಬಹುದು. ಅಮೋಘವರ್ಷ ನೃಪತುಂಗನಿಗೆ ಅತಿಶಯ ಧವಲ ಎಂಬ ಬಿರುದಿತ್ತೆಂದು ಕವಿರಾಜಮಾರ್ಗದಿಂದ ವಿದಿತವಾಗಿದೆ.[12]

> ಕೃತಕೃತ್ಯಮಲ್ಲನಪ್ರತಿಹತವಿಕ್ರಮನೊಸೆದು ವೀರನಾರಾಯಣನ–
> **ಪ್ಪತಿಶಯಧವಳಂ** ನಮಗೀಗತರ್ಕಿತೋಪಸ್ಥಿತಪ್ರತಾಪೋದಯಮಂ ||
>
> ಕ. ಮ. ೧, ೨.

ಭೂತಬಲಿಯ ಮಹಾಧವಳ, ವೀರಸೇನನ ಧವಳ, ಜಿನಸೇನನ ಧವಳ ಅಲ್ಲದೆ, ಕುಮು ದೇಂದು ವಿಜಯ ಧವಳ, ಜಯಶೀಲ ಧವಳ ಮತ್ತು ಅತಿಶಯಧವಳಗಳ ಉಲ್ಲೇಖನೆ ಮಾಡಿರುವನು. ಜೀನಸೇನನ ಜಯಧವಳ [ಕ್ರಿ.ಶ. ೮೩೭] ಅನಂತರ ಅಮೋಘ ವರ್ಷನ ಅಂತ್ಯ [ಕ್ರಿ.ಶ. ೮೭೭]ಕ್ಕೆ ಮತ್ತು ಕ್ರಿ.ಶ. ೮೬೬ ನೀಲಗುಂದ ಸಿರೂರುಶಾಸನ ಗಳಿಗೆ ಮುಂಚೆ ನೃಪತುಂಗನಿಗೆ ಅತಿಶಯಧವಳ ಎಂಬ ಬಿರುದು ಬಂದು ಈ ಅಂತರ ದಲ್ಲಿ ಕುಮುದೇಂದುವಿನ ‘ ಭೂವಲಯ ’ ಮತ್ತು ಕವಿರಾಜಮಾರ್ಗ ರಚಿತವಾಗಿರ ಬೇಕು.

---

10. *E. C.* VIII. Sb. 22.
11. *M E.R.* 1934. E. 95.
12. *Sources.* Vol I. P. 79.

ವರದಮಂಗಳಪ್ರಾಭೃತದ ಮಹಾಕಾವ್ಯ । ಸರಣಿಯೊಳ್ ಸಿರಿ ವೀರಸೇನ ।
ಗುರುಗಳ ಮತಿಜ್ಞಾನದರಿವಿಗೆ ಸಿಲುಕಿಹ । ಅರಹನ್ತಕೇವಲಜ್ಞಾನ ॥
[ಭೂವಲಯ ೯. ೧೪೩]

ಜನಿಸಲು ಸಿರಿವೀರಸೇನರ ಶಿಷ್ಯನ । ಘನವಾದ ಕಾವ್ಯದ ಕಥೆಯ ।
ಜಿನಸೇನ ಗುರುಗಳ ತನುವಿನಜನ್ಮದ । ಘನಪುಣ್ಯವರ್ಧನ ವಸ್ತು ॥ ೧೪೫ ॥
ಣಾಣಾಜನಪದವೆಲ್ಲದರೊಳು ಧರ್ಮ । ತಾನು ಕ್ಷೀಣಿಸಿ ಬರ್ಪಾಗ ।
ತಾನಲ್ಲಿ **ಮಾನ್ಯಖೇಟದ** ದೊರೆಜಿನಭಕ್ತ । ತಾನು **ಅಮೋಘವರ್ಷಾನ್ಕ** ॥
॥ ೧೪೬ ॥

ಪದವಿಗಳೈದುಸಂಜನಿಸಿದ ರಾಜಗೆ । ಸ **ಧವಲದಾದಿಮ** ವ್ಯಾಖ್ಯಾ-
ಸ್ಪದವಾಗೆ ಎರಡನೆಯ **ಜಯಧವಲಾಂಕದ** । ಬದಿಗೆ ಮೂರನೆ
**ಮಹಾಧವಲ** ॥

ದೀನತ್ವವಳಿಸುತ ಜನತೆಯ ಪಾಲಿಪ । ಭೂನುತ ವರ್ಧಮಾನಾನ್ಕ ।
ಆ ನಮ್ಮಜನತೆಯ **ಜಯಶೀಲಧವಲದ** । ಶಾನೆ ಪದವಿಯದು ನಾಲ್ಕು ॥
ವಶವಾದತಿ**ಶಯಧವ** ಭೂವಲಯದ । ಯಶವಾಗೆ ಐದನೆಯ ಅನ್ಕ ।
ರಸವಿಸ್ಮಯವಾವ **ವಿಜಯಧವಲ**ವಿನ್ತು । ಯಶದ ಭೂವಲಯದ ಭರತ ॥
ಮಹಿಯಗೆಲ್ದಂತವ ವಶಗೆಯ್ದ ರಾಜನು । ವಹಿಸಿದ ದಕ್ಷಿಣ ಭರತ ।
ಸಿಹಿಯ ಖಂಡದ ಕರ್ನಾಟಕಚಕ್ರಿಯ । ಮಹಿಯೆ ಮಣ್ಡಲವೆಸರಾನ್ತು ॥
(೯. ೧೬೯... ೧೭೨)

ಬಹುಶಃ ಛಹಖಂಡಶಾಸ್ತ್ರದ ಆರು ಭಾಗಗಳಾದ ಜೀವಸ್ಥಾಣ, ಖುದ್ದಾಬಂಧ, ಬಂಧ ಸಮಿತ್ತ ವಿಚಯ, ವೇದಣಾ, ವಗ್ಗಣಾ, ಮಹಾಬಂಧಗಳಿಗೆ ಅನುಕ್ರಮವಾಗಿ ಧವಲ, ಜಯಧವಲ, ಮಹಾಧವಲ, ಜಯಶೀಲಧವಲ, ಅತಿಶಯಧವಲ ಮತ್ತು ವಿಜಯ ಧವಲಗಳೆಂಬ ವ್ಯಾಖ್ಯಾನ ಭಾಗಗಳಿದ್ದವೆಂದು ಕುಮುದೇಂದುವಿನ ಅಭಿಪ್ರಾಯವಿರ ಬಹುದು.

ಕುಮುದೇಂದು ‘ ಜಿನಸೇನ ಗುರುಗಳ ತನುವಿನ, ಜನ್ಮದ... ವಸ್ತು ’ ಎಂದು ಜಿನಸೇನನಿಗೂ ಗುರುಪದವಿಯನ್ನು ಕೊಟ್ಟಿರುವದರಿಂದಲೂ ಜಯಧವಲ ಮತ್ತು ಮಹಾಪುರಾಣಗಳ ಉಲ್ಲೇಖನೆಯಿಂದಲೂ ಮಹಾಪುರಾಣ (ಆದಿಭಾಗ) ಪ್ರಚಾರಕ್ಕೆ ಬಂದಮೇಲೆ ಅಮೋಘವರ್ಷನ ಅಂತ್ಯಕಾಲದಲ್ಲಿ ಭೂವಲಯ ಗ್ರಂಥವನ್ನು ರಚಿಸಿರ ಬೇಕು. ಭೂವಲಯದ ಮೂರನೆಯ ನವಕದಲ್ಲಿರುವ ಸಂಸ್ಕೃತ ಬಂಧದಲ್ಲಿ—

ಅಸ್ಯ( ವ ? ) ಭೂವಲಯ ಸಿದ್ಧಾನ್ತ ನಾಮಧೇಯಸ್ಯ ಮೂಲಗ್ರನ್ಥ (ಽ) ಕರ್ತಾರಃ ಶ್ರೀ ಸರ್ವಜ್ಞದೇವಾಃ ತದುತ್ತರ ಗ್ರಂಥಕರ್ತಾರಃ ಗಣಧರದೇವಾಃ ತೇಷಾಂ ವಚನಾನುಸಾರ ಸಾದ್ಯಾಚಾರ್ಯ ಶ್ರೀಕುನ್ದ ಕುನ್ದಾಚಾರ್ಯಮ್ನಾಯ ಶ್ರೀಪುಷ್ಪದನ್ತ ಭೂತಬಲಿ ಗುಣಧರಾರ್ಯಮಂಕ್ಷು ನಾಗಹಸ್ತಿ ಯತಿ ವೃಷಭ ವೀರ ಸೇನಾಖ್ಯಾಂವಿರಚಿತಂ ಶ್ರೀಶ್ರೋತಾರಃ ಸಾವಧಾನತಯಾ ಶೃಣ್ವನ್ತು ॥

ಧವಲಾಂ ಭಾರತೀಂ ಚ ಖಣ್ಡಂ ಶುಚಿ ನಿರ್ಮಲಾಂ ।
ಧವಲೀಕೃತನಿಃಶೇಷ ಭುವನಾನ್ತಾಮ್ ನಮಾಮ್ಯಹಮ್ ॥

ಶ್ರೀ ವೀರಸೇನ ಇತ್ಯಾಪ್ತ ಭಟ್ಟಾರಕ ಪೃಥುಪ್ರಥಃ ।
ಆಸಾನ (? ಸನಃ) ಪುನಾತು ಪೂತಾತ್ಮಾ ಕವಿವೃಂದಾರಕೋ ಮುನಿಃ ॥

ಈ ಎರಡು ಶ್ಲೋಕಗಳು ಮಹಾಪುರಾಣದಲ್ಲಿ ಹೀಗಿವೆ.

ಶ್ರೀ ವೀರಸೇನ ಇತ್ಯಾತ್ತ ಭಟ್ಟಾರಕ ಪೃಥುಪಥಃ ।
ಸನಃ ಪುನಾತು ಪೂತಾತ್ಮಾ ಕವಿವೃಂದಾರಕೋ ಮುನಿಃ ॥
ಧವಲಾಂ ಭಾರತೀಂತಸ್ಯ ಕೀರ್ತಿಂಚ ವಿಧು ನಿರ್ಮಲಾಂ ।
ಧವಲೀಕೃತ ನಿಶ್ಶೇಷಭುವನಾಂ ತಾನ್ ನಮಾಮ್ಯಹನ್॥

(ಮಹಾ ಪುರಾಣ ೧. ೫೫,೫೮)

ಕುಮುದೇಂದು ಭಲ್ಲಾತಕಾದ್ರಿ(ಗೇರುಸೊಪ್ಪೆ) ನಂದಿ, ಕೊವಳಾಲ, ಕಟ್ಟಿಪ್ಪು, ಗೊಟ್ಟಿಗ ಗಂಗ, ತಲೆಕಾಚ ಗಂಗ ಮುಂತಾದುವನ್ನು ಸೂಚಿಸಿರುವದರಿಂದ ಅಮೋಘವರ್ಷನ ಸುಮಾರು ಸಮಕಾಲೀನನಾದ ಶಿವಮಾರ ಸೈಗೊಟ್ಟನ ಆಶ್ರಯವನ್ನು ಪಡೆದಿದ್ದನೆಂದು ಹೇಳಲಾಗಿದೆ. ಸೈಗೊಟ್ಟ ಶಿವಮಾರನು ರಾಷ್ಟ್ರಕೂಟ ಧ್ರುವನ ಕಾಲದಲ್ಲಿ ದಂಗೆಯೆದ್ದು ಅವನಿಂದ ಬಂಧಿಸಲ್ಪಟ್ಟು ಮುಮ್ಮಡಿ ಗೋವಿಂದನಿಂದ ಬಿಡುಗಡೆ ಪಡೆದನು. ಆದರ ಪುನಃ ಗಂಗರಾಜ್ಯದಲ್ಲಿ ದಂಗೆ ಎದ್ದುದರಿಂದ ಗೋವಿಂದನು ಶಿವಮಾರನನ್ನು ಪುನಃ ಸೆರೆಯಲ್ಲಿಟ್ಟನು.[13]

ಅನ್ಯೈರ್ನಜಾತು ವಿಜಿತಂ ಗುರುಶಕ್ತಿಸಾರಮಾಕ್ರಾನ್ತ ಭೂತಲಮನನ್ಯ ಸಮಾನ ಮಾನಮ್
ಯೇನೇಹ ಬದ್ಧಮವಲೋಕ್ಯ ಚಿರಾಯ ಗಾಂಗಂ ದೂರೇಶ್ವನಿಗ್ರಹಧಿಯೇವ ಕಲಿಃ ಪ್ರಯಾತಃ ॥

.. .. ..

ಯೇನಾತ್ಯಂತದಯಾಳುನ್ಯಾಥ ನಿಗಳಕ್ಲೇಶಾದಪಸ್ಯಾನತಂ
ಸ್ವಂದೇಶಂಗಮಿತೋsಪಿ ದರ್ಪವಿಸರಾದ್ಯಃ ಪ್ರಾತಿಕೂಲ್ಯೇ ಸ್ಥಿತಃ ।
ಲೀಲಾಭ್ರೂಕುಟಲೇ ಲಲಾಟ ಫಲಕೇ ಯಾವಚ್ಚನಾಲಕ್ಷ್ಯತೇ
ವಿಕ್ಷೇಪೇಣ ವಿಜಿತ್ಯತಾವದಚಿರಾದಾಬದ್ಧಗಂಗಂ ಪುನಃ ॥

ಕಲ್ಭಾವಿ ಶಾಸನದಲ್ಲಿ[14] ಈ ಸೈಗೊಟ್ಟ ಶಿವಮಾರನು ಅಮೋಘವರ್ಷನ ಪಾದ ಪದ್ಮೋಪಜೀವಿಯೆಂದೂ, 'ಕುವಲಾಲಪುರವೇಶ್ವರ, ಪದ್ಮಾವತೀ ಲಬ್ಧ ವರ ಪ್ರಸಾದಿತ, ಭಗವದರ್ಹನ್ಮುಕ್ಷು ಪಿಂಛಧ್ವಜವಿಭೂಷಣ, ಸಾರಸ್ವತ ಜನಿತ ಭಾಷಾತ್ರಯ ಕವಿತಾ ಲಲಿತಾವಾಗ್ಲಲನಾ ಲೀಲಾಲಲಾಮಂ, ಗಜವಿದ್ಯಾಧಾಮ, ಶ್ರೀಮತ್ ಸಿವಮಾರಾಭಿಧಾನ ಸೈಗೊಟ್ಟಗಂಗಪೆರ್ಮಾನಡಿಗಳ್' ಎಂದೂ ಹೇಳಿರುವದರಿಂದ, ಅಮೋಘವರ್ಷನಿಗೂ ಇವನು ಮೊದಲು ವಿಧೇಯನಾಗಿದ್ದನು. ನೃಪತುಂಗನ ಮಗನಾದ ಕೃಷ್ಣನು ದಂಗೆ ಎದ್ದು ತಲಕಾಡು ಗಂಗರನ್ನಾಶ್ರಯಿಸಿದಾಗ ನೃಪತುಂಗನು ಬಂಕೇಶನನ್ನು ಕಳುಹಿಸಿದನು. ಬಹುಶಃ ಈ ಸಮಯದಲ್ಲಿ ಸೈಗೊಟ್ಟ

---

13. Badaṇa Guppe grant of Kamba, *Sources.* Vol I p. 62
14. *I.A. XVIII* p 274

ಶಿವಮಾರನು ಪುನಃ ಗಂಗ ರಾಜ್ಯವನ್ನು ಕಳೆದುಕೊಂಡು ಸತ್ತಿರಬೇಕು. ಇಮ್ಮಡಿ ರಾಚಮಲ್ಲನ ಕೆರೆಗೋಡೆ ರಂಗಪುರ ಶಾಸನದಲ್ಲಿ[15] ಶಿವಮಾರನ ಮಗನಾದ ವಿಜಯಾದಿತ್ಯ ಮತ್ತು ಒಂದನೆ ರಾಚಮಲ್ಲ ರಣವಿಕ್ರಮನ ವಿಷಯವು ಹೀಗಿದೆ—

ಶ್ರೀಶಿವಮಾರದೇವಃ ಸೈಗೊಟ್ಟಾಪರನಾಮಧೇಯಃ ಕವಿ ವಿಜಯಾದಿತ್ಯ ಭೂಪಾಭಿಭೂತಃ ।
ತಸ್ಮಾದಭೂತ್ಸ್ವತವರೋಜಗತೋ ಹಿತಾಯ ತೇಜೋಹತಾನ್ಯ ತಿಮಿರೋನುತ ರಾಜಮಲ್ಲಃ
ಭೂಭೃಚ್ಛಿರೋನಿಹಿತ ಪಾದವಿರಾಜಮಾನೋ ರಾಜಾಂಬುಧೇರಿವ ಶಶೀ ಸಕಲಂ ಕಲೌಘ್ಯೈಃ ॥

ಅಪಿಚ ಯಃ ಖಲು ಸಕಲಲೋಕ ಸಂಗೀಯ ಮಾನನೀಯಮಹಿಮಾ ವಿಭಾಸಿತ ನಿಜ ಭುಜಾಲಾನಸ್ತಂಭ ಲೀಯಮಾನವೀರ ಶ್ರೀಕರೇಣು ವಿಭ್ರಮಭ್ರಾಜಿತ ಶಿವಮಾರ ಮಹಾರಾಜ ಹಸ್ತಕುಶಲಾಪಾಯ ಪ್ರಚ್ಯುತಾಂ ರಾಷ್ಟ್ರಕೂಟಕ್ಷಿತಿಪತಿಹೃತ ಮಲಿನ ಮುಖೀಂ ಸ್ವಕುಲಯೋಗ್ಯ ಪ್ರಾಜ್ಯರಾಜ್ಯಲಕ್ಷ್ಮೀಯುವತೀಮತಿ ಶಯಾಮತಿ ವಿತಾನಾ ಹೇತೂದ್ಯೋಗ ಸಿದ್ಧಿಸ್ವಭಾವೇನ ನೀ(?) ಅನುದಿತ ಮಹೋದಯಾಭಿಮುಖ ಕೃತಮಂಗಳಾಭಿಷೇಕ ಸ್ವಯಮಭಿಮತ ಗುಣವಿಭೂಷಣೈತಿರಮರಮಲಂಕರೋತಿಸ್ಮ।

ಅಪಿಚ—

ಕ್ಷೋಣೀವೃತ್ತಕ್ಷಿತೀಂದ್ರೇಷ್ವಪಗತವಿಷಯಂ ವಿಶ್ರಮೋ ದಿಗ್ಗಜಾನಾಮ್ ।
ಜಾತೋ ದೀರ್ಘಶ್ಚಕಾಲಾತ್ ಧರಣಿಧರಾನ್ತಶ್ಶೇಷತ ಶ್ಶೇಷತೋಸ್ಥಾ ।
ವ್ಯರ್ಥೋಭೂಲ್ಲೋಕಪಾಲಾ ವಿಧಿರಧಿಕತರಃ ತತ್ಸಮಾಖ್ಯೇಷ್ವಧೀಶೇ ।
ಯಸ್ಮಿನ್ **ಬಂಕೇಶ**ಲೇಶಂಭುವನಗುರುಭರಂ ಸತ್ಯವಾಕ್ಯೇ ದಧಾನೇ ॥

..... ಗುರ್ವನುಲ್ಲಂಘಿನೇನ ರಣವಿಕ್ರಮನರೇಂದ್ರಃ ಪೃಥಿವ್ಯಾಂರಾಜ್ಯಂಘು ಪ್ರತಿಷ್ಠಾಪ್ಯಸ್ವಯಂವೃತಗೃಹೀತಯೌವರಾಜ್ಯ ಸಾರಭಾರಃ ।
ಪುನಃ ಸ್ವಯಂಸಮನುಷ್ಠಿತ ರಾಜ್ಯಾಭಿಷೇಕ ಪಟ್ಟೋಪಶೋಭಿತ ಲಲಾಲಪಟ್ಟಃ॥

ಯುವರಾಜ ಮಾರಸಿಂಹನ ಕೂಡಲೂರು ಶಾಸನದಲ್ಲ [ಕ್ರಿಶ. ೭೯೯] ಕೈಗೊಟ್ಟ ಶಿವಮಾರನ ಗುರುಮಕರಧ್ವಜನೆಂದು ಹೇಳಿದೆ.[16]

---

15 *Sources* Vol I p. 98 ಇಮ್ಮಡಿ ಶಿವಮಾರನ ಕೊನೆಯ ವರ್ಷ ಕ್ರಿ.ಶ. ೮೧೨, ರುಚಮಲ್ಲನ ಮೊದಲನೆ ವರ್ಷ ೮೧೭ ಎಂದು ಕೆಲವರು ಹೇಳುವರು (Age of Imperial Kanuj. Bharatiya Vidya Bhavan. Vol. 4. 1955). ಅಂದರೆ ಶಿವಮಾರನು ನೃಪತುಂಗನ ಪಟ್ಟಾಭಿಷೇಕಕ್ಕೆ ಮುಂಚೆಯೇ ಗತಿಸಿದ್ದನು. ಇದು ಕಲ್ಭಾವಿ ಶಾಸನಕ್ಕೆ ವಿರುದ್ಧ.

16. ನಿಜನಿರ್ಮಿತಗಜದಂತಕಲ್ಪಾಗಮಾನಲ್ಪ ಚೇತಾ ವಿರಚಿತಸೇತುಬಂಧನಿಬಂಧನಾನಂದಿತ ವಿಪಶ್ಚಿನ್ಮಂಡಲಃ ಮಕರಧ್ವಜಗುರುಚರಣಸರೋಜವಿನಮನಪವಿತ್ರೀಕೃತೋತ್ತಮಾಂಗಃ ॥

ಇದರಿಂದ ಕುಮುದೇಂದುವಿನ ಗ್ರಂಥ ಜೀನಸೇನನಧವಳಾ ಟೀಕೆಯ ರಚನಾಂತರ [ಕ್ರಿ.ಶ.೮೩೭], ಆದಿಪುರಾಣವೂ ಪ್ರಚಾರಕ್ಕೆ ಬಂದಮೇಲೆ ಬಂಕೇಶನ ತಲಕಾಡು ದಿಗ್ವಿಜಯಕ್ಕೆ ಮುಂಚೆ ಸೈಗೊಟ್ಟ ಶಿವಮಾರನು ಇನ್ನೂ ಜೀವಿಸಿದ್ದಾಗ [ಸುಮಾರು ಕ್ರಿ.ಶ. ೮೫೦ರಲ್ಲಿ] ರಚಿತವಾಗಿರಬೇಕು. ಗಂಗ ಮೊದಲನೆಯ ಶಿವಮಾರ [ಸು. ಕ್ರಿ.ಶ. ೭೯೩]ನಿಗೆ ಗೊಟ್ಟಿಗ ಎಂಬ ಬಿರುದಿದ್ದಂತೆ ಕಂಡುಬರುವುದಿಲ್ಲ. ಕುಮುದೇಂದು ನೃಪತುಂಗ ಎಂಬ ಹೆಸರನ್ನು ಹೇಳದಿದ್ದರೂ ಅಮೋಘ ಎಂದು ಹೇಳುವದರಿಂದ ಎಂಟನೆಯ ಶತಾಬ್ದದಲ್ಲಿ ಮಾನ್ಯ ಖೇಟದಲ್ಲಿ ನೃಪತುಂಗನಿಗೆ ಹಿಂದೆ ಒಬ್ಬ ಅಮೋಘನೆಂಬ ರಾಷ್ಟ್ರಕೂಟ ರಾಜನಿದ್ದನೆಂಬುದಕ್ಕೆ ಯಾವ ಆಧಾರವೂ ಇಲ್ಲ.

ಭೂವಲಯದ ಪ್ರತಿ ವಿಷಯವನ್ನು ಚರ್ಚಿಸುವದು ಅವಶ್ಯಕ. ಸಂಪಾದಕರು ಉಪಯೋಗಿಸಿದ ಕಾಗದದ ಪ್ರತಿಯ ಕಾಲವನ್ನು ತಿಳಿಸಿಲ್ಲ. ಮಲ್ಲಿಕಬ್ಬೆ ಪ್ರತಿಲಿಪಿ ಮಾಡಿಸಿದ ಪ್ರತಿಯೇ ತಮ್ಮ ಬಳಿಯಲ್ಲಿದೆಯೆಂದು ಹೇಳಿರುವರು. ಸೇನನ ಸತಿಯಾದ ಮಲ್ಲಿಕಬ್ಬೆ ತನ್ನ ಪರಮಗುರು, ಗುಣಭದ್ರ ಸೂರಿಯ ಶಿಷ್ಯ ಮಾಘನಂದಿಗೆ ಶ್ರೀಪಂಚಮಿ ಉದ್ಯಾಪನೆಯ ಕಾಲದಲ್ಲಿ ಶಾಸ್ತ್ರದಾನ ಮಾಡಿದಳು. ಇದೇ ಪ್ರಶಸ್ತಿ ಮೂಡಬಿದರಿಯ ಲೋಕನಾಥ ಶಾಸ್ತ್ರಿಗಳ ಹೇಳಿಕೆಯಂತೆ ಮಹಾಧವಳದ ಪ್ರತಿಯ ಕೊನೆಯಲ್ಲೂ ಇದೆ.[17] ಈ ಗುಣಭದ್ರ ಮತ್ತು ಮಾಘಣಂದಿ ಯಾವ ಗುಣಗಚ್ಛದವರೆಂದು ಸಂಪಾದಕರು ನಿರೂಪಿಸಿಲ್ಲ. ಮೂಡಬಿದ್ರಿಯ ಹಸ್ತಪ್ರತಿ ಸಮುದಾಯದಲ್ಲಿ ಕೊಪಣತೀರ್ಥದ ಶ್ರೀಧರಾಚಾರ್ಯನ ಶಿಷ್ಯನಾದ ಮಾಘಣಂದಿ ಸೈದ್ಧಾನ್ತಿಕನ ಶಿಷ್ಯ [ನ]ಯಕೀರ್ತಿ, ರಚಿಸಿದ ಪುಷ್ಪಾಂಜಲಿಕಾವ್ಯವೆಂಬ ಒಂದು ಗ್ರಂಥವಿದೆ. ಇದು ದೊಡ್ಡವಲದೇಶಾಧಿಪತಿ ಕದ್ರುಭೂಪಾಲನಾಮಾಂಕಿತವಾಗಿ ದದ್ದಪಶ್ರೇಷ್ಠಿಯಿಂದ ಪ್ರವರ್ತಿತವಾಯಿತು.

> ದಂಷ್ಟ್ರೋಪಲಕ್ಷಿತ ಮಹಾಕಡಗಸ್ಯ ವಂಶೇ ।
> ಜಾತಃಸಮೌಕ್ತಿಕ ಇವಾಮಲಕದ್ರುಭೂಪಃ ॥

ಇತಿ ಸ್ಥಾವರ ಕುಪಣತೀರ್ಥನಿವಾಸಿ ಜಂಗಮತೀರ್ಥ ಶ್ರೀಧರದೇವ ಪರಮ ಭಟ್ಟಾರಕ ಶಿಷ್ಯ ಶ್ರೀಮಾಘಣಂದಿ ಸೈದ್ಧಾನ್ತಿ ಚರಣಸರಸೀರುಹ ಚಂಚರೀಕೇಣೋ . . ಯಕೀರ್ತಿನಾ (?) ವಿರಚಿತೇ ಪುಷ್ಪಾಂಜಲಿಮಹಾಕಾವ್ಯೇ ದದ್ದಪಶ್ರೇಷ್ಠಿ ಪ್ರವರ್ತಿತೇ ಶ್ರೀಮದ್ದೊಡ್ಡಬಲ ದೇಶಾಧಿಪತಿ ಕದ್ರು ಭೂಪಾಲ ನಾಮಾಂಕಿತೇ .... ಈ ಮಾಘಣಂದಿ ಶ್ರೀಧರಾಚಾರ್ಯನ ಶಿಷ್ಯನಾದುದರಿಂದ ಭೂವಲಯ ಪ್ರತಿಯ ಗುಣಭದ್ರಸೂರಿಯ ಶಿಷ್ಯನಾದ ಮಾಘನಂದಿ ಅಲ್ಲ. ಶ್ರವಣಬೆಳಗೊಳ ೪೦ (೪೬) ಶಾಸನದಲ್ಲಿ ಶ್ರೀಧರನ ಶಿಷ್ಯ ಮಾಘನಂದಿ, ಅವನ ಶಿಷ್ಯ ಆಚಾರ್ಯನಾಗದೇವನು ಮಾಘನಂದಿಯ ಶಿಷ್ಯ

17. Bhujabali Sastri, Catalogue, Banaras. 1948. ಇದು ಮಹಾಬಂಧದ ಪ್ರತಿಯಪ್ರಶಸ್ತಿಯೇ ಹೊರತು ಭೂವಲಯದ ಪ್ರಶಸ್ತಿ ಆಗಿರಲಾರದು.

ಚಂದ್ರಕೀರ್ತಿಯ ನಿಸಿದಿಯನ್ನು ಮಾಡಿಸಿದನೆಂದು ಹೇಳಿದೆ. ನಿರ್ಣಯಸಾಗರ ಪ್ರೆಸ್ಸಿನ ಧವಲಗ್ರಂಥದ ಪ್ರತಿಗೆ ಮೂಲ ' ಮಂಡಲಿನಾಡ ಶ್ರೀ ಭುಜಬಲಗಂಗ ಪೆರ್ಮಾಡಿದೇವರತ್ತೆಯರುಮಪ್ಪ ದ್ರವಿ. ದೇವಿಯಕ್ಕ ' ಶ್ರುತ ಪಂಚಮಿಯ ಉದ್ಯಾಪನೆ ಯಲ್ಲಿ ತನ್ನ ಗುರುವಾದ, ಬನ್ನಿಯಕೆರೆಯ ಉತ್ತುಂಗಚೈತ್ಯಾಲಯದ ದಿವಾಕರಣಂದಿ ಸಿದ್ಧಾಂತ ರತ್ನಾಕರನ ಶಿಷ್ಯ (ಮಲಧಾರಿಯ) ಶಿಷ್ಯ ಶುಭಚಂದ್ರನಿಗೆ ದಾನಮಾಡಿದ ಧವಲೆಯ ಪುಸ್ತಕ" ' ಕುಪಣಪುರ... ಆಣೆಗ ವಂಶಜ ಜಿನ್ನಮ ಮ(ಮು)ನು ನೀತಿ ಮಾರ್ಗ ' ಎಂಬ ಪ್ರತಿಮಾಡಿದವನ ಉಲ್ಲೇಖನೆಯು ಇದೆಯೆಂದು ಹೇಳಲಾಗಿದೆ.[17] ತತ್ತ್ವಾರ್ಥ ಸೂತ್ರಕ್ಕೆ ಕರ್ಣಾಟಕ ಲಘುವೃತ್ತಿಯನ್ನು ರಚಿಸಿದ ದಿವಾಕರಣಂದಿ ಕ್ರಿ.ಶ. ೧೧೬೨ ಸೊರಬ ೫೮, ನಗರ ೫೭ ಶಾಸನಗಳಲ್ಲಿ ಬೀರಸಾಂತರನ ಪಟ್ಟಣಸ್ವಾಮಿ ನೊಕ್ಕನ ಗುರುವಾದ ಸಕಲಚಂದ್ರನಿಗೆ ಗುರುವೆಂದೂ ಚಂದ್ರಕೀರ್ತಿಯ ಶಿಷ್ಯನೆಂದೂ (ಉಭಯ) ಸಿದ್ಧಾಂತ ರತ್ನಾಕರ ಎಂಬ ಬಿರುದನ್ನು ಹೊಂದಿದ್ದನೆಂದು ಹೇಳಿದೆ.[18] ನಯಸೇನನ ಧರ್ಮಾಮೃತ (ಕ್ರಿ. ಶ. ೧೧೧೨ ದಲ್ಲಿ ಉಕ್ತವಾದ ಗುರು ಪರಂಪರೆಯಲ್ಲಿ ಏಳಾಚಾರ್ಯ, ವೀರಸೇನ, ಜಿನಸೇನ, ಗುಣಭದ್ರ, (ಶು)ಭಚಂದ್ರ, ಅಜಿತಸೇನ, ಸೋಮದೇವ, ನರೇಂದ್ರಸೇನ, ನಯಸೇನಮುನಿ, ದಿವಾಕರಣಂದಿ, ಶುಭಚಂದ್ರ ಎಂಬ ಹೆಸರುಗಳಿವೆ.[19] ಆದುದರಿಂದ ಈ ಧವಲ ಪ್ರತಿ ಸು ಕ್ರಿ ಶ. ೧೦೫೦ರಲ್ಲಿ ಹುಟ್ಟಿರಬೇಕು. ಮೂಡಬಿದ್ರೆಯ ಧವಲ ಮತ್ತು ಮಹಾಬಂಧ ಪ್ರತಿಗಳೂ ಹನ್ನೊಂದನೆಯ ಶತಮಾನದಲ್ಲಿ ಪ್ರಚಾರವಾಗಿದ್ದಿರಬೇಕು. ಹೀರಾಲಾಲರು ಮೂಡ ಬಿದ್ರೆಯ ಧವಲ ಪ್ರತಿ ಸು. ೯-೧೦ನೆಯ ಶತಮಾನದ್ದೆಂದು ಊಹಿಸಿರುವರು.[20]

ಕುಮುದೇಂದು ಗುರುಪರಂಪರೆಯನ್ನು ಹೇಳುವಾಗ ' ಸ್ವಸ್ತಿಶ್ರೀಮದ್ರಾಯ ರಾಜಗುರು ಭೂಮಂಡಲಾಚಾರ್ಯ, ಭಾಷ್ಯ ಪ್ರಭಾಕರರು, ಮೀಮಾಂಸಕ ವಿದ್ಯಾ ಧರರು, ಕನ್ನಾಡಿನೊಡೆಯರು, ಪುಷ್ಪಗಚ್ಛದಲಿಭೂವಲಯರ್, ಮಧ್ಯಾಹ್ನ ಕಲ್ಪ ವೃಕ್ಷರು, ಇಂದ್ರಪ್ರಸ್ಥ ಗದ್ದುಗೆಯರು, ಯೊವನಾಲಿ ಭಾಷಾಭಾಷಿತರು, ವೃಷಭ ಸೇನಾಯಕರು ಪುಷ್ಪಗಚ್ಛದ, ಸೇನಗಣರು ' ಎಂದು ಬಿರುದಗಳನ್ನು ಕೊಟ್ಟಿರುವನು. ' ರಾಯರಾಜಗುರು ಭೂಮಂಡಲಾಚಾರ್ಯ ' ಎಂಬ ಬಿರುದು ಹದಿಮೂರನೆಯ ಶತಾಬ್ದಕ್ಕೆ ಹಿಂದೆ ಶಾಸನಗಳಲ್ಲಿ ಕಂಡು ಬರುವದಿಲ್ಲ. ಮೂಡಬಿದ್ರಿಯ ಹಸ್ತಪ್ರತಿ (ಸಂಖ್ಯೆ ೩೪೪) ' ಗುಣಭದ್ರಪ್ರಶಸ್ತಿ ' ಎಂಬುದರಲ್ಲಿ[21] ವೃಷಭಸೇನಾನ್ವಯದ ಸಿದ್ಧ

---

17 Bhujabali Sastri, Cat. P 226. No 17. ಈ ಪ್ರತಿಶಾ.ಶ೭೩೮ ಎಂದು ಹೇಳಿರುವದು ತಪ್ಪು.

18. ಕ. ಕ. ಚ. I. P. 79

19. ಕ. ಕ. ಚ. I P. 120.

20. *Jaina Antiquary* Vol VI. 1.

21. *Jaina Antiquary* Vol XII. P 100.

ಸೇವ, ಶಿವಕೋಟಿ ಭಟ್ಟಾರಕ, ರೈವತ ಪರ್ವತದಲ್ಲಿ ಸಿದ್ಧಚಕ್ರವನ್ನು ಸ್ಥಾಪಿಸಿದ ವೀರಸೇನ, ಧವಲ, ಮಹಾಧವಲ, ಜಯಧವಲ, ವಿಜಯಧವಲ, ಮಹಾಪುರಾಣಾದಿಗಳನ್ನು ರಚಿಸಿದ ಜಿನಸೇನ, ಅನಂತರ ನೇಮಿಸೇನ, ಛತ್ರಸೇನ, ಜಿನಸೇನ, ಲೋಲಸೇನ, ಬ್ರಹ್ಮಸೇನ, ಉದಯಸೇನರ ಹೆಸರನ್ನು ಹೇಳಿ, ಕಂದರ್ಪ ರೂಪಾವತಾರ ಚತುರ್ದಶ ಪೂರ್ವ ಪಂಚಪ್ರಜ್ಞಪ್ತಿ ಪಂಚವಿಧ ದೃಷ್ಟಿವಾದಾಂಗಾದಿ ಸಕಲ ಶ್ರುತನಾದ ಗುಣಭದ್ರಾಚಾರ್ಯ, ಮತ್ತೆ ಹನ್ನೆರಡು ತಲೆಗಳನಂತರ—

> ' ಶ್ರೀ ಮದ್ರಾಯರಾಜಗುರು ವಸುಂಧರಾಚಾರ್ಯವರ್ಯ ಮಹಾವಾದಿವಾದೀ
> ಶ್ವರ ರಾಯವಾದಿ ಪಿತಾಮಹ ಸಕಲವಿದ್ವಜ್ಜನ ಚಕ್ರವರ್ತಿವಂಕಡಿಕಡಿವಾಣ
> ಪರಗ್ರಹ ವಿಕ್ರಮಾದಿತ್ಯ ಮಧ್ಯಾಹ್ನ ಕಲ್ಪವೃಕ್ಷ ಪುಷ್ಕರಗಚ್ಛಬಿರುದಾವಳೀ
> ವಿರಾಜಮಾನ....ಷಡ್ದರ್ಶನಸ್ಥಾಪನಾಚಾರ್ಯ, ಷಟ್ತರ್ಕ ಚಕ್ರೇಶ್ವರ,
> ಡಿಲ್ಲಿ ಸಿಂಹಾಸನಾಧೀಶ್ವರ ಸಾಭಿಮಾನವಾದೀಭಸಿಂಹ ಚಕ್ರೇಶ್ವರ ಸೋಮಸೇನ
> ..ಮೂಲಸಂಘ ವೃಷಭಸೇನಾನ್ವಯ ಸೇನಗಣ '

ಎಂಬ ಬಿರುದುಗಳನ್ನು ಹೇಳಲಾಗಿದೆ.

ಭೂವಲಯದಲ್ಲಿ ಕುಮುದೇಂದು ' ಐದು ಪರಮೇಷ್ಠಿಗಳ ಬೊಲ್ಲಿ (ಅಧ್ಯಾಯ ೧೩. ೨೧೩) ಹೇಳಿರುವನು. ಶತ ೧೧೯೫ (ಬಾಣಪದಾರ್ಥ ಕಳಾಧರ), ಆಂಗಿರಸ ಕಾರ್ತಿಕ ಶುದ್ಧ ಪಂಚಮಿಯಲ್ಲಿ ಬಾಲಚಂದ್ರ ಪಂಡಿತದೇವನು[22] ದ್ರವ್ಯಸಂಗ್ರಹಸೂತ್ರಗಳಿಗೆ ಕರ್ಣಾಟಕ ಲಘುವೃತ್ತಿಯನ್ನೂ, ಪಂಚಪರಮೇಷ್ಠಿಗಳ ಬೊಲ್ಲಿ ಎಂಬ ಗದ್ಯ ಗ್ರಂಥವನ್ನು ರಚಿಸಿರುವನು. (ಕ್ರಿ.ಶ. ೧೨೭೩ ೧೨೭೫) ಬಾಲೇಂದು ಬುಧ ಎಂದೂ ತನ್ನನ್ನು ನಿರ್ದೇಶಿಸಿಕೊಂಡಿರುವನು. ಕುಮುದೇಂದು ಹೇಳುವ ' ಬೊಲ್ಲಿಪದ್ಧತಿ ' ಬಾಲಚಂದ್ರನ ಗದ್ಯಗ್ರಂಥಕ್ಕೆ ಆದರ್ಶವಾಗಿದ್ದಿರಬಹುದು.

> ಕುಮುದೇಂದು ಅಕ್ಷರಸಂಖ್ಯೆಯನ್ನು ಹೇಳುವಾಗ—
> ತ್ರಿಷಷ್ಟಿಶ್ಚತುಷ್ಷಷ್ಟಿರ್ವಾ ವರ್ಣಾಃ ಶುಭಮತೇಮತಾಃ ।
> ಪ್ರಾಕೃತೇಸಂಸ್ಕೃತೇಚಾಪಿಸ್ವಯಂಪ್ರೋಕ್ತಾಃಸ್ವಯಂಭುವಾ ॥
> ಅಕಾರಾದಿಹಕಾರಾನ್ತಾಂ ಶುದ್ಧಾಂ ಮುಕ್ತಾವಲೀಮಿವ ।
> ಸ್ವರವ್ಯಂಜನಭೇದೇನ ದ್ವಿಧಾಭೇದಮುಪೇಯುಷೀಮ್ ॥
> ಅಯೋಗವಾಹಪರ್ಯನ್ತಾಂ ಸರ್ವವಿದ್ಯಾಸುಸಂಗತಾಮ್ ।
> ಅಯೋಗಾಕ್ಷರಸಂಭೂತಿಂ ನೈಕಬೀಜಾಕ್ಷರೈಶ್ಚಿತಾಮ್ ॥
> ಸಮವಾದೀದಧದ್ಬ್ರಾಹ್ಮೀ ಮೇಧಾವಿನ್ಯತಿಸುಂದರೀ ।
> ಸುಂದರೀಗಣಿತಂಸ್ಥಾನಂ ಕ್ರಮೈಃಸಮ್ಯಗಧಾರಯತ್ ॥
> ತತೋಭಗವತೋವಕ್ತ್ರಾನ್ನಿಃಸೃತಾಕ್ಷರಾವಳೀಮ್ ।
> ನಮ ಇತಿವ್ಯಕ್ತಸುಮಂಗಲಾಂ ಸಿದ್ಧಮಾತೃಕಾಮ್ ॥
>
> (ಭೂವಲಯ. ೫. ೧೩೮_೧೪೫)

---

22 ಕ.ಕ.ಚ. i ಪು. ೩೯೧. ಪು. ೧೧.

ಎಂಬ ಜೈನ ಗ್ರಂಥದ ಶ್ಲೋಕಗಳನ್ನು ಉದಾಹರಿಸಿರುವನು. ಸ್ವಲ್ಪ ಪಾಠಭೇದ ಗಳೊಡನೆ ಈ ಶ್ಲೋಕಗಳು ಶಂಭುರಹಸ್ಯ, ಮಾತೃಕಾರ್ಣವತಂತ್ರ, ಅಗ್ನಿಪುರಾಣ ಇತ್ಯಾದಿ ಗ್ರಂಥಗಳಲ್ಲಿ ಕಂಡುಬರುತ್ತವೆ.[23]

ತ್ರಿಷಷ್ಟಿಶ್ಚತುಷ್ಷಷ್ಟಿರ್ವಾ ವರ್ಣಾಃಶಂಭುಮತೇಮತಾಃ ।
ಪ್ರಾಕೃತೇ ಸಂಸ್ಕೃತೇವಾಪಿ ಸ್ವಯಂ ಪ್ರೋಕ್ತಾ ಸ್ವಯಂಭುವಾ ॥
ಸ್ವರಾಃವಿಂಶತಿರೇಕಶ್ಚ ಸ್ಪರ್ಶಾನಾಂ ಪಂಚವಿಂಶತಿಃ ।
ಯಾದಯಶ್ಚ ಸ್ಮೃತಾಹ್ಯಷ್ಟೌ ಚತ್ವಾರಶ್ಚಯಮಾಃಸ್ಮೃತಾಃ ॥
ಅನುಸ್ವಾರೋ ವಿಸರ್ಗಶ್ಚ ᳲಕ ᳲಪೌಚಾಪಿಪರಾಶ್ರಯೌ ।
ದುಃಸ್ಪೃಷ್ಟಶ್ಚೇತಿವಿಜ್ಞೇಯಾ ಇಕಾರಃ ಪ್ಲುತ ಏವಚ ॥

ಸಿದ್ಧಮಾತೃಕಾಸ್ತೋತ್ರವೂ ಶಾಕ್ತತಂತ್ರಗಳಲ್ಲಿ ಕಂಡುಬರುವುದಲ್ಲದೆ ಬೌದ್ಧ ರಲ್ಲಿಯೂ ಇದ್ದು ಈಗಲೂ ಜಪಾನಿನಲ್ಲಿ ಷಿತ್ತೋನ್ ಎಂಬ ವರ್ಣಮಾಲೆ ಇದೆ.[24] "ಸಿದ್ಧಾಹಿಶುದ್ಧಕಾಃ" "ಸಿದ್ಧೋವರ್ಣಸಮಾಮ್ನಾಯಃ" ಎಂದು ಕಾತಂತ್ರವ್ಯಾಕರಣ ದಲ್ಲಿಯೂ ಬಹುಶಃ ಐಂದ್ರವ್ಯಾಕರಣದಲ್ಲಿಯೂ ಇದೆ.

ಕುಮುದೇಂದು ಅರವತ್ತು ನಾಲ್ಕಕ್ಷರಗಳನ್ನು ಹೀಗೆ ಹೇಳಿದ್ದಾನೆ.

ಕಾದಿಯಿಂವರ್ಣಮಾಲಾಂಕ । ಕಾದಿಯಿಂ ನವಮಾಂಕ ಬಂಧ । ಟಾದಿಯಿಂ ನವಮಾಂಕ
ದಂಗ । ಪಾದಿಯಿಂನವಮಾಂಕ ಭಂಗ । ಯಾದ್ಯಷ್ಟ ರಳಕುಳಭಂಗ । ಸಾದ್ಯಂತ ।
ಅಂ ಅಃ ᳲಕ ᳲಪದ । ಮೋದದಿಪ್ಪತ್ತೇಳುಸ್ವರದ । ಓದಿನ ಅರವತ್ನಾಲ್ಕಂಕ ।

(ಅ. ೧೦. ೧೮_೨೫)

ಸಂಸ್ಕೃತ ವರ್ಣಮಾಲೆಯಲ್ಲಿ ೬೩ ಅಥವಾ ೬೪ ಅಕ್ಷರಗಳೆಂದು ಸಾಮಾನ್ಯವಾಗಿ ಹೇಳಿದ್ದರೂ, ಶಿಕ್ಷಾ ಮತ್ತು ಪ್ರಾತಿಶಾಖ್ಯ ಗ್ರಂಥಗಳಲ್ಲಿ ಬೇರೆ ಬೇರೆ ಸಂಖ್ಯೆಗಳು ಹೇಳಲ್ಪಟ್ಟಿವೆ. ಕಾತ್ಯಾಯನನ ಶುಕ್ಲಯಜುಃಪ್ರಾತಿಶಾಖ್ಯದಲ್ಲಿ ೬೫, ತೈತ್ತಿರೀಯ ಪ್ರಾತಿಶಾಖ್ಯದಲ್ಲಿ ತ್ರಿಭಾಷ್ಯರತ್ನದ ಅಭಿಪ್ರಾಯದಂತೆ ೬೦, ಗಾರ್ಗ್ಯ ಗೋಪಾಲಯಜ್ವನ ಮತಾನುಸಾರ ೫೯, ಮಾಹಿಷೇಯ ಭಾಷ್ಯವನ್ನನುಸರಿಸಿ ೫೩ ಎಂದೂ ; ಶಂಭು ಶಿಕ್ಷೆ (ರಹಸ್ಯ) ಯಲ್ಲಿ ೬೩ ಅಥವಾ ೬೪, ಕಾಲನಿರ್ಣಯ ಶಿಕ್ಷೆಯಲ್ಲಿ ೭೩, ಆರಣ್ಯಕ ಶಿಕ್ಷೆ ಯಲ್ಲಿ ೬೫, ಲಕ್ಷ್ಮೀಕಾಂತ ಶಿಕ್ಷೆಯಲ್ಲಿ ೧೦೮ ಎಂದು ಅಕ್ಷರಸಂಖ್ಯಾ ನಿರ್ಣಯಮಾಡಿದೆ.[25]

ವೀರಸೇನಾಚಾರ್ಯನು ಧವಳಗ್ರಂಥದಲ್ಲಿ ಸ್ವರಗಳು ೨೭, ವ್ಯಂಜನ ೩೩, ಮಿಕ್ಕವು (ಕ್ಷ ಇತ್ಯಾದಿ) ಎಂದು ಹೇಳಿರುವನು (ಚೌಸಟ್ಠಿಮೂಳವಣ್ಣಾಹು). ಅಕ್ಷರಗಳ ವಿನ್ಯಾಸ ಮತ್ತು ಸಮುಚ್ಚಯ (permutation and combination) ಎಂದರೆ ಭಂಗ. ಭಂಗದಲ್ಲಿ ಸ್ಥಾನಭಂಗ ಮತ್ತು ಕ್ರಮಭಂಗ ಎಂದೆರಡು ವಿಧ. ೧×೨×೩ ×೪× .. ....×ಅ=ಇಷ್ಟರಾಶಿ. ಆಗಮ ವಿಸ್ತಾರವನ್ನು ಹೇಳುವಾಗ ವೀರ

---

23. ಶ್ರೀ ವಿದ್ಯಾರ್ಣವತನ್ತ್ರ. I. ಪು. ೬೩.

24. Art and Thought.

ಸೇನನು ೬೪ ಅಕ್ಷರಗಳಿಂದ (ಒಂದು–ಒಂದು, ಎರಡು–ಎರಡು, ಮೂರು–ಮೂರು ಇತ್ಯಾದಿ) ೨೬೪೧ ಪದಗಳು ರಾಶಿಯಾಗುವವೆಂದು ಹೇಳಿರುವನು. ಭಟ್ಟಾಕಲಂಕನು "ಕರ್ಣಾಟಕೇ ಮೂಲವರ್ಣಾಃ ಚತುಷ್ಷಷ್ಠಿರಿತ್ಯವಿವಾದಮ್" ಎಂದು ೨೫ ಸ್ವರ, ೪ ಯೋಗವಾಹ, ೨೫ ವರ್ಗೀಯವ್ಯಂಜನ, ೧೦ ಅವರ್ಗೀಯ ವ್ಯಂಜನಗಳನ್ನು ಹೇಳಿರುವನು. ಭಟ್ಟಾಕಲಂಕನ ಮತದಲ್ಲಿ ಐ, ಔ ಗಳಿಗೆ ಹ್ರಸ್ವವಿಲ್ಲದಿರುವದರಿಂದ ೨೭ ಸ್ವರಗಳಿಲ್ಲ. ಕಾತ್ಯಾಯನ ಪ್ರಾತಿಶಾಖ್ಯದಲ್ಲಿ ೨೩ ಸ್ವರಗಳು (೧೩ ಮೂಲಸ್ವರ, ೮ ಸಂಧ್ಯಕ್ಷರ), ೩೩ ಯೋಗವಾಹಗಳು, ೯ ಅಯೋಗವಾಹಗಳು (ಜಿಹ್ವಾಮೂಲೀಯ ೱಕ, ಉಪಧ್ಮಾನೀಯೲಪ, ಅನುಸ್ವಾರ (ಮ್), ವಿಸರ್ಜನೀಯ (ঃ), ನಾಸಿಕ್ಯ (ಹುಮ್), ಕುಮ್ ಖುಮ್ ಗುಮ್ ಘುಮ್ ಎಂಬ ೪ ಯಮಗಳು ಒಟ್ಟು ೬೫ ಅಕ್ಷರಗಳು. ಕುಮುದೇಂದು ಜೈನ ಮತ್ತು ಪ್ರಾಕೃತ, ಕನ್ನಡ ಭಾಷೆಗಳ ಸಂಪ್ರದಾಯ ದಂತೆ ಐ ಔ ಗಳ ಹ್ರಸ್ವವನ್ನು ಅಂಗೀಕರಿಸಿದಂತೆ ಕಂಡು ಬರುತ್ತದೆ. ಕೇಶಿರಾಜನ ಮತದಲ್ಲಿ ೫೭ ಅಕ್ಷರಗಳು, ಕನ್ನಡಕ್ಕೆ ೪೭. ಶಬ್ದ ಸ್ಮೃತಿಯಲ್ಲಿ ೧೪ ಸ್ವರ (ಅ–ಔ) ಗಳೆಲ್ಲಕ್ಕೂ ಹ್ರಸ್ವದೀರ್ಘಪ್ಲುತವೆಂಬ ಮೂರು ಮೂರು ರೂಪಗಳು, ೨೫ ವರ್ಗೀಯ ವ್ಯಂಜನ ಉಳಿದವು ಅವರ್ಗೀಯವೆಂದು ಹೇಳಿದೆ. ಭಾಷಾಭೂಷಣದಲ್ಲಿ ೧೪ ಸ್ವರ, ೩೩ ವ್ಯಂಜನ, ಒಟ್ಟು ೪೭ ಎಂದು, ಕನ್ನಡದಲ್ಲಿ ಮಾತ್ರ ಮುವ್ವತ್ತಾರೆಂದು ನಾಗ ವರ್ಮನು ಹೇಳುವನು. ತಮಿಳಿನಲ್ಲಿ ಅರ್ಧಮಾತ್ರಾ ಕಾಲದ ಕುಟ್ರಿಯಲ್ ಇಗರಮ್ ("ಮ" ಮತ್ತು "ಯ"ಗಳ ನಡುವೆ–ಕೇಣ್ಮಿಯಾ, ನೇನ್ಮಿಯಾ) ಮತ್ತು ಕುಟ್ರಿಯಲ್ ಉಗರಂ (ಹಿಂದಿನ ಹಲ್ ಸಂಬಂಧಿಸಿದಂತೆ) ಎಂಬ ಎರಡು ಧ್ವನಿಗಳಿದ್ದವು. ವೈದಿಕ ಸಾಹಿತ್ಯದಲ್ಲೂ ಹ್ರಸ್ವ ಎ, ಒ ಗಳಿದ್ದವೆಂದು ಕೆಲವು ಸೂಚನೆಗಳಿವೆ. ಪತಂಜಲಿಯ ಮಹಾ ಭಾಷ್ಯದಲ್ಲಿ[26] 'ಛಾನ್ದೋಗಾನಾಮ್ ಸಾತ್ಯಮುಗ್ರಿ ರಾಣಾಯಾಣೀಯಾಃ ಅರ್ಧಮೇಕಾರಮರ್ಧಮೋಕಾರಂ ಚಾಧೀಯತೇ। ನೈವ ಹಿ ಲೋಕೇ ನಾನ್ಯಸ್ಮಿನ್ ವೇದೇ ಅರ್ಧಏಕಾರೋ ಅರ್ಧ ಓಕಾರೋವಾಽಸ್ತಿ।'. ಚಿನ್ನಯಸೂರಿ ತನ್ನ ಆಂಧ್ರ ವ್ಯಾಕರಣದಲ್ಲಿ 'ಪ್ರಾಕೃತಗಳಲ್ಲಿ ಕೆಲವರ ಅಭಿಪ್ರಾಯದಂತೆ ಎ ಏ ಒ ಓ ಗಳಿಗೆ ಹ್ರಸ್ವವಕ್ರವೆಂದು, ಇತರರು ಐ ಔ ಗಳಿಗೆ ವಕ್ರತಮವೆಂದು ಹೇಳುವರೆಂದು' ಅಭಿಪ್ರಾಯಗಳನ್ನು ಉದಾಹರಿಸಿರುವನು.[27] ಹ್ರಸ್ವ ಎ ಓ ಔಗಳು ಪ್ರಾಕೃತದಲ್ಲಿಲ್ಲ ವೆಂದು ಹೇಳುವವರು ಐ ಔಗಳು ದೀರ್ಘವೆಂದು ಅಭಿಪ್ರಾಯಪಡುವರು. ಈಗ ಪ್ರಕಟವಾಗಿರುವ ಭೂವಲಯ ಭಾಗದಲ್ಲಿ 'ಸರ್ವಷಾಮಯೀ ಭಾಷೆ'ಯ ೬೪ ಅಕ್ಷರಾನುಸಾರ ಅಧ್ಯಾಯಗಳನ್ನು ಪ್ರಾಕೃತ ಗಾಥೆಗಳನ್ನೂ ಕುಮುದೇಂದು ಬಂಧಿಸಿರುವನು.

---

25. *Śukla yajus Prātiśākhya of Kātyāyana.* Madras Or. Sr 1939.

26. ಮಹಾಭಾಷ್ಯ. I. 22. ಪಂಕ್ತಿ-21-24

ಇವುಗಳನ್ನು ಪರೀಕ್ಷಿಸಿದರೆ (ಪ್ರಕಟವಾದ ೨೦ ಅಧ್ಯಾಯಗಳ ಆದ್ಯಕ್ಷರ ಬಂಧ) ಆಕಾರದಿಂದ ಇಪ್ಪತ್ತನೆಯ ದೀರ್ಘಐವರೆಗೆ ಈ ಪ್ರಾಕೃತ ಪದಗಳು ಉದಾಹರಣೆ ಯಾಗಿ ಸಿಕ್ಕುತ್ತವೆ.

೧ ಅ-ಅಟ್ಠವಿಹಕಮ್ಮ
೨ ಆ-ಆದಿಮು
೩ ಆಾ-ಆಣೇಹಿಂ
೪ ಇ-ಇಯುಮೂಲತನ್ತ
೫ ಈ-ಈಯುಮ್ಣಾಯೂ
೬ ಈಃ-(ಐಃ ?) ಈಃಸಮುಹಗ್ಗಹ
೭ ಉ-ಉವವಾದ
೮ ಊ-ಊಣಪಮಾಣಂ
೯ ಊೂ-ಊೂವರ್ಷ್ವರ
೧೦ ಋ್-ಋಷಿಓ
೧೧ ಋ-ಋ ಅಮುಸುದೋ
೧೨ ೠ-ೠ ಏವಾಣಏತೀರೇ
೧೩ ಌ (ಇ ?)-ಌಡವಂಶಾಪಜ್ಜಣ್ಣೋ
೧೪ ೡ (ಇ ?)-ೡವಿಸನ್ನು ಜಿಣವರಿನ್ದಾ
೧೫ ೡ ( ಇ?)-ೡೋ (?)ಅಟ್ಠಾವಯ ಉಸಹೋ
೧೬ ಎ-ಎಸಹರರಾಯ
೧೭ ಏ-ಏ ಬಾಹುಬಲೀ ವನ್ದಮಿ
೧೮ ಏಃ-ಏಃವಂ ಕಲ್ಲಾಣರಾಣಇಜಾಣ
೧೯ ಐ-ಐವಂಹಿ ಜೀವರಾಯಾಣದವ್ವೋ
೨೦ ಐ-ಐಘುಣಘಾಈಮ್ಹಣಾ
೨೧ ಐ-ಐಲಿಯಸಾಪರಸಮಯ
೨೨ ಒಣ್ಣಾಣ
೨೩ ಓಧಿರಧಾರಿಯ
೨೪ ಓಂದೇಪಂಚಗುರೂ
೨೫ ಔಸಹಿಮಂಗಲ
೨೬ ಔಗಾಲಯದಿವಿ
೨೭ ಔಣ್ಣವಿಯಪ್ಪಾ, ಆನಂತರ ಪಶ್ಚಾದಾನುಪೂರ್ವಿ

ಈ ಪ್ರಾಕೃತ ಪದ್ಯಗಳು ಬಹುಶಃ ನಿರ್ವಾಣಗಾಥೆಗಳು. ಒಂದೇ ಸ್ವರದ ದೀರ್ಘ ಮತ್ತು ಪ್ಲುತರೂಪಗಳಿಂದ ಅರ್ಥವ್ಯತ್ಯಾಸ ಹೇಗಾಗುವುದೆಂಬುದನ್ನು ಮುಂದೆ ವಿಮರ್ಶಿಸಬೇಕಾಗಿದೆ.

ಭಾಷೆಗಳ ಸಂಖ್ಯೆಯನ್ನು ಸಾಮಾನ್ಯವಾಗಿ ಎಲ್ಲ ಜೈನಗ್ರಂಥಗಳು ಹದಿನೆಂಟು ಮಹಾಭಾಷೆಗಳು ಏಳನೂರು ಕ್ಷುಲ್ಲಕಭಾಷೆಗಳು ಎಂದು ಉಲ್ಲೇಖಿಸುವವು.

ಅಟ್ಠಾರಸವಿಹಿಪಗಾರದೇಶೀಭಾಸಾ ವಿಸಾರಏ.
ಅಟ್ಠಾರಸ ದೇಸೀಭಾಷಾ ವಿಸಾರಯಾ (ಜ್ಞಾತಧರ್ಮಕಥಾಸೂತ್ರ)
ಅಟ್ಠಾರಸ ದೇಸೀಭಾಷಾ ವಿಸಾರಏ (ಔಪಪಾತಿಕಸೂತ್ರ, ವಿಪಾಕಸೂತ್ರ)
ಅಟ್ಠಾರಸ ವಿಹದೇಸಿಪ್ಪಗಾರಭಾಸಾ ವಿಸಾರಏ (ರಾಜಪ್ರಶ್ನೀಯ)

ಕುಮುದೇಂದು (ಅ.೫.) ಈ ಸಂಸ್ಕೃತಶ್ಲೋಕಗಳನ್ನು ಉದಾಹರಿಸಿರುವನು :

ಅಥವಾ ಪ್ರಾಕೃತಸಂಸ್ಕೃತ ಮಾಗಧಪಿಶಾಚಭಾಷಾಶ್ಚಶೂರಸೇನೀ ಚ ।
ಷಷ್ಠೋಽತ್ರಭೇದೋ ದೇಶವಿಶೇಷಾದಪಭ್ರಂಶಃ ॥
ಅಥವಾ ಕರ್ಣಾಟಮಾಗಧಮಾಲವಲಾಟಗೌಡಗುರ್ಜರಪ್ರತ್ಯೇಕತ್ರಯ-
ಮಿತ್ಯಷ್ಟಾದಶಮಹಾಭಾಷಾ ।

---

27. ಜೋಗಿಸೋಮಯಾಜುಲು. ಆನ್ಧ್ರಭಾಷಾವಿಕಾಸಮು. Andhra University.

ರುದ್ರಟನ ಕಾವ್ಯಾಲಂಕಾರ (II. ೧೨) ದಲ್ಲಿ ಮೇಲಿನ ಮೊದಲನೆಯ ಶ್ಲೋಕವು ಹೀಗಿದೆ :

ಪ್ರಾಕೃತ ಸಂಸ್ಕೃತ ಮಾಗಧ ಪಿಶಾಚ ಭಾಷಾಶ್ಚ ಶೌರಸೇನೀ ಚ |
ಷಷ್ಠೋಽತ್ರ ಭೂರಿ ಭೇದಃ ದೇಶವಿಶೇಷಾದಪಭ್ರಂಶಃ ||

ಇದಕ್ಕೆ ೧೧ ನೆಯ ಶತಮಾನದ ನಮಿಸಾಧು ವ್ಯಾಖ್ಯಾನ ಮಾಡುವಾಗ ಹೀಗೆ ಹೇಳಿರುವನು :

" ಆರಿಸವಯಣೇ ಸಿದ್ಧಂ ದೇವಾಣಂ ಅದ್ಧಮಾಗಹಾ ವಾಣೀ " ಇತ್ಯಾದಿ ವಚನಾತ್ ಪ್ರಾಕ್ ಪೂರ್ವಂ ಕೃತಂ ಪ್ರಾಕೃತಂ, ಬಾಲಮಹಿಳಾದಿಸುಬೋಧಂ ಸಕಲಭಾಷಾನಿಬಂಧನ ಭೂತಂ ವಚನಮುಚ್ಯತೇ, ಮೇಘನಿರ್ಮುಕ್ತ ಜಲಮಿವೈಕಸ್ವರೂಪಂ ತದೇವಚ ದೇಶವಿ ಶೇಷಾತ್ಸಂಸ್ಕಾರಕರಣಾಚ್ಚ ಸಮಾಸಾದಿತ ವಿಶೇಷಂ ಸತ್ ಸಂಸ್ಕೃತಾದ್ಯುತ್ತರವಿಭೇದಾನಾ ಪ್ನೋತಿ ಅತಏವ ಶಾಸ್ತ್ರಕೃತಾ ಪ್ರಾಕೃತಮಾದೌ ನಿರ್ದಿಷ್ಟಮ್ ತದನು ಸಂಸ್ಕೃತಾದೀನಿ ಪಾಣಿನ್ಯಾದಿ ವ್ಯಾಕರಣೋದಿತ ಶಬ್ದ ಲಕ್ಷಣೇನ ಸಂಸ್ಕರಣಾತ್ ಸಂಸ್ಕೃತಮುಚ್ಯತೇ ....ತಥಾ ಪ್ರಾಕೃತಮೇವ ಕಿಂಚಿದ್ವಿಶೇಷಾತ್ ಪೈಶಾಚಿಕಮ್."

ನಾಗವರ್ಮನು " ಸರ್ವಭಾಷಾಮಯೀ ಭಾಷಾ ಪ್ರವೃತ್ತಾ ಯನ್ಮುಖಾಂಬುಜಾತ್ " ಎಂದು, " ಪ್ರವೃತ್ತಾಯನ್ಮುಖಾದ್ದೇವೀ ಸರ್ವಭಾಷಾ ಸರಸ್ವತೀ " (ಭಾಷಾ ಭೂಷಣ) ಎಂದು, ಛಂದೋಂಬುಧಿಯಲ್ಲಿ

"ಸಂಸ್ಕೃತಂ ಪ್ರಾಕೃತಮಪಭ್ರಂಶಂ ಪೈಶಾಚಿಕಮೆಂಬ ಮೂಱುಂ ನಾಲ್ಕುಂ ಭಾಷೆಗಳೊಳ್ಪುಟ್ಟುವ ದ್ರವಿಡಾಂಧ್ರಕರ್ಣಾಟಾದಿ ಷಟ್ಪಂಚಾಶತ್ಸರ್ವ ವಿಷಯ ಭಾಷಾಜಾತಿಗಳಕ್ಕುಂ "

ಎಂದು ಹೇಳಿರುವದರಿಂದ ಕರ್ಣಾಟ ಭಾಷೆಯು ಜನ್ಯಭಾಷೆ. ಸಂಸ್ಕೃತಭವವಾದುದು ಪ್ರಾಕೃತವೆಂದು ಹೇಮಚಂದ್ರ ಮುಂತಾದವರು ಹೇಳುವರು. ಪ್ರಾಯಃ ಜೈನ ಬೌದ್ಧರಿಗೆ ಅರ್ಧಮಾಗಧಿ (ಅಥವಾ ಪಾಲಿ) ಮೂಲಭಾಷೆ, ಮಹಾವೀರ ಗೌತಮ ಬುದ್ಧರ ವಾಣಿಯಾದುದರಿಂದ ಜಗತ್ತಿಗೇ ಮೂಲ ಭಾಷೆ, ಸರ್ವಭಾಷಾಮಯೀ ಭಾಷೆ. ಕುಮುದೇಂದು ಹೇಳುವ ಪ್ರಾಕೃತ ಸಂಸ್ಕೃತ ಮಾಗಧ ಪಿಶಾಚ ಭಾಷಾ, ಶೌರಸೇನೀ, ಅಥವಾ ಕರ್ಣಾಟ ಮಾಗಧ ಮಾಲವ ಲಾಟ ಗೌಡ ಗುರ್ಜರ ಎಂಬ ಆರು, ಮೂರು ವಿಧವಾಗಿ ಹದಿನೆಂಟು ಭಾಷೆಗಳು, ಅಷ್ಟಾದಶಮಹಾಭಾಷೆಗಳಾಗಿರ ಬಹುದು. ಈ ಪ್ರಾಕೃತಗಳ ವಿಷಯದಲ್ಲಿ ಭರತನಾಟ್ಯ ಶಾಸ್ತ್ರವು " ಮಾಗಧ್ಯವನ್ತಿಜಾ ಪ್ರಾಚ್ಯಾ ಶೂರಸೇನ್ಯರ್ಧಮಾಗಧೀ। ವಾಹ್ಲೀಕಾ ದಾಕ್ಷಿಣಾತ್ಯಾ ಚ ಸಪ್ತಭಾಷಾಃ ಪ್ರಕೀರ್ತಿತಾಃ " ಎಂದು ಏಳನ್ನು, ದಂಡಿಯ ಕಾವ್ಯಾದರ್ಶದಲ್ಲಿ " ಮಹಾರಾಷ್ಟ್ರೀ ಶೌರಸೇನೀ ಗೌಡೀ ಲಾಟೀ " ಎಂಬುವನ್ನು ಉಲ್ಲೇಖಿಸಲಾಗಿದೆ. ಕುಮುದೇಂದುವಿನ ಅಭಿಪ್ರಾಯದಂತೆ ಮೂಲಭಾಷೆ " ಕರ್ಮಾಟ, ಕನ್ನಡ. "

ಸಕಲವು ಕರ್ಮಾಟದಣುರೂಪ ಹೊಂದುತ। ಪ್ರಕಟದೆ ಒಂದರೊಳಡಗಿ |
ಹದಿನೆಂಟು ಭಾಷೆಯು ಮಹಾಭಾಷೆಯಾಗಲು | ಬರಿಯಭಾಷೆಗಳೇಳು ನೂರಂ ||

(ಅ. ೬, ೩, ೪)

ಆದಿತೀರ್ಥಂಕರನು ಸೌಂದರಿಗೆ ಉಪದೇಶಿಸಿದ ಅಂಕಾಕ್ಷರಪದ್ಧತಿಯ ಭಾಷೆ ಕನ್ನಡವಾಗಿದ್ದಿತು. ನಾಗವರ್ಮನಿಗೂ (ಕ್ರಿ. ಶ. ೧೦೪೦) ಈ ಅಭಿಪ್ರಾಯ ತಿಳಿದಿರಲಿಲ್ಲವೆಂದು ಊಹಿಸಬೇಕಾಗುವುದು.

ಕುಮುದೇಂದು ಹೇಳಿರುವ ಭಾಷೆಗಳನ್ನೂ ಲಿಪಿಗಳನ್ನೂ ಇತರ ಜೈನಗ್ರಂಥಗಳಲ್ಲಿ ಹೇಳಿರುವವನ್ನೂ ವಿಮರ್ಶಿಸಬೇಕು. ಬೌದ್ಧರ ಲಲಿತ ವಿಸ್ತರದಲ್ಲಿ ೬೪ ಲಿಪಿಗಳ ಉಲ್ಲೇಖನೆಯಿದೆ. ಜೈನರ ಪನ್ನವನ್ನ ಸುತ್ತ ಮತ್ತು ಸಮವಾಯಾಂಗ ಸುತ್ತಗಳಲ್ಲಿ “ ಕಲ್ಪಾಂತರವಾಕ್ಯಾನಿ ” ಎಂದು ೧೮ ಲಿಪಿಗಳು ಉಕ್ತವಾಗಿವೆ.[25]

ಭಮ್ಭೀ, ಜವಣಾಲೀ, ದೋಸಾಪುರಯಾ, ಖರೋಟ್ಠೀ, ಪುಕ್ಕರಸಾರೀ (ದಿ), ಭೋಗವತಿ, ಪಹಾರಾಯಿ, ಉಯ ಅಂತರಿಕ್ಖ, ಅಕ್ಕರಪಿಟ್ಠಿ, ತೇವಣಇ, ರಾಹತಿ, ಅಂಕಲಿವಿ, ಗಳಿತ(ಗಣಿತ)ಲಿವಿ, ಗನ್ಧವ್ವಲಿವಿ, ಆಂಧಸಲಿವಿ, ಮಾಹೇಸರೀ, ದಾಮಿಲೀ, ಪೌಲಿಂದೀ.

ಕುಮುದೇಂದು (ಅ. ೫. ೧೦೧) “ ಹಂಸಲಿಪಿ, ಭೂತಲಿಪಿ, ವೀರ, ಯಕ್ಷಿ, ರಾಕ್ಷಸಿ, ಊಹಿಯ, **ಯವನಾನಿ, ತುರ್ಕಿಯ, ದ್ರಮಿಳ,** ಸೈಂಧವ, ಮಾಲವಣೀಯ, ಕೀರಿಯನಾಡು, **ದೇವನಾಗರಿ,** ಲಾಡ, **ಪಾರಶಿ,** ಆಮಿತ್ರಿಕ, **ಚಾಣಕ್ಯ,** ಬ್ರಾಹ್ಮೀ ” ಎಂಬ ಹದಿನೆಂಟು ಲಿಪಿಗಳನ್ನು ಹೇಳಿ ಅಂಕಗಳಲ್ಲಿ ಶುದ್ಧ ಕರ್ನಾಟಕ, ಪ್ರಾಕೃತಿಲಿಪಿ ಅಂಕ, ಸಂಸ್ಕೃತ ದ್ರವ್ಯ ಅಂಕ, ದ್ರಾವಿಡ, ಆಂಧ್ರ, ಮಹಾರಾಷ್ಟ್ರ, ಮಲೆಯಾಳ, ಗುರ್ಜರ, ಅಂಗ, ಕಳಿಂಗ, ಕಾಶ್ಮೀರ, ಕಾಂಭೋಜ. **ಹಮ್ಮೀರ,** ಶೌರಸೇನಿ, ವಾಲಿಯಂಕ, **ತೇಬತಿ** ಆದಿ ಅಂಕ, **ವೆಂಗಿಪಟು,** ವಂಗ, ಬ್ರಾಹ್ಮಿಯಾದಂಕ, ವಿಜಯಾರ್ಧ, ಪದ್ಮ, ವೈದರ್ಭ್ಯ, ವೈಶಾಲಿ, ಸೌರಾಷ್ಟ್ರ, **ಖರೋಷ್ಟ್ರ,** ನಿರೋಷ್ಟ್ರ, ಅಪಭ್ರಂಶಿಕ, ಪೈಶಾಚಿಕ, ರಕ್ತಾಕ್ಷರ, ಅರಿಷ್ಟದೇಶದಂಕ, ಕುಸುಮಾಜಿ ದೇಶದಂಕ, ಸುಮನಾಜಿ ದೇಶದಂಕ, ಐಂದ್ರಧ್ವಜ, ಜಲಜದಲ, ಮಹಾಪದ್ಮ, ಅರ್ಧ ಮಾಗಧಿ, **ಅರಸ, ಪಾರಸ,** ಸಾರಸ್ವತ, ಬಾರಸ ದೇಶದಂಕ, ಶೂರ, ಮಾಲವ, ಲಾಟ, ಗೌಡ, ಮಗಧ, ವಿಹಾರು ಉತ್ಕಲ, ಕನ್ಯಾಕುಬ್ಜ, ವರಾಹನಾಡು, ವೈಶ್ರಮಣರನಾಡು, ವೇದಾನ್ತ, ಅಡವಿಯ **ಬನವಾಸಿ, ಕರ್ಣಾಟಕ,** ಮತ್ತು ವರ್ಧಮಾನಾಂಕ ಎಂಬ ಐವತ್ತನಾಲ್ಕಕ್ಕೆ ಒಂದನ್ನು ಕೂಡಿದರೆ ಐವತ್ತೈದು ಆಗುವುದೆಂದು ಹೇಳುವನು. ನಾಗವರ್ಮನು ಹೇಳುವ ಷಟ್ಪಂಚಾಶತ್ (೫೬) ಭಾಷೆಗಳಿಗೂ ಇವಕ್ಕೂ ಸಂಬಂಧವಿರಬಹುದು.

ಇವುಗಳಲ್ಲಿ ತೇಬತಿ (ಟಿಬೆಟನ್) ಲಿಪಿ ಗುಪ್ತರಕಾಲದ ನಾಗರೀಲಿಪಿಯನ್ನನುಸರಿಸಿ ಟಿಬೆಟ್ಟಿನಲ್ಲಿ ಏಳು ಎಂಟನೆಯ ಶತಾಬ್ದಗಳಲ್ಲಿ ಪ್ರಚಾರವಾಯಿತು. ಹರ್ಷನ ಸಮಕಾಲೀನನಾದ ಸ್ರೊ-ತ್ಸಾನ್-ಗಾಮ್-ಪೊ ಎಂಬ ರಾಜನು ನೇಪಾಳೀ ರಾಜ

---

25 Ojha. Bhāratiya Lipimālā.

ಪುತ್ರಿಯನ್ನು (ನೀಲತಾರಾ) ಚೀಣರಾಜಪುತ್ರಿಯನ್ನೂ (ಶ್ವೇತತಾರಾ) ಮದುವೆಯಾಗಿ ಅವರ ಪ್ರಭಾವದಿಂದ ಬೌದ್ಧಮತವನ್ನು ಸ್ವೀಕರಿಸಿ ಪ್ರಚಾರಮಾಡಿದನು. ಪದ್ಮಸಂಭವ ಶಾಂತಿರಕ್ಷಿತ (ಸು ಕ್ರಿ.ಶ. ೭೫೦), ಶಾಂತಿದೇವ, ಕಮಲಶೀಲರೆಂಬ ನಾಲಂದಾ ವಿಶ್ವ ವಿದ್ಯಾಲಯದ ಬೌದ್ಧಭಿಕ್ಷುಗಳು ಟಿಬೆಟ್ಟಿನಲ್ಲಿ ಬೌದ್ಧಮತವನ್ನು ಸ್ಥಾಪಿಸಿ ಬೌದ್ಧ ಗ್ರಂಥಗಳನ್ನು ಆ ಭಾಷೆಗೆ ತರ್ಜುಮೆಮಾಡಲು ಆ ಕಾಲದ ದೇವನಾಗರಿಲಿಪಿಯನ್ನೇ ಟಿಬೆಟನ್ ಭಾಷೆಗೆ ಅಳವಡಿಸಿಕೊಂಡರು.[26] ಬ್ರಾಹ್ಮೀ ಮತ್ತು ಖರೋಷ್ಠೀ (ಷ್ಟೀ) ಲಿಪಿಗಳ ಪರಿಚಯ ಅಶೋಕನ ಶಾಸನಗಳನ್ನು ಪ್ರಿನ್ಸೆಪ್, ಕೋಲ್ಬ್ರುಕ್ ಮುಂತಾ ದವರು ಗ್ರೀಕರ ದ್ವಿಭಾಷಾ ಲಿಪಿಗಳುಳ್ಳ ನಾಣ್ಯಗಳ ಸಹಾಯದಿಂದ ಓದಿದ ಮೇಲೆ ನಮಗೆ ಗೊತ್ತಾಯಿತು. ಯವನಾನಿ ಎಂಬುದು ಪಾಣಿನಿಸೂತ್ರಗಳಿಗಿಂತ ಪ್ರಾಚೀನ. ' ಇಂದ್ರಭವಶರ್ವರುದ್ರಮೃಡಹಿಮಾರಣ್ಯಯವಯವನಮಾತುಲಾಚಾರ್ಯಾಣಾಮಾ ನುಕ್ ' ಎಂಬ ಸೂತ್ರಕ್ಕೆ ಕಾತ್ಯಾಯನನವಾರ್ತಿಕ, ಪತಂಜಲಿಯ ಮಹಾಭಾಷ್ಯಗಳು ' ಯವನಾನಿ ಲಿಪಿಃ ' ಎಂದು ವ್ಯಾಖ್ಯಾನ ಮಾಡಿರುವುದರಿಂದ ಅಲೆಕ್ಸಾಂಡರಿನೊಡನೆ ಬಂದ ಯವನರಲ್ಲದೆ, ಕ್ರಿ. ಪೂ. ಆರನೆಯ ಶತಾಬ್ದದಲ್ಲಿದ್ದ ಅಕೆಮೀನಿಯನ್ ಗ್ರೀಕ್ ಜನರೆಂದು ಊಹಿಸಲಾಗಿದೆ. ತುರ್ಕಿ ಎಂಬುದು ಮಧ್ಯ ಏಷ್ಯಾದಲ್ಲಿ ಕ್ರಿ. ಶ. ನಾಲ್ಕು ಐದನೆಯ ಶತಮಾನದ ಭಾಷೆ. ದ್ರಮಿಳ ಲಿಪಿಯ ಉಲ್ಲೇಖನೆಯು ಜೈನರ ಅಂಗ ಗ್ರಂಥ ಗಳಲ್ಲಿಯೇ ಕಂಡುಬಂದರೂ, ಕ್ರಿ.ಶ. ೬-೭ನೆಯ ಶತಾಬ್ದದವರೆಗೂ ಬ್ರಾಹ್ಮೀಲಿಪಿಯಿಂದ ಹುಟ್ಟಿದ ದಾಕ್ಷಿಣಾತ್ಯ ಲಿಪಿಗಳೇ ತಮಿಳು ದೇಶದಲ್ಲಿಯೂ ಪ್ರಚಾರದಲ್ಲಿದ್ದವು. ಮೌರ್ಯ ಸಾಮ್ರಾಜ್ಯದ ದಕ್ಷಿಣ ಭಾಗದಲ್ಲೆಲ್ಲ ಬ್ರಾಹ್ಮೀಲಿಪಿಯೇ ಇದ್ದಿತೆಂದು ಅಶೋಕನ ಶಾಸನಗಳಿಂದ ಕಂಡುಬರುವದು. ತಮಿಳು ದೇಶದಲ್ಲಿ ಸಿಕ್ಕಿರುವ ಅತ್ಯಂತ ಪ್ರಾಚೀನ ಶಾಸನಗಳೂ ಕೂಡ ಬ್ರಾಹ್ಮೀ ಅಕ್ಷರಗಳಲ್ಲಿಯೇ ಇವೆ. ಬಹುಶಃ ಏಳನೆಯ ಶತಾಬ್ದ ನಂತರ ಪಲ್ಲವ-ಗ್ರಂಥಲಿಪಿಗೆ ದಾಮಿಲೀ ಎಂಬ ಹೆಸರು ಬಂದಿರಬಹುದು. ಚಾಣಕ್ಯಲಿಪಿ 'ಕುಟಿಲ' ಲಿಪಿಯಾಗಿದ್ದ ಪಕ್ಷದಲ್ಲಿ ಅರ್ಥಶಾಸ್ತ್ರದಲ್ಲಿ ಉಕ್ತವಾದ ಗೂಢಲಿಪಿಯಾಗಲೀ, ಗುಪ್ತರ ಕಾಲದ ಕುಟಿಲಲಿಪಿಯಾಗಿದ್ದಿರಬಹುದು. ಹಮ್ಮೀರ ಎಂಬುದು ೯ನೆಯ ಶತಾಬ್ದದಷ್ಟು ಪ್ರಾಚೀನವೇ ಎಂಬ ಸಂದೇಹವು ತಲೆದೋರುವದು. ಹನ್ನೊಂದು ಹನ್ನೆರಡನೆಯ ಶತಾಬ್ದಗಳಲ್ಲಿ ರಾಜಪುತ್ರವಂಶಗಳ ಚರಿತ್ರೆಗಳಲ್ಲಿ ಹಂಬೀರ, ಹಮ್ಮೀರ ಎಂಬ ಹೆಸರು ಮೊದಲು ಕಂಡುಬರುವುದು 'ಅಮೀರ್' ಶಬ್ದದ ರೂಪವಿರಬಹುದು. ಜಯಸಿಂಹ ಸೂರಿಯ 'ಹಮ್ಮೀರ ಮದಮರ್ದನ' ಕಾವ್ಯ,[27] ನಯಚಂದ್ರಸೂರಿಯ 'ಹಮ್ಮೀರ ಮಹಾಕಾವ್ಯ'[28] ರಾಜಪುತ್ರಚರಿತ್ರೆಗೆ ಸಂಬಂಧಪಟ್ಟವೆ.[29]

---

26. S. C. Vidyabhushana Tibetan Grammar.
27. *Gaekwar Or. Sr.* No. 10
28. I. A. VIII. P 55 tr, Kirtane.
29 Ojha. *History of Rajputana.*

ಇನ್ನು ಕುಮುದೇಂದು ಹೇಳಿರುವ ಜೈನಗ್ರಂಥಗಳನ್ನು ಪರಿಶೀಲಿಸಿದರೆ, ದಿಗಂಬರ ಪಂಥದವರು ದಿಟ್ಟಿವಾದವೆಂಬ ಹನ್ನೆರಡನೆಯ ಅಂಗ ಒಂದು ಮಾತ್ರ ಉಳಿದುಕೊಂಡಿರುವದೆಂದು ಮಿಕ್ಕ ಹನ್ನೊಂದಂಗಗಳು ನಷ್ಟವಾಗಿವೆಯೆಂದೂ, ಶ್ವೇತಾಂಬರರು ಹನ್ನೊಂದು ಅಂಗಗಳು ಉಳಿದು ದಿಟ್ಟಿವಾದ ಲುಪ್ತವಾಗಿದೆಯೆಂದು ಹೇಳುವರಷ್ಟೆ. ಶ್ವೇತಾಂಬರರ ಹನ್ನೊಂದು ಅಂಗಗಳನ್ನು ದಿಗಂಬರರು ಪ್ರಮಾಣಗ್ರಂಥಗಳೆಂದು ಅಂಗೀಕರಿಸುವದಿಲ್ಲ. ಆದರೆ ಜೇಕೊಬಿ ಮುಂತಾದವರು ತೋರಿಸಿರುವಂತೆ ಆಚಾರಾಂಗ ಸೂತ್ರಕೃತಾಂಗ ಮುಂತಾದುವು ಕ್ರಿ.ಪೂ. ೩ನೆಯ ಶತಾಬ್ದದಲ್ಲಿಯೇ ಪ್ರಚಾರವಾಗಿದ್ದಂತೆ ಕಂಡುಬರುವದು. ಕುಮುದೇಂದು ದಿಗಂಬರ ಮುನಿಯಾದರೂ ಹನ್ನೊಂದಂಗಗಳನ್ನೂ ಹೇಳಿರುವನು. ಜೈನಾಗಮುಗಳನ್ನು ಮೂರು ರೀತಿಯಾಗಿ ವಿಂಗಡಿಸುವ ಸಂಪ್ರದಾಯವಿದೆ. (೧) ದೃಷ್ಟಿವಾದ ಅಂಗವನ್ನು ಬಿಟ್ಟು ೪೫ (೧೧ ಅಂಗ, ೧೨ ಉಪಾಂಗ, ೧೦ ಪಇನ್ನ, ೬ ಛೇದಸೂತ್ರಗಳು, ೨ ನಂದಿ ಮತ್ತು ಅನುಯೋಗದ್ವಾರ ಸುತ್ತಗಳು, ೪ ಮೂಲಸೂತ್ರಗಳು). ಅಥವಾ (೨) ಅಂಗ (ಅಂಗಪ್ರವಿಷ್ಟ) ಮತ್ತು ಅಂಗಬಾಹಿರ, ಅಂಗಪ್ರವಿಷ್ಟದಲ್ಲಿ ಹನ್ನೆರಡು ಅಂಗಗಳು ಅಥವಾ ಗಣಿಪಿಡಗ; ಅಂಗ ಬಾಹಿರದಲ್ಲಿ ೬ ವಿಧವಾದ ಆವಶ್ಯಕ, ಕಲಿಯ ಉತ್ಕಾಲಿಯ ಮುಂತಾದ ಭೇದಗಳುಳ್ಳ ಆವಶ್ಯವಿರಕ್ತ; (೩) ೮೪ ಆಗಮಗಳು (೧೧ ಅಂಗ, ೧೨ ಉಪಾಂಗ, ೫ ಛೇದಸೂತ್ರ, ೨ ಮೂಲಸೂತ್ರ, ೩೦ ಪ ಇನ್ನ, ೨ ಚೂಲಿಯಸುತ್ತ, ೮ ಇತರ ಸೂತ್ರಗಳು ಕಲ್ಪಗಳು ೧೦ ನಿಜ್ಜುತ್ತಿ, ೩ (ಪಿಂಡನಿಜ್ಜುತ್ತಿ, ಸಂಸಕ್ತನಿಜ್ಜುತ್ತಿ, ವಿಸೇಸಾವಸ್ಸಯಭಾಸ)—ಒಟ್ಟು ೮೪ ಆಗಮಗಳು. ಇವುಗಳಮೇಲೆ ವ್ಯಾಖ್ಯಾನಗಳನ್ನು ನಿಜ್ಜುತ್ತಿ, ಭಾಸ, ಚುಣ್ಣಿ, ಟೀಕಾ ಎಂಬ ವಿಧವಾಗಿ ವಿಭಜಿಸಿದೆ.

ಹನ್ನೆರಡನೆಯ ಅಧ್ಯಾಯದಲ್ಲಿ ಕುಮುದೇಂದು ಆಗಮಗಳನ್ನು ಹೇಳಿರುವನು. (ಅ. ೧೨. ೪೭).

| | | | |
|---|---|---|---|
| ೧ | ದ್ವಾದಶಾಂಗ | ೪೧ | ಪ್ರಾಣಾವಾಯು ಪೂರ್ವ |
| ೨ | ಚತುರ್ದಶ ಪೂರ್ವ | ೪೨ | ಕ್ರಿಯಾವಿಶಾಲ |
| ೩ | ಪ್ರತಿಕ್ರಮಣ ಶಾಸ್ತ್ರ | ೪೩ | ಲೋಕಬಿಂದುಸಾರ (ಥವ) |
| ೪ | ಪರೀಕ್ಷಿತ | ೪೪ | ೧೪ ಪೂರ್ವ |

[ಇವುಗಳಲ್ಲಿ ೧೦, ೧೪, ೮, ೧೮, ೧೨, ೧೨, ೧೬, ೨೦, ೩೦, ೧೫, ೧೦, ೧೦, ೧೦, ೧೦ ವಸ್ತುಗಳು]

---

30. (ಕನ್ನಡದಲ್ಲಿ ಹಮ್ಮೀರಕಾವ್ಯ ಅಥವಾ ರಾಜೇಂದ್ರ ವಿಜಯವೆಂಬ ಚಂಪೂ ಗ್ರಂಥ ಮುರಿಗೆ ದೇಶಿಕೇಂದ್ರನಿಂದ ಸು. ೧೫೬೦ ರಲ್ಲಿ ರಚಿತವಾಯಿತು. ಇದು ಪಟ್ಟದ ಕಲ್ಲಿನ ರಾಜನಾದ ಹಮ್ಮೀರನ ಚರಿತ್ರೆಯೆಂಧು ಹೇಳಲಾಗಿದೆ)ಕ. ಕ. ಚ. ೨. ಪು. ೨೯೧.

೫ ಮತಿಜ್ಞಾನ
೬ ಪರ್ಯಾಯಾಕ್ಷರ
೭ ಪದಸಂಘಾತ
೮ ಪ್ರತಿಪತ್ಯಂಗಧರ
೯ ಅನುಯೋಗಶ್ರುತ
೧೦ ಪ್ರಾಭೃತಕ
೧೧ ಪ್ರಾಭೃತಕಾಂಗ
೧೨ ೧೧ ಪೂರ್ವ
೧೩ ಜೀವಸಮಾಸ
೧೪ ಆಚಾರ
೧೫ ಸೂತ್ರಕೃತ
೧೬ ಸ್ಥಾನ
೧೭ ಸಮವಾಯ
೧೮ ವ್ಯಾಖ್ಯಾಪ್ರಜ್ಞಪ್ತಿ
೧೯ ಜ್ಞಾತರೂಸಕಥಾ
೨೦ ಉಪಾಸಕಾಧ್ಯಾಯನ
೨೧ ಅಂತಕೃದ್ದಶಾ
೨೨ ಅನುತ್ತರೋಪಪಾದ ದಶ,
೨೩ ಪ್ರಶ್ನವ್ಯಾಕರಣ
೨೪ ವಿಪಾಕ ಸೂತ್ರ
೨೫ ೧೧ ಅಂಗ
೨೬ ಪರಿಕ್ರಮಸೂತ್ರ
೨೭ ಪ್ರಥಮಾನುಯೋಗ
೨೮ ಪೂರ್ವಗತ ಚೂಳಿಕೆ
೨೯ ದೃಷ್ಟಿವಾದ ಐದು (ಚೂಳಿಕೆ)
೩೦ ಪೂರ್ವಗತದಲಿ
೩೧ ಉತ್ಪಾದಾಗ್ರೇಣಿಯೊದ
೩೨ ವೀರ್ಯಾನುವಾದಾ
೩೩ ಅಸ್ತಿನಾಸ್ತಿ ಪ್ರವಾದ (ಪೂರ್ವ)
೩೪ ಜ್ಞಾನಪ್ರವಾದ
೩೫ ಸತ್ಯಪ್ರವಾದ
೩೬ ಆತ್ಮಪ್ರವಾದ
೩೭ ಕರ್ಮಪ್ರವಾದ
೩೮ ಪ್ರತ್ಯಾಖ್ಯಾನ ಪೂರ್ವ
೩೯ ವಿದ್ಯಾನುವಾದ ಪೂರ್ವ
೪೦ ಕಲ್ಯಾಣವಾದ
೪೫ ಅಗ್ರೇಯಣೀಯ ಆಶೆಯಾದಿಯ ಎರಡರಲಿ
೪೬ ಪೂರ್ವೆಯ ೧೪
೪೭ ಪೂರ್ವಾನ್ತ
೪೮ ಅಪರಾನ್ತ
೪೯ ಧ್ರುವ
೫೦ ಅಧ್ರುವ
೫೧ ಚವನಲಬ್ಧಿ
೫೨ ಅಧ್ರುವ ಸಂಪ್ರಣಧಿ
೫೩ ಅರ್ಥ
೫೪ ಭೌಮಾವಯಾದ್ಯ
೫೫ ಸವಾರ್ಥ ಕಲ್ಪನೀಯ
೫೬ ಅತೀತಜ್ಞಾನ
೫೭ ಅನಾಗತ, ಸಿದ್ಧ
೫೮ ಉಸಹ
೫೯ ಸಿದ್ಧ
೬೦ ಉಪಾಧ್ಯಾಯ
೬೧ ಮಹಾಧವಳ
೬೨ ಜಯಧವಳ
೬೩ ವಿಜಯಧವಳ
೬೪ ತ್ರಿಲೋಕಸಾರ
೬೫ ಲಬ್ಧಿ ಸಾರ
೬೬ ಚಾರಿತ್ರ ಸಾರ
೬೭ ಶ್ರಾವಕಾಚಾರ
೬೮ ಸೂರ್ಯಪ್ರಜ್ಞಪ್ತಿ
೬೯ ಯುಕ್ತಿ ಯುಕ್ತ್ಯಾಗಮ
೭೦ ಪರಮಾಗಮ
೭೧ ತೀರ್ಥಿಕರಾಂತ ಸಂತತಿ
೭೨ ಮೂಲ ಪ್ರಕೃತಿ
೭೩ ಉತ್ತರೋತ್ತರ ಪ್ರಕೃತಿ
೭೪ ಆಶಾಯುರ್ವೇದ ವಿಧಿ
೭೫ ದಶಧರ್ಮ
೭೬ ಯೋಗಸಾರ
೭೭ ರಸವಾದ
೭೮ ಛಶತದ ಸೂತ್ರಾಂಗ

ಮೇಲಿನ ಪಟ್ಟಿಯಲ್ಲಿ ೧೪ರಿಂದ ೨೪ವರೆಗೆ ಹನ್ನೊಂದು ಅಂಗಗಳು ಉಕ್ತವಾಗಿವೆ. (ಆಯಾರಾಂಗ, ಸೂಯಗಡಂಗ, ಠಾಣಾಂಗ, ಸಮವಾಯಾಂಗ, ಭಗವತಿ ಅಥವಾ ವ್ಯಾಖ್ಯಾಪನ್ನತ್ತಿ, ನಾಯಧಮಕ್ಕಹಾ, ಉವಾಸದಸಾ, ಅಂತಗಡದಸಾ, ಅನುತ್ತರೋವ

ವಾಯಿಯದಸಾ, ಪಣ್ಣವಾಗರನಾಇಮ್, ವಿವಾಗಸುಯಂ). ಹನ್ನೆರಡನೆಯ ಅಂಗ ದಿಟ್ಠಿವಾಯ (ದೃಷ್ಟಿವಾದ). ಸೇನಗಣದವರಿಗೆ ಈ ಶ್ವೇತಾಂಬರರಿಂದ ಅಂಗೀಕೃತವಾದ ೧೧ ಅಂಗಗಳೂ ತಿಳಿದಿದ್ದವೆಂದು ಕುಮುದೇಂದು ಹೇಳುವನು. ಹನ್ನೆರಡು ಉಪಾಂಗ ಗಳಲ್ಲಿ ಉವವಾಇಅ (ಔಪಪಾತಿಕ), ರಾಯಪಸೇನಿಯ, ಜೀವಾಭಿಗಮ, ಸೂರ್ಯ ಪ್ರಜ್ಞಪ್ತಿ ಮುಂತಾದುವನ್ನು ಕುಮುದೇಂದು ಹೇಳಿರುವನು.

ಹನ್ನೆರಡನೆಯ ಅಂಗವಾದ ದಿಟ್ಠಿವಾದದಲ್ಲಿ ಐದು ಚೂಳಿಕೆಗಳೆಂದು ವೀರ ಸೇನನೂ ಕುಮುದೇಂದುವೂ ಹೇಳುವರು. ನಾಲ್ಕನೆಯ ಚೂಳಿಕೆಗೆ ಪೂರ್ವಗತವೆಂದು ಹೆಸರು. ಅದರಲ್ಲಿ ೧೪ ಭಾಗಗಳಿದ್ದು ಎರಡನೆಯದು ಅಗ್ರಾಯಣೀಯ ಪೂರ್ವ. ಈ ಅಗ್ರಾಯಣೀಯ ಪೂರ್ವದಲ್ಲಿ ಹದಿನಾಲ್ಕು ಭಾಗಗಳಿದ್ದು ಐದನೆಯದಕ್ಕೆ ಚವನಲಬ್ಧಿ ಎಂದು ಹೆಸರು. ಚಯನಲಬ್ಧಿಯ ೨೦ ಪಾಹುಡಗಳಲ್ಲಿ ನಾಲ್ಕನೆಯ ಪಾಹುಡಕ್ಕೆ ಕಮ್ಮಪಯಡಿ ಎಂದು ಹೆಸರು.

ಅಗ್ಗೇಯಣೀಯಸ್ಸಪೂವ್ವಸ್ಸ ಪಂಚಮಸ್ಸವತ್ಥುಸ್ಸ ಚವುತ್ಥೋಪಾಹುಡೋಕಮ್ಮ ಪಯಡೀಣಾಮ (ಭೂತಬಲಿ).

ಆಗ್ರಾಯಣೀಯ ಪೂರ್ವದಲ್ಲಿನ ೧೪ ವಸ್ತುಗಳನ್ನು ಪೂಜ್ಯಪಾದನು 'ಶ್ರುತಭಕ್ತಿ' ಯಲ್ಲಿ ಹೀಗೆ ವಿವರಿಸಿರುವನು.

ಪೂರ್ವಾಂತಂಹ್ಯಪರಾಂತಂ ಧ್ರುವಮಧ್ರುವ ಚ್ಯವನ ಲಬ್ಧಿನಾಮಾನಿ |
ಅಧ್ರುವ ಸಂಪ್ರಣಿಧಿಂ ಚಾಪ್ಯರ್ಥಂ ಭೌಮಾವಯಾದ್ಯಂ ಚ |
ಸರ್ವಾರ್ಥಕಲ್ಪನೀಯಂ ಜ್ಞಾನಮತೀತಂ ತ್ವನಾಗತಂ ಕಾಲಂ |
ಸಿದ್ಧಿಮುಪಾಧ್ಯಂಚ ತಥಾಚತುರ್ದಶ ವಸ್ತೂನಿ ದ್ವಿತೀಯಸ್ಯ |

ಇವನ್ನು ಮೇಲಿನ ಪಟ್ಟಿಯಲ್ಲಿ (೪೭-೬೦) ಕುಮುದೇಂದು ಹೇಳಿರುವನು. 'ವಂದಿತ್ತು' ಎಂಬ ಸೂತ್ರವನ್ನು ಕುಮುದೇಂದು ಸೂಚಿಸಿರುವನು. (ಭೂವಲಯ, ಶ್ರುತಾವತಾರ ಪು. ೮೨). ಜೋಣಿ ಪಾಹುಡ ದಿಗಂಬರರಿಗೆ ಪ್ರಮಾಣವಲ್ಲವೆಂದು ಕೆಲ ವೆಡೆ ಹೇಳಿದ್ದರೂ ಕುಂದಕುಂದನೇ ಜೋಣಿಸಾರವನ್ನು ಬರೆದಂತೆ ತಿಳಿದು ಬರುವದು. ಕುಂದ ಕುಂದ, ಶಿವಕೋಟಿ, ಶಿವಾಯನ, ಪೂಜ್ಯಪಾದ, ಸಮಂತ ಭದ್ರ. 'ಚೂಡಾ ಮಣಿ' ಕರ್ತೃ ತುಂಬಲೂರಾಚಾರ್ಯ ಮುಂತಾದವರ ಗ್ರಂಥಗಳನ್ನೆಲ್ಲ ಕುಮು ದೇಂದು ಉಲ್ಲೇಖಿಸಿರುವನು.

ಆದರೆ ಈಚೆಗೆ ಪ್ರಕಟವಾದ ೨೦-೩೩ ಅಧ್ಯಾಯಗಳಲ್ಲಿ ಈ ಕೆಳಗೆ ಕಂಡ ಗ್ರಂಥ ಗಳಿಂದ ಕೆಲವು ಭಾಗಗಳು ಗೋಚರವಾಗಿವೆ.

೧ ಸಮಂತಭದ್ರ-ಬೃಹತ್ಸ್ವಯಂಭುಸ್ತೋತ್ರ
೨ ಪಾತ್ರಕೇಸರಿ ಸ್ತೋತ್ರ
೩ ಗುಣಭದ್ರ-ಉತ್ತರ ಪುರಾಣ
೪ ಉಗ್ರಾದಿತ್ಯ ಕಲ್ಯಾಣಕಾರಕ

೫ ಜಿನಸೇನ-ಜಯಧವಳಾಟೀಕೆ
೬ ತಿಲೋಯಪಣ್ಣತ್ತಿ
೭ ಪೂಜ್ಯಪಾದ-ಇಷ್ಟೋಪದೇಶ
೮ ಇಂದ್ರನಂದಿ-ಸಮಯಭೂಷಣ-ನೀತಿಸಾರ
೯ ಜಿನಸೇನ-ಆದಿಪುರಾಣ-ಸಹಸ್ರನಾಮಸ್ತೋತ್ರ.
೧೦ 'ಗಂಭೀರಂ ಮಧುರಂ' ಎಂಬ ಶ್ಲೋಕ(ಭಟ್ಟಾಕಲಂಕನ ಶಬ್ದಾನುಶಾಸನದಲ್ಲಿಯೂ ಉದ್ಧೃತ)
೧೧ 'ಕವಿಜಿಹ್ವಾಬಂಧನ'
೧೨ ವಡ್ಡಾರಾದನಾ (?)
೧೩ ಸಿರಿಗೊಮ್ಮಡದೇವ ವಿರ ಇಯ ಕಂಮಡ ಸಕ್ಕದ ಪಾಹುಡಗೀದಾ
೧೪ ಆದಿಗೊಮ್ಮಟದೇವ ವಿರ ಇಯಾ ಅಣಾಇ ಅಣಿಹಣಭಯವದ್ಗೀದಾದಿ ಮಂಗಲ ಪಾಹುಡಸುತ್ತಂ ತರಾಲಟಿಯ ದವ್ವಪ್ಪಮಾಣಾಣುಯೋಗ ದ್ದಾದ್ದಾರೇ ಪಥಮಸುತ್ತಂ ಸಮತ್ತಾ.

೧೫ ಅಥವ್ಯಾಸರ್ಷಿ ಪ್ರಣೀತ ಜಯಾಖ್ಯಾನಾದ್ಯಂತರ ಶ್ರೀಧೀ ಋಕ್ ಮಂತ್ರಾಂತರ್ಗತ ಗೀತಾ.

೧೬ ಸಮಂತಭದ್ರಯತಿವರ-ಗನ್ಧಹಸ್ತಿಯ ಮಹಾಭಾಷ್ಯ
೧೭ ಭಗವದ್ಗೀತಾ ಪೈಶಾಚೀ ಭಾಷ್ಯ.
೧೮ ಮಹಾಬಂಧ.

ಇವುಗಳಲ್ಲಿ ಜಿನಸೇನನ ಜಯಧವಳಾ ಟೀಕೆಯು ಕ್ರಿ. ಶ. ೮೩೭ ರಲ್ಲಿ ಪೂರ್ತಿಯಾಯಿತು. ಅನಂತರ ಆದಿಪುರಾಣವನ್ನು ರಚಿಸಿದನೆಂದು ಊಹಿಸಬಹುದು. ಉತ್ತರಪುರಾಣವನ್ನು ಗುಣಭದ್ರನು ಕ್ರಿ. ಶ. ೮೯೮ ರಲ್ಲಿ ಬಂಕಾಪುರದಲ್ಲಿ ಪೂರ್ತಿ ಮಾಡಿದನು. ಸಮಯಭೂಷಣ ಅಥವಾ ನೀತಿಸಾರ, ಜ್ವಾಲಾಮಾಲಿನೀಕಲ್ಪ ಮುಂತಾದ ಗ್ರಂಥಗಳನ್ನು ಇಂದ್ರನಂದಿಯು ಕ್ರಿ. ಶ. ೯೩೦ ರಲ್ಲಿ ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ ಆಳಿಕೆಯಲ್ಲಿ ರಚಿಸಿದನು. ಈ ಗ್ರಂಥಗಳಿಂದ ಉದ್ಧೃತವಾದ ಶ್ಲೋಕಗಳು ಭೂವಲಯದಲ್ಲಿ ಅಡಕವಾಗಿವೆ ಎಂಬುದನ್ನು ಒಪ್ಪಿಕೊಳ್ಳಬೇಕು. ಕುಮುದೇಂದು ಹೇಳುವ ತ್ರಿಲೋಕಸಾರ, ಲಬ್ಧಿಸಾರ, ಚಾರಿತ್ರಸಾರಗಳು ಕ್ರಿ. ಶ. ೯೮೦ ರಲ್ಲಿದ್ದ ನೇಮಿಚಂದ್ರನ ಗ್ರಂಥಗಳೇ ಎಂದು ನಿರ್ಧರಿಸುವದಕ್ಕೆ ತಕ್ಕಷ್ಟು ಆಧಾರಗಳಿಲ್ಲ. ಅದೇ ಹೆಸರಿನ ಗ್ರಂಥಗಳನ್ನು ಇತರರು ರಚಿಸಿರುವರು. ಮೇಘಚಂದ್ರನ ಶಿಷ್ಯನಾದ ವೀರಣಂದಿಯು ಕ್ರಿ. ಶ. ೧೧೫೩ ರಲ್ಲಿ ಒಂದೇ ಚಾರಿತ್ರಸಾರವನ್ನು ರಚಿಸಿರುವನು. ಸು. ಕ್ರಿ. ಶ. ೧೪೦೦ ರಲ್ಲಿ ಚಂದ್ರಕೀರ್ತಿ ಪರಮಾಗಮಸಾರವನ್ನು ರಚಿಸಿರುವನು. ಕುಮುದೇಂದು ಹೇಳುವ ಕವಿಜಿಹ್ವಾಬಂಧನಕ್ಕೂ ಹದಿನೈದನೆಯ

ಶತಾಬ್ದದ ಈಶ್ವರ ಕವಿಯ ಕನ್ನಡ ಛಂದೋ ಗ್ರಂಥವಾದ ಅದೇ ಹೆಸರಿನ ಗ್ರಂಥಕ್ಕೂ ಯಾವ ಸಂಬಂಧವೂ ಕಂಡುಬರುವದಿಲ್ಲ. ಶಿವಕೋಟಿಯ ವಡ್ಡಾರಾಧನೆಯಿಂದಲೇ ಉದ್ಧೃತವಾಕ್ಯಗಳು ಭೂವಲಯದಲ್ಲಿವೆ ಎಂದು ನಿಸ್ಸಂಶಯವಾಗಿ ಹೇಳಲು ಸಾಧ್ಯವಿಲ್ಲ.

ಕುಮುದೇಂದು ಶತಕ ಎಂಬುದನ್ನು ಪಿರಿಯಾಪಟ್ಟಣದ ದೇವಪ್ಪನು ರಚಿಸಿರುವನೆಂದು ಅವನಿಗೆ ಭೂವಲಯದ ಪರಿಚಯವಿದ್ದಿತೆಂದು ಹೇಳಲಾಗಿದೆ. ಆದರೆ ಈ ಕುಮುದೇಂದು ಶತಕ ಎಂಬುದರಲ್ಲಿ ದೊಡ್ಡಯ್ಯನ ಸಂಸ್ಕೃತ ಭುಜಬಲಿ ಚರಿತೆಯ ಮತ್ತು ಇತರ ಗ್ರಂಥಗಳಿಂದ ಶ್ಲೋಕಗಳನ್ನು ತೆಗೆದುಕೊಂಡು ಇತರ ಜೈನಾಚಾರ್ಯರ ಹೆಸರು ಬಂದಾಗ ಕುಮುದೇಂದು ಎಂದು ಸೇರಿಸಿ ಬಿಟ್ಟು ರಚಿಸಿರುವ ಶತಕ (?) ವಾದುದರಿಂದ ಭೂವಲಯದ ಕಾಲವನ್ನು ನಿರ್ಧರಿಸಲು ಇದರಿಂದ ಏನೂ ಸಹಾಯವಾಗುವುದಿಲ್ಲ.

ಕುಮುದೇಂದು ಆತ್ಮಕಥೆಯನ್ನು ಹೇಳುವಾಗ ಮಾನ್ಯಖೇಟದ ಅಮೋಘ, ಸೈಗೊಟ್ಟಸಿವ, ಅವನ ರಾಣಿಯರು ಜಕ್ಕಿ, ಲಕ್ಕಿ ಎಂದು ಎರಡೇರಾಜರ ಹೆಸರುಗಳನ್ನು ಹೇಳುವನು.

| ಮತ್ತು—ಕಳ್ಬಪ್ಪು | ಉಚ್ಚಂಗಿ | ಸಿದ್ಧಾಪುರ | ಕೊಂಗುಣಿ |
|---|---|---|---|
| ತಿಪ್ಪೂರು | ವೈದಾಳ | ಕೊತ್ತಳ | ದ್ರಮಿಳ |
| ಯಲವಭೂ | ಕೈದಾಳ | ಕುಸುಮದಪುರ | ಜಿನವಿಷ್ಣುಕಂಚಿ |
| ನನ್ದಿ | ಮಲೆಯೂರು | ಗೇರುಸೊಪ್ಪೆ | ತವರೂರು |
| ಅಯ್ಯಾಳ | ಸೆಯ್ಗೊಟ್ಟಸಿವನೂರು | ಸಾಗರ | ತಿರುಪ್ಪಳವೂರು |
| ಪೆನುಗೊಂಡೆ | ಕುಂದಾಪುರ | ನೀಲಗಿರಿ | ತಿರುಕ್ಕುರುಳ್‌ಕೊಂಡ್ರಂ |
| ಗಜದನ್ತ | ವನ್ದವಾಸಿ | ಚಿತ್ತಾವೂರು | |
| ಪೊನ್ನೂರು | ಮಾನೂಲ್ | ಮೀನಾಕ್ಷಿಯಕೋವಿಲ್ | |
| ಮಲೆ | ತಿರುಮಲೆ | ಕಾಮಾಕ್ಷಿಯಕ್ಷಿಯ | ದಾನಾಂಕಸಾಲೆ |

ಎಂಬ ಜೈನ ಕ್ಷೇತ್ರಗಳ ಹೆಸರುಗಳನ್ನು ಹೇಳಿರುವನು. ಇವುಗಳಲ್ಲಿ ಪೆನುಗೊಂಡೆ ಮತ್ತು ಗೇರುಸೊಪ್ಪೆ ಹೊಯ್ಸಳ–ವಿಜಯನಗರ ಕಾಲದಲ್ಲಿ ಪ್ರಖ್ಯಾತವಾದವು. ಅದಕ್ಕೆ ಹಿಂದಿನ ಶಾಸನಗಳಲ್ಲಿ ಕಂಡು ಬಂದಿಲ್ಲ. ಮಾನ್ಯಖೇಟವನ್ನು ಅಮೋಘವರ್ಷನೇ ನಿರ್ಮಿಸಿ ರಾಜಧಾನಿ ಮಾಡಿಕೊಂಡನೆಂದೂ, ಅದಕ್ಕೆ ಮುಂಚೆ ಮಯೂರಖಂಡಿಯೋ, ಸೂಲಭಂಜಂ ಎಂಬುದೋ ರಾಷ್ಟ್ರಕೂಟರ ರಾಜಧಾನಿಯಾಗಿದ್ದಿತೆಂತೂ ಫ್ಲೀಟ್ ಹೇಳುವರು. ಆದರೆ ಅದಕ್ಕೆ ಮುಂಚೆಯೇ ಮಾನ್ಯಖೇಟವು ಜ್ಯೋತಿಷ್ಕರ ದೃಷ್ಟಿಯಿಂದ ಮುಖ್ಯ ಸ್ಥಳವಾಗಿದ್ದಿತೆಂದು ತಿಳಿದು ಬರುವುದು.

ಭೂವಲಯದ ಪ್ರತಿಯಲ್ಲಿ ಕಂಡುಬರುವ ಮಲ್ಲಿಕಬ್ಬೆಯ ಪ್ರಶಸ್ತಿ ಮೂಡಬಿದ್ರಿಯ

ಮಹಾಬಂಧದ ಪ್ರತಿಯಿಂದ ತೆಗೆದುಕೊಂಡು ಸೇರಿಸಿರಬೇಕು. ಇದರಲ್ಲಿ ಭೂವಲಯದ ಪ್ರತಿಯನ್ನು ದಾನಮಾಡಿದಂತೆ ಹೇಳಿಲ್ಲ. ಶ್ರೀ ಭುಜಬಲಿಶಾಸ್ತ್ರಿಗಳ ಕನ್ನಡ ತಾಡಪತ್ರಿ ಗ್ರಂಥಗಳ ಕೋಶದಲ್ಲಿ ಈ ಅಂಶಗಳು ಕಂಡುಬರುತ್ತವೆ.

ಪುಟ ೨೫೭. ಮೂಡಬಿದ್ರಿ, ಸಿದ್ಧಾಂತಬಸದಿ, ಪ್ರತಿ ೨೨, ಭೂತಬಲಿಯ ಮಹಾಬಂಧ, ಲಿಪಿ-ಪ್ರಾಚೀನ ಕನ್ನಡ, ಪ್ರತಿ ಲಿಪಿಕಾರ-ಶ್ರೀ ಉದಯಾದಿತ್ಯ ತನ್ನ ರಾಜನಾದ ಶಾನ್ತಿಸೇನನ ಪತ್ನಿ ಮಲ್ಲಿಕಬ್ಬೆ ದೇವಿಗಾಗಿ ಬರೆದನು. ಶ್ರುತಪಂಚಮಿಯ ಉದ್ಯಾಪನೆಯಲ್ಲಿ ಸಿದ್ಧಾನ್ತಮುನಿಮಾಘನಂದಿಗೆ ದಾನಮಾಡಲಾಯಿತು.

ಪ್ರತಿ ೨೫. ಲದ್ಧಿಸಾರ-ನೇಮಿಚಂದ್ರನ ಗ್ರಂಥ, ಪ್ರಾಚೀನ ಕನ್ನಡ ಲಿಪಿ. ಪ್ರತಿ ಲಿಪಿಕಾರ ರೇಚಣ್ಣ. ಮಾಘನಂದಿಗೆ ಪ್ರತಿಯ ದಾನ.

ಪ್ರತಿ ೨೬. ಸತ್ತಕಮ್ಮ ಪಂಜಿಕಾ-ಪ್ರತಿಲಿಪಿಕಾರ ಉದಯಾದಿತ್ಯ, ರಾಜ ಶಾನ್ತಿನಾಧನಿಗಾಗಿ, ಮಾಘನಂದಿಗೆ ದಾಸ.

ಪುಟ ೨೫೬. ಪ್ರತಿ ೧೫. ವೀರಸೇನನಧವಳಾಟೀಕಾ. ಗಂಡರಾದಿತ್ಯನ ಸೇನಾಪತಿ ಮಲ್ಲಿದೇವನು **ಕುಲಭೂಷಣ** ಮುನಿಗೆ ದಾನಮಾಡಿದುದು. ಪ್ರಾಚೀನ ಕನ್ನಡ ಲಿಪಿ.

ಪ್ರತಿ ೧೭. ಧವಳಾಟೀಕೆ (ಷಟ್ಖಂಡಾಗಮ). ಮಂಡಲಿನಾಡು ಭುಜಬಲೀ (?) ಗಂಗಪೆರ್ಮಾಡಿಯ ಅತ್ತಿದೇವಿಯಕ್ಕ, ಕುಪಣಪುರದ ಆಣಿಗವಂಶದ, ಚಿನ್ನಪ್ಪನಿಂದ ಪ್ರತಿಮಾಡಿಸಿ, ಬನ್ನಿಯ ಕೆರೆಯ ಉತ್ತುಂಗ ಜಿನಚೈತ್ಯಾಲಯದ ಮುನಿ **ಶುಭಚಂದ್ರನಿಗೆ** ದಾನಮಾಡಿದಳು. ಶಾಲಿವಾಹನಶಕ ೭೩೮ (?)

ಪುಟ ೨೫೫,೮. ವೀರಸೇನ ಜಿನಸೇನರ ಜಯಧವಳಾಟೀಕಾ-- ಪ್ರತಿಲಿಪಿಕಾರ ಭುಜಬಲ ಅಣ್ಣ, ಚಿಕ್ಕಮ್ಮಯ ಮತ್ತು ಬಲ್ಲಿಸೆಟ್ಟಿ **ಪದ್ಮಸೇನನಿಗೆ** ದಾನಮಾಡಿದುದು. ಶಾಲಿವಾಹನಶಕ ೭೫೮ [?]

ಪ್ರತಿಗಳನ್ನು ಮಾಡಿದ ಉದಯಾದಿತ್ಯ ಮತ್ತು ರೇಚಣ್ಣರು ಮಾಘನಂದಿ, ಶಾಂತಿನಾಥ (ಸೇನ) ಮಲ್ಲಿಕಬ್ಬೆಯರ ಸಮಕಾಲೀನರು. ಮಹಾಬಂಧ, ಸತ್ತಕರ್ಮ ಪಂಜಿಕಾ ಮತ್ತು ಲಬ್ಧಿಸಾರಗಳನ್ನು ಬರೆದರು. ಮಹಾಬಂಧದ ಠಿದಿಬಂಧಾಧಿಕಾರ ಸಮಾಪ್ತಿಯಲ್ಲಿ ಗುಣಭದ್ರಸೂರಿಯ ಶಿಷ್ಯ ಮಾಘನಂದಿ ಎಂದು, ಅವನಿಗೆ ಸೇನ—ಮಲ್ಲಿಕಬ್ಬೆಯರು ಶಾಸ್ತ್ರದಾನಮಾಡಿದರೆಂದು ಹೇಳಿದೆ. ಅನುಭಾಗ ಬಂಧಾಧಿಕಾರದಲ್ಲಿ ಮೇಘಚಂದ್ರನಶಿಷ್ಯ ಮಾಘನಂದಿಗೆ ಸೇನ–ಮಲ್ಲಿಕಬ್ಬೆಯರು ದಾನಮಾಡಿದಂತೆ ಇದೆ. ಪ್ರದೇಶಬಂಧಾಧಿಕಾರದಲ್ಲಿ ಮಲಧಾರಿ ಮುನೀಂದ್ರನಶಿಷ್ಯ ಮಾಘಣಂದಿಗೆ ಸೇನನು ದಾನ ಮಾಡಿದಂತೆ ಹೇಳಿದೆ. ಎಂದರೆ ಮಾಘಣಂದಿ, ಗುಣಭದ್ರ, ಮೇಘಚಂದ್ರ ಮತ್ತು ಮಲಧಾರಿಗಳ ಶಿಷ್ಯನಾಗಿದ್ದನು. ಭೂವಲಯದ ಪ್ರಶಸ್ತಿ ಎಂದು ಹೇಳಿರುವುದರಲ್ಲಿ

ಗುಣಭದ್ರಸೂರಿಯ ಶಿಷ್ಯಮಾಘಣಂದಿ ಎಂದಿದೆ. ಇದು ಮಹಾಬಂಧ ಪ್ರತಿಗೆ ಸಂಬಂಧ ಪಟ್ಟಿದೆ. ಭೂವಲಯವನ್ನೂ ಮಲ್ಲಿಕಬ್ಬೆ ಪ್ರತಿಮಾಡಿಸಿದಳೆಂದೂ ಆ ಪ್ರತಿಯೇ ಈಗ ಸಿಕ್ಕಿರುವ ಕಾಗದದ ಪ್ರತಿ ಎಂಬುದಕ್ಕೆ ಆಧಾರಗಳಿಲ್ಲ. ಶಾಂತಿನಾಥ ಅಥವಾ ಶಾಂತಿ ಸೇನ ಎಂಬ ಹೆಸರು ಇದೆಯೆಂದು ಶ್ರೀ ಭುಜಬಲಿಶಾಸ್ತ್ರಿಗಳು ಹೇಳಿರುವರು. ಆದರೆ ಕೇವಲ ಸೇನ, ರೂಪಜಿತಸೇನ ಎಂದು ಇದೆಯೆಂದು ಅಮರಾವತಿಯಲ್ಲಿ ಸಂಪಾದಿತವಾದ ಗ್ರಂಥದಿಂದ ತಿಳಿದುಬರುವದು. ಉದಯಾದಿತ್ಯ ಶಾಂತಿಸೇನರ ಕಾಲದ ವಿಷಯವಾಗಿ ಶಾಸನಗಳು ಕಂಡುಬಂದಿಲ್ಲ. ಮೇಘಚಂದ್ರ, ಮಾಘಣಂದಿಗಳನೇಕರು ೧೨-೧೩ನೆಯ ಶತಾಬ್ದದ ಶಾಸನಗಳಲ್ಲಿ ಉಕ್ತರಾಗಿರುವರು. ಬನ್ನಿಕೆರೆಯ ಶುಭಚಂದ್ರನ ವಿಷಯಕ ವಾದ ಅನೇಕ ಶಾಸನಗಳು ಸು.ಕ್ರಿ.ಶ. ೧೧೧೮ರಿಂದ ಸಿಕ್ಕುತ್ತವೆ. ಶ್ರೀ ಭುಜಬಲಿ ಶಾಸ್ತ್ರಿಗಳು ಧವಳ ಜಯಧವಳಾಟೀಕೆಗಳ ಪ್ರತಿಗಳ ಕಾಲ ಶಾ.ಶ. ೭೩೮,೭೫೮ ಎಂದು ಬರೆದಿರುವದರಲ್ಲಿ ತಪ್ಪಿರಬೇಕು. ಬಹುಶಃ ಶಕ ೧೦೩೮,೧೦೭೮ (ಕ್ರಿ.ಶ. ೧೧೧೬-೧೧೩೬) ಎಂದರೆ ಶುಭಚಂದ್ರನ ಕಾಲಕ್ಕೆ ಸರಿಹೋಗುವುದು. ಮಹಾಬಂಧ, ಸತ್ತಕಮ್ಮ ಪಂಜಿಕಾ ಪ್ರತಿಗಳೂ ಅದೇ ಸಮಯದಲ್ಲಿ ಹುಟ್ಟಿ, ಅದೇ ಸೇನ ಮಲ್ಲಿಕಬ್ಬೆಯರ ಪ್ರಶಸ್ತಿ ಭೂವಲಯಕ್ಕೂ ಅನ್ವಯಿಸುತ್ತದೆ ಎಂದು ತಾತ್ಕಾಲಿಕವಾಗಿ ನಿರ್ಧರಿಸಿದರೆ, ಇಂದ್ರ ನಂದಿ (ಕ್ರಿ.ಶ. ೯೩೦) ಮತ್ತು ಕ್ರಿ.ಶ. ೧೧೨೦ ರೊಳಗಾಗಿ ಭೂಮಲಯ ರಚಿತವಾಗಿ ಬಹುದೆಂದು ಹೇಳಬಹುದು. ಎಂದರೆ ಅಮೋಘವರ್ಷ ಶಿವಮಾರ (ಕ್ರಿ.ಶ. ೮೧೫ರ) ಎಂದಿರುವದಕ್ಕೆ ಪರಿಹಾರವನ್ನು ಹುಡುಕಬೇಕು. ಈ ಅದ್ಭುತಗ್ರಂಥ ಪೂರ್ತಿಯಾಗಿ ಪ್ರಕಟವಾದರೆ ಕಾಲನಿರ್ಣಯವನ್ನು ಮಾಡಲು ಸಾಧ್ಯವಾಗುವುದು.

ಎಸ್. ಶ್ರೀಕಂಠಶಾಸ್ತ್ರೀ.

# ವಾಲ್ಮೀಕಿ ರಾಮಾಯಣದಲ್ಲಿ ಗಣಿತ

ವಾಲ್ಮೀಕಿ ರಾಮಾಯಣಕ್ಕೂ ಗಣಿತಕ್ಕೂ ಏನು ಸಂಬಂಧ? ಎಂಥ ಗಣಿತ ವಿಚಾರಗಳು ವಾಲ್ಮೀಕಿ ರಾಮಾಯಣದಲ್ಲಿ ಇದ್ದಾವು, ಎಂದು ಯಾರಾದರೂ ಪ್ರಶ್ನಿಸಿದರೆ ಅದಕ್ಕೆ ಉತ್ತರವಿದು : ಹೌದು, ತುಂಬಾ ತೊಡಕಿನ ಗಣಿತ ವಿಚಾರಗಳು ರಾಮಾಯಣ ದಲ್ಲಿ ಬರಲು ಕಾರಣವಿಲ್ಲ; ಆದರೆ ರಾಮಾಯಣದಲ್ಲಿ ಅಲ್ಲಲ್ಲೇ ಬರುವ ಹಲವು ಉಪ ಮಾನ ಉಪಮೇಯಗಳಿಗೂ ಇತರ ಒಂದೆರಡು ವಿಚಾರಗಳಿಗೂ ಆಧುನಿಕ ಎಂದೆನ್ನ ಬಹುದಾದ ಖಗೋಳಶಾಸ್ತ್ರವೇ ಮುಂತಾದ ಗಣಿತ ಶಾಖೆಗಳ ಸಹಾಯವಿಲ್ಲದೆ ಸಮಂಜಸವಾದ ಅಥವಾ ಸಮರ್ಪಕವಾದ ಅರ್ಥವಿವರಣೆಯನ್ನು ಕೊಡುವುದು ಸಾಧ್ಯವಿಲ್ಲ. ಇಂಥವುಗಳಲ್ಲಿ ಮುಖ್ಯವಾದುವನ್ನು ಪಟ್ಟಿಮಾಡಿ ಇಲ್ಲಿ ಕೊಡಲಾಗಿದೆ. ಇವುಗಳಲ್ಲದೆ ಸ್ವಾರಸ್ಯವಾದ ಸಂಖ್ಯಾವಿಚಾರಗಳು ಕೆಲವು ಅಲ್ಲಲ್ಲಿ ಬರುತ್ತವೆ. ಗಾಯತ್ರೀಮಂತ್ರಾತ್ಮಕವಾದ ೨೪ ಎಂಬ ಸಂಖ್ಯೆಯು ಬಹು ಸ್ವಾರಸ್ಯವಾದ ರೀತಿ ಯಲ್ಲಿ ರಾಮಾಯಣದ ಕಾಂಡ ಕಾಂಡದಲ್ಲಿಯೂ ಮಿಳಿತವಾಗಿದೆ. ಇವುಗಳನ್ನೆಲ್ಲಾ ಇಲ್ಲಿ ನಿರೂಪಿಸಿಲ್ಲ. ವಾಚಕರೆಲ್ಲರಿಗೂ ರುಚಿಸಬಹುದಾದ ಕೆಲವು ವಿಷಯಗಳನ್ನು ಮಾತ್ರ ಇಲ್ಲಿ ಆರಿಸಿಕೊಳ್ಳಲಾಗಿದೆ. ಈ ಸಣ್ಣ ಲೇಖನವನ್ನು ನನ್ನ ಪೂಜ್ಯ ಗುರುಗಳಾದ ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳವರ ಸನ್ನಿಧಾನದಲ್ಲಿ ಕಿರಿಯದೊಂದು ಗುರು ದಕ್ಷಿಣೆ ಎಂಬ ಭಾವನೆಯಿಂದ ಅರ್ಪಿಸುತ್ತಿದ್ದೇನೆ.

## ೧. ಬಾಲಕಾಂಡ

ಕೌಶಲ್ಯಾ ಜನಯದ್ರಾಮಂ ಸರ್ವಲಕ್ಷಣ ಸಂಯುತಂ ।<br>
ವಿಷ್ಣೋರರ್ಧಂ ಮಹಾಭಾಗಂ ಪುತ್ರಮೈಕ್ಷ್ವಾಕು ವರ್ಧನಂ॥ ೧೮-೧೦

ಭರತೋನಾಮ ಕೈಕೇಯ್ಯಾಂ ಜಜ್ಞೇ ಸತ್ಯ ಪರಾಕ್ರಮಃ।<br>
ಸಾಕ್ಷಾದ್ವಿಷ್ಣೋಶ್ಚತುರ್ಭಾಗಸ್ಸರ್ವೈಸ್ಸ ಮುದಿತೋ ಗುಣೈಃ॥ ೧೮-೧೨<br>
ಅಥಲಕ್ಷ್ಮಣ ಶತ್ರುಘ್ನೌ ಸುಮಿತ್ರಾ ಜನಯತ್ಸುತೌ।<br>
ವೀರೌ ಸರ್ವಾಸ್ತ್ರ ಕುಶಲೌ ವಿಷ್ಣೋರರ್ಧಸಮನ್ವಿತೌ॥ ೧೮-೧೩

ಶ್ರೀ ಮಹಾ ವಿಷ್ಣುವಿನ ಅರ್ಧಭಾಗವಾಗಿ ರಾಮನೂ, ನಾಲ್ಕನೆಯ ಒಂದು ಭಾಗವಾಗಿ ಭರತನೂ, ಅರ್ಧಭಾಗವನ್ನೊಳಗೊಂಡು ಲಕ್ಷ್ಮಣ ಶತ್ರುಘ್ನರೂ ಅವತರಿಸಿದರು. $\frac{೧}{೨} \times \frac{೧}{೪} \times \frac{೧}{೨}$ = ಒಟ್ಟು ೧$\frac{೧}{೪}$ ಆಗುತ್ತದೆ. ಇದು ಹೇಗೆ ಸಾಧ್ಯ? ನನ್ನಲ್ಲಿ ೧೦ ರೂಪಾಯಿಗಳಿದ್ದರೆ ಆದರಲ್ಲಿ ಅರ್ಧವನ್ನು ಒಬ್ಬನಿಗೂ, ಕಾಲು ಭಾಗವನ್ನು ಮತ್ತೊಬ್ಬ

---

ಸಂಕೇತ: ೧೮-೧೦ ಎಂದರೆ ೧೮ನೇ ಸರ್ಗ ೧೦ನೇ ಶ್ಲೋಕ. ಇದೇ ಸಂಕೇತ ವನ್ನು ಎಲ್ಲೆಡೆಯಲ್ಲೂ ಉಪಯೋಗಿಸಲಾಗಿದೆ.

ನಿಗೂ, ಅರ್ಧ ಭಾಗವನ್ನು ಮೂರನೆಯವನಿಗೂ ಕೊಟ್ಟೆನೆಂದು ಹೇಳಿದರೆ, ೧೦ ರೂಪಾಯಿಗಳಿರುವಲ್ಲಿ ೧೨ ೧/೩ ರೂ. ಕೊಟ್ಟೆನೆಂದು ಹೇಳಿದಂತಾಗುತ್ತದೆ. ಯಾವ ಪರ್ಯಾಪ್ತಸಂಖ್ಯೆ (finite number)ಗೂ ಇಂಥ ವಿಭಾಗ ಸಾಧ್ಯವಿಲ್ಲ. ಆದರೆ ಅಪರ್ಯಾಪ್ತ ಅಥವಾ ಅನಂತ (infinite) ಸಂಖ್ಯೆಗೆ ಇದು ಸಾಧ್ಯವಾಗಬಹುದು. ಗಣಿತದ ಭಾಷೆಯಲ್ಲಿ $\infty - \infty = \infty$ ಎಂಬುದು ಸಾಧ್ಯ. ವಿಷ್ಣುವಿನ ಅರ್ಧಭಾಗವನ್ನೊಳಗೊಂಡು ಶ್ರೀರಾಮನು ಹುಟ್ಟಿದ ಮೇಲೆ, ವಿಷ್ಣುವಿನ ಇನ್ನರ್ಧಭಾಗ ಮಾತ್ರ ಉಳಿದಿದೆಯೆಂದು ಹೇಳುವುದು ಉಚಿತವಲ್ಲ. ಅಚಿಂತ್ಯವಾದ ಅನಂತಭಾಗವೇ ಉಳಿದಿರುತ್ತದೆ. ಇದರಿಂದ ಕಾಲುಭಾಗವನ್ನೊಳಗೊಂಡು ಲಕ್ಷ್ಮಣನು ಹುಟ್ಟಿದನು. ಉಳಿದಭಾಗವು ಮೊದಲಿನಂತೆಯೇ ಅನಂತ. ಈ ಪ್ರಕಾರ, ಮೇಲಿನ ವಿಭಜನೆಗೆ ಸಮರ್ಥನೆ ಕೊಡಬೇಕು. ಶ್ರೀರಾಮನು ಅನುಜರೊಡನೆ ಭೂಮಿಯಮೇಲೆ ೧೧೦೦೦ ವರ್ಷ ಅವತರಿಸಿದ್ದ ಕಾಲದಲ್ಲಿ, ವೈಕುಂಠದಲ್ಲಿ ವಿಷ್ಣುಮಂದಿರದಲ್ಲಿ ವಿಷ್ಣು ಹಾಜರಿರಲಿಲ್ಲವೇ ಏನು ? ಏಕಕಾಲದಲ್ಲಿ ಇಲ್ಲಿಯೂ ಇದ್ದು ಅಲ್ಲಿಯೂ ಇದ್ದನಷ್ಟೆ. ಈ ಅಭಿಪ್ರಾಯವನ್ನೇ ಈಶಾವಾಸ್ಯೋಪನಿಷತ್ತಿನ ನಾಂದೀ ಶ್ಲೋಕವೂ ಸಮರ್ಥಿಸುತ್ತದೆ.

> ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ ।
> ಪೂರ್ಣಸ್ಯಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥

ಪೂರ್ಣ ಅಥವಾ ಅನಂತರದಲ್ಲಿ ಪೂರ್ಣವನ್ನು ತೆಗೆದ ಮೇಲೆ. ಉಳಿಯುವುದೂ ಪೂರ್ಣ(ಅನಂತ)ವೇ ; $\infty - \infty = \infty$.

(೨) ರಾಜ್ಞಃ ಪುತ್ರಾಮಹಾತ್ಮಾನಶ್ಚತ್ವಾರೋಜಜ್ಞಿರೇಪೃಥಕ್।
ಗುಣವಂತೋsನುರೂಪಾಶ್ಚರುಚ್ಯಾಪ್ರೋಷ್ಠಪದೋಪಮಾಃ॥ ಬಾಲಕಾಂಡ,೧೮-೧೪

ದಶರಥನ ನಾಲ್ವರು ಮಕ್ಕಳು ಪೂರ್ವಾಭಾದ್ರ ಉತ್ತರಾಭಾದ್ರ ನಕ್ಷತ್ರಗಳಂತೆ ಕಂಗೊಳಿಸುತ್ತಿದ್ದರು. ಧ್ರುವ ನಕ್ಷತ್ರ(Pole star )ದ ಬಳಿ, ಪೆಗಸಸ್ ಚಚ್ಚೌಕ (the Great Square of Pegasus) ಎಂಬ ತಾರಾಮಂಡಲವಿದೆ. ಸುಮಾರಾಗಿ ಚಚ್ಚೌಕದ ಆಕೃತಿಯಲ್ಲಿರುವ ಈ ನಾಲ್ಕು ನಕ್ಷತ್ರಗಳ ಪೈಕಿ, ಮೂರು ಪೂರ್ವಾಭಾದ್ರ ನಕ್ಷತ್ರ ರಾಶಿಗೆ ಸೇರಿ, ನಾಲ್ಕನೆಯದು ಉತ್ತರಾಭಾದ್ರ ರಾಶಿಯ ಪ್ರಥಮ (ಮುಖ್ಯ) ತಾರೆಯಾಗಿದೆ. ದಶರಥನ ನಾಲ್ವರು ಮಕ್ಕಳನ್ನು ಈ ನಾಲ್ಕು ನಕ್ಷತ್ರಗಳಿಗೆ ಹೋಲಿಸಿದೆ. ಇಷ್ಟು ಮಾತ್ರವಲ್ಲದೆ, ಮುಂದಿನ ಶ್ಲೋಕಗಳಲ್ಲಿ ಲಕ್ಷ್ಮಣನು ಯಾವಾಗಲೂ ರಾಮನನ್ನೇ ಅನುಸರಿಸುತ್ತಲಿದ್ದನೆಂದೂ, ಶತ್ರುಘ್ನನು ಭರತನನ್ನೇ ಅನುಸರಿಸುತ್ತಲಿದ್ದನೆಂದೂ, ಲಕ್ಷ್ಮಣನನ್ನು ಬಿಟ್ಟು ರಾಮನು ನಿದ್ರಿಸುತ್ತಿರಲಿಲ್ಲವೆಂದೂ ಹೇಳಿದೆ. (ನ ಚ ತೇನ ವಿನಾ ನಿದ್ರಾಂ ಲಭತೇ ಪುರುಷೋತ್ತಮಃ, ೧೮-೨೯). ಪೆಗಸಸ್‌ಚೌಕದ ನಕ್ಷತ್ರಗಳು ನಿಖರವಾದ ಚೌಕದ ಆಕೃತಿಯಲ್ಲಿಲ್ಲ. ಎರಡು ನಕ್ಷತ್ರಗಳು ಒಂದಕ್ಕೊಂದು ಸ್ವಲ್ಪ ಸಾಮೀಪ್ಯತೆಯನ್ನು ಪಡೆದು ಇನ್ನೆರಡು ನಕ್ಷತ್ರಗಳು ಒಂದಕ್ಕೊಂದು

ಸಾಮೀಪ್ಯತೆಯನ್ನು ಪಡೆದಿವೆ. ರಾಮಲಕ್ಷ್ಮಣರ ಮತ್ತು ಭರತ ಶತ್ರುಘ್ನರ ಹೊಂದಾಣಿಕೆಗೆ ಉಪಮಾನವು ಒಪ್ಪುತ್ತದೆ. ಅಷ್ಟು ಮಾತ್ರವಲ್ಲ, ಆಕಾಶದಲ್ಲಿ ಅಥವಾ ನಕ್ಷತ್ರಗಳ ನಕ್ಷೆಗಳಲ್ಲಿ (stars charts) ಗಮನಿಸಿ ನೋಡಿದಲ್ಲಿ, $\alpha$ Andromeda (ಉತ್ತರಾಭಾದ್ರ) ಮತ್ತು $\gamma$ Pegasus ಎಂಬ ನಕ್ಷತ್ರಗಳನ್ನು ಸೇರಿಸುವ ರೇಖೆಯು (mathematically, the great circle through them) ಧ್ರುವ ನಕ್ಷತ್ರದ ಮೂಲಕ ಹಾದು ಹೋಗುತ್ತದೆ. ಆದ್ದರಿಂದ ಈ ಎರಡು ನಕ್ಷತ್ರಗಳ ವಿಷುವೋನ್ನತಿಯು* (right ascension) ಒಂದೇ ಆಗಿದೆ. ಆದ್ದರಿಂದ, ರಾಮಲಕ್ಷ್ಮಣರಂತೆ, ಈ ಎರಡು ನಕ್ಷತ್ರಗಳೂ ಒಟ್ಟಿಗೆ ಉದಯಿಸಿ ಒಟ್ಟಿಗೆ ಅಸ್ತಮಿಸುತ್ತವೆ. ಚೌಕದ ಇನ್ನೆರಡು ನಕ್ಷತ್ರಗಳಿಗೆ ಈ ಗುಣವು ಅಷ್ಟು ನಿಖರವಾಗಿಲ್ಲದಿದ್ದರೂ, ಸ್ಥೂಲವಾಗಿ ಇರುತ್ತದೆ.

ಮೇಲಿನ ಶ್ಲೋಕದಲ್ಲಿರುವ ಉಪಮಾನದಲ್ಲಿ ವಾಲ್ಮೀಕಿಯು ಎಷ್ಟು ಅರ್ಥವನ್ನು ತುಂಬಿದ್ದಾನೆ! ಉಪಮಾನವು ಎಷ್ಟು ಸಮಂಜಸವಾಗಿ ಅನುಪಮವಾಗಿದೆ!

(೩) **ತ್ರಿಶಂಕುವೃತ್ತಾಂತ**—ಬಾಲಕಾಂಡ, ೬೦-೨೮-೩೨ ವಿಶ್ವಾಮಿತ್ರ ಋಷಿಯ ಪ್ರಭಾವದಿಂದ ತ್ರಿಶಂಕುಮಹಾರಾಜನು ಸಶರೀರನಾಗಿ ಸ್ವರ್ಗವನ್ನು ಸೇರಿ, ಕಡೆಗೆ ದೇವತೆಗಳಿಗೂ ವಿಶ್ವಾಮಿತ್ರನಿಗೂ ಆದ ಒಪ್ಪಂದದಂತೆ, ದಕ್ಷಿಣದಲ್ಲಿ ತಲೆಕೆಳಗಾಗಿ ನಿಂತಿರುತ್ತಾನೆ. ವಿಶ್ವಾಮಿತ್ರನಿಂದ ಸೃಷ್ಟಿಸಲ್ಪಟ್ಟ ಹಲವು ನಕ್ಷತ್ರಗಳು ಆತನನ್ನೇ ಅನುಸರಿಸಿವೆ. ಖಗೋಳದ ಉತ್ತರ ಧ್ರುವದ ಬಳಿ ನಕ್ಷತ್ರಗಳಿರುವಂತೆ, ಈ ನಕ್ಷತ್ರಗಳು ದಕ್ಷಿಣ ಧ್ರುವದ ಬಳಿ ಇವೆ. ಸಪ್ತರ್ಷಿಮಂಡಲ (Ursa Major. the Great Bear)ದ ಕಡೆಯ ಎರಡು ತಾರೆಗಳನ್ನು (ಪುಲಹ, ಕ್ರತು ಎಂಬ ನಕ್ಷತ್ರಗಳು) ಸೇರಿಸುವ ರೇಖೆಯು (the pointer) ಧ್ರುವನಕ್ಷತ್ರದ ಬಳಿ ಹಾದುಹೋಗುತ್ತದೆಂಬ ವಿಚಾರವು ಎಲ್ಲರಿಗೂ ತಿಳಿದ ವಿಷಯವಾಗಿದೆ. (Crux or Southern Cross) ಎಂಬ ತಾರಾಮಂಡಲದ ಪಾದ ಮತ್ತು ಶಿರಸ್ಸಿನಲ್ಲಿರುವ (ತೃತೀಯಾ ಮತ್ತು ಪ್ರಥಮ ತಾರೆಗಳು) ನಕ್ಷತ್ರಗಳನ್ನು ಸೇರಿಸುವ ರೇಖೆಯು ದಕ್ಷಿಣ ಧ್ರುವದ ಮೂಲಕ ಹಾದು ಹೋಗುತ್ತದೆ.

## ಅಯೋಧ್ಯಾಕಾಂಡ

(೪) ತಂ ಚಂದ್ರಮಿವ ಪುಷ್ಯೇಣಯುಕ್ತ ಧರ್ಮಭೃತಾಂ ವರಂ|
ಯೌವರಾಜ್ಯೇನಿಯೋಕ್ತಾಸ್ಮಿ ಪ್ರೀತಃ ಪುರುಷಪುಂಗವಂ||

ಅಯೋಧ್ಯಕಾಂಡ, ೨-೧೩

ಪುಷ್ಯ ನಕ್ಷತ್ರದಿಂದೊಡಗೂಡಿದ ಚಂದ್ರನಂತೆ ವಿರಾಜಿಸುವ ರಾಮನನ್ನು ಯೌವರಾಜ್ಯದಲ್ಲಿರಿಸುವೆನೆಂದು ದಶರಥನು ಹೇಳುವ ಮಾತು. ಪುಷ್ಯ ಎಂಬುದು ಅಷ್ಟೊಂದು

---

* ಇದರ ವಿವರಣೆಗೆ ಖಗೋಳ ಶಾಸ್ತ್ರ ಗ್ರಂಥಗಳನ್ನು ನೋಡಬೇಕು.

ಪ್ರಕಾಶಮಾನವಾದ ನಕ್ಷತ್ರರಾಶಿಯಲ್ಲ, ಆದ್ದರಿಂದ ಚಂದ್ರನು ಇತರ ಪ್ರಕಾಶಮಾನ ವಾದ ನಕ್ಷತ್ರರಾಶಿಗಳಲ್ಲಿ (ಉದಾ: ಮೃಗಶಿರಾ, ಪುನರ್ವಸು) ಕಾಣಿಸುವುದಕ್ಕಿಂತ ಹೆಚ್ಚಾದ ಪ್ರಭೆಯೊಡನೆ ಪುಷ್ಯನಕ್ಷತ್ರದಲ್ಲಿರುವಾಗ ಕಾಣಿಸುತ್ತಾನೆ. ಕಡಮೆ ಪ್ರಕಾಶ ವುಳ್ಳ ನಕ್ಷತ್ರಗಳಲ್ಲಿ ಪುಷ್ಯವನ್ನೇ ಏಕೆ ಇಲ್ಲಿ ಕವಿಯು ಆರಿಸಿರುವನು ಎಂಬ ಪ್ರಶ್ನೆಗೆ ಉತ್ತರ ಖಗೋಳಶಾಸ್ತ್ರಕ್ಕೆ ಅನ್ವಯಿಸುವುದಿಲ್ಲ ಕಥಾಸಂದರ್ಭವನ್ನನುಸರಿಸಿ ಭವಿಷ್ಯ ಸೂಚಕವಾಗಿದೆ. ಪುಷ್ಯನಕ್ಷತ್ರದಲ್ಲಿ ಹುಟ್ಟಿದವನು ಭರತ. ಮುಂದೆ ರಾಮನ ಪಾದುಕೆಗಳನ್ನು ಸಿಂಹಾಸನದಲ್ಲಿಟ್ಟು, ಭರತನು ರಾಮನ ಹೆಸರಿನಲ್ಲಿ ರಾಜ್ಯಪಾಲನೆ ಮಾಡುವನು. ರಾಮ 'ಚಂದ್ರ'ನನ್ನು (ಆತನ ಪ್ರತಿನಿಧಿಯಾದ ಪಾದುಕೆಗಳನ್ನು) ಭರತನೊಡನೆ (ಪುಷ್ಯೇಣ ಯುಕ್ತಂ) ಯೌವರಾಜ್ಯದಲ್ಲಿ ನೇಮಿಸುವೆನು ಎಂಬ ಭವಿಷ್ಯಾರ್ಥವು ದಶರಥನಿಗೆ ಹೊಳೆಯದಿದ್ದರೂ, ಆ ಅರ್ಥಬರುವ ವಾಣಿಯು ದಶ ರಥನ ಬಾಯಿಂದ ಹೊರಬಿದ್ದಿತು.

(೫) ತ್ರಿಶಂಕುರ್ಲೋಹಿತಾಂಗಶ್ಚ ಬೃಹಸ್ಪತಿ ಬುಧಾವಪಿ।
ದಾರುಣಾಸ್ಸೋಮಮಭ್ಯೇತ್ಯ ಗ್ರಹಾಸ್ಸರ್ವೇವ್ಯವಸ್ಥಿತಾಃ॥

ಅಯೋಧ್ಯಾಕಾಂಡ, ೪೧-೧೧

ರಾಮನು ವನವಾಸಕ್ಕೆ ಹೊರಟ ದಿವಸ ಪುಷ್ಯನಕ್ಷತ್ರ, ಎಂದರೆ ಚಂದ್ರನು ಪುಷ್ಯದಲ್ಲಿದ್ದಾನೆ; ತ್ರಿಶಂಕು, ಅಂಗಾರಕ, ಬೃಹಸ್ಪತಿ, ಬುಧ ಇವು ಚಂದ್ರನಿಗೆ ಇದಿರಿನಲ್ಲಿ (in opposition) ದಕ್ಷಿಣ ದಿಕ್ಕಿನಲ್ಲಿವೆ [Mars, Jupiter and Mercury are in opposition with the Moon, in the direction of Trisanku [crux]]. ಗಣಿತಕ್ಕೆ ಸಂಬಂಧಿಸದ ಇತರ ವಿಶೇಷಾರ್ಥಗಳೂ ಈ ಶ್ಲೋಕಕ್ಕಿವೆ. ಅವು ಇಲ್ಲಿ ಪ್ರಕೃತವಲ್ಲ.

(೬) ತತಸ್ಸುಮಂತ್ರೇಣಗುಹೇನ ಚೈವ ಸಮೀಯತೂ ರಾಜಸುತಾವರಣ್ಯೇ।
ದಿವಾಕರಶ್ಚೈವ ನಿಶಾಕರಶ್ಚ ಯಥಾಂಬರೇ ಶುಕ್ರ ಬೃಹಸ್ಪತಿಭ್ಯಾಂ॥

ಅಯೋಧ್ಯಕಾಂಡ, ೯೯-೪೧

ಭರತನು ಸೇನಾಸಮೇತನಾಗಿ, ರಾಮನನ್ನು ಹುಡುಕಿಕೊಂಡು ಚಿತ್ರಕೂಟದ ಬಳಿ ಬಂದಿರುತ್ತಾನೆ, ಎಲ್ಲರೂ ರಾಮನು ಇರುವ ಸ್ಥಳವನ್ನು ಹುಡುಕುತ್ತಿದ್ದಾರೆ. ಆಗ ರಾಮಲಕ್ಷ್ಮಣರು ಸುಮಂತ್ರ ಮತ್ತು ಗುಹ ಎಂಬುವರೊಡನೆ ಅಂತರಿಕ್ಷದಲ್ಲಿ ಸೂರ್ಯಚಂದ್ರರು ಶುಕ್ರಬೃಹಸ್ಪತಿಗಳೊಡನೆ ಸಂಧಿಸಿದ ತೆರದಲ್ಲಿ ಸೇರಿದರು. ಸಮಂಜಸವಾದ ಅರ್ಥವನ್ನು ಕೊಡಬೇಕಾಗಿದೆ. ಇಲ್ಲಿ ರಾಮನನ್ನು ಸೂರ್ಯನಿಗೂ ಲಕ್ಷ್ಮಣನನ್ನು ಚಂದ್ರನಿಗೂ ಬೇರೆ ಬೇರೆಯಾಗಿ ಹೋಲಿಸುವುದಕ್ಕಿಂತ ರಾಮಲಕ್ಷ್ಮಣ ರಿಬ್ಬರನ್ನೂ ಒಂದುಗೂಡಿಸಿ ಒಮ್ಮೆ ಸೂರ್ಯನಿಗೂ ಒಮ್ಮೆ ಚಂದ್ರನಿಗೂ ಹೋಲಿಸು ವುದು ಉತ್ತಮ. ಸುಮಂತ್ರ ಗುಹರಿಬ್ಬರೂ ಪುಣ್ಯಾತ್ಮರು, ಅವರನ್ನು ಶುಕ್ರ ಬೃಹ ಸ್ಪತಿಗಳಿಗೆ ಹೋಲಿಸಿದೆ. ಯಾರು ಶುಕ್ರ, ಯಾರು ಬೃಹಸ್ಪತಿ ಎಂಬ ವಿಭಜನೆ

ಬೇಡ. ಗ್ರಹಗಳೆಲ್ಲಾ ಸೂರ್ಯನ ಸುತ್ತಲೂ ಸುತ್ತಿಬರುವಾಗ, ಸೂರ್ಯನಿಗೆ ಅತಿ ಸಮೀಪದಲ್ಲಿ ಬಂದಾಗ, ಅವು ಅಸ್ತವಾಗುತ್ತವೆ, ಎಂದರೆ ನಮಗೆ ಕಾಣಿಸುವುದಿಲ್ಲ. ಹಾಗೆ ಇಲ್ಲಿ ಸುಮಂತ್ರ ಗುಹರು ವೇಗವಾಗಿ ಬೆಟ್ಟವನ್ನು ಹತ್ತಿಬಿಟ್ಟು ರಾಮಲಕ್ಷ್ಮಣರ ಬಳಿ ಬಂದುಬಿಟ್ಟುದರಿಂದ, ಬೆಟ್ಟದ ಬುಡದಲ್ಲಿಯೇ ಇದ್ದ ಜನರಿಗೆ ಅಗೋಚರರಾದರು. ಇದು ಒಂದರ್ಥ. ರಾಮಲಕ್ಷ್ಮಣರೆಂಬ ಸೂರ್ಯನ ಬಳಿ ಸೇರಿ, ಆತನ ಅಧೀನದಲ್ಲಿ ನಿಂತರು ಎಂದು ಒಂದರ್ಥ. ಗ್ರಹಗಳು ಚಂದ್ರನ ಬಳಿ ಇರುವಾಗ, ಒಂದು ಅಪೂರ್ವ ವಾದಕಾಂತಿಯು (ಕೇವಲ ದೃಗ್ಗೋಚರ) ಗ್ರಹಗಳಿಗೆ ಉಂಟಾಗುತ್ತದೆ. ಅದರಂತೆ, ಇವರಿಬ್ಬರೂ ರಾಮ 'ಚಂದ್ರ'ನ ಬಳಿ ಬಂದು ಸೇರಿ ವಿರಾಜಿಸುತ್ತಿದ್ದರು, ಎಂದು ಒಂದರ್ಥ ಈ ಅಭಿಪ್ರಾಯಗಳೆಲ್ಲಾ ಒಟ್ಟುಗೂಡಿ ಬರುವಂತೆ, ರಾಮಲಕ್ಷ್ಮಣರನ್ನು ಒಮ್ಮೆ ಸೂರ್ಯನಿಗೂ ಒಮ್ಮೆ ಚಂದ್ರನಿಗೂ ಹೋಲಿಸಿದೆ.

## ಕಿಷ್ಕಿಂಧಾಕಾಂಡ

(೭) ಸತಯಾ ಶುಶುಭೇ ಶ್ರೀಮಾನ್ ಲತಯಾಕಂಠಸಕ್ತಯಾ ।
ವಿಪರೀತ ಇವಾಕಾಶೇ ಸೂರ್ಯೋ ನಕ್ಷತ್ರ ಮಾಲಯಾ ॥

ಕಿಷ್ಕಿಂಧಾಕಾಂಡ, ೧೨-೪೧.

ಲಕ್ಷ್ಮಣನು ಕೊರಳಿಗೆ ಹಾಕಿದ ಪುಷ್ಪಹಾರದಿಂದ ಸುಗ್ರೀವನು 'ವಿಪರೀತ ಆಕಾಶ'ದಲ್ಲಿ ಸೂರ್ಯನು ನಕ್ಷತ್ರಮಾಲೆಯೊಡನೆ ಶೋಭಿಸುವಂತೆ, ಶೋಭಿಸುತ್ತಿದ್ದನು. ಈ ಶ್ಲೋಕಕ್ಕೆ ಸಮಂಜಸವಾದ ಅರ್ಥವನ್ನು ಒದಗಿಸುವುದಕ್ಕೋಸ್ಕರ ವೈಯಾಕರಣಿಕರು ಏನೇನೋ ಸೂತ್ರಗಳನ್ನು ತಂದಿಟ್ಟು, 'ವಿಪರೀತ' ಎಂಬ ಪದಕ್ಕೆ ರಾತ್ರಿಯೆಂದೂ, 'ಸೂರ್ಯ' ಎಂಬ ಪದಕ್ಕೆ ಚಂದ್ರ ಎಂದೂ ಅರ್ಥ ಮಾಡಿದ್ದಾರೆ.

ಪರೀತಂತು ದಿವಾಪ್ರೋಕ್ತಃ, ವಿಪರೀತಂತು ಶರ್ವರೀ ।
ರಾಕಾಮಧ್ಯಗತಶ್ಚಂದ್ರಃ ಸೂರ್ಯ ಇತ್ಯಭಿಧೀಯತೇ ॥

ಇಷ್ಟು ಎಳೆದೆಳೆದು ಅರ್ಥ ಮಾಡಿಯೂ ಕೂಡ, ನಕ್ಷತ್ರಮಾಲೆ ಎಂಬ ಪದಕ್ಕೆ ವೈಯಾಕರಣಿಕರು ಅರ್ಥವನ್ನು ಒದಗಿಸಿಲ್ಲ. 'ಮಾಲೆ' ಅದು ಯಾವುದು ಎಂದು ಪ್ರಶ್ನಿಸಬೇಕಾಗುತ್ತದೆ. ವೈಯಾಕರಣಿಕರು ಕೊಟ್ಟಿರುವ ಅರ್ಥವು ಸರಿಯಲ್ಲವೆಂದೂ, ಸರಿಯಾದ ಅರ್ಥವು ಖಗೋಳಶಾಸ್ತ್ರದಿಂದ ದೊರಕುತ್ತದೆಯೆಂದೂ ತಿಳಿಸಬೇಕಾಗಿದೆ. ವೈಯಾಕರಣಿಕರ ಅರ್ಥವೇ ವಾಲ್ಮೀಕಿಯ ಅಭಿಪ್ರಾಯವಾಗಿದ್ದಲ್ಲಿ, ಸುಲಭವಾದ ರಮ್ಯವಾದ ಶೈಲಿಯಲ್ಲಿ ೨೪,೦೦೦ ಶ್ಲೋಕಗಳನ್ನು ಬರೆದ ವಾಲ್ಮೀಕಿಯು ಇದೊಂದು ಶ್ಲೋಕದಲ್ಲಿ ತೊಡಕಾದ ಯಾವುದೋ ವ್ಯಾಕರಣ ಸೂತ್ರಗಳನ್ನು ಅನುಸರಿಸಿ ಭಾಷಾ ಪ್ರಯೋಗವನ್ನು ಮಾಡಬೇಕಾದ ಅಗತ್ಯವೇನಿದ್ದಿರಬಹುದು? 'ನಿಷ್ಕಲ್ಮಷ ಇವಾಕಾಶೇ ಚಂದ್ರೋ ನಕ್ಷತ್ರ ಮಾಲಯಾ' ಎಂದು ಮುಂತಾಗಿ ಪದ್ಯವನ್ನು ಜೋಡಿಸಲು ಸಾಧ್ಯವಿರಲಿಲ್ಲವೇ!

ಮೇಘರಹಿತವಾಗಿ ಬೆಳುದಿಂಗಳಿಲ್ಲದ ರಾತ್ರಿಯಲ್ಲಿ ನಾವು ಆಕಾಶದ ಕಡೆಗೆ ದೃಷ್ಟಿಸಿ

ನೋಡಿದರೆ, ತೆಳುವಾದ ಮೇಘದೋಪಾದಿಯಲ್ಲಿ ಪಟ್ಟಿಯ (Belt) ಆಕಾರದಲ್ಲಿ ಹರಡಿರುವ ಜ್ಯೋತಿಯೊಂದು ಕಾಣಿಸುತ್ತದೆ. ಇದಕ್ಕೆ ಆಕಾಶಗಂಗೆ (Milky Way, Galaxy) ಎಂದು ಹೆಸರು. ಈ ಪಟ್ಟಿಯ ಉದ್ದಕ್ಕೂ ಬಹುದೂರದಲ್ಲಿ ಲಕ್ಷಾಂತರ ನಕ್ಷತ್ರಗಳಿದ್ದುಕೊಂಡು, ಬರಿಯ ಕಣ್ಣಿಗೆ ಈ ನಕ್ಷತ್ರಗಳು ಸ್ಪಷ್ಟವಾಗಿ ಕಾಣಿಸದಿರುವುದರಿಂದ, ತೆಳುವಾದ ಮೇಘದ ರೂಪವನ್ನು ಕೊಡುತ್ತವೆ ಈ ಪಟ್ಟಿಯು ವೃತ್ತಾಕಾರದಲ್ಲಿ ಸುತ್ತಲೂ ವ್ಯಾಪಿಸಿದೆ. ವಿಶ್ವದಲ್ಲಿರುವ ನಕ್ಷತ್ರ ಸಮುದಾಯಗಳ ಸ್ಥಾನಮಾನಗಳನ್ನು ನಿರ್ದೇಶಿಸಲು, ಈ ಆಕಾಶಗಂಗೆಯು ಬಹು ಮುಖ್ಯಪಾತ್ರವನ್ನು ವಹಿಸಿದೆ. ನಮ್ಮ ಸೂರ್ಯನೂ ಕೂಡ ವಿಶ್ವದಲ್ಲಿರುವ ಅನೇಕಾನೇಕ ನಕ್ಷತ್ರಗಳ ಪೈಕಿ ಒಂದು. ಇವೂ ಕೂಡ ಆಕಾಶಗಂಗೆಯ ನಕ್ಷತ್ರಸಮುದಾಯಕ್ಕೆ ಸೇರಿದೆ. ಆದರೆ ಪಟ್ಟಿಯ ಅಂಚಿನ ಮೇಲಿಲ್ಲ. ಪಟ್ಟಿಯನ್ನು ಒಂದು ದೊಡ್ಡ ಚಕ್ರಕ್ಕೆ ಹೋಲಿಸಿದರೆ, ಚಕ್ರದ ಕೇಂದ್ರದಿಂದ ಹೊರಡುವ ಒಂದು ತ್ರಿಜ್ಯ (Radius) ಅಥವಾ ಅರೆ (spoke)ಯ ಮೇಲೆ, ಸೂರ್ಯನು ಅಂಚಿಗೆ ಸ್ವಲ್ಪ ದೂರದಲ್ಲಿರುತ್ತಾನೆ. ಈ ಸೂರ್ಯನ ಕಂಠದ ಸುತ್ತಲೂ ಹಾಕಿದ ಹಾರದಂತಿದೆ ಆಕಾಶ ಗಂಗೆಯೆಂಬ ನಕ್ಷತ್ರ ಮಾಲೆ 'ಪರೀತ' ಎಂದರೆ ಪರಿಧಿ(perımeter)ಯುಳ್ಳದು, ವಿಪರೀತ ಎಂದರೆ ಪರಧಿರಹಿತವಾದುದು [ಸಾಮಾನ್ಯ ಭಾಷೆಯಲ್ಲಿ 'ವಿಪರೀತ' ಎಂದರೆ ಮಿತಿಮೀರಿದುದು ಎಂಬ ಅರ್ಥವು ಬಳಕೆಯಲ್ಲಿರುವುದು ಎಲ್ಲರಿಗೂ ತಿಳಿದಿದೆ] 'ವಿಪರೀತ ಆಕಾಶ' ಎಂದರೆ 'ಇಡೀ ವಿಶ್ವ'. ಸುಗ್ರೀವನ ಕತ್ತಿನಲ್ಲಿ ಇದ್ದ ಹಾರಕ್ಕೂ [ಸುಗ್ರೀವನು ಸೂರ್ಯ ಪುತ್ರ ಎಂಬುದೂ ಗಮನಿಸಬಹುದಾದ ವಿಷಯ], ಬ್ರಹ್ಮಾಂಡದಲ್ಲಿ ಸೂರ್ಯನ ಸುತ್ತಲೂ ಇರುವ ನಕ್ಷತ್ರ ಮಾಲೆ (ಆಕಾಶ ಗಂಗೆ)ಗೂ ಸಮಂಜಸವಾದ ಉಪಮಾನವೇರ್ಪಡುತ್ತದೆ.*

## ಸುಂದರಕಾಂಡ

(೮) ಸುಂದರಕಾಂಡವೆಂಬ ಹೆಸರು ಈ ಕಾಂಡಕ್ಕೆ ಅನೇಕ ಕಾರಣಗಳಿಂದ ಒಪ್ಪುತ್ತದೆ. ಕಥಾವಸ್ತುವಿನ ಸಮನಾದ ವಿಭಜನೆಯೂ ಸಹ ಈ ಕಾಂಡದ ಸೌಂದರ್ಯವನ್ನು ಹೆಚ್ಚಿಸುತ್ತದೆ. ಪ್ರಕೃತಲೇಖನಕ್ಕೆ ಸಂಬಂಧಪಡುವ ಎರಡು ವಿಚಾರಗಳನ್ನು ಮಾತ್ರ ಇಲ್ಲಿ ನಿರೂಪಿಸಲಾಗಿದೆ.

---

* ವಾಲ್ಮೀಕಿಗೆ ಇಷ್ಟೆಲ್ಲಾ ಖಗೋಳಶಾಸ್ತ್ರಜ್ಞಾನವಿದ್ದಿತೇ? ಇದೆಲ್ಲಾ ಪ್ರಕೃತ ಲೇಖಕನ ಕಲ್ಪನಾರ್ಥ ಎಂದು ಕರೆಯಬೇಡಿ, ಎಂದು ವಾಚಕರನ್ನು ಬೇಡುತ್ತೇನೆ. ವಾಲ್ಮೀಕಿಯು ಭೂತಭವಿಷ್ಯದ್ವರ್ತಮಾನಗಳನ್ನು ಅರಿಯತಕ್ಕ ಶಕ್ತಿಯುಳ್ಳ ಬ್ರಹ್ಮಜ್ಞಾನಿ. ಬ್ರಹ್ಮನ ವರಪ್ರಸಾದದಿಂದ, ಸರಸ್ವತೀದೇವಿಯು ವಾಲ್ಮೀಕಿ ಮಹರ್ಷಿಗಳ ಜಿಹ್ವೆಯಲ್ಲಿ ನಿಂತು ಗ್ರಂಥವನ್ನು ಬರೆಸಿದಳು ಎಂಬ ಆಸ್ತಿಕ್ಯ ಭಾವನೆಯಿಂದ ವಾಚಕರೆಲ್ಲರೂ ಈ ಲೇಖನವನ್ನು ಓದುತ್ತಾರೆಂದು ನಂಬಿದ್ದೇನೆ.

(i) ಪುಷ್ಪಕ ವಿಮಾನವು ಮೊದಲು ಕುಬೇರನಿಗೆ ಸೇರಿದ್ದು. ರಾವಣನು ಅದನ್ನು ಅಪಹರಿಸಿ ತಂದಿದ್ದನು. ಕುಬೇರನು ದಿಕ್ಪಾಲಕರಲ್ಲಿ ಒಬ್ಬನು. ದಿಕ್ಪಾಲಕ ರನ್ನು ಈಶ್ವರನಿಂದ ಆರಂಭಿಸಿ, ಪ್ರದಕ್ಷಿಣಾಕಾರವಾಗಿ ಈಶಾನ, ಇಂದ್ರ, ಅಗ್ನಿ, ಯಮ, ನಿಋತಿ, ವರುಣ, ವಾಯು, ಕುಬೇರ ಎಂದು ಎಣಿಸುವುದು ಸಂಪ್ರದಾಯ. ಆದ್ದರಿಂದ, ಕುಬೇರನು ಎಂಟನೆಯ ದಿಕ್ಪಾಲಕನು. ಪುಷ್ಪಕ ವಿಮಾನದ ವರ್ಣನೆಯು ೭, ೮, ೯ ನೇ ಸರ್ಗಗಳಲ್ಲಿ ಮೂರರಲ್ಲೂ ಇರುವುದಾದರೂ, ೮ ಶ್ಲೋಕಗಳುಳ್ಳ ೮ ನೇ ಸರ್ಗದಲ್ಲಿ ೮ನೇ ದಿಕ್ಪಾಲಕನ ವಾಹನದ ವರ್ಣನೆಯು ಪ್ರತ್ಯೇಕವಾಗಿ ಲಿಖಿತವಾಗಿದೆ ಈ ಸಂಖ್ಯಾಗುಣ ಬರುವ ಹಾಗೆ ಲೆಕ್ಕಮಾಡಿ ವಾಲ್ಮೀಕಿಯು ಗ್ರಂಥರಚನೆ ಮಾಡಿ ದ್ದಾನೆಯೋ ಎಂಬಂತಿದೆ.

(ii) ಸುಂದರಕಾಂಡದಲ್ಲಿ ಒಟ್ಟು ೬೮ ಸರ್ಗಗಳಿವೆ ಇದನ್ನು ನಾಲ್ಕು ಸಮ ಭಾಗ ಮಾಡಿದಲ್ಲಿ, ೧೭ನೆಯ ಸರ್ಗದಲ್ಲಿ ಹನುಮಂತನು ಸೀತಾದರ್ಶನವನ್ನು ಪಡೆದು ಆನಂದಪಟ್ಟ ವಿಷಯವೂ, ೩೪ ನೆಯ ಸರ್ಗದಲ್ಲಿ ಹನುಮಂತನು ಸೀತೆಗೆ ತಾನು ಯಾರೆಂಬುದನ್ನು ತಿಳಿಸಿ, ರಾಮಲಕ್ಷ್ಮಣರು ಸುಗ್ರೀವಾದಿಗಳೊಡನೆ ಕ್ಷಿಪ್ರದಲ್ಲಿ ಬಂದು ರಾವಣನನ್ನು ವಧಿಸುವರೆಂಬುದಾಗಿ ಸೀತೆಗೆ ಧೈರ್ಯಹೇಳಿದ ವಿಚಾರವೂ, ೫೧ನೆಯ ಸರ್ಗದಲ್ಲಿ ಹನುಮಂತನು ರಾವಣನಿಗೆ ಬುದ್ಧಿ ಹೇಳುತ್ತಾ, ಸೀತಾ ಮಾಹಾ ತ್ಮ್ಯವನ್ನು ತಿಳಿಸಿ ಎಚ್ಚರಿಕೆಯನ್ನು ಕೊಟ್ಟ ವಿಚಾರವೂ, ಸರ್ಗ ೬೮ರಲ್ಲಿ ಹನು ಮಂತನು ಸೀತಾವೃತ್ತಾಂತವನ್ನು ರಾಮನಿಗೆ ಅರುಹಿ ಮುಗಿಸಿದ ವಿಚಾರವೂ ವರ್ಣಿತವಾಗಿದೆ. ಹನುಮಂತನ ಗುಣಪರಾಕ್ರಮಗಳನ್ನು ನಿರೂಪಿಸುವ ಈ ಕಾಂಡಕ್ಕೆ ಹನುಮತ್ಕಾಂಡವೆಂದೂ ಹೆಸರಿಡಬಹುದು. ಹನುಮಂತನ ಮಹತ್ಕಾರ್ಯವು ಈ ಪ್ರಕಾರ ನಾಲ್ಕು ಸಮಭಾಗಗಳಲ್ಲಿ ಸುಂದರಕಾಂಡದಲ್ಲಿ ಲಿಖಿತವಾಗಿದೆ.

(೯) ಧೂಪ್ಯಮಾನಾಂ ಗ್ರಹೇಣೇವ ರೋಹಿಣೀಂ ಧೂಮಕೇತುನಾ

ಸುಂದರಕಾಂಡ, ೧೯-೯.

ರೋಹಿಣಿ ಎಂಬ ನಕ್ಷತ್ರವನ್ನು ಧೂಮಕೇತು ಗ್ರಹವು ಪೀಡಿಸುವಂತೆ (ರಾವ ಣನು ಸೀತೆಯನ್ನು ಪೀಡಿಸುತ್ತಿದ್ದನು). ಧೂಮಕೇತುಗಳನ್ನು (comets) ಗ್ರಹ ಗಳೆಂದು ಕರೆಯುವ ವಾಡಿಕೆ ಇಲ್ಲ. ಧೂಮಕೇತುಗಳೂ ನವಗ್ರಹಗಳಂತೆಯೇ ಸೂರ್ಯನ ಆಕರ್ಷಣೆಯ ಬಲದಿಂದ ಸೂರ್ಯನ ಸುತ್ತಲೂ ಪ್ರದಕ್ಷಿಣ ಮಾಡುವ ವಸ್ತುಗಳಾದ್ದರಿಂದ, ಒಂದು ವೇಳೆ ಇವನ್ನೂ ಗ್ರಹಗಳೆಂದು ಕರೆದರೆ ತಪ್ಪಾಗುವುದಿಲ್ಲ. ಅದರಂತೆ, ಇಲ್ಲಿ ಧೂಮಕೇತುವನ್ನು ಗ್ರಹವೆಂದು ಕವಿಯು ವರ್ಣಿಸಿದ್ದಾನೆ.

(೧೦) ಪೌರ್ಣಮಾಸೀಮಿವ ನಿಶಾಂ ರಾಹುಗ್ರಸ್ತೇಂದುಮಂಡಲಾಂ

ಸುಂದರಕಾಂಡ, ೧೯-೧೫.

ರಾಹುಗ್ರಸ್ತವಾದ ಚಂದ್ರಮಂಡಲವುಳ್ಳ ಪೌರ್ಣಿಮೆಯ ರಾತ್ರಿ. ಗ್ರಹಣಗಳ

ವಿಚಾರಗಳನ್ನು ಮೊದಲು ಅರಿತುದು ಚೀಣಾದೇಶದಲ್ಲೋ, ಈಜಿಪ್ಟ್‌ದೇಶದಲ್ಲೋ ಎಂದು ಹೇಳುವವರು ತ್ರೇತಾಯುಗದ ಗ್ರಂಥವಾದ ರಾಮಾಯಣದಲ್ಲಿ ರಾಹುಗ್ರಸ್ತ ಚಂದ್ರಗ್ರಹಣದ ವಿಚಾರವಿರುವುದನ್ನು ಗಮನಿಸಬೇಕು.

(೧೧) ಪ್ರದೀಪ್ತ ಲಾಂಗೂಲಕೃತಾರ್ಚಿಮಾಲೀ
ಪ್ರಕಾಶತಾದಿತ್ಯ ಇವಾರ್ಚಿ ಮಾಲೀ

ಸುಂದರಕಾಂಡ, ೫೩-೪೪

ಹನುಮಂತನ ಬಾಲಕ್ಕೆ ರಾಕ್ಷಸರು ಹಚ್ಚಿದ ಬೆಂಕಿಯ ವರ್ಣನೆ. ಬರಿಯ ಕಣ್ಣಿಗೆ ದುಂಡಗೆ ಕಂಡರೂ, ಸೂರ್ಯನ ಸುತ್ತಲೂ ಹೊರವಲಯದಲ್ಲಿ ಜ್ವಾಲೆಗಳು ಸೂರ್ಯನ ಶರೀರದಿಂದ ಮೇಲಕ್ಕೆದ್ದು, ಅಲ್ಲಲ್ಲೇ ಲಕ್ಷಾಂತರ ಮೈಲಿಗಳಷ್ಟು ವ್ಯಾಪಿಸಿವೆ. ಒಲೆಯಲ್ಲಿ ಜ್ವಾಲೆಗಳು ಮೇಲಕ್ಕೂ ಕೆಳಕ್ಕೂ ಕುಣಿಯುವಂತೆ, ಸೂರ್ಯ ಮಂಡಲದ ಜ್ವಾಲೆಗಳು ಮೇಲಕ್ಕೂ ಕೆಳಕ್ಕೂ ಬರುತ್ತ, ಕ್ಷಣ ಕ್ಷಣಕ್ಕೂ ಆಕಾರ ಗಾತ್ರಗಳನ್ನು ಬದಲಾಯಿಸಿಕೊಳ್ಳುತ್ತ, ಸುತ್ತಲೂ ಪ್ರಸರಿಸಿವೆ. ಈ ಜ್ವಾಲೆಗಳಿಗೆ Solar Prominences= ಸೂರ್ಯೋನ್ನತ ಜ್ವಾಲೆಗಳು ಎಂದು ಹೆಸರು. 'ಆದಿತ್ಯನ ಅರ್ಚಿಮಾಲೀ' ಎಂಬುದಕ್ಕೆ ಈ ಜ್ವಾಲೆಗಳು ಎಂಬುದು ಸಮಂಜಸವಾದ ಅರ್ಥ. ಸೂರ್ಯೋನ್ನತ ಜ್ವಾಲೆಗಳು ಎಂದು ಶ್ರೀಮಾನ್ ನಂ. ವೆಂಕಟೇಶೈಂಗಾರ್ಯರು ಅವರ 'ಜ್ಯೋತಿರ್ವಿನೋದಿನಿ' ಎಂಬ ಪುಸ್ತಕದಲ್ಲಿ ಪದಪ್ರಯೋಗಮಾಡಿದ್ದಾರೆ. ಇದಕ್ಕಿಂತಲೂ, ವಾಲ್ಮೀಕಿಯ 'ಅರ್ಚಿಮಾಲೀ' ಎಂಬ ಪದವು ಮುದ್ದಾಗಿದೆ, ಸೂರ್ಯನ ಸುತ್ತಲೂ ಇಂಥ ಜ್ವಾಲಾ ಮಾಲೆ ಇದೆ ಎಂಬ ಅಭಿಪ್ರಾಯವು ಇಲ್ಲಿ ವ್ಯಕ್ತಪಡುತ್ತದೆ.

## ಯುದ್ಧಕಾಂಡ

(೧೨) ಬಿಡಿ, ಹತ್ತು, ನೂರು, ಸಾವಿರ (ಏಕ, ದಶಕ, ಶತಕ, ಸಹಸ್ರ) ಇತ್ಯಾದಿ ಕ್ರಮದಿಂದ ಸಂಖ್ಯೆಗಳನ್ನು ಬರೆಯತಕ್ಕ ಕ್ರಮವು ಈಗ ಎಲ್ಲೆಲ್ಲಿಯೂ ಬಳಕೆಯಲ್ಲಿದೆ. ಇದಕ್ಕೆ ದಾಶಮಿಕ ಸಂಖ್ಯಾಕ್ರಮ (Decimal Scale of Notation) ಎಂದು ಹೆಸರು. ಮೊನ್ನೆ ಮೊನ್ನೆಯವರೆಗೂ ಇದನ್ನು Hindu-Arabic Scale of Numeration ಎಂದು ಕರೆಯುತ್ತಾ, ಈ ಕ್ರಮವನ್ನು ಸೃಷ್ಟಿ ಮಾಡಿದ ಕೀರ್ತಿಯನ್ನು ಭಾರತೀಯರಿಗೂ ಅರಬ್ಬರಿಗೂ ಒಟ್ಟುಗೂಡಿಸಿ, (ಪಾಶ್ಚಾತ್ಯ) ಚರಿತ್ರಕಾರರು ಕೊಡುತ್ತಿದ್ದರು. ಪಾಶ್ಚಾತ್ಯ ದೇಶಗಳಲ್ಲಿ, ಸುಮಾರು ಕ್ರಿ. ಶ. ೧೨ ನೆಯ ಶತಮಾನದವರೆಗೂ ಈ ಕ್ರಮದ ತಿಳಿವಳಿಕೆ ಇಲ್ಲದೆ, ಗಣಿತದ ಬೆಳವಣಿಗೆಯು ಬಹಳ ಸಂಕುಚಿತವಾಗಿತ್ತು. ಇಂಡಿಯಾ ದೇಶದಿಂದ ಪಾಶ್ಚಾತ್ಯ ದೇಶಗಳಿಗೆ ಇದರ ಜ್ಞಾನವನ್ನು ಕೊಂಡೊಯ್ದವರು ಅರಬ್ಬರೆಂದೂ, ಈ ಕ್ರಮವನ್ನು ಜಾರಿಗೆ ತಂದ ಕೀರ್ತಿ ಭಾರತೀಯರಿಗೇ ಸೇರಿದ್ದೆಂದೂ ಈಗ ಎಲ್ಲರೂ ಒಪ್ಪಿಕೊಳ್ಳುತ್ತಾರೆ. ವಾಲ್ಮೀಕಿ ರಾಮಾಯಣದಲ್ಲಿ* ದಾಶಮಿಕ

* ರಾಮಾಯಣದ ಕಾಲ ತ್ರೇತಾಯುಗ. ಕಲಿಯುಗದಲ್ಲಿ ಈಗ ೫೦೦೦ ವರ್ಷಗಳಿಗೆ ಮೇಲ್ಪಟ್ಟು ಕಳೆದು ಹೋಗಿವೆ. ಅದಕ್ಕೆ ಹಿಂದೆ ದ್ವಾಪರಯುಗ ೮೬೪,೦೦೦ ವರ್ಷಗಳು. ಅದಕ್ಕೆ ಹಿಂದೆ ತ್ರೇತಾಯುಗ ಎಂಬುದು ಆಸ್ತಿಕ ಮತ.

ಸಂಖ್ಯಾಕ್ರಮವನ್ನು ಅನುಸರಿಸಿ ಹೇಳಲ್ಪಡುವ ಸಂಖ್ಯೆಗಳು ಅಲ್ಲಲ್ಲೇ ದೊರಕುತ್ತವೆ. ಲಂಕಾಪಟ್ಟಣವನ್ನು ಜಯಿಸಲು ಹೋದ ಕಪಿ ಸೈನ್ಯದ ಸಂಖ್ಯೆಯನ್ನು ಕವಿಯು ಶುಕನೆಂಬ ಚಾರನ ಬಾಯಿಂದ ರಾವಣನಿಗೆ ನಿರೂಪಿತವಾದ ರೀತಿಯಲ್ಲಿ ವರ್ಣಿಸಿದ್ದಾನೆ. ದಾಶಮಿಕ ಸಂಖ್ಯಾಕ್ರಮವು ಸ್ಪಷ್ಟವಾಗಿದೆ.

ಶತಂ ಶತಸಹಸ್ರಾಣಾಂ ಕೋಟಿಮಾಹುರ್ಮನೀಷಿಣಃ
ಶತಂ ಕೋಟಿ ಸಹಸ್ರಾಣಾಂ ಶಂಖ ಇತ್ಯಭಿಧೀಯತೇ
ಶತಂ ಶಂಖ ಸಹಸ್ರಾಣಾಂ ಮಹಾಶಂಖಮಿತಿಸ್ಮೃತಂ
ಮಹಾಶಂಖ ಸಹಸ್ರಾಣಾಂ ಶತಂ ಬೃಂದಮಿತಿಸ್ಮೃತಂ
ಶತಂ ಬೃಂದ ಸಹಸ್ರಾಣಾಂ ಮಹಾಬೃಂದಮಿತಿಸ್ಮೃತಂ
ಮಹಾ ಬೃಂದಸಹಸ್ರಾಣಾಂ ಶತಂ ಪದ್ಮಮಿತಿಸ್ಮೃತಂ
ಶತಂ ಪದ್ಮ ಸಹಸ್ರಾಣಾಂ ಮಹಾಪದ್ಮಮಿತಿಸ್ಮೃತಂ
ಮಹಾ ಪದ್ಮ ಸಹಸ್ರಾಣಾಂ ಶತಂ ಖರ್ವಮಿಹೋಚ್ಯತೇ
ಶತಂ ಖರ್ವ ಸಹಸ್ರಾಣಾಂ ಮಹಾ ಖರ್ವಮಿತಿಸ್ಮೃತಂ
ಮಹಾಖರ್ವ ಸಹಸ್ರಾಣಾಂ ಸಮುದ್ರಮಭಿಧಿಯತೇ
ಶತಮೋಘ ಸಹಸ್ರಾಣಾಂ ಮಹೌಘ ಇತಿ ವಿಶ್ರುತಃ

ಯುದ್ಧಕಾಂಡ, ೨೮. ೩೪-೩೯

100 ಲಕ್ಷ $= 1$ ಕೋಟಿ $= 10^{7}$

ಲಕ್ಷ $(=10^{5})$ ಕೋಟಿ $= 1$ ಶಂಖ $= 10^{12}$

ಲಕ್ಷ ಶಂಖ $= 1$ ಮಹಾಶಂಖ $= 10^{17}$

ಲಕ್ಷ ಮಹಾ ಶಂಖ $= 1$ ಬೃಂದ $= 10^{22}$

ಲಕ್ಷ ಬೃಂದ $= 1$ ಮಹಾಬೃಂದ $= 10^{27}$

ಲಕ್ಷ ಮಹಾ ಬೃಂದ $= 1$ ಪದ್ಮ $= 10^{32}$

ಲಕ್ಷ ಪದ್ಮ $= 1$ ಮಹಾಪದ್ಮ $= 10^{37}$

ಲಕ್ಷ ಮಹಾಪದ್ಮ $= 1$ ಖರ್ವ $= 10^{42}$

ಲಕ್ಷ ಖರ್ವ $= 1$ ಮಹಾಖರ್ವ $= 10^{47}$

ಸಾವಿರ ಮಹಾಖರ್ವ $= 1$ ಸಮುದ್ರ $= 10^{50}$

[ಇಲ್ಲಿ ಗುಣಕ ಸಂಖ್ಯೆಯು ಇದ್ದಕ್ಕಿದ್ದ ಹಾಗೆಯೇ ವ್ಯತ್ಯಾಸ ಪಡೆದಿರುವುದನ್ನು ಗಮನಿಸಬೇಕು. ಘಾತ (index)ದಲ್ಲಿ 50 ಎಂಬ ದುಂಡು ಸಂಖ್ಯೆಯು (round number)ಬರುವಂತೆ ಲೆಕ್ಕವೇರ್ಪಟ್ಟಿದೆ. ಘಾತದ ಭಾವನೆಯು ಆಕಾಲದಲ್ಲಿ ಇತ್ತೆಂದು ಇದು ಸೂಚಿಸಬಲ್ಲುದೇ ?]

ಲಕ್ಷ ಸಮುದ್ರ (ಓಘ) $= 1$ ಮಹೌಘ $= 10^{55}$.

ಏವಂ ಕೋಟಿ ಸಹಸ್ರೇಣ ಶಂಖಾನಾಂ ಚ ಶತೇನ ಚ
ಮಹಾ ಶಂಖ ಸಹಸ್ರೇಣ ತಥಾ ಬೃಂದ ಶತೇನ ಚ
ಮಹಾ ಬೃಂದ ಸಹಸ್ರೇಣ ತಥಾ ಪದ್ಮ ಶತೇನ ಚ

ಮಹಾ ಪದ್ಮ ಸಹಸ್ರೇಣ ತಥಾ ಖರ್ವ ಶತೇನ ಚ
ಸಮುದ್ರೇಣ ಶತೇನೈವ ಮಹೌಘೇನ ತಥೈವ ಚ
ಏಷ ಕೋಟಿ ಮಹೌಘೇನ ಸಮುದ್ರ ಸದೃಶೇನ ಚ
ವಿಭೀಷಣೇನ ಸಚಿವೈಃ ರಾಕ್ಷಸೈಃ ಪರಿವಾರಿತಃ

ಯುದ್ಧಕಾಂಡ, ೨೮. ೩೯_೪೨

ಎಂದರೆ, ಕಪಿಸೈನ್ಯದ ಸಂಖ್ಯೆ = 100 ಕೋಟಿ + 100 ಶಂಖ + 1000 ಮಹಾ ಶಂಖ + 100 ಬೃಂದ + 1000 ಮಹಾಬೃಂದ + 100 ಪದ್ಮ + 1000 ಮಹಾಪದ್ಮ + 100 ಖರ್ವ + 100 ಸಮುದ್ರ + 100 ಮಹೌಘ + 1 ಕೋಟಿ ಮಹೌಘ + ವಿಭೀಷಣ ಮತ್ತು ಆತನ (ನಾಲ್ವರು) ಮಂತ್ರಿಗಳು. ವಿಲೋಮ ಕ್ರಮ (**reverse order**) ದಲ್ಲಿ ಬರೆದರೆ, ಒಟ್ಟು ಸೈನ್ಯ ಸಂಖ್ಯೆ=

$10^{62}+10^{57}+10^{52}+10^{44}+10^{40}+10^{34}+10^{30}+10^{24}+10^{20}+10^{14}+10^{10}$ (ವಿಭೀಷಣ ಮತ್ತು ಆತನ ಮಂತ್ರಿಗಳನ್ನು ಬಿಟ್ಟು).

(೧೩) ಕುಂಭಕರ್ಣ ಶಿರೋಭಾತಿ ಕುಂಡಲಾಲಂಕೃತಂ ಮಹತ್
ಆದಿತ್ಯೇಭ್ಯುದಿತೇ ರಾತ್ರೌ ಮಧ್ಯಸ್ಥ ಇವ ಚಂದ್ರಮಾಃ

ಯುದ್ಧಕಾಂಡ, ೬೭.೧೫೭

ಕುಂಡಲಾಭ್ಯಾಂತು ಯಸ್ಯೈತದ್ಭಾತಿ ವಕ್ತ್ರಂ ಶುಭೇಕ್ಷಣಂ
ಪುನರ್ವಸ್ವಂತರಗತಂ ಪೂರ್ಣಂ ಬಿಂಬಮಿವೈಂದವಂ

ಯುದ್ಧಕಾಂಡ ೭೧.೨೪

ಎರಡು ಶ್ಲೋಕಗಳೂ ಒಂದೇ ಉಪಮಾನವನ್ನು ಕುರಿತು ಹೇಳುತ್ತವೆ. ಮೊದಲನೆಯದರಲ್ಲಿ, ಹತನಾದ ಕುಂಭಕರ್ಣನ ಶಿರಸ್ಸು, ಎರಡನೆಯದರಲ್ಲಿ ಅತಿಕಾಯನ ಶಿರಸ್ಸು (ಹತನಾಗುವುದಕ್ಕೆ ಮುಂಚೆ), ಪುನರ್ವಸು (ಅದಿತಿದೇವಿಯ ಪುತ್ರರು) ನಕ್ಷತ್ರಗಳ ಮಧ್ಯೆ ಇರುವ ಪೂರ್ಣಚಂದ್ರನ ಬಿಂಬದಂತೆ, ಅವರ ಕರ್ಣಕುಂಡಲಗಳ ನಡುವೆ ಶೋಭಿಸುತ್ತಿತ್ತು. Castor and Pollux ಎಂಬ ಎರಡು ಪ್ರಕಾಶಮಾನವಾದ ನಕ್ಷತ್ರಗಳನ್ನು ಒಟ್ಟಿಗೆ ಪುನರ್ವಸು ನಕ್ಷತ್ರಗಳೆಂದು ಕರೆಯುತ್ತಾರೆ. ಇವೆರಡರ ಮಧ್ಯೆ ಚಂದ್ರನು ಬಂದರೆ ಹೇಗೋ ಹಾಗೆ, ಆ ರಾಕ್ಷಸನ ಪ್ರಕಾಶಮಾನವಾದ ಕರ್ಣಕುಂಡಲಗಳ ನಡುವೆ ಮಹದಾಕಾರವುಳ್ಳ ಆತನ ಶಿರಸ್ಸು ಶೋಭಿಸುತ್ತಿದ್ದಿತು.

**ಸಿ. ಎನ್. ಶ್ರೀನಿವಾಸಯ್ಯಂಗಾರ್**

---

* ಮಹಾಭಾರತ ಯುದ್ಧದಲ್ಲಿ ಎರಡು ಕಡೆಯೂ ಸೇರಿ, ಒಟ್ಟು ಸೈನ್ಯ ಸಂಖ್ಯೆ ೧೮ ಅಕ್ಷೌಹಿಣೀ. ಒಂದು ಅಕ್ಷೌಹಿಣೀ = ೧೮, ೭೦೦, ಮೇಲಿನ ಸಂಖ್ಯೆಗೆ ಹೋಲಿಸಿದರೆ, ಬಹಳ ಸಣ್ಣ ಸಂಖ್ಯೆ.

*

# ಸಿಕ್ ಮತ : ವಿಹಂಗಮ ನೋಟ

ಸಿಕ್ ಜನಾಂಗವನ್ನು ಪ್ರಪಂಚದ ಇತಿಹಾಸದಲ್ಲಿ ಅರಿಯದವರಿಲ್ಲ. ಇವರು ಅಸಮಾನಯೋಧರು; ಮತ್ತು ಭಾರತೀಯ ಸೈನ್ಯದಲ್ಲಿ ಇವರ ಸ್ಥಾನ ಅತಿಮುಖ್ಯವಾದುದು. ೧೯೧೪-೧೮ ಮತ್ತು ೧೯೩೯-೪೫ರಲ್ಲಿ ನಡೆದ ಭೀಕರ ಯುದ್ಧಗಳಲ್ಲಿ ಇವರು ತೋರಿಸಿದ ಶಕ್ತಿ, ಸಾಹಸ ಸಾಮಾನ್ಯವಾಗಿ ಎಲ್ಲರಿಗೂ ತಿಳಿದ ವಿಷಯವಾಗಿದೆ. ಇವರು ಮೂರ್ತಿ ಪೂಜಕರಲ್ಲ ಮತ್ತು ಒಳಜಾತಿಗಳ ನಂಕೋಲೆ ಇವರಲ್ಲಿ ತುಂಬಾ ಕಡಿಮೆ. ಈಗ ಇವರಿಗೆ ಮಠಾಧಿಪತಿಗಳು ಯಾರೂ ಇಲ್ಲ. ತಮ್ಮ ಪವಿತ್ರಗ್ರಂಥವಾದ 'ಆದಿಗ್ರಂಥ'ವನ್ನೇ ಇವರು ಗುರುವೆಂದು ಭಾವಿಸುತ್ತಾರೆ. ಎಲ್ಲಿ ಐದು ಜನ ಸಿಕ್ಕರು ಒಟ್ಟಿಗೆ ಸೇರುತ್ತಾರೋ ಅಲ್ಲಿ ತಮ್ಮ ಗುರು ಇರುವನೆಂದು ಇವರ ನಂಬಿಕೆ.

ಸಿಕ್ ಮತದ ಚರಿತ್ರೆಯಲ್ಲಿ ಎರಡು ಗಮನಾರ್ಹವಾದ ಕಾಲಗಳಿವೆ. ಗುರು ನಾನಕನಿಂದ ೫ನೇ ಗುರುವಾದ ಅರ್ಜುನನ ಕಾಲದವರೆಗೆ ಸಿಕ್ಕರು ಶಾಂತಿಪ್ರಿಯರಾಗಿದ್ದರು. ಮತದಲ್ಲಿ ಬಹಳ ಆಸಕ್ತಿಯುಳ್ಳವರಾಗಿದ್ದರು. ಅರ್ಜುನನ ಕಾಲದಿಂದಾಚೆಗೆ ಅವರು ಮತದ ರಕ್ಷಣೆಗಾಗಿ ರಣಪ್ರಿಯರಾದರು. ಕೊನೆಯ ಗುರುವಾದ ಗೋವಿಂದಸಿಂಗನ ಕಾಲದಲ್ಲಿ ಸಿಕ್ಕರು ಉದ್ದವಾಗಿ* ಕೂದಲನ್ನು ಬಿಡುವುದು, ಕಬ್ಬಿಣದ ಬಳೆಯನ್ನು ತೊಡುವುದು, ಕಠಾರಿಯನ್ನು ಸದಾ ಧರಿಸುವುದು, ತುಂಡಾದ ಚಡ್ಡಿ ಮತ್ತು ಬಾಚಣಿಗೆಯನ್ನು ಉಪಯೋಗಿಸುವುದು—ಇವುಗಳನ್ನು ಪ್ರಾರಂಭಿಸಿದರು. ಇವು ಅವರು ಕೈಕೊಂಡ ವೀರವ್ರತದ ಕುರುಹುಗಳು; ಅವರು ಯೋಧರಾದುದರ ಸೂಚನೆ. ಸಿಕ್ ಅಂದರೆ ಶಿಷ್ಯ ಎಂದು ಅರ್ಥ. ಮೇಲೆ ಹೇಳಿದ ಪರಿವರ್ತನೆಯಿಂದ ಅವರು 'ಸಿಂಗ್' (ಸಿಂಹ) ಎಂಬ ಪದವನ್ನು ತಮ್ಮ ಹೆಸರಿನ ಕೊನೆಗೆ ಸೇರಿಸಿಕೊಂಡರು.

ಒಂದು ನೋಟದಿಂದ ಭಾರತದ ಚರಿತ್ರೆಯಲ್ಲಿ ಮೊಗಲರ ಕಾಲವು ಬಹಳ ಮುಖ್ಯವೆಂದು ಹೇಳಿದರೆ ತಪ್ಪಾಗಲಾರದು. ಆಗಿನ ಚಿತ್ರಕಲೆ, ವಾಸ್ತುಶಿಲ್ಪ, ಆಡಳಿತ ಕ್ರಮ, ಸಂಗೀತ, ಉಡುಪು ಹಿಂದು ಮತ್ತು ಮುಸ್ಲಿಂ ಸಂಸ್ಕೃತಿಗಳ ಮಿಳಿತವನ್ನು ತೋರಿಸುತ್ತವೆ. ಮತೀಯವಿಚಾರದಲ್ಲೂ ಇದೇ ಭಾವನೆಯನ್ನು ನಾವು ಸ್ವಲ್ಪ ಮಟ್ಟಿಗೆ ಕಾಣಬಹುದು. ಮೊಗಲರ ಕಾಲದಲ್ಲಿ ಭಕ್ತಿ ಪಂಥವು ಮುಂದುವರಿಯಿತು. ಸುಮಾರು ೧೫ನೇ ಶತಮಾನದಿಂದ ಕ್ರಿ. ಶ. ೧೭ನೇ ಶತಮಾನದ ತನಕ ಪರಂಪರೆ

---

* The five K, s :
Kesh, kara, kangha, kach and khanda-History of the Sikhs by J. D. Cunningham, P 73.

ಯಾಗಿ ಸಾಧು ಸಂತರು ಭಕ್ತಿಮಾರ್ಗವನ್ನು ಜನರಿಗೆ ಬೋಧಿಸಿದರು. ನಾಮದೇವ, ರಾಮಾನಂದ (೧೪೦೦-೭೦) ಕಬೀರ್ (೧೪೪೦-೧೫೧೮) ಚೈತನ್ಯ, ದಾದು ಮೊದಲಾದವರು ಈ ಗುಂಪಿನ ಪ್ರಮುಖರು. ಮಹಾರಾಷ್ಟ್ರದ ರಾಮದಾಸ್, ತುಕಾರಾಂ, ಎಕನಾಥ್ ಮೊದಲಾದವರು ಕೂಡ ಈ ಗುಂಪಿಗೆ ಸೇರಿದವರು. ಇವರು ಜಾತಿ ಅಥವಾ ಕುಲ ಮುಖ್ಯವಲ್ಲ; ದೇವರಲ್ಲಿ ಭಕ್ತಿಯೇ ಮುಕ್ತಿಗೆ ಮಾರ್ಗವೆಂದು ಸಾರಿದರು: ಕೆಲವರು ವಿಗ್ರಹಪೂಜೆ, ದೇಹದಂಡನೆ, ತೀರ್ಥಯಾತ್ರೆ ಮೊದಲಾದುವುಗಳನ್ನು ಖಂಡಿಸಿದರು. ಕೆಲವರು ಹೆಂಗಸು ತನ್ನ ನಲ್ಲನಲ್ಲಿ ಯಾವ ಪ್ರೇಮವನ್ನು ತೋರುವಳೊ, ಅದೇ ಪ್ರೇಮವನ್ನು ತಮ್ಮ ದೇವನಲ್ಲಿ ತೋರಬೇಕೆಂದರು. ಮೀರ ಮತ್ತು ನಾನಕ್ ಇವರ ಗೀತೆಗಳಲ್ಲಿ ಈ ಭಾವವನ್ನು ನಾವು ಕಾಣಬಹುದು- ಸಿಕ್‌ಮತ ಈ ಭಕ್ತಿ ಪಂಥದ ಒಂದು* ಶಾಖೆ ಎಂದರೆ ತಪ್ಪಾಗಲಾರದು.

ಈ ಮತವನ್ನು ಸ್ಥಾಪಿಸಿದ ನಾನಖನು ಲಾಹೋರು ಜಿಲ್ಲೆಯ ತಾಲವಾಂಡಿ ಎಂಬ ಗ್ರಾಮದಲ್ಲಿ ಕ್ರಿ. ಶ. ೧೪೬೯ರಲ್ಲಿ ಹುಟ್ಟಿದನು. ನಾನಖನ ತಂದೆ ಕಾಳು ವ್ಯಾಪಾರದಿಂದ ಜೀವಿಸುತ್ತಿದ್ದನು ಅವನ ತಾಯಿಯ ಹೆಸರು ತೃಪ್ತಾ ಎಂದು. ಚಿಕ್ಕವನಾಗಿದ್ದಾಗಿನಿಂದಲೇ ನಾನಖನಿಗೆ ಮತೀಯ ವಿಷಯಗಳಲ್ಲಿ ಬಹಳ ಆಸಕ್ತಿ. ಕಾಳುವು ನಾನಖನಿಗೆ ಉಪನಯನ ಮಾಡಲು ಪ್ರಯತ್ನಿಸಿದನು. ಆದರೆ ನಾನಖನಿಗೆ ಅದರಲ್ಲಿ ನಂಬಿಕೆ ಇರಲಿಲ್ಲ. ಅವನಿಗೆ ಯಜ್ಞೋಪವೀತವನ್ನು ಕೊಡಲು ಹೋದಾಗ ಅವನು ಈ ಕೆಳಗೆ ಕಂಡ ವಚನವನ್ನು ಹೇಳಿದನಂತೆ :

ಕರುಣೆ ನಿನ್ನಯ ಹತ್ತಿಯಾಗಲಿ
ತೃಪ್ತಿಯಾಗಲಿ ದಾರವು
ಕರಣನಿಗ್ರಹವದರ ಗಂಟಿಲೊ
ತಿರಿಚು, ಸತ್ಯದ ಸಾರವು—
ಆತ್ಮಕಿಹುದೇ ಬೇರೆ ವಿಧ ಮಿಗಿ
ಲೆನ್ನಿಸುವ ಜನಿವಾರವು !
ಓ, ವಿಪ್ರನೆ ! ಕೊಡು ಅದಿದ್ದರೆ !
ಕೊರಳಿಗಾಗಲಿ ಹಾರವು !
ಹರಿಯದೆಂದಿಗು, ಮಾಸದೆಂದಿಗು
ಎಂದಿಗೂ ಅದು ಬೇಯದು !
ಓ ! ನಾನಖ ! ಇದನು ಧರಿಸುವ-
ನಾರ ಹರಕೆಯು ಕಾಯದು ?

ಭಾರತದ ರಾಜಕೀಯರಲ್ಲಿ ಅಂದು ಆಂದೋಳನವು ನಡೆಯುತ್ತಿದ್ದಿತು. ಬಾಬರನು ಭಾರತಕ್ಕೆ ನುಗ್ಗಿ ಕೊಲೆ, ರಕ್ತಪಾತ ನಡೆಸಿದನು. ಲೂದಿಗಳ ರಾಜ್ಯಪತನ

---

*ಪದಾರ್ಥಗಳನ್ನು ಅಂಗಡಿಯಲ್ಲಿ ತೂಕಮಾಡುವಾಗ ೧೩ ನೆಯ ಸಂಖ್ಯೆ(ತೇರಾ) ಬಂದಾಗಲೆಲ್ಲಾ, ನಾನಕನು ಆ ಸಂಖ್ಯೆಯನ್ನು ಮೆಲ್ಲನೆ ಅನೇಕ ಸಾರಿ ಉಚ್ಚರಿಸುತ್ತಿದ್ದನಂತೆ! ತೇರ, ಅಂದರೆ ' ನಿನ್ನ' ಎಂದರ್ಥ, Macauliffe, Vol. 1. P. 33.

ವಾಗಿತ್ತು. ಬಾಬರನ ಸಮಕಾಲೀನನಾದ ನಾನಕುನ ಮನಸ್ಸಿನ ಮೇಲೆ ಇವುಗಳು ಬಹಳ ಪರಿಣಾಮವನ್ನುಂಟುಮಾಡಿದವು. ಜನಗಳ ಅಸಹಾಯಕತೆ ಮತ್ತು ದುಸ್ಥಿತಿ ನಾನಕುನಿಗೆ ದುಃಖವನ್ನು ತಂದವು. ವ್ಯಸನದಿಂದ ಅವನ ಮನಸ್ಸು ಅದರ ಪರಿಣಾಮವಾಗಿ ಕದಡಿಹೋಗಿತ್ತೆಂದು ಈ ಕೆಳಗೆ ಕಂಡ ನಾನಕುನ ವಚನದಿಂದ ಗೊತ್ತಾಗುತ್ತದೆ.

ಇಂದಿನ ಯುಗವೊಂದು ಖಡ್ಗ ;
ರಾಜರೆಲ್ಲ ಕಟುಕರು.
ನ್ಯಾಯ ಧರ್ಮಗಳಿಗೆ ರೆಕ್ಕೆ
ಬಂದು ಓಡಿಹೋಗಿವೆ !
ಸಟಿಯ ಸಂಪೂರ್ಣ ಕಾಳ
ರಾತ್ರಿಯೆಲ್ಲು ಹಬ್ಬಿದೆ
ಸತ್ಯಚಂದ್ರನು ದಯವನ್ನೆ
ಕಣ್ಣು ಕಾಣದಾಗಿದೆ
ದಿಟವನರಸಿಯರಸಿ ಮನವು
ಕದಡಿ ಕಲಕಿ ಹೋಗಿದೆ.
ದುಗುಡದಿ ನಾನಳುತಲಿಹೆನು
ದಾರಿಯೇನು ಕಾಣದೆ
ಗರ್ವ ಡಂಬಗಳಿಗೆ ಮನವ
ಬಲಿಯನಿತ್ತ ಜನರಿಗೆ
ಹಾದಿಯೆಂತು ಮುಕ್ತಿಗೆ ?

ನಾನಕುನ ಸಮೀಪಬಂಧುವಾದ ಜಯರಾಮನು ಆಗ ರಾಜ್ಯವನ್ನಾಳುತ್ತಿದ್ದ ದವಲತ್ ಖಾನ್ ಲೂದಿಯ ಕೈಕೆಳಗೆ ಅಧಿಕಾರಿಯಾಗಿದ್ದನು. ಜಯರಾಮನ ಕೃಪೆಯಿಂದ ನಾನಕುನಿಗೆ ಲೆಕ್ಕ ಬರೆಯುವ ಕೆಲಸ ಸಿಕ್ಕಿತು. ಆದರೆ ನಾನಕುನಿಗೆ ಹಣ ಸಂಪಾದಿಸಿ ತನ್ನ ಜೀವನವನ್ನು ಸುಖವಾಗಿ ನಡೆಸಿಕೊಂಡು ಹೋಗುವ ಮನಸ್ಸು ಇರಲಿಲ್ಲ. ಒಂದು ದಿನ ಅವನು ತನ್ನಲ್ಲಿದ್ದ ಹಣ, ಕಾಸು, ಪದಾರ್ಥಗಳನ್ನೆಲ್ಲಾ ದಾನಮಾಡಿ ಫಕೀರನಾದನು. ಇದರ ಜೊತೆಗೆ ದವಲತ್ ಖಾನ್ ಲೂದಿಯ ಹಣವೂ ಹೋಯಿತು. ಆದರೆ ಅವನು ನಾನಕುನಿಗೆ ಯಾವ ಶಿಕ್ಷೆಯನ್ನೂ ವಿಧಿಸಲಿಲ್ಲ.

ಮೊದಲಿನಿಂದಲೂ ನಾನಕುನಿಗೆ ಸಂನ್ಯಾಸಿ ಮತ್ತು ಫಕೀರರ ಗುಂಪುಗಳಲ್ಲಿ ಬಹಳ ಆಸಕ್ತಿ. ಇವನು ದಕ್ಷಿಣ ಇಂಡಿಯಾ, ಬಾಗದಾದ್, ಸಿಲೋನ್ ಮುಂತಾದ ದೇಶಗಳಲ್ಲಿ ಸಂಚಾರ ಮಾಡಿದನಂತೆ. ಮಕ್ಕಾದಲ್ಲಿ ಒಂದು ಸಂಗತಿ - ಜರುಗಿತು. ನಾನಕುನು 'ಕಾಬ'ದ ಕಡೆಗೆ ಕಾಲು ಚಾಚಿ ಮಲಗಿಕೊಂಡನಂತೆ! ಅಲ್ಲಿದ್ದ ಕಾಜಿಯು ಇವನನ್ನು ಗದರಿಸಿ ಕಾಲನ್ನು ಬೇರೆ ಕಡೆಗೆ ತಿರಿಗಿಸಿದರೆ ಅಲ್ಲಿದ್ದ 'ಮಿಹಿರಬ್' ಕೂಡಾ ಅದೇ ಕಡೆಗೆ ತಿರಿಗಿತಂತೆ! ಅಂದರೆ ನಾನಕುನಿಗೆ ಮಕ್ಕದಲ್ಲಿಯೂ ಅನೇಕ ಜನ ಶಿಷ್ಯರು ಸಿಕ್ಕಿರಬಹುದೆಂದು ಊಹಿಸಬಹುದು. ಬೌದ್ಧ ಮತ, ಕ್ರಿಸ್ತ ಮತದಂತೆ ಸಿಕ್ ಮತವು ನ್ಯಾಯವಾದ ಮತ್ತು ಸರಳವಾದ ಜೀವನ, ಒಳ್ಳೆಯ ನಡತೆ, ಒಬ್ಬನೇ ಆದ ದೇವನಲ್ಲಿ ಅಚಲ ಭಕ್ತಿ—ಇವುಗಳೇ ಮಾನವನ ಮೋಕ್ಷಸಾಧನೆಗೆ ದಾರಿಗಳೆಂದು

ಸಾರಿತು. ಕಬೀರನಂತೆ ನಾನಕನು ಮಾನವನ ಕುಲ, ಜಾತಿ, ಕಸಬುಗಳಿಗೆ ಗಮನ ಕೊಡಲಿಲ್ಲ. ತೋರಿಕೆಯ ಆಟಾಟೋಪ, ಆಚಾರ, ಅನುಷ್ಠಾನಗಳಿಗೆ ಪ್ರಾಮುಖ್ಯತೆ ಕೊಡಲಿಲ್ಲ. ಅವನು ಮುಲ್ಲಾ, ಪಂಡಿತ, ಫಕೀರ, ಪಾಮರ, ಸಂನ್ಯಾಸಿ ಎಂಬ ಭೇದ ವಿಲ್ಲದೆ ಉಪದೇಶ ಮಾಡಿದನು. ಹಿಂದು ಮತ್ತು ಮಹಮ್ಮದಿಯ ಮತಗಳ ಮುಖ್ಯ ತತ್ತ್ವಗಳನ್ನು ಗ್ರಹಿಸಿ ಮನನ ಮಾಡಿಕೊಂಡ ನಾನಕನಿಗೆ ಅವುಗಳಿಂದ ತೃಪ್ತಿಯಾಗ ಲಿಲ್ಲ. ಅವನು ಆಗಾಗ ಕಬೀರನು ಹೇಳಿದ ಈ ವಾಕ್ಯವನ್ನು ಉಚ್ಚರಿಸುತ್ತಿದ್ದನು.

ಸೋದರನೆ, ಕುರಾನು ವೇದ
ಗಳು ಸಟೆ ; ವಿವಿಧ ಕಾತರದಿಂದ
ಮನವ ಬಿಡುಗಡೆ ಗೈಯ್ಯಲ
ವುಗಳಿಗಸಾಧ್ಯ.
ಆತ್ಮಸಂಯಮ, ವಿನಯ, ಪ್ರಾ
ರ್ಥನೆಯು, ನೆಟ್ಟಕಣ್,
ಹೃದಯ ಶೋಧನೆಗಳಿಂದವ
ದೊರೆವನಯ್ಯ !

ಈ ಕೆಳಗೆ ಹೇಳಿರುವ ನಾನಕನ ವಚನಗಳಲ್ಲಿ ಸಿಕ್ ಮತದ ತತ್ತ್ವಗಳು ಅಡಕ ವಾಗಿವೆ:

ಕಾವಿ ಕಾಷಾಯಗಳನುಟ್ಟರೆ,
ಯೋಗ ದಂಡವ ಹಿಡಿದು ನಡೆದರೆ,
ಮೈಗೆ ಬೂದಿಯ ಬಿಡದೆ ಬಳಿದರೆ,
ಮತವದೆಂದಿಗು ಅಲ್ಲವು !
ಕಿವಿಯೊಳಿರಿಸಿದ ಹತ್ತಕಡಕೊಳು
ಕ್ಷೌರ ಮಾಡಿದ ನುಣುಪು ತಲೆಯೊಳು
ಕೊಂಬು ಕಹಳೆಯ ಊದು-ದನಿಯೊಳು
ಮತವದೆಂದಿಗು ಇಲ್ಲವು !
ಬರಿಯ ಪದಗಳ ಕಂತೆಯಲ್ಲವು
ಮತದ ಒಳ ಜೀವಾಳವು !
ಎಲ್ಲರನು ಸಮತೆಯಿಂದಲಿ
ಕಾಣುವವನೆ ಮತೀಯನು !
ಗೋರಿ ಸುಡುಗಾಡುಗಳನಲೆದರೆ
ವಿವಿಧ ಭಂಗಿಗಳಲಿ ಕುಳಿತರೆ
ಬರಿದೆ ಏನನೊ ಧ್ಯಾನಿಸುತಿರೆ
ಮತವದೆಂದಿಗು ಅಲ್ಲವು !
ವಿವಿಧ ದೇಶವ ಸುತ್ತಿ ಬಂದರೆ
ಪುಣ್ಯ ತೀರ್ಥಗಳಲ್ಲಿ ಮಿಂದರೆ
ಮತವದೆಂದಿಗು ಅಲ್ಲವು !
ಜನದ ಮಲಿನತೆ ನಡುವೆ
ಘೇರೆಲೊ

ಪಾವನತ್ವದ ದುರ್ಗವ.
ಇದುವೆ ಹಾದಿಯ ನೀನು ತುಳಿದರೆ
ಕಾಂಬೆ ಮತದಾ ಮಾರ್ಗವ!

ಬೇರೆ ಕಡೆ ನಾನಖನು ಹೀಗೆ ಹೇಳಿದ್ದಾನೆ.

ದಯೆಯೆ ನಿನ್ನ ಮಸೀದಿಯಾಗಲಿ;
ಹೃದಯ ಪಾವನತೆ ಧಾನ್ಯದ ಜಮಖಾನವೆಲೊ;
ನ್ಯಾಯ ಧರ್ಮಗಳೇ ಕುರಾನೆಲೊ;
ವಿನಯ ನಿನ್ನಯ ಖತ್ನವು;
ನಮ್ರತೆಯೆ ಉಪವಾಸವು;
ಇಂತು ನಿನಹೆ ಮುಸ್ಲಿಮು.
ಸರಿಯ ನಡತೆಯೆ ನಿನ್ನ ಕಾಬಾ;
ಸತ್ಯವಾತ್ಮದ ಮಾರ್ಗದರ್ಶಕ;
ಸತ್ಕೃತಿಗಳೆ ಪಂಥ, ಪ್ರಾರ್ಥನೆ;
ದೇವನಿಚ್ಛೆಯೆ ಜಪ ಮಣಿ.

ನಾನಖನಿಂದ ಅರ್ಜುನನ ಕಾಲದವರೆಗೆ ಸಿಕ್ ಮತವು ಹೀಗೆ ಮತೀಯ ಹಿರಿಮೆ, ಪ್ರತಿಭೆಗಳಿಂದ ಬೆಳಗಿತು. ಅದಕ್ಕೆ ಮನ್ನಣೆ ಎಲ್ಲಾ ಕಡೆಯಲ್ಲಿಯೂ ದೊರಕಿತು. ಅಂಗದ, ಅಮರದಾಸ, ರಾಮದಾಸ ಮೊದಲಾದವರು ನಾನಖನು ಹಾಕಿಕೊಟ್ಟ ಮಾರ್ಗದಲ್ಲೇ ಮುಂದುವರಿದರು. ನಾಲ್ಕನೆಯ ಗುರುವಾದ ರಾಮದಾಸನ ಪ್ರಭಾವವು ಅಕ್ಬರ್ ಚಕ್ರವರ್ತಿಯಿಂದ ಕೂಡ ಗೌರವವನ್ನು ತಂದಿತು. ಅಮೃತಸರದ ದೇವಾಲಯವನ್ನು ಕಟ್ಟಲು ಆ ಪ್ರದೇಶವನ್ನು ಉಚಿತವಾಗಿ ಅಕ್ಬರನು ರಾಮದಾಸನಿಗೆ ಕೊಟ್ಟನು. ಅಲ್ಲಿಯವರೆಗೆ ಸಿಕ್ಕರಿಗೂ ಮತ್ತು ಮೊಗಲ್‌ಸರ್ಕಾರಕ್ಕೂ ಯಾವ ವಿಧವಾದ ಮನಸ್ತಾಪವೂ ಇರಲಿಲ್ಲ. ಅಲ್ಲಿಯವರೆಗೆ ಸಿಕ್ಕರು ರಾಜಕೀಯಕ್ಕೆ ಕೈ ಹಾಕಿರಲಿಲ್ಲ. ಐದನೆ ಗುರುವಾದ ಅರ್ಜುನನು ಖುಸ್ರುವು ತನ್ನ ತಂದೆ ಜಹಾಂಗೀರ್ ಚಕ್ರವರ್ತಿಯ ಆಳ್ವಿಕೆಯಲ್ಲಿ ಆತನಿಗೆ ವಿರುದ್ಧವಾಗಿ ದಂಗೆಯೆದ್ದಾಗ ಸಹಾಯ ಮಾಡಿದುದು ಜಹಾಂಗೀರನ ಕೋಪವನ್ನು ಕೆರಳಿಸಿ, ಸಿಕ್ಕರನ್ನು ರಣರಂಗಕ್ಕೆ ಇಳಿಸುವಂತೆ ಮಾಡಿತು. ಇದರಿಂದ ಧಾರ್ಮಿಕ ಮತ್ತು ಮತೀಯ ಆಸಕ್ತಿ ಕುಗ್ಗಿ ಹೋಗಲವಕಾಶವಾಯಿತು. ಬಲ ಮತ್ತು ದರ್ಪ ಅವರನ್ನು ಆಕ್ರಮಿಸಿತು. ಹತ್ತನೆಯ ಗುರುವಾದ ಗೋವಿಂದನ ಕಾಲದಲ್ಲಿ ಸಿಕ್ ಮತವು ನಾನಖನು ಹಾಕಿದ ಧಾರ್ಮಿಕ ದಾರಿಯನ್ನು ಬಿಟ್ಟು ಕೊಟ್ಟು ಸೈನಿಕವೃತ್ತಿಯ ಕ್ಷೇತ್ರವಾಯಿತು. ಸಿಕ್‌ಮತದ ಅಂತ್ಯ ಸ್ಥಿತಿ ಹೀಗೆ ವಿಷಾದಕರವಾದುದು. ಗಗನಚುಂಬಿತ ಪರ್ವತಶಿಖರದ ಮಧ್ಯದಲ್ಲಿ ಹುಟ್ಟಿ ಸಮುದ್ರವನ್ನು ಸೇರಲು ಹೊರಟಿರುವ ನದಿಯು ತನ್ನ ಕುಣಿತವನ್ನೂ ಮತ್ತು ಕಲಕಲನಾದವನ್ನೂ ಕಳೆದುಕೊಂಡು ಮರಳುಗಾಡಿನಲ್ಲಿ ಮಾಯವಾದಂತೆ ಪ್ರಪಂಚ ಕಲ್ಯಾಣಕ್ಕಾಗಿ ನಾನಖನಿಂದ ಸ್ಥಾಪಿಸಲ್ಪಟ್ಟ ಸಿಕ್‌ಮತವು ಸೈನಿಕವೃತ್ತಿಯ ತೌರೂರಾಯಿತು. ದಿವಂಗತ ರವೀಂದ್ರನಾಥ ಠಾಕೂರರು ನುಡಿದಂತೆ ಸಿಕ್ ಮತವು

ಇದರ ಪರಿಣಾಮವಾಗಿ ತನ್ನ ಪ್ರತಿಭೆಯನ್ನು ಕಳೆದುಕೊಂಡು ಶತಮಾನಗಳು ಉರುಳಿದರೂ ನಾನಕನಂತಹ ಮತ್ತೊಬ್ಬ ತತ್ವ ಬೋಧಕನನ್ನು ಪಡೆಯಲಿಲ್ಲ.

ಎಂ. ಶೇಷಾದ್ರಿ

Bibliography :

1. History of the Sikhs by J. D. Cunningham, edited by Garrett, 1918

2. The Sikh religion by Macauliffe, 6 Vols. [Oxford]

3. Dabistān of Mohsin Fāni, Contemporary of 6th and 7th Gurus Har Govind and Har Rai. (Trans. by D. Shea and A. Troyer, Lond. 1843).

# ಸಾಪೇಕ್ಷಸಿದ್ಧಾಂತದ ಹಿನ್ನೆಲೆ

ಸಾಪೇಕ್ಷಸಿದ್ಧಾಂತದ ಪ್ರಾಮುಖ್ಯತೆ ಮಂದಟ್ಟಾಗಬೇಕಾದರೆ, ಅದು ತಲೆದೋರಿದಾಗ ಅದಕ್ಕಿದ್ದ ಅವಶ್ಯಕತೆಯನ್ನು ಅರಿಯಬೇಕು. ಯಾವುದಾದರೊಂದು ಕ್ಷೇತ್ರದಲ್ಲಿ ಹಿಂದಿನಿಂದ ನಡೆದು ಬಂದ ಅಭಿಪ್ರಾಯಗಳು ತಲೆಕೆಳಗಾದರೆ, ಅದರ ಹಿನ್ನೆಲೆಯಾಗಿ ಆ ಕ್ಷೇತ್ರದಲ್ಲಿ ಅವ್ಯವಸ್ಥೆಯುಂಟಾಗಿ ಬಿಕ್ಕಟ್ಟು ಪ್ರಾರಂಭವಾಗುವುದು. ತತ್ಫಲವಾಗಿ ಬೇರೊಂದು ಅಭಿಪ್ರಾಯ ತಲೆದೋರಿ, ಹೊಸ ಸಿದ್ಧಾಂತವೇರ್ಪಟ್ಟು, ತಾತ್ಕಾಲಿಕವಾಗಿಯಾದರೂ ಆ ಕ್ಷೇತ್ರದಲ್ಲಿ ಸಮಸ್ಥಿತಿ ಏರ್ಪಡುವುದು ಸಾಪೇಕ್ಷ ಸಿದ್ಧಾಂತ ಸ್ಥಾಪನೆಗೆ ಕಾರಣವಾಗಿ ೧೯ನೆಯ ಶತಮಾನದ ಕೊನೆಯಲ್ಲಿ ಭೌತ ವಿಜ್ಞಾನದಲ್ಲಿ ಉದ್ಭವಿಸಿದ್ದ ಸಮಸ್ಯೆಗಳೇನು ?

ಆಕಾಶ (Space= ದೇಶ, ಆಕಾಶ)ದ ಎಲ್ಲೆಡೆಯನ್ನೂ ಬೆಳಕಿನ ಕಿರಣಗಳು ಮತ್ತು ರೇಡಿಯೋ ತರಂಗಗಳು ಹಾದು ಹೋಗಲು ಮಧ್ಯವರ್ತಿಯಾಗಿ 'ಈತರ್' ಎಂಬ ಕಲ್ಪನಾದ್ರವ್ಯವು ಸರ್ವತ್ರವ್ಯಾಪಿಸಿದೆಯೆಂದು ಭಾವಿಸಲ್ಪಟ್ಟಿತ್ತು. ಹೀಗೆ ಈಥರ್ ಇದ್ದ ಪಕ್ಷದಲ್ಲಿ ಇದು ಭೂಮಿಯನ್ನು ಆವರಿಸಿ ಅದನ್ನೇ ಹಿಂಬಾಲಿಸುತ್ತಾ ಅದರೊಡನೆಯೇ ಸೂರ್ಯನ ಸುತ್ತ ಪ್ರಯಾಣ ಮಾಡುತ್ತಿರುವುದೋ ? ಅಥವಾ ಸ್ಥಿರವಾಗಿ ನಿಂತಿರುವ ಈತರ್ ಸಮುದ್ರದಲ್ಲಿ ಭೂಮಿಯು ನುಸುಳಿಕೊಂಡು ಮುನ್ನುಗ್ಗುತ್ತಿದೆಯೋ ? ಎಂಬ ಎರಡು ಸಮಸ್ಯೆಗಳು ತಲೆದೋರುವುವು. ನಮಗೆ ಖಚಿತವಾಗಿ ತಿಳಿದಿರುವ ಹಲವಾರು ವಿಷಯಗಳ ಆಧಾರದ ಮೇಲೆ, ಈತರ್ ಆವರಣ ಭೂಮಿಯೊಡಗೂಡಿ ಪ್ರಯಾಣಮಾಡುತ್ತಿಲ್ಲವೆಂದು ನಿರ್ಧರಿಸಬಹುದು. ಹಾಗಾದರೆ ಸ್ಥಂಭೀಭೂತವಾಗಿ ನಿಂತಿರುವ ಈತರ್‌ಸಮುದ್ರದಲ್ಲಿ ಭೂಮಿಯೇ ನುಸುಳಿಕೊಂಡು ಪ್ರಯಾಣ ಮಾಡುತ್ತಿರಬೇಕು. ವೇಗವಾಗಿ ಮುಂದೋಡುವ ಸೈಕಲ್ ಸವಾರನಿಗೆ ಎದರು ಗಾಳಿ ಬೀಸುವಂತೆ, ಭೂಮಿಯ ಮುಂದೋಟದ ಎದರು ದಿಕ್ಕಿನಲ್ಲಿ ಈತರ್ ಗಾಳಿ ಬೀಸುತ್ತಿರಬೇಕು. ಹೀಗೆ ಪ್ರವಹಿಸುತ್ತಿರಬೇಕಾದ ಈತರ್ ಗಾಳಿಯ ನಿಜಾಂಶವನ್ನು ತಿಳಿಯಲು ೧೮೮೭ ರಲ್ಲಿ ಮೈಕೆಲ್ಸನ್ ಮತ್ತು ಮಾರ್ಲಿ ಎಂಬಿಬ್ಬರು ವಿಜ್ಞಾನಿಗಳು ಒಂದು ಪ್ರಯೋಗವನ್ನು ಕೈಗೊಂಡರು. ಆದರೆ ಅವರಿಗೆ ಈತರ್ ಗಾಳಿಯ ಸುಳಿವೇ ಕಂಡುಬರಲಿಲ್ಲ. ಈ ಫಲಿತಾಂಶವು ಭೌತವಿಜ್ಞಾನ ಪ್ರಪಂಚದಲ್ಲಿ ಸರ್ವರಿಗೂ ಆಶ್ಚರ್ಯವನ್ನುಂಟುಮಾಡಿತು !

ಸುಮಾರು ಎರಡು ಶತಮಾನಗಳ ಹಿಂದೆ ಈತರಿನ ಭಾವನೆಯು ಭೌತ ವಿಜ್ಞಾನದಲ್ಲಿ ಪ್ರಾರಂಭವಾಯಿತು. ಒಂದು ವಸ್ತುವು ತನ್ನಿಂದ ಬೇಕಾದ ಮತ್ತೊಂದು ವಸ್ತುವಿನಲ್ಲಿ ಉಂಟುಮಾಡುವ ಪರಿಣಾಮಗಳಿಗೆ ಕಾರಣ ಹೇಳಲು ಈ ಸರ್ವವ್ಯಾಪಿಯಾದ ಈತರ್ ಭಾವನೆಯು ಮೊದಲಾಯಿತು. ಗಿಡದಿಂದ ಬೀಳುತ್ತಿರುವ ಹಣ್ಣಿನ ಮೇಲೆ

ಭೂಮಿಯು ಬೀರುತ್ತಿರುವ ಆಕರ್ಷಣ ಶಕ್ತಿಯನ್ನೂ, ದೂರದ ಕಬ್ಬಿಣವನ್ನು ತನ್ನಲ್ಲಿಗೆ ಸೆಳೆಯುವ ಅಯಸ್ಕಾಂತದ ಪ್ರಭಾವವನ್ನೂ, ಸಮರ್ಥಿಸಲು ಈತರ್ ಮಧ್ಯವರ್ತಿಯ ಕಲ್ಪನೆಯು ತಲೆದೋರಿತು. ರೇಡಿಯೋ, ಬೆಳಕು ಮುಂತಾದ ವಿದ್ಯುತ್ತರಂಗಗಳಿಗೆ ವಾಹಕವಾಗಿ ಈತರ್ ಭಾವನೆಯು ಭೌತವಿಜ್ಞಾನದಲ್ಲಿ ಬೇರೂರಿತು. ತನ್ನ ಈ ನಿಯಮಿತ ಕಾರ್ಯಗಳನ್ನೆಲ್ಲಾ ನಿರ್ವಹಿಸಲು ಈತರಿಗೆ ಇರಬೇಕಾದ ಭೌತಲಕ್ಷಣ ಗಳನ್ನು ಹರ್ಯ್ಗ್ಸ್, ಯಂಗ್, ಫ್ಯಾರಡೆ, ಮ್ಯಾಕ್ಸ್‌ವೆಲ್ ಮುಂತಾದ ವಿಜ್ಞಾನಿಗಳು ಕಂಡುಹಿಡಿದರು.

ಪ್ರಶಾಂತವಾದ ಸಮುದ್ರದ ಮೇಲೆ ವೇಗವ್ಯತ್ಯಾಸವಿಲ್ಲದೆ ಮುಂದುವರಿಯುವ ಹಡಗಿನಲ್ಲಿ ಯಾವ ಪ್ರಯೋಗಗಳಿಂದಲೂ ಅದರ ವೇಗವನ್ನು ತಿಳಿಯಲಾಗುವುದಿಲ್ಲ. ಇದಕ್ಕೆ ಸಮುದ್ರದ ಸಹಾಯಬೇಕು. ಕಬ್ಬಿಣದ ತುಂಡನ್ನು ಹಗ್ಗಕ್ಕೆ ಕಟ್ಟಿ ಸಮು ದ್ರಕ್ಕೆಸೆದರೆ, ತುಂಡು ಬಿದ್ದ ಜಾಗದಲ್ಲಿ ವರ್ತುಳಾಕಾರದ ಅಲೆಗಳು ಸುತ್ತಹರಡುವುವು. ಹಡಗು ಮುಂದುವರಿದಂತೆ ಹಗ್ಗವು ಕೇಂದ್ರವನ್ನು ಬಿಟ್ಟು ಮುಂದೆ ಬರುವ ವೇಗದಿಂದ ಹಡಗಿನ ವೇಗವನ್ನು ತಿಳಿಯಬಹುದು. ಹೀಗೆಯೇ ಈತರ್ ಸಮುದ್ರದಲ್ಲಿ ನುಸುಳಿ ಓಡುತ್ತಿರುವ ಭೂಮಿಯ ವೇಗವನ್ನೂ ಈತರ್ ಸಮುದ್ರಕ್ಕೆ ಸಂಬಂಧಿಸುವ ಪ್ರಯೋಗ ಗಳಿಂದಲೇ ಹೊರಗೆಡಹಲು ಯತ್ನಿಸಬೇಕು ಜಗದ್ವಿಖ್ಯಾತವಾದ ಮೈಕೆಲ್ಸ್‌ನ್-ಮಾರ್ಲಿ ಪ್ರಯೋಗವು ಈ ಘನ ಉದ್ದೇಶದಿಂದಲೇ ಕೈಗೊಳ್ಳಲ್ಪಟ್ಟಿತು. ನಮ್ಮ ಭೂಮಿಯೇ ಒಂದು ಹಡಗು, ಕ್ಲೀವ್ಲೆಂಡ್ ವಿಶ್ವವಿದ್ಯಾಲಯದ ಭೌತ ವಿಜ್ಞಾನ ಪ್ರಯೋಗ ಶಾಲೆಯೇ ಈತರ್ ಸಮುದ್ರದಲ್ಲಿ 'ಕಬ್ಬಿಣದ ತುಂಡನ್ನೆಸೆದ' ಸ್ಥಳ. ಕಬ್ಬಿಣದ ತುಂಡನ್ನೆಸೆಯುವ ಬದಲು ಈತರ್ ಅಲೆಗಳನ್ನೆಬ್ಬಿಸಲು ಬೆಳಕಿನ ಪ್ರಸಾರಮಾಡಿದರು; ಈ ಅಲೆಗಳನ್ನು ನೇರವಾಗಿ ನೋಡಲು ಸಾಧ್ಯವಾಗದ ಕಾರಣ, ಒಂದೆಡೆಯಿಂದ ಹೊರಟ ಬೆಳಕನ್ನು ಎದರುಗನ್ನಡಿಯಿಂದ ಪ್ರತಿಫಲಿತವಾಗುವಂತೆ ಮಾಡಿ ಹೊರಟ ಲ್ಲಿಗೇ ಪುನಃ ಹಿಂತಿರುಗುವಂತೆ ಮಾಡಿದರೆ ಸಾಕಷ್ಟು ವಿಷಯಗಳು ಹೊರಬೀಳುತ್ತವೆ. ಭೂಮಿಯು ಈತರ್ ಸಮುದ್ರದಲ್ಲಿ ಅಲುಗದೆ ನಿಂತಿರುವುದಾದರೆ, ಈ ಪ್ರಯೋಗದಲ್ಲಿ ಬೆಳಕು ನಿರ್ದಿಷ್ಟವಾದ ದೂರವನ್ನು ಮುಟ್ಟಿ ಅಲ್ಲಿಂದ ಹೊರಟೆಡೆಗೆ ಹಿಂತಿರುಗಲು ಹಿಡಿಯುವ ಕಾಲ ಬೆಳಕುಹರಿಯುವ ದಿಕ್ಕನ್ನು ಅವಲಂಬಿಸದೆ ಒಂದೇ ಸಮನಾಗಿರು ವುದು. ಆದರೆ ಈತರ್ ಸಮುದ್ರದಲ್ಲಿ ಭೂಮಿಯು ನಿಂತಿರದೆ ಪೂರ್ವಾಭಿಮುಖವಾಗಿ ಹಾದುಹೋಗುತ್ತಿದೆಯೆಂದು ಭಾವಿಸೋಣ; ಹಿಂದಿನ ಪ್ರಯೋಗದಂತೆ ಪೂರ್ವ ಪಶ್ಚಿಮವಾಗಿಯೂ, ದಕ್ಷಿಣೋತ್ತರವಾಗಿಯೂ, ಒಂದೇ ನಿರ್ದಿಷ್ಟದೂರ ಪ್ರವಹಿಸಿ ಬೆಳಕು ಹಿಂತಿರುಗಿದರೆ ಈ ಎರಡು ಪ್ರಯಾಣಗಳ ಕಾಲಗಳಲ್ಲಿ ವ್ಯತ್ಯಾಸವಿರಬೇಕು. ಇದನ್ನು ಒಂದು ನಿದರ್ಶದಿಂದ ಸುಲಭವಾಗಿ ಗ್ರಹಿಸಬಹುದು. ನಾಲ್ಕು ಮೈಲಿ ಅಗಲ ವಿರುವ ಒಂದು ನದಿ ಗಂಟೆಗೆ ಮೂರು ಮೈಲಿಯಂತೆ ಪ್ರವಹಿಸುತ್ತಿರುವುದೆಂದು ತಿಳಿ ಯೋಣ; ನಿಂತಿರುವ ನೀರಿನ ಮೇಲೆ ಗಂಟೆಗೆ ಐದುಮೈಲಿ ನಡೆಯುವ ದೋಣಿಯು,

ನದಿಯನ್ನು ದಾಟಿ ಎದರು ದಡವನ್ನು ಮುಟ್ಟಿ ಹೊರಟ ಸ್ಥಳವನ್ನು ಸೇರಲು ೨ ಗಂಟೆ ಕಾಲಬೇಕಾಗುವುದು; ಅದೇ ನಾಲ್ಕು ಮೈಲಿ ದೂರವನ್ನು ನದಿ ಹರಿಯುವ ದಿಕ್ಕಿನಲ್ಲೇ ಹೋಗಿ, ತಕ್ಷಣ ಹಿಂತಿರುಗಿದರೆ ಹೊರಟ ಸ್ಥಳವನ್ನು ಸೇರಲು ೨॥ ಗಂಟೆ ಕಾಲ ಬೇಕಾಗುವುದು. ಆದುದರಿಂದ ಈ ತೆರನಾದ ಎರಡು ದೋಣಿಗಳು ಏಕಕಾಲದಲ್ಲಿ ಹೊರಟು ಮೇಲೆ ತಿಳಿಸಿದ ಬೇರೆಬೇರೆ ಮಾರ್ಗಗಳನ್ನು ಹಿಡಿದು, ಹೊರಟ ಸ್ಥಳಕ್ಕೆ ಬಂದು ಸೇರುವ ಕಾಲ ವ್ಯತ್ಯಾಸದಿಂದ ನದಿಯ ಪ್ರವಾಹದ ವೇಗವನ್ನು ಲೆಕ್ಕ ಹಾಕಬಹುದು. ಅದೇ ರೀತಿಯಲ್ಲಿ ಎರಡು ಬೆಳಕಿನ ಕಿರಣಗಳು ಏಕಕಾಲದಲ್ಲಿ ಒಂದು ಸ್ಥಳದಿಂದ ಹೊರಟು, ದಕ್ಷಿಣೋತ್ತರ, ಪೂರ್ವ ಪಶ್ಚಿಮವಾಗಿ ಒಂದೇ ದೂರಧಾವಿಸಿ ಪುನಃ ಹೊರಟೆಡೆಗೆ ಬಂದು ಮುಟ್ಟುವ ಕಾಲ ವ್ಯತ್ಯಾಸದಿಂದ ಈತರ್ ಗಾಳಿಯ ವೇಗ (ಇದು ಭೂಮಿಯ ವೇಗಕ್ಕೆ ಸಮ)ವನ್ನು ಲೆಕ್ಕಹಾಕಲು ಮೈಕೆಲ್ಸ್ನ-ಮಾರ್ಲಿ ಪ್ರಯೋಗವು ಯತ್ನಿಸಿತು. ಈ ಪ್ರಯೋಗವನ್ನು ಪುನಃಪುನಃ ಮಾಡಿ ನೋಡಿದರು; ಆದರೆ ಭಾವಿಸಿದ್ದಂತೆ ಯಾವ ಕಾಲ ವ್ಯತ್ಯಾಸವೂ ಕಂಡುಬರಲಿಲ್ಲ. ಅಂದರೆ ಸರ್ವವ್ಯಾಪಿಯಾದ ಈತರ್ ಸಮುದ್ರದಲ್ಲಿ ಭೂಮಿಯು ಅಲುಗದೆ ನಿಂತಿದೆಯೆಂಬ ಅರ್ಥ ಈ ಪ್ರಯೋಗದಿಂದ ಬರುವಂತಿದೆ. ಹೀಗಾದರೆ, ಸೂರ್ಯ ಚಂದ್ರರೇ ಮುಂತಾದ ಗ್ರಹಗಳೂ, ನಕ್ಷತ್ರ ನೀಹಾರಿಕೆಗಳೂ ಭೂಮಿಯ ಸುತ್ತ ತಿರುಗಬೇಕಾಯಿತು. ಹೀಗೆ ಅರ್ಥ ಮಾಡಿದರೆ ಕೋಪರ್ನಿಕಸ್ಸಿಗೆ ಹಿಂದೆ ಪ್ರಚಾರದಲ್ಲಿದ್ದ ಭೂಕೇಂದ್ರಬ್ರಹ್ಮಾಂಡವಾದ ಪುನಃ ತಲೆದೋರಿದಂತಾಗುವುದು. ಭೂಮಿಯು ಸೂರ್ಯನ ಸುತ್ತ ಸೆಕಂಡಿಗೆ ಸುಮಾರು ೨೦ ಮೈಲಿ ವೇಗದಲ್ಲಿ ಚಲಿಸುತ್ತಿರುವ ವಿಚಾರ ಹಲವಾರು ರೀತಿಯಲ್ಲಿ ನಮಗೆ ಖಚಿತವಾಗಿ ಗೊತ್ತು; ಈ ವೇಗದಲ್ಲಿ ಶೇಕಡ ಒಂದು ಭಾಗ ವೇಗವನ್ನಾದರೂ ಕೂಡ ಕಂಡು ಹಿಡಿಯುವಷ್ಟು ಸೂಕ್ಷ್ಮವಾಗಿದ್ದ ಮೈಕೆಲ್ಸ್ನ-ಮಾರ್ಲಿ ಪ್ರಯೋಗವು ಭೂಮಿಯ ಚಲನೆಯನ್ನೇ ಕಂಡು ಹಿಡಿಯಲಾರದೆ ನಿಷ್ಫಲವಾಯಿತು. ಚಲಿಸುತ್ತಿರುವ ಭೂಮಿ ಅಲುಗದೆ ನಿಂತಿದೆಯೆಂದು ತಿಳಿಸುವ ಈ ಪ್ರಯೋಗವನ್ನು ಅರ್ಥ ಮಾಡುವ ರೀತಿಯಲ್ಲಿ ಏನೋ ಅವ್ಯವಸ್ಥೆ ತಲೆದೋರಿದೆಯೆಂಬ ಶಂಕೆ ಮೂಡುವುದು.

೧೮೯೩ ರಲ್ಲಿ ಫಿಟ್ಸ್ ಜೆರಾಲ್ಡ್ ಎಂಬ ವಿಜ್ಞಾನಿಯೂ, ೧೮೯೫ ರಲ್ಲಿ ಲೊರೆಂಟ್ಸ್ ಎಂಬಾತನೂ ಈ ಸಮಸ್ಯೆಯಿಂದ ಪಾರಾಗಲು ಒಂದು ಹೊಸ ಮಾರ್ಗವನ್ನು ಕಂಡು ಹಿಡಿದರು. ಮೈ ಕೆಲ್ಸ್ನ-ಮಾರ್ಲಿ ಪ್ರಯೋಗದಲ್ಲಿ ದೂರಗಳನ್ನಳೆಯಲು ಒಂದು ಗಜ ಕಡ್ಡಿಯನ್ನು ಉಪಯೋಗಿಸಿದ್ದರೆಂದು ಭಾವಿಸೋಣ; ಉತ್ತರ ದಕ್ಷಿಣವಾಗಿ ದೂರವನ್ನಳೆಯುವಾಗಲೂ, ಪೂರ್ವ ಪಶ್ಚಿಮವಾಗಿ ದೂರವನ್ನಳೆಯುವಾಗಲೂ ಗಜ ಕಡ್ಡಿಯ ಉದ್ದ ಏಕರೀತಿಯಾಗಿತ್ತೆಂಬುದಕ್ಕೆ ಆಧಾರವೇನೆಂದು ಈ ವಿಜ್ಞಾನಿಗಳು ಸಂಶಯವನ್ನೊಡ್ಡಿದರು. ಈತರ್ ಸಮುದ್ರದಲ್ಲಿ ಪೂರ್ವಾಭಿಮುಖವಾಗಿ ಚಲಿಸುತ್ತಿರುವ ಭೂಮಿಯ ಮೇಲೆ ಪೂರ್ವ ಪಶ್ಚಿಮ ದೂರವನ್ನಳೆಯುವಾಗ ಗಜ ಕಡ್ಡಿಯ ಉದ್ದವು ಸ್ವಲ್ಪ ಕಡಿಮೆಯಾಗಿ ಏಕಿರಬಾರದು? ಸಮುದ್ರದ ಮೇಲೆ ಹಾದು ಹೋಗುತ್ತಿರುವ

ನಾವೆಯು ಮುಂದಿರುವ ನೀರಿನ ಒತ್ತಡದಿಂದಲೂ ಹಿಂದಿರುವ ಯಂತ್ರಗಳ ತಳ್ಳುವಿಕೆ ಯಿಂದಲೂ ಅತ್ಯಲ್ಪವಾಗಿಯಾದರೂ ಉದ್ದದಲ್ಲಿ ಏಕೆ ಕಡಿಮೆಯಾಗಿರಬಾರದು? ಇದೇ ರೀತಿ ವೇಗವಾಗಿ ಮುನ್ನುಗ್ಗುತ್ತಿರುವ ವಿಮಾನಗಳೂ, ಮೋಟಾರುಗಳೂ ಉದ್ದದಲ್ಲಿ ಅತಿ ಸ್ವಲ್ಪಮಟ್ಟಿಗೆ ಕಿರಿದಾಗಬಹುದು. ಹೀಗೆ ಮೈಕೆಲ್ಸನ್–ಮಾರ್ಲಿ ಪ್ರಯೋಗದಲ್ಲಿ ಪೂರ್ವ ಪಶ್ಚಿಮ ದೂರವೂ ಸ್ವಲ್ಪ ಕಡಿಮೆಯಾಗಿ ಎರಡು ಪಥಗಳಲ್ಲಿ ಚಲಿಸುವ ಬೆಳಕೂ ಏಕಕಾಲದಲ್ಲಿ ಹೊರಟಸ್ಥಳಕ್ಕೆ ಬರಬಹುದು. ಹಿಂದೆ ಹೇಳಿದ ನಿದರ್ಶನದಲ್ಲಿ, ನದಿಯ ಪ್ರವಾಹದ ದಿಕ್ಕಿನಲ್ಲಿ ೪ ಮೈಲಿ ಹೋಗಿ ದೋಣಿಯು ಹಿಂದಿರುಗುವ ಬದಲು, ೩.೨ ಮೈಲಿ ಮಾತ್ರ ಹೋಗಿ ಹಿಂದಿರುಗಿದರೆ, ೨ ಗಂಟೆಗಳ ಕಾಲದಲ್ಲೇ ಹೊರಟೆಡೆಯನ್ನು ಸೇರಬಹುದು. ಏಕಕಾಲದಲ್ಲಿ ಹೊರಟ ಎರಡು ದೋಣಿಗಳೂ ಪುನಃ ಹೊರಟ ಸ್ಥಳದಲ್ಲಿ ಏಕಕಾಲದಲ್ಲಿ ಸಂಧಿಸುವುವು. ಮೈಕೆಲ್ಸನ್–ಮಾರ್ಲಿ ಪ್ರಯೋಗದಲ್ಲೂ ಒಂದೇ ದೂರವೆಂದು ಪರಿಗಣಿಸಲ್ಪಟ್ಟ ಎರಡು ಪಥಗಳಿಗೂ ಇರುವ ದೂರ ವ್ಯತ್ಯಾಸದಿಂದಲೇ ಅವರ ನಿಷ್ಫಲಪರಿಣಾಮವನ್ನು ಫಿಟ್ಸ್ ಜೆರಾಲ್ಡ್ ಮತ್ತು ಲೊರೆಂಟ್ಸ್‌ರು ಸಮನ್ವಯ ಮಾಡಬಹುದೆಂದು ಗಣಿತಶಾಸ್ತ್ರದ ಸಹಾಯ ದಿಂದ ತೋರಿಸಿದರು

ಈತರ್ ಸಮುದ್ರದಲ್ಲಿ ಭೂಮಿಯ ಚಲನೆಯನ್ನು ಪ್ರಕೃತಿಯು ಮಾನವನಿಗೆ ಗೊತ್ತಾಗದಂತೆ ಬಚ್ಚಿಟ್ಟಿರುವುದು ಬಹು ವರ್ಷಗಳ ಶ್ರಮಸಾಧ್ಯವಾದ ಪ್ರಯೋಗಗಳಿಂದ ಬಯಲಿಗೆ ಬಂದಂತಾಯಿತು. ಆದರೆ ಈತರ್ ಪ್ರವಾಹವನ್ನು ಪತ್ತೆಹಚ್ಚುವ ಮಾನವ ಪ್ರಯತ್ನಕ್ಕೆ ಪ್ರಕೃತಿಯೇ ಪ್ರತಿಭಟಿಸಿ ಒಳಸಂಚು ನಡೆಸುತ್ತಿರುವುದೆಂದು ಭಾವಿಸುವು ದರ ಬದಲು, ಪ್ರಕೃತಿನಿಯಮವೇ ಈ ರೀತಿ ಏಕೆ ಇರಬಾರದೆಂಬ ವಿಚಾರ ಲಹರಿ ವಿಜ್ಞಾನಿಗಳಲ್ಲಿ ತಲೆದೋರಿತು. ಭೌತವಿಜ್ಞಾನವನ್ನರಿಯದವನು ಚಿರಚಲನಯಂತ್ರ ವನ್ನು ಸೃಷ್ಟಿಸುವ ತನ್ನ ಪ್ರಯತ್ನವನ್ನು ಪ್ರಕೃತಿಯು ಪ್ರತಿಭಟಿಸಿ ಮೋಸಗೊಳಿಸು ತ್ತಿದೆಯೆಂದು ಭಾವಿಸಬಹುದು; ಆದರೆ ಭೌತವಿಜ್ಞಾನಿಗೆ ಈ ವಿಧವಾದ ಯಂತ್ರವು ಪ್ರಕೃತಿ ನಿಯಮಗಳಿಗೆ ವಿರುದ್ಧವೆಂದೂ, ಅದನ್ನು ಸೃಷ್ಟಿಸುವ ಯತ್ನಗಳೆಲ್ಲಾ ವಿಫಲ ವಾಗುವುದೆಂದೂ ಮೊದಲೇ ಗೊತ್ತು. ಇದೇ ರೀತಿಯಲ್ಲಿ ತಿಳಿವಿಲ್ಲದ ದೇಶಭಕ್ತನು ಅರ್ಥಶಾಸ್ತ್ರದ ನಿಯಮಗಳಿಗೆ ಅನುಸಾರವಾಗಿ ನಡೆವ ಆಂದೋಳನವನ್ನು ಒಂದು ದೊಡ್ಡ ಒಳಸಂಚೆಂದು ಭಾವಿಸಬಹುದು. ಅಚ್ಚೇರಿನ ಪಾತ್ರೆಯಲ್ಲಿ ಸೇರು ಹಾಲು ಇಲ್ಲವೆಂದು ಅತ್ತಂತೆ!

ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಐನ್‌ಸ್ಟೈನ್ ಎಂಬ ವಿಜ್ಞಾನಿಯ ದೃಷ್ಟಿಯು ಈ ವಿಷಯದ ಮೇಲೆ ಹೊರಳಿತು. ಭೂಮಿಯು ಚಲಿಸುತ್ತಿರುವುದು ಸರಿಯಷ್ಟೆ; ಆದರೆ ಈತರ್ ಸಮುದ್ರದಲ್ಲಿ ಭೂಮಿಯು ಅಲುಗಾಡದೆ ನಿಂತಿದೆಯೆಂಬುದೂ ಅಷ್ಟೇ ಸರಿ; ಈ ಎರಡೂ ಸತ್ಯಾಂಶಗಳು; ಇವುಗಳಲ್ಲಿ ಪರಸ್ಪರ ವಿರೋಧವಿರಲಾರದೆಂದು ನಿಶ್ಚಯಿಸಿದನು. ಪ್ರಯೋಗಗಳ ಫಲಿತಾಂಶಗಳನ್ನು ಅರ್ಥಮಾಡಿಕೊಳ್ಳುವುದರಲ್ಲಿ

ಎಲ್ಲೋ ಅಸಮಂಜಸವಾದ ಕಲ್ಪನೆ ತಲೆದೋರಿದೆಯೆಂದು ಊಹಿಸಿದನು. ಭೌತ ವಿಜ್ಞಾನದ ಮೂಲ ತತ್ವಗಳನ್ನು ಪುನರ್ವಿಮರ್ಶಿಸಿ, ಈ ಪರಸ್ಪರ ವಿರೋಧಕ್ಕೆ ಚಲನ ಶಾಸ್ತ್ರದಲ್ಲಿ ದೇಶವೂ ಕಾಲವೂ ಒಂದನ್ನೊಂದು ಅವಲಂಬಿಸದೆ ಎರಡೂ ಸ್ವತಂತ್ರವೆಂಬ ಭಾವನೆಯೇ ಕಾರಣವೆಂದು ವಾದಿಸಿದನು. ನಿರಪೇಕ್ಷವಾದ ಏಕಕಾಲಿಕ ಭಾವನೆಗೆ ಅರ್ಥವೇ ಇಲ್ಲವೆಂದೂ, ಅದಕ್ಕೆ ಬದಲಾಗಿ ಸಾಪೇಕ್ಷ ಏಕಕಾಲಿಕ ಭಾವನೆಯನ್ನು ಅನುಮೋದಿಸಿದರೆ ವಿರೋಧಗಳೆಲ್ಲಾ ಮಾಯವಾಗುವುವೆಂದು ಸಕಾರಣವಾಗಿ ಸಾರಿದನು. ಇದರ ಫಲವಾಗಿ ನಿರಪೇಕ್ಷವಾದ ದೇಶ ಮತ್ತು ಕಾಲಗಳ ಭಾವನೆಗೆ ಬದಲು, ಪರಸ್ಪರಾವಲಂಬಿಯಾದ ದೇಶ ಕಾಲಗಳ ಹೊಸ ಭಾವನೆ ಮೂಡಿತು. ೧೯೦೫ ರಲ್ಲಿ ಪ್ರಕಟವಾದ ಐನ್‌ಸ್ಟೈನಿನ ಸಾಪೇಕ್ಷಸಿದ್ಧಾಂತವು ನ್ಯೂಟನ್ ನಿರ್ಮಿಸಿದ್ದ ಚಲನಶಾಸ್ತ್ರ ಸೌಧಕ್ಕೆ ಕಲಶವಿಟ್ಟಂತಾಯಿತು. ಆಗ ಪ್ರಚಾರದಲ್ಲಿದ್ದ ಭಾವನೆಗಳಿಗೆ ಸಾಪೇಕ್ಷ ಸಿದ್ಧಾಂತವು ವ್ಯತಿರಿಕ್ತ ಭಾವನೆಗಳನ್ನೊಳಗೊಂಡಿದ್ದಂತೆ ಕಂಡರೂ, ತತ್ವದೃಷ್ಟಿಯಿಂದ ವಿಮರ್ಶಿಸಿದರೆ ಅದು ಹಿಂದಿನ ಮೂರು ಶತಮಾನಗಳ ವಿಜ್ಞಾನ ವಿಕಾಸದ ಫಲವೆಂದೇ ಭಾಸವಾಗುವುದು. ದೇಶ ಕಾಲಗಳ ನಿಜಸ್ವರೂಪವನ್ನೂ ಅವುಗಳ ಪರಸ್ಪರ ನಿಕಟಸಂಬಂಧವನ್ನೂ ನಿರ್ಧರಿಸಿ, ತತ್ಫಲವಾಗಿ ಬ್ರಹ್ಮಾಂಡದ ಮೂಲೆ ಮೂಲೆಗಳಲ್ಲಿ ನಡೆಯುವ ಸಕಲ ಘಟನಾವಳಿಗೆ ಅನ್ವಯಿಸಲು ಐನ್‌ಸ್ಟೈನಿನ ಸಾಪೇಕ್ಷ ಸಿದ್ಧಾಂತ ನೆರವಾಯಿತು.

ಇಬ್ಬರು ಸ್ನೇಹಿತರು ತಾವು ಅಳತೆಮಾಡುವ ಕಾಲಪ್ರಮಾಣವನ್ನು ಹೋಲಿಸಲು, ತಾವು ಸಂಧಿಸಿದಾಗ ತಮ್ಮ ಗಡಿಯಾರಗಳು ಒಂದಕ್ಕೊಂದಕ್ಕೆ ಹೊಂದಿಕೊಳ್ಳುವಂತೆ ಮಾಡಬಹುದು. ಆದರೆ ಒಬ್ಬರಿಂದೊಬ್ಬರು ಬಹುದೂರದಲ್ಲಿರುವಾಗ ಬೆಳಕು ಅಥವಾ ರೇಡಿಯೊ ಸನ್ನೆಗಳಿಂದ ಇದೇ ಕೆಲಸವನ್ನು ಮಾಡಬಹುದು. ವಿದ್ಯುತ್ತರಂಗಗಳ ಗುಂಪಿಗೆ ಸೇರಿದ ರೇಡಿಯೊ ಅಥವಾ ಬೆಳಕಿನ ಅಲೆಗಳು ಆಕಾಶದಲ್ಲಿ ಸೆಕಂಡಿಗೆ ೧೮೬,೦೦೦ ಮೈಲಿಗಳ ವೇಗದಿಂದ ಪ್ರಸಾರವಾಗುವುದು. ಭೂಮಿಗೆ ೯೩,೦೦೦,೦೦೦ ಮೈಲಿ ದೂರದಲ್ಲಿರುವ ಸೂರ್ಯನಿಂದ ಹೊರಟ ಬೆಳಕು ಭೂಮಿಯನ್ನು ಸೇರಲು ಸುಮಾರು ೮ ನಿಮಿಷಗಳಾಗುವುವು. ಇಬ್ಬರು ಸ್ನೇಹಿತರಲ್ಲಿ ಒಬ್ಬನು ಸೂರ್ಯನ ಮೇಲೂ, ಇನ್ನೊಬ್ಬನು ಭೂಮಿಯಮೇಲೂ ನಿಂತು, ಹೊಂದಿಕೊಂಡಿರುವ ಗಡಿಯಾರಗಳನ್ನಿಟ್ಟುಕೊಂಡು, ಬೆಳಕಿನ ಸನ್ನೆಗಳಿಂದ ಪರಸ್ಪರ ಸಂಭಾಷಣೆ ನಡೆಸುತ್ತಾರೆಂದು ಭಾವಿಸೋಣ. ಸೂರ್ಯನಲ್ಲಿರುವವನು ೩ ಗಂಟೆಯೆಂದು ಸನ್ನೆಮಾಡಿದರೆ, ಭೂಮಿಗೆ ತಲುಪಲು ೮ ನಿಮಿಷ ಬೇಕಾಗುವುದರಿಂದ, ಭೂಮಿಯಮೇಲಿರುವವನ ಗಡಿಯಾರ ೩ ಗಂಟೆ ೮ ನಿಮಿಷ ತೋರಿಸುವುದು. ಒಡನೆಯೇ ಈ ಕಾಲವನ್ನು ಭೂಮಿಯಿಂದ ಸನ್ನೆ ಮಾಡಿದರೆ ಸೂರ್ಯನಿಗೆ ತಲ್ಪಿದಾಗ ಅಲ್ಲಿಯ ಗಡಿಯಾರದಲ್ಲಿ ೩ ಗಂಟೆ ೧೬ ನಿಮಿಷವಾಗಿರುವುದು. ಈ ಪ್ರಯೋಗದಿಂದ ಸೂರ್ಯನಲ್ಲಿರುವವನು ತನ್ನ ಸ್ನೇಹಿತನ ಗಡಿಯಾರ ತನ್ನ ಗಡಿಯಾರಕ್ಕೆ ಸರಿಯಾಗಿದೆಯೆಂದು ನಿರ್ಧರಿಸು

ವನು. ಆದರೆ ಇಡೀ ಸೌರವ್ಯೂಹವೇ ಆಕಾಶದಲ್ಲಿ ಚಲಿಸುತ್ತಿರುವುದರಿಂದ, ಸೂರ್ಯ ನಿಂದ ಹಿಂಬಾಲಿಸಲ್ಪಟ್ಟು ಭೂಮಿಯು ಮುನ್ನುಗ್ಗುತ್ತಿದೆಯೆಂದು ಭಾವಿಸೋಣ. ಸೂರ್ಯ, ಭೂಮಿಗಳ ವೇಗಗಳು ಒಂದಾಗಿ, ಇವುಗಳ ಚಲನೆ ಒಂದೇ ದಿಕ್ಕಿಗಭಿ ಮುಖವಾಗಿರುವುದರಿಂದ, ನಮ್ಮ ಸ್ನೇಹಿತರ ಅಂತರ ವ್ಯತ್ಯಾಸವಾಗುವುದಿಲ್ಲ. ಈಗ ಸೂರ್ಯನಲ್ಲಿರುವವನು ೩ ಗಂಟೆಯೆಂದು ಸನ್ನೆಮಾಡಿದರೆ, ಅದು ಭೂಮಿಗೆ ಧಾವಿಸು ತ್ತಿರುವ ಕಾಲದಲ್ಲಿ ಭೂಮಿಯು ಮುಂದಕ್ಕೆ ಓಡುತ್ತಿರುವ ಕಾರಣ, ಸನ್ನೆಯು ಭೂಮಿ ಯನ್ನು ತಲ್ಪಲು ೮ ನಿಮಿಷಕ್ಕಿಂತ ಹೆಚ್ಚು ಕಾಲ ಹಿಡಿಯುವುದು, ಈ ಕಾಲವನ್ನು ೯ ನಿಮಿಷವೆಂದು ಭಾವಿಸೋಣ ಒಡನೆಯೇ ಭೂಮಿಯ ಮೇಲಿರುವವನು ೮ ಗಂಟೆ ೯ ನಿಮಿಷವೆಂದು ಸನ್ನೆಮಾಡಿದರ, ಈ ಸನ್ನೆಯ ಕಡೆಗೇ ಸೂರ್ಯನು ಹಾದು ಬರುತ್ತಿರುವುದರಿಂದ, ೭ ನಿಮಿಷದಲ್ಲೇ ಸೂರ್ಯನನ್ನು ತಲುಪುವುದು. ಇದರಿಂದ ಸೂರ್ಯನಲ್ಲಿರುವವನಿಗೆ ಈಗಲೂ ಹಿಂದಿನಂತೆ ಸೂರ್ಯನಲ್ಲಿರುವವನಿಗೆ ೩ ಗಂಟೆ ೧೬ ನಿಮಿಷಕ್ಕೇ ಸನ್ನೆ ತಲುಪಿದರೂ, ತನ್ನ ಸ್ನೇಹಿತನ ಗಡಿಯಾರ ಒಂದು ನಿಮಿಷ ಮುಂದಿದೆಯೆಂದು ನಿರ್ಧರಿಸುವನು ಮೇಲೆ ಭಾವಿಸಿದ ಚಲನೆ ಭೂಮಿಗೆ ಇದ್ದರೂ ನಮಗೆ ಅದರ ಚಲನೆಯ ಅರಿವೇ ಇಲ್ಲದಿರುವಂತೆ, ಆ ಸ್ನೇಹಿತರಿಗೂ ತಮ್ಮ ಚಲನೆಯ ವಿಚಾರ ಗೋಚರವಾಗುವುದಿಲ್ಲ. ಅವರಿಗೆ ಮೊದಲನೆಯ ಪ್ರಯೋಗಕ್ಕೂ, ಎರಡನೆಯ ಪ್ರಯೋಗಕ್ಕೂ ಯಾವ ವಿಧವಾದ ಸನ್ನಿವೇಶವೂ ವ್ಯತ್ಯಾಸ ಹೊಂದಿದಂತೆ ತಿಳಿಯುವು ದಿಲ್ಲ. ಅವರಿಗೆ ಗೋಚರವಾಗದ ಚಲನೆಯ ಫಲವಾಗಿ, ಹೊಂದಿಕೊಂಡಿರುವ ಎರಡು ಗಡಿಯಾರಗಳಿಗೆ ಕಾಲವ್ಯತ್ಯಾಸವಿರುವಂತೆ ತೋರುವುದು ತನಗೇ ತನ್ನ ಚಲನೆಯ ಅರಿವಿಲ್ಲದೆ ಸ್ನೇಹಿತನ ಗಡಿಯಾರ ಸರಿಯಾಗಿಲ್ಲವೆಂದು ಸೂರ್ಯನಲ್ಲಿರುವವನು ನಿರ್ಧರಿ ಸುವ ಸನ್ನಿವೇಶದಲ್ಲಿ ನಾವೆಲ್ಲರೂ ಇದ್ದೇವೆ. ಅವನು ತನ್ನ ಸ್ನೇಹಿತನಿಗೆ ಗಡಿಯಾರ ವನ್ನು ೧ ನಿಮಿಷ ಹಿಂದಕ್ಕೆ ತಿರುಗಿಸುವಂತೆಯೂ, ಹಾಗೆ ಮಾಡಿದರೆ ತಮ್ಮ ಗಡಿಯಾರ ಗಳು ಪರಸ್ಪರ ಹೊಂದಿಕೊಳ್ಳುವುವೆಂದೂ ಸನ್ನೆ ಮಾಡುವನು! ನಾನಾ ಗ್ರಹಗಳ ಮೇಲಿರುವ ಸ್ನೇಹಿತರೆಲ್ಲಾ ಸೂರ್ಯನಲ್ಲಿರುವವನ ಗಡಿಯಾರಕ್ಕೆ ತಮ್ಮ ಗಡಿಯಾರ ಗಳನ್ನು ಮೇಲೆ ಹೇಳಿದ ಪ್ರಯೋಗದಿಂದ ಹೊಂದಿಸಿಕೊಂಡರೆ, ತಮ್ಮ ಗಡಿಯಾರಗ ಳೆಲ್ಲಾ ಒಂದೇ ಕಾಲವನ್ನು ತೋರಿಸುತ್ತಾ ಹೊಂದಿಕೊಂಡಿವೆಯೆಂದು ಭಾವಿಸುವರು!! ಈ ಭಾವನೆಯು ಉಪಾಧಿರಹಿತವಾಗಿದೆಯೆಂದು ಅವರಿಗೆ ಸಾಧಿಸಲು ಸಾಧ್ಯವಲ್ಲದಿದ್ದರೂ, ಅದಕ್ಕಿಂತ ಉತ್ತಮಮಾರ್ಗ ಅವರಿಗೆ ಕಂಡುಬರುವುದಿಲ್ಲ!!! ಕಾಲದ ಮೂಲತತ್ವ ದಲ್ಲಿ ಅಡಗಿರುವ ಈ ಉಪಾಧಿಯಿಂದ, ಕಾಲದ ಭಾವನೆಯು ಸ್ವತಂತ್ರವಲ್ಲವೆಂದು ತಿಳಿದು, ಕಾಲವನ್ನು ಅಸ್ವತಂತ್ರ ಅಥವಾ ಸಾಪೇಕ್ಷವೆಂದು ನಿರ್ಧರಿಸಬೇಕು.

ಈ ಸ್ನೇಹಿತರ ಪ್ರಪಂಚದಲ್ಲಿ ಚಲಿಸುತ್ತಿರುವ ವಸ್ತುವಿನ ಉದ್ದವನ್ನು ಅಳತೆ ಮಾಡುವುದರಲ್ಲೂ ತೊಡಕಿದೆ. ಯಾವುದಾದರೊಂದು ವಸ್ತುವಿನ ಉದ್ದವನ್ನು ಅಳೆಯಲು ನಾವು ಆ ವಸ್ತುವನ್ನು ಕಾಗದದ ಮೇಲಿಟ್ಟು ಅದರ ತುದಿ ಮೊದಲುಗಳನ್ನು

ಗುರುತಿಸಿ, ಅವುಗಳ ಅಂತರವನ್ನು ಅಳೆಯಬಹುದು. ಚಲಿಸದಿರುವ ವಸ್ತುಗಳ ಉದ್ದ ವನ್ನು ಈ ರೀತಿಯಲ್ಲಿ ಸುಲಭವಾಗಿ ಅಳೆಯಬಹುದು. ಆದರೆ ನೀರಿನಲ್ಲಿ ವೇಗವಾಗಿ ಚಲಿಸುತ್ತಿರುವ ಮೀನಿನ ಉದ್ದ ಕಂಡು ಹಿಡಿಯಲು, ಬಾಲದ ಕಡೆ ಮೊದಲು ಗುರುತಿಸಿ ಆಮೇಲೆ ತಲೆ ಕಡೆ ಗುರುತಿಸಿದರೆ, ಮೀನಿನ ಚಲನೆಯಿಂದ ಈ ಗುರುತುಗಳ ಅಂತರ ಮೀನಿನ ಉದ್ದಕ್ಕಿಂತ ಜಾಸ್ತಿಯಾಗುವುದು ಆದ್ದರಿಂದ ಚಲಿಸುತ್ತಿರುವ ವಸ್ತುಗಳ ಉದ್ದವನ್ನು ಅಳೆಯಲು ತುದಿ ಮೊದಲುಗಳನ್ನು ಗುರುತಿಸುವ ಕೆಲಸವು ಏಕಕಾಲದಲ್ಲಿ ನಡೆಯಬೇಕು. ನಮ್ಮ ಸ್ನೇಹಿತರಿಬ್ಬರೂ ಏಕಕಾಲದಲ್ಲಿ ಒಂದು ಬೃಹದ್ವಸ್ತುವಿನ ಆದ್ಯಂತಗಳಲ್ಲಿದ್ದು ಗುರುತಿಸಿ ಅದರ ಉದ್ದವನ್ನು ನಿರ್ಧರಿಸಿದರೆ, ಅವರ ಏಕಕಾಲಕ ಭಾವನೆಯೇ ನಮ್ಮ ಭಾವನೆಗೆ ಸರಿಹೊಂದದಿರುವ ಕಾರಣವಸ್ತುವಿನ ಉದ್ದದಲ್ಲೂ ಭಿನ್ನಾಭಿಪ್ರಾಯ ತಲೆದೋರುವುದು. ಚಲನೆಯಿಂದ ಗಡಿಯಾರಗಳು ಹೊಂದಿಕೊಳ್ಳ ದಿರುವುದೇ ಅಲ್ಲದೆ, ತತ್ಕಾರಣವಾಗಿ ಉದ್ದದ ಅಳತೆಗಳಲ್ಲೂ ಹೊಂದಿಕೆ ಇಲ್ಲದಂತಾಗು ವುದು. ಹೀಗೆಯೇ ದ್ರವ್ಯಪ್ರಮಾಣವನ್ನು ಕಂಡುಹಿಡಿಯುವಾಗಲೂ ಬೇರೆ ಬೇರೆ ವೀಕ್ಷಕರಿಗೆ ಅವರವರ ಚಲನೆಯಿಂದ ಅಥವಾ ವಸ್ತುವಿನ ಚಲನೆಯಿಂದ ಅದರ ದ್ರವ್ಯ ಪ್ರಮಾಣವೂ ವ್ಯತ್ಯಾಸವಾದಂತೆ ಭಾಸವಾಗುವುದು. ಅಳತೆಯ ಆಧಾರದ ಮೇಲೆ ನಿಂತಿರುವ ಭೌತಶಾಸ್ತ್ರದಲ್ಲಿ ವಿವಿಧವೇಗಗಳಲ್ಲಿ ಚಲಿಸುತ್ತಿರುವ ಬೇರೆ ಬೇರೆ ವೀಕ್ಷಕ ರಿಗೆ ದೇಶ, ಕಾಲ, ದ್ರವ್ಯಗಳ ಅಳತೆಯಲ್ಲಿ ಪರಸ್ಪರ ಹೊಂದಾಣಿಕೆ ಇರುವುದಿಲ್ಲವೆಂಬ ವಿಚಾರ ಎದ್ದು ಕಾಣುವುದು! ಭೂಮಿಯು ತನ್ನ ಅಕ್ಷದ ಮೇಲೆ ತಿರುಗುತ್ತಾ, ಸೂರ್ಯನಿಗೆ ಪ್ರದಕ್ಷಿಣೆಮಾಡುತ್ತಿರುವುದೇ ಅಲ್ಲದೆ, ಇಡೀ ಸೌರವ್ಯೂಹವೇ ಬ್ರಹ್ಮಾಂಡದ ಒಂದು ನಿರ್ದಿಷ್ಟದಿಕ್ಕಿನಲ್ಲಿ ಓಡುತ್ತಿರುವುದು. ಭೂಮಿಯ ಮೇಲೆ ನಡೆಸುವ ಅಳತೆಯ ಅಂಕಿ ಅಂಶಗಳು ಬ್ರಹ್ಮಾಂಡದ ಬೇರೊಂದೆಡೆಯಲ್ಲಿರುವ ವೀಕ್ಷ ಕನ ದೃಷ್ಟಿಯಲ್ಲಿ ಸರಿಹೊಂದುವುದಿಲ್ಲ. ಐನ್‌ಸ್ಟೈನಿನ ಈ ವಾದಸರಣಿಗಳಿಂದ ಭೌತ ಶಾಸ್ತ್ರದ ಆಪಾದಮಸ್ತಕ ಪರ್ಯಂತ ಹಲವಾರು ವ್ಯಾಧಿಗಳು ಅಂಟಿರುವಂತೆ ತಿಳಿಯ ಬಂದಿತು. ಅಲ್ಲಿಯವರಿವಿಗೆ ಪ್ರಚಾರದಲ್ಲಿದ್ದಂತೆ, ದೇಶ, ಕಾಲ, ದ್ರವ್ಯಗಳು ಒಂದೊಂದೂ ಸರ್ವಸ್ವತಂತ್ರವೆಂಬ ಭಾವನೆ ಸರಿಯಲ್ಲವೆಂದೂ, ಇವೆಲ್ಲವೂ ಪರಸ್ಪರಾ ವಲಂಬಿಗಳೆಂದೂ, ಇದೇ ಸಾಪೇಕ್ಷತತ್ವದ ತಳಹದಿಯೆಂದೂ, ತಿಳಿಯಬೇಕು. ಗೆಲಿಲಿಯೊ, ನ್ಯೂಟನ್ ಮುಂತಾದ ಹಿಂದಿನ ತಲೆಮಾರಿನವರ ಚಲನಶಾಸ್ತ್ರದಲ್ಲಿ, ಕಾಲವು ಸರ್ವ ಸ್ವತಂತ್ರವೆಂದೂ ನಿರಪೇಕ್ಷವೆಂದೂ ಪರಿಗಣಿಸಲ್ಪಟ್ಟು, ಪರಸ್ಪರ ಚಲನೆ ಯಲ್ಲಿರುವ ಎಲ್ಲ ವೀಕ್ಷಕರಿಗೂ ಸಾಮಾನ್ಯವಾದ ಒಂದು 'ಏಕಕಾಲ' ವುಂಟೆಂಬ ಭಾವನೆ ಅಡಕವಾಗಿತ್ತು. ಐನ್‌ಸ್ಟೈನಿನ ವಾದದಿಂದ ಕಾಲಕ್ಕೆ ಇದ್ದ ಈ ಆದರ್ಶ ಕಲ್ಪನೆ ಮಾಯವಾಗಿ, ಪ್ರಯೋಗದಿಂದಲೇ ನಿರ್ದೇಶಿಸಲಾಗುವ ಕಾಲದ ಒಂದು ಹೊಸ ಭಾವನೆ ಏರ್ಪಟ್ಟಿತು. ಒಂದು ವಸ್ತುವಿನ ಉದ್ದವು ಆ ವಸ್ತುವಿನ ಸ್ವಾಭಾವಿಕ ಗುಣವೆಂದೂ, ಅದನ್ನು ಅಳತೆಮಾಡುವ ವೀಕ್ಷಕನ ಚಲನೆಯನ್ನು ಅವಲಂಬಿಸುವು

ದಿಲ್ಲವೆಂದೂ ತಿಳಿದಿದ್ದ ದೃಢನಂಬಿಕೆಯೂ ಮಾಯವಾಯಿತು. ಹೀಗೆ ಕಾಲ, ದೇಶ, ದ್ರವ್ಯಗಳ ಪ್ರಮಾಣವು ಪ್ರತಿಯೊಂದು ಸ್ವತಂತ್ರವಾದ ಒಂದು ಸತ್ಯಾಂಶವಲ್ಲವೆಂದೂ, ಅವೆಲ್ಲಾ ವೀಕ್ಷಕನಿಗೂ ಅವನ ಪ್ರಪಂಚಕ್ಕೂ ಇರುವ ಸಂಬಂಧಗಳ ಭೌತ ಸೂಚನೆ ಯೆಂದೂ ಸಿದ್ಧವಾಯಿತು.

ಭೌತಶಾಸ್ತ್ರದಲ್ಲಿ ಆರ್ಷೇಯವಾಗಿ ಬಂದಿದ್ದ ಭಾವನೆಗಳನ್ನು ಬದಿಗಿಟ್ಟು, ಪ್ರಯೋಗಗಳಿಂದ ಸಿದ್ಧವಾದ ವಿಚಾರಗಳ ತಳಹದಿಯ ಮೇಲೆ ದೇಶ, ಕಾಲ, ದ್ರವ್ಯ ಗಳ ಸಂಬಂಧವನ್ನು ಪರೀಕ್ಷಿಸುವುದು ಐನ್‌ಸ್ಟೈನಿನ ಗುರಿಯಾಯಿತು. ಈ ಸಂದರ್ಭ ದಲ್ಲಿ ಪ್ರಯೋಗಸಿದ್ಧವಾದ ವಿಷಯಗಳು ಹೀಗಿವೆ :

(೧) 'ಈತರ್' ಗಾಳಿಯ ವೇಗವನ್ನು ಅಳೆಯುವುದು ಅಸಾಧ್ಯ ; ಅಂದರೆ ಭೂಮಿಯನ್ನಾವರಿಸಿರುವ 'ಈತರ್' ಸಮುದ್ರದಲ್ಲಿ ಭೂಮಿಯ ಚಲನೆಯನ್ನು ಕಂಡುಹಿಡಿಯುವುದೂ ಅಸಾಧ್ಯ. ಪ್ರಕೃತಿಯ ಒಳಸಂಚೆಂದು ತೋರುವ ಈ ವಿಚಾರ ಒಂದು ಸತ್ಯಾಂಶ.

(೨) ಬೆಳಕು, ರೇಡಿಯೊ ಮುಂತಾದ ವಿದ್ಯುತ್ತರಂಗಗಳನ್ನು ಪ್ರಸಾರ ಮಾಡುವ ಸಲಕರಣಗಳು ಸ್ತಂಭೀಭೂತವಾಗಿ ನಿಂತಿರಲಿ ಅಥವಾ ಚಲಿಸುತ್ತಿರಲಿ, ವಿದ್ಯುತ್ತರಂಗಗಳ ವೇಗ ಮಾತ್ರ ವ್ಯತ್ಯಾಸ ಹೊಂದುವುದಿಲ್ಲ. ಹಾಗೆಯೇ ವೀಕ್ಷಕನ ಚಲನೆಯ ಪರಿಣಾಮವಾಗಿಯೂ ಅವುಗಳ ವೇಗ ವ್ಯತ್ಯಾಸವಾಗಿ ಕಾಣುವುದಿಲ್ಲ. ಇದು ಎರಡನೆಯ ಸತ್ಯಾಂಶ.

ಐನ್‌ಸ್ಟೈನನು ಮೇಲಿನ ಎರಡು ಸತ್ಯಾಂಶಗಳಲ್ಲೂ ಯಾವ ವಿಧವಾದ ಪರಸ್ಪರ ವಿರೋಧವೂ ಇಲ್ಲವೆಂದು ಸಕಾರಣವಾಗಿ ತೋರಿಸಿಕೊಟ್ಟನು. ಪರಸ್ಪರ ಚಲನೆಯಲ್ಲಿ ರುವ ಹಲವಾರು ವೀಕ್ಷಕರ ದೃಷ್ಟಿಯಲ್ಲಿ ದೇಶ, ಕಾಲ, ದ್ರವ್ಯಗಳ ಪ್ರಮಾಣದಲ್ಲಿ ಭಿನ್ನಾಭಿಪ್ರಾಯ ತಲೆದೋರುವುದರಿಂದ, ಯಾವನ ಅಳತೆ ಸತ್ಯವೆಂಬ ಪ್ರಶ್ನೆ ಏಳುವು ದಿಲ್ಲ; ಅದಕ್ಕೆ ಅರ್ಥವೂ ಇಲ್ಲ, ಔಚಿತ್ಯವೂ ಇಲ್ಲ. ಆದರೆ ಪ್ರತಿಯೊಬ್ಬನೂ ತಾನು ಮಾಡುವ ಅಳತೆಗಳಿಂದ ಪ್ರಕೃತಿ ನಿಯಮಗಳಿಗೆ ನಿರ್ದಿಷ್ಟವಾದ ಸೂತ್ರರೂಪವನ್ನು ಕೊಡಬಹುದು, ಅವನವನ ಪ್ರಯೋಗಗಳಿಂದ ಸಿದ್ಧವಾದ ಪ್ರಕೃತಿ ನಿಯಮ ಸೂತ್ರ ಗಳು ಮಾತ್ರ ನಿತ್ಯ, ಸರ್ವಸತ್ಯ ; ವಿಕ್ಷಕನ ಚಲನ ವಲನಗಳನ್ನು ಅವಲಂಬಿಸದ ಸರ್ವಸ್ವತಂತ್ರವೂ, ನಿರಪೇಕ್ಷವೂ ಆದ ನಿಯಮಗಳು ; ದೇಶ ಕಾಲ ದ್ರವ್ಯಗಳು ಸಾಪೇಕ್ಷ, ಪ್ರಕೃತಿ ನಿಯಮಗಳು ನಿರಪೇಕ್ಷ. ಈಗ ಐನ್‌ಸ್ಟೈನಿನ ಸಾಪೇಕ್ಷ ನಿಯ ಮದ ಸ್ವಾರಸ್ಯವನ್ನು ಓದುಗರು ಸ್ವಲ್ಪಮಟ್ಟಿಗಾದರೂ ಗ್ರಹಿಸಬಹುದು: 'ಭೌತವ್ಯೂಹ ಗಳ ಸ್ಥಿತಿ ವ್ಯತ್ಯಾಸಗಳನ್ನು ಪರೀಕ್ಷಿಸುವ ವೀಕ್ಷಕನ ಚಲನೆಯಿಂದ ಸ್ಥಿತಿ ವ್ಯತ್ಯಾಸಕ್ಕೆ ಸಂಬಂಧಿಸುವ ಪ್ರಕೃತಿನಿಯಮಗಳು ರೂಪಾಂತರ ಹೊಂದುವುದಿಲ್ಲ.' ವಿದ್ಯುತ್ತರಂಗ ಗಳಿಗೂ ಈ ಸಾಪೇಕ್ಷನಿಯಮವು ಅನ್ವಯಿಸುವುದೆಂಬ ಹೊಸ ಭಾವನೆ ಐನ್‌ಸ್ಟೈನಿಗೆ ಅಪಾರವಾದ ಕೀರ್ತಿಯನ್ನು ತಂದಿತು.

ಭೌತವಿಜ್ಞಾನದ ತಳಹದಿಯನ್ನು ಪ್ರಸ್ತಾಪಿಸಿ ಸಾಧಿಸಿದ ಈ ಸಾಪೇಕ್ಷ ಸಿದ್ಧಾಂತವು ೧೯೧೫ ರಲ್ಲಿ ಐನ್‌ಸ್ಟೈನಿನ ಪ್ರತಿಭಾಪ್ರಭಾವದಿಂದ ಇನ್ನೊಂದು ಹೆಜ್ಜೆ ಮುನ್ನುಗ್ಗಿತು. ಇದುವರೆವಿಗೆ ಗಣನೆಗೆ ತೆಗೆದುಕೊಂಡಿದ್ದ ವೇಗ ವ್ಯತ್ಯಾಸವಿಲ್ಲದ ಪರಸ್ಪರ ಚಲನೆಯ ಜೊತೆಗೆ, ವೇಗೋತ್ಕರ್ಷವಿರುವ ಪರಸ್ಪರ ಚಲನೆಯ ವಿಮರ್ಶೆಯಲ್ಲಿ ತೊಡಗಿದನು. ಇದರಿಂದ ನ್ಯೂಟನ್ನಿನ ಗುರುತ್ವಾಕರ್ಷಣ ನಿಯಮಕ್ಕಿಂತ ಹೆಚ್ಚು ಪ್ರಭಾವಯುತವಾದ ಹೊಸನಿಯಮವನ್ನು ಕಂಡುಹಿಡಿದನು. ಇದರ ಸಹಾಯದಿಂದ ಖಗೋಳಶಾಸ್ತ್ರದಲ್ಲಿ ಆದುವರೆವಿಗೆ ತಲೆದೋರಿದ್ದ ಹಲವಾರು ಸಮಸ್ಯೆಗಳು ಮಾಯವಾದುವು. ಭೌತ ವಿಜ್ಞಾನದ ಚರಿತ್ರೆಯಲ್ಲಿ ಅತ್ಯಲ್ಪ ಸಂಖ್ಯೆಯ ಮೂಲ ಭಾವನೆಗಳಿಂದ ಮಹತ್ಸಾಧನೆಯನ್ನು ಸಾಧಿಸಿರುವ ಸಿದ್ಧಾಂತವೆಂದರೆ ಐನ್‌ಸ್ಟೈನಿನ ಸಾಪೇಕ್ಷ ಸಿದ್ಧಾಂತವೆಂದು ನಿಸ್ಸಂದೇಹವಾಗಿ ಹೇಳಬಹುದು.

ಎಲ್. ಸೀಬಯ್ಯ

# ಕನ್ನಡ ನುಡಿಯ ಅಳಿವು-ಉಳಿವು

ಭಾಷೆ ಬೆಳೆಯುತ್ತ ಬಂದಂತೆ ಅದರ ಸ್ವರೂಪದಲ್ಲಿ ಹಲವು ಮಾರ್ಪಾಟುಗಳಾಗುತ್ತವೆ. ಕೆಲವು ಕಟ್ಟುಪಾಡುಗಳಿಗೆ ಒಳಪಟ್ಟು ಈ ಮಾರ್ಪಾಟಾಗುತ್ತವೆಯೆಂದು ಭಾಷಾಶಾಸ್ತ್ರಜ್ಞರು ಗೊತ್ತುಮಾಡಿದ್ದಾರೆ. ಕನ್ನಡದಲ್ಲಿ ಈವರೆಗೆ ಆಗಿರುವ ಮಾರ್ಪಾಟುಗಳಲ್ಲಿ ಶಬ್ದಗಳ ರೂಪ ವ್ಯತ್ಯಾಸಗಳು ಒಂದು ಮುಖ್ಯವಾದ ಮಾರ್ಪಾಟು: ಇದು ನೈಸರ್ಗಿಕ ಮತ್ತು ಆಂತರಿಕ ಕಾರಣದ (ಎಂದರೆ, ಮನುಷ್ಯ ಸ್ವಭಾವಕ್ಕೆ ಸಹಜವಾದ ಸೌಲಭ್ಯಾಕಾಂಕ್ಷೆ ಮತ್ತು ಉಚ್ಚಾರಣೆಯ ಭೇದಗಳು—ಇವುಗಳ) ಪರಿಣಾಮ ಫಲ. ಈ ಮಾರ್ಪಾಟು ನಮಗೆ ತಿಳಿಯದಂತೆಯೇ ಎಂದಿನಿಂದಲೂ ನಡೆದು ಬಂದಿದೆ. ಇದಕ್ಕೆ ಅನೇಕ ಉದಾಹರಣೆಗಳನ್ನು ಕೊಡಬಹುದು. (ಕೆಲವು ಉದಾ.–ಪೊಸಂತಿಲ್ > ಹೊಸಲು; ತಣ್ಗೂೞ್ > ತಂಗಳು; ಕಳ್ > ಕಳ್ದು > ಕದಿ; ಗೆಲ್ > ಗೆಲ್ದು > ಗೆದೆ, ಗೆದಿ; ಅಲರ್ > ಅರಲ್ > ಅರಳು.) ರೂಪ ವ್ಯತ್ಯಾಸಗಳು ಮಾತ್ರವಲ್ಲದೆ ಅರ್ಥ ವ್ಯತ್ಯಾಸಗಳೂ ಉಂಟಾಗುತ್ತವೆ. (ಎಳ್ + ನೆಯ್ > ಎಣ್ಣೆ; ಕಂಪು, ಕವಳ, ಅಮ್ಮ ಇತ್ಯಾದಿ). ಕನ್ನಡದಲ್ಲಿ ಬಹು ಹಿಂದಿನಿಂದಲೂ ಗ್ರಂಥರಚನೆಯೂ ವ್ಯಾಕರಣ ಲಕ್ಷಣ ಶಾಸ್ತ್ರಗಳೂ ಬೆಳೆದುಕೊಂಡು ಬಂದಿರುವುದರಿಂದ ಈ ಬಗೆಯ ಮಾರ್ಪಾಟುಗಳು ಹುಚ್ಚು ಹುಚ್ಚಾಗಿ ಸಾಗದೆ, ಒಂದು ಹದ್ದಿಗೆ ಒಳಪಟ್ಟಿವೆ. ಈ ಕಾರಣದಿಂದ ಭಾಷೆಯ ಸ್ವರೂಪ ತಕ್ಕಮಟ್ಟಿಗೆ ಉಳಿದುಕೊಳ್ಳಲೂ ಸಾಧ್ಯವಾಗಿದೆ.

ಭಾಷೆಯ ಬೆಳವಣಿಗೆಯಲ್ಲಿ ಆಂತರಿಕ ಕಾರಣದಿಂದ ಶಬ್ದಗಳ ರೂಪ-ಅರ್ಥ ವ್ಯತ್ಯಾಸಗಳ ಒಂದು ಕ್ರಿಯೆ ನಡೆಯುತ್ತಿದ್ದರೆ, ಬಾಹ್ಯಕಾರಣದಿಂದ ಇನ್ನೊಂದು ಕ್ರಿಯೆ ನಡೆಯುತ್ತದೆ. ಈ ಬಾಹ್ಯ ಕಾರಣವೆಂದರೆ ಅನ್ಯಭಾಷಾಸಂಸರ್ಗ. ಶಬ್ದಗಳ ರೂಪ-ಅರ್ಥ ವ್ಯತ್ಯಾಸಗಳ ಮೇಲೆ ಈ ಬಾಹ್ಯ ಕಾರಣದ ಪ್ರಭಾವ ಕಾಣಬರುವುದಿಲ್ಲ. ಇದರ ಪ್ರಭಾವ ಶಬ್ದ ಸಂಪತ್ತಿನ ಮೇಲೆ: ಬೇರೆಯ ಭಾಷೆಯ ನಿಕಟ ಸಂಪರ್ಕದ ಫಲವಾಗಿ ಹೊಸ ಶಬ್ದಗಳು ಸೇರುತ್ತವೆ; ಆ ಸಂಪರ್ಕ ಪ್ರಬಲವಾದರೆ ಅನ್ಯಭಾಷೆಯ ಶಬ್ದಗಳು ನಮ್ಮ ನುಡಿ ಬೊಕ್ಕಸಕ್ಕೆ ನುಗ್ಗಿ, ನಮ್ಮ ನುಡಿಗಳು ಸಮುಕಲಾಗುತ್ತವೆ.

ಕನ್ನಡಕ್ಕೆ ಹಲವು ಹೊರ ಭಾಷೆಗಳ ಕೆಳೆಬೆಳೆಯಿತು: ಸಂಸ್ಕೃತ, ಪ್ರಾಕೃತ, ಪೋರ್ತುಗೀಸು, ಪರ್ಷಿಯನ್, ಹಿಂದೂಸ್ತಾನಿ, ಮರಾಠಿ ಮತ್ತು ಇಂಗ್ಲಿಷ್. ಕೆಳೆಗೆ ಸಹಜವಾದ ಕೊಳ್‌ಕೊಡೆಯಲ್ಲಿ ಕನ್ನಡ ತಾನು ಕೊಟ್ಟದ್ದಕ್ಕಿಂತ ಕೊಂಡು ಕಳೆದುಕೊಂಡಿರುವುದು ಹೆಚ್ಚು. (ನೀರ್, ಮಿಾನ್, ಮೊದಲಾದ ಕೆಲವು ಶಬ್ದಗಳು ದ್ರಾವಿಡ ಭಾಷೆಯಿಂದ ಸಂಸ್ಕೃತಕ್ಕೆ ಹೋಗಿವೆಯೆಂದೂ, ಗ್ರೀಕ್‌ಪ್ರಹಸನವೊಂದರಲ್ಲಿ ಕನ್ನಡ

ಮಾತುಗಳಿವೆಯೆಂದೂ ವಿದ್ವಾಂಸರು ನಿರ್ಣಯಮಾಡಿದ್ದಾರೆ.) ಆದರಲ್ಲಿಯೂ, ಸಂಸ್ಕೃತ ಹಿಂದೂಸ್ತಾನಿ ಇಂಗ್ಲೀಷು—ಈ ಭಾಷೆಗಳಿಂದ ಬಂದಿರುವಷ್ಟು ಶಬ್ದ ಸಂಪತ್ತು ಬೇರೆಯ ಭಾಷೆಗಳಿಂದ ಬಂದಿಲ್ಲ. ಇದಕ್ಕೆ ಕಾರಣ ಸ್ಪಷ್ಟ: ಈ ಮೂರು ಭಾಷೆಗಳ ಜನವೂ ಬೇರೆ ಬೇರೆ ಕಾಲಗಳಲ್ಲಿ, ಒಂದಲ್ಲ ಒಂದು ರೀತಿಯಲ್ಲಿ, ಕನ್ನಡಿಗರ ಮೇಲೆ ಪ್ರಭುತ್ವ ಇಟ್ಟುಕೊಂಡಿದ್ದವರು. ಈ ಮೂರು ಭಾಷೆಗಳೂ ಕನ್ನಡದ ಬೊಕ್ಕಸಕ್ಕೆ ಹೊನ್ನಿನ ಜೊತೆಗೆ ಬೇಕಾದಷ್ಟು ಕಾಗದದ, ತಾಮ್ರದ, ನಿಕ್ಕಲಿನ (ಕಡೆಗೆ, ತೊಗಲಿನ) ನಾಣ್ಯಗಳನ್ನು ತುಂಬಿದುವು. ಅವಕ್ಕೆ ಬೆಲೆಯೇ ಇಲ್ಲವೆಂದಲ್ಲ; ಸಲ್ಲುವುದಿಲ್ಲವೆಂದಲ್ಲ. ಆದರೆ, ಕನ್ನಡದ ಹೊನ್ನು ಮಾತ್ರ ನಮಗೆ ಇದ್ದೂ ಇಲ್ಲದಂತಾಗಿದೆ. ಇದು ವಿಷಾದದ ಸಂಗತಿ.

ಇನ್ನು, ಕನ್ನಡ ಹೊನ್‌ನುಡಿಯಳಿವು ಹೇಗೆ ಉಂಟಾಯಿತೆಂಬುದನ್ನು ಕೆಲವು ಉದಾಹರಣೆಗಳಿಂದ ನೆನಪಿಗೆ ತಂದುಕೊಳ್ಳಬಹುದು. ಕೆಳಗಿನ ಉದಾಹರಣಮಾಲೆ ಸಂಸ್ಕೃತ ಪದಗಳು ಹೇಗೆ ಕನ್ನಡ ನುಡಿಗಳ ನೆಲೆ ಹಿಡಿದಿವೆ ಎಂಬುದನ್ನು ಮನದಟ್ಟು ಮಾಡಿಕೊಡುತ್ತದೆ.

ಕನ್ನಡದಲ್ಲಿ 'ದಿನ' ಎಂಬುದಕ್ಕೆ ಮಾತು ಇಲ್ಲವಾಯಿತು; ತಮಿಳಿನಲ್ಲಿ 'ನಾಳ್' ಎಂಬ ಮಾತು ಇಂದಿಗೂ ನಿತ್ಯದ ಬಳಕೆಯಲ್ಲಿದೆ; ಇದು ಕನ್ನಡದಲ್ಲಿಯೂ ಹಿಂದೆ ರೂಢಿಯಲ್ಲಿದ್ದಿರಬೇಕು. ಈ 'ನಾಳ್' ಎಂಬ ಮಾತನ್ನು ಬಳಕೆಗೆ ತರುವುದು ಅಸಾಧ್ಯವೆಂದೇ ತೋರುತ್ತದೆ, 'ದಿನ' ಅಷ್ಟು ಬಲವಾಗಿ ಕುಳಿತುಬಿಟ್ಟಿದೆ. ಓದದವರ ಬಾಯಲ್ಲಿ ಕೂಡ 'ದಿನ' 'ಜಿನ' ವಾಗಿ, ಕನ್ನಡ ನಾಲಗೆಯನ್ನೇ ಗೆದ್ದಿದೆ. 'ಹಗಲು' ಕೂಡ 'ದಿನ' ಕ್ಕೆ ಪ್ರತಿ ಪದವೇ. (ಮುದ್ದಣನು 'ಪಗಲ್', 'ನಾಳ್' ಎಂಬ ಮಾತುಗಳನ್ನು 'ದಿನ' ಎಂಬ ಅರ್ಥದಲ್ಲಿ ಪುನರುಜ್ಜೀವನಗೊಳಿಸಿದ್ದಾನೆ. ಆದರೆ, ಅವನ ಗ್ರಂಥಗಳು ಹಳಗನ್ನಡದಲ್ಲಿವೆ.)

ನಿತ್ಯವೂ ಮೂಡಿ ನಮ್ಮೆದರು ಬೆಳಗುವ 'ನೇಸಱ್' 'ಸೂರ್ಯ'ನಾದ; ನೇಸಱನ್ನು ನಾವಿಂದು ಕಾಣಬೇಕಾದರೆ ಕನ್ನಡನುಡಿಗಳನ್ನು ನಮಗಾಗಿ ಕಾದಿಟ್ಟ ಹಿಂದಿನ ಕವಿಗಳ ಕಾವ್ಯ ಪ್ರಪಂಚಕ್ಕೆ ಹೋಗಬೇಕು. ಇಂದಿನ ಕಾವ್ಯದ ಬರವಣಿಗೆಯಲ್ಲಿ ಕೂಡ ಈ ಮಾತನ್ನು ಬಳಸಲು ಹಿಂಜರಿಯುವಂತಾಗಿದೆ. 'ಸೂರ್ಯ' ಎಂಬ ಅರ್ಥಕೊಡುವ ಇನ್ನೊಂದು ಕನ್ನಡ ಮಾತು 'ಪೊಟ್ತು' 'ಹೊತ್ತು' ಎಂದಾಗಿ ಇಂದಿಗೂ ಹಳ್ಳಿಗರ ಮಾತಿನಲ್ಲಿ ನಿಂತಿದೆ; 'ಹೊತ್ತಾರೆ' ಯಲ್ಲಿಯೂ 'ಹೊತ್ತು' ಅಡಗಿದೆ. (ಪೊಟ್ತರೆ>ಹೊತ್ತಾರೆ). 'ಇವತ್ತು', 'ಅವತ್ತು' ಎಂಬ ಮಾತುಗಳಲ್ಲಿಯೂ ಈ 'ಹೊತ್ತು' ಅವಿತುಕೊಂಡಿದೆ. (ಈ ಪೊಟ್ತು>ಈವೊತ್ತು>ಇವೊ(ವ)ತ್ತು.) 'ಹೊತ್ತು ಹುಟ್ಟದೆ, ಮುಳುಗದೆ' ಎಂದು ಇಂದಿಗೂ ಮಾತಾಡುವ ಬಹು ಸಂಖ್ಯೆಯ ಹಳ್ಳಿಗರು ಪಟ್ಟಣಿಗರ ಭಾಷೆಯಿಂದ 'ಸೂರ್ಯ'

ನನ್ನು ಸ್ವೀಕರಿಸಿ, 'ಹೊತ್ತು' ಕನ್ನಡದ 'ಬಾನಿ' ನಲ್ಲಿ ಮುಳುಗುವ ಕಾಲ ಬಂದರೆ ಆಶ್ಚರ್ಯವಿಲ್ಲ.

ಕನ್ನಡ ಸೂರ್ಯನಿಗೇ ಈ ಗತಿಯಾದ ಮೇಲೆ ಚಂದ್ರನದೇನು! 'ಪೆಱೆ'—'ತಿಂಗಳ್' ಕನ್ನಡ ಬಾನಿನಲ್ಲಿ ಇನ್ನು ಬೆಳಗಲಾಗದಂತೆ ಮುಳುಗಿಯೇ ಹೋಯಿತು; ಅದರೆಡೆಯಲ್ಲಿ 'ಚಂದ್ರ' ಪ್ರಕಾಶಿಸತೊಡಗಿದ; ಕನ್ನಡ ತಾಯಿ ಕನ್ನಡ ಹಸುಳೆಗೆ 'ಚಂದ' ನನ್ನೇ ತೋರಬೇಕಾಯಿತು; 'ತಿಂಗಳ ಮಾಮ'ನೂ 'ಚಂದ ಮಾಮ' ನಾದ. 'ತಿಂಗಳು' ಈಗ 'ತಿಂಗಳ ಬೆಳಕಿ'ನಲ್ಲೂ, 'ಬೆಳುದಿಂಗಳ'ಲ್ಲೂ ಬೆಳಗು ತ್ತಿದೆ; ಮೂವತ್ತುದಿನಗಳ ಕಾಲದ ಎಣಿಕೆಯ ಮಾತಾಗಿಯೂ ಉಳಿದಿದೆ. ಬೆಳು ದಿಂಗಳು ಇನ್ನೂ 'ಚಂದ್ರಿಕೆ' ಯಾಗದಿರುವುದು ನಮ್ಮ ಸೈಪು!

'ಮೀನ್'! ಮಾತಿನಲ್ಲಿ ಅರ್ಥ ಹೇಗೆ ತಟ್ಟನೆ ಹೊಳೆಯುತ್ತದೆ! ಆದರೆ, 'ನಕ್ಷತ್ರ' ಎಂಬ ಅರ್ಥದಲ್ಲಿ ಬಹುಕಾಲದ ಹಿಂದೆಯೇ ಅಳಿದ ಮಾತಿದು. 'ಮೀನ್' ಎಂದರೆ ನೀರಿನಲ್ಲಿ ಫಳಫಳಿಸುವ ಪ್ರಾಣಿಯೂ ಹೌದು. ಈ ಅರ್ಥದಲ್ಲಿ ಇನ್ನೂ ಉಳಿದಿದೆ.

ಇನ್ನು, ಈ ಸೂರ್ಯ ಚಂದ್ರ ನಕ್ಷತ್ರ—ಇವು ಇರುವೆಡೆಯಾದ 'ಬಾನ್' ಈಗ ಶೂನ್ಯ! ಎಷ್ಟು ಪುಟ್ಟ ಸೊಗಸಾದ ಮಾತು! ಬಾನನ್ನು ಬಿಟ್ಟು 'ಆಕಾಶ' ವನ್ನಿಟ್ಟುಕೊಂಡಿದ್ದೇವೆ. ಹೊಸ ಕನ್ನಡದ ಹಲವು ಬರಹಗಾರರು ಈ ಮಾತನ್ನು ಮತ್ತೆ ಅಲ್ಲಲ್ಲಿ, ವಿಶೇಷವಾಗಿ ಕವಿತೆಯಲ್ಲಿ, ಬಳಸತೊಡಗಿದ್ದಾರೆ. ಆದರೆ, ಬಳಕೆ ಮಾತಿನಲ್ಲಿ ಮತ್ತೆ ಬಂದು ನೆಲೆಸೀತೆನ್ನಿಸುವುದಿಲ್ಲ. ಬಾನಿನಿಂದ ಆದ 'ಬಾನುಲಿ' ಕೂಡ 'ರೇಡಿಯೋ' ಎಂಬ ಹೆಚ್ಚು ಬಳಕೆಯಲ್ಲಿರುವ ಮಾತನ್ನು ಹೊರದೂಡಲಾರ ದೆಂದು ಕಾಣುತ್ತದೆ.

ಆಕಾಶವಾಯಿತು; ಇನ್ನು ದಿಕ್ಕುಗಳ ವಿಚಾರ: ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ ಇವು ಮೂಡಲು, ಪಡುವಲು, ತೆಂಕಲು, ಬಡಗಲುಗಳಿಗೆ ಬದಲಾಗಿ ಪಟ್ಟಣಿ ಗರ ನುಡಿವಳಿಯಲ್ಲಿ ಬೇರೂರಿಬಿಟ್ಟಿವೆ. ದಿಳ್ಳಿಯವರನ್ನು ನೋಡಿ ನಯನುಡಿಗಳನ್ನು ಕಲಿಯುವ ಹಳ್ಳಿಯವರು ಈ ಅಚ್ಚಗನ್ನಡದ ನುಡಿಗಳನ್ನು ಎಂದು ಕೈ ಬಿಡುವರೋ ಎಂಬ ಶಂಕೆ ಬಾಧಿಸದೆ ಇರದು.

'ನದಿ' ಬಂದು 'ತೊಱೆ' (ಹೊಳೆ ಕೂಡ) ಬಹು ಮಟ್ಟಿಗೆ ಕಣ್ಮರೆಯಾ ಯಿತು; 'ಸಮುದ್ರ' ('ಸಂದ್ರ' ಎಂಬ ತದ್ಭವ ಕೂಡ ಆಗಿ) ತಾನೇ ತಾನಾಗಿ 'ಕಡಲು' ಬಹುಮಟ್ಟಿಗೆ ಬತ್ತಿಯೇ ಹೋಯಿತು. (ಕೆರೆ ಕಟ್ಟೆಗಳೆಲ್ಲ ಸಮುದ್ರ ಸಾಗರಗಳಾಗಿಬಿಟ್ಟಿವೆ!) ನಾವು ತಿನ್ನುವ 'ಕೂೞ್', 'ಓಗರ' (?), 'ಅನ್ನ'ವಾ ಯಿತು. ನಾವು ಕುಡಿಯುವ 'ನೀರ್' ಇರ್> ಈರ್> ನೀರ್; ಇರ್ಪು, ಇರ್+

ಪನಿ=ಇಬ್ಬನಿ ; ಈರುಳ್ಳಿ, ನೀರುಳ್ಳಿ—ಇವನ್ನು ಗಮನಿಸಿ) ಅಚ್ಚ ದ್ರಾವಿಡ ಮಾತಾದರೂ, ಕುಡಿಯುವ ನೀರು ತಾನೆ ಏಕೆ ಕನ್ನಡವಾಗಿರಬೇಕೆಂದು ಅದನ್ನೂ ಸಂಸ್ಕೃತ ಜನ್ಯವೆಂದೇ ಎಣಿಸಿದರು ನಮ್ಮವರು. 'ಮನುಷ್ಯ'ರ ಮುತ್ತಿಗೆ ನಡೆದು ಕನ್ನಡದ 'ಆಳ್'ಗಳು 'ಸೇವಕ'ರಾದರು! ಕನ್ನಡ ಮಕ್ಕಳು ಇನ್ನೂ ಕನ್ನಡ 'ಹಾಲು' ಕುಡಿಯುತ್ತಿರುವುದಕ್ಕೆ ನಾಡತಾಯಂದಿರ ಕನ್ನಡತನ ಕಾರಣ. ಕಾಲಿಗೆ 'ಎಱಗು' ವುದಕ್ಕಿಂತ 'ನಮಸ್ಕಾರ ಮಾಡು'ವುದು ನಮಗೆ ಗಂಭೀರ. 'ನಿದ್ರೆಮಾಡು'ವುದನ್ನು ಕಲಿತ ನಾವು 'ಒಱಗು'ವುದು (ಸಾಯುವುದು) ಕಡೆಯಲ್ಲೇ! 'ಸಾ'ಯುವುದೂ, 'ಮಡಿ'ಯುವುದೂ ಸಾಮಾನ್ಯರನ್ನು ಕುರಿತು ಹೇಳುವ ಮಾತು; ಮೇಲು ಮಟ್ಟದ ಜನ ದಿವಂಗತರೋ ನಿಧನರೋ ಆಗುತ್ತಾರೆ. ಸತ್ತಮೇಲೆ ಮಣ್ಣುಮಾಡುವುದು, ಹುಗಿಯುವುದು, ಹೆಣಸುಡುವುದು ಒರಟು ಮಾತುಗಳು; ಶವಸಂಸ್ಕಾರ, ದಹನಕ್ರಿಯೆ, ಅಂತ್ಯಕ್ರಿಯೆ ಗಂಭೀರ ಪದಗಳು; 'ಸೂಡು' 'ಶ್ಮಶಾನ' (ತದ್ಭವದಲ್ಲಿ 'ಮಸಣ') ಸಾವಿನ ವಿಚಾರವೇ ಏಕೆ? 'ಬದುಕು', 'ಬಾಳು' 'ಜೀವನ', ದೊಂದಿಗೆ ಹೋರಾಡುತ್ತಿವೆ. 'ಜೀವಣ ಮಾಡುವುದೇ ಕಸ್ಟ' ಎನ್ನುತ್ತಾರೆ ಹಳ್ಳಿಗರು ಕೂಡ. ಮದುವೆ ಮುಂಜಿಗಳಿಗೆ 'ಕರೆ'ಯುವ ಕಡೆ 'ಆಹ್ವಾನಿಸು'ತ್ತೇವೆ, 'ಆಮಂತ್ರಿಸು'ತ್ತೇವೆ. ಹೆಣ್ಣು ಮಕ್ಕಳು 'ವ್ರತ'ದೊಂದಿಗೆ 'ನೋಹಿ'ಯನ್ನು ಬಿಡಲಾರದೆ (ಈಗ ನಾವು ಗೇಟು ಬಾಗಿಲು, ಕಾಂಪೌಂಡುಗೋಡೆ ಇಟ್ಟುಕೊಂಡಿರುವಂತೆ) 'ನೋಹಿ ವ್ರತ'ಗಳನ್ನು ಮಾಡುತ್ತಿದ್ದರು. ಈಗ ಅವರ ವ್ರತಗಳೆಲ್ಲ ಪುರಾಣಗತವಾದ್ದರಿಂದ 'ನೋಹಿ' (<ನೋಂಪಿ) ಇಲ್ಲವೆಂದು ಕೊರಗಬೇಕಾಗಿಲ್ಲ. ಯಾವ ಕನ್ನಡ ಮಾತೇ ಆಗಲಿ ಕಳೆದುಹೋಯಿತೆಂದು ನಾವು ಕೊರಗಲೇಕೆ, ಮರುಗಲೇಕೆ, ಕುದ್ದುಕೊಳ್ಳಲೇಕೆ? ವ್ಯಥೆಪಡುವುದನ್ನು, ವಿಷಾದಪಡುವುದನ್ನು, ವ್ಯಸನಪಡುವುದನ್ನು ನಾವು ಕಲಿತಿಲ್ಲವೆ? 'ಅಟಲ್' ಹೋಯಿತೆಂದು 'ದುಃಖ' ಪಡಲೇಕೆ?

ಇನ್ನು, ಹಿಂದೂಸ್ತಾನಿ ಮತ್ತು ಇಂಗ್ಲಿಷು ಭಾಷೆಗಳ ಸಂಪರ್ಕದ ಪರಿಣಾಮವಾಗಿ ಕನ್ನಡನುಡಿ ಪಟ್ಟ ನಷ್ಟವನ್ನು ಕೆಲವು ನಿದರ್ಶನಗಳಿಂದ ಅರಿಯೋಣ:

'ರೈಲು' ನಮಗೆ ತೀರ ಹೊಸ ಮಾತು; ಅದು ಬರುವುದಕ್ಕೆ ಮುಂಚೆಯೇ 'ಬಂಡಿ' ಹೋಗಿ 'ಗಾಡಿ' ಬಂದಿತು. ರುಮಾಲು, ಪೇಟ, ಪಗಡಿ, ಷರಟು, ಕೋಟು, ಜುಬ್ಬ, ಕುಡತ, ಷರವಾನಿ, ಬನೀನು, ಕಾಗದ, ಪೇನ, ಪೆನ್ಸಿಲು, ಕ್ರಾಪು, ಸ್ಟೂಲು, ಮೇಜು, ಕುರ್ಚಿ, ಫ್ಯಾಕ್ಟರಿ, ಕಾರ್ಖಾನೆ, ಮುಷ್ಕರ, ಬಂಡವಾಳ, ಥರ್ಮಾಮಿಾಟರು, ಥರ್ಮೋಫ್ಲಾಸ್ಕು, ಸೋಪು (ಸಾಬೂನು), ಕಮ್ಯುನಿಸಮ್ಮು, ಕಾಂಗ್ರೆಸ್ಸು, ಚುನಾವಣೆ, ವೋಟು—ಇವೇ ಮೊದಲಾದ ನಮ್ಮಲ್ಲಿ ಇಲ್ಲದ ಮಾತುಗಳನ್ನು ಯಾವ ಭಾಷೆಯಿಂದಲೇ ಆಗಲಿ ತೆಗೆದುಕೊಳ್ಳಲು ನಾವು ಹಿಂದೆಗೆಯಬೇಕಾದ್ದಿಲ್ಲ. ನಮ್ಮ ಬದುಕಿಗೆ ಹೊಸ ವಸ್ತುಗಳೂ ಉಪಕರಣಗಳೂ ಭಾವ ಭಾವನೆಗಳೂ ಹೊಕ್ಕಾಗ

ತಮ್ಮ ಹುಟ್ಟು ಹೆಸರನ್ನೇ ಹೊತ್ತು ಬರುವುದು ತೀರ ಸಹಜ.* ಸಾಧ್ಯವಿರುವ ಕಡೆ ಅವಕ್ಕೆ ಕನ್ನಡ ಮಾತುಗಳನ್ನು ಕಲ್ಪಿಸಿ ಬಳಕೆಗೆ ತರುವುದರಿಂದ ಕನ್ನಡ ಶಬ್ದ ಕೋಶದ ಕನ್ನಡತನವನ್ನು ಕಾಪಿಡಲು ಅನುವಾಗುತ್ತದೆ. (ಉದಾ—ರೇಡಿಯೊ = ಬಾನುಲಿ; ಚುನಾವಣೆ = ಆಯ್ಕೆ; ಪ್ರೆಸ್ಸು, ಮುದ್ರಣಾಲಯ = ಅಚ್ಚುಕೂಟ; ಅಚ್ಚಿನ ಮನೆ, ಇತ್ಯಾದಿ). ಇಂತಹ ಶಬ್ದಗಳು ಸಾರ್ವತ್ರಿಕವಾಗಿ ಬಳಕೆಗೆ ಬರುವಂತೆ ಮಾಡುವ ಕಾರ್ಯದಲ್ಲಿ ವಿದ್ಯಾವಂತರ, ಲೇಖಕರ, ಕನ್ನಡ ಪತ್ರಿಕೆಗಳ ಪಾತ್ರವೇ ಹಿರಿದು. ಇದು ಹಾಗಿರಲಿ. ಕನ್ನಡ ಮಾತುಗಳಿದ್ದೂ ಹೊರಗಿನ ಮಾತುಗಳನ್ನು ಕೊಂಡು ಹಿಗ್ಗುವ ನಮ್ಮ ಆತ್ಮದ್ರೋಹಕ್ಕೆ ಏನು ಹೇಳೋಣ? ನಾವು ಹಾಕುತ್ತಿದ್ದ 'ಕೆರ,' 'ಮೆಟ್ಟು,' 'ಎಕ್ಕಡ' (?) 'ಚಪ್ಪಲಿ'ಯ ಆಕ್ರಮಣದ ಎದುರು ಕ್ರಮ ಕ್ರಮವಾಗಿ ಹಿಮ್ಮೆಟ್ಟುತ್ತಿರುವುದನ್ನು ಗಮನಿಸಬೇಕು; ನಾಗರಿಕರ ಪಾಲಿಗೆ ಈ ಮಾತುಗಳು ಆಗಲೇ ಹಳಗನ್ನಡವೋ ಹಳ್ಳಿಯ ಮಾತೋ ಆಗಿವೆ! ನಮ್ಮ ಹೆಣ್ಣು ಮಕ್ಕಳ 'ರವಿಕೆ' (?), 'ಕುಪ್ಪಸ' ( <ಕೂರ್ಪಾಸ) ಗಳು 'ಬ್ಲೌಸು'ಗಳೂ, 'ಜಾಕೆಟ್ಟು'ಗಳು 'ಚೋಲಿ' ಗಳೂ ಆಗಿವೆ. 'ತಟ್ಟೆ' ಗಳು 'ಪ್ಲೇಟು' ಗಳಾಗಿವೆ; 'ಬಟ್ಟಲು' ಗಳು 'ಕಪ್ಪು' ಗಳಾಗಿವೆ. ಸಂಸ್ಕೃತವೇ ಆದರೂ ಬಹುಕಾಲದ ಬಳಕೆಯಿಂದ ಕನ್ನಡವೇ ಆದ ಪುಸ್ತಕ ಬುಕ್ಕು, ಹಲಗೆ ( <ಫಲಕ) ಸ್ಲೇಟು, ಶಾಲೆ ಮಠಗಳು ಸ್ಕೂಲುಗಳು, ಪತ್ರಿಕೆ ಪೇಪರ್ ಆಗಿರುವಾಗ 'ಬಳಪ' 'ಸ್ಲೇಟು ಪೆನ್ಸಿಲ್' ಆಗುವುದರಲ್ಲಿ ಆಶ್ಚರ್ಯವೇನು? ಇಂಗ್ಲಿಷಿನಲ್ಲಿಯೂ ರಾಗಿ Ragi ಆದ್ದರಿಂದ, ಉತ್ತರದವರಿಗೆ ರಾಗಿ ಬೇಡವಾದ್ದರಿಂದ, ಕನ್ನಡನುಡಿ ಅಳಿದರೂ 'ರಾಗಿ'ಯೊಂದು ಉಳಿದೀತು! ಇಂಗ್ಲಿಷಿನ 'ರೈಸ್' ತಮಿಳಿನ 'ಅರಿಶಿ' (> ಅಕ್ಕಿ)ಯಿಂದ ಆದ ಮಾತಾದರೂ, ನಾವು 'ಅನ್ನ' ಕ್ಕೆ (ಸಂಸ್ಕೃತ) ಇನ್ನೂ 'ಅಕ್ಕಿ' ಯನ್ನೇ ಬಳಸುತ್ತಿರುವುದು ನಮ್ಮ ಕಳೆದುಳಿದ ಕನ್ನಡ-ತನದ ಕುರುಹು.

ಹೀಗೆಯೇ, ಅನೇಕ ಪುಟಗಳು ತುಂಬುವಷ್ಟು ಉದಾಹರಣೆಗಳನ್ನು ಕೊಡುತ್ತ ಹೋಗಬಹುದು ಮೇಲ್ಕಂಡ ಕೆಲವು ಉದಾಹರಣೆಗಳಿಂದ ಕಲಿಯಬೇಕಾದ ಪಾಠ ಇದು: ಪರಭಾಷೆಯಿಂದ ಪದಗಳನ್ನು ತೆಗೆದುಕೊಂಡು ಬಳಸುವ ವಿಚಾರದಲ್ಲಿ ಎಚ್ಚರಿಕೆಯಿಂದಿಲ್ಲದೆ ಹೋದರೆ, ನುಡಿಯೊಲವನ್ನು ಜೀವಂತವಾಗಿಟ್ಟುಕೊಳ್ಳದೆ ಹೋದರೆ, ಅನ್ಯಭಾಷಾಸಂಸರ್ಗದಿಂದ ಲಾಭದೊಂದಿಗೆ ನಷ್ಟವೂ ಆಗುತ್ತದೆ. ಅನ್ಯ

---

* ಹಿಂದಿನ ತಲೆ ಮಾರಿನ ಕನ್ನಡ ಜನ ಕೆಲವು ಪರಕೀಯ ವಸ್ತುಗಳನ್ನು ಕೂಡ ಹೇಗೆ ತಮ್ಮವನ್ನಾಗಿ ಮಾಡಿಕೊಂಡರು ಎಂಬ ಅಂಶ ವಿಸ್ಮಯಕಾರಿಯಾಗಿದೆ. ಈ ಪದಗಳನ್ನು ಗಮನಿಸಿ: ಸೀಮೆಯ ಸುಣ್ಣ, ಗುಂಡು ಸೂಜಿ, ಕಾಲು ಚೀಲ, ಕಲ್ಲಿದ್ದಲು, ಒತ್ತುವ ಕಾಗದ, ಪರಂಗಿಹಣ್ಣು, ಚಪ್ಪರಬದನೆ. ವಿದ್ಯೆ ಹರಡುತ್ತಿರುವ ಈ ಕಾಲದಲ್ಲಿ ತೀವ್ರಗತಿಯಿಂದ ಸೇರುತ್ತಿರುವ ಹೊಸ ಶಬ್ದಗಳಿಗೆ ಕನ್ನಡ ಮಾತುಗಳನ್ನು ಕಲ್ಪಿಸಲು ವ್ಯವಧಾನವಾಗಲಿ ಅವಕಾಶವಾಗಲಿ ಸಾಮಾನ್ಯ ಜನಕ್ಕೆ ಇಲ್ಲ.

ಭಾಷಾಶಬ್ದಗಳನ್ನು ಸ್ವೀಕರಿಸಲೇಕೂಡದೆಂಬ ಹಟ ಮೂರ್ಖತನ. ಸಂಕುಚಿತ ದೃಷ್ಟಿಯ ಹಟ ತೊಟ್ಟರೆ, ನಮ್ಮ ನುಡಿ ಚೊಕ್ಕಸ ಬೆಳೆಯುವುದೇ ಇಲ್ಲ; ಹೊಸ ಹೊಸ ವಿಚಾರಗಳನ್ನು ತಿಳಿಸಲು ಭಾಷೆ ಸಮರ್ಥವಾಗುವುದಿಲ್ಲ. ನಮ್ಮ ಮನಸ್ಸಿನ ಭಾವನೆಗಳನ್ನೂ ಆಲೋಚನೆಗಳನ್ನೂ, ತಿಳಿಸಬೇಕೆಂದಿರುವ ವಿಚಾರಗಳನ್ನೂ, ಇತರರಿಗೆ ತಿಳಿಯ ಹೇಳುವಾಗ ಕನ್ನಡದಲ್ಲಿ ಬಳಕೆಯಲ್ಲಿರುವ ಮಾತನ್ನಾದರೂ ಕಡ್ಡಾಯವಾಗಿ ಬಳಸುವ ರೂಢಿಯಿಟ್ಟುಕೊಳ್ಳಬೇಕು. ಕನ್ನಡದ ಕನ್ನಡತನವನ್ನು ಕಾಯ್ದುಕೊಳ್ಳಲು ಇದೊಂದೇ ದಾರಿ. ಈಗಾಗಲೇ ಬಳಕೆ ತಪ್ಪಿರುವ ಇಲ್ಲವೆ ತಪ್ಪುತ್ತಿರುವ ಹಲಕೆಲವು ಮಾತುಗಳನ್ನಾದರೂ ಸಂದರ್ಭೋಚಿತವಾಗಿ ಮತ್ತೆ ರೂಢಿಗೆ ತರುವ ಪ್ರಯತ್ನವನ್ನೂ ಮಾಡಬಹುದು. (ಉದಾ.—ಅರಿ = ತಿಳಿ; ಆಳು = ಮನುಷ್ಯ; ಎಡೆ, ಕಡೆ, ತಾವು = ಸ್ಥಳ, ಎಣಿಸು, ಎಣಿಕೆ = ಭಾವನೆ, ಭಾವಿಸು; ಕಡಲು = ಸಮುದ್ರ; ದಾರಿ, ಹಾದಿ, ಬೀದಿ = ರಸ್ತೆ, ರೋಡು, ಒಲಿ, ಒಲುಮೆ, ನಲಿ, ನುಡಿ, ಸವಿ, ಹೊನ್ನು, ಹುಸಿ, ಅಂದ, ಚೆಂದ, ಚೆಲುವು, ಗೆಲವು, ಹುರುಡು, ಹುರುಪು, ಹುರುಳು, ಇವೇ ಮೊದಲಾದ ಶಬ್ದಗಳು ಈಗಲೂ ಅರ್ಥವಾಗುವ ನುಡಿಗಳು.) ಈ ಪ್ರಯತ್ನ ಎಷ್ಟುಮಟ್ಟಿಗೆ ಫಲಕಾರಿಯಾಗುವುದೋ ಹೇಳುವುದು ಕಷ್ಟ; ಎಚ್ಚರಿಕೆಯೂ ಔಚಿತ್ಯಜ್ಞಾನವೂ ಬೇಕು. "ಸಭೆಗೆ ಹತ್ತು ಜನ ಬಂದಿದ್ದರು" ಎನ್ನುವಲ್ಲಿ "ಓಲಗಕ್ಕೆ ಹತ್ತು ಆಳು" ಎಂದರೆ ಹಾಸ್ಯಾಸ್ಪದವಾಗುತ್ತದೆ. ನೆಲೆನಿಂತಿರುವ ಪರಭಾಷೆಯ ಪದಗಳು ಕನ್ನಡ ಕುಲಕ್ಕೆ ಸೇರಿ ಹೋಗಿರುವುದರಿಂದ, ಅವನ್ನು ಮನೆಯ ಸೊಸೆಯಂತೆ ನಮ್ಮವನ್ನಾಗಿ ಎಣಿಸುವುದೇ ವಿವೇಕ.

ಒಟ್ಟಿನ ಮೇಲೆ, ಕನ್ನಡ ನುಡಿಯಲ್ಲಿ ಇದುವರೆಗೆ ಆಗಿರುವ ನಷ್ಟದಿಂದ ಪಾಠ ಕಲಿತು ಮುಂದೆ ಹಾಗಾಗದಂತೆ ಎಚ್ಚರ ಹೊಂದಿರಬೇಕಾದ ಹೊಣೆ (ಜವಾಬ್ದಾರಿ ಅಲ್ಲ!) ಎಲ್ಲ ಕನ್ನಡಿಗರಿಗೂ ಸೇರಿದ್ದು. ಈ ಒಂದು ಹಿರಿಯಗುರಿಯನ್ನು ಮಾತನಾಡುವ ಭಾಷೆಯಲ್ಲಿಯೂ, ಅದಕ್ಕಿಂತ ಹೆಚ್ಚಾಗಿ ಬರವಣಿಗೆಯ ಭಾಷೆಯಲ್ಲಿಯೂ ಗಮನದಲ್ಲಿರಿಸಿಕೊಂಡಿರಬೇಕಾದ್ದು ಅಗತ್ಯ. ಕನ್ನಡದ ಪ್ರಾಚೀನ ಉದ್ದಾಮ ಕವಿಗಳಂತೂ ಈ ಒಂದು ಧ್ಯೇಯವನ್ನು ಮರೆತಂತೆ ಕಾಣುವುದಿಲ್ಲ. ಆದಿಕವಿ ಪಂಪನ ಭಾರತದಲ್ಲಿಯೂ, ಹರಿಹರನ ರಗಳೆಗಳಲ್ಲಿಯೂ, ಶಿವಶರಣರ ವಚನಗಳಲ್ಲಿಯೂ, ದಾಸರ ಪದಗಳಲ್ಲಿಯೂ, ರತ್ನಾಕರನ 'ಭರತೇಶ ವೈಭವ' ದಲ್ಲಿಯೂ ಕನ್ನಡ ನುಡಿಯ ಮೆರೆತವನ್ನು ಕಂಡು ಹಿಗ್ಗಬಹುದಾಗಿದೆ. ಪಂಪನ ಆದಿಪುರಾಣದಲ್ಲಿಯೇ ಕಾಣಿಸಿಕೊಂಡ ಸಂಸ್ಕೃತದ ಒಲವು ಬರುಬರುತ್ತ ಹೆಚ್ಚುತ್ತ ಬಂದು, ಅಲ್ಲಿಂದೀಚಿನ ಅನೇಕ ಕವಿಗಳಲ್ಲಿ ಒಣಪಾಂಡಿತ್ಯವಾಗಿ ಪರಿಣಮಿಸಿತು. ತಾಯ್ನುಡಿಯಲ್ಲಿ ಸಹಜವಾದ ಒಲವುಳ್ಳ ಕವಿಗಳು ಈ ಅನಪೇಕ್ಷಣೀಯನಾದ, ಅಹಿತಕರವಾದ, ಪರಿಸ್ಥಿತಿಯನ್ನು ಪರಿಣಾಮಕಾರಿಯಾಗಿ ಪ್ರತಿಭಟಿಸಿದರು; ಹಲವರು ಪ್ರಕಟವಾಗಿ ತಮ್ಮ ಪ್ರತಿಭಟನೆಯನ್ನು ಸೂಚಿಸದೆ, ತಮ್ಮ ನುಡಿಯೊಲವನ್ನು ಕೃತಿಯಲ್ಲಿ ಮೆರೆದರು; ಕೆಲವರು

ಪ್ರಕಟವಾಗಿಯೇ ತಮ್ಮ ನಿಲುವನ್ನು ಸ್ಪಷ್ಟಪಡಿಸಿದರು. ನಯಸೇನನು–

ಪೊಸಗನ್ನಡದಿಂ ವ್ಯಾವ | ರ್ಣಿಸುವೆಂ ಸತ್ಕೃತಿಯನೆಂದು ಕನ್ನಡವುಂ ಚಿಂ ।
ತಿಸಿ ಕೂಡಲಾಱದಕ್ಕಟ । ಮಿಸುಕದ ಸಕ್ಕದಮನಿಕ್ಕುವವನುಂ ಕವಿಯೇ ॥
ಸಕ್ಕದಮಂ ಪೇೞ್ವೊಡೆ ನೆಱೆ । ಸಕ್ಕದಮಂ ಪೇೞ್ಗೆ ಶುದ್ಧ ಕನ್ನಡದೊಳ್ ತಂ ।
ದಿಕ್ಕುವುದೇ ಸಕ್ಕದಮಂ | ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ ॥

ಎಂದು ಪ್ರತಿಭಟಿಸಿದರೆ, ಇನ್ನೊಬ್ಬ ಕವಿ ಹೀಗೆ ಕೇಳಿದನು:

ಪೞಗನ್ನಡದೆ ಪುದುಂಗೊಳೆ । ಕೊೞೆ ಸಕ್ಕದಮಂ ತಗುಳ್ಚಿ ಜಾಣ್ಗಿಡೆ ಮುತ್ತುಂ ।
ಮೆೞಸುಂ ಕೋದಂತಿರೆ ಪೇ । ೞ್ವೞಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮೇ ॥

ಈ ಕನ್ನಡದ ಅಭಿಮಾನ, ಈ ಕನ್ನಡದ ಕೆಚ್ಚು-- ಹುಚ್ಚು ಎನ್ನಬೇಕಾದರೆ— ಆಂಡಯ್ಯನಲ್ಲಿ ಪರಾಕಾಷ್ಠೆಯನ್ನು ಮುಟ್ಟಿ, ಸಂಸ್ಕೃತದ ಸಂಪರ್ಕವೇ ಇಲ್ಲದೆ ಕಾವ್ಯ ರಚನೆ ಮಾಡುತ್ತೇನೆಂದು ಹಟತೊಟ್ಟು, ಅವನು 'ಕಬ್ಬಿಗರ ಕಾವ' ವನ್ನು 'ಅಚ್ಚಗನ್ನಡ' ದಲ್ಲಿ ಬರೆದನು; "ಕನ್ನಡದೊಳ್ಪಿನ ನುಡಿಯಂ ಮುನ್ನಿದಱೊಳೆ ನೋಡಿ ತಿಳಿದುಕೊಳ್ವುದು ಚದುರಂ" ಎಂಬುದು ಅವನ ಹಾರೈಕೆ. ೧೯ ನೆಯ ಶತಮಾನದ ಕಡೆಯ ಭಾಗದಲ್ಲಿದ್ದ ಮುದ್ದಣನೂ ಈ ಕನ್ನಡದೊಲವಿನ ಕಂಕಣ ತೊಟ್ಟವನೇ. ಕನ್ನಡ-ಸಂಸ್ಕೃತದ ಬಗ್ಗೆ ತನ್ನ ಅಭಿಪ್ರಾಯವನ್ನು ಮುದ್ದಣನು ಕನ್ನಡಿಗರ ಮುಂದಿಟ್ಟಿರುವ ರೀತಿ ಬಹು ಮನೋಜ್ಞವಾಗಿದೆ:

ಮುದ್ದಣನು ತನ್ನ ಮನೋರಮೆಗೆ ರಾಮಾಶ್ವಮೇಧದ ಕತೆಯನ್ನು ಹೇಳಲು ಒಪ್ಪಿ, ಕತೆ ಹೇಳಿಯಾದಮೇಲೆ ತಕ್ಕ ಮೆಚ್ಚು ಪಡೆಯುವ ಮಾತನ್ನು ತೆಗೆದುಕೊಂಡು, ಹೀಗೆ ಮೊದಲು ಮಾಡುವನು—

ಮುದ್ದಣಂ—ಅದೊಡಾಲಿಸು. ಸ್ವಸ್ತಿ ಶ್ರೀಮತ್ಸುರಾಸುರೇಂದ್ರ ನರೇಂದ್ರ ಮುನೀಂದ್ರ ಫಣೀಂದ್ರ ಮಣಿಮುಕುಟ ತಟಘಟಿತ—

ಮನೋರಮೆ— ಓ ಓ ! ತಡೆ ! ತಡೆ ! ವಸುಧೆಗೊಡೆಯನಪ್ಪ ರಾಮಚಂದ್ರನ ಕತೆಯಂ ಪೇೞ್ವೆನೆ ಬಸದಿಗೊಡೆಯರಪ್ಪ ಸುರೇಂದ್ರರ ಚರಿತೆಯಂ ಪೇೞ್ವುದೇಂ ? ಸಾಲ್ಗುಂ ಸಾಲ್ಗುಂ. ಇಂತೆರ್ದೆಗೊಳ್ವ ಕತೆಗೆಂತುಡುಗೊಱೆಯುಂ ಗೆಯ್ವನೋ !

ಮುದ್ದಣಂ— ನಲ್ನುಡಿಯಿದು ರಮಣಿ ! ಕಚಂಗಳಾಣೆ. ಅಲ್ತು, ಬಸದಿಯಿಂದ್ರರ ಕತೆಯಲ್ತು ; ರಾಮಚಂದ್ರನ ಕತೆಯನೆ ಪೊಗೞ್ದು ಪೇೞ್ವುದಿದು ಸಕ್ಕದದೊಂದು ಚೆಲ್ವು.

ಮನೋರಮೆ— ಲೇಸು, ಲೇಸು ! ನೀರಿೞಿಯದ ಗಂಟಲೊಳ್ ಕಡುಬಂ ತುಱುಕಿದಂತಾಯ್ತು ; ಕನ್ನಡದ ಸೊಗಸನಱಿಯಲಾರ್ತನಿಲ್ಲೆನಗೆ ಸಕ್ಕದದ ಸೊಗಸಂ ಪೇೞ್ವುದು ಗಡ !

ಮುದ್ದಣಂ— ಅಪ್ಪೊಡಿನ್ನೆಂತೊ ಒರೆವೆಂ ?

ಮನೋರಮೆ— ತಿರುಳ್ಗನ್ನಡದ ಬೆಳ್ನುಡಿಯೊಳೆ ಪುರುಳೊಂದೆ ಪೇೞ್ವುದು. 'ಕನ್ನಡಂ ಕತ್ತುರಿ'ಯಲ್ತೆ.

ಮುದ್ದಣಂ— ಅಪ್ಪುದಪ್ಪುದು. ಆದೊಡಂ ಸಕ್ಕದಮೊಂದೆ ರನ್ನವಣಿಯುಂ ಪೊನ್ನಿಂ

ಬಿಗಿದಂತೆಸೆಗುಂ ; ಆದಱಿಂ ಕರ್ವುಣಿಸರದೊಳ್ ಚೆಂಬವಳಮಂ ಕೋದಂತಿರೆ, ರಸಮೊಸರೆ, ಲಕ್ಕಣಂ ಮಿಕ್ಕಿರೆ, ಎಡೆ ಎಡೆಯೊಳ್ ಸಕ್ಕದದ ನಲ್ನುಡಿ ಮೆಱೆಯೆ, ತಿರುಳ್ಗನ್ನಡದೊಳೆ ಕತೆಯನುಸಿರ್ವೆಂ.

ಕನ್ನಡದ ಅಭಿಮಾನದ ಆವೇಶದಲ್ಲಿ ಒಬ್ಬ ಕವಿಗೆ ಕನ್ನಡ ತುಪ್ಪವಾದರೆ, ಸಕ್ಕದ ಎಣ್ಣೆಯಾಯಿತು ; ಇನ್ನೊಬ್ಬನಿಗೆ ಕನ್ನಡ ಮುತ್ತು, ಸಕ್ಕದ ಮೆಣಸು ; ಮಾತ್ರವಲ್ಲ, ಸಕ್ಕದ ಕೊಳೆ. ಮುದ್ದಣನಲ್ಲಿ ಈ ಸಂಸ್ಕೃತದ ದ್ವೇಷ ಕಂಡುಬರುವುದಿಲ್ಲ ; ಕನ್ನಡದ ಬರವಣಿಗೆಯಲ್ಲಿ ಕನ್ನಡವೆ ಮುಖ್ಯವಾಗಿರಬೇಕು—ಐದೆಯ ಕೊರಳಿನಲ್ಲಿ ಕರಿಯಮಣಿಸರದಂತೆ ; ಅಲಂಕಾರಕ್ಕಾಗಿ ಚೆಂಬವಳ ಸೇರಿದರೆ ಮತ್ತೂ ಸೊಗಸು. ಸಂಸ್ಕೃತವೂ 'ನಲ್ನುಡಿ'.

ಈ ಕನ್ನಡ–ಸಂಸ್ಕೃತದ ಸಂಬಂಧ ಎಂದೆಂದಿಗೂ ಇರತಕ್ಕದ್ದು. ಕೆಲವು ಕಾಲ ಹಿಂದೂಸ್ತಾನಿ ರಾಜಭಾಷೆಯಾಗಿದ್ದರೂ, ಕನ್ನಡ ಕವಿಗಳು ಅದನ್ನು ದೂರವಿಟ್ಟಿದ್ದರು. ಬಳಿಕ, ಬಹುಕಾಲ ಇಂಗ್ಲಿಷ್ ರಾಜಭಾಷೆಯಾಗಿತ್ತು ; ಈಗಲೂ, ಆಂಗ್ಲ ರಾಜ್ಯಭಾರ ಕೊನೆಗಂಡ ಮೇಲೂ, ಆಂಗ್ಲಭಾಷೆಯ ಪ್ರಭುತ್ವ ಇದ್ದೇ ಇದೆ. ಒಟ್ಟಿನ ಮೇಲೆ, ಈ ಮೂರೂ ಭಾಷೆಗಳಿಂದ ಕನ್ನಡಕ್ಕೆ ಆಗಿರುವ ನಷ್ಟದ ವಿಚಾರವನ್ನು ಮೇಲೆ ಪ್ರಸ್ತಾಪಿಸಿದೆ. ಇನ್ನು ಮುಂದೆಯೂ ಇಂಗ್ಲೀಷೋ ಅದು ತಪ್ಪಿದರೆ ಹಿಂದಿಯೋ ರಾಜಭಾಷೆಯಾಗಿ ಇದ್ದೇ ಇರುತ್ತದೆ. ಯಾವುದೇ ಇರಲಿ, ಇಂದಿನ ಹೊಸ ಪರಿಸ್ಥಿತಿಯಲ್ಲಿ, ಹೊಸಗನ್ನಡ ಸಾಹಿತ್ಯ ನಾನಾ ಮುಖವಾಗಿ ಬೆಳೆಯಬೇಕಾಗಿರುವ ಈಗಿನ ಜ್ಞಾನಪ್ರಸಾರ ಯುಗದಲ್ಲಿ, ನಾವು ಹೊಂದಿರಬೇಕಾದ ನಿಲುವು ಯಾವುದು ಎಂಬುದನ್ನು ವಿಚಾರ ಮಾಡಬೇಕಾದ್ದು ಅಗತ್ಯ. ಕನ್ನಡ ನುಡಿಯ ಅಳಿವು–ಉಳಿವು ಈ ನಿಲುವನ್ನು ಅವಲಂಬಿಸಿದೆ.

ಈ ಸಂದರ್ಭದಲ್ಲಿ, ಹೊಸ ಕನ್ನಡದ ಆಚಾರ್ಯಪುರುಷರಾದ ದಿವಂಗತ ಶ್ರೀಯವರು ಆಡಿರುವ ಮಾತುಗಳನ್ನು ನಿಷ್ಪಕ್ಷಪಾತವಾಗಿ, ಯಾವ ಆವೇಶದ ಸುಳಿಗೂ ಸಿಲುಕದೆ, ಮತ್ತೊಮ್ಮೆ ಪರಿಶೀಲಿಸಿ ನೋಡಿದರೆ ಅವು ಈ ವಿಚಾರದಲ್ಲಿ ಬಹುಮಟ್ಟಿಗೆ ಕಡೆಯ ಮಾತಾಗಿ ಕಾಣುತ್ತವೆ. ಕೆಲವು ವಾಕ್ಯಗಳನ್ನು ಎತ್ತಿ ಬರೆಯುವುದು ಅಪ್ರಸಕ್ತವಾಗಲಾರದು : *

"ಎರಡಲ್ಲ, ಇಪ್ಪತ್ತು ದೇಶಭಾಷೆಗಳಿದ್ದರೂ ಒಗ್ಗಟ್ಟಿಗೆ ಕುಂದಕವಿಲ್ಲ ; ಎಲ್ಲ ಕಡೆಯೂ ಆಡಬಹುದಾದ ಒಂದು ರಾಜಭಾಷೆಯ ಜೊತೆಗೆ ಎಷ್ಟುಬೇಕಾದರೂ ಇವು ಇರಬಹುದು. ಒಂದೇ ಏಕ ಭಾಷೆಯಿಲ್ಲದೆ ಏಕರಾಜ್ಯವಿಲ್ಲ ಎನ್ನುವ ಮಾತು ಸುಳ್ಳು."

---

* 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ' ಎಂಬ ಅವರ ಗ್ರಂಥದ ಬೇರೆ ಬೇರೆಯ ಲೇಖನಗಳಿಂದ ಈ ವಾಕ್ಯಗಳನ್ನು ಆಯ್ದು ಕೊಟ್ಟಿದೆ.

' ಇಂಡಿಯದಲ್ಲಿ ವಿದ್ಯಾವಂತನೆನ್ನುವ ಪ್ರತಿಯೊಬ್ಬನೂ ಇಂಗ್ಲಿಷ್, ಸಂಸ್ಕೃತ, ತನ್ನ ಕಡೆಯ ದೇಶ ಭಾಷೆ ಈ ಮೂರನ್ನು ಚೆನ್ನಾಗಿ ತಿಳಿದಿರಬೇಕು. "

" ಭಾಷೆಯ ವಿಚಾರದಲ್ಲಿ, ಹೊಸಗನ್ನಡವನ್ನೇ ಬರೆಯಬೇಕು. ಹಳಗನ್ನಡದಲ್ಲಿ ನನಗೂ ಅಕ್ಕರೆ ಉಂಟು ; ತಿಳಿಯಾದ, ಬಿಗಿಯಾದ, ತಿರುಳಾದ, ಆ ನುಡಿಯನ್ನು ಕೈಬಿಡುವುದೆಂದರೆ ನನಗೂ ವ್ಯಸನವೇ. ಮುಂದೆ ಜನರಲ್ಲಿ ಆದರ ತಿಳಿವಳಿಕೆ ಹೆಚ್ಚಿದಮೇಲೋ, ಇಲ್ಲ, ಕೇವಲ ವಿದ್ಯಾವಂತರೇ ತಿಳಿಯಬೇಕಾದ ತತ್ವಗಳಿಗಾಗಿಯೋ, ಇಲ್ಲ ಪರಮೋತ್ಕೃಷ್ಟವಾದ ಕಾವ್ಯ-ನಾಟಕ-ಗೀತೆಗಳಿಗಾಗಿಯೋ ಅದನ್ನು ಉಪಯೋಗಿಸಿದರೂ ಉಪಯೋಗಿಸಬಹುದು. ಆದರೆ ಸದ್ಯಕ್ಕೆ ಜನರಿಗೆ ತಿಳಿಯದ ಭಾಷೆಯಲ್ಲಿ ಬರೆಯುವುದರಲ್ಲಿ ಯಾವ ಬುದ್ಧಿವಂತಿಕೆಯೂ ಇಲ್ಲ. ಹೊಸಗನ್ನಡವನ್ನೇ ಎಲ್ಲರೂ ಹಿಡಿಯಬೇಕು. ಅದಕ್ಕೆ ಹಳಗನ್ನಡದ ಬೆರಕೆಯಾಗಲಿ, ಜನರ ಬಾಯಲ್ಲಿ ಬಳಕೆಗೆ ಬಂದಿರುವಷ್ಟುಮಟ್ಟಿಗಲ್ಲದೆ ಹೆಚ್ಚಿನ ಪುಸ್ತಕದ ಸಂಸ್ಕೃತವಾಗಲಿ ತದ್ಭವವಾಗಲಿ ಸೇರಕೂಡದು. . ಅನ್ಯಶಬ್ದಗಳನ್ನು ವಿಶೇಷವಾಗಿ ಸೇರಿಸಬಾರದಾದರೂ, ಜನಗಳು ರೂಢಿಗೆ ತಂದ ಮಾತುಗಳನ್ನು ಸಮಯೋಚಿತವಾಗಿ ಒಪ್ಪಿಕೊಳ್ಳಬೇಕು. ಕೈಯಲ್ಲಾದ ಮಟ್ಟಿಗೆ ಮಾತುಗಳನ್ನು ಕಲ್ಪನೆ ಮಾಡಬಾರದು ; ಹಾಗೆ ಮಾಡಿದರೂ ಕನ್ನಡ ಮಾತುಗಳನ್ನೇ, ಬಳಸುತ್ತಿರುವ ಸಂಸ್ಕೃತ ಪದಗಳನ್ನೇ ಕೂಡಿಸುವುದು ಅನುಕೂಲ. ರೈಲನ್ನು ರೈಲೆಂದೇ ಕರೆಯುವುದು ಉತ್ತಮ ; ಹೊಗೆ ಬಂಡಿ, ಹೊಗೆಗಾಡಿ ಎನ್ನುವುದು ಮಧ್ಯಮ ; ಧೂಮಶಕಟವೆನ್ನುವುದು ಅಧಮ. ಮುಖ್ಯ, ಬರೆಯುವವರು ಕಠಿನ ಪದಗಳಲ್ಲಿ ಕೈವಲ್ಯವುಂಟೆಂದು ಮೋಸಹೋಗದೆ, ಅರ್ಥದಲ್ಲಿ ಬುದ್ಧಿಯನ್ನು ಓಡಿಸಿ ಪ್ರೌಢತನವನ್ನು ತೋರಿಸಿದರೆ ಎಲ್ಲರೂ ಬದುಕಿಕೊಂಡಾರು. "

ಕನ್ನಡ ' ಶಬ್ದಕೋಶ ' ದ ವಿಚಾರವಾಗಿಯೇ ' ಶ್ರೀ ' ಯವರು ಪ್ರತ್ಯೇಕವಾಗಿ ಗಾಢವಾಗಿ ಆಲೋಚನೆ ಮಾಡಿ, ಕೆಲವು ಕಟ್ಟುವಾಡುಗಳನ್ನು ಸೂಚಿಸಿದ್ದಾರೆ. ಕನ್ನಡ ನುಡಿಯ ಉಳಿವಿನಲ್ಲಿ ಆಸಕ್ತಿಯುಳ್ಳವರೆಲ್ಲರೂ ಇವನ್ನು ಪಾಲಿಸಬೇಕು. ಪ್ರಸಕ್ತವಾದ ಕೆಲವನ್ನು ಮಾತ್ರ ಇಲ್ಲಿ ಎತ್ತಿಕೊಟ್ಟಿದೆ :

(i) " ಬಿಟ್ಟು ಹೋದ ಹಳಗನ್ನಡ ಶಬ್ದಗಳು, ಶಬ್ದ ರೂಪಗಳು ಆಗದು (ಉದಾ :—ಪಡಿನೋಟ, ಕಡುನೊಂದು, ಮುಂ.) ಆದರೆ ಬಿಟ್ಟು ಹೋಗುತ್ತಿರುವ ಕೆಲವು ಮಾತುಗಳನ್ನು ರೂಢಿಗನುಸಾರವಾಗಿ ಸರಿಯಾದ ಸಂದರ್ಭದಲ್ಲಿ ಉಪಯೋಗಿಸಬಹುದು (ಉದಾ.—ಅರಿ, ಎಡೆ, ಎಣಿಸು, ಒಸಗೆ, ಜರೆ, ಮಿರುಗು, ಮುಂ.)

(ii) " ರೂಢಿಯಲ್ಲಿಲ್ಲದ ಸಂಸ್ಕೃತ ಶಬ್ದಗಳು, ಅರ್ಥಗಳು, ಆಗದು. " (ಅರಾತಿ, ಉಪೋದ್ಘಾತ, ಧರಿತ್ರಿ ಇವಕ್ಕೆ ಪ್ರತಿಯಾಗಿ ಶತ್ರು, ಪೀಠಿಕೆ, ಭೂಮಿ ಉತ್ತಮ.)

" ವೃತ್ತದ ಹಿಂಸೆಗಾಗಿ ಕವಿಗಳು ಹೆಣೆದಿರತಕ್ಕ ಪರ್ಯಾಯಪದಗಳನ್ನು ಮುಖ ನೋಡದೆ ಕುಯ್ದು ಹಾಕಬೇಕು. "

(iii) " ಜನರು ಬಳಸದೆ ಇರುವ ತದ್ಭವ ಆಗದು. "

(ಉದಾ.—ಅಮರ್ದು, ಆಗಸ, ತಾಣ, ಮುಂ.—ಇವು ಬೇಡ. ಇವುಗಳ ಸಂಸ್ಕೃತ ರೂಪಗಳನ್ನೇ ಈಗ ಜನರು ಹೇಳುತ್ತಾರೆ.)

(iv) " ಕೇವಲ ಸಂಸ್ಕೃತ ಪಾಂಡಿತ್ಯದಿಂದಲೇ ಬರುವ ಅವ್ಯಯಗಳು, ಕ್ರಿಯಾರೂಪಗಳು, ಭಾವನಾಮಗಳು, ಜನರಿಗೆ ಪರಿಚಯವಿಲ್ಲದುವಾದರೆ, ಆಗದು. "

(ಲಾಲನೀಯ, ಸಂಭಾವನೀಯ, ಉಪನ್ಯಸ್ತ, ಆನುಕೂಲ್ಯ, ಬಾಹುಳ್ಯ, ಏತೇನ, ಪರಂತು ಇಂಥ ರೂಪಗಳು ಕೂಡದು.)

" ಈ ನಿಯಮಗಳ ಉದ್ದೇಶವೇನೆಂದರೆ—ಭಾಷೆಗೆ ಬಲವಾಗಲಿ ಸೊಗಸಾಗಲಿ ಬರದೆ, ಬರಿಯ ಒಣಪಾಂಡಿತ್ಯವನ್ನು ಮಾತ್ರ ತೋರಿಸತಕ್ಕ ಸಂಸ್ಕೃತದ ಹರದವನ್ನೆಲ್ಲಾ ಗುಡಿಸಿ ಎತ್ತಿ ಹಾಕುವುದೇ. "

' ಅನಾವಶ್ಯಕವಾದ ಸಂಸ್ಕೃತ, ವನ್ನು ಬಿಡುವುದರ ಜೊತೆಗೆ, ಆಧುನಿಕ ವಿದ್ಯೆಯನ್ನು ಸಾಮಾನ್ಯ ಜನರಲ್ಲಿ ಹರಡಲು ಸಂಸ್ಕೃತದಿಂದ ಮಾತ್ರವಲ್ಲದೆ ಇಂಗ್ಲೀಸು. ಮೊದಲಾದ ಅನ್ಯಭಾಷೆಗಳಿಂದ ಹೊಸ ಹೊಸ ಮಾತುಗಳನ್ನು ಸೇರಿಸಿಕೊಳ್ಳಬೇಕಾದ ಆವಶ್ಯಕತೆಯೂ ಉಂಟಾಗುತ್ತದೆ. ಆ ಸಂದರ್ಭದಲ್ಲಿ ಅನುಸರಿಸಬೇಕಾದ ನಿಯಮಗಳು ಏನಾದರೂ ಉಂಟೆ ? '

i " ಮನಸ್ಸು ಬಂದಂತೆ ಅನ್ಯಶಬ್ದಗಳನ್ನು ಗಿಡಿದರೆ, ಮಾತೃಭಾಷೆಯ ಶುದ್ಧಿಯೂ ಸೌಂದರ್ಯವೂ ಕೆಡುತ್ತವೆ . .ಸಂಸ್ಕೃತ ಕನ್ನಡವನ್ನು ಕೊಚ್ಚಿ ಹಾಕಿದ ಹಾಗೆ, ಕಟ್ಟಿಲ್ಲದೆ ಹೋದರೆ ಇಂಗ್ಲಿಷ್ ಹಿಂದೂಸ್ಥಾನಿಯೂ ಕೊಚ್ಚಿ ಹಾಕುವುವು.

" ಕೆಲವು ಶಬ್ದಗಳು ತಾತ್ಕಾಲಕ್ಕೆ ಸೇರಿದ್ದು ಆಮೇಲೆ ಬಿಟ್ಟು ಹೋಗುತ್ತವೆ...... ಇಂತಹ ಶಬ್ದಗಳು ಗ್ರಂಥಕ್ಕೆ ಸೇರಿದರೆ ಮುಂದೆ ಅರ್ಥವಾಗುವುದಿಲ್ಲ, ಈ ಮುಂದಾಲೋಚನೆ ಈಗಲೇ ಇರಬೇಕು .....ಒಂದು ದೇಶಭಾಷೆಯ ಮಾತುಗಳಿಗೇ ಎಲ್ಲವೂ ಗ್ರಂಥಕ್ಕೆ ಸೇರುವ ಯೋಗ್ಯತೆ ಇರುವುದಿಲ್ಲ ; ಬಂದ ಹೊಸ ಶಬ್ದಗಳಿಗೆಲ್ಲಾ ಯಾಕೆ ಮಣೆಯನ್ನು ಹಾಕಬೇಕು ? ಹೊಸಮಾತುಗಳನ್ನು ನಿರ್ದಾಕ್ಷಿಣ್ಯವಾಗಿ ಪರೀಕ್ಷಿಸುತ್ತಾ ಮೆಲ್ಲಗೆ ಒಗ್ಗಿಬಂದಹಾಗೆಲ್ಲಾ ಸೇರಿಸಿಕೊಳ್ಳುತ್ತಾ ಹೋಗೋಣ."

(iii) [ಅನ್ಯಭಾಷೆಯ ಶಬ್ದದ ಅರ್ಥವನ್ನು ನಮ್ಮ ಭಾಷೆಯಲ್ಲಿರುವ ಕನ್ನಡ ಸಂಸ್ಕೃತ ಪದಗಳನ್ನು ಜೋಡಿಸಿ ತಿಳಿಸುವುದರ ಮೂಲಕ ಅನ್ಯಭಾಷೆಯ ಪದಗಳನ್ನು ದೂರವಿಡಬಹುದೆಂದು ಹೇಳಿ, ಅವನ್ನು ಸೇರಿಸಿಕೊಳ್ಳಲೇಬೇಕಾದ ಸಂದರ್ಭದಲ್ಲಿ ಪಾಲಿಸಬೇಕಾದ ನಿಯಮಗಳನ್ನು 'ಶ್ರೀ' ಯವರು ಸೂಚಿಸಿದ್ದಾರೆ.]

೧. " ಶಬ್ದ ತೀರ ಆವಶ್ಯಕವಾಗಿರಬೇಕು ; ಜನರಲ್ಲಿ ಆಗಲೇ ಸಾಮ್ಯಾವಾಗಿ ಬಳಕೆಯಾಗಿರಬೇಕು ; ಗ್ರಂಥಕ್ಕೆ ಯೋಗ್ಯವಾಗಿರಬೇಕು. (ಉದಾ:- ಅಸಲು, ಕಾರ್ಖಾನೆ, ಎಕರೆ, ಕೋರ್ಟು, ಲಾಯರು, ಕಾರ್ಡು, ಮುಂತಾದುವು.)

೨. ಇಂಗ್ಲಿಷಿಗೂ ಹಿಂದುಸ್ತಾನಿಗೂ ಮೇಲಾಟ ಬಿದ್ದಾಗ ಹಿಂದುಸ್ತಾನಿಯನ್ನು ತೆಗೆದುಕೊಳ್ಳಬೇಕು. (ಉದಾ., ಕಸಬು, ಕಚೇರಿ, ಇಲಾಖೆ)

೩. ಇಂಗ್ಲಿಷ್ ಶಬ್ದ ಸಾಧಾರಣ ಜನದ ಬಾಯಲ್ಲೂ ಆಗಲೇ ಬಂದಿರಬೇಕು.

೪. ಸಾಮಾನ್ಯ ವಿಷಯಗಳನ್ನು ಕುರಿತು ಬರೆಯುವಾಗ ಹೆಚ್ಚು ಕಡಮೆ ಅರ್ಥಕೊಡುವ ಪದವಿದ್ದರೆ, ಜನಗಳು ಬಳಸುತ್ತಿದ್ದರೂ ಅನ್ಯಶಬ್ದವನ್ನು ಉಪಯೋಗಿಸಬಾರದು. (ಮಾರ್ಗ, ಬೀದಿ, ದಾರಿ, ರೋಡು, ರಸ್ತೆ, ಪುಸ್ತಕ, ಬುಕ್ಕು)

೫. ಶಾಸ್ತ್ರ, ತತ್ತ್ವ, ವೃತ್ತಿಗಳು, ಈ ವಿಷಯಗಳನ್ನು ಬರೆಯುವಾಗ ಅನ್ಯಶಬ್ದಗಳನ್ನು ಸೇರಿಸುವುದೇ ಮೇಲು; ಇಲ್ಲಿ ಹೆಚ್ಚು ಸ್ವಾತಂತ್ರ್ಯ ಬೇಕಾಗಿದೆ. ಆದರೆ.... ಸ್ವೇಚ್ಛೆಯಾಗಿ ಹೋಗಬಾರದು.

ಈ ಮೇಲ್ಕಂಡ ಅಭಿಪ್ರಾಯಗಳು ಬಹುಮಟ್ಟಿಗೆ ಎಲ್ಲರಿಗೂ ಒಪ್ಪಿಗೆಯಾಗತಕ್ಕವೆ. ಅವುಗಳನ್ನು ಅನುಸರಿಸಿ, ಇಂದಿನ ಪರಿಸ್ಥಿತಿಗೆ ಅನ್ವಯಿಸುವಂತೆ ಕೆಲವು ಸ್ಥೂಲವಾದ ನಿಯಮಗಳನ್ನು ರೂಪಿಸಿಕೊಳ್ಳಬಹುದು :

(೧) ಹೊಸಗನ್ನಡ ಕಾವ್ಯರಚನೆಯಲ್ಲಿ ಯಾವ ಒಂದು ವೀರಪಂಥವನ್ನೂ ಹಿಡಿಯುವುದು ಒಳ್ಳೆಯದಲ್ಲ. ಆಂಡಯ್ಯನ ಕನ್ನಡದ ಅಭಿಮಾನ ಅಭಿನಂದನೀಯವಾದರೂ ಅವನ ಮಾರ್ಗ ಈಗಲಂತೂ ಅನುಕರಣೀಯವಲ್ಲ. ಕೆಲವು ಸಂದರ್ಭಗಳಲ್ಲಿ ಕವಿಯ ಭಾವಪ್ರಕಾಶನಕ್ಕೆ ಸಂಸ್ಕೃತ ಮಾತು ಆವಶ್ಯಕವಾಗಬಹುದು. ಕಾವ್ಯ ಪ್ರಮುಖವಾಗಿ ಶ್ರವ್ಯ. ಪಿಟೀಲು ಹೊರದೇಶದ ವಾದ್ಯವಾದ ಮಾತ್ರಕ್ಕೇ ಅದರ ನಾದಗುಣವನ್ನು ಅಲ್ಲಗಳೆಯಲಾದೀತೆ? ಹಾಗೆಯೇ, ನಾದಸುಭಗತೆಗಾಗಿಯೂ ಧ್ವನಿಸಿದ್ಧಿಗಾಗಿಯೂ ಕೆಲವು ನವಿರಾದ ಭಾವಗಳನ್ನು ಬರಿಯ ಕನ್ನಡ ಮಾತಿನಲ್ಲೇ ಹೇಳಲಾಗದ್ದರಿಂದಲೂ ಸಂಸ್ಕೃತದ ಕಾಮಧೇನುವಿನ ಕೆಚ್ಚಲಿಗೆ ಕವಿ ಕೈಯಿಡಬೇಕಾಗುತ್ತದೆ. ಹೊಸಗನ್ನಡದ ಕವಿ ಸಂಸ್ಕೃತ ಭಾಷೆಯ ವಿಚಾರದಲ್ಲಿ ಅತಿರೇಕಕ್ಕೆ ಹೋಗದೆ, ತನ್ನ ಸಂಸ್ಕಾರಕ್ಕೆ ಅನುಗುಣವಾಗಿ ಸ್ವಲ್ಪ ಧಾರಾಳವಾಗಿಯೇ ಸಂಸ್ಕೃತ ಶಬ್ದಕೋಶದಿಂದ ಎರವಲು ಪಡೆದರೆ ಕ್ಷಮ್ಯವಾದೀತು. ಒಣಪಾಂಡಿತ್ಯ ಪ್ರದರ್ಶನ ಯಾವ ಕಾಲದಲ್ಲಿಯೂ ಅಕ್ಷಮ್ಯ.

ಈಗ, ಹೊಸಗನ್ನಡ ಕವಿತೆಯಲ್ಲಿ ಸಂಸ್ಕೃತವಲ್ಲದೆ ಇತರ ಭಾಷೆಗಳ ಮಾತುಗಳನ್ನೂ (ಮುಖ್ಯವಾಗಿ, ಇಂಗ್ಲಿಷ್ ಪದಗಳನ್ನು) ಪ್ರಯತ್ನಪೂರ್ವಕವಾಗಿಯೋ ಎಂಬಂತೆ ತಂದು ತುರುಕುವ ಪ್ರವೃತ್ತಿ ಬೆಳೆಯುತ್ತಿದೆ; * ಅಷ್ಟೇ ಅಲ್ಲ, ಹಿಂದಿನ

* 'ಕ್ರಿಶ್ಚಿಯನ್ ಕನ್ಯೆಯರವೋಲ್ ಕ್ರಾಪು ಕತ್ತರಿಸಿ, ಸಪ್ತವರ್ಣದ ಜಾಹಿರಾತುಗಳ ವೋಲ್ ಎಸೆದು, ಬಸ್ಸನಡರುತಲಿಹರು—ಇವು ಈಚಿಗೆ ಪ್ರಕಟವಾಗಿರುವ ಕವನವೊಂದರಲ್ಲಿ ಕಾಣಬರುವ ಪದ ಪುಂಜಗಳು'. ಇನ್ನೂ ಅನೇಕ ಕವನಗಳಲ್ಲಿ ಈ ಬಗೆಯ ನಿದರ್ಶನಗಳು ದೊರೆಯುತ್ತವೆ.

ಕವಿಗಳು ಸಂಸ್ಕೃತವಾಕ್ಯಗಳನ್ನು ಕನ್ನಡ ಪದ್ಯಗಳಲ್ಲಿ ಸೇರಿಸುತ್ತಿದ್ದಂತೆ ಇಂಗ್ಲಿಷ್ ವಾಕ್ಯಗಳನ್ನೇ ಕವಿತೆಯಲ್ಲಿ ಹುಗಿಸುವ ಚಟವೋ ಹಟವೋ ಕಂಡುಬರುತ್ತಿದೆ. ಕಾವ್ಯದಲ್ಲಿ ಇಂಗ್ಲೀಷು, ಹಿಂದೂಸ್ತಾನಿ (ಇಲ್ಲ, ಹಿಂದಿ) ಮೊದಲಾದ ಪರಭಾಷೆಯ ಮಾತುಗಳನ್ನು ಬಳಸುವಾಗ, ಅನಿವಾರ್ಯವಾದರೆ ಹೊರತು, ಬಹು ಕಟ್ಟುನಿಟ್ಟಾಗಿರುವುದು ಒಳ್ಳೆಯದು. ಕನ್ನಡ ಸಂಸ್ಕೃತ ಮೇಳೈಸುವಂತೆ, ಕನ್ನಡದೊಂದಿಗೆ ಇತರ ಭಾಷೆಗಳು ಅಷ್ಟಾಗಿ ಕೂಡಿಬರುವುದಿಲ್ಲ. ಅತಿಯಾದ ಸಂಸ್ಕೃತವೇ ಕೂಡದೆನ್ನುವಾಗ, ನೆನ್ನೆ ಮೊನ್ನೆಯ ಪರಿಚಯದ ಹೊಸ ಭಾಷೆಗಳಿಗೇಕೆ ಸಲ್ಲದ ಮರ್ಯಾದೆ? ಮಾವನಿಗೇ ಮಣೆ ಹಾಕದಿರುವಾಗ ಮೈದುನನಿಗೆ ಹಾಕಬಹುದೆ? ಸಂಸ್ಕೃತದ ಕೃಪಾಣ ಎಷ್ಟರ ಮಟ್ಟಿಗೆ ಆತ್ಮಹತ್ಯೆಗೆ ಸಾಧಕವೋ, ಇಂಗ್ಲಿಷಿನ ರಿವಾಲ್ವರೂ, ಹಿಂದೂಸ್ತಾನಿಯ (ಹಿಂದಿಯ) ಚಾಕುವೂ ಅಷ್ಟರಮಟ್ಟಿಗೇ ಆತ್ಮಘಾತುಕಆಯುಧಗಳೆಂಬುದನ್ನು ಮರೆಯಬಾರದು.

(೨) ಕಥೆ, ಕಾದಂಬರಿ, ನಾಟಕ, ಜೀವನಚರಿತ್ರೆ ಮೊದಲಾದ ಲಲಿತಪ್ರಕಾರದ ಗದ್ಯಗ್ರಂಥಗಳು ಕೂಡಿದ ಮಟ್ಟಿಗೂ ಸರಳವಾದ ಹೊಸಗನ್ನಡದಲ್ಲಿಯೇ ಇರಬೇಕು. ಶೈಲಿಯಲ್ಲಿ ಸೊಗಸು ಸಾಧಿಸುವ ಉದ್ದೇಶದಿಂದ (ಸಂಸ್ಕೃತ ಪದಗಳ ವಿಚಾರದಲ್ಲಿ) ಮುದ್ದಣನ ಆದರ್ಶವನ್ನು ಅನುಸರಿಸಬಹುದು. ಇಂಗ್ಲಿಷ್ ಮತ್ತು ಇತರ ಭಾಷೆಗಳ ಪದಗಳ ಮಿಶ್ರಣದಲ್ಲಿ ತುಂಬ ಎಚ್ಚರಿಕೆಬೇಕು ನಾಟಕ ಶೈಲಿಯಲ್ಲಿ ಕೂಡ ಕೈಲಾಸಂ ಅವರ ಮಾರ್ಗ ಅನುಕರಣಕ್ಕಾಗಿಯಲ್ಲ. ವಿದ್ಯಾವಂತ ಕನ್ನಡಿಗರ ಕನ್ನಡತನವನ್ನು ಅವರು ವಿಡಂಬನ ಮಾಡಿದ್ದಾರೆ; ನಾವು ಎಂತಹ ಆತ್ಮಘಾತುಕ ಮಾರ್ಗವನ್ನು ಅನುಸರಿಸುತ್ತಿದ್ದೇವೆ ಎಂಬುದನ್ನು ಭೂತಕನ್ನಡಿ ಹಿಡಿದು ತೋರಿಸಿದ್ದಾರೆ; ನಿತ್ಯಗಟ್ಟಳೆಯ ಮಾತುಕತೆಯಲ್ಲಿ ಕೂಡ ಆ ಮಾರ್ಗವನ್ನು ಅನುಸರಿಸದಿರುವುದೇ ನಾವು ಅವರಿಗೆ ತೋರಿಸಬಹುದಾದ ಅತ್ಯಂತ ಹೆಚ್ಚಿನ ಗೌರವ. ಕಥೆಯಲ್ಲಿ ಇಂಗ್ಲಿಪರವನ ಪಾತ್ರವೊಂದು ಇದ್ದರೆ, ಅವನ ಮಾತುಕತೆಯೆಲ್ಲವನ್ನೂ ಇಂಗ್ಲೀಷಿನಲ್ಲಿಯೇ ಹೇಗೆ ಬರೆಯುವುದಿಲ್ಲವೋ, ಹಾಗೆಯೇ ನಮ್ಮವರ ಮಿಶ್ರಭಾಷೆಯನ್ನೂ ಕಥೆ ಕಾದಂಬರಿ ನಾಟಕಗಳಲ್ಲಿ ಯಥಾವತ್ತಾಗಿ ಇಳಿಸಬೇಕಾಗಿಲ್ಲ. ಅಲ್ಲೊಂದು ಇಲ್ಲೊಂದು ಪದ ಉಪಯೋಗಿಸಿ ಪಾತ್ರದ ಮಾತುಕತೆಯ ಸ್ವರೂಪವನ್ನು ಸೂಚಿಸಿದರೆ ಸಾಕು.

(೩) ವಿಜ್ಞಾನ, ತತ್ತ್ವ, ಇತಿಹಾಸ, ಮೊದಲಾದ ನಾನಾ ವಿಚಾರಗಳನ್ನು ಕೆಳಗಿನ ಮಟ್ಟದ ವಿದ್ಯಾರ್ಥಿಗಳಿಗೆ ತಿಳಿಯಹೇಳುವ (ಭಾಷೇತರ) ಪಠ್ಯಪುಸ್ತಕಗಳಲ್ಲಿಯೂ ವಿಷಯನಿರೂಪಣೆ ಕೂಡಿದ ಮಟ್ಟಿಗೆ (ಮೇಲ್ಕಂಡ ನಿಯಮಗಳಿಗೆ ಒಳಪಟ್ಟು) ಬಳಕೆಯ ಕನ್ನಡದಲ್ಲಿರಬೇಕು. ಅನಿವಾರ್ಯವಾದ ಕಡೆ ಮಾತ್ರ ರೂಢಿಯ ಸಂಸ್ಕೃತದ ಇಲ್ಲವೆ ಇಂಗ್ಲೀಷಿನಲ್ಲಿನ ಪಾರಿಭಾಷಿಕ ಪದಗಳನ್ನು ಉಪಯೋಗಿಸಬಹುದು.

(೪) ವೈಜ್ಞಾನಿಕ ವಿಷಯಗಳು ಮೊದಲಾದ ಶಾಸ್ತ್ರ ವಿಚಾರಗಳ ಗ್ರಂಥಗಳಲ್ಲಿ ನಿರೂಪಣ ಭಾಗವೆಲ್ಲ ಸಾಧ್ಯವಾದ ಮಟ್ಟಿಗೂ ಸರಳವಾದ ಹೊಸ ಕನ್ನಡದಲ್ಲಿ ಇದ್ದು,

ಪಾರಿಭಾಷಿಕ ಶಬ್ದಗಳು ಮಾತ್ರ ಅನ್ಯ ಭಾಷೆಯವಾಗಿರಬಹುದು. (ಈ ಪಾರಿಭಾಷಿಕ ಶಬ್ದಗಳು ಇಂಗ್ಲಿಷಿನಲ್ಲಿ ರೂಢಿಯಲ್ಲಿರುವವಾಗಿರಬೇಕೆ, ಸಂಸ್ಕೃತ ಭಾಷೆಯ ಸಹಾಯದಿಂದ ಕಲ್ಪಿಸಿದವಾಗಬೇಕೆ ಎಂಬ ವಿಚಾರ ಜಟಿಲವಾದದ್ದು ; ಈ ಲೇಖನದ ವ್ಯಾಪ್ತಿಗೆ ಹೊರತಾದದ್ದು.)

(ಇ) ಈ ವಿಚಾರದಲ್ಲಿ ವೃತ್ತ ಪತ್ರಿಕೆಗಳವರ ಹೊಣೆ ಹಿರಿಯದು. ಸಾಮಾನ್ಯ ಜನರ ಶಬ್ದಕೋಶವನ್ನು ಬೆಳಸುವವರು ಅವರು. ಅವರು ಹೊಸ ಹೊಸ ಶಬ್ದಗಳನ್ನು ನಿರ್ಮಿಸುವಾಗ ಮೇಲ್ಕಂಡ ನಿಯಮಗಳ ಆಶಯವನ್ನು ಗಮನದಲ್ಲಿರಿಸಿಕೊಂಡು, ಕನ್ನಡದ ಜಾಯಮಾನಕ್ಕೆ ಒಗ್ಗುವಂತೆ ಶಬ್ದ ಸೃಷ್ಟಿಮಾಡಿದರೆ, ಕನ್ನಡದ ಉಳಿವಿಗೂ ಬಳವಿಗೂ ಉಪಕಾರವಾಗುವುದು. ಅವರು ಪದೇ ಪದೇ ಉಪಯೋಗಿಸುವ ಮಾತುಗಳೇ ಜನರ ಬಾಯಲ್ಲಿ ನಿಲ್ಲುವುದು ; ಅವು ಕ್ರಮೇಣ ಗ್ರಂಥದ ಭಾಷೆಗೂ ನುಗ್ಗುತ್ತವೆ. (ಉದಾ :– ಕೆಲವು ಪತ್ರಿಕೆಗಳ ಸುದ್ದಿ ಸಮಾಚಾರಗಳಲ್ಲಿ, 'ಜವಾಬ್ದಾರಿ', 'ಬದಲಾವಣೆ', 'ವಾಪಸ್ಸಾದರೂ' ಎಂಬ ಮಾತುಗಳು ಕಣ್ಣಿಗೆ ಬೀಳುತ್ತಲೇ ಇರುತ್ತವೆ. 'ಜವಾಬ್ದಾರಿಯುತ' ಎಂಬ ಸಮಾಸಪದವೂ ಸೃಷ್ಟಿಯಾಗಿ ಹೋಗಿದೆ ! 'ಹೊಣೆ', 'ಮಾರ್ಪಾಟು' 'ಹಿಂದಿರುಗಿದರು' ಎಂಬ ಕನ್ನಡ ಮಾತುಗಳನ್ನು ಬಳಸಬಹುದಲ್ಲವೆ ?)

ಒಟ್ಟಿನಲ್ಲಿ, ಭಾರತದ ಸ್ವಾತಂತ್ರ್ಯಪೂರ್ವದಲ್ಲಿ ಆಡಿದ 'ಶ್ರೀ' ಯವರ ಹಿತವಚನ ಸ್ವಾತಂತ್ರ್ಯೋತ್ತರದ ಈ ಕಾಲಕ್ಕೂ ಬಹುಮಟ್ಟಿಗೆ ಅನ್ವಯಿಸುತ್ತದೆ. ರಾಜಭಾಷೆ ಈಗಿನಂತೆ ಇಂಗ್ಲೀಷೇ ಇದ್ದು, ಹಿಂದಿ ರಾಷ್ಟ್ರಭಾಷೆಯಾಗಿ ಪ್ರಚಾರಗೊಳ್ಳುತ್ತಿರಲಿ ; ಇಲ್ಲವೆ, ಹಿಂದಿಯೇ ರಾಜಭಾಷೆಯೂ ರಾಷ್ಟ್ರಭಾಷೆಯೂ ಆಗಿ ಪಟ್ಟಕ್ಕೇರಲಿ: ಕನ್ನಡಿಗರಾದ ನಮ್ಮ ನಿಲುವು ಒಂದೇ, ಅದು ಸುಸ್ಪಷ್ಟ. ಇಂಗ್ಲಿಷರ ಸಂಪರ್ಕದಿಂದ ಜೋಡು ಷರಾಯಿ ಧರಿಸುವುದನ್ನು ಕಲಿತೆವು : ಆದರೆ, ಆ ವೇಷದಲ್ಲಿ ನಾವು ಇನ್ನೂ ದೇವರ ಪೂಜೆಮಾಡುವುದನ್ನು ಕಲಿತಿಲ್ಲ. ಹಾಗೆಯೇ, ಬಲಾತ್ಕಾರವಾಗಿ ಎಲ್ಲರೂ ಹಿಂದಿಯನ್ನು ಕಲಿಯಬೇಕಾಗಿ ಬಂದರೂ, ಕಲಿತದ್ದನ್ನು ಯಾವ ಸಂದರ್ಭದಲ್ಲಿ ಹೇಗೆ ಉಪಯೋಗಿಸಿಕೊಳ್ಳಬೇಕೋ ಹಾಗೆ ಉಪಯೋಗಿಸಿಕೊಳ್ಳುವ, ಅನಾವಶ್ಯಕವೆನಿಸಿದರೆ ಕಲಿತದ್ದನ್ನು ಮರೆಯುವ, ಹಕ್ಕೂ ಸ್ವಾತಂತ್ರ್ಯವೂ ನಮಗುಂಟಷ್ಟೆ? ಹಿಂದಿಯಿಂದಲೂ ಕನ್ನಡಕ್ಕೆ ಉಪಕಾರವಾಗುವುದಿದ್ದರೆ ಆಗಲಿ. ನಮ್ಮಲ್ಲಿ ಇಲ್ಲದ ಹಿಂದಿಯ ಮಾತುಗಳೂ ಬರಲಿ ; ಬೇಡವೆನ್ನುವುದಿಲ್ಲ. * ಎರಡಲ್ಲ, ಇಪ್ಪತ್ತು ಭಾಷೆ

---

* ದೇವನಾಗರಿ ಲಿಪಿಯನ್ನೇ ಭಾರತದ ಭಾಷೆಗಳಿಗೆಲ್ಲಾ ಏಕೆ ಅಂಗೀಕರಿಸಬಾರದೆಂಬ ಪ್ರಶ್ನೆ ಈಗ ಎದ್ದು, ಪ್ರಚಾರಗೊಳ್ಳುತ್ತಿದೆ. ಕನ್ನಡದ ಲಿಪಿಯನ್ನು ಕೈಬಿಟ್ಟು ನಾಗರಿ ಲಿಪಿಯನ್ನು ಇಟ್ಟುಕೊಂಡರೆ, ಓದುಬರಹಬಲ್ಲ ಅವ್ಯುತ್ಪನ್ನ ಜನರು ಕನ್ನಡ ಹಿಂದಿ ಎಂಬ ಭೇದವನ್ನೇ ಮರೆತು, ಕನ್ನಡ ನುಡಿಗಳ ಅಳಿವಿಗೆ ಕಾರಣವಾಗಬಹುದು. ಈ ದೃಷ್ಟಿಯಿಂದ, ನಾಗರಿಲಿಪಿಯನ್ನು ಕನ್ನಡಕ್ಕೆ ಒಪ್ಪಿಕೊಳ್ಳಲಾಗದು.

ಗಳನ್ನು ಕಲಿಯೋಣ: ಆದರೆ, ಕನ್ನಡವನ್ನು ಮರೆಯದಿರೋಣ. ತಿಳಿವಳಿಕೆ ಸಾಲದೆಯೋ ಉಪೇಕ್ಷೆಯಿಂದಲೋ 'ಧೋರಣೆ' ಯಿಂದಲೋ ನಮ್ಮ ನುಡಿಯನ್ನು ನಾವು ಮರೆಯುತ್ತ ತೊರೆಯುತ್ತ ಬಂದರೆ ಅದರ ಅಳಿವು; ನಮ್ಮದೆಂಬ ಸಹಜವಾದ ಮಮತೆಯಿಂದ ಅಳಿದು ಉಳಿದಿರುವಷ್ಟನ್ನಾದರೂ ಪೊರೆಯುತ್ತ ಬಂದರೆ, ಅದರ ಉಳಿವು. ಹೀಗೆ, ಕನ್ನಡ ನುಡಿಯ ಅಳಿವು-ಉಳಿವು ನಮ್ಮ ಕೈಯಲ್ಲೇ ಇದೆ. ಉಳಿಸಿಕೊಳ್ಳಬೇಕಾದದ್ದು ನಮ್ಮ ಪರಮ ಕರ್ತವ್ಯವೆಂದು ಬೇರೆ ಹೇಳಬೇಕಾಗಿಲ್ಲ ವಷ್ಟೆ?

ಎಂ. ವಿ. ಸೀತಾರಾಮಯ್ಯ

# ಪ್ರಾಚೀನ ಭಾರತದ ಅಳತೆಗಳು

ವಿಜ್ಞಾನವು ಈಗ ಮುಟ್ಟಿರುವ ಉನ್ನತಪದವಿಗೆ ಮುಖ್ಯವಾದ ತಳಹದಿಯಾವುದೆಂದರೆ ನಿಷ್ಕರ್ಷೆಯಿಂದ ಕೂಡಿದ ಅಳತೆಯೇ. ಪ್ರತಿಯೊಂದು ಪದಾರ್ಥದ ಅಳತೆಗೂ ಅದೇ ಜಾತಿಯ ಒಂದು ಗೊತ್ತಾದ ಪರಿಮಾಣವನ್ನು ಆದರ್ಶವಾಗಿ ಇಟ್ಟುಕೊಳ್ಳಬೇಕಾಗುತ್ತದೆ. ಅನಂತರ ಆ ಪದಾರ್ಥದ ಪರಿಮಾಣವನ್ನು ಈ ಆದರ್ಶದೊಡನೆ ಹೋಲಿಸಲು ಸಲಕರಣೆಗಳು ಬೇಕಾಗುತ್ತವೆ ಈಗಿನ ವಿಜ್ಞಾನಪ್ರಯೋಗಶಾಲೆಗಳಲ್ಲಿ ಬಹು ನಿಷ್ಕೃಷ್ಟವಾದ ಅಳತೆಗಳಿಗೆ ಬೇಕಾಗುವ ಯಂತ್ರೋಪಕರಣಗಳು ಹೇರಳವಾಗಿವೆ. ಹಿಂದಿನ ಕಾಲದಲ್ಲಿ ಇಂತಹ ಸಲಕರಣೆಗಳೂ ಇರಲಿಲ್ಲ. ಆಗಿನ ಕಾಲದಲ್ಲಿ ಅವುಗಳ ಆವಶ್ಯಕತೆಯೂ ಕಂಡುಬಂದಿರಲಿಲ್ಲ. ಆಗ ಅಳತೆಗಳು ಮುಖ್ಯವಾಗಿ ಬೇಕಾಗುತ್ತಿದ್ದುದು ವಾಣಿಜ್ಯದಲ್ಲಿಯೇ ಹೊರತು ವಿಜ್ಞಾನದಲ್ಲಲ್ಲ. ಆದರೂ ಆಗಿನ ಅಳತೆಗಳ ಸ್ವರೂಪವನ್ನು ಪರೀಕ್ಷೆಮಾಡುವುದು ವಿಜ್ಞಾನದ ಚರಿತ್ರೆಯ ದೃಷ್ಟಿಯಿಂದ ಉಪಯುಕ್ತವಾದುದೆಂದು ಹೇಳಬಹುದು. ಹಿಂದಿನ ಕಾಲದಲ್ಲಿ ನನ್ನ ದೇಶದಲ್ಲಿ ಯಾವ ರೀತಿಯ ಅಳತೆಗಳು ಪ್ರಚಾರದಲ್ಲಿದ್ದುವೆಂಬುದನ್ನು ಈ ದೃಷ್ಟಿಯಿಂದ ಪರಿಶೀಲಿಸುವುದೇ ಈ ಲೇಖನದ ಉದ್ದೇಶ. ಈ ವಿಷಯವನ್ನು ಹಿಂದೆ ಪರಿಶೀಲಿಸಿರುವ ಲೇಖನಗಳು ಯಾವುದೂ ಈ ಲೇಖಕನ ಗಮನಕ್ಕೆ ಬಂದಿಲ್ಲ. ಅಂತಹ ಲೇಖನಗಳಿವೆಯೇ ಎಂಬುದನ್ನು ಹುಡುಕಲು ಬೇಕಾದ ಕಾಲವೂ ಪುಸ್ತಕಭಾಂಡಾಗಾರ ಸಂಪತ್ತೂ ದೊರೆಯುವಂತೆಯೂ ಇಲ್ಲ. ಈ ಕಾರಣಗಳಿಂದ ಈ ಲೇಖನವು ಅಪೂರ್ಣವಾಗಿಯಾಗಲಿ, ಚರ್ವಿತಚರ್ವಣವಾಗಿಯಾಗಲಿ ಕಂಡುಬಂದರೆ, ಓದುಗರ ಮತ್ತು ಶ್ರೀಕೃಷ್ಣಶಾಸ್ತ್ರಿಗಳ ಕ್ಷಮೆಯನ್ನು ಬೇಡುತ್ತೇನೆ. ಮುಖ್ಯವಾಗಿ ಶ್ರೀಕೃಷ್ಣಶಾಸ್ತ್ರಿಗಳ ಗುಣ, ಧ್ಯೇಯ, ಸಾಧನೆ, ಇವುಗಳ ವಿಷಯದಲ್ಲಿ ನನಗೆ ಇರುವ ಗೌರವದ ಗುರುತಾಗಿ ಈ ಲೇಖನವನ್ನು ಬರೆದಿರುವುದರಿಂದಲೂ, ಕನ್ನಡ ವಾಙ್ಮಯದಲ್ಲಿ ಸರ್ವತೋಮುಖವಾದ ಬೆಳವಣಿಗೆಯಾಗಬೇಕೆಂಬ ಅವರ ಸಂಕಲ್ಪಕ್ಕೆ ಈ ಲೇಖನದಿಂದಲೂ ಯತ್ಕಿಂಚಿತ್ ಉಪಯೋಗವಾಗಬಹುದಾದುದರಿಂದಲೂ, ವಾಚಕರು ಇದನ್ನು ಸಾವಧಾನವಾಗಿ ಪರಿಶೀಲಿಸುವರೆಂದು ನಂಬಿದ್ದೇನೆ. ಇಲ್ಲಿ ಹೇಳಿರುವ ಸಂಗತಿಗಳಿಗೆ ಕೌಟಲೀಯ ಅರ್ಥಶಾಸ್ತ್ರವೂ (ಡಾಕ್ಟರ್ ಆರ್. ಶಾಮಶಾಸ್ತ್ರಿಗಳು ಸಂಪಾದಿಸಿದುದು), ರಾಜಾ ರಾಧಾಕಾಂತದೇವ್ ಅವರ ಶಬ್ದಕಲ್ಪದ್ರುಮವೆಂಬ ಮಹಾಕೋಶದಲ್ಲಿ ಅಲ್ಲಲ್ಲೇ ದೊರೆಯುವ ಉಲ್ಲೇಖಗಳೂ ಆಧಾರವಾಗಿವೆ. ಇವಲ್ಲದೆ ಬೇರೆ ಆಕರಗಳನ್ನು ಪರಿಶೀಲಿಸಲು ಅವಕಾಶ ದೊರೆತಿಲ್ಲ.

ವಿಜ್ಞಾನದಲ್ಲಿ ಪರಿಶೀಲನೆಗೆ ಬರುವ ನಾನಾ ಪದಾರ್ಥಗಳಿಗೆಲ್ಲಾ ದೇಶ, (Space), ಕಾಲ (time) ಮತ್ತು ಜಡತ್ವ (mass)ಗಳೆಂಬ ಮೂರು ಆಧಾರವಾಗಿವೆ. ಅದರಲ್ಲಿ ದೇಶದ ಅಳತೆಗೆ ಉದ್ದದ ಅಳತೆಯೇ ಮೂಲ. ಕಾಲದ ಗಣನೆಗೆ ಪೃಥ್ವಿಯ

ಚಲನೆಯೇ ಆದರ್ಶ. ಜಡತ್ವದ ಅಳತೆಗೆ ತ್ರಾಸಿನ ಮೂಲಕ ತಿಳಿಯುವ ತೂಕವೇ ಆಧಾರ. ಈ ಮೂರು ಪದಾರ್ಥಗಳ ಅಳತೆಯು ಸಾಧ್ಯವಾದ ಮೇಲೆ ಇತರ ಎಲ್ಲಾ ಪದಾರ್ಥಗಳಿಗೂ ಆದರ್ಶಮಾನಗಳನ್ನೂ. ಅಳತೆಮಾಡುವ ರೀತಿ ಮತ್ತು ಬೇಕಾದ ಸಾಧನಗಳು, ಇವುಗಳನ್ನೂ ಸಿದ್ಧಪಡಿಸಿಕೊಳ್ಳಬಹುದು. ಹಿಂದಿನಿಂದಲೂ ಈ ಮೂರು ಪದಾರ್ಥಗಳು ಅಳತೆಗೆ ಗುರಿಯಾಗಿವೆ. ಈ ಕಾರಣಗಳಿಂದ ಉದ್ದ, ತೂಕ ಮತ್ತು ಕಾಲ, ಈ ಮೂರರ ಅಳತೆಯ ವಿಷಯವನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಲಾಗುತ್ತದೆ.

**ಉದ್ದ**— ಉದ್ದದ ಅಳತೆಗೆ ಮೊದಲಿನಿಂದಲೂ ಮನುಷ್ಯದೇಹದ ನಾನಾ ಭಾಗಗಳೇ ಆದರ್ಶವಾಗಿ ಬಂದಿವೆ. ಅಂಗುಲ, ಗೇಣು, ಮೊಳ, ಮಾರು, ಅಡಿ, ಹಸ್ತ, ಆಳುದ್ದ ಮುಂತಾದ ಹೆಸರುಗಳೇ ಇದಕ್ಕೆ ಸಾಕ್ಷಿ. ನಮ್ಮ ಪ್ರಾಚೀನರೂ ಇದೇ ಅಳತೆಗಳನ್ನು ಉಪಯೋಗಿಸುತ್ತಿದ್ದರು. ಅತಿ ಎತ್ತರವೂ, ಅತಿ ಕುಳ್ಳೂ ಅಲ್ಲದ ಮನುಷ್ಯನ ಮಧ್ಯದ ಬೆರಳಿನ ಮಧ್ಯದ ಗಿಣ್ಣೇ ಅಂಗುಲ("ಮಧ್ಯಮಸ್ಯ ಪುರುಷಸ್ಯ ಮಧ್ಯಮಾಯಾ ಅಂಗುಲ್ಯಾ ಮಧ್ಯಪ್ರಕರ್ಷೋವಾಙ್ಗುಲಮ್" ಎಂದು ಅರ್ಥಶಾಸ್ತ್ರ). ಹೆಬ್ಬೆಟ್ಟನ್ನೂ ಕಿರಿಬೆರಳನ್ನೂ ಚಾಚಿದರೆ ಒಂದರ ತುದಿಯಿಂದ ಇನ್ನೊಂದು ತುದಿಗೆ ಇರುವ ದೂರವೇ ವಿತಸ್ತಿ ಅಥವಾ ಗೇಣು. (ವಿತಸ್ತಿಃ ವಿಸ್ತೃತಸಕನಿಷ್ಠಾಂಗುಷ್ಠಃ—ಶಬ್ದಕಲ್ಪದ್ರುಮ). ಒಂದು ವಿತಸ್ತಿಗೆ ಹನ್ನೆರಡು ಅಂಗುಲಗಳು (ದ್ವಾದಶಾಂಗುಲೋವಿತಸ್ತಿಃ ಛಾಯಾ ಪೌರುಷಂಚ—ಅ.ಶಾ. ಛಾಯಾಪುರುಷ ಎಂಬುದರ ವಿಷಯವನ್ನು ಕಾಲಮಾನದಲ್ಲಿ ತಿಳಿಸುತ್ತೇವೆ). ಹೀಗೆ ಹಿಂದಿನ ಅಂಗುಲವೆಂಬುದು ಈಗ ಉಪಯೋಗದಲ್ಲಿರುವ ಇಂಚ್ ಎಂಬ ಅಳತೆಗಿಂತಲೂ ಚಿಕ್ಕದು. ಒಂದು ಗೇಣಿಗೆ ಸುಮಾರು ಒಂಬತ್ತು ಇಂಚುಗಳಾದರೆ ಒಂದು ಅಂಗುಲವು ಮುಕ್ಕಾಲು ಇಂಚ್ ಎಂದಾಯಿತು. ಈ ಅಂಗುಲವೆಂಬ ಅಳತೆಯು ಪ್ರಾಚೀನದೇಶಗಳಲ್ಲೆಲ್ಲಾ ಪ್ರಚಾರದಲ್ಲಿತ್ತು. ಆಗಿನ ಕಾಲದ ಕಟ್ಟಡಗಳಲ್ಲಿ ದೊರೆಯುವ ಗುರುತುಗಳಿಂದ ಈಜಿಪ್ಟಿನಲ್ಲಿ ಅಂಗುಲವು 0·727 ಇಂಚ್ ಆಗಿತ್ತೆಂದು ನಿರ್ಧರಿಸಿದ್ದಾರೆ. ಹೀಗೆಯೇ ಅಸ್ಸಿರಿಯಾದಲ್ಲಿ 0·730, ಪರ್ಷಿಯದಲ್ಲಿ 0·734, ಸಿರಿಯಲ್ಲಿ 0·728 ಇಂಚಿಗೆ ಒಂದು ಅಂಗುಲವೆಂದು ಕಂಡು ಬರುತ್ತದೆ. (Encyclopaedia Britannica XI Edition, vol. 28, p. 483) ಅಳತೆಮಾಡಲು ಕೋಲುಗಳನ್ನೂ ಹಗ್ಗಗಳನ್ನೂ ಉಪಯೋಗಿಸುತ್ತಿದ್ದರೆಂದು ಊಹಿಸಬಹುದು. ದಂಡ, ರಜ್ಜು ಎಂಬ ಅಳತೆಗಳೇ ಇದನ್ನು ಸೂಚಿಸುತ್ತವೆ. (ಕಾಳಿದಾಸನ ಕುಮಾರ ಸಂಭವದಲ್ಲಿನ " ಸ್ಥಿತಃ ಪೃಥಿವ್ಯಾ ಇವಮಾನದಂಡಃ" ಎಂಬುದನ್ನು ಜ್ಞಾಪಿಸಿಕೊಳ್ಳಬಹುದು.) ಈ ಅಳತೆಗಳೆಲ್ಲಾ ಅಂಗುಲವನ್ನು ಒಂದು ಸಂಖ್ಯೆಯಿಂದ ಗುಣಿಸುವುದರಿಂದಲೂ ಭಾಗಿಸುವುದರಿಂದಲೂ ಏರ್ಪಡುತ್ತವೆ. ಈ ಅಳತೆಗಳು ಯಾವುವೆಂದರೆ:—

8 ಪರಮಾಣುಗಳು= 1 ತೇರಿನ ಚಕ್ರದಿಂದ ಹಾರುವ ಹನಿ (ರಥಚಕ್ರವಿಪ್ರುಟ್)

8 ತೇರಿನ ಚಕ್ರದ ಹನಿಗಳು= 1ಹೇನಿನಮೊಟ್ಟೆ (ಲಿಕ್ಷಾ= ಯೂಕಾಂಡಮ್)

8 ಹೇನಿನ ಮೊಟ್ಟೆಗಳು= 1ಹೇನಿನ ಹೊಟ್ಟೆ (ಯುಕಾಮಧ್ಯಃ)

8 ಹೇನಿನ ಹೊಟ್ಟೆಗಳು= 1ಜವೆಗೋಧಿಯ ಕಾಳಿನ ಅಗಲ (ಯವಮಧ್ಯಃ)

[ಇಲ್ಲಿ ಹೊಟ್ಟು ತೆಗೆದ ಗೋಧಿಯ ಕಾಳೆಂದು ಕಾಲಿಕಾಪುರಾಣದಿಂದ ತಿಳಿಯಬರುತ್ತದೆ].

8 ಗೋಧಿಯ ಕಾಳಿನ ಅಗಲ= 1ಅಂಗುಲ.

ಈ ರೀತಿಯಲ್ಲಿ ಒಂದು ಅಂಗುಲವನ್ನು ವಿಭಾಗಿಸಿದ್ದರೂ ಆಗಿನ ಕಾಲದ ಅಳತೆಯು ಅಷ್ಟು ನಿಷ್ಕೃಷ್ಟವಾಗಿತ್ತೆಂದು ಭಾವಿಸಬಾರದು. ಇಲ್ಲಿ ಒಂದು ಪರಮಾಣುವೆಂಬುದು ಒಂದು ಅಂಗುಲದ 32768ನೆಯ ಭಾಗವೆಂದು ಲೆಕ್ಕದಿಂದ ತಿಳಿದುಬರುತ್ತದೆ. ಆದರೆ ಈಗಿನ ಭೌತಪ್ರಯೋಗಶಾಲೆಗಳಲ್ಲಿ ಸಾಮಾನ್ಯವಾಗಿ ದೊರಕುವ ಚಲಿಸುವ ಸೂಕ್ಷ್ಮ ದರ್ಶಕದಿಂದ (Travelling Microscope) ಒಂದು ಇಂಚಿನ 2540ನೆಯ ಭಾಗ ದಷ್ಟು ಉದ್ದವನ್ನು ಎಂದರೆ ಹಿಂದಿನ ಅಂಗುಲದ 1905ನೆಯ ಭಾಗವನ್ನು ಮಾತ್ರ ಅಳೆಯಬಹುದು. ಇದಕ್ಕಿಂತ ಹೆಚ್ಚು ನಿಷ್ಕೃಷ್ಟವಾದ ಅಳತೆಗೆ ಅತ್ಯಂತ ಬೆಲೆ ಬಾಳುವ ಸಾಧನಗಳು ಬೇಕು. ಆದರೆ ನಮ್ಮ ಪೂರ್ವಿಕರ ಅಳತೆಯು ಒಂದು ಪರ ಮಾಣುವನ್ನು ಅಳೆಯುವಷ್ಟು ನಿಷ್ಕೃಷ್ಟವಾಗಿತ್ತೆಂದು ಸರ್ವಥಾ ತಿಳಿಯಬಾರದು ಏಕೆಂದರೆ ಭಾಗವತ (3ನೆಯ ಸ್ಕಂಧ, 11ನೆಯ ಅಧ್ಯಾಯ, 5ನೆಯ ಶ್ಲೋಕ—'ಅಣು ರ್ದ್ವೌಪರಮಾಣೂಸ್ಯಾತ್ತ್ರಸರೇಣುಸ್ತ್ರಯಃಸ್ಮೃತಃ । ಜಾಲಾರ್ಕರಶ್ಮ್ಯವಗತಃ ಖಮೇವಾನುಪತನ್ನಗಾತ್ ॥') ದ ಮತದಂತೆ ಬಿಸಿಲು ಕೋಲಿನಲ್ಲಿ ಕಾಣುವ ರವೆಯು (mote in a sunbeam) 6ಪರಮಾಣುಗಳೆಂದು ಕಂಡು ಬರುತ್ತದೆ. ಇಂತಹ 4ರವೆಗಳು ಒಂದು ಹೇನಿನ ಮೊಟ್ಟೆ ("ಜಾಲಾಂತರಗತೇಭಾನೌ ಯಚ್ಛಾಣುರ್ದೃಶ್ಯತೇ ರಜಃ। ತೈಶ್ಚತುರ್ಭಿರ್ಭವೇಲ್ಲಿಕ್ಷಾ ಲಕ್ಷಾಷಡ್ಭಿಶ್ಚಸರ್ಷಪಃ"—ಶಬ್ದಚಂದ್ರಿಕಾ) ಎಂದರೆ 24ಪರಮಾಣುಗಳು ಒಂದು ಹೇನಿನ ಮೊಟ್ಟೆಯೆಂದಾಯಿತು. ಕೌಟಿಲ್ಯನ ಮತದಂತೆ ಒಂದು ಹೇನಿನ ಮೊಟ್ಟೆಗೆ 64ಪರಮಾಣಗಳು. ಹೀಗೆ ಮತಭೇದವಿರುವುದಲ್ಲದೆ ಬಿಸಿಲು ಕೋಲಿನಲ್ಲಿ ಕಾಣುವ ರವೆಯ ಪರಿಮಾಣದ ವಿಷಯದಲ್ಲಿ ಈ ಯಾವ ಅಭಿಪ್ರಾಯವೂ ಸರಿಯಾದುದಲ್ಲ. ಇಂತಹ ರವೆಯು ಸೂಕ್ಷ್ಮದರ್ಶಕಕ್ಕೆ ಕಾಣದಂತಹ ಸೂಕ್ಷ್ಮಕಣ ವೆಂದು ವೈಜ್ಞಾನಿಕಮತ. ಅಲ್ಲದೆ ಪರ್ಷಿಯಾದೇಶದ ಹಿಂದಿನ ಕಾಲದ ಅಳತೆಯಂತೆ **6** ಯವಕ್ಕೆ 1ಅಂಗುಸ್ತ್ವ, 10ಅಂಗುಸ್ತ್ವ= 1ವಿತಸ್ತಿ, 2ವಿತಸ್ತಿ= 1ಅರಸ್ನಿ, 360 ಅರಸ್ನಿ= 1ಅಸ್ಪರಸ ಎಂದು ತಿಳಿದು ಬಂದಿದೆ ನಮ್ಮಲ್ಲಿ 1ವಿತಸ್ತಿ= 12ಅಂಗುಲ, 1ಅಂಗುಲ= 8ಯವ ಎಂದಾಯಿತು. ('ಯವೋದರೈರಂಗುಲಮಷ್ಟಸಂಖ್ಯೈಃ'— ಭಾಸ್ಕರಾಚಾರ್ಯ).

2ವಿತಸ್ತಿಗಳು= 1ಅರತ್ನಿ ಅಥವಾ ಹಸ್ತ ('ದ್ವಿವಿತಸ್ತಿರರತ್ನಿಃ ಪ್ರಾಜಾಪತ್ಯೋ ಹಸ್ತಃ'—ಅ.ಶಾ.)

4ಅರತ್ನಿಗಳು= 1ದಂಡ ಅಥವಾ ಧನುಸ್. ('ಹಸ್ತೋಂಗುಲೈಷ್ಷಡ್ಗುಣಿತೈಶ್ಚ ತುರ್ಭಿಃ'—ಭಾಸ್ಕರಾಚಾರ್ಯ).

10ದಂಡಗಳು= 1ಹಗ್ಗ (ರಜ್ಜುಃ)

1000ದಂಡಗಳು= 1ಗೋರುತ (ಹಸುವಿನ ಕೂಗು ಕೇಳಿಸುವಷ್ಟು ದೂರ)

4ಗೋರುತ= 1ಯೋಜನ.

[2ಗೋರುತ= 1ಕ್ರೋಶ] ('ಹಸ್ತೈಶ್ಚತುರ್ಭಿರ್ಭವತೀಹದಂಡಃ ಕ್ರೋಶಃ ಸಹಸ್ರದ್ವಿತಯೇನ ತೇಷಾಮ್ ‖ '—ಭಾಸ್ಕರಾಚಾರ್ಯ).

ಇದರಿಂದ ಒಂದು ಹಸ್ತ ಅಥವಾ ಅರತ್ನಿ ಎಂದರೆ 24ಅಂಗುಲ ಅಥವಾ 18ಇಂಚ್ ಎಂದರೆ ಒಂದು ಮೊಳ ಎಂದಾಯಿತು. ಒಂದು ದಂಡ ಅಥವಾ ಕೋಲು= 4ಅರತ್ನಿಗಳು ಎಂದರೆ 6 ಅಡಿ ಅಥವಾ ಒಂದು ಪುರುಷಪ್ರಮಾಣ (ಮನುಷ್ಯನ ಎತ್ತರ. ' ಚತುರರತ್ನಿರ್ದಂಡೋ ಧನುಃ, ನಾಲಿಕಾಪೌರುಷಂ ಚ '—ಅ.ಶಾ.) 1ಗೋರುತ= 6000ಅಡಿ= $1\frac{3}{22}$ಮೈಲಿ. ಒಂದು ಗೋರುತಕ್ಕೇ ಒಂದು ಕ್ರೋಶವೆಂದೂ, 4ಕ್ರೋಶಕ್ಕೆ 1ಯೋಜನವೆಂದೂ ಮತ್ತೊಂದು ಮತ. ಭಾಸ್ಕರಾಚಾರ್ಯರ ಮತದಂತೆಯೂ ನಾಲ್ಕು ಕ್ರೋಶಕ್ಕೆ ಒಂದು ಯೋಜನವಾದರೂ ಒಂದು ಕ್ರೋಶಕ್ಕೆ 2000ದಂಡಗಳೆಂದು ಹೇಳಿರುವುದರಿಂದ ಇದಕ್ಕೆ ಎರಡರಷ್ಟಾಗುತ್ತದೆ. ಹೀಗೆ ಯೋಜನದ ವಿಷಯದಲ್ಲಿ ಭಿನ್ನಾಭಿಪ್ರಾಯವಿರುವುದಲ್ಲದೆ, ಒಂದು ಪುರುಷಮಾನವೆಂಬುದು ಬೇರೆಬೇರೆ ಸಂದರ್ಭಗಳಲ್ಲಿ ಬೇರೆಬೇರೆಯಾಗಿತ್ತೆಂದೂ ತಿಳಿಯುತ್ತದೆ. (84 ಅಂಗುಲ= 1 ಖಾತಪೌರುಷ, 96 ಅಂಗುಲ= 1 ನಾಲಿಕಾಪೌರುಷ, 108 ಅಂಗುಲ= 1ಅಗ್ನಿಚಿತ್ಯಪೌರುಷ). ಅಲ್ಲದೆ ಉದ್ದದ ಅಳತೆಯಲ್ಲಿ ಎಷ್ಟರ ಮಟ್ಟಿಗೆ ವ್ಯತ್ಯಾಸ ಬರುತ್ತಿತ್ತೆಂಬುದು ಸರಿಯಾಗಿ ತಿಳಿದಿಲ್ಲ. (ಈಜಿಪ್ಟ್‌ನಲ್ಲಿ $\frac{1}{360}$ಭಾಗದಷ್ಟೂ, ಪರ್ಷಿಯಾದಲ್ಲಿ $\frac{1}{450}$ಭಾಗದಷ್ಟೂ ರೋಮ್‌ನಲ್ಲಿ $\frac{1}{400}$ಭಾಗದಷ್ಟೂ ಭೇದಗಳು ಕಂಡುಬಂದಿವೆ).

**ತೂಕ**:— 10ಉದ್ದಿನ ಕಾಳಿನ ತೂಕಕ್ಕೆ ಒಂದು ಸುವರ್ಣಮಾಷಕವೆಂದು ಹೆಸರು. ಈ ತೂಕಕ್ಕೆ 5ಗುಂಜಿಯ ತೂಕವು ಸಮ.

16ಮಾಷಕ= 1 ಸುವರ್ಣ ಅಥವಾ ಕರ್ಷ.

4ಕರ್ಷ= 1ಪಲ.

ಈಗಿನ ಚಿನ್ನದ ವ್ಯಾಪಾರಿಗಳು 8ಗುಂಜಿಗಳಿಗೆ 1ಆಣೆ, 16ಆಣೆಗೆ ಒಂದು ತೊಲಾ ಎಂದು ಬಳಸುತ್ತಾರೆ. ಇದರಂತೆ ಒಂದು ಪಲವೆಂದರೆ $2\frac{1}{2}$ತೊಲ ಎಂದು ಅರ್ಥವಾಗುತ್ತದೆ.

80 ಬಿಳಿಸಾಸುವೆಕಾಳುಗಳು= 1 ಬೆಳ್ಳಿಯ ಮಾಷಕ.

16 ಮಾಷಕ= 1 ಧರಣ.

20 ಅಕ್ಕಿಯ ಕಾಳುಗಳು= 1 (ವಜ್ರದ) ಧರಣ.

ಈ ತೂಕಗಳು ಅರ್ಥಶಾಸ್ತ್ರದ ಮತದಂತೆ.

ಚರಕ ಸಂಹಿತೆಯ ಪ್ರಕಾರ ತೂಕವು ಹೇಗೆಂದರೆ—

30 ಪರಮಾಣುಗಳು = 1 ತ್ರಸರೇಣು ಅಥವಾ ಧ್ವಂಸಿ ಇದೇ ಬಿಸಿಲು ಕೋಲಿನಲ್ಲಿ ಕಾಣುವ ರೇಣು.

6 ತ್ರಸರೇಣುಗಳು = 1 ಮರೀಚಿ.

6 ಮರೀಚಿಗಳು = 1ರಾಜಿಕೆ.

3 ರಾಜಿಕೆಗಳು = 1ಸಾಸುವೆಕಾಳು.

8 ಸಾಸುವೆಕಾಳು = 1 ಯವ.

4 ಯವಗಳು = 1 ಗುಂಜಿ.

6 ಗುಂಜಿಗಳು = 1 ಮಾಷಕ.

4 ಮಾಷಕಗಳು = 1ಶಾಣ, ಧರಣ, ಟಂಕ

4 ಟಂಕಗಳು = 1 ಕರ್ಷ.

4 ಕರ್ಷಗಳು = 1 ಪಲ.

ಸುಶ್ರುತನ ಮತದಂತೆ 5 ಗುಂಜಿಗಳು = 1 ಮಾಷ. 4 ಮಾಷಗಳು = 1 ಟಂಕ. 4 ಟಂಕ = 1 ಕರ್ಷ. 4 ಕರ್ಷಗಳು = 1 ಪಲ. ಇದೂ ಅರ್ಥಶಾಸ್ತ್ರದ ಮತದಂತೆಯೇ ಆಯಿತು.

ಭಾವಪ್ರಕಾಶದಲ್ಲಿ ಹೇಳಿರುವಂತೆ 12 ಬಿಳಿ ಸಾಸುವೆಕಾಳುಗಳು 1 ಯವವೆಂದೂ, ಎರಡು ಯವಕ್ಕೆ 1 ಗುಂಜಿಯೆಂದೂ, 80 ಗುಂಜಿಗೆ 1 ಕರ್ಷವೆಂದೂ ಆಗುವುದರಿಂದ ಅದೂ ಅರ್ಥಶಾಸ್ತ್ರಮತಕ್ಕೇ ಹೊಂದುತ್ತದೆ.

(ಅರ್ಥಶಾಸ್ತ್ರಮತದಂತೆ 10 ಧರಣಗಳಿಗೆ 1 ಪಲವೆಂದು ಹೆಸರು ಇದು ಯಾವ ತೂಕಕ್ಕೆಂದು ಹೇಳಿಲ್ಲ.)

100 ಪಲಕ್ಕೆ ಒಂದು ಆಯಮಾನಿಯೆಂದು ಹೆಸರು. ಅಮರಕೋಶದಂತೆ 100 ಪಲಗಳಿಗೆ ಒಂದು ತುಲಾ ಎಂದೂ 20 ತುಲೆಗಳಿಗೆ 1 ಭಾರವೆಂದೂ ಹೆಸರು. ಅರ್ಥಶಾಸ್ತ್ರದಲ್ಲಿಯೂ 20 ತುಲೆಗಳಿಗೆ 1 ಭಾರವೆಂದು ಹೇಳಿದೆ.

ಇದರಿಂದ 1 ತುಲಾ ಅಥವಾ ಆಯಮಾನಿಯೆಂದರೆ ಸುಮಾರು 1 ಧಡಿಯ ತೂಕವಾಗುತ್ತದೆ ಆದುದರಿಂದ ಒಂದು ಭಾರವೆಂದರೆ ಸುಮಾರು 5 ಮಣ ತೂಕವೆಂದಾಯಿತು.

ತೂಕದ ಬಟ್ಟುಗಳನ್ನು ಕಬ್ಬಿಣದಿಂದಲಾಗಲೀ, ಕಲ್ಲಿನಿಂದಾಗಲೀ ಮಾಡಬೇಕೆಂದು ಅರ್ಥಶಾಸ್ತ್ರದಲ್ಲಿ ಹೇಳಿದೆ. ತಕ್ಕಡಿಯ ದಂಡಿಯು 35 ಪಲ ಭಾರದ ಲೋಹದಿಂದ ಮಾಡಲ್ಪಟ್ಟು 72 ಅಂಗುಲ ಉದ್ದವಾಗಿ ಉರುಟಾಗಿರಬೇಕೆಂದು ಹೇಳಿದೆ. 70 ಪಲ ಲೋಹದಿಂದ 96 ಅಂಗುಲ ಉದ್ದದ ತಕ್ಕಡಿಯ ದಂಡಿಯನ್ನು ಮಾಡಬೇಕೆಂದೂ ಹೇಳಿದೆ. 35 ಪಲದ ದಂಡಿಗೆ 5 ಪಲದ ಮಂಡಲವಿರಬೇಕೆಂದು ಹೇಳಿದೆ.

ಇಲ್ಲಿ ಮಂಡಲವೆಂದರೆ ತೂಕದ ತಟ್ಟೆಯಿರಬಹುದು. ಇದಲ್ಲದೆ 96 ಅಂಗುಲದ ದಂಡಿಯ ಮೇಲೆ 100, ಮತ್ತು ಅದರ ಮುಂದಕ್ಕೆ 20, 50, 100 ಪಲಗಳಿಗೆ ಗುರುತುಗಳನ್ನು ('ಪದಾನಿ ಕಾರಯೇತ್') ಮಾಡಬೇಕೆಂದು ಹೇಳಿರುವುದನ್ನು ನೋಡಿದರೆ, ರೈಲ್ವೆ ನಿಲ್ದಾಣಗಳಲ್ಲಿ ಸಾಮಾನುಗಳನ್ನು ತೂಗಲು ಉಪಯೋಗಿಸುವ ಯಂತ್ರಗಳ ರೀತಿಯ ರೋಮನ್ ಸ್ಟೀಲ್‌ಯಾರ್ಡ್ (**Roman Steelyard**) ಗಳನ್ನೂ ಉಪಯೋಗಿಸುತ್ತಿದ್ದಿರಬಹುದೆಂದು ತೋರುತ್ತದೆ. ದೋಷಾರೋಪಣೆಗೆ ಗುರಿಯಾದ ಮನುಷ್ಯನು ತಪ್ಪಿತಸ್ಥನೇ ಅಲ್ಲವೇ ಎಂಬುದನ್ನು ನಿರ್ಧರಿಸಲು ಅವನ ತೂಕವನ್ನು ಮೊದಲೊಂದುಸಲ ಕಂಡುಹಿಡಿದು ಅನಂತರ ತುಲಾಯಂತ್ರವನ್ನು ಅಭಿಮಂತ್ರಿಸಿ ಮತ್ತೆ ಅವನನ್ನು ತೂಗಿ ನೋಡುವುದಕ್ಕೆ ಧಟಪರೀಕ್ಷೆಯೆಂದು ಹೆಸರು. ತೂಕವು ಹೆಚ್ಚಿದರೆ ಅಪರಾಧಿಯೆಂದೂ, ಕಡಿಮೆಯಾದರೆ ಶುದ್ಧನೆಂದೂ ನಿರ್ಧರಿಸುತ್ತಿದ್ದರು. ಇಂತಹ ತಕ್ಕಡಿಯ ದಂಡಿಯು ಸಮವಾಗಿದೆಯೇ ಎಂಬುದನ್ನು ನಿರ್ಧರಿಸಲು ಅದರ ಮೇಲೆ ನೀರನ್ನು ಬಿಟ್ಟು ಆ ನೀರು ಯಾವಕಡೆಗೂ ಹರಿಯದಿದ್ದರೆ ಸಮವಾಗಿದೆಯೆಂದು ತಿಳಿಯುತ್ತಿದ್ದರು. ಈ ಧಟ ಪರೀಕ್ಷೆಯಲ್ಲಿ ತಕ್ಕಡಿಯನ್ನು ನೋಡಿಕೊಳ್ಳಲು ಅಕ್ಕಸಾಲೆ, ಕಮ್ಮಾರ ಮುಂತಾದವರನ್ನು ಕರಸಬೇಕೆಂದು ಹೇಳಿದೆ. ತೂಕವು ಎಷ್ಟು ನಿಷ್ಕೃಷ್ಟವಾಗಿದ್ದಿರಬಹುದು, ತಕ್ಕಡಿಗಳು ಎಷ್ಟು ಸೂಕ್ಷ್ಮವಾದ ಭಾರ ವ್ಯತ್ಯಾಸವನ್ನು ತೋರಿಸಬಲ್ಲುವಾಗಿದ್ದುವು ಎಂಬುದನ್ನು ತಿಳಿಯುವುದಕ್ಕೆ ಸಾಕಾದಷ್ಟು ಆಧಾರವೇನೂ ಕಂಡುಬಂದಿಲ್ಲ. ಈಜಿಪ್ಟಿನಲ್ಲಿ ಪ್ರತಿಮಾನಗಳು ಬೇರೆ ಬೇರೆಕಡೆ $\frac{1}{36}$, $\frac{1}{60}$, $\frac{1}{67}$ ರಷ್ಟು ವ್ಯತ್ಯಾಸವುಳ್ಳವುಗಳಾಗಿಯೂ, ರೋಮ್‌ನಲ್ಲಿ $\frac{1}{51}$ × (ಕೊನೆ ಕೊನೆಗೆ $\frac{1}{35}$ ರಷ್ಟು)ರಷ್ಟು ಭೇದವುಳ್ಳವುಗಳಾಗಿಯೂ ಇದ್ದುದು ಕಂಡುಬಂದಿದೆ. ನಮ್ಮಲ್ಲಿಯೂ ಸುಮಾರು ಇದೇ ರೀತಿಯ ಭೇದಗಳಿದ್ದಿರಬಹುದು

**ಕಾಲ**:—ಹಿಂದಿನ ಕಾಲದಲ್ಲಿ ಯೂರೋಪಿನ ಜ್ಯೌತಿಷಿಕರು ಕಾಲವನ್ನು "ಸುಮಾರು ಮೂರನೆ ಘಂಟೆಯ ಮಧ್ಯದಲ್ಲಿ", "ಸುಮಾರು ರಾತ್ರಿ 8¼ ಘಂಟೆಯ ಹೊತ್ತಿನಲ್ಲಿ" ಎಂದು ಸೂಚಿಸುತ್ತಿದ್ದರೇ ಹೊರತು, ಇಷ್ಟು ಘಂಟೆ, ಇಷ್ಟು ನಿಮಿಷ ಎಂದು ಹೇಳುತ್ತಿರಲಿಲ್ಲ. ಕ್ಷಿತಿಜದಿಂದ ಮೇಲೆ ಸೂರ್ಯನ ಅಥವಾ ನಕ್ಷತ್ರಗಳ ಉತ್ಸೇಧ (**Altitude**)ವನ್ನು ಅಳೆದು ಕಾಲನಿರ್ಣಯಮಾಡಲು ಮೊದಲಾದುದು ಬಹುಕಾಲದ ಮೇಲೆ. (ಕ್ರಿ. ಶ. 859 ರಲ್ಲಿ ಅಹಮದ್‌ಬಿನ್ ಅಬ್ದುಲ್ಲಾ ಎಂಬಾತನು ಸೂರ್ಯಗ್ರಹಣ ಸಮಯದಲ್ಲಿ ಸೂರ್ಯನ ಉತ್ಸೇಧವೆಷ್ಟೆಂದು ಉಲ್ಲೇಖಿಸಿದ್ದಾನೆ.) ಗಡಿಯಾರಗಳನ್ನು ಮಾಡತೊಡಗಿದುದು ಇನ್ನೂ ಬಹುಕಾಲದ ಮೇಲೆ. ಗ್ರೀಕರು ಕ್ಲೆಪ್ಸೈಡ್ರಾ (**Clepsydra**) ಎಂಬ ಯಂತ್ರವನ್ನುಪಯೋಗಿಸುತ್ತಿದ್ದರು. ಛಾಯಾ ಯಂತ್ರ (**Sundial**) ವೂ ಬಳಕೆಯಲ್ಲಿತ್ತು. ನಮ್ಮಲ್ಲಿಯೂ ಘಟೀಯಂತ್ರ, ಛಾಯಾ ಯಂತ್ರಗಳನ್ನು ಬಳಸುತ್ತಿದ್ದರು.

2 ತ್ರುಟಗಳು= 1 ಲವ; 2 ಲವಗಳು= 1 ನಿಮೇಷ; 5 ನಿಮೇಷಗಳು = 1 ಕಾಷ್ಠಾ; 30 ಕಾಷ್ಠೆಗಳು= 1 ಕಲಾ; 24 ಕಲೆಗಳು= 1 ನಾಡಿಕಾ. 2 ನಾಡಿಕೆಗಳು= 1 ಮುಹೂರ್ತ. 15 ಮುಹೂರ್ತಗಳು= ದಿವಸ ಅಥವಾ ರಾತ್ರಿ. ಚೈತ್ರದಲ್ಲಿಯೂ ಆಶ್ವಯುಜದಲ್ಲಿಯೂ ಹಗಲು ರಾತ್ರಿಗಳು ಸಮವಾಗಿದ್ದು 15 ಮುಹೂರ್ತಗಳುಳ್ಳವಾಗಿರುತ್ತವೆ. ಚೈತ್ರದಿಂದ ಹಿಡಿದು ಆರುತಿಂಗಳಿಗೆ ಹಗಲು 3 ಮುಹೂರ್ತಗಳಷ್ಟು ಹೆಚ್ಚಿಯೂ ರಾತ್ರಿಯು ಅಷ್ಟೇ ಕಡಮೆಯಾಗಿಯೂ ಆಗುವುದೆಂದೂ ಆಶ್ವಯುಜದಿಂದ ಹಿಡಿದು 6 ತಿಂಗಳಿಗೆ ಹಗಲು 3 ಮುಹೂರ್ತಗಳು ಕಡಿಮೆಯಾಗಿ ರಾತ್ರಿಯು ಅಷ್ಟೇ ಹೆಚ್ಚುತ್ತದೆಯೆಂದೂ ಅರ್ಥಶಾಸ್ತ್ರದಲ್ಲಿ ಹೇಳಿದೆ. ಹೀಗೆ ಹಗಲು ಅತ್ಯಂತ ಹೆಚ್ಚಿದಾಗ 18 ಮುಹೂರ್ತಗಳಾಗಬೇಕಾದರೆ ವೀಕ್ಷಕನಿರುವ ಸ್ಥಳದ ಅಕ್ಷಾಂಶವು ಸುಮಾರು 35·24′ ಆಗಿರಬೇಕು. ಕೌಟಿಲ್ಯನು ಪಾಟಲಿಪುತ್ರದಲ್ಲಿದ್ದುದರಿಂದ ಅಲ್ಲಿ ಹಗಲು 18 ಮುಹೂರ್ತಗಳಾಗಲು ಸಾಧ್ಯವಿಲ್ಲ. ಸಂಧ್ಯಾಕಾಲಗಳನ್ನೂ (Twilight) ಸೇರಿಸಿಕೊಂಡರ ಒಟ್ಟು ಹಗಲು 18 ಮುಹೂರ್ತಗಳಾಗಬಹುದು. ಆದರೆ ರಾತ್ರಿಯು 18 ಮುಹೂರ್ತಗಳಾಗಲಾರದು. ಯಾವ ಅನುಭವದ ಆಧಾರದ ಮೇಲೆ ಹಗಲಾಗಲೀ ರಾತ್ರಿಯಾಗಲೀ ಅತ್ಯಂತ ಹೆಚ್ಚಿದಾಗ 18ಮುಹೂರ್ತಗಳಾಗುವುವೆಂದು ಹೇಳಿದೆಯೋ ತಿಳಿಯುಲಿಲ್ಲ. (35° ಅಕ್ಷಾಂಶವು ಆಗಿನ ಗಾಂಧಾರದೇಶಕ್ಕೆ ಸರಿಹೋಗುತ್ತದೆ).

ಮೇಲೆ ಹೇಳಿದ ನಾಡಿಕಾ ಎಂಬುದೇ ಘಟಿಕಾ ಅಥವಾ ಗಳಿಗೆ. 1 ಗಳಿಗೆಗೆ 24 ಮಿನಿಟ್‌ಗಳಾದುದರಿಂದ ಮೇಲಿನ 1 ಕಲೆಯೆಂದರೆ 1 ಮಿನಿಟ್ ಆಯಿತು. 1 ಕಾಷ್ಠೆಯು 2 ಸೆಕೆಂಡ್‌ಗಳಾಯಿತು. ಇದರಿಂದ ಒಂದು ತ್ರುಟವೆಂದರೆ ಸೆಕೆಂಡಿನ ಹತ್ತನೆ ಒಂದು ಭಾಗವಾಯಿತು. ಆದರೆ ಹಿಂದಿನ ಅಳತೆಯಲ್ಲಿ $\frac{1}{10}$ ಸೆಕೆಂಡನ್ನು ನಿಷ್ಕೃಷ್ಟವಾಗಿ ಅಳೆಯಲು ಬರುತ್ತಿತ್ತೆಂದು ಭಾವಿಸಬಾರದು. ಏಕೆಂದರೆ ಈ ಅಳತೆಗೆ ಬೇಕಾದ ಯಂತ್ರಗಳಿಲ್ಲದಿದ್ದುದೇ ಅಲ್ಲದೆ ಅದರ ವಿಷಯದಲ್ಲಿ ಮತಭೇದವೂ ಇದೆ ಮನುಸ್ಮೃತಿ ಮತ್ತು ಅಮರಕೋಷದಲ್ಲಿ 18 ನಿಮೇಷಗಳಿಗೆ 1 ಕಾಷ್ಠೆಯೆಂದೂ, ವಿಷ್ಣುಪುರಾಣದಲ್ಲಿ 15 ನಿಮೇಷಗಳಿಗೆ ಒಂದು ಕಾಷ್ಠೆಯೆಂದೂ ಹೇಳಿ, 30 ಕಾಷ್ಠೆಗಳಿಗೆ 1 ಕಲೆಯೆಂದು ಹೇಳಿದೆ. ಅಮರದಲ್ಲಿ ಹೇಳಿರುವಂತೆ 30 ಕಲೆಗಳಿಗೆ 1 ಕ್ಷಣ 12 ಕ್ಷಣ = 1 ಮುಹೂರ್ತ ಎಂದಾಗುತ್ತದೆ. ಭಾಗವತದಲ್ಲಿ 3 ಲವಗಳಿಗೆ 1ನಿಮೇಷ, 3ನಿಮೇಷ= 1ಕ್ಷಣ, 5ಕ್ಷಣ,= 1ಕಾಷ್ಠಾ, 15ಕಾಷ್ಠಗಳು= 1ಲಘು, 15ಲಘು= 1 ನಾಡಿಕಾ, 2 ನಾಡಿಕೆಗಳು= 1 ಮುಹೂರ್ತ ಎಂದು ಹೇಳಿದೆ. ಜ್ಯೋತಿಶ್ಶಾಸ್ತ್ರದಲ್ಲಿ 10 ಗುರ್ವಕ್ಷರಗಳನ್ನುಚ್ಚರಿಸಲು ಬೇಕಾದ ಕಾಲಕ್ಕೆ 1 ಅಸುವೆಂದೂ, 6 ಅಸುಗಳಿಗೆ ಒಂದು ಪಲವೆಂದೂ, 60 ಪಲಗಳಿಗೆ 1 ಘಟಿಕೆಯೆಂದೂ ಹೇಳಿದೆ. ಅಗ್ನಿಪುರಾಣದ ಮತದಂತೆ ಕಣ್ಣುರೆಪ್ಪೆ ಮುಚ್ಚಲುಬೇಕಾದ ಕಾಲವು 1 ನಿಮೇಷ ಅಥವಾ ನಿಮಿಷವೆಂದೂ, 2ನಿಮೇಷಕ್ಕೆ 1ತ್ರುಟಿಯೆಂದೂ, 2 ತ್ರುತಿಗಳಿಗೆ ಒಂದು ಲವವೆಂದೂ

ಕಂಡುಬರುತ್ತದೆ. ಸಂಗೀತಶಾಸ್ತ್ರದಲ್ಲಿ ಹೇಳಿರುವುದು ಇದಕ್ಕಿಂತ ತೀರ ಭಿನ್ನ ವಾಗಿವೆ. 100 ತಾವರೆದಳಗಳನ್ನು ಒಂದರ ಮೇಲೊಂದನ್ನಿಟ್ಟು ಸೂಜಿಯಿಂದ ಚುಚ್ಚಲುಬೇಕಾದ ಕಾಲಕ್ಕೆ 1 ಕ್ಷಣವೆಂದೂ, 8 ಕ್ಷಣಗಳಿಗೆ 1 ಲವವೆಂದೂ, 8 ಲವ ಗಳಿಗೆ 1 ಕಾಷ್ಠೆಯೆಂದೂ, 8 ಕಾಷ್ಠೆಗಳಿಗೆ 1 ನಿಮೇಷವೆಂದೂ, 8 ನಿಮೇಷಗಳಿಗೆ 1 ಕಲೆಯೆಂದೂ, 2 ಕಲೆಗಳಿಗೆ 1 ಚತುರ್ಭಾಗವೆಂದೂ, 2 ಚತುರ್ಭಾಗಗಳಿಗೆ 1 ಅನು ದ್ರುತವೆಂದೂ, 2 ಅನುದ್ರುತಗಳಿಗೆ ಒಂದು ಬಿಂದುವೆಂದೂ, ಎರಡು ಬಿಂದುಗಳಿಗೆ 1 ಲಘುವೆಂದೂ, 2 ಲಘುಗಳಿಗೆ 1 ಗುರುವೆಂದೂ, 3 ಲಘುಗಳಿಗೆ 1 ಪ್ಲುತವೆಂದೂ, 4 ಲಘುಗಳಿಗೆ ಒಂದು ಕಾಕಪಾದವೆಂದೂ ಹೇಳಿದೆ. ಇದನ್ನೆಲ್ಲಾ ನೋಡಿದರೆ ಊಹೆಯಿಂದ ಬಹು ಕಡಿಮೆ ಕಾಲವು ಹಿಡಿಯುವ ಯಾವುದೋ ಕ್ರಿಯೆಗಳನ್ನು ತೆಗೆದುಕೊಂಡು ಅವು ಗಳಿಗೆ ಊಹೆಯಿಂದಲೇ ಒಂದು ಸಂಬಂಧವನ್ನು ಕಲ್ಪಿಸಿರುವುದೂ ಇಂತಹ ಸಂಬಂಧ ಗಳನ್ನು ನಿಷ್ಕೃಷ್ಟವಾದ ಅಳತೆಯಿಂದ ತಿಳಿಯಲು ಬರುತ್ತಿರಲಿಲ್ಲವೆಂಬುದೂ ಸ್ಪಷ್ಟವಾಗಿ ಕಂಡುಬರುತ್ತವೆ. ಮೇಲೆ ಹೇಳಿದ ಜ್ಯೋತಿಶ್ಶಾಸ್ತ್ರದ ಮತವನ್ನು ಪರಿಶೀಲಿಸಿದರೆ ಒಂದು ಗುರ್ವಕ್ಷರವನ್ನುಚ್ಚರಿಸಲು $\frac{2}{5}$ ಸೆಕೆಂಡು ಬೇಕಾಗುವುದೆಂದು ಕಾಣುವುದರಿಂದ ಒಂದು ಸೆಕೆಂಡಿಗೆ 5 ಲಘ್ವಕ್ಷರಗಳನ್ನುಚ್ಚರಿಸಬಹುದೆಂದು ತೋರಿಬರುತ್ತದೆ ಇಷ್ಟು ಬೇಗನೆ ಅಕ್ಷರಗಳನ್ನು ಉಚ್ಚರಿಸುವುದು ಒಂದನೆಯ ಕಾಲದಲ್ಲಿ ಸಾಧಾರಣವಾಗಿ ಇಲ್ಲವಾದುದ ರಿಂದ ಸಂಗೀತದಲ್ಲಿ ಒಂದು ಲಘುವೆಂದರೆ ಛಂದಶ್ಶಾಸ್ತ್ರದಲ್ಲಿ ಹೇಳಿದಂತೆ ಒಂದು ಮಾತ್ರಾಕಾಲವೆಂದು ತಿಳಿಯಕೂಡದು ಇಂತಹ ಅನಿಶ್ಚಿತಕಾಲವನ್ನು 4096 ಭಾಗ ಗಳಾಗಿ ಮಾಡಿ ಅಂತಹ ಒಂದು ಭಾಗದಲ್ಲಿ 100 ತಾವರೆದಳಗಳನ್ನು ಸೂಜಿಯಿಂದ ಚುಚ್ಚಬಹುವೆಂದು ಹೇಳಿದರೆ ಇಂತಹ ಸೂಕ್ಷ್ಮ ಅಳತೆಯು ಸಾಧ್ಯವೆಂದಾಗಲಿ, ಹಾಗೆ ಸಾಧ್ಯವೆಂದು ಹಿಂದಿನವರು ಊಹಿಸಿದ್ದರೆಂದಾಗಲಿ, ತಿಳಿಯಬಾರದು.

ಕಾಲವನ್ನು ಅಳೆಯಲು ಉಪಯೋಗಿಸುತ್ತಿದ್ದ ಸಾಧನಗಳ ವಿಷಯವಾಗಿ ಕೆಲವು ಸಂಗತಿಗಳನ್ನು ತಿಳಿಸಬಹುದು. ಛಾಯಾಪುರುಷವೆಂದು ಅರ್ಥಶಾಸ್ತ್ರದಲ್ಲಿ ಹೇಳಿರುವ 12 ಅಂಗುಲದ ಕಡ್ಡಿಯನ್ನು ನೆಟ್ಟಗೆ ನಿಲ್ಲಿಸಿ ಅದರ ನೆರಳಿನ ಅಳತೆಯಿಂದ ಕಾಲವನ್ನು ಗೊತ್ತುಮಾಡುತ್ತಿದ್ದರು. ಇದಕ್ಕೇ ಶಂಕುವೆಂದೂ ಹೆಸರಿದೆ. ಶಂಕುವೆಂಬುದು ಭ್ರಮಸಿದ್ಧವಾದ (turned in a lathe) ದಂತದಕಡ್ಡಿ. ('ಸಮತಲಮಸ್ತಕಪರಿಧಿಃ ಭ್ರಮಸಿದ್ಧೋದಂತಿ ದಂತಜಃ ಶಂಕುಃ।' ಸಿದ್ಧಾಂತಶಿರೋಮಣಿ) 12 ಅಂಗುಲದ ಛಾಯಾಪುರುಷದ ನೆರಳು ಅದರ 8 ರಷ್ಟಿದ್ದರೆ ಹಗಲಿನಲ್ಲಿ $\frac{1}{18}$ ಭಾಗ ಕಳೆದಿದೆಯೆಂದಾ ಗಲಿ, ಸಾಯಂಕಾಲಕ್ಕೆ $\frac{1}{18}$ ದಿನ ಭಾಗವು ಉಳಿದಿದೆಯೆಂದಾಗಲಿ ಇಟ್ಟುಕೊಳ್ಳಬೇಕು. 6 ರಷ್ಟಾದರೆ $\frac{1}{14}$ ಭಾಗ, 4 ರಷ್ಟಾದರೆ $\frac{1}{8}$ ಭಾಗ, 2 ರಷ್ಟಾದರೆ $\frac{1}{6}$ ಭಾಗ, 12 ಅಂಗುಲ ವಾದರೆ $\frac{1}{4}$ ಭಾಗ, 8 ಅಂಗುಲವಾದರೆ $\frac{3}{10}$ ಭಾಗ, 4 ಅಂಗುಲವಾದರೆ $\frac{3}{8}$ ಭಾಗ, ನೆರಳು ಇಲ್ಲದಿದ್ದರೆ ಮಧ್ಯಾಹ್ನವೆಂದು ಅರ್ಥಶಾಸ್ತ್ರದ ಮತ. ಮಧ್ಯಾಹ್ನದಲ್ಲಿ ನೆರಳು ಇಲ್ಲದಿರು ವುದು ಆಷಾಢದಲ್ಲಿ ನಡೆಯುವುದೆಂದೂ ಅನಂತರ ತಿಂಗಳಿಗೆ 2 ಅಂಗುಲದಂತೆ ಅರು

ತಿಂಗಳವರೆಗೆ ಹೆಚ್ಚುತ್ತಾ ಹೋಗುತ್ತದೆಯೆಂದೂ ಹೇಳಿದೆ. ಈ ಮಾತು ಯಥಾರ್ಥವಾಗಬೇಕಾದರೆ ಉತ್ತರ ಅಕ್ಷಾಂಶ $22^\circ\frac{1}{2}$ ಇರುವ ಸ್ಥಳದಲ್ಲಿ, ಸೂರ್ಯನ ಕ್ರಾಂತಿಯು (**declination**) $22^\circ\frac{1}{2}$ ಆದಾಗ, ಎಂದರೆ ಜೂನ್ ಮಧ್ಯಭಾಗದಲ್ಲಿ, ಮಧ್ಯಾಹ್ನ ಸೂರ್ಯನು ನೆತ್ತಿಯಮೇಲೆ ಬರುವುದರಿಂದಲೂ, ಅಲ್ಲಿಂದ ಆರು ತಿಂಗಳ ಮೇಲೆ ಪುನಃ ಕ್ರಾಂತಿಯು $-22^\circ\frac{1}{2}$ಆದಾಗ ಮಧ್ಯಾಹ್ನ ಸೂರ್ಯನು ಕ್ಷಿತಿಜದಿಂದ $45^\circ$ ಯಲ್ಲಿರುವುದರಿಂದಲೂ, ಸಾಧ್ಯವಾದೀತು. (ಪಾಟಲಿಪುತ್ರದ ಅಕ್ಷಾಂಶವು ಸುಮಾರು $25^\circ\frac{1}{2}$ ಇದೆ.) ಆದರೆ ಹೀಗೆ ಅಕ್ಷಾಂಶವೂ ಕ್ರಾಂತಿಯೂ $22^\circ\frac{1}{2}$ ಎಂದಿಟ್ಟುಕೊಂಡರೆ ಛಾಯಾಪುರುಷದ ನೆರಳು ಮೇಲೆಕೊಟ್ಟಿರುವ ಲೆಕ್ಕಕ್ಕೆ ಅನುಸಾರವಾಗಿರುವುದಿಲ್ಲ. ಇದನ್ನು ಕೆಳಗಿನ ಕೋಷ್ಟಕದಿಂದ ತಿಳಿಯಬಹುದು.

| ಸೂರ್ಯೋದಯದಿಂದ ಕಳೆದ ದಿನ ಭಾಗ | ಛಾಯಾ ಪುರುಷದ ನೆರಳಿನ ಪ್ರಮಾಣ. ಅರ್ಥಶಾಸ್ತ್ರದಂತೆ | ಛಾಯಾ ಪುರುಷದ ನೆರಳಿನ ಪ್ರಮಾಣ. ಈಗಿನ ಗಣತದಂತೆ | ಸೂರ್ಯೋದಯದಿಂದ ಕಳೆದ ದಿನ ಭಾಗ | ಛಾಯಾ ಪುರುಷದ ನೆರಳಿನ ಪ್ರಮಾಣ. ಅರ್ಥಶಾಸ್ತ್ರದಂತೆ | ಛಾಯಾ ಪುರುಷದ ನೆರಳಿನ ಪ್ರಮಾಣ. ಈಗಿನ ಗಣಿತದಂತೆ |
|---|---|---|---|---|---|
| $\frac{1}{18}$ | 8 ರಷ್ಟು | 3·24 ರಷ್ಟು | $\frac{1}{4}$ | 1 ರಷ್ಟು | 0·88 ರಷ್ಟು |
| $\frac{1}{14}$ | 6 ,, | 2·81 ,, | $\frac{3}{10}$ | $\frac{2}{3}$ ,, | 0·65 ,, |
| $\frac{1}{8}$ | 4 ,, | 1·87 ,, | $\frac{3}{8}$ | $\frac{1}{3}$ ,, | 0·38 ,, |
| $\frac{1}{6}$ | 2 ,, | 1·43 ,, | | | |

ಹೀಗೆ ಈಗಿನ ಗಣಿತಕ್ಕೂ ಅರ್ಥಶಾಸ್ತ್ರದ ಉಕ್ತಿಗೂ ವ್ಯತ್ಯಾಸವು ಕಂಡುಬರುತ್ತದೆ. ಅದಲ್ಲದೆ ಜ್ಯೋತಿಸ್ತತ್ತ್ವವೆಂಬ ಗ್ರಂಥದಂತೆ ಆಷಾಢ ಮೊದಲಾದ ತಿಂಗಳುಗಳಲ್ಲಿ ಮಧ್ಯಾಹ್ನದ ವೇಳೆಯಲ್ಲಿ ಛಾಯಾಪುರುಷದ ನೆರಳು 0, 1, 3, 5, 8, 10, 11 ಅಂಗುಲಗಳೆಂದು ತಿಳಿಯುತ್ತದೆ. (ಶೂನ್ಯೈಕರಾಮ ಬಾಣೇಭ ದಿಶೋರುದ್ರಾಃ ಕ್ರಮೋತ್ಕ್ರಮೈಃ। ಆಷಾಢಾದಿಷು ಮಾಸೇಷು ಛಾಯಾ ಮಾಧ್ಯಾಹ್ನಿಕೀ ಮತಾ ॥). ಅಕ್ಷಾಂಶವು 19° ಇರುವ ಸ್ಥಳದಲ್ಲಿ ಮೇ ತಿಂಗಳು ಸುಮಾರು 25 ನೇ ತಾರೀಖಿನ ವೇಳೆಗೆ ಮಧ್ಯಾಹ್ನ ನೆರಳು ಸೊನ್ನೆಯಾಗಿಯೂ ಡಿಸೆಂಬರ್ 26 ರ ವೇಳೆಗೆ 11 ಅಂಗುಲವುಳ್ಳುದಾಗಿಯೂ ಆಗಬಹುದು. ಹೇಗಿದ್ದರೂ ಅಂಗುಲದ ಭಿನ್ನಾಂಶವನ್ನು ಗಣನೆಗೆ ತೆಗೆದುಕೊಳ್ಳದೆ ಇರುವ ಈ ಪ್ರಾಚೀನ ಲೆಕ್ಕಾಚಾರವು ಸ್ಥೂಲವಾದುದೆಂದು ಮತ್ತೆ ಹೇಳಬೇಕಾಗಿಲ್ಲ. (ಅರ್ಥಶಾಸ್ತ್ರಮತದಂತೆ ಆಷಾಢವು ಜೂನ್ ಮಧ್ಯಕ್ಕೆ ಸಮವಾಗಿಯೂ ಜ್ಯೋತಿಸ್ತತ್ತ್ವ ಮತದಂತೆ ಮೇತಿಂಗಳ ಕೊನೆಗೆ ಸಮನಾಗಿಯೂ ಆಗುವುದು ಈ ಲೆಕ್ಕಗಳ ವಿಷಯದಲ್ಲಿ ಮತ್ತಷ್ಟು ಸಂದೇಹವನ್ನುಂಟುಮಾಡುತ್ತದೆ. ಅಯನ ಚಲನದಿಂದ (**Precession**) ಈ ವ್ಯತ್ಯಾಸವನ್ನು ಅರ್ಥಮಾಡಿಕೊಳ್ಳಲಾಗುವುದಿಲ್ಲ.)

ಕಾಲವನ್ನು ಅಳೆಯಲು ನೆರಳನ್ನು ಹೀಗೆ ಉಪಯೋಗಿಸಿದರೆ ದಿನದ ಭಾಗವು ಗೊತ್ತಾಗುತ್ತದೆಯಾದರೂ ಹಗಲಿನ ಪ್ರಮಾಣವು ಬೇರೆ ಬೇರೆ ತಿಂಗಳಲ್ಲಿ ಬೇರೆ ಬೇರೆ ಯಾಗಿರುವುದರಿಂದ ಒಂದು ಗೊತ್ತಾದ ಕಾಲ ಮಾನವು ಏರ್ಪಡುವುದಿಲ್ಲ. ಹಾಗೆ ನಿರ್ದಿಷ್ಟವಾದ ಕಾಲವನ್ನು ಅಳೆಯಬೇಕಾದರೆ ಯಾವುದಾದರೂ ತೆರದ ಗಡಿಯಾರವು ಬೇಕು. ಇದಕ್ಕೆ ನಮ್ಮಲ್ಲಿ ವಾಲುಕಾ ಯಂತ್ರ, ಘಟೀಯಂತ್ರ ಮುಂತಾದುವು ಗಳನ್ನು ಉಪಯೋಗಿಸುತ್ತಿದ್ದರು. ಮಧ್ಯದಲ್ಲಿ ಸಣ್ಣನಾಳದಿಂದ ಸೇರಿಸಲ್ಪಟ್ಟ ಎರಡು ಬುರುಡೆಗಳಿಂದ ಕೂಡಿದ ಉಪಕರಣವೇ ವಾಲುಕಾಯಂತ್ರ. ಒಂದು ಬುರುಡೆಯೊಳಗೆ ಸಣ್ಣ ಮರಳನ್ನು ತುಂಬಿದ್ದರೆ ಆ ಮರಳು ಸೂಕ್ಷ್ಮನಾಳದ ಮೂಲಕ ಇನ್ನೊಂದು ಬುರುಡೆಯೊಳಕ್ಕೆ ಸುರಿಯುವುದಕ್ಕೆ ಒಂದು ಗೊತ್ತಾದ ಕಾಲವುಬೇಕು ನಾಳದ ಸೂಕ್ಷ್ಮತೆ, ಮರಳಿನ ಪರಿಮಾಣ ಇವುಗಳನ್ನು ವ್ಯತ್ಯಾಸಮಾಡಿದರೆ ಈ ಕಾಲವನ್ನು ನಮಗೆ ಬೇಕಾದಹಾಗೆ ಏರ್ಪಡಿಸಿಕೊಳ್ಳಬಹುದು. [(**Hour-glass**) ಅಥವಾ (**Sand-glass**) ಎಂಬ ಹೆಸರಿನಿಂದ ಈಗಲೂ ಈ ಉಪಕರಣವನ್ನು ಸ್ಥೂಲವಾದ ಅಳತೆಗೆ ಉಪಯೋಗಿಸುವುದುಂಟು.] ಘಟೀಯಂತ್ರವೆಂದರೆ ಅರ್ಧಗೋಳಾಕಾರವಾದ ಲೋಹದ ಪಾತ್ರೆಯ ತಳದಲ್ಲಿ ಸಣ್ಣರಂಧ್ರವನ್ನು ಕೊರೆದು ಆ ಪಾತ್ರೆಯನ್ನು ದೊಡ್ಡದೊಂದು ಪಾತ್ರೆಯೊಳಗಿರುವ ನೀರಿನ ಮೇಲೆ ತೇಲಲು ಬಿಟ್ಟರೆ ನೀರು ರಂಧ್ರದ ಮೂಲಕ ಹೊಕ್ಕು ತೇಲುತ್ತಿರುವ ಪಾತ್ರೆಯು ತುಂಬಿ ಮುಳುಗುವುದರಿಂದ ಕಾಲವನ್ನಳೆಯಲು ಏರ್ಪಡಿಸಿದ ಉಪಕರಣ ಪಾತ್ರೆಯ ಪರಿಮಾಣ, ರಂಧ್ರದ ಸೂಕ್ಷ್ಮತೆ ಇವುಗಳಿಂದ ಈ ಕಾಲವನ್ನು ಬದಲಾಯಿಸಬಹುದು. ಪಾತ್ರೆಯು ಒಂದುಸಲ ತುಂಬಿ ಮುಳುಗುವ ಕಾಲಕ್ಕೆ ಒಂದು ಘಟೀ ಅಥವಾ ಗಳಿಗೆಯೆಂದು ಹೆಸರು. ನಾಲ್ಕು ಮಾಷಕ ತೂಕದ ಚಿನ್ನವನ್ನು ನಾಲ್ಕು ಅಂಗುಲ ಉದ್ದವುಳ್ಳ ಸಲಾಕಿಯಾಗಿ ಮಾಡಿ ಅದರಿಂದ ಒಂದು ಆಢಕದಷ್ಟು ನೀರು ಹಿಡಿಸುವ ಪಾತ್ರೆಯ ತಳದಲ್ಲಿ ರಂಧ್ರವನ್ನು ಮಾಡಿದರೆ ಆ ಪಾತ್ರೆಯು ತುಂಬುವ ಕಾಲವೇ ಒಂದು ನಾಡಿಕಾ ಅಥವಾ ಘಟೀ ("ಸುವರ್ಣ ಮಾಷಕಾಶ್ಚತ್ವಾರಃ ಚತುರಂಗುಲಾಯಾಮಾಃ ಕುಂಭಚ್ಛಿದ್ರಮಾಢಕಮಂಭಸೋವಾನಾಳಿಕಾ" ಎಂದು ಅರ್ಥಶಾಸ್ತ್ರ). ಹತ್ತು ಪಲತೂಕದ ತಾಮ್ರದಿಂದ ಮಾಡಲ್ಪಟ್ಟು ಆರು ಅಂಗುಲ ಆಳವೂ ಅದಕ್ಕೆ ಎರಡರಷ್ಟು ಅಗಲವೂ ಉಳ್ಳ ಅರ್ಧಗೋಳದ ಅಡಿಯಲ್ಲಿ $3\frac{1}{3}$ ಮಾಷ ತೂಕದ ಚಿನ್ನದಿಂದ ಮಾಡಲ್ಪಟ್ಟು ನಾಲ್ಕಂಗುಲ ಉದ್ದವುಳ್ಳ ಸಲಾಕಿಯಿಂದ ರಂಧ್ರವನ್ನು ಕೊರೆದರೆ 60 ಪಲ ನೀರಿನಿಂದ ತುಂಬಲ್ಪಡುವ ಈ ಉಪಕರಣಕ್ಕೆ ಘಟೀ ಎಂದು ಹೆಸರು. (ಶುಲ್ವಸ್ಯದಿಗ್ಭಿರ್ವಿಹಿತಂ ಪಲೈರ್ಯತ್ ಷಡಂಗುಲೋಚ್ಚಂದ್ವಿಗುಣಾಯತಾಸ್ಯಮ್। ತದಂಭಸಾಷಷ್ಟಿ ಪಲೈಃ ಪ್ರಪೂರ್ಯಂ ಪಾತ್ರಂ ಘಟಾರ್ಧ ಪ್ರತಿಮಂಘಟೀಸ್ಯಾತ್॥ ಸತ್ರ್ಯಂಶ ಮಾಷತ್ರಯ ನಿರ್ಮಿತಾಯಾ ಹೇಮ್ನಃ ಶಲಾಕಾ ಚತುರಂಗುಲಾ ಸ್ಯಾತ್। ವಿದ್ಧಂತಯಾ ಪ್ರಾಕ್ತನಮತ್ರಪಾತ್ರಂ ಪ್ರಪೂರ್ಯತೆ ನಾಡಿಕಯಾಂಬುಭಿಸ್ತತ್॥). ಹೀಗೆ ರಂಧ್ರದ ಮೂಲಕ ನೀರು

ತುಂಬುವುದರಿಂದ ಕಾಲವನ್ನು ಅಳೆಯುವುದರಲ್ಲಿ ತೊಂದರೆಗಳುಂಟು. ಪಾತ್ರೆಯು ತುಂಬಿದಕೂಡಲೇ ಅದನ್ನು ಬರಿದುಮಾಡಿ ಮತ್ತೆ ತೇಲಿಬಿಡಲು ಒಬ್ಬ ಸೇವಕನು ಬೇಕು; ಬರಿದುಮಾಡಿ ಮತ್ತೆ ತೇಲಿಸಲು ಸ್ವಲ್ಪ ಕಾಲವು ನಷ್ಟವಾಗುತ್ತದೆ; ರಂಧ್ರದಲ್ಲಿ ಕೊಳೆ ಸೇರಿಕೊಂಡರೆ ಕಾಲವು ಬಹಳ ವ್ಯತ್ಯಾಸವಾಗುತ್ತದೆ, ನೀರು ರಂಧ್ರದ ಮೂಲಕ ಸಮವೇಗದಿಂದ ಪಾತ್ರೆಯೊಳಕ್ಕೆ ಬರುವುದಿಲ್ಲವಾದುದರಿಂದ ಪಾತ್ರೆಯ ಒಂದು ಭಾಗವು ಮಾತ್ರ ತುಂಬಿದ್ದರೆ ಆ ಭಾಗದ ಪರಿಮಾಣದಿಂದ ಗಳಿಗೆಯ ಭಾಗವನ್ನು ತಿಳಿಯಲಾಗುವುದಿಲ್ಲ; ಇತ್ಯಾದಿ. ಇಂತಹ ಯಂತ್ರಕ್ಕೆ ಬದಲಾಗಿ ಸ್ವಯಂವಹವೆಂದು ಹೇಳಲ್ಪಟ್ಟಿರುವ ಮಯೂರಯಂತ್ರ, ವಾನರಯಂತ್ರ ಎಂಬ ಕೆಲವು ಸಾಧನಗಳ ವಿವರಣೆಯು ರಂಗನಾಥಕೃತ ಸೂರ್ಯಸಿದ್ಧಾಂತದ ಟೀಕೆಯಲ್ಲಿ ಕಂಡು ಬರುತ್ತದೆ. ಈ ವರ್ಣನೆಯನ್ನು ನೋಡಿದರೆ ಶಾಶ್ವತಚಲನೆ (Perpetual motion) ಎಂಬ ಶಿರೋನಾಮಯಲ್ಲಿ ಎನ್‌ಸೈಕ್ಲೊಪೀಡಿಯಾ ಬ್ರಿಟಾನಿಕಾ (Encyclopaldia Britannica) ದಲ್ಲಿ ಹೇಳಿರುವ ಸಾಧನಗಳಂತೆಯೇ ಕಂಡುಬರುತ್ತದೆ. ಆದುದರಿಂದ ಈ ಯಂತ್ರಗಳು ನಿಜವಾಗಿ ನಡೆಯುತ್ತಿದ್ದುವೆಂಬುದನ್ನು ನಂಬಲು ಸಾಧ್ಯವೇ ಇಲ್ಲ. ವಿಜ್ಞಾನ ತತ್ವದ ಪ್ರಕಾರ ಇಂತಹ ಶಾಶ್ವತ ಚಲನೆಯು ಅಸಾಧ್ಯವೆಂದು ಖಂಡಿತವಾಗಿ ಸಾಧಿಸಲ್ಪಟ್ಟಿದೆ. ಹೀಗೆ ಉದ್ದ ಮತ್ತು ಭಾರದ ಅಳತೆಗಿಂತಲೂ ಕಾಲದ ಅಳತೆಯು ಸ್ಥೂಲವಾಗಿಯೂ ಅನಿಶ್ಚಿತವಾಗಿಯೂ ಅವಿಶ್ವಾಸಾರ್ಹವಾಗಿಯೂ ಇದ್ದುದು ಸ್ಪಷ್ಟವಾಗಿ ಕಂಡುಬರುತ್ತದೆ. ಆಗಿನ ಕಾಲದಲ್ಲಿ ಇದಕ್ಕಿಂತ ಉತ್ತಮವಾದ ಅಳತೆಯು ಇತರ ದೇಶಗಳಲ್ಲಿಯೂ ಇರಲಿಲ್ಲ. ಅಲ್ಲದೆ ಗೋಲಯಂತ್ರ, ನಾಡೀವಲಯ ಯಂತ್ರ ಎಂಬ ಉಪಕರಣಗಳು (Spherical astrolabe, planispheric astrolabe) ಭಾರತದಿಂದ ಅರಬ್ಬಿಯವರಮೂಲಕ ಯೂರೋಪನ್ನು ತಲಪಿದುವೆಂದು ತಿಳಿದು ಬಂದಿರುವುದರಿಂದ ನಮ್ಮ ಪೂರ್ವಿಕರ ವಿಷಯದಲ್ಲಿ ಗೌರವಭಾವನೆಯನ್ನೇ ಉಂಟುಮಾಡುತ್ತದೆ ಆದರೆ ಈಗಿನ ಸಾಧನಗಳೊಡನೆ ಹೋಲಿಸಿದರೆ ಆ ಕಾಲದ ಅಳತೆಯೂ, ಉಪಕರಣಗಳೂ ಸೂಕ್ಷ್ಮತೆಯಲ್ಲಿ ಬಹಳ ಕಡಿಮೆಯೆಂಬುದು ನಿರ್ವಿವಾದವಾದುದು. ಅಂತಹ ಅಳತೆಗಳಿಂದ ಈಗಿನ ವೈಜ್ಞಾನಿಕ ನಿಯಮಗಳನ್ನು ಕಂಡ.ಹಿಡಿಯುವ ಸಾಧ್ಯತೆಯೂ ಇರಲಿಲ್ಲ. ಆದುದರಿಂದ ಈ ಲೋಕದ ವಿಷಯಗಳಲ್ಲಿ ನಮ್ಮವರಿಗೆ ತಿಳಿದಿದ್ದ ಸಂಗತಿಗಳು ಎಷ್ಟೇ ಇದ್ದರೂ ಈಗಿನ ಜ್ಞಾನಕ್ಕಿಂತ ಕಡಮೆಯೆಂಬುದನ್ನು ಒಪ್ಪಿಕೊಂಡು ಹಿಂದಿನ ಪದ್ಧತಿಗಳನ್ನು ಈಗಿನ ತಿಳಿವಳಿಕೆಗೆ ಅನುಗುಣವಾಗಿ ಮಾರ್ಪಡಿಸಿಕೊಂಡರೆ ನಮ್ಮ ದೇಶದ ಅಭಿವೃದ್ಧಿಗೆ ಸಹಾಯವಾಗುವುದರಲ್ಲಿ ಸಂದೇಹವಿಲ್ಲ.

**ಟಿ. ಎಸ್. ಸುಬ್ಬರಾಯ**

# ನಾರದ ಭಕ್ತಿ ಸೂತ್ರಗಳು

ನಾರದ ಎಂಬ ಹೆಸರು ನಮ್ಮ ಪುರಾಣ ಪುಣ್ಯ ಕಥೆಗಳಲ್ಲಿ ಮೂಡಿ ಜನಸಾಮಾನ್ಯರಿಗೂ ತಿಳಿದುದಾಗಿದೆ. ಸಾಮಾನ್ಯವಾಗಿ 'ನಾರದ' ಎಂಬ ಹೆಸರನ್ನು ಕೇಳಿದೊಡನೆ ಚಾಡಿಕೋರ ಎಂಬ ಅರ್ಥ ಬರುವುದೇ ಹೆಚ್ಚು. ಆದರೆ ನಾರದರನ್ನು ದೇವರ್ಷಿಯೆಂದು ನಮ್ಮ ಪ್ರಾಚೀನ ಗ್ರಂಥಗಳು ಮುಕ್ತಕಂಠದಿಂದ ಸಾರಿವೆ. ಶಬ್ದ ಕಲ್ಪದ್ರುಮದಲ್ಲಿ ನಾರದ ಎಂಬ ಪದಕ್ಕೆ ಪರಮಾತ್ಮವಿಷಯವಾದ ಜ್ಞಾನವನ್ನು ಕೊಡುವವನು ಎಂಬ ಅರ್ಥವಿದೆ.* ನಾರದಸ್ಮೃತಿ, ನಾರದೀಯಶಿಕ್ಷಾ, ಸಂಗೀತಮಕರಂದ, ನಾರದಪರಿವ್ರಾಜಕೋಪನಿಷತ್ ನಾರದೀಯಪುರಾಣ, ನಾರದಪಾಂಚರಾತ್ರ, ನಾರದ ಭಕ್ತಿ ಸೂತ್ರ—ಈ ಗ್ರಂಥಗಳು ನಾರದಕೃತವೆಂಬ ಪ್ರತೀತಿ ಇದೆ. ಇವುಗಳ ಕರ್ತೃತ್ವದ ವಿಷಯವಾಗಿ ಭಿನ್ನಾಭಿಪ್ರಾಯಗಳಿದ್ದರೂ ನಾರದ ಭಕ್ತಿ ಸೂತ್ರಗಳು ದೇವರ್ಷಿ ನಾರದಕೃತವೆಂಬ ವಿಷಯದಲ್ಲಿ ಸಂದೇಹವಿರದು. ಈ ಸೂತ್ರಗಳು ಅನುಭವದಿಂದ ಮೂಡಿದ ರಸಘಟ್ಟಿಗಳಂತಿವೆ. ಭಾಷೆ, ಮನದಲ್ಲಿ ಬೇರೂರಿ ನಿಲ್ಲುವಷ್ಟು ಸರಳವಾಗಿದೆ, ಸುಂದರವಾಗಿದೆ, ಸಂಗ್ರಹವಾಗಿದೆ.

ಭಗವನ್ಮುಖವಾಗುವ ಪ್ರೇಮವನ್ನೇ ಭಕ್ತಿ ಎಂದು ಕರೆಯುವುದು. ಇದು ಭಾವೋದ್ರೇಕವಲ್ಲ, ಸ್ವಾರ್ಥಮೂಲವಾದುದಲ್ಲ, ಕಾಮ ಸಂಬಂಧವಾದುದಲ್ಲ, ವ್ಯಾಪಾರ ಮನೋಭಾವದಿಂದ ಜನಿಸುವುದಲ್ಲ. ಇದು ಪರಮಪ್ರೇಮರೂಪವಾದುದು, ಅಮೃತ ಸ್ವರೂಪವಾದುದು.† ಇಂತಹ ಭಕ್ತಿಯಿಂದ ಸಾಧಕನು ಸಿದ್ಧನಾಗುತ್ತಾನೆ, ತೃಪ್ತನಾಗುತ್ತಾನೆ, ಅಹಂಕಾರ ವಿದೂರನಾಗುತ್ತಾನೆ. ಕ್ಲೇಶವಾಗಲಿ, ದ್ವೇಷವಾಗಲಿ, ಮೋಹವಾಗಲಿ ಅವನ ಬಳಿ ಸುಳಿಯುವುದಿಲ್ಲ. ಎಲ್ಲೆಡೆಯೂ ಭಗವಂತನ ಸ್ವರೂಪವನ್ನೇ ಕಾಣುತ್ತ ತನ್ನಲ್ಲಿಯೇ ಶಾಂತಿಯ ಚಿರನಿಧಿಯನ್ನು ಕಾಣುವ ಶಕ್ತಿ ಅವನದಾಗುತ್ತದೆ.

ಸ್ತ್ರೀಪುರುಷರ ಸಂಬಂಧ ಸ್ವಾರ್ಥಮೂಲವಾದುದು. ದೇವರಿಗೂ ಭಕ್ತನಿಗೂ ಇರುವ ಸಂಬಂಧದಲ್ಲಿ ಸ್ವಾರ್ಥತೆ ಇಲ್ಲ, ಕಾಮವಿಲ್ಲ. ಅಲ್ಲಿ ಗೋಚರಿಸುವುದು ಶುದ್ಧ ಪ್ರೇಮ. ಭಕ್ತನಿಗೆ ದೇವನೊಬ್ಬನೆ ಪರಮ ಪ್ರಿಯನಾದುದರಿಂದ, ಜಗತ್ತಿನ ವಿಷಯ ಸುಖಗಳಲ್ಲಿ ಅವನಿಗೆ ಉದಾಸೀನ ಮನೋಭಾವವಿರುತ್ತದೆ. ಆದರೆ ವೇದಶಾಸ್ತ್ರ, ಪುರಾಣಾದಿ ಪವಿತ್ರಗ್ರಂಥಗಳನ್ನು ಧಿಕ್ಕರಿಸದೆ ಅವುಗಳಲ್ಲಿ ಗೋಚರಿಸುವ ದಿವ್ಯತತ್ತ್ವಗಳನ್ನು ತನ್ನ ಜೀವನದಲ್ಲಿ ಅನುಷ್ಠಾನಕ್ಕೆ ತಂದು ಲೌಕಿಕರಿಗೆ ಮಾರ್ಗದರ್ಶಕನಾಗುತ್ತಾನೆ. ಭಕ್ತಿಯಲ್ಲಿ ಸಿದ್ಧಪಡೆದ ವ್ಯಕ್ತಿಗೆ ಲೋಕನಿಯಮಗಳನ್ನು ಆಚರಿಸುವ ಅವಶ್ಯ

---

* ನಾರಂ ಪರಮಾತ್ಮ ವಿಷಯಕಂ ಜ್ಞಾನಂ ದದಾತಿ ಇತಿ ನಾರದಃ ।

† ಸಾ ತ್ವಸ್ಮಿನ್ ಪರಮಪ್ರೇಮರೂಪಾ । ಅಮೃತಸ್ವರೂಪಾ ಚ ।

ಕತೆ ಇಲ್ಲದಿದ್ದರೂ ತನ್ನ ಸುತ್ತಣ ಜನರು ಪತಿತರಾಗದಿರಲೆಂಬ ಉದಾರದೃಷ್ಟಿಯಿಂದ ನಿಯಮಗಳನ್ನು ಆಚರಿಸುತ್ತಾನೆ. ಭೋಜನಾದಿ ಲೌಕಿಕವ್ಯಾಪಾರಗಳಲ್ಲಿ ಅವನು ತೊಡಗುವುದು ಕೇವಲ ಶರೀರಧಾರಣೆಗಾಗಿ ಮಾತ್ರ.

ಭಕ್ತರ ಸಾಧನಮಾರ್ಗಗಳು ಅವರವರ ಅಭೀಪ್ಸೆಯಂತೆ ಬೇರೆ ಬೇರೆಯಾಗಿರ ಬಹುದು. ಅಂತಹ ಸಾಧನಮಾರ್ಗಗಳ ಅಂತರ್‌ಶಕ್ತಿಯೊಂದಿದೆ. ಅದನ್ನು ನಾರದರು ಹೀಗೆ ಹೇಳಿದ್ದಾರೆ :

ತದರ್ಪಿತಾಖಿಲಾಚಾರತಾ ತದ್ವಿಸ್ಮರಣೇ ಪರಮವ್ಯಾಕುಲತೇತಿ ಚ। ಸಕಲ ಆಚಾರಗಳನ್ನೂ ಅವನಲ್ಲಿ ಅರ್ಪಿಸಿ, ಅವನನ್ನು ಮರೆಯುವುದೆಂದರೆ ಪರಮವ್ಯಾಕುಲತೆ ಯಿಂದಿರುವುದು. ಸಕಲವನ್ನೂ ಭಗವಂತನಲ್ಲಿ ಸಮರ್ಪಿಸಿ, ಅವನಲ್ಲದೆ ಬೇರೆ ಯಾವು ದನ್ನೂ ಬಯಸದಿರುವುದೇ ಭಕ್ತಿ, ಸಾಧನೆಯ ಸಾರಸರ್ವಸ್ವ ಎಂದು ಸಮನ್ವಯ ಮಾಡಿ ಹೇಳಿದ್ದಾರೆ ನಾರದರು. ಶ್ರೀಅರವಿಂದರೂ ತಮ್ಮ ಪೂರ್ಣಯೋಗಪಥದಲ್ಲಿ ಪ್ರಧಾನಸಾಧನವೆಂದು ಹೇಳುವುದು ಈ ಆತ್ಮಸಮರ್ಪಣೆಯನ್ನೇ. ಪರಮಪ್ರೇಮ, ನಿಸ್ವಾರ್ಥತೆ, ನಿರಹಂಕಾರ, ಪೂರ್ಣಸಮರ್ಪಣ—ಇವು ಭಕ್ತನಿಗೆ ಮುಖ್ಯವಾದುವು.

ಎಲ್ಲ ಯೋಗಗಳ ಗುರಿ ಆತ್ಮಸಾಕ್ಷಾತ್ಕಾರ. ಉಳಿದೆಲ್ಲ ಯೋಗಗಳಿಗಿಂತಲೂ ಭಕ್ತಿಯೋಗವೇ ಅತ್ಯಂತ ಸುಲಭವೂ ನೇರವೂ ಆದ ಸಾಧನಪಥವೆಂದು ಮಹಾತ್ಮರು ಸಾರಿದ್ದಾರೆ. ಇದು ಎಲ್ಲ ಯೋಗಗಳ ಫಲರೂಪವಾದುದು. ನಮ್ಮ ಪ್ರಜ್ಞೆ ವಿರಾಟ್ ಪ್ರಜ್ಞೆಯ ಆನಂದದಲ್ಲಿ ಲೀನವಾಗುವುದು ಭಕ್ತಿಯಿಂದಲೇ !

ಭಕ್ತಿಯ ಪರಮಸಿದ್ಧಿಯೇ ಪರಾಭಕ್ತಿ. ನಾರದರು ಈ ಪರಾಭಕ್ತಿಯನ್ನು ಪಡೆಯಲು ಸಾಧಕನಿಗೆ ಕೆಲವು ಉಪಯುಕ್ತ ಸಲಹೆಗಳನ್ನು ಕೊಟ್ಟಿದ್ದಾರೆ. ಸಾಧಕನು ಪ್ರಪ್ರಥಮವಾಗಿ ಇಂದ್ರಿಯ ಚಾಪಲ್ಯಗಳನ್ನು ತ್ಯಜಿಸಿ ನಿಸ್ಸಂಗ ಮನೋಭಾವದಿಂದ ಬದುಕಬೇಕು. ಕೇವಲ ವೈರಾಗ್ಯದಿಂದ ಭಗವಂತನಲ್ಲಿ ಅನುರಾಗ ಮೂಡುವುದಿಲ್ಲ. ಅದಕ್ಕೆ ಶ್ರವಣಕೀರ್ತನಾದಿ ಅಭ್ಯಾಸಗಳೂ ಸತ್ಸಂಗವೂ ಬೇಕು ವಿಷಯಗಳ ಭೋಗ ದಿಂದ ದೊರಕುವುದು ಕ್ಷಣಿಕ ಸುಖ; ಈ ಭೋಗದಿಂದ ರೋಗಭಯವಿದೆ. ಆದರೆ ನಿಸ್ಸಂಗತೆಯಿಂದ ಲಭಿಸುವ ಆನಂದ ಶುದ್ಧವಾದುದು, ಕೇವಲವಾದುದು. ಆದುದ ರಿಂದ ಭಕ್ತನಿಗೆ ವಿಷಯತ್ಯಾಗ ಬಹುಮುಖ್ಯ. ಇಂದ್ರಿಯ ತೃಷ್ಣೆಯನ್ನು ಭೋಗ ದಿಂದ ಶಮನಗೊಳಿಸುವುದು ಸಾಧ್ಯವಿಲ್ಲ. ತೃಷ್ಣೆಗೆ ಆಹಾರವನ್ನು ಒದಗಿಸುವುದರಿಂದ

---

* ಭೋಗೇ ರೋಗಭಯಂ ಕುಲೇ ಚ್ಯುತಿಭಯಂ ವಿತ್ತೇ ನೃಪಾಲಾದ್ಭಯಂ
ಮಾನೇ ದೈನ್ಯಭಯಂ ಬಲೇ ರಿಪುಭಯಂ ರೂಪೇ ಜರಾಯಾ ಭಯಂ।
ಶಾಸ್ತ್ರೇ ವಾದಿಭಯಂ ಗುಣೇ ಖಲಭಯಂ ಕಾಯೇ ಕೃತಾಂತಾದ್ಭಯಂ
ಸರ್ವಂ ವಸ್ತು ಭಯಾನ್ವಿತಂ ಭುವಿ ನೃಣಾಂ ವೈರಾಗ್ಯಮೇವಾಭಯಂ ॥
—ವೈರಾಗ್ಯಶತಕ

† ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ—ಮಹಾಭಾರತ

ಅದು ಉಲ್ಬಣವಾಗುತ್ತದೆ. ಆಗ ನಾವು ಭೋಗಿಸುವುದಕ್ಕೆ ಬದಲಾಗಿ ನಾವೇ ಭೋಗಿಸಲ್ಪಡುತ್ತೇವೆ. ಇಂದ್ರಿಯ ಚಾಪಲ್ಯವನ್ನು ತೃಪ್ತಿಪಡಿಸಹೋಗುವುದು ಬೆಂಕಿಗೆ ತುಪ್ಪ ಹೊಯ್ದಂತೆ! ತೃಷ್ಣೆಯನ್ನು ನೀಗಲು ವೈರಾಗ್ಯವೇ ದಿವ್ಯೌಷಧ. ವಿಷಯತ್ಯಾಗವೆಂದರೆ ಕರ್ಮೇಂದ್ರಿಯಗಳನ್ನು ಮಾತ್ರ ನಿಗ್ರಹಿಸುವುದಲ್ಲ. ಮನಸ್ಸನ್ನು ದೇವರಲ್ಲಿರಿಸುವುದರಿಂದ ಮಾತ್ರ ವಿಷಯಗಳಿಂದ ದೂರವಿರುವುದು ಸಾಧ್ಯ.

ಮನಸ್ಸು ದೇವರಲ್ಲಿ ಲೀನವಾಗಲು ಅಹಂಕಾರ ಲಯವಾಗಬೇಕು. ಅಹಂಕಾರವನ್ನು ತ್ಯಜಿಸಲು ಸತ್ಸಂಗ ಹಾಗೂ ಮಹಾತ್ಮರ ಕೃಪೆ ಅವಶ್ಯಕ. ಮಹಾತ್ಮರ ಸಂಗವು ದುರ್ಲಭವಾದುದಾದರೂ ಅದರಿಂದ ನಮ್ಮ ಜೀವನದ ಕಾಳಿಕೆಗಳು ಕಳೆದು ಹೋಗಿ ಚೇತನವು ಶುದ್ಧವಾಗುತ್ತದೆ. ದುಷ್ಟರ ಸಂಗ ನಮ್ಮನ್ನು ಅಧೋಗತಿಗೆ ತಳ್ಳುತ್ತದೆ. ಆದುದರಿಂದಲೇ ನಾರದರು 'ದುಸ್ಸಂಗಃ ಸರ್ವಥೈವ ತ್ಯಾಜಃ' ಎಂದು ಹೇಳಿರುವುದು. ಏಕೆಂದರೆ ಅದರಿಂದ ಸರ್ವನಾಶವೂ ಆಗುತ್ತದೆ. ಆದರ ಸತ್ಸಂಗದಿಂದ ಮನಸ್ಸು ನಿರ್ಮಲವಾಗಿ ವಿವಿಕ್ತತೆಯನ್ನು ಬಯಸುತ್ತದೆ, ಕರ್ಮಫಲದ ಆಸೆಯು ಮಾಯವಾಗಿ ಭಗವಂತನಲ್ಲಿ ಅವಿಚ್ಛಿನ್ನ ಅನುರಾಗವು ಬೆಳೆಯುತ್ತದೆ. ಈ ಅನುರಾಗ ಕ್ಷಣಕ್ಷಣವೂ ವೃದ್ಧಿಯಾಗಿ ಭಕ್ತನು ಭಗವಂತನಲ್ಲಿ ವಿರಮಿಸುತ್ತಾನೆ.

ಗುಣಾತೀತವಾದ ಪರಾಭಕ್ತಿಯನ್ನು ಪಡೆಯಲು ಸಾಧಕನು ಕಾಡನ್ನೋ ಗುಹೆಯನ್ನೋ ಸೇರಬೇಕೆಂದು ನಾರದರು ಹೇಳುವುದಿಲ್ಲ. ಜಗತ್ತೆಲ್ಲ ಭಗವಂತನ ಸ್ವರೂಪವೆಂದರಿತು ಫಲಾಪೇಕ್ಷೆಯನ್ನು ದೃಷ್ಟಿಯಲ್ಲಿಡದ ಭಕ್ತನು ತನ್ನ ಕರ್ಮದಲ್ಲಿಯೇ ವರ್ತಿಸುತ್ತ ನಿರ್ಭೀತನಾಗಿರಬಹುದು. ಕರ್ಮರಂಗದಿಂದ ಭಕ್ತನು ಮರೆಯಾಗಬೇಕಾದ ಆವಶ್ಯಕತೆಯೂ ಇಲ್ಲ. ಕಬೀರನು ಭಕ್ತನಾದ ಮೇಲೆಯೂ ತನ್ನ ಜೀವನೋಪಾಯಕ್ಕಾಗಿ ನೆಯ್ಗೆಯ ಕೆಲಸ ಮಾಡುತ್ತಿದ್ದುದನ್ನು ನಾವಿಲ್ಲಿ ಜ್ಞಾಪಿಸಿಕೊಳ್ಳಬಹುದು. ಭಕ್ತನು ಸ್ತ್ರೀ, ಧನ ಹಾಗೂ ನಾಸ್ತಿಕರ ಚಾರಿತ್ರ್ಯಗಳನ್ನು ಕೇಳಬಾರದೆಂದು ಎಚ್ಚರಿಕೆ ಹೇಳುತ್ತಾರೆ ನಾರದರು. ಲೋಕದ ದುಷ್ಟಶಕ್ತಿಗಳು ಸತ್‌ಶಕ್ತಿಗಳನ್ನು ಅಧೋಗತಿಗೆ ತಳ್ಳಲು ಸದಾ ಕಾದಿರುತ್ತವೆ. ಆದುದರಿಂದ ಭಕ್ತನು ಸದಾ ಜಾಗ್ರತನಾಗಿರಬೇಕು. ಅಭಿಮಾನ ದಂಭಗಳಂತಹ ದುಷ್ಟಶಕ್ತಿಗಳಿಂದಲೂ ಭಕ್ತನು ದೂರವಾಗಿರಬೇಕು. ಶುದ್ಧಚೇತನನಾದ ಭಕ್ತನು ಭುವನದ ಭಾಗ್ಯ. ಅಂತಹ ಭಕ್ತನ ಮಹಿಮೆಯನ್ನು ಹೀಗೆ ಹಾಡಿದ್ದಾರೆ :

ತೀರ್ಥೀಕುರ್ವಂತಿ ತೀರ್ಥಾನಿ
ಸುಕರ್ಮೀಕುರ್ವಂತಿ ಕರ್ಮಾಣಿ
ಸಚ್ಛಾಸ್ತ್ರೀ ಕುರ್ವಂತಿ ಶಾಸ್ತ್ರಾಣಿ
ಮೋದಂತೇ ಪಿತರೋ
ನೃತ್ಯಂತಿ ದೇವತಾಃ
ಸನಾಥಾ ಚೇಯಂ ಭೂರ್ಭವತಿ ||

' ತೀರ್ಥಗಳನ್ನು ಪವಿತ್ರಗೊಳಿಸುತ್ತಾರೆ. ಕರ್ಮಗಳನ್ನು ಸುಕರ್ಮಗಳನ್ನಾಗಿ ಮಾಡುತ್ತಾರೆ. ಶಾಸ್ತ್ರಗಳನ್ನು ಸತ್‌ಶಾಸ್ತ್ರಗಳನ್ನಾಗಿ ಮಾಡುತ್ತಾರೆ. ಪಿತೃಗಳು ಸಂತಸಗೊಳ್ಳುವರು. ದೇವತೆಗಳು ಆನಂದದಿಂದ ನೃತ್ಯಮಾಡುತ್ತಾರೆ. ಭೂದೇವಿ ಕೃತಕೃತ್ಯಳಾಗುತ್ತಾಳೆ.' ಒಂದು ಜೀವ ಆತ್ಮಸಾಕ್ಷಾತ್ಕಾರ ಪಡೆದರೆ ಸಕಲ ವಿಶ್ವದ ವಿಕಾಸಪಥದಲ್ಲಿ ಮಹಾಪ್ರಗತಿಯನ್ನು ಸಾಧಿಸಿದಂತೆಯೇ ಸರಿ. ಸೂತಸಂಹಿತೆಯಲ್ಲಿಯೂ ' ಕುಲಂ ಪವಿತ್ರಂ ಜನನೀ ಕೃತಾರ್ಥಾ ವಿಶ್ವಂಭರಾ ಪುಣ್ಯವತೀ ಚ ತೇನ । ಅಪಾರ ಸಚ್ಚಿತ್ಸುಖಾಗರೇ ಸದಾ ಮೀಯತೇ ಯಸ್ಯ ಮನಃ ಪ್ರಚಾರಃ ॥' ಎಂದು ಭಕ್ತನ ಮಹಿಮೆಯನ್ನು ಹೇಳಿದೆ. ಅಪಾರವಾದ ಸಚ್ಚಿದಾನಂದಸುಖಸಾಗರದಲ್ಲಿ ಸದಾ ವಿಲೀನನಾದ ಭಕ್ತನಿಂದ ಕುಲವು ಪವಿತ್ರವಾಗುತ್ತದೆ, ಜನನಿ ಕೃತಾರ್ಥಳಾಗುತ್ತಾಳೆ, ಭೂದೇವಿ ಪುಣ್ಯವತಿಯಾಗುತ್ತಾಳೆ. ಇಂತಹ ಜ್ಯೋತಿಪುರುಷರು ಎಲ್ಲಿದ್ದರೂ ಅವರ ಪ್ರಭಾವ ಸಕಲ ಜಗತ್ತನ್ನೂ ಭಗವನ್ಮುಖವಾಗಿ ಅರಳಿಸುತ್ತದೆ, ಶುದ್ಧ ಚೇತನರ ಹೃದಯಗಳನ್ನು ಮಿಡಿಯುತ್ತದೆ.

ಪರಮಭಕ್ತನು ಅಹಿಂಸೆ, ಸತ್ಯ, ಶೌಚ, ದಯೆ, ಆಸ್ತಿಕ್ಯ ಮೊದಲಾದ ಚಾರಿತ್ರ್ಯಗಳನ್ನು ಪರಿಪಾಲಿಸುತ್ತ ಸರ್ವದಾ ಸರ್ವಭಾವಗಳಿಂದಲೂ ಭಗವಂತನನ್ನು ಧ್ಯಾನಿಸುತ್ತ ಫಲಾಪೇಕ್ಷೆ ಇಲ್ಲದ ಕರ್ಮಗಳಲ್ಲಿ ನಿರತನಾಗಿ ನಿಶ್ಚಿಂತನಾಗಿರುತ್ತಾನೆ.

**ಉ. ಕಾ. ಸುಬ್ಬರಾಯಾಚಾರ್.**

# ಬುದ್ಧನ ಧರ್ಮ

ಪ್ರಪಂಚದ ಹಿರಿಯ ಧರ್ಮಗಳಲ್ಲಿ ಬುದ್ಧನ ಧರ್ಮ ಗಣ್ಯವಾದುದು. ಪ್ರಪಂಚದ ಮೂರನೆಯ ಒಂದರಷ್ಟು ಜನ ಬೌದ್ಧರು. ಈ ಧರ್ಮ ದಕ್ಷಿಣದಲ್ಲಿ ಸಿಂಹಳದ್ವೀಪ, ಉತ್ತರದಲ್ಲಿ ಭೂತಾನ್, ಸಿಕ್ಕಿಂ, ತಿಬೆಟ್, ಮಂಗೋಲಿಯ, ಪೂರ್ವದಲ್ಲಿ ಬರ್ಮಾ, ಚೀಣಾ, ಜಪಾನ್, ಕೊರಿಯಾ, ಆಗ್ನೇಯದಲ್ಲಿ ಸಯಾಂ, ಕಾಂಬೋಡಿಯಾ, ಮಲಯಾ ದೇಶಗಳಲ್ಲಿ ಹಬ್ಬಿದೆ. ಭಾರತ ಇದಕ್ಕೆ ತವರಾದರೂ ಈಗ ಅದಕ್ಕೆ ತವರುತಪ್ಪಿದೆ. ಬುದ್ಧನು ವಿಷ್ಣುವಿನ ಅವತಾರವೆಂದು ನಾವು ನಿತ್ಯವೂ ಸಂಕಲ್ಪದಲ್ಲಿ ಹೇಳುತ್ತಿರುವೆವಾದರೂ, ಅವನ ಧರ್ಮದ ತಿಳಿವು ಮಾತ್ರ ನಮಗೆ ಇಲ್ಲವಾಗಿದೆ. ಅಲ್ಪಸ್ವಲ್ಪ ತಿಳಿದವರಲ್ಲೂ ಅದರ ವಿಚಾರವಾಗಿ ತಪ್ಪುಭಾವನೆಗಳೇ ಪ್ರಧಾನವಾಗಿವೆ. ಸಾಮಾನ್ಯವಾಗಿ ನಮ್ಮವರು ಅದನ್ನು ಪ್ರಸ್ತಾಪಿಸುವುದು ಅದನ್ನು ಖಂಡಿಸುವುದಕ್ಕಾಗಿಯೇ. ಅದು ವೈದಿಕ ಮತದಿಂದ ತೀರ ಭಿನ್ನವಾದುದೆಂದೂ, ಅದಕ್ಕೆ ತೀರ ವಿರುದ್ಧವಾದುದೆಂದೂ ನಮ್ಮವರು ತಿಳಿದಿರುತ್ತಾರೆ ಇದರಲ್ಲಿ ಒಳಹೊಕ್ಕು ಸಹನೆಯಿಂದ ಪರಿಶೀಲಿಸಿದರೆ ಇದು ವೈದಿಕ ಧರ್ಮದಲ್ಲಿ ಸಾರವತ್ತಾದುದನ್ನು ಒಳಗೊಂಡಿದೆಯೆಂದೂ ವೈದಿಕಧರ್ಮವೂ ಕೂಡ ಇದರ ಪ್ರಚೋದನೆಗೆ ಒಳಗಾಗಿ ಪರಿಶುದ್ಧವಾಗಿ ಬೆಳೆದಿದೆಯೆಂದೂ ನಾವು ಕಾಣಬಹುದು. ಭಾರತ ಸಂಸ್ಕೃತಿವಿಶ್ವಾಸಿ ಮ್ಯಾಕ್ಸ್ ಮುಲ್ಲರ್ ಹೇಳುವಂತೆ 'ಬೌದ್ಧ ಮತವು ಬ್ರಾಹ್ಮಣ ಧರ್ಮದಲ್ಲಿ ಅತ್ಯುತ್ತಮವಾದುದರ ಜನಪ್ರಿಯವಾದ ನಿರೂಪಣೆ.'[1]

---

1 Max Muller—*Last Essays*, p 121 "Buddhism is the highest Brahminism popularised." J G Jennings—*The Vedantic Buddhism of the Buddha*, pp 573-74. "It should not be forgotten that Buddhism is reformed, Brahminism." "It is now generally believed that primitive Buddhism represents a new expansion not against but within Bramhminism The cannonical literature, no doubt, criticises Brahminism, but mostly on its ritualistic side. The conclusion to be drawn from it is that Buddha's teaching was a protest against the over-elaborate ceremonialism, that is one sense, had given rise to Upanishadic doctrine itself...Early Buddhism...believed in the same comological and eschatological views, including the doctorine of Karma."

M Hiriyanna, *Essentials of Indian Philosophy*, p 73 "In early Vedic period, man was regarded as distinct from the divine, and this view had been gradually transformed by the time of the Upanishads into the view that he was essentially divine. It is this God in-man that Buddha understood as ātmān—neither body nor mind, but spirit."

ಬುದ್ಧನು ತಾನು ಬೋಧಿಸಿದ ಧರ್ಮ ಪುರಾತನ(ಪ್ರೊರಾಣ)ವಾದುದೆಂದೂ ಸನಾತನವಾದುದೆಂದೂ, ತಾನು ವೇದಜ್ಞನೆಂದೂ ವೇದಾಂತಜ್ಞನೆಂದೂ, ತಾನು ಬ್ರಾಹ್ಮಣರ ನಾಲ್ಕು ಆರ್ಯಸತ್ಯಗಳನ್ನು ತಿಳಿದು ಬೋಧಿಸಿರುವುದಾಗಿ ತಿಳಿಸಿದ್ದಾನೆ.[2] ಹೂತು ಹೋಗಿ ಮರೆತಿದ್ದ ಪಟ್ಟಣವನ್ನು ಕಂಡುಹಿಡಿಯುವಂತೆ ಅಜ್ಞಾತವಾದ ಹಿಂದಿನ ಧರ್ಮವನ್ನು ತಾನು ಕಂಡುಹಿಡಿದು ಬೋಧಿಸಿರುವುದಾಗಿ ನಗರಸುತ್ತದಲ್ಲಿ ಹೇಳುತ್ತಾನೆ. ಬುದ್ಧವಚನಗಳಲ್ಲೂ, ಉಪನಿಷತ್ತುಗಳಲ್ಲೂ ಭಾರತ, ಭಗವದ್ಗೀತೆಗಳಲ್ಲೂ ಕಂಡುಬರುವ ಸಂವಾದಿ ಶ್ಲೋಕಗಳು ಸಮಾನಾರ್ಥ ಉಕ್ತಿಗಳೂ ಇವಕ್ಕಿರುವ ಪರಸ್ಪರ ಸಂಬಂಧವನ್ನು ಸ್ಪಷ್ಟಪಡಿಸುತ್ತವೆ ಭಾರತದಲ್ಲಿ ಯಾವುದೊಂದು ಹೊಸಧರ್ಮವು ಕಾಣಿಸಿಕೊಂಡರೂ ಅದರಲ್ಲಿ ಸಾರವತ್ತಾದುದನ್ನು ಹೀರಿಕೊಳ್ಳುವುದು ಹಿಂದೂಧರ್ಮದ ದೊಡ್ಡಗುಣ. ಭಾರತದಲ್ಲಿ ಬೌದ್ಧಧರ್ಮವು ಹುಟ್ಟಿ ಬೆಳೆದ ಒಂದುಸಾವಿರದ ಐನೂರು ವರ್ಷಗಳಲ್ಲಿ ಹಿಂದೂಧರ್ಮವು ಅದನ್ನು ಕಬಳಿಸಿ ಜೀರ್ಣಿಸಿಕೊಂಡು ಸಾರವೃದ್ಧಿ ಪಡೆಯಿತು ಬೌದ್ಧಧರ್ಮವು ಹಿಂದೂಧರ್ಮದಲ್ಲಿ ಅಸಾರವಾದುದನ್ನು ಹೀರಿಕೊಂಡು ಕ್ರಮಕ್ರಮವಾಗಿ ಕ್ಷೀಣಹೊಂದುತ್ತ ಕ್ರಿ.ಶ. ೧೦೦೦ದ ಹೊತ್ತಿಗೆ ಭಾರತದಲ್ಲಿ ನಾಮಾವಶೇಷವಾಯಿತು. ಬೇರೆ ಕಡೆಗಳಲ್ಲಿ ಬಲವಾದ ಪ್ರತಿ ಸ್ಪರ್ಧಿಧರ್ಮಗಳ ಒತ್ತಡವಿಲ್ಲದೆ ವಿಶೇಷವಾಗಿ ಬೆಳೆಯಿತು.[3]

ಬುದ್ಧನು ವೇದಜ್ಞನಾಗಿರಬಹುದು, ವೇದಾಂತಜ್ಞನಾಗಿರಬಹುದು, ಬಹುಶ್ರುತನಾಗಿರಬಹುದು, ಅವನು ಬೋಧಿಸಿದ ಧರ್ಮ ಪುರಾತನವಾಗಿರಬಹುದು ಸನಾತನವಾಗಿರಬಹುದು. ಆದರೆ ಅದಕ್ಕೆ ವೇದವಾಗಲೀ ಯಾವುದೆಂದು ಸಂಪ್ರದಾಯವಾಗಲೀ ಪ್ರಮಾಣವಾಗಿ ತಿಳಿಯಕೂಡದೆಂದು ಅವನು ಒತ್ತಿ ಹೇಳಿದ್ದಾನೆ. "ಇದು ಅನುಶಾಸನ, ಇದು ಪಾರಂಪರ್ಯವಾಗಿ ನಂಬಿ ಬಂದಿರುವುದು, ಇದು ಹಿಂದಿನವರು ಹೇಳಿದ್ದು, ಇದು ಶ್ರುತಿಯಿಂದ ಉದ್ಧರಿಸಿದ್ದು ಎಂದು ಇದನ್ನು ಒಪ್ಪಬೇಡ; ಇದು ಶ್ಲಾಘ್ಯವಾದದ್ದು,

---

2 ಅಂಗುತ್ತರ iv, 185.

3 Christoper Humphreys, *Buddhism*, p. 58 "The popular forms of Hinduism, as the compound of Indian religions based on the Vedas and Upanishads may be called, had been enormously improved by Buddhist moral philosophy, while Buddhism in many respects had been debased by its lazy tolerance of the forms of Hinduism..." "By the year 1000 little was left of Buddhism in India for the invading Muslims to destroy."

4 ಎತ್ತಾ ತುಂಹೆ ಕಾಲಾಮಾ ಮಾ ಅನುಶ್ಯವೇನ ಮಾ ಪರಂಪರಾಯ ಮಾ ಇತಿಕಿರಾಯಾ ವಾ ......ಯದಾ ತುಂಹೆ ಕಾಲಾಮಾ ಅತ್ತನಾ ವಾ ಜಾನೀಯೇ–ಇಮೇ ಧಮ್ಮಾ ಕುಸಲಾ, ಇಮೇ ಧಮ್ಮಾ ಅನವಜ್ಜಾತ್ಥಾ ಇಮೇ ಧಮ್ಮಾ ವಿನ್ನುಪ್ಪಸ್ಥಾ, ಇಮೇ ಧಮ್ಮಾಸಮತ್ತಾ, ಸಮಾದಿನ್ನಾ ಹಿತಾಯ ಸುಖಾಯ ಸಂವತ್ತಂತಿತಿ ಅಥಾ ತುಂಹೆ ಕಾಲಾಮಾ ಉಪಸಂಪಜ್ಜ ವಿಹರೇಯ್ಯಾತ್ಥಾತಿ–ಇತಿ ಯಂ ತಂ ವೃತ್ತಂ ಇದಂ ಏತಂ ಪತಿಚ್ಛವತ್ತುಂ. (ಅಂಗುತ್ತರ iii, 653.)

ಇದು ನಿಷ್ಕಳಂಕವಾದದ್ದು, ಇದನ್ನು ಒಪ್ಪಿಕೊಂಡರೆ ನನಗೆ ಹಿತ, ಸೌಖ್ಯ ದೊರೆಯುತ್ತದೆ ಎಂದು ನೀನೇ ಪೂರ್ಣವಾಗಿ ತಿಳಿದರೆ ಇದನ್ನು ಒಪ್ಪಿಕೊ."[4] "ಬುದ್ಧಿವಂತರು ಬಂಗಾರವನ್ನು ಕಾಯಿಸಿ, ಕತ್ತರಿಸಿ, ಒರೆಯಿಟ್ಟು ಪರೀಕ್ಷಿಸುವಂತೆ ನಾನು ಹೇಳಿದ್ದನ್ನು ಪರೀಕ್ಷಿಸಿ ಒಪ್ಪಬೇಕು ; ನನ್ನಲ್ಲಿ ನಿಮಗಿರುವ ಗೌರವದ ಸಲುವಾಗಿ ಅಲ್ಲ"[5] ಎಂದು ತನ್ನ ಅನುಯಾಯಿಗಳಿಗೆ ಪದೇ ಪದೆ ಸಾರಿ ಹೇಳಿರುತ್ತಾನೆ.

ಬುದ್ಧನು ತಾನು ಉಪದೇಶಿಸಿದ್ದೇ ಸತ್ಯ, ಇತರರು ಹೇಳಿದ್ದು ಮಿಥ್ಯ ಎಂದು ತೆಗಳುವುದಕ್ಕೆ ಹೋಗಲಿಲ್ಲ. ಇತರ ಮತಗಳಲ್ಲಿ ತುಂಬ ಸಹನಶೀಲನಾಗಿದ್ದನು. ತನ್ನ ಅಭಿಪ್ರಾಯ ಬೇರೆಯಾದಾಗ ಅದನ್ನು ಸಮಾಧಾನದಿಂದ ತಿಳಿಸುತ್ತಿದ್ದನು. ಇತರರು ತನ್ನ ಧರ್ಮವನ್ನು ಕಟುವಾಗಿ ಟೀಕಿಸಿದಾಗ ಸಾವಧಾನದಿಂದ ಕೇಳುತ್ತಿದ್ದನು. ಕೆಲವು ಸಂದರ್ಭಗಳಲ್ಲಿ ಬುದ್ಧನ ವಿರೋಧಿಗಳು ಅವನ ಧರ್ಮವನ್ನು ಜರಿದಾಗ ಅವನ ಶಿಷ್ಯರು ಕೋಪಗೊಂಡದ್ದನ್ನು ಕಂಡು, ಅವರು ಹಾಗೆ ವರ್ತಿಸುವುದು ತಮ್ಮ ಸತ್ಯಶ್ರದ್ಧೆಗೆ ತಡೆ, ತಮ್ಮ ಧರ್ಮವೃದ್ಧಿಗೆ ಅಡಚಣೆ ಎಂದು ಅವರನ್ನು ಎಚ್ಚರಗೊಳಿಸಿದ್ದಾನೆ. ತನ್ನನ್ನು ಕುರಿತು ಬಿರುನುಡಿದವರಿಗೆ ನಯವಾಗಿ ಉತ್ತರ ಹೇಳಿದ್ದಾನೆ. ಕೆಲವು ವೇಳೆ ಅಂಥವರನ್ನು ನವುರಾಗಿ ಹಾಸ್ಯಮಾಡಿರುವುದೂ ಉಂಟು. ಒಂದು ದಿನ ಅವನು ಭಿಕ್ಷೆಗಾಗಿ ಹೋದಾಗ ಒಬ್ಬ ಗೃಹಸ್ಥನು ಅವನನ್ನು ತುಂಬ ಬಯ್ದು ಮಾತಾಡಿದನು. ಆಗ ಬುದ್ಧನು ಅವನನ್ನು ಕುರಿತು "ಅಣ್ಣಾ, ಒಬ್ಬ ಗೃಹಸ್ಥನು ಭಿಕ್ಷುಕನ ಮುಂದೆ ಅನ್ನ ಇಟ್ಟಾಗ ಅವನು ಅದನ್ನು ತೆಗೆದುಕೊಳ್ಳದಿದ್ದರೆ ಆ ಅನ್ನ ಯಾರಿಗೆ ಸೇರಬೇಕು" ಎಂದು ಕೇಳಿದನು. ಅದಕ್ಕೆ ಅವನು "ಏಕೆ, ಖಂಡಿತವಾಗಿ ಅದು ಆ ಗೃಹಸ್ಥನಿಗೇ ಸೇರಬೇಕು" ಅಂದನು. ನಿನ್ನ ಬೈಗಳನ್ನು ನಾನು ಸ್ವೀಕರಿಸದಿದ್ದರೆ ಅದು ನಿನಗೇ ಸೇರಬೇಕಲ್ಲವೆ? ಆದರೆ ನಾನು ಒಬ್ಬ ಸ್ನೇಹಿತನನ್ನು ಕಳಕೊಂಡು ಹಿಂತಿರುಗಬೇಕಾದೀತು" ಎಂದು ಬುದ್ಧನು ಮಾತು ಮುಗಿಸಿದನು.[6]

ತಾನು ಬೋಧಿಸಿದುದೆಲ್ಲದರ ಮೇಲೂ ಬುದ್ಧನಿಗೆ ಅಭಿಮಾನವಿರಲಿಲ್ಲ. ತಾನು ಬೋಧಿಸಿದ್ದೆಲ್ಲವೂ ಎಲ್ಲ ಕಾಲಕ್ಕೂ ನಿಲ್ಲಬೇಕಾದುದೆಂದೂ ಅವನು ಎಣಿಸಿರಲಿಲ್ಲ. ತನ್ನ ಧರ್ಮದಲ್ಲೂ ಕೆಲವಾದರೂ ಅಮುಖ್ಯವಾದ ಅಂಶಗಳು ಇದ್ದೇ ಇರಬೇಕು ಎಂದು ಅವನು ತಿಳಿದಿದ್ದನು. ಅವನು ಇಹಲೋಕನ್ನು ಬಿಡುವ ಸಮಯದಲ್ಲಿ ತನ್ನ ನಂತರ ಬೌದ್ಧಸಂಘದವರು ತಾನು ಬೋಧಿಸಿದ್ದರಲ್ಲಿ ಅಮುಖ್ಯವಾದುದನ್ನು ಬೇಡವಾದುದನ್ನು ತೊಡೆದುಹಾಕಬೇಕೆಂದು ತನ್ನ ಶಿಷ್ಯರಿಗೆ ಉಪದೇಶಕೊಟ್ಟು ನಿರ್ವಾಣ ಹೊಂದಿದನು.

---

5 ತಾಪಾಚ್ಛೇದಾಚ್ಚ ನಿಕಷಾತ್ ಸುವರ್ಣಂ ಇವ ಪಂಡಿತಾಃ
ಪರೀಕ್ಷ್ಯ ಭಿಕ್ಷವೋ ಗ್ರಾಹ್ಯಂ ಮದ್ವಾಚೋ ನ ತು ಗೌರವಾತ್.

(ಜ್ಞಾನಸಾರ ಸಮುಚ್ಚಯ, 32)

6 ಮಜ್ಝಿಮ, 75.

ಬುದ್ಧನದು ಮುಚ್ಚುಗೈ ಅಲ್ಲ; ಬಿಚ್ಚುಗೈ.[7] ಅವನು ತನ್ನ ಧರ್ಮವನ್ನು ಬೋಧಿಸಿದ್ದು ಕೆಲವು ಪಂಡಿತರಿಗಾಗಿ ಮಾತ್ರವಲ್ಲ, ಒಂದು ಗುಂಪಿನವರಿಗಾಗಿ ಮಾತ್ರವಲ್ಲ, ಒಂದು ಜಾತಿಯವರಿಗಾಗಿ ಮಾತ್ರವಲ್ಲ; ದುಃಖದಿಂದ ತೊಳಲಿ ಬಳಲುತ್ತಿರುವ ಸರ್ವರಿಗೂ, ಇಡೀ ಮಾನವವರ್ಗಕ್ಕಾಗಿ. ಸಕಲಪ್ರಾಣಿಗಳ ಪಾಪದ ಹೊರೆ ತನ್ನ ಮೇಲೆ ಬೀಳಲಿ, ಸರ್ವರೂ ಮುಕ್ತರಾಗುವವರೆಗೆ ತನಗೆ ನಿರ್ವಾಣಪ್ರಾಪ್ತಿಯಾಗದಿರಲಿ ಎಂದು ಬುದ್ಧನು ಲೋಕದಲ್ಲಿ ತನಗಿರುವ ಅಪಾರವಾದ ಅನುಕಂಪ, ಮತ್ತು ಕರುಣೆಯನ್ನು ವ್ಯಕ್ತಗೊಳಿಸಿರುತ್ತಾನೆ.[8] ಎಲ್ಲರ ಜೀವವೂ ಒಂದೇ ಆದುದರಿಂದ ಯಾವ ಜೀವಿಗೆ ಹಾನಿಯಾದರೂ ಉಳಿದೆಲ್ಲಕ್ಕೂ ಹಾನಿ ; ಯಾವುದೊಂದು ಬಂಧನದಲ್ಲಿದ್ದರೂ ಉಳಿದವಕ್ಕೆ ಬಂಧನ ತಪ್ಪದು ; ಎಲ್ಲರೂ ಮುಕ್ತರಾಗುವವರೆಗೂ ಯಾರೂ ಮುಕ್ತರಲ್ಲ ಎಂದು ಬುದ್ಧನು ಸಾರ್ವಮುಕ್ತಿಯನ್ನೂ ಬೋಧಿಸಿರುತ್ತಾನೆ.

ಎಲ್ಲರಿಗೂ ಮುಕ್ತಿಯುಂಟು. ಆದರೆ ಅದನ್ನು ಪ್ರತಿಯೊಬ್ಬನೂ ತಾನೇ ಕಂಡುಕೊಳ್ಳಬೇಕು, ತಾನೆ ನಿರಂತರವಾಗಿ ವ್ಯಾಯಾಮ ಮಾಡಿ ಪಡೆಯಬೇಕು. ಪ್ರತಿಯೊಬ್ಬನೂ ತನ್ನ ಮನಸ್ಸಿನಲ್ಲೊಳಹೊಕ್ಕು ತನ್ನ ಕಷ್ಟವೇನು, ತನ್ನನ್ನು ಬಾಧಿಸುತ್ತಿರುವುದೇನು, ಅದರ ಕಾರಣವೇನು ಎಂಬುದನ್ನು ತಾನೇ ಭೇದಿಸಿ ಕಂಡು ಹಿಡಿದು ಸ್ವಪ್ರಯತ್ನದಿಂದ ತನ್ನ ಬಾಧೆಯನ್ನು ನಿವಾರಿಸಿಕೊಳ್ಳಬೇಕು. " ನೀವೇ ಸಾಧನಮಾಡಬೇಕು, ತಥಾಗತರು ಮಾರ್ಗದರ್ಶಕರು ಮಾತ್ರ "[9] ಎಂದು ಬುದ್ಧನು ಸಾರಿದ್ದಾನೆ. ದೇವರನ್ನು ಮೊರೆಹೊಗುವುದು ಇತರರ ದಾರಿ, ಆತ್ಮವನ್ನು ಶರಣು ಹೋಗುವುದು ಬೌದ್ಧರ ದಾರಿ. ಅವರು ಆತ್ಮವನ್ನು ದೀಪವಾಗಿ ಉಳ್ಳವರು, ಆತ್ಮ ಶರಣರು, ಧರ್ಮವನ್ನು ದೀಪವಾಗಿ ಉಳ್ಳವರು, ಧರ್ಮ ಶರಣರು. "[10] " ಪಾಪ ಮಾಡುವುದು

---

7 ಮಹಾಪರಿನಿಬ್ಬಾಣಸುತ್ತ, 32.

8 ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯಃ, ಹಿಂದೂದರ್ಶನಸಾರ, ಪುಟ 41
" ಆಕಾಶಸ್ಯ ಸ್ಥಿತಿರ್ಯಾವತ್ ಯಾವದಪ್ಯವನೇಃ ಸ್ಥಿತಿಃ ತಾವನ್ಮಮ ಸ್ಥಿತಿ ಭೂರ್ಯಾತ್ ಲೋಕಪಾಪಾನಿ ನಿಘ್ನತಃ. ಎಂದು ವೇದಾಂತಿಗಳಾದ ಭಾಸ್ಕರಾಚಾರ್ಯರು ಭಾಷ್ಯದಲ್ಲಿ ಬುದ್ಧವಚನವನ್ನು ಅನುವಾದ ಮಾಡಿರುತ್ತಾರೆ.
ಕಲಿಕಲುಷಕೃತಾನಿ ಯಾನಿಲೋಕೇ ಮಯಿ ನಿಪತನ್ತು ವಿಮುಚ್ಯತಾಂ ಹಿ ಲೋಕಃ ಎಂದು ಬುದ್ಧವಾಕ್ಯವನ್ನು ಕುಮಾರಿಲ ಭಟ್ಟಾಚಾರ್ಯರು 'ತಂತ್ರವಾರ್ತಿಕ' ದಲ್ಲಿ ಅನುವಾದಮಾಡಿದಾರೆ.

9 ತುಂಹೇ ಹಿ ಕಿಚ್ಚಂ ಆತಪ್ಪಂ, ಅಖ್ಖಾತಾರೋ ತಥಾಗತಾ.
(ಧಮ್ಮಪದ, 276)

10 ಅತ್ತ ದೀಪ, ಅತ್ತ ಸರಣ, ಅನನ್ನಾ ಸರಣ, ಧರ್ಮದೀಪ, ಧರ್ಮಸರಣ.
(ಮಹಾಪರಿನಿಬ್ಬಾಣಸುತ್ತ, 33)

ತಾನೇ, ಕೆಡುವುದೂ ತನ್ನಿಂದಲೇ; ಪಾಪಮಾಡದಿರುವುದೂ ತಾನೇ, (ಮನಸ್ಸನ್ನು) ಶುದ್ಧಿಗೊಳಿಸಿಕೊಳ್ಳುವನೂ ತಾನೇ; ಶುದ್ಧಿ ಅಶುದ್ಧಿಗಳು ತನ್ನವೇ; ಒಬ್ಬನು ಇನ್ನೊಬ್ಬನನ್ನು ಶುದ್ಧಿಗೊಳಿಸಲಾರನು."[11] "ನಮ್ಮ ಮನಸ್ಸೇ, ನಮ್ಮ ಆಲೋಚನಗಳೇ ನಮ್ಮ ಸುಖದುಃಖಕ್ಕೆ ಕಾರಣ; ನಮ್ಮ ಆಲೋಚನೆಗಳು, ವರ್ತನೆಗಳು ದುಷ್ಟವಾಗಿದ್ದರೆ ನಮ್ಮ ಜೀವನ ದುಃಖಮಯವಾಗುತ್ತದೆ; ನಮ್ಮ ಆಲೋಚನೆಗಳು ವರ್ತನೆಗಳು ನಿರ್ಮಲವಾಗಿದ್ದರೆ ನಮ್ಮ ಜೀವನ ಸುಖಮಯವಾಗುತ್ತದೆ"[12] ಬುದ್ಧನ ಈ ಮಾತುಗಳು "ಮನ ಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ"[13] ಎಂಬ ಉಪನಿಷದ್ವಾಕ್ಯವನ್ನು ನೆನಪಿಗೆ ತರುತ್ತದೆ. ಮನಸ್ಸಿನ ಕೋಪತಾಪಗಳನ್ನು, ಭಯ ಬಂಧನಗಳನ್ನು ಬಿಡಿಸುವ ಮಾರ್ಗ ಮನೋವಿಶ್ಲೇಷಣ (Psycho-analytic method) ಮಾರ್ಗ. ಬುದ್ಧನು ಈ ಮಾರ್ಗದಲ್ಲಿ ಆಧುನಿಕರಿಗಿಂತ ಬಹುದೂರ ಹೋಗಿದ್ದಾನೆ. ಮನೋವಿಶ್ಲೇಷಣ ಮಾರ್ಗವನ್ನು ತಾನು ಬೋಧಿಸಿದ ನಾಲ್ಕು ಆರ್ಯಸತ್ಯಗಳಲ್ಲಿ ಅಡಗಿಸಿದ್ದಾನೆ. ಬುದ್ಧನು ಬೋಧಿಸಿದ್ದೆಲ್ಲ ಈ ನಾಲ್ಕೇ ಸತ್ಯಗಳು.

೧. ನಮ್ಮನ್ನು ಬಾಧಿಸುವ ದೊಡ್ಡ ರೋಗ ದುಃಖ. ನಮ್ಮ ಜೀವನ ದುಃಖದಿಂದ ತುಂಬಿದೆ. ಹುಟ್ಟು ದುಃಖ, ಮುಪ್ಪು ದುಃಖ, ಕಾಯಿಲೆ ದುಃಖ, ಸಾವು ದುಃಖ, ನಮಗೆ ಬೇಡವಾದುದರೊಡನೆ ಬೆರೆಯುವುದು ದುಃಖ; ನಮಗೆ ಬೇಕಾದುದರಿಂದ ಅಗಲುವುದು ದುಃಖ. ದುಃಖ ಎಂಬ ಪದವನ್ನು ಬುದ್ಧನು ತುಂಬ ವಿಶಾಲವಾದ ಅರ್ಥದಲ್ಲಿ ಉಪಯೋಗಿಸಿದ್ದಾನೆ. ಅದರಲ್ಲಿ ದೇಹದ ಮತ್ತು ಮನಸ್ಸಿನ ಬೇನೆಗಳೆಲ್ಲವೂ ಸೇರಿವೆ; ಎಲ್ಲ ವಿಧವಾದ ಕೊರತೆಗಳೂ ಸೇರಿವೆ; ಎಲ್ಲ ಬಗೆಯಾದ ಅತೃಪ್ತಿ ಅದರಲ್ಲಿ ಅಡಕವಾಗಿದೆ. ಯಾವ ಆಶೆಯನ್ನು ಪರೀಕ್ಷಿಸಿದರೂ ಅದು ಹುಟ್ಟುವುದು ಅತೃಪ್ತಿಯಿಂದ, ಅದು ಪೂರೈಸಿದ ಮೇಲೂ ಅತೃಪ್ತಿ ಎಂಬುದು ವೇದ್ಯವಾಗುತ್ತದೆ. ಒಂದು ಆಶೆ ಪೂರ್ಣವಾದುದರ ಮರುಕ್ಷಣವೇ ಬೇರೊಂದು ಆಶೆ ಮೂಡುತ್ತದೆ. ನಮಗಿರುವುದು ಒಂದೇ ಆಶೆ ಅಲ್ಲ; ಆಶೆಗಳು ಬಹುವಾಗಿವೆ. ಆಶೆ ಪೂರೈಸಿದಾಗ ಹುಟ್ಟಿದ

---

11 ಅತ್ತನಾವ ಕತಂ ಪಾಪಂ ಅತ್ತನಾ ಸಂಕಿಲಿಸ್ಸತಿ
ಅತ್ತನಾ ಅಕತಂ ಪಾಪಂ ಅತ್ತನಾ ವವಿಸುಜ್ಝತಿ
ಸುದ್ಧೀ ಅಸುದ್ಧೀಪಚ್ಚತ್ತಂ ನಾಞ್ಞೋ ಅಞ್ಞಂ ವಿಸೋಧಯೇ.
(ಧಮ್ಮಪದ, 165)

12 ಮನಃ ಪ್ರಬ್ಬಂಗಮಾ ಧಮ್ಮಾ ಮನಸ್ಸೆಟ್ಠಾ ಮನೋಮಯಾ
ಮನಸಾಚೇಪದುಟ್ಠೇನ ಭಾಸತಿ ಕರೋತಿ ವಾ.
ತತೋನಂ ದುಕ್ಖಮನ್ವೇತಿ ಚಂಕ್ಕವ ವಹತೋಪದಂ. ಧಮ್ಮಪದ, 1.

13 ಮೈತ್ರಾಯಣೀ ಉಪನಿಷತ್ vi, 34.

ಪ್ರಸಿದ್ಧ ಆಂಗ್ಲ ಸಾಹಿತಿ ಡಾ. ಜಾನ್‌ಸನ್ ಮರಣಶಯ್ಯೆಯಲ್ಲಿ ಮಲಗಿದ್ದಾಗ ತನ್ನ ವೈದ್ಯನನ್ನು ಕುರಿತು ಷೇಕ್ಸ್‌ಪಿಯರಿನ ಈ ಮಾತುಗಳನ್ನು ಹೇಳಿದನು,

ಸುಖ ಕ್ಷಣಿಕ. ಪ್ರತಿಯೊಂದು ಸುಖವೂ ವೇಷಮರೆಯಿಸಿಕೊಂಡ ದುಃಖವೇ; ಪ್ರತಿಯೊಂದು ಸುಖವೂ ತನ್ನ ಗರ್ಭದಲ್ಲಿ ದುಃಖದ ಮೊಟ್ಟೆಯನ್ನು ಇಟ್ಟುಕೊಂಡೇ ಹುಟ್ಟುತ್ತದೆ.

ಎಲ್ಲ ಸಂಸ್ಕಾರಗಳೂ ದುಃಖ ಎಂದು ಹೇಳುವ ಬುದ್ಧನು ನಿರಾಶಾವಾದಿಯಲ್ಲ. ನಿರಾಶಾವಾದಿ ಹೇಳುವುದನ್ನು ಒಪ್ಪಿಕೊಂಡು ಅದರಿಂದ ಆಚೆ ಹೋಗಿದ್ದಾನೆ. ಬುದ್ಧನು ಜೀವನದಲ್ಲಿ ಸೌಖ್ಯ ಕಾಣದೆ ಜೀವನದಲ್ಲಿ ಸೋತವನಲ್ಲ ಎಲ್ಲ ಸುಖಗಳನ್ನೂ ಅನುಭವಿಸಿದವನು. ಅವನು ರೂಪವಂತ, ಗುಣವಂತ, ಯಶೋವಂತ. ಅವನಿಗೆ ಜೀವನ ದುಃಖಮಯವಾಗಿ ತೋರಿದ್ದು ಪ್ರಪಂಚದಲ್ಲಿ ಈ ದುಃಖವನ್ನು ಕಣ್ಣಿಟ್ಟು ನೋಡಿದುದರಿಂದ, ಇತರರ ದುಃಖ ತನ್ನ ದುಃಖವೆಂದು ತಿಳಿಯುವ ಅನುಕಂಪ ತುಂಬಿದ ಹೃದಯವಿದ್ದದರಿಂದ, ಎಲ್ಲರ ಜೀವವೂ ಒಂದೇ ಎಂಬ ಅತಿಶಯವಾದ ಅರಿವಿದ್ದದ್ದರಿಂದ. ಬಲ್ಲವರಿಗೆ ಒಂದೇ ಉದಾಹರಣೆ ಸಾಕು. ದುಃಖ ಇದೆ, ಎಲ್ಲರಿಗೂ ಇದೆ, ಎಲ್ಲ ಅವಸ್ಥೆಗಳಲ್ಲೂ ಇದೆ ಎಂದು ಅವರಿಗೆ ತಿಳಿಯುವುದು. ಸೀತಾರಾಮರು ಎಂಥ ಆದರ್ಶ ವ್ಯಕ್ತಿಗಳು, ಅವರದು ಎಂಥ ಆದರ್ಶ ಜೀವನ! ಆದರೆ ಅವರದು ಎಂಥ ಕರುಣಾಜನಕವಾದ ದುಃಖಜೀವನ! ದೊಡ್ಡ ವ್ಯಕ್ತಿಗಳ ಜೀವನವೇ ಹೀಗಾದಾಗ ಸಣ್ಣವರ ಪಾಡೇನು? ಇರುವ ದುಃಖವನ್ನು ಇಲ್ಲವೆಂದು ಹೇಳುವುದು ಆತ್ಮವಂಚನೆ. ಇಲ್ಲವೆಂದು ನಾವು ಕಣ್ಣುಮುಚ್ಚಿಕೊಂಡರೆ ಅದು ನಮ್ಮನ್ನು ಬಿಡುವುದಿಲ್ಲ. ಬೇಕೆಂಬುದಕ್ಕೂ ಬೇಡವೆಂಬುದಕ್ಕೂ ನಮ್ಮ ಅಂತರಂಗದಲ್ಲಿ ನಿರಂತರವಾಗಿ ಒಳತೋಟಿ ನಡೆಯುತ್ತಲೇ ಇವೆ. ಅದನ್ನು ಒಳಕ್ಕೆ ಅದುಮಿ ಬಿಟ್ಟರೆ ಆಯಿತು, ಅದು ಹೋಯಿತು ಎಂದು ನಾವು ನಮ್ಮನ್ನು ವಂಚಿಸಿಕೊಂಡರೆ ಅದು ನಮ್ಮನ್ನು ಬಿಡುವುದಿಲ್ಲ. ಇದು ಹೇಡಿತನ; ಹೇಡಿಯಾದವನಿಗೆ ಸೋಲುಸಿದ್ಧ. ದುಃಖವನ್ನು ದಿಟ್ಟಿಸಿ ನೋಡಿ ಧೈರ್ಯದಿಂದ ಅದರಿಂದ ವಿಮೋಚನೆಹೊಂದಬೇಕು ವಿಮೋಚನೆಹೊಂದುವುದು ಸಾಧ್ಯ; ಅದನ್ನು ಪ್ರತಿಯೊಬ್ಬನೂ ಧೀರನಾಗಿ ಸ್ವತಃ ಕಂಡುಕೊಳ್ಳಬೇಕು. ಇದು ಮೊದಲನೆಯ ಸತ್ಯ.

೨. ನಮ್ಮ ಜೀವನದಲ್ಲಿ ಪ್ರತಿಯೊಂದಕ್ಕೂ ಕಾರಣವಿದೆ. ಕಾರಣದಿಂದ ಕಾರ್ಯ; ಕಾರಣವನ್ನು ಕೊಂದರೆ ಕಾರ್ಯವಿಲ್ಲ. ದುಃಖಕ್ಕೆ ಕಾರಣವಿದೆ; ಕಾರಣ

---

"Canst thou not minister to a mind diseased
Pluck from the memory a rooted sorrow
Raze out the written troubles of the brain
And with some sweet oblivious antidote
Cleanse the stifled bosom of that perilous stuff
Which weighs upon the heart."

ಅದಕ್ಕೆ ವೈದ್ಯನು

"Therein the patient must minister to himself"

ಎಂದು ಮರುನುಡಿದನು. ಈ ವೈದ್ಯನು ಬುದ್ಧನಂತೆ ನುಡಿದಿದ್ದಾನೆ.

ವನ್ನು ಕಿತ್ತೊಗೆದರೆ ದುಃಖ ನಿವಾರಣೆಯಾಗುತ್ತದೆ. ದುಃಖಕ್ಕೆ ಕಾರಣ ಯಾವುದು? ಕಾಮ, ಆಶೆ, ತೃಷೆ ಕಾರಣ. ಕಾಮವೆಂದರೆ ಕೇವಲ ಲೈಂಗಿಕ ಪ್ರವೃತ್ತಿ ಮಾತ್ರವಲ್ಲ. ಹೆಣ್ಣಿನ ಆಶೆ, ಹುಟ್ಟಿನ ಆಶೆ, ಹಣದ ಆಶೆ–ಇವೆಲ್ಲವೂ ಕಾಮವೇ. "ಮಾನವನು ಆಶೆಗಳಿಂದ ತುಂಬಿರುತ್ತಾನೆ."[14] ಕಾಮ ಬಂಧನವೇ ಈ ಬಂಧನ; ಇಲ್ಲಿ ಬೇರೆ ಬಂಧನವಿಲ್ಲ.[15] ಕಾಮಗಳು ಆರಿಹೋದಾಗ ಮರ್ತ್ಯನು ಅಮೃತತ್ವವನ್ನು ಪಡೆಯುತ್ತಾನೆ; ಇಹದಲ್ಲೇ ಬ್ರಹ್ಮವನ್ನು ಪಡೆಯುತ್ತಾನೆ'[16] ಆಶೆಗಳಿಗೆ ಅವಿದ್ಯೆ ಕಾರಣ. ಅವಿದ್ಯೆಯಿಂದ ಕಾಯವಚನ ಚಿತ್ತ ಸಂಸ್ಕಾರಗಳು, ಸಂಸ್ಕಾರಗಳಿಂದ ವಿಜ್ಞಾನ, ವಿಜ್ಞಾನದಿಂದ ನಾಮ ರೂಪಗಳು, ನಾಮರೂಪಗಳಿಂದ ವಿಷಯೇಂದ್ರಿಯ ಸಂಯೋಗ, ಸಂಯೋಗದಿಂದ ವೇದನೆ, ವೇದನೆಯಿಂದ ತೃಷೆ, ತೃಷೆಯಿಂದ ವಿಷಯಾ ಸಕ್ತಿ, ವಿಷಯಾಸಕ್ತಿಯಿಂದ ಹುಟ್ಟಬೇಕೆಂಬ ಆಶೆ, ಹುಟ್ಟಿನ ಆಶೆಯಿಂದ ಶೋಕ, ದುಃಖ–ಇದು ಹನ್ನೆರಡು ಕೊಂಡಿಗಳಿರುವ ಜೀವನವೆಂಬ ಕಾರ್ಯಕಾರಣ ಸರಪಣಿ. ಇಲ್ಲಿ ಇರುವುದೆಲ್ಲ—ಸೂರ್ಯಚಂದ್ರಾದಿಗಳು, ನಕ್ಷತ್ರಗಳು, ಭೂಮಿ, ಅದರಲ್ಲಿರುವ ಸಕಲ ವಸ್ತುಗಳು, ನಮ್ಮ ರಾಷ್ಟ್ರ, ನಮ್ಮ ಸಮಾಜ, ನಮ್ಮ ಬಂಧುಮಿತ್ರರು, ಹೆಂಡತಿ ಮಕ್ಕಳು, ಈ ದೇಹ, ಈ ರೂಪು, ಮನಸ್ಸು, ಇಂದ್ರಿಯಗಳು, ಇಂದ್ರಿಯ ವ್ಯಾಪಾರಗಳು, ಇಂದ್ರಿಯ ಭೋಗಗಳು–ಎಲ್ಲವೂ ಅಶಾಶ್ವತವಾಮವು. ನಾವು ಯಾವು ವನ್ನು 'ನಾನು' ಎಂದು ಕರೆದುಕೊಳ್ಳುತ್ತೇವೆಯೋ ಅದು ಅಸ್ವತಂತ್ರ, ಅದು ಅನಿತ್ಯ; ಅಮೃತವಾದದ್ದಲ್ಲ, ನಿತ್ಯವಾದ ಆತ್ಮ ಬದಲಿ ಹೊಂದುವ 'ನಾನು' ಎಂಬುದರಿಂದ ಬೇರೆಯದು, ಅದು ಆತ್ಮವಲ್ಲ. ಅಶಾಶ್ವತವಾದುದನ್ನು ಶಾಶ್ವತವೆಂದೂ, ಅನಾತ್ಮವಾದು ದನ್ನು ಆತ್ಮವೆಂದೂ ತಿಳಿಯುವ ಆತ್ಮವಂಚನೆ ಅವಿದ್ಯೆ. ಇದು ಎರಡನೆಯ ಸತ್ಯ.

೩. ಅವಿದ್ಯೆಯನ್ನು ಪ್ರಜ್ಞೆಯಿಂದ ಅಂದರೆ ಯಾವುದು ಮೃತಹೊಂದತಕ್ಕದ್ದು ಯಾವುದು ಅಮೃತವಾದುದು, ಯಾವುದು ಅನಿತ್ಯವಾದುದು. ಯಾವುದು ನಿತ್ಯ ವಾದುದು ಎಂಬ ನಿತ್ಯಾನಿತ್ಯ ವಿವೇಕದಿಂದ ನಾಶಗೊಳಿಸಬೇಕು, ತೃಷೆಯನ್ನು ಶೀಲ ದಿಂದ ನಾಶಗೊಳಿಸಬೇಕು. ಮಾನವನ ಬಿಡುಗಡೆಗೆ ಜ್ಞಾನವೆಷ್ಟು ಮುಖ್ಯವೋ ಶೀಲವೂ ಅಷ್ಟೇ ಮುಖ್ಯ. ಇದು ಮೂರನೆಯ ಸತ್ಯ.

೪. ಶೀಲಜ್ಞಾನಗಳೆರಡನ್ನೂ ಒಳಗೊಂಡ ಮಾರ್ಗ ಆರ್ಯ ಅಷ್ಟಾಂಗಮಾರ್ಗ.[17] ಇದರಲ್ಲಿ ಕರ್ಮಮಾರ್ಗಜ್ಞಾನಮಾರ್ಗಗಳೆರಡೂ ಸೇರಿವೆ. ಸಮ್ಯಗ್ದೃಷ್ಟಿ ಸಮ್ಯ

---

14 ಬೃಹದಾರಣ್ಯಕ ಉಪನಿಷತ್ iv, 4.

15 ಕಾಮ ಬಂಧನಂ ಏವೇದಂ ನಾನ್ಯದ್ ಅಸ್ತೀಹ ಬಂಧನಂ.

16 ಕಠೋಪನಿಷತ್, iv, 10.

17 ಅಷ್ಟಾಂಗಮಾರ್ಗವನ್ನು ಮಹಾಭಾರತದಲ್ಲಿ ಹೀಗೆ ವಿವರಿಸಿರುತ್ತದೆ.
ಅಷ್ಟಾಂಗಾನೇವಮಾರ್ಗೇಣ ವಿಶುದ್ಧಾತ್ಮಾಸಮಾಚರೇತ್।

ಸಂಕಲ್ಪ, ಸಮ್ಯಗ್ವಾಚಾ, ಸಮ್ಯಕ್ಕರ್ಮಾಂತ, ಸಮ್ಯಗಾಜೀವ, ಸಮ್ಯಗ್ವ್ಯಾಯಾಮ, ಸಮ್ಯಕ್ಸ್ಮೃತಿ, ಸಮ್ಯಕ್ಸಮಾಧಿ–ಇವು ಮಾರ್ಗದ ಎಂಟು ಅಂಗಗಳು.

೧. ಸಮ್ಯಗ್ದೃಷ್ಟಿ ಎಂದರೆ ಸರಿಯಾದ ತಿಳುವಳಿಕೆ; ಇಲ್ಲಿ ಇರುವುದೆಲ್ಲ ಅನಿತ್ಯ, ಅನಾತ್ಮ, ದುಃಖಮಯ ಎಂಬ ತಿಳುವಳಿಕೆ. ಈ ಸಂಸಾರದಲ್ಲಿ ಪ್ರತಿಯೊಂದೂ ಹುಟ್ಟುತ್ತದೆ, ಬದಲಾವಣೆ ಹೊಂದುತ್ತದೆ, ಲಯ ಹೊಂದುತ್ತದೆ. ಯಾವುದು ಹುಟ್ಟುತ್ತದೆಯೋ ಅದು ನಾಶ ಹೊಂದಲೇಬೇಕು.[18] ಯಾವುದು ಬದಲಾವಣೆ ಹೊಂದುತ್ತದೆಯೋ ಅದು ಶಾಶ್ವತವಲ್ಲ. ಬೇರೊಂದರ ಬೆನ್ನಿನ ಮೇಲೆ ನಿಲ್ಲದುದು (ಕಾರಣವಿಲ್ಲದ್ದು) ಯಾವ ಕಾಲದಲ್ಲೂ ಎಲ್ಲೂ ಇಲ್ಲ, ಯಾವುದೂ ಶಾಶ್ವತವಲ್ಲ.[19] ಹುಟ್ಟುವು

---

ಸಮ್ಯಕ್ಸಂಕಲ್ಪ ಸಂಬಂಧಾತ್ ಸಮ್ಯಕ್ಚೇಂದ್ರಿಯ ನಿಗ್ರಹಾತ್
ಸಮ್ಯಗ್ವ್ರತ ವಿಶೇಷಾಚ್ಚ ಸಮ್ಯಕ್ಚಗುರುಸೇವನಾತ್
ಸಮ್ಯಗಾಹಾರ ಯೋಗಾಚ್ಚ ಸಮ್ಯಕ್ಚಾಧ್ಯಯನಾಗಮಾತ್
ಸಮ್ಯಕ್ಕರ್ಮೋಪ ಸಂನ್ಯಾಸಾತ್ ಸಮ್ಯಕ್ಚಿತ್ತನಿರೋಧನಾತ್
ಏವಂ ಕರ್ಮಾಣಿಕುರ್ವನ್ತಿ ಸಂಸಾರವಿಜಿಗೀಷವಃ. (ವನ. ೩–೭೭–೮೦).

18 ಅಂಗುತ್ತರನಿಕಾಯ iii. 47.

ಯಂ ಕಿಂಚಿ ಸಮುದಾಯ ಧಮ್ಮಂ, ಸಬ್ಬಂ ತಂ ನಿರೋಧಧರ್ಮಂ
ವಿಕೃತಿರ್ಜಾಯತೆ ಯಸ್ಯಶಾಶ್ವತಂ ತನ್ನಹಿ.

M. Hiriyanna, *Outlines of Indian Philosophy*, p 146 "We should therefore be careful how we understand the Buddhistic doctrine of the denial of the soul. As a stable entity, without itself changing, appears among changing conditions—bodily and mental—Buddhism does deny the self, but it recognises instead a fluid self because of its very fluidity cannot be regarded as a series of altogether distinct or dissimilar states ...The Buddhist has tacitly admitted a self transcending the experience of the moment In the very act of analysing the self and dismissing it as but a series of momentary states, he is passing beyond those states and positing an enduring self which is able to view them together" Ibid p 147-8

Ignorance (*avidya*) becomes the true source of all evil Here also then, as in Upanishadic teaching, evil is reduced to ignorance, and in both, the way of escape lies through right knowledge".........While the good remains the same, the idea for which it stands is different Avidya is not conceived here as a cosmic power explaining how the Nisprapancha Brahma shows itself as the empirical world, but merly as the ground of individual existance......Nor is it here, as in the Upanishad, ignorence of the essential of all existence, but the failure to recognise the hollowness of the so called self"

19 ಚತುಶ್ಯತಕ, ix, 34.

ಅಪ್ರತೀತ್ಯಸ್ಥಿತಾನಾಸ್ತಿ ಕಾದಾಚಿತ್ ಕಸ್ಯಚಿತ್ ಕ್ವಚಿತ್
ನಕದಾಚಿತ್ ಕಸ್ಯಚಿತ್ಕ್ವಚಿತ್ ವಿಧ್ಯತೇ ತೇನಶಾಶ್ವತಃ

ಬದಲಾವಣೆ ಹೊಂದುವುವು ಮಾಯರೂಪವಾದುವು, ಸ್ವಪ್ನರೂಪವಾದುವು, ಗಂಧರ್ವ ನಗರದಂಥವು.[20] ಈ ಶರೀರ ನೊರೆಯಂಥಾದ್ದು, ಬಿಸಿಲು ಕುದುರೆಯಂಥಾದ್ದು ಎಂದು ತಿಳಿದು ಮಾರನ ಹೂಬಾಣಗಳನ್ನು ಮುರಿದವನು ಮೃತ್ಯುರಾಜನು ಕಾಣದ ಕಡೆಗೆ ಹೋಗುತ್ತಾನೆ, ಅಮೃತಪದವನ್ನು ಹೊಂದುತ್ತಾನೆ.[21] ಸರ್ವ ಸಂಸ್ಕಾರಗಳೂ ಅನಿತ್ಯ, ಸರ್ವಸಂಸ್ಕಾರಗಳೂ ಅನಾತ್ಮಗಳು, ಸರ್ವಸಂಸ್ಕಾರಗಳೂ ದುಃಖಮಯ ಎಂಬ ಪ್ರಜ್ಞೆ ಯಾವಾಗ ಮೂಡುವುದೋ ಆಗ ದುಃಖದಿಂದ ಬಿಡುಗಡೆಯುಂಟಾಗುವುದು. ವಿಶುದ್ಧಿಗೆ ಇದೇ ಮಾರ್ಗ.[22]

೨. ಸಮ್ಯಕ್ಸಂಕಲ್ಪ. ಎಲ್ಲದರಲ್ಲೂ ಸಹಾನುಭೂತಿ ತೋರಿಸಬೇಕು, ಎಲ್ಲದರಲ್ಲೂ ಕನಿಕರ ವಿಡಬೇಕು, ಎಲ್ಲದರಲ್ಲೂ ಪ್ರೀತಿ ತೋರಿಸಬೇಕು ಎಂಬ ಪ್ರತಿಜ್ಞೆ ಸಮ್ಯಕ್ಸಂಕಲ್ಪ. ಸಿಟ್ಟನ್ನು ಬಿಡಬೇಕು, ಅಭಿಮಾನವನ್ನು ಬಿಡಬೇಕು, ಇಲ್ಲಿ ನನ್ನದೇನೂ ಇಲ್ಲ ಎಂದು ನಿರ್ಧರಿಸಿಕೊಳ್ಳಬೇಕು. ಕ್ರೋಧವನ್ನು ತಾಳ್ಮೆಯಿಂದ, ಕೆಟ್ಟದ್ದನ್ನು ಒಳ್ಳೆಯದರಿಂದ, ಜಿಪುಣತನವನ್ನು ದಾನದಿಂದ ಸುಳ್ಳನ್ನು ಸತ್ಯದಿಂದ ಗೆಲ್ಲಬೇಕೆಂದು ಸಂಕಲ್ಪಮಾಡಬೇಕು.[23] ಸಾರವನ್ನು 'ಸಾರವೆಂದೂ ಅಸಾರವನ್ನು ಅಸಾರವೆಂದೂ ತಿಳಿದ ಸಮ್ಯಕ್ಸಂಕಲ್ಪ ಗೋಚರರು ಸಾರದತ್ತ ಸಾರುವರು.[24]

---

20 ಮಾಧ್ಯಮಿಕಕಾರಿಕಾ, vii, 34.
ಯಥಾಮಾಯಾ ಯಥಾಸ್ವಪ್ನೋ ಗಂಧರ್ವನಗರಂ ಯಥಾ
ತಥೋತ್ಪಾದಾಃ ತಥಾಸ್ಥಾನಂ ತಥಾ ಬಂಗಾ ಉದಾಹೃತಃ.

21 ಧಮ್ಮಪದ, 46.
ಫೇನೂಪಮಂ ಕಾಯಮಿಮಂ ವಿದಿತ್ವಾ
ಮರೀಚಿ ಧಮ್ಮಂ ಅಭಿಸಂಬುಧಾನೋ
ಛೇತ್ವಾನಮಾರಸ್ಸ ಪಪುಪ್ಫಕಾನಿ
ಅದಸ್ಸನಂ ಮುಚ್ಚುರಾಜಸ್ಸಗಚ್ಛೇ.
ಇದನ್ನು ಮಹಾಭಾರತದ ಮೋಕ್ಷಧರ್ಮದ 301-2 ರೊಡನೆ ಹೋಲಿಸಿ.

22 ಧಮ್ಮಪದ 279.
ಸಬ್ಬೇಧಮ್ಮಾ ಅನತ್ತಾತಿ ಯದಾಪನ್ನಾಯಪಸ್ಸತಿ
ಅಥಾ ನಿಬ್ಬಂದತೀ ದುಃಖೇ ಏಸಾಮಾಗ್ಗೋ ವಿಸುದ್ಧಿಯಾ.

23 ಧಮ್ಮಪದ, 223.
ಅಕ್ಕೋಧೇನ ಜಿನೆ ಕೋಧಂ ಅಸಾಧುಂ ಸಾಧುನಾಜಿನೆ
ಜಿನೆ ಕದರಿಯಂ ದಾನೇನ ಸಚ್ಚೇನಾಲಿಕವಾದಿನಂ.
ಉದ್ಯೋಗಪರ್ವದ 38-73ನೇ ಶ್ಲೋಕಕ್ಕೆ ಹೋಲಿಸಿನೋಡಿ.

24 ಧಮ್ಮಪದ, 11-12.
ಅಸಾರೇ ಸಾರಮತಿನೋ ಸಾರೇಚಾಸಾರದಸ್ಸಿನೋ
ತೇ ಸಾರಂ ನಾಧಿಗಚ್ಛಂತಿ ಮಿಚ್ಛಾಸಂಕಪ್ಪಗೋಚರಾ
ಸಾರಂಚ ಸಾರಂಞ್ಞತ್ವಾ ಅಸಾರಂ ಚ ಅಸಾರತೋ
ತೇ ಸಾರಂ ಅಧಿ ಗಚ್ಛಂತಿ ಸಮ್ಮಾಸಂಕಪ್ಪಗೋಚರಾ.

೩. ಸಮ್ಯಗ್ವಾಚಾ. ಸುಳ್ಳು, ಕಪಟ, ಬಿರಿನುಡಿ—ಇವನ್ನು ಬಿಟ್ಟು ಸತ್ಯವಾದುದನ್ನು ಸಾಧುವಾದುದನ್ನು ಆಡುವುದು ಸಮ್ಯಗ್ವಾಚಾ. 'ಬಿರಿನುಡಿಯಿಂದ ಯಾರನ್ನೂ ನೋಯಿಸದಿರು, ನೀನು ನುಡಿದದ್ದನ್ನು ನಿನ್ನ ಮೋರೆಯ ಮೇಲೆ ಒಗೆದಾರು.' ಮಾತು ಮರುಕಳಿಸದಂತೆ ಕಾಪಾಡಿಕೊಳ್ಳಬೇಕು. ಮಾತನ್ನು ಮಿತಿಯಲ್ಲಿಟ್ಟುಕೊಳ್ಳಬೇಕು. ಮಾತಿನ ಪಾಪವನ್ನು ಮಾಡದೆ ಮಾತಿನಿಂದ ಸುಚಾರಿತ್ರ್ಯವನ್ನು ಸಂಪಾದಿಸಿಕೊಳ್ಳಬೇಕು. 'ಯಾವನು ಕರ್ಕಶವಲ್ಲದ ಬಿನ್ನಹದ ರೂಪವಾಗಿ ಸತ್ಯವನ್ನು ನುಡಿಯುತ್ತಾನೋ, ಯಾವನ ಮಾತಿನಿಂದ ಯಾರಿಗೂ ಅಪಚಾರವಾಗುವುದಿಲ್ಲವೋ ಅಂಥವನನ್ನು ಬ್ರಾಹ್ಮಣ ನೆನ್ನುವೆನು. ಹೀಗೆ ಒಳ್ಳೆಯ ಮಾತಿನ ಶೀಲವನ್ನು ಕುರಿತು ಧಮ್ಮಪದದುದ್ದಕ್ಕೂ ವಚನಗಳಿವೆ.[25]

೪. ಸಮ್ಯಕ್ಕರ್ಮಾಂತ. ಇತರರನ್ನು ನೋಯಿಸದೆ, ಇತರರದಕ್ಕೆ ಆಶೆಪಡದೆ ಪರೋಪಕಾರಿಯಾಗಿ ಬಾಳುವುದು ಸಮ್ಯಕ್ಕರ್ಮಾಂತ. ಎಲ್ಲರೂ ದಂಡಕ್ಕೆ ಹೆದರುತ್ತಾರೆ, ಸಾವಿಗೆ ಅಂಜುತ್ತಾರೆ, ತನ್ನಂತೆ ಹೆರರಂದರಿತು ಕೊಲ್ಲಬಾರದು ಕೊಲ್ಲಿಸಬಾರದು.[26] ಸುಖವನ್ನು ಬಯಸುವ ಪ್ರಾಣಿಯನ್ನು ಯಾವನು ತನ್ನ ಸುಖಕ್ಕಾಗಿ ಹಿಂಸಿಸುತ್ತಾನೋ ಅವನಿಗೆ ಸತ್ತಮೇಲೆ ಸುಖವಿಲ್ಲ.[27] ಯಾವನಲ್ಲಿ ಸತ್ಯ, ಧರ್ಮ, ಅಹಿಂಸೆ, ದಮ, ಸಂಯಮ ಉಂಟೋ, ಯಾವನು ಕಶ್ಮಲರಹಿತನೋ, ಆ ಧೀರನನ್ನು ಸ್ಥವಿರ ನೆನ್ನುವರು.[28]

೫. ಸಮ್ಯಗಾಜೀವ. ವಿಷ, ಹೆಂಡ ಮತ್ತು ಶಾಸ್ತ್ರಾಸ್ತ್ರಗಳನ್ನು ಮಾರದಿರುವುದು, ಮನುಷ್ಯರನ್ನು ಗುಲಾಮರಾಗಿ ಮಾರದಿರುವುದು, ಕಟುಕವೃತ್ತಿಯಿಂದ ದೈವಿಕ ವೃತ್ತಿಯಿಂದ ಜೀವನ ನಡೆಸದಿರುವುದು, ಇತರರಿಗೆ ತೊಂದರೆ ಕೊಡುವಂಥಾ ಜೀವನ ವೃತ್ತಿಯನ್ನು ಅವಲಂಭಿಸದಿರುವುದು ಸದ್ವೃತ್ತಿಯಿಂದ ಜೀವನ ನಡೆಸುವುದು ಸಮ್ಯಗಾಜೀವ.

೬. ಸಮ್ಯಗ್ವ್ಯಾಯಾಮ. ನಮ್ಮಲ್ಲಿರುವ ಕೆಟ್ಟದ್ದನ್ನು ತೊಡೆದುಹಾಕುವುದು, ಹೊಸದಾಗಿ ಕೆಟ್ಟದ್ದು ಬಂದು ಸೇರಲವಕಾಶಕೊಡದಿರುವುದು, ನಮ್ಮಲ್ಲಿರುವ ಸದ್ಗುಣಗಳನ್ನು ಕಾಪಾಡಿಕೊಂಡು ಮತ್ತಷ್ಟು ಸದ್ಗುಣಗಳನ್ನು ಸಂಪಾದಿಸುವುದು ಸಮ್ಯಗ್ವ್ಯಾಯಾಮ. ಪಾಪಿಯು ತಾನು ಮಾಡಿದ ಪಾಪ ಪಕ್ವವಾಗುವವರೆಗೆ ಅದನ್ನು ಒಳ್ಳೆಯದೆಂದೇ ತಿಳಿದಿರುತ್ತಾನೆ. 'ಇದೇನು ನನ್ನ ಬಳಿಗೆ ಬರುವುದಿಲ್ಲ' ಎಂದು ಪಾಪವನ್ನು

---

[25] ಧಮ್ಮಪದ, 183, 232, 408.

[26] ದಮ್ಮಪದ, 129. ಸಬ್ಬೇ ತಸಂತಿ ದಂಡಸ್ಸ ಸಬ್ಬೇ ಭಾಯಂತಿ ಮುಚ್ಚುನೋ
ಅತ್ತಾನಂ ಉಪಮಾಂ ಕತ್ವಾ ನ ಹನೇಯ್ಯ ನಘಾತಯೇ

ಇದನ್ನು ಭಗವದ್ಗೀತೆಯ vi, 32ನೆಯ, ಅನುಶಾಸನ ಪರ್ವದ 113, 6,8, 115, 22ನೆಯ ಶ್ಲೋಕಗಳಿಗೆ ಹೋಲಿಸಿ.

[27] ಧಮ್ಮಪದ, 131. ಇದನ್ನು ಮನು v 45ಕ್ಕೆ ಹೋಲಿಸಿ.

[28] ಧಮ್ಮದಪ, 232.

ಆಸಡ್ಡೆ ಮಾಡಬಾರದು. ಒಂದೊಂದು ತೊಟ್ಟಿನಂತೆ ಹನಿಗೂಡುತ್ತಿದ್ದರೆ ದೊಡ್ಡ ಕೊಡವೂ ತುಂಬುತ್ತದೆ. ಹಾಗೆಯೇ ಸ್ವಲ್ಪಸ್ವಲ್ಪವಾಗಿ ಮಾಡಿದರೂ ಪಾಪ ಕೂಡ ತುಂಬುತ್ತದೆ. ಆದುದರಿಂದ ಪಾಪವನ್ನು ಮಾಡಿದವನು ಅದನ್ನು ಪುನಃ ಮಾಡ ಬಾರದು, ಪುಣ್ಯಮಾಡಿದವನು ಅದನ್ನು ಪುನಃ ಪುನಃ ಮಾಡಬೇಕು. ಪುಣ್ಯಕಾರ್ಯ ವನ್ನು ಮಾಡಲು ಸ್ವಲ್ಪ ಆಲಸ್ಯ ಮಾಡಿದರೂ ಪಾಪಕರ್ಮದಲ್ಲಿ ಆಸಕ್ತಿ ಬೆಳೆಯುತ್ತದೆ. ನಿರಂತರ ವ್ಯಾಯಾಮದಿಂದ ನಿತ್ಯಶುದ್ಧರಾಗಬೇಕು.

೭. ಸಮ್ಯಕ್ಸ್ಮೃತಿ. ಯಾವುದನ್ನು ಪಡೆಯಬೇಕೆಂದು ಬಯಸುತ್ತೇವೆಯೋ ಅದರ ವಿಚಾರವಾಗಿ ಎಲ್ಲ ಕಾಲದಲ್ಲೂ ಮನಸ್ಸು ಎಚ್ಚರಗೊಂಡಿರಬೇಕು, ತದೇಕಚಿತ್ತ ವಾಗಿರಬೇಕು. 'ಎಚ್ಚರದಿಂದಿರುವುದು ಅಮೃತಕ್ಕೆ ದಾರಿ, ಎಚ್ಚರ ತಪ್ಪುವುದು ಮೃತ್ಯುವಿಗೆ ದಾರಿ. ಎಚ್ಚರದಿಂದಿರುವವನಿಗೆ ಸಾವಿಲ್ಲ, ಎಚ್ಚರ ತಪ್ಪಿದವನು ಸತ್ತಂತೆಯೇ.'[30] ಹಗಲಿರುಳೂ ಎಚ್ಚರದಿಂದಿರುವುದು ಸಮ್ಯಕ್ಸ್ಮೃತಿ. ಅದು ಹತ್ತು ಬಗೆಯಾಗಿದೆ. ಅವುಗಳಲ್ಲಿ ಮುಖ್ಯವಾದವು: ಬುದ್ಧಾನುಸ್ಮೃತಿ, ಧರ್ಮಾನುಸ್ಮೃತಿ, ಸಂಘಾನುಸ್ಮೃತಿ, ಕಾರ್ಯಗತಾಸ್ಮೃತಿ, ಅಹಿಂಸಾಸ್ಮೃತಿ, ಭಾವನಾಸ್ಮೃತಿ. ಯಾವಾ ಗಲೂ ಬುದ್ಧನ ಆದರ್ಶವನ್ನೇ ಮನಸ್ಸಿನಲ್ಲಿಟ್ಟುಕೊಂಡಿರುವುದು ಬುದ್ಧಾನುಸ್ಮೃತಿ. ಬುದ್ಧನ ಧರ್ಮವನ್ನು ಸದಾ ಚಿಂತಿಸುತ್ತ, ಬುದ್ಧಸಂಘದ ಕ್ಷೇಮವನ್ನೇ ಯೋಚಿಸು ತ್ತಿರುವುದು ಸಂಘಾನುಸ್ಮೃತಿ. ದೇಹದ ಸ್ವಭಾವವನ್ನು ಗಮನಿಸುತ್ತಾ, ಇರು ವುದು ಕಾಯಗತಾಸ್ಮೃತಿ. ಅಹಿಂಸೆಯನ್ನು ಆಚರಿಸುತ್ತಾ ಇರುವುದು ಅಹಿಂಸಾ ಸ್ಮೃತಿ. ಯೋಗದಲ್ಲಿ ರಮಿಸುತ್ತಿರುವುವುದು ಭಾವನುಸ್ಮೃತಿ.[31]

೮. ಸಮ್ಯಕ್ಸಮಾಧಿ. ಸಮ್ಯಕ್ಸಮಾಧಿ. ಅಷ್ಟಾಂಗಮಾರ್ಗದ ಶಿಖರ. ಸತ್ಯದಲ್ಲಿ ಚಿತ್ತವನ್ನು ಇರಿಸಿ ಅದನ್ನು ಪ್ರತ್ಯಕ್ಷಮಾಡಿಕೊಳ್ಳುವುದು ಸಮ್ಯಕ್ಸಮಾಧಿ. ಎಡೆಬಿಡದೆ ಧ್ಯಾನಮಾಡುತ್ತಾ ಯಾವಾಗಲೂ ದೃಢ ಪರಾಕ್ರಮಿಗಳಾಗಿರುವ ಧೀರರು ಕೊನೆಯಲ್ಲಿ ಯೋಗಕ್ಷೇಮವನ್ನು—ನಿರ್ವಾಣವನ್ನು ಪಡೆಯುತ್ತಾರೆ. ಅವರ ಮನಸ್ಸು ಶಾಂತ ವಾಗಿರುತ್ತದೆ, ಅವರ ಮಾತು ಶಾಂತವಾಗಿರುತ್ತದೆ, ಅವರ ಕರ್ಮವೂ ಶಾಂತವಾಗಿರು ತ್ತದೆ. ಅವರು ಪೃಥ್ವಿಯಂತೆ ಕ್ಷಾಂತರಾಗಿರುತ್ತಾರೆ, ಇಂದ್ರಕೀಲದಂತೆ ಸುವ್ರತದಲ್ಲಿ ನೆಲಸಿರುತ್ತಾರ, ಮಡುವಿನಂತೆ (ಬಗ್ಗಡವಿಲ್ಲದ) ತಿಳಿಯಾದ ಮನಸ್ಸುಳ್ಳವರಾಗಿರು ತ್ತಾರೆ, ಅವರಿಗೆ ಹುಟ್ಟು ಸಾವುಗಳಿಲ್ಲ.[32]

---

[29] ಧಮ್ಮಪದ, 116-122. [30] ಧಮ್ಮಪದ, 213. [31] ಧಮ್ಮಪದ, 296-301.

[32] ಧಮ್ಮಪದ, 23, 95-96.

ಬುದ್ಧನು ಬೋಧಿಸಿದ್ದು ದುಃಖನಿವಾರಣೆಯ ಮಾರ್ಗ. ಅವನ ದೃಷ್ಟಿಯಲ್ಲಿ ಮಾರ್ಗವೇ ಮುಖ್ಯ, ತತ್ತ್ವಜಿಜ್ಞಾಸೆ ಅಮುಖ್ಯ. ಜಿಜ್ಞಾಸೆಗೆ ನಿಲುಗಡೆ ಇಲ್ಲ; ಅದರಲ್ಲಿ ಸಿಕ್ಕಿಕೊಂಡವನಿಗೆ ಬಿಡುಗಡೆ ಇಲ್ಲ. ಒಬ್ಬನಿಗೆ ವಿಷಬಾಣದ ತಗಲಿದೆ. ಅವನ ಮಿತ್ರರು ಓಡಿಹೋಗಿ ವೈದ್ಯನನ್ನು ಕರತಂದಿದ್ದಾರೆ. ವೈದ್ಯನು ಗಾಯದಿಂದ ಬಾಣವನ್ನು ತೆಗೆಯಬೇಕು ಅಷ್ಟರಲ್ಲಿ ಗಾಯಗೊಂಡವನು 'ನಿಲ್ಲಿಸು, ಈ ಬಾಣವನ್ನು ಹೊಡೆದವ ಯಾರು, ಹೆಂಗಸೇ, ಗಂಡಸೇ, ಬ್ರಾಹ್ಮಣನೇ, ವೈಶ್ಯನೇ ಶೂದ್ರನೇ, ಅವನ ವಂಶ ಯಾವುದು, ಅವನು ಎತ್ತರದ ಆಳೇ ಅಥವಾ ಕುಳ್ಳನೆ, ಬಾಣ ಎಂಥಾದ್ದು-ಇದನ್ನೆಲ್ಲ ನಾನು ತಿಳಿದ ಹೊರತು ಬಾಣವನ್ನು ತೆಗೆಯಬೇಡ' ಎಂದು ಮುರಾಡ ಹಾಕಿದರೆ ಅವನ ಗತಿ ಏನಾಗುತ್ತದೆ? ಆ ಪ್ರಶ್ನೆಗಳಿಗೆಲ್ಲ ಉತ್ತರ ಕೊಡುವುದರೊಳಗಾಗಿ ಅವನು ಸತ್ತುಹೋಗುತ್ತಾನೆ. ಹಾಗೆಯೇ ಈ ವಿಶ್ವಕ್ಕೆ ಮೂಲ ಯಾವುದು? ಅದು ಒಂದೇ, ಎರಡೇಕಲ್ಲ, ಅನೇಕವೇಕಲ್ಲ? ಅದು ಭೌತವಾದುದೇ? ಚೈತನ್ಯರೂಪವಾದುದೇ? ಒಂದಾದರೆ, ಎರಡೇಕಲ್ಲ, ಅನೇಕವೇಕಲ್ಲ? ಅನೇಕವಾದರೆ ಒಂದೆಂಬುವ ಆಕ್ಷೇಪಣೆಗಳಿಗೆ ಏನು ಸಮಾಧಾನ? ಆ ಸಮಾಧಾನಕ್ಕೆ ಆಕ್ಷೇಪವೇನು, ಜೀವಾದ್ಯಂತವೂ ನಡೆಸಿದರೂ ಮುಗಿಯದ ಈ ಜಿಜ್ಞಾಸೆಯಲ್ಲಿ ಸಿಕ್ಕಿಬಿದ್ದವನಿಗೆ ಬಾಳಿನ ಬೇಗೆ ನಿವಾರಣೆಯಾಗದೆ ಜೀವಬಿಡುತ್ತಾನೆ.

ಬುದ್ಧನು ತಾನು ಬೋಧಿಸಿದ ನಾಲ್ಕು ಸತ್ಯಗಳಲ್ಲದೆ ಇನ್ನೂ ಹೆಚ್ಚಿನದನ್ನು ತಿಳಿದಿದ್ದನು. ಅವುಗಳನ್ನು ತಿಳಿಸದಿದ್ದುದಕ್ಕೆ ಕಾರಣವನ್ನೂ ಹೇಳಿರುತ್ತಾನೆ. ಬುದ್ಧನು ಕೋಶಾಂಬಿಯ ಶಿಂಶಪಾವನದಲ್ಲಿ ವಿಹರಿಸುತ್ತಿದ್ದಾಗ, ಶಿಂಶುಪಾವೃಕ್ಷದ ಕೆಲವು ಎಲೆಗಳನ್ನು ಹಿಡಿಯಲ್ಲಿ ಹಿಡಿದು ತನ್ನೊಡನೆ ಇದ್ದ ಶಿಷ್ಯರನ್ನು ಕುರಿತು 'ಈಗ ನಾನು ಹಿಡಿದಿರುವ ಶಿಂಶುಪದ ಎಲೆಗಳು ಹೆಚ್ಚೋ ಅಥವಾ ಈ ವನದಲ್ಲಿರುವ ಎಲೆಗಳು ಹೆಚ್ಚೋ, ಎಂದು ಕೇಳಿದನು. ಆದಕ್ಕೆ ಶಿಷ್ಯರು ಹಿಡಿಯಲ್ಲಿರುವ ಎಲೆಗಳು ಕೆಲವೇ ಮಾತ್ರವೆಂದೂ ವನದಲ್ಲಿರುವ ಎಲೆಗಳು ಬಹಳವೆಂದೂ ಉತ್ತರಕೊಟ್ಟರು. ಆಗ ಬುದ್ಧನು ಶಿಷ್ಯರನ್ನು ಕುರಿತು 'ಅದರಂತೆಯೇ ನಾನು ನಿಮಗೆ ತಿಳಿಸಿರುವುದಕ್ಕಿಂತ ತಿಳಿಸದಿರುವುದು ಬಹಳವಿದೆ. ಅದನ್ನೆಲ್ಲ ನಾನು ತಿಳಿಸದಿರುವುದಕ್ಕೆ ಕಾರಣಗೊತ್ತೆ? ಅವುಗಳಿಂದ ನಿಮಗೆ ಪ್ರಯೋಜವಿಲ್ಲ. ಧರ್ಮದದಾರಿಯಲ್ಲಿ ಮುಂದೆ ಸಾಗುವುದಕ್ಕೆ ಸಹಕಾರಿಯಲ್ಲ; ವಿಷಯಾಸಕ್ತಿಯಿಂದ ವಿಮುಕ್ತರಾಗುವುದಕ್ಕೆ, ತೃಷ್ಣೆಯನ್ನು ತಡೆಯುವುದಕ್ಕೆ, ಅನಿತ್ಯವಾದುದರಲ್ಲಿ ಆಸೆ ಅಳಿಯುವುದಕ್ಕೆ, ಶಾಂತಿಗೆ, ತಿಳಿವಿಗೆ,

---

ಬೆಂಕಿಯಲ್ಲಿ ಬೇಯುತ್ತಿರುವವನಿಗೆ, ಬೆಂಕಿಯ ವಿಚಾರ ಚರ್ಚೆಮಾಡಲು ಸಮಯ ವಿಲ್ಲ; ಅದ್ದರಿಂದ ತಪ್ಪಿಸಿಕೊಳ್ಳಲು ತ್ವರೆಮಾಡಬೇಕು.

"It is not time to discuss about fire, for those who are actually in burning fire; but it is time to escape from it."

ಮಜಿಮ, i, p 29.

ವಿವೇಕಕ್ಕೆ, ನಿರ್ವಾಣಕ್ಕೆ ಅವು ದಾರಿತೋರಿಸುವುದಿಲ್ಲ. ಆದುದರಿಂದ ನಾನು ಅವುಗಳನ್ನು ಬೋಧಿಸಲಿಲ್ಲ' ಎಂದು ಹೇಳಿದನು.[33]

ಅಷ್ಟಾಂಗಮಾರ್ಗದಿಂದ ನಿರ್ವಾಣಪಡೆಯತಕ್ಕವನು ಇಹದಲ್ಲಿ ಅಪಾರವಾದ ಪ್ರೀತಿ (ಮೆಟ್ಟ)ಯಿಂದ, ಕರುಣೆಯಿಂದ, ಆನಂದದಿಂದ ಸಮಸ್ಥಿತಿಯಿಂದ ಕೂಡಿದ ಜೀವನ ನಡೆಸುತ್ತಾನೆ. ಈ ತುಂಬುಜೀವನದ ನಾಲ್ಕು ಬಗೆಗಳನ್ನು ಬೌದ್ಧರು ಬ್ರಹ್ಮ ವಿಹಾರಗಳೆಂದು ಕರೆದಿರುತ್ತಾರೆ. ಬುದ್ಧನು ಪ್ರೀತಿಗೆ ಎಲ್ಲಕ್ಕೂ ಹೆಚ್ಚಿನ ಸ್ಥಾನವನ್ನು ಕೊಟ್ಟಿರುತ್ತಾನೆ ಮೆಟ್ಟಸುತ್ತವು ಬುದ್ಧನಾಗಬೇಕೆಂದಿರುವವನನ್ನು ಕುರಿತು "ತಾಯಿ ತನ್ನ ಪ್ರಾಣವನ್ನಾದರೂ ತೆತ್ತು ತನ್ನ ಮಗನನ್ನು–ಒಬ್ಬನೇ ಮಗನನ್ನು–ಕಾಪಾಡುವಂತೆ ಎಲ್ಲ ಪ್ರಾಣಿಗಳಲ್ಲೂ ಮಿತಿಯಿಲ್ಲದ ಪ್ರೀತಿ ಬೆಳೆಯಲಿ; ಈ ಲೋಕದ ಎಲ್ಲ ಕಡೆಗೂ-ಮೇಲೆ, ಕೆಳಗೆ, ಸುತ್ತಲೂ, ಎಲ್ಲೆಲ್ಲೂ-ವಿರೋಧವಿಲ್ಲದ ಹೃದಯ ತೆರೆಯಲಿ; ನಿಂತಲ್ಲಿ, ಕುಳಿತಲ್ಲಿ, ನಡೆದಾಗ, ಮಲಗಿದಾಗ, ಎಚ್ಚರವಾಗಿರುವ–ಎಲ್ಲ ವೇಳೆಗಳಲ್ಲೂ ಈ ಮೈತ್ರೀಭಾವವನ್ನು ತಳೆದಿರಲಿ ಎಂದು ಬೋಧಿಸುತ್ತದೆ. ಪ್ರೀತಿಯ ಹಿರಿಮೆಯನ್ನು ಇತಿವೃತ್ತಕ ಈ ರೀತಿ ಸಾರುತ್ತದೆ. "ಸಮಸ್ತ ಸತ್ಕಾರ್ಯಗಳೂ ಪ್ರೀತಿಯಿಂದ ಹೃದಯವನ್ನು ವಿಕಾಸಗೊಳಿಸಿಕೊಳ್ಳುವುದರ ಹದಿನಾರರಲ್ಲೊಂದು ಪಾಲಿಗೆ ಸಮನಲ್ಲ. ಇದು ಎಲ್ಲವನ್ನೂ ಒಳಗೊಂಡು ಎಲ್ಲಕ್ಕೂ ಮಿಗಿಲಾಗಿ ಬೆಳಗುತ್ತದೆ." ಇದು ಮೊದಲನೆಯ ಬ್ರಹ್ಮ ವಿಹಾರ. ಕರುಣೆಯಿಂದ ಕೂಡಿದ ಬಾಳು ಎರಡನೆಯ ಬ್ರಹ್ಮವಿಹಾರ. ಹೀಗೆ ವಿಹರಿಸುವವನು ಜೀವವೆಲ್ಲ ಒಂದು ಎಂದು ತಿಳಿದಿರುತ್ತಾನೆ ಯಾವ ಪ್ರಾಣಿ ಕಷ್ಟದಲ್ಲಿದ್ದರೂ ಅವನ ಹೃದಯ ಕರಗುತ್ತದೆ. ಮೋದದಿಂದ ತುಂಬಿದ ಜೀವನ ಮೂರನೆಯ ಬ್ರಹ್ಮವಿಹಾರ. ಯಾವ ಪ್ರಾಣಿಯಾದರೂ ಸಂತೋಷಪಡುತ್ತಿದ್ದರೂ ಅದನ್ನು ತನ್ನ ಸಂತೋಷವೆಂದು ಆನಂದಪಡುವುದು ಮೋದದವಿಹಾರ. ನಾಲ್ಕನೆಯ ವಿಹಾರ ಸಮಸ್ಥಿತಿ. ಈ ಸಮಸ್ಥಿತಿಯನ್ನು ಭಗವದ್ಗೀತೆಯಲ್ಲಿ ವರ್ಣಿತವಾಗಿರುವ ಸ್ಥಿತಪ್ರಜ್ಞಗೆ ಹೋಲಿಸಬಹುದು.[34]

---

[33] ಮಜ್ಝಮ 63.

[34] ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ
ಈಕ್ಷತೇ ಯೋಗ ಯುಕ್ತಾತ್ಮಾ ಸರ್ವತ್ರ ಸಮದರ್ಶನಃ. ಭಗವದ್ಗೀತೆ vi, 29
ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ
ಸುಖಂ ವಾ ಯದಿವಾ ದುಃಖಂ ಸಯೋಗೀ ಪರಮೋಮತಃ. ಭಗವದ್ಗೀತೆ vi, 32
ಸಮಃ ಶತ್ರೌಚ ಮಿತ್ರೇಚ ತಥಾ ಮಾನಾಪಮಾನಯೋಃ
ಶೀತೋಷ್ಣ ಸುಖದುಃಖೇಷು ಸಮಃ ಸಂಗವಿವರ್ಜಿತಃ. ಭಗವದ್ಗೀತೆ xii, 18
ಸುಹೃನ್ಮಿತ್ರಾರ್ಯುದಾಸೀನ ಮಧ್ಯಸ್ಥದ್ವೇಷ ಬಂಧುಷು
ಸಾಧುಷ್ವಪಿ ಚ ಪಾಪೇಷು ಸಮ ಬುದ್ಧಿರ್ವಿಶಿಷ್ಯತೇ. ಭಗವದ್ಗೀತೆ vi, 9
ಶಂಕರ–ಛಾಂದೋಗ್ಯ ಉಪನಿಷದ್ಭಾಷ್ಯ. iii, xiv, 1. ಮತ್ತು ವೇದಾಂತ ಸೂತ್ರ ಭಾಷ್ಯ I. ii, 18

ಬುದ್ಧನು ವೇದಾಂತಜ್ಞ. ಅವನ ಮಾತುಗಳಿಗೂ ಕೆಲವು ಉಪನಿಷದುಕ್ತಿಗಳಿಗೂ ಸಾಮ್ಯವಿದೆ. ಉಪನಿಷತ್ತುಗಳಲ್ಲಿ ಸಾರಿರುವಂತೆ ಅವನೂ ಇಹದಲ್ಲೇ * ಹುಟ್ಟಿಲ್ಲದ ಅಮೃತಪದವನ್ನು ಹೊಂದುವ ಮಾರ್ಗವನ್ನು ಸಾರಿರುತ್ತಾನೆ. ಹಾಗೆಯೇ ಇಲ್ಲಿರುವುದೆಲ್ಲ ಅಶಾಶ್ವತ,* ಅಹಂಕಾರ ಅಶಾಶ್ವತ, ಕಾಮವನ್ನು ಗೆದ್ದು ಇಲ್ಲಿರುವುದು ಯಾವುದೂ ನನ್ನದಲ್ಲ ಎಂದು ತಿಳಿದವನು "ಬ್ರಹ್ಮಭೂತವಾದ ಆತ್ಮಪದವನ್ನು ಅನುಭವಿಸುತ್ತಾನೆ" [35] ಎಂದು ಬುದ್ಧನು ಬೋಧಿಸಿರುತ್ತಾನೆ ಬುದ್ಧನು ಅಷ್ಟಾಂಗಮಾರ್ಗವನ್ನು ಕೆಲವು ವೇಳೆ ಧರ್ಮಾಯನವೆಂದೂ ಇನ್ನು ಕೆಲವು ವೇಳೆ ಬ್ರಹ್ಮಾಯನವೆಂದೂ ಕರೆದಿರುತ್ತಾನೆ. ಧರ್ಮಕ್ಕೆ ದಾರಿ ಬ್ರಹ್ಮಕ್ಕೆ ದಾರಿ; [36] "ಧರ್ಮದಲ್ಲಿ ನೆಲೆಗೊಂಡವನು ಬ್ರಹ್ಮದಲ್ಲಿ ನೆಲೆಗೊಳ್ಳುತ್ತಾನೆ; [37] ತಥಾಗತನು ಧರ್ಮವನ್ನು ಶರೀರವಾಗಿ ಉಳ್ಳವನು,

---

ಸೂತ್ರಭಾಷ್ಯ. 1. ii, 18.

ಅಯಂ ನಿಜಃ ಪರೋವೇತಿ ಗಣನಾ ಲಘುಚೇತಸಾಂ
ಉದಾರಚರಿತಾನಾಂ ತು ವಸುಧೈವ ಕುಟುಂಬಕಂ.

'ನನ್ನದು' 'ನಿನ್ನದು' ಎಂದು ಅಲ್ಪಮತಿಗಳು ಗಣಿಸುತ್ತಾರೆ. ಉದಾರಚರಿತರಿಗೆ ವಿಶ್ವವೆಲ್ಲ ಒಂದು ಕುಟುಂಬ.

* ಕೆಲವು ಉಪನಿಷತ್ತುಗಳು ಮತ್ತು ಅದ್ವೈತ ವೇದಾಂತ ಜೀವನ್ಮುಕ್ತಿಯನ್ನು ಬೋಧಿಸುತ್ತವೆ.

S. Radhakrishnan, *Indian Philosophy*, 371. The Upanishads are as clear as early Buddhism, that in this world of unresting change and eternal becoming there is no firm resting place for man."

Ibid p. 379

But for him the ultimate was not annihilation. Beyond the changing there is an eternal reality. "There is an unborn, an unorginated, an unmade, an uncompounded. Were there not, O mendicants, there would be no escape from the world of the born, the originated, the made and the compounded."

Vinaya viii, 3

* ನಿರ್ವಾಣದಲ್ಲಿ ಜೀವದ ತಾಪವಿಲ್ಲ. ಅಲ್ಲಿ ಬೆಂಕಿ ಆರಿಹೋಗಿರುತ್ತದೆ. ಅಲ್ಲಿ ಸುಡಬೇಕಾದದ್ದೇನೂ ಇಲ್ಲ-ಸೌದೆ ಇಲ್ಲ. ಶ್ವೇತಾಶ್ವತಾರ ಉಪನಿಷತ್ತಿನಲ್ಲಿ ಪರಮಾತ್ಮವನ್ನು ಸೌದೆಯಿಲ್ಲಿ ಸುಟ್ಟಿರುವ ಬೆಂಕಿಗೆ ಹೋಲಿಸಿದೆ (iv, 19)

ಆತ್ಮದ ನಾಲ್ಕು ಅವಸ್ಥೆಗಳಾದ ವಿಶ್ವ, ತೈಜಸ, ಪ್ರಜ್ಞಾ, ತುರೀಯಗಳಿಗೆ ಸಂವಾದಿಯಾಗಿ ಬುದ್ಧನು ನಾಲ್ಕು ಅವಸ್ಥೆಗಳನ್ನು ಹೇಳಿರುತ್ತಾನೆ. ಅವು ಕಾಮ, ರೂಪ, ಅರೂಪ, ಲೋಕೋತ್ತರ.

[35] ಮಜ್ಝಿಮ, i, 344, ಅಂಗುತ್ತರ, i, 211.

[36] ಸಂಯುತ್ತ, i, 141.

[37] ಅಂಗುತ್ತರ, i, 207.

[37] "ಅನತ್ತಂತಪೋ ಅಪರಂತಪೋ ದಿತ್ತೇವ ಧಮ್ಮೇ ನಿಚ್ಛಾತೋ ನಿಬ್ಬುತೋ ಸೀತಿಭೂತೋ ಸುಖಪತಿ ಸಂವೇದೀ ಬ್ರಹ್ಮಭೂತೇನ ಅತ್ತನಾ ವಿಹರತಿ."

S. Radhakrishnan, *Indian Philosophy*, p 668.

ಬ್ರಹ್ಮವನ್ನು ಶರೀರವಾಗಿ ಉಳ್ಳವನು, ಧರ್ಮದಲ್ಲಿ ಐಕ್ಯವಾಗಿರುತ್ತಾನೆ, ಬ್ರಹ್ಮದಲ್ಲಿ ಐಕ್ಯವಾಗಿರುತ್ತಾನೆ "[38] ಎಂದು ಧರ್ಮ ಬ್ರಹ್ಮಗಳನ್ನು ಒಂದಾಗಿ ತಿಳಿಸಿರುತ್ತಾನೆ. ಬ್ರಹ್ಮ ಇದೆ ಎಂದು ಹೇಳುವುದು ಮುಖ್ಯವಲ್ಲ, ಅದನ್ನು ಪಡೆಯುವುದು, ಅದರಲ್ಲಿ ಬೆರೆಯುವುದು, ಅದಾಗಿಬಿಡುವುದು ಮುಖ್ಯ. ಧರ್ಮ ಎಂಬುದು ಯತ್ನದ ಫಲ ವೆಂಬುದನ್ನು ಸ್ಪಷ್ಟಪಡಿಸುವುದರಿಂದ ಬುದ್ಧನು ಬ್ರಹ್ಮ ಎಂಬುದಕ್ಕಿಂತ ಧರ್ಮ ಎಂಬ ಪದವನ್ನೇ ಹೆಚ್ಚಾಗಿ ಉಪಯೋಗಿಸಿದ್ದಾನೆ; ಧರ್ಮವು ರಾಜ ರಾಜ [39] ಎಂದು ಹೇಳಿರು ತ್ತಾನೆ. ಬ್ರಹ್ಮದ ವಿಚಾರವಾಗಿ ಹೇಳಿದ್ದು ಆತ್ಮಕ್ಕೂ ಅನ್ವಯಿಸುತ್ತದೆ. ಆತ್ಮವು ಇರುವುದೆಂದು ಹೇಳುವುದು ಮುಖ್ಯವಲ್ಲ, ಅದನ್ನು ಸಾಧಿಸುವುದು ಮುಖ್ಯ. ನಾವು ಇದೆ ಎಂದು ಹೇಳುವುದು ಅಹಂಕಾರ. ಅದು ಅನಿತ್ಯ. ನನ್ನದು ಎಂದು ಹೇಳುವವನಿಗೆ ಆತ್ಮವಿಲ್ಲ. ಇದು ನನ್ನದಲ್ಲ, ನಾನು ಇದಲ್ಲ, ಇದು ನನ್ನ ಆತ್ಮವಲ್ಲ" ಎಂದು ಜಪಿಸಿ ದವನಿಗೆ ಆತ್ಮಲಾಭವಾಗುತ್ತದೆ, ಅವನು ಆತ್ಮಾನುಯೋಗಿಯಾಗುತ್ತಾನೆ. [40] ಈ ಆತ್ಮಕ್ಕಿಂತ ಪ್ರಿಯವಾದುದು ಬೇರೆ ಯಾವುದೂ ಇಲ್ಲ. [41] ಆತ್ಮಕ್ಕೆ ಆತ್ಮನೇ ನಾಥ, ಬೇರೆ ಯಾರು ನಾಥನಾಗಬಲ್ಲರು? [42] ಇದು ಒಬ್ಬೊಬ್ಬರಿಗೂ ಬೇರೆ ಯಾದ ಆತ್ಮವಲ್ಲ, ನಮಗೂ ಇತರರಿಗೂ ಸಮಾನವಾದ ಆತ್ಮ (ಪುತ್ತು ಅತ್ತ). ಬುದ್ಧನು ಅನೇಕಾತ್ಮ ಗಳನ್ನು ಒಪ್ಪುವವನಲ್ಲ. ಅನೇಕವಾದುವು ಅಹಂಕಾರಗಳು; ಅವು ಅಮೃತವಲ್ಲ. ಅಮೃತವಾದುದು ಒಂದೇ, ಏಕಾತ್ಮ.

ಬ್ರಹ್ಮ, ಆತ್ಮ ಇವುಗಳ ವಿಚಾರವಾಗಿ ಬುದ್ಧನು ಮೌನತಾಳಿದ್ದಕ್ಕೆ ಅವುಗಳ ನಿಜಸ್ವರೂಪವೂ ಒಂದು ಕಾರಣ. (ಬ್ರಹ್ಮವು ಮನಸ್ಸಿಗೆ ಗೋಚರವಾಗತಕ್ಕದಲ್ಲ, ಮಾತಿನಿಂದ ಹೇಳತಕ್ಕದ್ದಲ್ಲ). ಬ್ರಹ್ಮವನ್ನು, ಆತ್ಮವನ್ನು ಪಡೆದವರು ಅವುಗಳ

---

38 ದೀಘ, iii, 81, 84.

39 ಅಂಗುತ್ತರ, i, 207.

40 ಧಮ್ಮಪದ 209.

41 ನೋಪಿಯತರಂ ಅತ್ತನಾ ಕ್ವಚಿ. (ಸಂಯುತ್ತ 1. 75)

42 ಧಮ್ಮಪದ 160, ಭಗವದ್ಗೀತೆ, vi, 5.

M. Hiriyanna, *Essentials of Indian Philosophy*, p. 74, "The other interpretation of the Upanishads, according to which spirit is self evolving is no doubt very different in this respect, but then, it is the goal that is represented an important and not much the way leading to it, as here. For early Buddhism it is man as *aspirant after perfection that matters more than as having achieved it*."

M. Hiriyanna, *Outlines of Indian Philosophy*, p. 152. "Some have flatly denied that Nirvana can be annihilation and represented it as everleasting being or eternal felicity-anideal hardly different from the Upanishadic moksha. Others again have taken it as a condition of which nothing whatsoever can be predicated—not even whether it is or not, Similar also is the attitude adopted in some Upanishadic passages towards Nirvana.

ವಿಚಾರವಾಗಿ ಮಾತನಾಡುವುದಿಲ್ಲ.[43] ನಿರ್ವಾಣವೂ ಹಾಗೆಯೇ (ಮಾತಿನಿಂದ ಹೇಳ ತಕ್ಕದ್ದಲ್ಲ, ಅವಾಚ್ಯ); ಅದನ್ನು ಪಡೆದವರು ಮೌನದಿಂದಿರಬೇಕು. ಸರ್ವಜ್ಞನು ಹೇಳುವಂತೆ "ಬೊಮ್ಮವನು ಅರಿತಿಹರೆ ಸುಮ್ಮನಿರಬೇಕು; ಬೊಮ್ಮವನು ಅರಿದು ಉಸಿರಿದರೆ ಕಳಹೋಗಿ ಕೆಮ್ಮಿದಂತಕ್ಕು." "ಬಲ್ಲರೆ ಬಲ್ಲನೆನಬೇಡ, ಸುಮ್ಮನಿರಬಲ್ಲನೆ ಬಲ್ಲ."[44] ಬುದ್ಧನು ಹೇಳಿದುದೂ ಅದೇ ಮಾತು. "ಪರಮಾರ್ಥಗಳು ಅನಕ್ಷರಗಳು"[45] "ತಥಾಗತರು ಮೌನಿಗಳು."[46] ಅನಕ್ಷರವಾದುದನ್ನು ಹೇಳುವುದು ಹೇಗೆ, ಕೇಳು ವುದು ಹೇಗೆ? ಆದರೂ ಅದಕ್ಕೆ ಗುಣಗಳನ್ನು ಆರೋಪಿಸಿ ಬೋಧಿಸುತ್ತಾರಲ್ಲ ಕೇಳು ತ್ತಾರಲ್ಲ![47] ಬ್ರಹ್ಮ, ಆತ್ಮ-ಇವುಗಳನ್ನು ತಿಳಿಸಲು ಉಪನಿಷತ್ತುಗಳಲ್ಲಿ "ನೇತಿ, ನೇತಿ" ಎಂಬ ವಿಧಾನವನ್ನು ಅನುಸರಿಸಿದೆ. ಬುದ್ಧನು ಕೂಡ ಅದೇ ವಿಧಾನವನ್ನೇ ಅನುಸರಿಸಿರುತ್ತಾನೆ. ಅವನು ನಿರ್ವಾಣವನ್ನು ವರ್ಣಿಸುವುದು ಹೀಗೆ: "ಅಲ್ಲಿ ನೀರಿಲ್ಲ, ಭೂಮಿಯಿಲ್ಲ, ಬೆಳಕಿಲ್ಲ, ಗಾಳಿ ಇಲ್ಲ, ಕಾಲವೂ ಇಲ್ಲ, ದೇಶವೂ ಇಲ್ಲ, ಅದನ್ನು ಆಕಾಶವು ಅಡಗಿಸಿಕೊಳ್ಳಲಾರದು, ಏಕೆಂದರೆ ಅದಕ್ಕೆ ಸ್ಥಾನವಿಲ್ಲ. ಕಾಲ ಅದನ್ನು ಅಡಗಿಸಿಕೊಳ್ಳಲಾರದು. ಏಕೆಂದರೆ ಅದು ಬದಲಾವಣೆಗೆ ಮೀರಿದ್ದು."[48]

ಬುದ್ಧನ ತತ್ತ್ವ ಅದ್ವೈತ. ಅವನನ್ನು ಅಮರಕೋಶದಲ್ಲಿ ಅದ್ವಯವಾದಿ[49] ಎಂದು ಕರೆದಿವೆ. ಅದ್ವೈತಿಗಳಂತೆ ಬುದ್ಧನೂ ಈ ಲೋಕವೆಲ್ಲವೂ ಅನಿತ್ಯ, ನೊರೆ ಯಂಥಾದ್ದು, ದುಃಖಮಯವಾದದ್ದು; ನಿರ್ವಾಣವೇ ಪರಮಾರ್ಥ, ನಿತ್ಯ, ಅಮೃತವಾ ದುದು, ಅವಾಚ್ಯ, ಅನಭಿಲಪ್ಯ, ಅವಿಜ್ಞೇಯ, ಅಪರಿಜ್ಞೇಯ, ಅದೇಶಿಕ, ಅವಿಷಯ, ಅಕಾರಣ, ಅಕಾರ್ಯ, ಅರೂಪ, ನಾರೂಪ, ಅವಧಿ, ಅಪ್ರತಿಷೇಧ ಎಂದು ಹೇಳಿರು ತ್ತಾನೆ. ಬೃಹದಾರಣ್ಯಕ ಉಪನಿಷತ್ತಿನಲ್ಲಿ ಆತ್ಮವಿಚಾರವಾಗಿ "ಸ ಏಷಾ ನೇತಿ ನೇತಿ, ಅಗ್ರಾಹ್ಯೋ ನ ಹಿ ಗ್ರಾಹ್ಯತೇ,[50] ಎಂದೂ ಮಾಂಡೂಕ್ಯೋಪನಿಷತ್ತಿನಲ್ಲಿ

---

43 ಅಂಗುತ್ತರ iii, 359.

44 ಸರ್ವಜ್ಞ ವಚನ, 324. 321

45 ಪರಮಾರ್ಥಾಃ ತ್ವೇ ಅನಕ್ಷರಾಃ (ಲಂಕಾವತಾರ ಸೂತ್ರ)

46 "ಮೌನಾಹಿ ಭಗವಾನ್ ತಥಾಗತಾಃ" "ಪರಮಾರ್ಥೇ ಹಿ ಆರ್ಯಾನಾಂ ತೂಷ್ಣೀಂಭಾವಃ" ಚಂದ್ರಕೀರ್ತಿ ಮಾಧ್ಯಮಿಕ ವೃತ್ತಿ (ಪುಟ 56)

47 "ಅನಕ್ಷರಸ್ಯ ಧರ್ಮಸ್ಯ ಶ್ರುತಿಃ ಕಾ ದೇಶನಾಚಕಾ ಶ್ರೂಯತೇ ದೇಶ್ಯತೇ ಚಾಪಿ ಸಮಾರೋಪಾದ್ ಅನಕ್ಷರಃ (ಮಾಧ್ಯಮಿಕ ವೃತ್ತಿ)

48 ಉದಾನ.

49 ಸ್ವರ್ಗವರ್ಗ, 41.

50 iii, 9, 26, iv, 2, 4, iv 4, 22.

ಬೌದ್ಧರ ಹೇಳಿಕೆಗೂ ಅದ್ವೈತಿಗಳಾದ ಗೌಡಪಾದರು ಈ ಕಾರಿಕೆಯಲ್ಲಿ ಹೇಳಿರು ವುದಕ್ಕೂ ಏನು ವ್ಯತ್ಯಾಸ? ನನಿರೋಧಃ ನ ಚೋತ್ಪತ್ತಿರ್ನ ಬುದ್ಧೋ ನಚ ಸಾಧಕಃ ನ ಮುಮುಕ್ಷುನವೈ ಮುಕ್ತ ಇತ್ಯೇಷಾ ಪರಮಾರ್ಥತಾ.

‘ ನಾನ್ತಃ ಪ್ರಜ್ಞಾ, ನ ಬಹಿಃ ಪ್ರಜ್ಞಾ, ನೋಽಭಾಯತಃ ’ ಎಂದು ಹೇಳಿರುವಂತೆಯೇ ಬೌದ್ಧರೂ ಅದು (‘ಅಸ್ತಿ, ನಾಸ್ತಿ, ಉಭಯ, ಅನುಭಯ, ಚತುಷ್ಕೋಟಿ ನಿರ್ಮುಕ್ತ)[51] ಇದೆ, ಇಲ್ಲ, ಎರಡೂ, ಎರಡೂ ಅಲ್ಲ ಎಂದು ಹೇಳಿರುತ್ತಾರೆ.

ಅದ್ವೈತ ಹಲವು ಬಗೆಯಾಗಿದೆ. ಶಾಂಕರ ವೇದಾಂತವೊಂದೇ ಅದ್ವೈತವಲ್ಲ. ಬುದ್ಧನದೂ ಶಾಂಕರಾದ್ವೈತವೇದಾಂತ,ಎಂದು ಸಾಧಿಸುವುದು ನಮ್ಮ ಉದ್ದೇಶವಲ್ಲ. ಅದು ನಿಜವೂ ಅಲ್ಲ. ಅವರಿಬ್ಬರ ಅದ್ವೈತಕ್ಕೆ ವ್ಯತ್ಯಾಸವಿದೆ. ಶಂಕರಾಚಾರ್ಯರು ವೇದವನ್ನು ಪ್ರಮಾಣವಾಗಿ ಅಂಗೀಕರಿಸಿದ್ದಾರೆ. ಬುದ್ಧನು ವೇದಪ್ರಮಾಣವನ್ನು ಅಂಗೀಕರಿಸಲಿಲ್ಲ. ವೇದದ ಕರ್ಮಕಾಂಡದ ತತ್ತ್ವವನ್ನು ಬುದ್ಧನು ಸರ್ವಥಾ ಒಪ್ಪುವನಲ್ಲ. ಅವನದು ದೇವರನ್ನು ಕಾಡಿಬೇಡುವ ಮತವಲ್ಲ. ಅವನ ದೃಷ್ಟಿಯಲ್ಲಿ ಸಗುಣೋಪಾಸನೆ ಬಿಡುಗಡೆಗೆ ದಾರಿಯಲ್ಲ; ಅಡಚಣೆ. ಸಗುಣೋಪಾಸಕರು ಅವಿದ್ಯೆ

---

[51] ಮಾಧ್ಯಮಿಕ ಕಾರಿಕ.

S Radhakrishnan, *Indian Philosophy*, p. 668 "The Alatasanti of Gaudapada's Karika is full of Madhyamika tenets. The advaita distinction of vyavhara or experience and paramartha or reality correspond to the samvrti and the paramartha of the Madhyamikas The Nirguna Bramha of Samkara and Nagurajuna's Sunya have much in common. The force of avidya introducing the phenomonal universe is admitted by both. The keen logic which breaks up the world into a play of abstractions, categeries and relations appears in both. If we take an advita vedantin like Sri Harsha, we find that he does little more than develop the Madhyamika theory, expose the self-conrtadictions of the categories we work with such as cause and effect, substance and attribute and deny the reality of things on account of the impossibility of adequately explaining them. According to the Khandana of Sri Harsha, things are anirvachaniya or indescribable, according to the Madhyamika Vrtti they are nishvabhava or devoid of essence. To be indefinable and to be characterless are after all the same. With the Buddha's attitude to the unseen Nagarjuna does not dwell much on the positive absolute, though he admits its reality. By the negative logic which reduces experience to phenomemon, he prepares the ground for the Advaita philosophy. It is strange that the great exponents of the two antagonisitic doctrines look upon themselves as supporting antagonistic positions."

Ibid. P. 666 "The Madyamika theory is an advaitism of the type of Sankara or Bradley."

M. Hiriyanna, *Essentials of Indian Philosophy*. 83. "According to this interpretation the doctrine ceases to be finally realistic for it accepts an Absolute though it may regard it as altogether ineffable ".

" ನಿತ್ಯಮಪಿ ಕಿಂಚಿತ್ತತ್ವಂ ಬುದ್ಧೋಽಪದಿಷ್ಟವಾನ್. "

ಯಲ್ಲಿ ಮುಳುಗಿರುತ್ತಾರೆ. ಅವಿದ್ಯೆಯನ್ನು ಗೆಲ್ಲುವುದಕ್ಕೆ ಅವನು ನಿರ್ದೇಶಿಸಿರುವುದು ನಿರ್ಗುಣೋಪಾಸನೆಯೇ. ವೇದದಲ್ಲಿ ಹೇಳಿರುವುದೆಲ್ಲ ನಿರ್ಗುಣೋಪಾಸನೆಯಲ್ಲವಾದುದರಿಂದ ಅವನು ವೇದವೆಲ್ಲವನ್ನೂ ಪ್ರಮಾಣವಾಗಿ ಒಪ್ಪಲಿಲ್ಲ. ದ್ವೈತ, ವಿಶಿಷ್ಟಾದ್ವೈತ, ಅದ್ವೈತ ವೇದಾಂತಿಗಳು, ಒಬ್ಬೊಬ್ಬರೂ ವೇದವೆಲ್ಲ ತಮ್ಮ ವಾದವನ್ನೇ ಸಾರುವುದೆಂದು ಭಾಷ್ಯಗಳನ್ನು ಬರೆದಿರುತ್ತಾರೆ. ಇದು ವೇದಾಂತಿಗಳು ವೇದಕ್ಕೆ ಮಾಡಿರುವ ಒಂದು ಅಪಚಾರ. ಬುದ್ಧನಿಗೆ ವೇದಾಂತದ ಕೆಲವು ಅಂಶಗಳಲ್ಲಿ ಪ್ರೀತಿ ಇತ್ತು ಎಂಬುದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ಆದರೆ ಅವನು ತಾನು ಬೋಧಿಸಿದುದನ್ನು ವೇದಕ್ಕೆ ಆರೋಪಿಸಿ ಅದಕ್ಕೆ ಅಪಚಾರಮಾಡಲಿಲ್ಲ. ವೇದವಿಚಾರದಲ್ಲಿ ವೈದೀಕರಿಗಿಂತ ಬುದ್ಧನು ಅನುಸರಿಸಿರುವ ಮಾರ್ಗ ಆಧುನಿಕರಿಗೆ ಒಪ್ಪು. ನಾವು ವೇದದಿಂದ ತಿಳಿವನ್ನು ಪಡೆಯಬಹುದು. ಆದರೆ ನಾವು ತಿಳಿದಿದ್ದೇ ಸತ್ಯ, ವೇದ ತಿಳಿಸುವುದೆಲ್ಲ ಆ ಸತ್ಯವನ್ನೇ ಎಂದು ಸಾಧಿಸುವ ಗೋಜಿಗೆ ಹೋಗಬಾರದು. ಭಾಷ್ಯಗಳೊಂದೊಂದೂ ಒಂದೊಂದು ಪಂಥವನ್ನು ಹಿಡಿದಿರುತ್ತವೆ. ಅವುಗಳಲ್ಲಿ ಯಾವುದು ಪ್ರಮಾಣ? ('ನೈಕೋ ಋಷಿಃ ಯಸ್ಯಮತಂ ಪ್ರಮಾಣಂ'.) ಅವು ದಿಕ್ಕುತೋರಿಸುವುದರ ಬದಲು ಅವು ದಿಕ್ಕು ತೋಚದಂತೆ ಮಾಡುತ್ತವೆ, ಸಂಶಯಗಳನ್ನು ಹೆಚ್ಚಿಸುತ್ತವೆ. ಆದುದರಿಂದ ಬುದ್ಧನು ಅಂಥಾ ಜಿಜ್ಞಾಸೆಯ ತಂಟೆಗೆ ಹೋಗದೆ ಪ್ರತಿಯೊಬ್ಬನೂ ತನ್ನನ್ನೇ ಪರೀಕ್ಷಿಸಿಕೊಂಡು, ತನ್ನಲ್ಲಿರುವ ಬೆಳಕಿನ ಸಹಾಯದಿಂದ, ಆತ್ಮವನ್ನು ಸಾಧಿಸುವ ಮಾರ್ಗವನ್ನು ಬೋಧಿಸಿರುತ್ತಾನೆ ಇದು ಕಷ್ಟದ ದಾರಿ. ಆದರೆ ಪ್ರಾಮಾಣಿಕವಾದ ದಾರಿ.

**ಜಿ. ಹನುಮಂತರಾವ್**

---

# ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳ ಗ್ರಂಥಗಳು, ಭಾಷಣಗಳು ಮತ್ತು ಲೇಖನಗಳು

## ೧. ಗ್ರಂಥಗಳು

೧. ಕನ್ನಡ ಕೈಪಿಡಿ, ಭಾಗ ೧ - ಕಾವ್ಯ ಲಕ್ಷಣ ವಿಭಾಗ
(ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟನೆ)

೨. ಸಂಸ್ಕೃತ ನಾಟಕ
(ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟನೆ.)

೩. ಸರ್ವಜ್ಞ ಕವಿ
(ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸ ಮಾಲೆಯ ಪ್ರಕಟನೆ)

೪. ಭಾಸಕವಿ
(ಮೊದಲ ಪ್ರಕಟನೆ, ಕರ್ಣಾಟಕ ಸಂಘ, ಸೆಂಟ್ರಲ್ ಕಾಲೇಜು, ಬೆಂಗಳೂರು)

೫. ಶ್ರೀ ರಾಮಕೃಷ್ಣ ಪರಮಹಂಸರ ಚರಿತ್ರೆ
(ದಿ. ಟಿ. ಎಸ್. ವೆಂಕಣ್ಣಯ್ಯನವರೊಡನೆ. ಬೆಂಗಳೂರಿನ ಶ್ರೀರಾಮಕೃಷ್ಣಾಶ್ರಮದ ಪ್ರಕಟನೆ.)

೬. ಸ್ವಾಮಿ ಶಿಷ್ಯ ಸಂವಾದ, ಭಾಗ ೧.
(ಬೆಂಗಳೂರಿನ ಶ್ರೀರಾಮಕೃಷ್ಣಾಶ್ರಮದ ಪ್ರಕಟನೆ.)

೭. ನಾಗಮಹಾಶಯ
(ಬೆಂಗಳೂರಿನ ಶ್ರೀರಾಮಕೃಷ್ಣಾಶ್ರಮದ ಪ್ರಕಟನೆ.)

೮. ಶ್ರೀಪತಿಯ ಕಥೆಗಳು
(ಮೈಸೂರಿನ ಕಾವ್ಯಾಲಯದ ಪ್ರಕಟನೆ)

೭. ಕವಿಜಿಹ್ವಾಬಂಧನ (ಸಂಪಾದಿತ)
(ಕನ್ನಡ ಸಾಹಿತ್ಯಪರಿಷತ್ತಿನ ಪ್ರಕಟನೆ)

೮. ವಚನಭಾರತ
(ಸ್ವಂತ ಪ್ರಕಟನೆ)

೯. ಕಥಾಮೃತ
(ಸ್ವಂತ ಪ್ರಕಟನೆ)

## ೨. ಭಾಷಣಗಳು

೧. ಇಂದಿನ ಜನಜೀವನದಲ್ಲಿ ಕನ್ನಡ
(ಹೈದರಾಬಾದು ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಭಾಷಣ)

೨. ಸಾಹಿತ್ಯೋತ್ಸವದ ಆರಂಭ ಭಾಷಣ

## ೩. ಲೇಖನಗಳು

೩. ದಿವಂಗತ ಶ್ರೀಮಾನ್ ಟಿ. ಎಸ್. ವೆಂಕಣ್ಣಯ್ಯನವರು (೭೮)

೨. ರನ್ನನ ರಸಪ್ರತಿಪಾದನೆ (ರನ್ನಕವಿ ಪ್ರಶಸ್ತಿ)

೩. ಹರಿಶ್ಚಂದ್ರ ಕಾವ್ಯ (ಹರಿಶ್ಚಂದ್ರ ಕಾವ್ಯಸಂಗ್ರಹದ ಪೀಠಿಕೆ)

೪. ಮಲ್ಲಿಕಾರ್ಜುನ–ಒಂದು ಊಹೆ (ಸಂಭಾವನೆ)

೫. ತತ್ವಶಾಸ್ತ್ರ ಮತ್ತು ಅದರ ಸಮಸ್ಯೆಗಳು
(ಆಧುನಿಕ ತತ್ವಶಾಸ್ತ್ರದ ಸಮಸ್ಯೆಗಳು ಎಂಬ ಗ್ರಂಥಕ್ಕೆ ಮುನ್ನುಡಿ)

೬. ದೇವೀ ಭಾಗವತ (ಪುಸ್ತಕ ಪ್ರಪಂಚ, ನವೆಂಬರ್ ೧೯೪೭)

೭. ಮಹಾಭಾರತ ಮತ್ತು ಭಾರತೀಯ ಸಂಸ್ಕೃತಿಯಲ್ಲಿ ಅದರ ಸ್ಥಾನ
(ಪುಸ್ತಕ ಪ್ರಪಂಚ, ಫೆಬ್ರುವರಿ ೧೯೫೦; ಜೀವನ, ೧೫-೮-೧೯೫೦.)

೮. ಪ್ರಬುದ್ಧ ಕರ್ಣಾಟಕದ ಹುಟ್ಟು ಮತ್ತು ಬೆಳವಣಿಗೆ
(ಪ್ರಬುದ್ಧ ಕರ್ಣಾಟಕದ ಬೆಳ್ಳಿಯ ಸಂಚಿಕೆ, ೧೯೪೫)

೯. ಕನ್ನಡ ಐತಿಹಾಸಿಕ ಕಾದಂಬರಿಗಳು (ಪ್ರ. ಕ. ೧೯೧೯)

೧೦. ಮೈಸೂರು ಚರಿತ್ರೆಯ ಮೇಲೆ ಕಾದಂಬರಿಗಳನ್ನು ಬರೆಯುವುದಕ್ಕೆ
ಇರುವ ಸಾಮಗ್ರಿಗಳು (ಪ್ರ. ಕ. ೧೯೨೦)

೧೧. ಅಲಂಕಾರ ಶಾಸ್ತ್ರದ ಚರಿತ್ರೆ (ಪ್ರ. ಕ. ೧೯೨೩)

೧೨. ಸಂಬಳಿಗೋಲು (ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ. ಜೂನ್, ೧೯೫೪)

೧೩. ಗದಾಯುದ್ಧನಾಟಕ ಮತ್ತು ಅದರ ನಾಯಕ (ಸ್ವಂತ ಪ್ರಕಟನೆ ೧೯೫೫)

## ೪. ವಿಮರ್ಶೆಗಳು

೧. ಪೂರ್ಣಕಲಾ (೧)

೨. ವಿಷವೃಕ್ಷ (೨-೩)

೩. ರತ್ನಾವಳಿ : ಮಿತ್ರವಿಂದಾಗೋವಿಂದ (೬)

೪. ಕೆಲವು ಸಣ್ಣ ಕತೆಗಳು (೮)

೫. ಕೃಷ್ಣಕಾಂತನ ಉಯಿಲು (೯)

೬. ವಸಂತ ಕುಸುಮಾಂಜಲಿ (೧೨)

೭. ಟೊಳ್ಳುಗಟ್ಟಿ ಅಥವಾ ಮಕ್ಕಳ ಸ್ಕೂಲ್ ಮನೇಲಲ್ವೇ (೧೪,೧೬,೪೦)

೮. ಪ್ರಣಯಾವರ್ತ ಅಥವಾ ಚಂಚಲಕುಮಾರಿ (೧೭)

## ೫. ಸಂಪಾದಕೀಯ ಲೇಖನಗಳು

೨೬. ಕೀರ್ತಿಶೇಷರಾದ ಶ್ರೀಮನ್ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ.,ಜಿ.ಬಿ.ಇ. ಮಹಾಪ್ರಭುಗಳು

೨೭. ಶುಭಾಶಂಸನ (೮೩-೧೯೪೦)

೨೮. ಕನ್ನಡದ ಕೆಲಸಗಳಿಗೆ ಜನ, ಧನ, ಅಭಿಮಾನ (೮೫-೧೯೪೧)

೨೯. ಕೀರ್ತಿ ಶೇಷರಾದ ಶ್ರೀ ರವಿಂದ್ರನಾಥ ಠಾಕೂರರವರು (೮೭-೧೯೪೧)

೩೦. ರಾಜಸೇವಾಸಕ್ತ ಶ್ರೀಮಾನ್ ಬಿ.ಎಂ, ಶ್ರೀಕಂಠಯ್ಯನವರು (೯೦-೧೯೪೨)

೩೧. ಕನ್ನಡಕ್ಕೆ ಒಂದು ಗುಡಿ (೯೪-೧೯೪೩)

೩೨. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡಮಾಧ್ಯಮ. (೯೮-೧೯೪೪)*

---

*ಶ್ರೀಯುತರ ಭಾಷಣಗಳು, ಲೇಖನಗಳು, ವಿಮರ್ಶೆಗಳು ಮತ್ತು ಸಂಪಾದಕೀಯ ಲೇಖನಗಳು 'ಭಾಷಣಗಳು ಮತ್ತು ಲೇಖನಗಳು' ಎಂಬ ಹೆಸರನ್ನು ತಳೆದು ಎರಡು ಭಾಗಗಳಾಗಿ ಹೊರಬಿದ್ದಿವೆ. ಪತ್ರಿಕೆಯ ಹೆಸರನ್ನು ನಿರ್ದೇಶಿಸದೆ, ಲೇಖನದ ಮುಂದೆ ಕೊಟ್ಟಿರುವ ಅಂಕಿಗಳನ್ನು 'ಪ್ರಬುದ್ಧ ಕರ್ಣಾಟಕ'ದ ಸಂಚಿಕೆಗಳೆಂದೂ, ಅವು ಪ್ರಕಟವಾದ ವರ್ಷಗಳೆಂದೂ ತಿಳಿಯಬೇಕು.